# ದೀಪ ಹತ್ತಿಸು

- ಭಾಗ ೨






ರಾಮಚಂದ್ರ ಕೊಟ್ಟಲಗಿ



ಧಾರವಾಡ

# ದೀಪ ಹತ್ತಿತು

[ಕಾದಂಬರಿ]

ಭಾಗ : ಎರಡು

ರಾಮಚಂದ್ರ ಕೊಟ್ಟಲಗಿ







ಮನೋಹರ ಗ್ರಂಥ ಮಾಲಾ
ಲಕ್ಷ್ಮೀಭವನ, ಸುಭಾಸ ರೋಡ
ಧಾರವಾಡ–೧.

# ನಮ್ಮ ಗ್ರಾಹಕರಿಗೆ

'ಉಸಿರು' ಪ್ರಕಟವಾದ ನಂತರ ಈಗ 'ದೀಪಹತ್ತಿತು' (ಭಾಗ ೨) ಹೊರಕ್ಕೆ ಬರುತ್ತಿದೆ. ಇದು ಗ್ರಂಥಮಾಲೆಯ ೩೧ನೆಯ ವರ್ಷ ಮುಗಿಯಿತೆಂಬುದನ್ನೂ ಸೂಚಿಸುತ್ತದೆ. ಉಸಿರು ಪುಟ ೨೮೦ ದೀಪಹತ್ತಿತು(ಭಾಗ ೨) ಪುಟ ೭೨೦ ಎರಡೂ ಸೇರಿ ಒಟ್ಟು ೧೦೦೦ ಪುಟವಾಯಿತು. ಇದು ನಾವು ವರ್ಷಕ್ಕೆ ಸಲ್ಲಿಸುತ್ತೇವೆಂದಷ್ಟೆ ಆಯಿತು. ಅಂದರೆ ಈ ೩೧ನೆಯ ವರ್ಷದಲ್ಲಿ ಎರಡೇ ಪುಸ್ತಕಗಳು ವರ್ಷದ ಪುಟ-ಸಂಖ್ಯೆಯ ಪರಿಮಿತಿಯನ್ನು ಮುಗಿಸಿದ ವೆಂದಾಯಿತು.

ಈ ಎರಡನೆಯ ಭಾಗವಾಗಿ ಈಗ ಹೊರಟಿರುವ ಈ ಕಾದಂಬರಿಯ ಮೊದಲ ಭಾಗವು ಇದೇ ಗ್ರಂಥಮಾಲೆಯಲ್ಲಿ ೧೯೫೭ರಲ್ಲಿ ಪ್ರಕಟವಾಗಿ, ಆಗಿದ್ದ ಗ್ರಾಹಕರಿಗೆಲ್ಲ ಹೋಗಿದೆ. ಹನ್ನೆರಡು ವರ್ಷಗಳ ನಂತರ ಅದರ ಎರಡನೆಯ ಭಾಗವು ಪ್ರಕಟವಾಗುತ್ತಿರುವದರಿಂದ ಕೆಲವೊಂದು ಅನಾನುಕೂಲತೆಗಳು ಒದಗಬಹುದೋ ಏನೋ. ಎಷ್ಟೋ ಗ್ರಾಹಕರು ಈ ಅವಧಿಯಲ್ಲಿ, ಇದ್ದವರು ಬಿಟ್ಟಿರಬಹುದು; ಇಲ್ಲದವರು ಹೊಸದಾಗಿ ಸೇರಿರಬಹುದು. ಆಗ, ಇದ್ದು ಬಿಟ್ಟವರಿಗೆ ಎರಡನೆಯ ಭಾಗ ಬೇಕು; ಹೊಸದಾಗಿ ಬಂದವರಿಗೆ ಮೊದಲನೆಯ ಭಾಗ ಬೇಕು. ಇಬ್ಬರಿಗೂ ಎರಡನ್ನೂ ಪಡೆಯುವ ಅವಕಾಶ ಸದ್ಯಕ್ಕೆ ಇದೆ. ಬೇಕಾದವರು ಇದರ ಉಪಯೋಗ ಮಾಡಿಕೊಳ್ಳಬಹುದು.

ಸದ್ಯದ ಆರ್ಥಿಕ ಪರಿಸ್ಥಿತಿ ಬಹಳ ಬೇಗ ಬೇಗ ಬದಲಾಗುತ್ತಲಿದೆ. ಈಗ ಮತ್ತೆ ಮೊದಲಿಗಿಂತಲೂ ಅಂಚೆಯ ದರ, ಮುದ್ರಣದ ದರ, ಕಾಗದದ ದರ – ಎಲ್ಲಾ ಒಮ್ಮೆಲೆ ಒಂದೇ ಹೊತ್ತಿಗೆ ಮತ್ತೆ ಹೆಚ್ಚಾಗಿದ್ದು, ಎಲ್ಲರಿಗೂ ಅನುಭವವೇದ್ಯವಾಗಿರಬೇಕು. ಪರಿಸ್ಥಿತಿ ಹೀಗಿರುವಾಗ ಈಗ ಕೊಡುತ್ತಿರುವಂತೆ ಸಾವಿರ ಪುಟಗಳನ್ನು ಇದೇ ಹದಿನೈದು ರೂಪಾಯಿಗಳಿಗೆ ನಮ್ಮ ಗ್ರಾಹಕರಿಗೆ ಸಲ್ಲಿಸುವುದು ಅಸಾಧ್ಯವಾದ ಮಾತಾಗಿದೆ. ಮತ್ತೆ ಚಂದಾಹಣ ಹೆಚ್ಚಿಸುವದಕ್ಕೂ ಆಗದು. ಇದೆಲ್ಲವನ್ನೂ ಯೋಚಿಸಿ, ಈಗ ಹೀಗೆ ಮಾಡಬೇಕೆಂದು ಗೊತ್ತು ಮಾಡಿದ್ದೇವೆ: ಚಂದಾಹಣ ಹೆಚ್ಚಿಸ

ಬಾರದು. ಇದ್ದಷ್ಟೇ ಇಡಬೇಕು. ಆದರೆ ಈಗ ಸಲ್ಲಿಸುತ್ತಿರುವ ಪುಟ-ಸಂಖ್ಯೆಯನ್ನು ಮಾತ್ರ (ಈಗಿನ ಈ ಪರಿಸ್ಥಿತಿ ಇರುವ ವರೆಗೆ) ಈ ಚಂದಾಹಣಕ್ಕೆ ಸರಿಯಾಗುವಷ್ಟು ಕಡಿಮೆ ಮಾಡಬೇಕು. ಅಂದರೆ ವರ್ಷಕ್ಕೆ ಇನ್ನುಮೇಲೆ ಸುಮಾರು ಆರು, ಆರೂವರೆ ನೂರು ಪುಟಗಳಷ್ಟು ಸಾಹಿತ್ಯವನ್ನು ಗ್ರಾಹಕರಿಗೆ ಸಲ್ಲಿಸುತ್ತೇವೆ.

ಸತತವಾಗಿ ಮೂವತ್ತಾರು ವರ್ಷಗಳಿಂದಲೂ ನಮ್ಮ ಎಲ್ಲ ಸುಖ-ದುಃಖಗಳಲ್ಲಿಯೂ ಪಾಲುಗೊಂಡು ಮಾಲೆಯು ಈ ವರೆಗೆ ನಡೆದು ಬರುವಂತೆ ಮಾಡಿದ ನಮ್ಮ ಗ್ರಾಹಕರು ಇನ್ನು ಮುಂದೆಯೂ ಸಹಾನುಭೂತಿಯಿಂದ ಸಹಕರಿಸುವರೆಂದು ನಂಬಿದ್ದೇವೆ.

ಈ 'ದೀಪಹತ್ತಿತು' (ಭಾಗ ೨) ಗ್ರಾಹಕರಿಗೆ ತಲುಪಿದ ನಂತರ ಮುಂದಿನ ವರ್ಷದ ಪುಸ್ತಕವು ಯಾವಾಗ ಅವರ ಕೈಸೇರುವದೆಂಬುದನ್ನು ಪ್ರತ್ಯೇಕವಾಗಿ ಪತ್ರ ಮೂಲಕ ತಿಳಿಸುತ್ತೇವೆ. ಗ್ರಾಹಕರು ಎಂದಿನಂತೆ ದಯವಿಟ್ಟು ಮುಂದುವರಿಸಬೇಕು.

ಹೊಸ ವರ್ಷದ (೩೨ನೆಯ ವರ್ಷದ) ಮೊದಲನೆಯದಾಗಿ ಗ್ರಾಹಕರ ಕೈಸೇರತಕ್ಕ ಪುಸ್ತಕ "ನಾನೂ ಅಮೇರಿಕೆಗೆ ಹೋಗಿದ್ದೆ" ಎಂಬುದು. ಮುಂದಿನ ತಿಂಗಳ ಮೊದಲ ವಾರದಲ್ಲೆ ಗ್ರಾಹಕರಿಗೆ ತಲುಪಿಸುವ ಎತ್ತುಗಡೆ ನಡೆಸಿದ್ದೇವೆ.

ಈ ಗ್ರಂಥಮಾಲೆ ಹುಟ್ಟಿದ ಇಸವಿಯಿಂದ (೧೯೩೩) ಈಗ ನಡೆದಿರುವ ಇಸವಿಯ ವರೆಗೆ (೧೯೬೯) ಲೆಕ್ಕ ಮಾಡಿ ನೋಡಿದರೆ – ಗ್ರಂಥಮಾಲೆಯ ವರ್ಷ ಈಗ ಮೂವತ್ತೇಳು ಆಗಬೇಕಾಗಿತ್ತು. ಆದರೆ ಇನ್ನು ಸುರುವಾಗುವ ವರ್ಷ ಮೂವತ್ತೆರಡೇ ಇದೆ. ಅಂದರೆ ಐದು ವರ್ಷ ಎಲ್ಲಿಯೋ ನುಂಗಿಹೋಗಿದೆ. ಇದು ಹೇಗಾಯಿತು ? ಎರಡು ವರ್ಷಗಳನ್ನು "ನಡೆದು ಬಂದ ದಾರಿ" (೨೫ನೆಯ ವರ್ಷದ ನೆನಪಿಗೆಂದು ಹೊರಡಿಸಿದ ಸಂಪುಟ) ನುಂಗಿತು. ಇನ್ನು ಮೂರು ವರ್ಷಗಳನ್ನು ಯಾರು ನುಂಗಿದರೆಂದು ನಿಕೃಷ್ಟವಾಗಿ ಹೇಳುವದು ಕಠಿಣವಾದರೂ ನಾವೇ ನುಂಗಿದೆವೆಂದು ಒಪ್ಪಿಕೊಳ್ಳದೆ ಗತಿ ಇಲ್ಲ.

ಆದರೆ ಮಾಲೆಯ ಗ್ರಾಹಕರಿಗೆ ಹೀಗೆ ಒಂದು ಭ್ರಮೆ ಆಗಬಾರದು –

ತಾವು ಈ ಐದು ವರ್ಷದ ಚಂದಾ ಕೊಟ್ಟಿದ್ದೇವೆಂದು. ನಾವು ಪುಸ್ತಕ ಕೊಟ್ಟಿಲ್ಲ; ಅವರು ಚಂದಾ ಕೊಟ್ಟಿಲ್ಲ. ಯಾವಾಗಾದರೊಮ್ಮೆ ಈ ವರ್ಷಗಳನ್ನು ಪುಸ್ತಕ ಕೊಟ್ಟೇ ಚಂದಾ ಪಡೆದು ತುಂಬಿಕೊಳ್ಳಬೇಕೆಂಬ ಹಂಬಲಿಕೆ ಇನ್ನೂ ಬಿಟ್ಟಿಲ್ಲ ನಮಗೆ.

ಒಡನೆಯ ವರ್ಷದಲ್ಲಿ ಬರಬೇಕಾದ ಗ್ರಂಥಗಳ ಹಸ್ತಪ್ರತಿಗಳೆಲ್ಲ ಸುದೈವದಿಂದ ಆಗಲೆ ಬಂದಿವೆ. ಮುದ್ರಣದ ವ್ಯವಸ್ಥೆಯೂ ನಡೆದಿದೆ. ಅವೆಲ್ಲವನ್ನೂ ಬೇಗನೆ ಮುಗಿಸಿ ನಮ್ಮ ಗ್ರಾಹಕರ ಕೈಗೆ ಮೂರು-ನಾಲ್ಕು ತಿಂಗಳಲ್ಲಿಯೇ ಕೊಟ್ಟು ಮತ್ತೆ ಮುಂದಿನ ವರ್ಷದ ಗ್ರಂಥಸಿದ್ಧತೆಗೆ ತೊಡಗುತ್ತೇವೆ.

## ಮುಂದಿನ ಗ್ರಂಥಗಳು ಯಾವುವು?

ಮೊದಲನೆಯದು :

"ನಾನೂ ಅಮೇರಿಕೆಗೆ ಹೋಗಿದ್ದೆ"

ಇದು ಒಂದು ರಸವತ್ತಾದ ಪ್ರವಾಸಕಥನ. ಶ್ರೀ. ಕೃಷ್ಣಾನಂದ ಕಾಮತ ಎಂಬವರು ಐದು ವರ್ಷಗಳ ಅಮೆರಿಕೆಯಲ್ಲಿಯ ವಾಸದಿಂದ ಅಲ್ಲಿಯ ಜೀವನಕ್ರಮ ತಿಳಿದುಕೊಂಡು – ಆ ಜೀವನಕ್ರಮಕ್ಕೂ, ನಮ್ಮ ಜೀವನ ಕ್ರಮಕ್ಕೂ ಇರುವ ಸಾಮ್ಯ-ವೈಷಮ್ಯಗಳನ್ನೆಲ್ಲಾ ಬಹಳ ಸೂಕ್ಷ್ಮವಾಗಿ ಎತ್ತಿ ತೋರಿಸಿದ್ದಾರೆ. ಭಾರತೀಯನಾಗಿ ಇಲ್ಲಿಯ ಜೀವನದ ತಳಪಾಯಕ್ಕಿರುವ ಜೀವನ-ಮೌಲ್ಯಗಳನ್ನು ತಾವೂ ತಿಳಿದುಕೊಂಡಿದ್ದಾರೆ; ಅಲ್ಲಿಯವರಿಗೂ ತಿಳಿಸಿ ಹೇಳಿದ್ದಾರೆ. ಹೀಗೆ ಅವರದನ್ನು ನಾವು. ನಮ್ಮದನ್ನು ಅವರು ತಿಳಿದುಕೊಳ್ಳುವದಕ್ಕೆ ಒಳ್ಳೆ ದಾರಿ ಮಾಡಿಕೊಟ್ಟಿದ್ದಾರೆ. ಇದೊಂದು ಓದುಗರಿಗೆ ಒಳ್ಳೆ ತಿಳಿವಳಿಕೆ ಕೊಡುವ ಗ್ರಂಥ.

ಎರಡನೆಯದು :

"ಮೂರು ಹೊಸ ನಾಟಕಗಳು"

ಚಂದ್ರಶೇಖರ ಕಂಬಾರರು 'ಋಷ್ಯಶೃಂಗ' ಎಂಬ ಜಾನಪದರಂಗದ ತಂತ್ರವನ್ನೆ ಬಳಸಿಕೊಂಡು ಆಧುನಿಕ ಪ್ರಜ್ಞೆಯ ನಾಟಕವನ್ನು ರಚಿಸಿದ್ದಾರೆ.

ಇದು ಮೊದಲನೆಯದು. ಈಗಾಗಲೇ ಇಡೀ ಭಾರತದ ದೃಷ್ಟಿಯನ್ನು ತಮ್ಮತ್ತ ಸೆಳೆದ ಗಿರೀಶ ಕಾರ್ನಾಡರು ಬರೆದ "ಹಿಟ್ಟಿನ ಹುಂಜ" ಏಕಾಂಕವು ಎರಡನೆಯದು. ಹೊಸಬರಾದರೂ ಸಮರ್ಥರಾದ ಎನ್. ರತ್ನ ಅವರು ಬರೆದಿರುವ "ಗೋಡೆ ಬೇಕೇ ಗೋಡೆ" ಎಂಬ 'ಅಸಂಬದ್ಧ-ಸಂಪ್ರದಾಯ'ದ ಏಕಾಂಕ ಮೂರನೆಯದು. ಈ ಮೂರಕ್ಕೂ ಕ್ರಮವಾಗಿ ಕೀರ್ತಿನಾಥ, ರಾಜೀವ ತಾರಾನಾಥ, ಎಲ್. ವಿಶ್ವನಾಥ ಇವರು ಪರಿಚಯಾತ್ಮಕ ಆದರೂ ವಿವೇಚನಾತ್ಮಕ ಮುನ್ನುಡಿ ಬರೆದಿದ್ದಾರೆ. ಇವು 'ಹೊಸ ಪ್ರಯೋಗ' ಎಂದು ಈಗ ಇದ್ದರೂ ಮುಂದೆ ಇವೇ ಹೊಸ ಮಾರ್ಗಕ್ಕೆ ತೋರು-ಕೈಯಾಗಿ ನಿಂತಾವು ಎಂದು ತೋರುತ್ತದೆ.

ಮೂರನೆಯದು :

"ಕಾಮರೂಪಿ-ಕತೆಗಳು"

ಇದು 'ಕಾಮರೂಪಿ' ಎಂಬ ಹೆಸರಿನಿಂದ ಬರೆದ ಕೆಲ ಕತೆಗಳ ಸಂಗ್ರಹ. ಹೊಸಪ್ರಜ್ಞೆಯಿಂದ ಬರೆದವುಗಳು. ಚುರುಕಾಗಿವೆ.

ನಾಲ್ಕನೆಯದು :

"ರೊಚ್ಚು ಅಥವಾ ಚೌತಿ-ಪುರಾಣ"

"ಸಂಸ್ಕಾರ" ಕಾದಂಬರಿ ಬರೆದು ಸುಪರಿಚಿತರಾದ ಯು. ಆರ್. ಅನಂತ ಮೂರ್ತಿಯವರೆ ಈ ಹೊಸಪ್ರಕಾರಕ್ಕೆ ಕೈಹಾಕಿದ್ದಾರೆ. ಯಶಸ್ಸನ್ನೂ ಗಳಿಸಿ ದ್ದಾರೆ. ಮನಸ್ಸನ್ನು ಸೆಳೆಯುವ ನಾಟಕ.

ಈ ನಾಲ್ಕು ಪುಸ್ತಕಗಳಿಗೇ ೩೨ನೆಯ ವರ್ಷ ಮುಗಿದೀತೆಂದು ಭಾವಿಸಿದ್ದೇವೆ. ಕಡಿಮೆಯಾದರೆ ಇನ್ನೊಂದು ಕಾದಂಬರಿಯನ್ನೊ. ಕತೆಗಳ ಸಂಗ್ರಹವನ್ನೊ ಕೊಡುತ್ತೇವೆ.

ಬರೆದುಕೊಡಲು ಮಾತು ಕೊಟ್ಟವರು :

ಸರ್ವಶ್ರೀ: ಯಶವಂತ ಚಿತ್ತಾಲರು "ಅಜ್ಜ ಕಣ್ಣು ಮುಚ್ಚಿದ" (ಕಾದಂಬರಿ); ಶಾಂತಿನಾಥ ದೇಸಾಯರು "ವಿಕ್ಷೇಪ" (ಕಾದಂಬರಿ); ಪೂ.ಚಂ.ತೇ. ಅವರು "ಕಾಡು ಮತ್ತು ಕ್ರೌರ್ಯ" (ಕಾದಂಬರಿ) – ಇವು

ಅಚ್ಚಿನಪ್ರತಿ ಮಾಡುವ ಮಟ್ಟದಲ್ಲಿವೆ. ರಾವಬಹದ್ದೂರ (ಕಾದಂಬರಿ); ಸತ್ಯಕಾಮ (ಕಾದಂಬರಿ), ಖಾಸನೀಸ (ಕತೆಗಳು), ರಾಮಚಂದ್ರಶರ್ಮ (ಕಾದಂಬರಿ), ರಾಮಾನುಜನ್ (ಕಾದಂಬರಿ), ಕೀರ್ತಿನಾಥ (ಕಾದಂಬರಿ) ಜಡಭರತ (ನಾಟಕ), ಗಿರೀಶ ಕಾರ್ನಾಡ (ನಾಟಕ), ಎಲ್. ವಿಶ್ವನಾಥ (ಕಾದಂಬರಿ), ಕೆ. ಸದಾಶಿವ (ಕಾದಂಬರಿ), ಕೃಷ್ಣರಾಜು (ಕಾದಂಬರಿ) ಇವರೆಲ್ಲ ಬರೆದು ಕೊಡುವುದಾಗಿ ಮಾತುಕೊಟ್ಟಿದ್ದಾರೆ. ಕೆಲವರು ಆಗಲೆ ಮುಗಿಸಲು ಬಂದಿದ್ದಾರೆ; ಕೆಲವರು ಅರ್ಧದಲ್ಲಿದ್ದಾರೆ; ಇವೆಲ್ಲ ಹಸ್ತಪ್ರತಿಗಳು ಪೂರ್ಣಗೊಂಡು ಕೈಗೆ ಬಂದ ನಂತರ, ಬರುವ ವರ್ಷಗಳಲ್ಲಿ ಅವನ್ನು ಹೊರಡಿಸುತ್ತ ಹೋಗುತ್ತೇವೆ.

ಗ್ರಂಥಮಾಲೆಯಲ್ಲಿ ಪ್ರಕಟಿಸಲು ತಮ್ಮ 'ದೀಪಹತ್ತಿತು' ಕಾದಂಬರಿಯನ್ನು ಮುಗಿಸಿಕೊಟ್ಟ ಶ್ರೀ ಕೊಟ್ಟಲಗಿ ರಾಮಚಂದ್ರ ಅವರಿಗೆ, ಇದಕ್ಕೆ ಆಕರ್ಷಕವಾದ ಹೊದಿಕೆ-ಚಿತ್ರವನ್ನು ಬರೆದುಕೊಟ್ಟ ಶ್ರೀ. ಎಸ್. ಜಿ. ವಾಸುದೇವ ಅವರಿಗೆ, ಒಳ್ಳೆಯ ರೀತಿಯಿಂದ ಮುದ್ರಿಸಿಕೊಟ್ಟ ಮಣಿಪಾಲ ಪವರ್ ಪ್ರೆಸ್ಸಿನ ಪಾಲುಗಾರರಿಗೆ, ವ್ಯವಸ್ಥಾಪಕರಿಗೆ. ಕರ್ಮಕುಶಲರಿಗೆ — ನಮ್ಮ ಹಾರ್ದಿಕ ವಂದನೆಗಳು.

— ಸಂಪಾದಕರು

# ದೀಪಹತ್ತಿತು

## ಭಾಗ : ಒಂದು

ಗ್ರಂಥಮಾಲೆಗೆ ಚಂದಾದಾರರಿದ್ದು, ಮೊದಲ ಭಾಗ ಇಲ್ಲದವರು ಇದರೊಡನೆ ಇಟ್ಟ ಬೇಡಿಕೆಯ ಕಾರ್ಡನ್ನು ಕಳಿಸಿಕೊಟ್ಟು ತರಿಸಿ ಕೊಳ್ಳಬಹುದು.

ಪ್ರತಿಗಳು ಪರಿಮಿತ ಸಂಖ್ಯೆಯಲ್ಲಿರುವುದರಿಂದ ಗ್ರಂಥಮಾಲೆಯ ಚಂದಾದಾರರಿಗೆ ಮಾತ್ರ ಮೊದಲವಕಾಶ ಕೊಡಲಾಗುತ್ತದೆ.

— ಸಂ.

ಅರ್ಪಣೆ:

'ಹೆಮ್ಮರ' ಕವನದಿಂದ
ನನಗೆ ಬದುಕಿನಲ್ಲಿ
ನೆಚ್ಚಿಗೆ ಮೂಡಿಸಿದ
ವಿ. ಸೀ.
— ಅವರಿಗೆ.

# ಒಂದು

ಅಸ್ಮಾದಿಕರು ಸಣಾವರಿದ್ದಾಗ, ಅಂದರೆ, ಈಗೇನೂ ಅಷ್ಟು ಬೆಳೆದು ಬಲಿತು ನಿಂತಿಲ್ಲ, ಆ ಮಾತು ಬೇರೆ – ಆಗ ಅಂದರೆ, ಮ್ಯಾಟ್ರಿಕ್ಕಿನ ಘಾಜೆಗಟ್ಟೆಯನ್ನು ಇನ್ನೂ ಮುಟ್ಟದಿದ್ದಾಗ, ಸೂಟಿಯಲ್ಲಿ ಊರಿಗೆ ಬಂದರೆ, ಗೋವಿಂದ ಭಟ್ಟನ ಅನುಜ್ಞೆಯಂತೆ ಒಂದು ಮಹದ್‌ಕಾರ್ಯದಲ್ಲಿ ರತರಾಗುತ್ತಿದ್ದೆವು. ಆ ಕಾರ್ಯ ನಮಗೂ ಸೇರುತ್ತಿತ್ತು; ಅದು ಯಾಕೆ ಸೇರುತ್ತಿತ್ತು ಎನ್ನುವದರ ಕಾರಣ ಯಥಾಕ್ರಮವಾಗಿ ಬರಲಿದೆ.

ಬೆಳಗಿನ ಸ್ನಾನ ಬಗೆಹರಿಸಿ, ಗೋವಿಂದಭಟ್ಟನಿಗೆ ಯಾಜ್ಞೀಕಿಯಲ್ಲಿ ಬಂದ 'ಟ್ರಾನ್ಸ್‌ಸ್ಪರಂಟ್' ಪಂಜೆ ಸುತ್ತಿಕೊಂಡು, ಗೋಪೀಚಂದನದ ಮುದ್ರಾಧಾರಣೆಯನ್ನು ಮಾಡಿಕೊಂಡು, ನಾಕು ನಿತ್ಯಾವಳೀ ಮನೆಯ ದೇವರ ತಲೆಯ ಮೇಲೆ ತಣ್ಣೀರು ಸುರುವಿ, ತೀರ್ಥದ ಆ:ಲ್‌ಕೆಮೀ ತಯಾರಿಸಿ, ಅದರ ವಿತರಣೆಯ ಕಾಮಗಿರಿಯನ್ನು ಆ ಆ ಮನೆಗಳ ಗಂಡು-ಹೆಂಡಗಳ ಪಾಲಿಗೆ ಬಿಟ್ಟು ಹತ್ತು ಗಂಟೆಯ ಹೊತ್ತಿಗೆ ಮನೆಗೆ ಬರುತ್ತಿದ್ದೆವು. ನಮ್ಮ ಮಾತಾಜಿ, ಹಿಂದಿನ ದಿನ ಸಂಜೆಯ ಮುಂದೆಯೇ ಬಡಿದು ನೆಲವಿನ ಮೇಲೆ ಬುಟ್ಟಿಯಲ್ಲಿ ಮುಚ್ಚಿಟ್ಟ, ನೀರಲ್ಲಿಯ ದಶಮಿಗಳನ್ನು, ಅಂಗೈ ಅಗಲದ ಮುತ್ತಲೆಲೆಯಲ್ಲಿ ಬಡಿಸಿಕೊಂಡು, ನಾಸೀಪುಡಿಯಂಥ ಖಾರಪುಡಿಗೆ, ಇಲ್ಲ, ಗುರೆಳ್ಳಿನ ಹಿಂಡಿಗೆ ಮಜ್ಜಿಗೆಯ ಸೇಚನ ಮಾಡಿಸಿಕೊಂಡು, ತಿಂದು – ತೇಗಿ, ಒಂದು ಅಖಂಡ ತಂಬಿಗೆ ನೀರು ಸೆಡ್ಡಿ ಥರಕೆಯ ಡೋಲು ಬಡಿಯುತ್ತಿದ್ದೆವು. ಅನಂತರ ನಮ್ಮ ಮಡಿಯ ಲಂಡ ಪಂಜೆಯನ್ನು ಇಳಿಸಿ, ನಾಯಕ ವಕೀಲರ ಮಕ್ಕಳು ಮುಕ್ತಮಾನಸರಾಗಿ ಬಿಟ್ಟ, ಹಳೆಯ, ತ್ಯಾಪೀ ಹಚ್ಚಿದ ಅಂಗಿ-ಚಣ್ಣದ ಚಿಲಖತ್ತು ಏರಿಸುತ್ತಿದ್ದೆವು. ಹೆಗಲಿಗೊಂದು ಬಾರದಾನ ಒಗೆದುಕೊಂಡು, ದಂಡಪಾಣಿಯಾಗಿ ಗೃಹತ್ಯಾಗ ಮಾಡಿದೆವೆಂದರೆ ತೀರಿತು, ಮರಳಿ ನಮ್ಮ ಗೃಹಾಭಿಗಮನ ಅಪರಾಹ್ನ ಎರಡಕ್ಕೆ.

ನಾವು ವ್ಯರ್ಥ ಮಾತ್ರ ಅಲೆದಾಡುತ್ತಿರಲಿಲ್ಲ. ಗೋವಿಂದಭಟ್ಟ, ಹಾಗೆ ನಮ್ಮನ್ನು ಬಿಡಾಡಿ ದನದಂತೆ ಅಲೆದಾಡ ಬಿಡುವ ಜೀವವೂ ಅಲ್ಲ. ನಮ್ಮ ಬೆನ್ನಿಗೆ ಒಂದಿಲ್ಲ ಒಂದು ಬಿನ್‌ಖರ್ಚಿನ ತಗಾದೆ ಹಚ್ಚಿಯೇ ಇರುತ್ತಿದ್ದ. ಈ ತಗಾದೆ ಎಂದರೆ ಆಗಲೇ ನಾನು ವದಿಸಿದ ಮಹದ್‌ಕಾರ್ಯ – ಅಂದರೆ – ನಮ್ಮ ಮನೆಯ ಮಂಡಳಿಯ ಭೋಜನಕ್ಕೆ. ವರ್ಷಕ್ಕೆ ಸಾಕಾಗುವಷ್ಟು ಬೇಕಾಗುವ ಮುತ್ತಲ ಎಲೆಯ ಸಂಗ್ರಹ. ಕರಿಶೆಟ್ಟಿಯ ಅಂಗಡಿಯಲ್ಲಿ ಎರಡಾಣೆಗೆ – ಇಲ್ಲ – ಮೂರಾಣೆಗೆ ನೂರಂಕಿಯ ಒಂದು ಎಲೆಯ ಕಟ್ಟು ಸಿಗುತ್ತಿದ್ದರೂ ಅದು ಅಬ್ರಾಹ್ಮಣ್ಯ ವಸ್ತುವೆಂದು ಗೋವಿಂದಭಟ್ಟನಿಗೆ ತ್ಯಾಜ್ಯವಾಗಿತ್ತು. ಊಟಕ್ಕೆ ಬೇಕಾಗುವ ಎಲೆ-ದೊನ್ನೆಗಳನ್ನು ಅಂಗಡಿಯಿಂದ ಖರೀದಿ ಮಾಡಿ ತರುವದು ಕೇವಲ ಅಬ್ರಾಹ್ಮಣ್ಯ ಧಂದೇ ಎಂದು ಅವನ ರಾಮಮತ. ಹೀಗಾಗಿ ಊರಿನ ಆಸು-ಪಾಸು, ಮೂರು-ನಾಲ್ಕು ಮೈಲಿನ ಅಳವಿನಲ್ಲಿ ಇದ್ದ, ಎಲ್ಲ ಮುತ್ತಲಗಿಡಗಳು, ನಮ್ಮ ಬೇಸಿಗೆಯ ಸೂಟಿ ಮುಗಿಯುವದರಲ್ಲಿ ಪರ್ಣಹೀನವಾಗಿ ಬರಲಾಗುತ್ತಿದ್ದವು. ನಮ್ಮ ಮನೆಯಲ್ಲಿಯ ಗೂಟ, ಬೋದು, ಕಿಡಕಿ, ಮಾಡ, ಜಂತಿಯ ಈ ತುದಿಯಿಂದ ಆ ತುದಿ, ನಾವು ಸಂಗ್ರಹಿಸಿದ ಈ ಪರ್ಣಮಾಲೆಯಿಂದ ಅಲಂಕೃತವಾಗಿರುತ್ತಿದ್ದವು. ಗೋವಿಂದಭಟ್ಟ ವಾತ್ಸಲ್ಯ ಉಕ್ಕಿಬಂದು, ಎಂದೂ ನನ್ನ ತಲೆಯ ಮೇಲಂತೂ ಹೋಗಲಿ, ತನ್ನ ಇನ್ನಿತರ ಅಪತ್ಯಪಟಾಲವ್‌ದ ತಲೆಯ ಮೇಲಾಗಲಿ, ಕೈ ಆಡಿಸಿ ನೇವರಿಸಿದ್ದು ಇಲ್ಲ; ಖಚಿತ ನನಗೆ ನೆನಪಿಲ್ಲ – ಆದರೆ ಪ್ರಾಣಿ, ಈ ಪರ್ಣಸಂಪತ್ತನ್ನು ಮಾತ್ರ, ಮೃದುವಾಗಿ ತಟ್ಟಿ, ಹಾಳತಾಗಿ ಮುಟ್ಟಿ, ಸುಖಿಸದೆ ಒಂದೂ ದಿನ ಮಲಗಿಲ್ಲವೆಂದು ನನ್ನ ಖಚಿತ ನಂಬಿಗೆ. ಈ ಜನ್ಮದಲ್ಲಿ ಅವನು ಕಾಶ್ಯಪಗೋತ್ರೋತ್ಪನ್ನನಾಗಿದ್ದಾನೆ. ಹಿಂದಿನ ಜನ್ಮದಲ್ಲಿ, ಅವನು ಪರ್ಣಪ್ರಿಯ ಅಜವಂಶಲಲಾಮನಾಗಿರಬೇಕೆಂದು ನಾನು ಧೈರ್ಯವಾಗಿ ಹೇಳಬಲ್ಲೆ.

"Change of work is my rest" ಎಂದು ಯಾರೋ ಮಹಾನುಭಾವರು ಅಂದ ಮಾತು ಗೋವಿಂದಭಟ್ಟನಿಗೆ ಗೊತ್ತಿರುವ ಸಂಭವವಿಲ್ಲ. ಆದರ ಈ ಮಾತಿನ ಅರ್ಥವನ್ನು ಮಾತ್ರ, ಆತ್ಮಸಾತ್ತಾಗಿ ಮಾಡಿಕೊಂಡಿದ್ದಾನೆ; ಅದೇಕೆ ತಂತೋತಂತ ಜೀವನದಲ್ಲಿ ಭಟ್ಟಿ ಇಳಿಸಿದ್ದಾನೆ.

ಮಧ್ಯಾಹ್ನ ಊಟವಾದ ಮೇಲೆ, ತಾಮ್ರಭಸ್ಮದ ಮದ ಕಣ್ಣಿಗೆ ಕತ್ತಲು ತರಿಸುತ್ತಿದ್ದರೂ ಅವನು ಎಂದೂ ವಾಮಕುಕ್ಷಿಯಾಗುವದಿಲ್ಲ; ನಮ್ಮನ್ನು

ಆಗಬಿಡುವದಿಲ್ಲ. ಬೋದಿನ ಮೇಲೆ ವರ್ಷಾನುಗಟ್ಟಲೆ ಬಿದ್ದು, ಚಟಚಟನೆ ಮುರಿಯಲಿಕ್ಕೆ ಬರುವಂತೆ ಒಣಗಿ ತಾರವಾದ ಸಿಬರಿನ ಪೆಂಡಿಯನ್ನು ತೆಗೆದು, ಮೊದಲು ಸೂಜಿಯಂತಹ ಸಿಬರು ಹೆಚ್ಚಿಟ್ಟುಕೊಳ್ಳುತ್ತಾನೆ. ಇಂದಿನ ಕೆಲಸಕ್ಕೆ ಹಿಂದಿನ ದಿನವೇ ಅವನು, ಒಂದು ಎಲೆಯ ಮಾಲೆಯನ್ನು ಹಿರಿದು, ಧೂಳು ಜಾಡಿಸಿ, ನೀರಿನಲ್ಲದ್ದಿ, ಅಸೀಕಲ್ಲಿನ ಬುಡದಲ್ಲಿ ಉಸುಲುಗಟ್ಟುವಂತೆ ಮಡಗಿಸಿ ಇಟ್ಟಿರುತ್ತಾನೆ; ಈಗ, ಆ ಪರ್ಣಗಳನ್ನು, ಅಹಲ್ಯೆಯಂತೆ ಶಿಲಾಶಾಪಮುಕ್ತಮಾಡಿ, ಎಲ್ಲರಿಗೂ ಅಷ್ಟಷ್ಟು ಹಂಚುತ್ತಾನೆ. ತಾನು ನಟ್ಟನಡುವೆ ಕುಳಿತು, ಪರ್ಣರಚನಾ ವರ್ಗವನ್ನು ಸುರುವುಮಾಡುತ್ತಾನೆ. ಅವನ ಕೈ, ಎಲೆಯ ಕಸೂತಿಯನ್ನು ಹೆಣೆಯುತ್ತಿದ್ದರೂ, ಬಾಯಿ ಪಂಜರದಲ್ಲಿಯ ನಾಲಗೆ, ಅಷ್ಟೇ ರಸಭರಿತವಾಗಿ, ಮಾತಿನ – ಊರ ಕಿಲಾಪದ, 'ರನಿಂಗ್-ಕಾಮೆಂಟರಿ' ನಡೆಸಿರುತ್ತದೆ. ಅವ್ವ, ಅಡ್ಡಡ್ಡ ಮಾತಾಡಿ, ಕ್ರೊಸ್ ಮಾಡಿ, ಒಗ್ಗರಣೆ ಹಾಕುತ್ತಿರುತ್ತಾಳೆ. ಹತ್ತಲ್ಲ, ನೂರು ಸಲ ಅವನಿಂದ "ನಿನ್ನ ತಲೀ, ನಿನ್ನ ಡೋಗಿ, ಪರಟೀ" ಎಂದು ಶರಾ ತೆಗೆದುಕೊಳ್ಳುತ್ತಾಳೆ. ಎಲೆ ಹಚ್ಚುವ ಬಿಡದ ಕರ್ಮ ನಮಗೆ ಬೇಡವಾಗಿದ್ದರೂ ಗೋವಿಂದಭಟ್ಟನ ರಸಭರಿತ ಬಾತಮೀವಿಲಾಸ ಖಾಸ್ ಬೇಕಾಗಿರುತ್ತದೆ. ಅಂತೇ ನಾವೂ ಅವನ ಸಮ್ಮುಖದಲ್ಲಿ ಮಂಡಿತರಾಗಿ, ಕಥನಶ್ರೋತಾ ಆಗಿರುತ್ತೇವೆ.

"ದಾದಲ್ಯಾ, ನಿನ್ನ ಲಕ್ಷ್ಯ, ಎಲೀಮ್ಯಾಲ ಇಲ್ಲಾ, ನನ್ನ ಮಾತಿನ ಕಡೇನ ಅದs. ಅದ್ನೋಡು, ಎಲೀ ಹ್ಯಾಂಗ, ಚಪಾತಿ ಹಾಂಗ ತ್ರಿಕೋಣ ಆಗೇದ. ಕೊಡೂ ಆ ತ್ರಿಕೋಣದ ನಡವ, ಗುಂಡ ಬರೂಹಾಂಗ ಎಲೀ. ಸಿಬರ ಹ್ಯಾಂಗ ಚುಚ್ಚಿರಬೇಕಂದೀ. ಅರಿವಿಗೆ ಟಿಬಕಿ ಹಾಕಿಧಾಂಗ ಆಗಿರಬೇಕು. ನಿನಗ ಜಮಾಸೂ ಧಂದೇನ ಅಲ್ಲಿದು. ಬ್ರಾಹ್ಮಣಗ ಮಂತ್ರ-ತಂತ್ರ ಹ್ಯಾಂಗ ಅವಶ್ಯದ್ದು, ಈ ಎಲೀ ಹಚ್ಚೊ ಕೆಲಸನೂ ಅಷ್ಟs ಅಗತ್ಯದ್ದು. ಚೌಸಷ್ಠಕಲಾ ಅವಗತ ಇರಬೇಕಾಗತದ ವೈದಿಕಬ್ರಾಹ್ಮಣಗ. ದಾದಲ್ಯಾ, ಸಾಧನಾ ಇಲ್ಲದs ಏನೂ ಸಾಧಸೂದಿಲ್ಲಾ."

ಗೋವಿಂದಭಟ್ಟನ ಪೌರೋಹಿತ್ಯವೃತ್ತಿಯಲ್ಲಿ, ಬರೇ ಮಂತ್ರ-ತಂತ್ರವಲ್ಲದೆ, ಎಲೆ-ದೊನ್ನೆ ಹಚ್ಚುವ ಕೆಲಸವೂ ಘನಪ್ರಸ್ಥ. ಯಜಮಾನರ ಮನೆಗೆ ಸಲ್ಲಿಸ ಬೇಕಾದ ಸೇವೆಯಲ್ಲಿ ಇದರದೂ ಮುಖ್ಯ ಎಣಿಕೆ. ಅಂತೇ ಅವನು ಈ ಪರ್ಣ ರಚನೆಯ ಕೈಗಾರಿಕೆಯಲ್ಲಿ ಪಾರಂಗತನಾಗಿದ್ದಾನೆ. ನಮಗೆ ಸಾಧನೆಯೂ ಇಲ್ಲ, ಸಾಧಿಸುವದೂ ಇಲ್ಲ. ಪಿತಾಜಿ, ಈ ಸಾಧನ-ಸಾಧ್ಯತೆಯ ಬಗ್ಗೆ ಶಾಪಥರ್ತಿಯಲ್ಲಿ

ಆಶೀರ್ವಾದದ ಕಣಿಯನ್ನು ಸಾರಿರುವದರಿಂದ ನಾವೂ ಆ ಕಲೆಯ ಆಕಲನದ ಬಗ್ಗೆ ಅಷ್ಟು ಉತ್ಸುಕರಾಗಿಲ್ಲ.

"ದಾದಲ್ಯಾ, ಮಗನs, ಅರ್ಧಾ ಆದ ಕಾದಂಬರೀ ಮುಂದ ಸಾಗಸೀನಿ, ಓದಿ ತೋರಸ್ತೀನಿ ಅಂತ ಸುರೂಮಾಡಿದಂವಾ, ಈ ಎಲೀ ಹಚ್ಚೂ ಗ್ರಾಮೋದ್ಯೋಗದ ಮ್ಯಾಲ ಪ್ರಬಂಧ ಓದಲಿಕ್ಕೆ ಹತ್ತಿದೇನು? ಅಂದಲ್ಲೇ ಗೋವಿಂದ ಭಟ್ಟಾ ಸಾಧನಾ ಇಲ್ಲದೆ ಏನೂ ಸಾಧಸೂದಿಲ್ಲಾ ಅಂದಿರಬೇಕು ನಿನಗ."

ತದೇಕಚಿತ್ತನಾಗಿ ನನ್ನ ವಾಚನವನ್ನು ಕೇಳುತ್ತ ಕುಳಿತ ವಿಶ್ವಾಸ ತಟ್ಟನೇ ತನ್ನ ಮಾತು ಮಿಂಚಿಸಿದ. ಅವನದೇ ಸಿಗರೇಟ ಟಿನ್ನಿನಿಂದ ಒಂದು ಸಿಗರೇಟು ತೆಗೆದು, ಕಡ್ಡಿ ಗೀಚಿ ಹಚ್ಚಿಕೊಂಡು, ಆಪ್ಯಾಯಮಾನವಾಗಿ ಹೊಗೆ ಬಿಡುತ್ತ ನಾನು ಹೇಳಿದೆ:

"ನಾನೂ ಅದs ಪ್ರಸ್ತಾಪ ಮಾಡಾಂವ ಇದ್ದೆ. ಅವ್ಯಾಪಾರೇಷು ವ್ಯಾಪಾರರs ನಮ್ಮ ಕಡಿಂದ ಆಗೇದ. ಶಬ್ದದ ಕೋಷ್ಟಕ ನೆನಪಮಾಡಿಕೊಂಡು ಕಾವ್ಯ ರಚನಾ ಮಾಡಂತ, ವಸೂಗ ಚ್ಯಾಷ್ಟೀ ಮಾಡೂ ಮುಂದ ಮಜಾ ಅನಸತಿತ್ತು. ಅಕೀಗೆ, ನಿಧಾನ, ಕೋಷ್ಟಕನರs ನೆನಪ ಇತ್ತು. ನಮಗ ಅದೂ ಲೇದು. ಅಂದಲ್ಲೇ ಋಷಿಗೋಳಿಗೆ ಕಾವ್ಯರಚನಾದ್ದು ಗುತ್ತಿಗಿತ್ತು ನೋಡ ವಿಶ್ಯಾ. Above par cash ಆದೂ ಅವರ ಕಾವ್ಯಾ. ನಮ್ಮ ಪಾಲಿಗೆ ಮಾತ್ರ, ತಾಸಿನ ಗಂಟಲ ಕಸರತ್ತಿಗೆ, ಸೇರ ಅಕ್ಕೀ ಲೆಕ್ಕದಲೆ, ಪುರಾಣ ಹೇಳೂ ವಾಚಾಳತನಾ ಅಷ್ಟs ಉಳೀತು. ನಮ್ಮ ಗಿರಿಜಾ, ರಾವಜೀಕಾಕಾನ ಹಳೀ ರಗ್ಗೂ-ಚಾದರಾ ಜೋಡಿಸಿ, ಸಿಂಪಿಗ್ಯಾರ ತುಕ್ಯಾನ ಅಂಗಡ್ಯಾಗಿಂದ ಹೊಸಾ ಚಿಂದೀ ತಂದು, ಆಃ, ಏನ ಝಕಾಸ್ ಕೌದೀ ತಯಾರಸ್ತಾಳಂದೀ. ಆ 'ಡಿಜಾಯನ್ಸ್' ಆ 'ಆರ್ಟಿಸ್ಟಿಕ್' ಹೆಣಿಗೀ, 'ಎಂಬ್ರಾಯಡರಿ' ಕ್ಲಾಸಿಗೆ ಹೋಗಿ ಹತ್ತು ವರ್ಷ ಕಲ್ತರೂ ಸಾಧಸೂದಿಲ್ಲಾ. ಗಿರಿಜಾನಂಥಾಕಿಗೆ ಕೌದೀ ಹೆಣಿಯೂದು ಸಾಧಸ್ತದ, ನನಗ ಕಾದಂಬರೀ ಯಾಕ ಸಾಧಸಬಾರದೂ ಅನೂ ಈರ್ಷಾದಿಂದ ಅನ್ನೂ, ಅಂಥಾದs ಏನೋ ವಿಚಾರ ದಿಂದ ಅನ್ನು, ಈ ನನ್ನ ಕಾದಂಬರೀ ರಚನಾ ಸುರೂ ಆತು. ನಿನ್ನ ಬಾಯ್ಲೇ, ಗೋವಿಂದಭಟ್ಟನ ಬಾಯ್ಲೇ ಕೇಳಿದ್ದು, ನಾನೂ ಅಷ್ಟಿಷ್ಟು ನೋಡಿದ್ದು, ಎಲ್ಲಾ ಕೂಡಿಸಿ, ಮೂರ್ತಿ ಆದೀತೇನಂತ ಮಾಡಿದರ, ಈ ನಮ್ಮ ಕಾದಂಬರಿ, ತಮ್ಮಣ್ಣ ಮಾಸ್ತರನ್ಹಾಂಗ ಅಷ್ಟಾವಕ್ರ ಆಕಾರ ಧಾರಣಮಾಡಿ ನಿಂತಿತು. ಸಿಬರ ಚುಚ್ಚಲಿಕ್ಕೆ

ಬರದಾಂವಗ ಟಾಕ ನಡಸಲಿಕ್ಕೆ ಏನ ಬಂದೀತು, ಅನೂ ಕಲ್ಪನಾ ಬಂದು, ಗೋವಿಂದಭಟ್ಟನ ಶಾಪ ಖರೇ ಆತಲಾ ಅಂತ್ಹ, ಈ ಪರ್ಣರಚನಾದ ಪ್ರಸ್ತಾಪ ಮಾಡಿದೆ. ಇನ್ನ ಕೈ ಊರದ್ಹ ಗತೀ ಇಲ್ಲಂತ ತಮ್ಮ ಸಾನ್ನಿಧ್ಯಕ್ಕ ಬಂದೆ. ಈಗ ನಾ ಬರದದ್ದರಾಗ, "ಯದ್ ರೋಚತೇ ತದ್ ಗ್ರಾಹ್ಯಂ, ಯನ್ನ ರೋಚತೇ ತತ್ತ್ಯಾಜ್ಯಂ", ಇಲ್ಲ್ಹ, ಈ ತಿಲಕಾಷ್ಠಮಹಿಷಬಂಧನಗ್ರಂಥಾ, ವಾಪೀಸ್ತ್ಯಪ್ಯಂತು ಮಾಡಂತ ಅನ್ನು, ಇಂದ್ಹ ಜಲಸಮಾಧಿ ಮಾಡಸ್ತೀನಿ. ನನ್ನ ಕಾದಂಬರೀ ಏನು, ತುಕಾರಾಮನ ಪೋಥೀ ಅಲ್ಲಾ, ಕಲ್ಲ ಕಟ್ಟಿ ನೀರಾಗ ಮುಣಗಿಸಿದರೂ, ಮತ್ತ ಮ್ಯಾಲ ತೇಲಿ ಬರಲಿಕ್ಕೆ."

"ದಾದಲ್ಯಾ, ನೀ ನಮ್ಮ ಪುರೋಹಿತಾ. ಎದರಿಗೆ ಕೂತು ಮಂತ್ರಾ ಹೇಳಾಂವಾ. ನಾವು "ಮಮ" ಅಂತ್ಹ ಅಷ್ಟ ಅನ್ನುವವರು. ಈಗ ನಮ್ಮ ಮಮದ ಜೋಡೀ ಶ್ರೀರಸ್ತು ಶುಭಮಸ್ತು ಅಂತೀನಿ. ಇಲ್ಲೀ ತನಕಾ ಏನ ಬರದೀ ಅದು ಠೀಕನ್ಹ ಆಗೇದ. ಮುಂದಿನ ಕಥೀ ನಿನಗೇನು ಠಾಂವಿಕಿಲ್ಲ ಅನೂ ಹಾಂಗಿಲ್ಲಾ. ನೀನೂ ಅದರಾಗ ಪಾತ್ರಧಾರೀ ಆಗೀದಿ. ಹೊತ್ತಿದ ಕಿಚ್ಚಿನ್ಯಾಗ ಕೈ-ಮೈ ಸುಟ ಗೊಂಡೀ. ನಮ್ಮ ಜೋಡೀ ಹುರಪಳಿಸಿ ಹೊರಬಿದ್ದೀ. ನಿನ್ನ ಕಥೀ ತಮ್ಮಾಜೀ ಹಾಂಗ ಅಷ್ಟಾವಕ್ರ ಆಗಿಲ್ಲಾ. ಪಂತಕುಟುಂಬನ್ಹ ಅಷ್ಟಾವಕ್ರ ಆತು. ನಿನ್ನ ಕಾದಂಬರೀ ಅದರ 'ರೆಪ್ಲಿಕಾ'."

"ದಾದಲ್ಯಾ, ಅಂದ ನೀನು ಕನಸಿನ್ಯಾಗಿಂದ ಬಡಬಡಿಸಿಕೋತ ಎದ್ದಿ ನೋಡು. ನೆನಪ ಅದ್ಹ ಏನು? ಅಂದ ನಿನಗ ಕನಸಿನ್ಯಾಗ ಪಂತಕುಂಟುಂಬದ ಮೂಲಪುರುಷರದು ಪ್ರತಿಮಾದರ್ಶನ ಘಟಿಸೇದ. ಅವರೇ ನಿನ್ನ ಕನಸಿನ್ಯಾಗ ಬಂದು ಭವಿಷ್ಯದ ದುರಂತ ಸಾರಿ ಹೋದರು. ನನಗ ಅದರ ಭಾಸಾ – ಝುಳುಕು ಅಷ್ಟ್ಹ ಇತ್ತು. ನೀ ಸಾಕ್ಷಿಯಾಗಿ, ಅದನ್ನ ಕಣ್‌ಮುಟ್ಟಾ ನೋಡೀದಿ. ನೋಡಿ ದ್ದನ್ನ ನೋಡಿಧಾಂಗ ಬರೆಯೂ ಅಧಿಕಾರಾ, ನಿನಗ ಇರೂ ಹಾಂಗ್ಹ, ಹೇಳಿಸಿ ಬರಸೂ ಅಧಿಕಾರಾ, ನನಗ ಇದ್ದೀತು, ಬಂದೀತು ಅಂತ ಅನಸೂದಿಲ್ಲಾ. ದಾದಲ್ಯಾ, ಕುಟುಂಬಾ ಒಡಕೋತನ್ಹ ಬಂದೂ. ಬರೇ ಒಂದೇ ಕುರುವಂಶನ ವಿಚ್ಛೇದ ಆಗಲಿಲ್ಲಾ. ಕುರುಕ್ಷೇತ್ರದಾಗ, ಅದು ತನ್ನ ಜೋಡೀ ಲಕ್ಷ ಕೋಟಿ ಕುಟುಂಬನೂ ಒಡೀತು. ವ್ಯಾಸರು ಅದರ ಕಥನ ಮಾಡಿದರು. ದುರಂತದ ಕಣಿ ಸಾರಿದರು. ದುರಭಿಮಾನಾ ಎಂಥಾ ಬಲೀ ತಗೋತದ ಅನೂದನ್ನ ಸಾರಲಿಕ್ಕೆ

ಭಾರತದ ಮಹಾಕಥೀಗೆ ತೆಕ್ಕಿಬಿದ್ದರು. ದೊಡ್ಡ ಹಡಗ ಒಡದ ಕಥೀ ದೊಡ್ಡವರು ಮಾಡಿದರು. ಪಂತಕುಟುಂಬದ ಗ್ರಾಸದ ಕಥೀ ನೀ ಮಾಡೀದಿ. ಅದು ಅದರ ಯೋಗ್ಯತಾಕ್ಕ ಸರೀನs ಆಗೇದ. ಸಂಣ ಬಾಯಿಗೆ ಸಂಣ ತುತ್ತಾ. ಎಲ್ಲಾರೂ ವ್ಯಾಸರಾಗಲಿಕ್ಕೆ ಶಕ್ಯ ಇಲ್ಲಾ. ಹಾಂಗs ಎಲ್ಲಾ ಕಥೀ ಮಹಾಭಾರತ ಆಗೂದೂ ಶಕ್ಯ ಇಲ್ಲಾ.

ನೀ ನಮ್ಮ ಪುರೋಹಿತಾ. ನನಗ ಪೂಜ್ಯ ಪ್ರಾಣೀ. ಆಶೀರ್ವಾದ ಹ್ಯಾಂಗ ಮಾಡಲಿ? ಅಷ್ಟs, "ಶುಭಾಸ್ತೇ ಪಂಥಾನಸ್ಸಂತು" ಅಂತs ಟಾಟಾ ಮಾಡತೀನಿ. ಹಸರ ನಿಶಾನೀ ಎತ್ತೀನಿ. ನಿನ್ನ ಗಾಡೀ ಬಿನ್-ಧೋಖಾದಲೇ ಮುಂದ ಸಾಗಲಿಕ್ಕೆ 'ಲೈನ್ ಕ್ಲಿಯರ್' ಕೊಟ್ಟೀನಿ. ಆಚ್ಛಾ... ಬಾಯ್ ಬಾಯ್, ದಾದಲ್ಯಾ."



## ಎರಡು

ಆ ಸಲ ಭಾಗವತ ಸಂಪ್ರದಾಯದವರಿಗೆ ಜೋಡಿಸಿ ಎರಡು ಏಕಾದಶಿ ಬಂದಿದ್ದವು. ಎರಡನೇ ದಿನ ಈ ಏಕಾದಶೀಭಕ್ತಮಂಡಳಿ ಅನಶನಸ್ಥಿತಿಯಲ್ಲಿ ಕುಳಿತು, ಮಲಗಿ ತೇಲುಗಣ್ಣು-ಮೇಲುಗಣ್ಣು ಹಾಕತೊಡಗಿತ್ತು. ಗೋವಿಂದ ಭಟ್ಟ ಉಪವಾಸಮಾಡುವದರಲ್ಲಿ ಎತ್ತಿದ ಕೈ. ಅವನ ಪ್ರಖ್ಯಾತಿ, ಅದೇ ಆಗ ಉಪವಾಸದ ಪ್ರಾಥಮಿಕ ಪಾಠಗಳನ್ನು ಕಲಿಯುತ್ತಿದ್ದ ಗಾಂಧೀಜಿಯವರಿಗೆ ಗೊತ್ತಾಗಿರುವ ಸಂಭವವಿರಲಿಲ್ಲ. ಇಲ್ಲದಿದ್ದರೆ ಅವರಿಗೆ ಈ ಪ್ರತಿಸ್ಪರ್ಧಿಯ ತಾಕತ್ತನ್ನು ಕಂಡು, ಮರುವಿಚಾರ ಮಾಡುವ ಪ್ರಸಂಗ ಬರಬಹುದಾಗಿತ್ತು.

ಎರಡನೇ ಏಕಾದಶಿಯ ದಿನ ಗೋವಿಂದಭಟ್ಟ ಮನೆಯ ದೇವರನ್ನು ಅಷ್ಟೇ ತೊಳೆದು, ಅಖಂಡ ಒಂದು ಇದ್ದಲಿಯ ಅಂಗಾರವನ್ನು ವಿಶಾಲ ಫಾಲದಲ್ಲಿ ರೇಖಿಸಿ ಕೊಂಡು, ಜಾಜೂಮಿಸಂತಹ ತನ್ನ ಜರಾಜೀರ್ಣ ಹರಿದ್ವರ್ಣದ ಶಾಲನ್ನು ಸುತ್ತಿ

ಕೊಂಡು, ಊರ ಸರ್ಕೀಟಿಗೆ ಹೊರಡುವ ತಯಾರಿ ನಡೆಸಿದ್ದನ್ನು ನೋಡಿ ನಮ್ಮ ಎದೆ ಝಲ್ಲೆಂದಿತು. ಕಾರಣ, ಇನ್ನೂ ಅವನ ನಿತ್ಯಾವಳೀ ಪೂಜೆಯ ಮನೆಗಳು ಉಳಿದಿದ್ದವು. ಆ ಮನೆಗಳ ದೇವರ ಇಸ್ತ್ರೀ ಕೆಲಸ ನಮ್ಮ ಕೊಳ್ಳಿಗೆ ಬಿದ್ದರೆ– ಇಂಟರ್ ಫಸ್ಟ್‌ಕ್ಲಾಸಿನಲ್ಲಿ ಪಾಸಾದ, ಬಿ. ಎ. ಕದಾಚಿತ್ ಫಸ್ಟ್‌ಕ್ಲಾಸಿನಲ್ಲೇ ಪಾಸಾಗಲಿಕ್ಕೆ ಹುಟ್ಟಿದ, ಕಾಶ್ಯಪಗೋತ್ರೋತ್ಪನ್ನ ಗೋವಿಂದಭಟ್ಟನ ಸುಪುತ್ರನಿಗೆ ಯಾಕೆ ಸಂಕಟವಾಗಬಾರದು ನೀವೇ ಹೇಳಿರಿ? ನೀವು ಹೇಳುವ – ಕೇಳುವ ಅಗತ್ಯ ಗೋವಿಂದಭಟ್ಟನಿಗೆ ಇಲ್ಲವೇ ಇಲ್ಲ. ಎರಡು ಕಾಲಲ್ಲಿ ಒಂದೂವರೆ ಹರಕು ಮೊಚ್ಚೆಗಳನ್ನು ತುರುಕಿಕೊಳ್ಳುತ್ತ ಅಂಗಳದಲ್ಲಿ ಇಳಿಯುತ್ತಿದ್ದಂತೆ, 'ರೈಟ್ ಅಬೌಟ್‌ಟರ್ನ್' ಮಾಡಿ, ಗೋವಿಂದಭಟ್ಟ ಪಟಾಕ್ಷೀ ಸರವನ್ನು ಹಚ್ಚಿದ:

"ದಾದಲ್ಯಾ, ಹೊತ್ತ ಹೊಂಡೂದರಾಗ, ನೀನು ದಶಮೀ-ಗಿಶಮೀ ತಿಂದ ಗಿಂದೇನು? ನನ್ನ ಕೊಳ್ಳಿಗೆ ಹಜಾರ ಲಿಗಾಡಾ. ಇಕಾ, ನೀನs ಅಷ್ಟು ಸ್ನಾನಾ ಬಗೀಹರಿಸಿ, ರಮಾಕಕ್ಕೀ ಮನೀಯಿಂದ ಸುರೂಮಾಡಿದೀ ಅಂದರ ತೀರಿತು; ಎರಡ ಕುಲಕರ್ಣ್ಯಾರ ಮನೀ, ಒಂದು ಗೋವಿಂದಮಾಸ್ತರ ಮನೀ, ಮತ್ತ ವಾಡೇದ್ದು, ಇಷ್ಟು ಪೂಜಿ ಬಗೀಹರಿಸಿ ಬಂದಬಿಡು, ಗೆದ್ದಿ. ಕಾಕಾನ ಪತ್ರ ಬಂದದ. ಜರೂರ ಬಂದ ಹೋಗರ‍್ಯಂತ, ಗೌಡರು ಹೇಳಿಕಳಿಸ್ಯಾರ. ಇಲ್ಲದಿದ್ದರ ನಾನs ಮುಗಿಸಿ ಬರತಿದ್ದೆ. ಝಟ್ಟನs ತೀರಿಸಿ ಬಂದುಬಿಡು. ತಿಳೀತೇನು?"

ಗೋವಿಂದಭಟ್ಟನ ಅವಲಕ್ಷಣತನ ತಿಳಿದು ಹಳೆಯ ಮಾತಾಗಿತ್ತು. "ತಿಳೀತು" ಎಂದು ಕೌಲೆತ್ತಿನಂತೆ ಗೋಣು ಹಾಕಿ, ತಿಳಿದ ಬಗ್ಗೆ ಸಾಕ್ಷಿ ಸಾರುವದರಲ್ಲಿ ಈಗ ಪುರುಷಾರ್ಥವೇ ಇರಲಿಲ್ಲ. ಬೆಳಗು ಹರಿಯುವದರಲ್ಲಿ, ಸ್ನಾನ ಮುಗಿಸಿ, ನಾಕು ದಶಮಿ, ಕಾರೆಳ್ಳಿನ ಹಿಂಡಿ, ಅಪ್ಪನ ಸಮಕ್ಷಮದಲ್ಲಿ, ಎರಡು ದಶಮಿ, ಒಂದು ಸಣ್ಣ ಉಳ್ಳಾಗಡ್ಡಿ, ಅವಳ ಅಪರೋಕ್ಷದಲ್ಲಿ ಹೊಡೆದು ಢರಕಿ ಬಿಟ್ಟ ವಿಷಯ ಗೋವಿಂದಭಟ್ಟನಿಗೆ ಗೊತ್ತಿರಲಿಲ್ಲ. ದೇವರ ನಾಲಾಯಖತನವನ್ನು ಹಳಿಯುತ್ತ ನಾವು ಮತ್ತೊಮ್ಮೆ ಕಾಕಸ್ನಾನ ತೀರಿಸಿ, ಥಾಲಿಹಸ್ತರಾಗಿ ಪೂಜಾ ಪರೇಡಿಗೆ ಹೊರಟೆವು.

ರಮಾಕಕ್ಕಿಯ ಮನೆಯಿಂದ ಮೊದಲುಮಾಡಿ ಗೋವಿಂದಮಾಸ್ತರರ ಮನೆಯವರೆಗೂ ಪಾಂಕ್ತವಾಗಿ, ದೇವರನ್ನು ಪರೀಟಘುಡಿಯ ಇಸ್ತ್ರೀಮಾಡಿ, ವಾಡೆಯಲ್ಲಿ ನಾವು ಕಾಲಿರಿಸಿದಾಗ, ಶ್ಯಾಮರಾಯ ವಾಡೆಯ ಪಡಸಾಲೆಯಲ್ಲಿಯ

ರಾವಜೀಕಾಕಾ ಅವರ ನಿರ್ದಿಷ್ಟ ಸಿಂಹಾಸನದಲ್ಲಿ ಮುಂಡಿಸಿದ್ದ. ರಾಧಾಕಾಕೂನ ತಾಳಿ-ಬಳೆಯು ಪ್ರಕರಣವಾದನಂತರ ಕೆಲವು ದಿನ ಗೋವಿಂದಭಟ್ಟ ವಾಡೆಯು ದೇವರಪೂಜೆಯುನ್ನು, ತನ್ನ ತೈನಾತೀ, ತಪಕೀರ ಗುರುಭಟ್ಟನಿಗೆ ಒಪ್ಪಿಸಿದ್ದ. ಆದರೆ ಪುಣೆಯಿಂದ ಕಾಕಾನ ಫರ್ಮಾನು ಬಂದಿತು. ಪೂಜೆಯು ಹಕ್ಕು ಗೋವಿಂದ ಭಟ್ಟನ ಮನೆತನಕ್ಕೆ ಸೇರಿದ್ದು. ಅವನನ್ನು ಬಿಡಿಸಲಿಕ್ಕೂ ಬರುವದಿಲ್ಲ. ಅವನೂ ಬಿಡಲಿಕ್ಕೆ ಬರುವದಿಲ್ಲ. ಮನೆಯು ಕರ್ತಾಪುರುಷನದೇ ಇದರಲ್ಲಿ ಅಂತಿಮ ನಿರ್ಣಯದ ಅಧಿಕಾರ. ಆ ಅಧಿಕಾರವನ್ನು ಚಲಾಯಿಸಿ ರಾವಜೀಕಾಕಾ ಗೋವಿಂದ ಭಟ್ಟನಿಗೆ ವಾಡೆಯು ಪೂಜೆಯುನ್ನು ನೇಹಮೀಯಂತೆ ಸಾಗಿಸಿಕೊಂಡು ಹೋಗಲು ಫರ್ಮಾಯಿಸಿದ್ದರು. ಗೌಡರು – ರಾಚಪ್ಪ ಕೂಡಿ, ಮಹಾ ಹಟೀ ಗೋವಿಂದಭಟ್ಟ ನಿಗೆ ಸಮಜೂತ ಹಾಕಿ ಮತ್ತೆ ಅವನು ವಾಡೆಯಲ್ಲಿ ಕಾಲಿರಿಸುವಂತೆ ಮಾಡಿದ್ದರು. ಅವನಾದರೂ ದುರ್ದಾನದ ದೂರ್ವಾಸನಂತೆ, ಶ್ಯಾಮರಾಯನ ಕೂಡ ಮಾತು-ಕತೆ ಇಲ್ಲದೆ, ನೆಟ್ಟಗೆ ದೇವರಮನೆಗೆ ಹೋಗಿ, ಪೂಜಿ ಮುಗಿಸಿ, ಅಷ್ಟೇ ಗಮಜಿನಿಂದ ತಿರುಗಿ ಬಿಡುತ್ತಿದ್ದ. ಶ್ಯಾಮರಾಯ, ಗೊವಿಂದಭಟ್ಟ ಇಬ್ಬರಿಗೂ ಮಾತಿನ ಅಗತ್ಯವಿರಲಿಲ್ಲ.

ಹಾಗೆ ನೋಡಿದರೆ, ವಾಡೆಯಲ್ಲಿಯ ಶ್ಯಾಮರಾಯನ ವಾಸ್ತವ್ಯ ಅನಧಿಕೃತ ವಾಗಿತ್ತು. ಇಲ್ಲಿ ನಿಲ್ಲುವದಕ್ಕೆ ಅವನು ರಾವಜೀಕಾಕಾ ಅವರ ಪರವಾನಗಿಯನ್ನು ಪಡೆದಿರಲಿಲ್ಲ. ಅವರ ನರ್ಮಸಚಿವ, ವಾಡೆಯ ಮೇಲ್ವಿಚಾರಣೆಯು ಅಧಿಕೃತ ಪ್ರತಿನಿಧಿ, ರಾಚಪ್ಪನ ಸಮ್ಮತಿಯುನ್ನೂ ಕೇಳಿರಲಿಲ್ಲ. ಇಲ್ಲಿ ಅವನು ಬಂದು ನಿಂತ ಬಗ್ಗೆ ಇಬ್ಬರೂ ಚಕಾರ ಶಬ್ದವೆತ್ತಿರಲಿಲ್ಲ. ಅವನು ಅಚಾನಕವಾಗಿ ಇಲ್ಲಿ ಬಂದು ತಳ ಊರಿದ ವಿಷಯುವನ್ನು ರಾಚಪ್ಪ, ಕಾಕಾ ಅವರ ಕಿವಿಯು ಮೇಲೆ ಹಾಕಿದ್ದ. ಕಾಕಾ ಅದಕ್ಕೆ ಹೂಂ – ಹಾಂ ಎರಡೂ ಅನ್ನಲಿಲ್ಲ. ತಾವೇ ಬಿಟ್ಟ ವಾಡೇ, ಧರ್ಮ ಸಾಲೆಯಾಯಿತೆಂದು ಅವರು ಮನಸ್ಸಿನಲ್ಲಿ ಅಳುಕಿಕೊಂಡಿರಬೇಕು. ವಾಡೆಯ ಅಂತರ್ವ್ಯವಸ್ಥೆ, ಅದನ್ನು ನಿಗಾ ಇಡುವ ಜವಾಬುದಾರಿ ರಾಚಪ್ಪನ ಮೇಲಿತ್ತು, ವಾಡೆಯಲ್ಲಿ ಪಂತಕುಟುಂಬದ ಮಹಾದೈವತವಿತ್ತು. ದನ-ಕರ ಇದ್ದವು. ಆಳು-ಕಾಳು ಇದ್ದವು. ಅದೆಲ್ಲದರ ದೇಖರಖಿ ರಾಚಪ್ಪನ ಕಡೆಗಿತ್ತು. ಅವನು ಇವುಗಳ ವ್ಯವಸ್ಥೆಯ ವಿಷಯುದಲ್ಲಿ ಹೈ-ಗೈ ಮಾಡುವ ಜಾತಿಯುಲ್ಲವೆಂದು ಕಾಕಾ ಅವರಿಗೆ ಖಚಿತ ನಂಬಿಗೆ. ಶ್ಯಾಮರಾಯನ ವಾಸ್ತವ್ಯದಿಂದ ವಾಡೆಯು ಅಂತರ್ವ್ಯವಸ್ಥೆಗೆ

ತೊಡಕು ತೋಂದರೆ ಬರಲಾರದು – ಬಂದರೆ ಅದನ್ನು ನಿವಾರಿಸಿಕೊಂಡು ಹೋಗುವ ಕುವ್ವತ್ತು, ರಾಜಪ್ಪನಲ್ಲಿ ಇದ್ದ ಬಗ್ಗೆ ಕಾಕಾ ಧೈರ್ಯವಾಗಿದ್ದರು. ವಾಡೆಯಲ್ಲಿ ಇರಕೂಡದು ಎಂದು ಕಾಕಾ ಫರ್ಮಾಯಿಸಿದ್ದರೆ, ಕಿಚ್ಚು ರೊಚ್ಚುತ್ತಿತ್ತು. ಎಂದೋ ಹೊತ್ತಲಿರುವ ಬೆಂಕಿಯನ್ನು ಇಂದೇ ಕೆದಕಿ ಉರಿ ಎಬ್ಬಿಸುವದು ಬೇಡ ವೆಂದು ರಾಜಪ್ಪ, ಕಾಕಾ ಅವರಿಗೆ ಸೂಚಿಸಿದ್ದ. ಪಂತಕುಟುಂಬದಲ್ಲಿ ಮೂಡಿದ ಬಿರುಕು, ಈ ಒಂದು ಸಣ್ಣ ಮಾತಿನಿಂದಾಗಿ ಊರತುಂಬ ಹರಡುವದು ಬೇಡ, ವಾಡೆಯ ಕ್ಷೇಮ ತನಗೆ ಹತ್ತಿತೆಂದು ರಾಜಪ್ಪ ಹೇಳಿದ್ದರಿಂದ, ಕಾಕಾ ನಿರ್ಧಾಸ್ತ ರಾದರು. ಹೀಗಾಗಿ ಶ್ಯಾಮರಾಯ, ವಾಡೇ ತನ್ನದೇ ಎನ್ನುವ ಭಿಸ್ತಿನಿಂದ ಅಲ್ಲಿ ಕಾಯಂತರೀಕ ಬಿಡಾರಬಿಟ್ಟ.

ಅಂದು ನಾನು ಪೂಜೆಗೆ ಹೋದಾಗ, ಶ್ಯಾಮರಾಯ, ತಮ್ಮಾಜಿಯನ್ನು, ತ್ಯಾಪೀ ಬಸಗೋಂಡನನ್ನು, ಬಾಗವಾನ ನಬೀಸಾಬನನ್ನು ಸಂಮುಖದಲ್ಲಿ ಕೂಡಿಸಿ ಕೊಂಡು ಏನೋ ಸಂಚು ನಡೆಸಿದ್ದ. ನಾನು ಬಂದದ್ದನ್ನು ನೋಡಿ –

"ದಾದಲ್ಯಾ ಮಗನs, ನಿನ್ನ ಸ್ವಾರೀ ಆಗಮಿಸ್ತೂ್ಯ? ನಿಮ್ಮ ಪಿತಾಜೀ ಎಲ್ಲೆ ಇಂದs? ಊರ ಕಿಲಾಪಕ್ಕ ಹೋಗ್ಯಾನ ಕಾಣಸ್ತದ? ಏಕಾದಶೀ ಬ್ಯಾರೇ. ಊಟಾ-ಉಡಿಗಿ ಉಸಾಬರೀನೂ ಇಲ್ಲಾ. ಇಂಟರ್‌ದಾಗ ಫರ್ಸ್ಟ್‌ಕ್ಲಾಸ್ ಬಂದ್ಯೆಂತಲಾ ದಾದಲ್ಯಾ? ಮಗನs, ಪೇಢೇ-ಗೀಢೇ ಕೊಡೂದಿಲ್ಲೇನು?"

ನಾನು ಇಂಟರ್‌ದಲ್ಲಿ ಫರ್ಸ್ಟ್‌ಕ್ಲಾಸ್ ಬಂದು, ಮತ್ತೆ ಹತ್ತೆಂಟು ತಿಂಗಳು ಕಾಲೇಜಿನಲ್ಲಿ ತೆಗೆದು, ಈ ಸಲ, ಎಸ್.ಬಿ.ಏ.ಗೆ ಕಾಲಿಡಲಿದ್ದರೂ, ಆ ಹಿಂದಿನ ಫರ್ಸ್ಟ್ ಕ್ಲಾಸ್ ಕಾರಣವನ್ನು ಮುಂಚಾಚಿಯೇ ಶ್ಯಾಮರಾಯ ಪೇಢೆಯ ಪ್ರಸ್ತಾಪ ಮಾಡಿದ.

"ಇಂಟರ್ ಪೇಢೇ ಹಳೀದಾತು ದಾದಾ. ಇನ್ನ ಬಿ.ಏ.ದ್ದ ತಾಜಾ ಪೇಢೇ ಕೊಡೂದು. ಇಂಟರ್‌ದ ರಿಝುಲ್ಟ ಆದಮ್ಯಾಲ ಸತ್ಯನಾರಾಯಣದ ಪ್ರಸಾದ ಕೊಡಲಿಕ್ಕೆ ನಾನೇ ಬಂದಿದ್ದೆ. ನೀವು ಆಗ ಊರಾಗ ಇದ್ದಿದ್ದಿಲ್ಲಾ. ಮುಂಬೈಗೆ ಹೋಗಿದ್ರ್ಯಂತ. ಹೀಂಗಾಗಿ ನೀವು ಅದನ್ನ ಮರಥಾಂಗ ಕಾಣಸ್ತದ."

"ಹೌದು ದಾದಲ್ಯಾ. ನೂರಾಎಂಟು ಕೆಲಸ ಏನಪಾ. ಒಂದ ಮಾಡೂ ದ್ರ್ಯಾಗ ಒಂದ ಮರತಿರತದ. ನಿಂದೇ ನೋಡಲಾ. ನನ್ನ ಮುಂದ ಬೆಳದ ಹುಡಗಾ. ನಮ್ಮ ವಿಶ್ಯಾನ ಜೋಡೀ ಕೂಡಿ ಆಡಿ ಬೆಳದಾಂವಾ. ವಿಶ್ಯಾ ಸಾಯಿನ್ನಿಗೆ,

ನೀ ಆರ್ಟ್ಸಿಗೆ. ನೀ ಫರ್ಸ್ಟ್‌ಕ್ಲಾಸ್ ಬಂದದ್ದು ನೆನಪಿತ್ತ ಖರೇ. ಮುಂಬೈಯಿಂದ ಬಂದ ಮ್ಯಾಲs ನಿನ್ನ ಕರಿಸಿ 'ಕಾಂಗ್ರ್ಯಾಟ್ಸ್' ಕೊಡೂದು ಮರತು ಉಳದ ಬಿಟ್ಟಿತು ನೋಡು. ಏನಾಗತದಂದೀ ದಾದಲ್ಯಾ, ದಿನಾ ನೋಡಕೋತ ಇರೂದ ಬಿಡು, ಮ್ಯಾಲಿಂದ ಮ್ಯಾಲರs ಭೆಟ್ಟಿ ಆಗತಿದ್ದರ, ನೆನಪು ಮಾಸೂದಿಲ್ಲಾ. ಈಗ ಸುಶ್ಯಾಂದs ನೋಡು, ಫರ್ಸ್ಟ್-ಇಯರ್ ಬಿ.ಈ.ಗೋ, ಸೆಕೆಂಡ್-ಇಯರ್ ಬಿ.ಈ.ಗೋ ಅನ್ನೂದರ ಪತ್ತೇ ಒಮ್ಮೊಮ್ಮೆ ನನಗs ಇರೂದಿಲ್ಲ ಏನಪಾ. ಯಾರರ ಕೇಳಿದರ, ಲಟ್ಟನs, ನನಗs ಹೇಳಲಿಕ್ಕೆ ಬರೂದಿಲ್ಲಾ."
ಶ್ಯಾಮರಾಯ ಸಾರಿಸತೊಡಗಿದ.

"ಹಂ......ಹಂ......ದಾದಾ, ದಾದಲ್ಯಾ, ಮುಂಚಿನ ತುಟೂ ನಮ್ಮ ಶಿಷ್ಯಾ. ನಮ್ಮ ಗರಡ್ಯಾಗs ತಯಾರಾದ ಕುಳಾ."
ಅಷ್ಟಾವಕ್ರ ತಮ್ಮಾಜಿ, ಶಿಷ್ಯನ ಮತ್ತು ತನ್ನ ಗುರುಪೀಠದ ತಾರೀಫು ಮಾಡಿಕೊಂಡ.

"ದಾದಲ್ಯಾ ಪೂಜಿ ಬಗೀಹರದ ಮ್ಯಾಲ, ಅಷ್ಟ ನನಗ ಭೆಟ್ಟ್ಯಾಗಿ ಹೋಗು. ಒಂದಿಷ್ಟು ಜರೂರೀ ಕೆಲಸ ಅದs. ಹಾಂಗs ಹೋದ-ಗೀದೀ."
ಶ್ಯಾಮರಾಯ ತನ್ನನ್ನು ಕಂಡು ಹೋಗಲಿಕ್ಕೆ ತಾಕಿತ್ತುಮಾಡಿದ.

ಅಡಗಿಯ ಗುಂಡ್ಯಾ, ಒಂದು ತಾಟಿನಲ್ಲಿ, ನಾಲ್ಕೈದು ಕಪ್ಪು ಚಹ ತಂದು, ಅಲ್ಲಿ ಕುಳಿತ ಮಂಡಳಿಗೆ ಹಂಚುತ್ತಿರುವಾಗಲೇ ನಾನು ದೇವರಮನೆಯ ಕಡೆಗೆ ನಡೆದೆ. ಗುಂಡ್ಯಾ ಒಳಗೆ ಬಂದ ಕೂಡಲೇ —

"ಗುಂಡೋಪಂತ್, ಇಂದ ಏಕಾದಶೀ; ನೀರಾಹಾರ ದೇವರಿಗೆ ಆದರ ನಮಗೇನ ಇಲ್ಲಾ. ಪೂಜೀ ಬಗೀಹರಿಸಿ ಬರತೇವು. ನಮಗೂ ಅಷ್ಟು ತೀರ್ಥದ ವ್ಯವಸ್ಥಾ ಆಗಲಿ. ನಿಮ್ಮ ಮಾಮಾ,– ಪಾಂಡೂ ಏನು, ರಾವಜೀಕಾಕಾ ಅವರ ಜೋಡೀ ಪುಣೇನs ಹಿಡಿದಬಿಟ್ಟ ಕಾಣಸ್ತದ? ನಿಂದು ಬಸ್ತಾನ ಹ್ಯಾಂಗs, ಠೀಕ ಕೂತದಿಲ್ಲೋ? ಅಲ್ಲೋ ಗುಂಡಪ್ಪಾ, ನಿಮ್ಮ ಅವ್ವ ಏನೋ, ನಿನ್ನ ಲಗ್ನದ ತಯಾರೀ ನಡಸ್ಯಾಳಂತಲಾ? ಕನ್ಯಾ ಎಲ್ಲೀದು? ಏನ ಕಥೀ? ಆಂ? ಏನ ಅಗದೀ ಮುಚ್ಚುಮರೀಲೇ ನಡದದ ಖಟಾಟೋಪಾ?"

ಈಗಾಗಲೇ ನಾವು ದೇಶಾವರೀ ಭಾಷೆಯಲ್ಲಿ ಪಾರಂಗತರಾಗಿದ್ದೆವು. ಆ ಗುಂಡ್ಯಾನಿಗೆ, ಗುಂಡೋಪಂತ್ ಬಹುಮಾನಾರ್ಥಕ ಸಂಬೋಧನೆಯನ್ನು

ಸಮರ್ಪಿಸಿದಾಗಲೇ, ಎರಡು ಕಪ್ಪಿನ ಪಾತೇಲಿ ಒಲೆಯ ಮೇಲೇರಿತು. ಆಕಂಠ ಪೂರ್ತಿ ಚಹಾ ಸಿಗುವುದರಲ್ಲಿ ಸಂದೇಹವಿಲ್ಲದಿರುವ ಖಾತ್ರೀಯಾಗಿ, ಪಂಚಧಾತು ವಿನ ಜಾಗಟೆ ಬಡೆದಂತೆ ಮಂತ್ರಪಠನಕ್ಕೆ ತೊಡಗಿದೆವು.

ಪೂಜೆ – ಚಹಾಪಾನ ಮುಗಿಸಿ, ನಾವು ಪಡಸಾಲೆಗೆ ಬಂದಾಗ, ಶ್ಯಾಮ ರಾಯನ ಸಮ್ಮುಖದಲ್ಲಿ ವಿರಾಜಮಾನವಾದ ತಿಕಡೀ ಗುಳೇ ಕಿತ್ತಿತ್ತು. ಶ್ಯಾಮ ರಾಯ ಒಬ್ಬನೇ ಇದ್ದ. ನನ್ನನ್ನು ನೋಡಿ, ತಾನೂ ಲೋಡಿಗೆ ಐಸುಫೈಸಾಗಿ ಕೂಡುತ್ತ —

"ಹಂs. ಹೀಂಗ ಬಾ ದಾದಲ್ಯಾ. ಕೂಡಿಲ್ಲೆ. ಪೂಜಿ ಮುಗೀತs? ಮತ್ತೇನಂತೀ? ಈ ವರ್ಷ ನಿಂದೇನು ಬೀ.ಏ. ಅಂದ್ಯಲ್ಲs? ಇನಾ ಈಗ ದೇವರs ಅಂತ ಸೂಟಿ ಸುರೂ ಆಗೇದ. ಕಾಲೇಜದ ಧಾವತೇನಿಲ್ಲಾ. ನಿಧಾನ ಎರಡು ಮೂರು ತಿಂಗಳಂತೂ ಊರಾಗನs ಬೈಠಕ್ ಹಾಕಾಂವಾ ಹೌಂದಲ್ಲೋ? ಸೂಟ್ಯಾಗ ಏನ ಕಮಾಯ್ ಮಾಡಾಂವಾ?"

"ಕಮಾಂಯ್ ಯಾತರದು ದಾದಾ? ಗೋವಿಂದಭಟ್ಟಗ ಬ್ಯಾಸರಕಿ ಬಂತಂದ್ರ, ಅಂವಾ ಬಿಟ್ಟ ನಾಕ ಮನೀ ಘಂಟೀ ಬಾರಸೂದು. ಇಲ್ಲs, ಪತ್ರಾವಳೀ ಹಚ್ಚೂದು. ಇಷ್ಟೂ ಮೀರಿ ಬ್ಯಾಸರ ಬಂದರ, ಮೋಟಾರ್-ಸ್ಟ್ಯಾಂಡಿನ ಆಲದ ಕಟ್ಟಿಗೆ ಬೈಠಕ್ ಹಾಕೂದು. ಬ್ಯಾರೇ ಧಂದೇನರs ಏನದ ಇಲ್ಲೇ?"

ಶ್ಯಾಮರಾಯನಿಗೆ ವಿಶ್ವಾಸ ಹಾಗೂ ಸುರೇಶ-ಸತೀಶರು ದಾದಾ ಎನ್ನು ತ್ತಿದ್ದರು. ಸಣ್ಣಂದಿನವನಿದ್ದಾಗಿನಿಂದಲೂ ಕೇಳಿದ್ದ ನನಗೆ ಅದೇ ರೂಢಿಯಾಗಿತ್ತು. ಶ್ಯಾಮರಾಯ ಸಾರ್ವಜನಿಕ ದಾದಾ ಆಗಿರದಿದ್ದರೂ, ವಾಡೆಯಲ್ಲಿಯ ಆಳು-ಕಾಳಿನ, ಋಣಾನುಬಂಧದ ಅನ್ಯ ಮನೆಗಳಲ್ಲಿ, ದಾದಾ ಎಂದೇ ಖ್ಯಾತನಾಗಿದ್ದ. ನಾನೂ ಅವನಿಗೆ ದಾದಾ ಎಂದೇ ಅನ್ನುತ್ತಿದ್ದೆ.

"ಕಾಲೇಜದ ಫೀಗೆ ಏನ ಮಾಡತೀ ದಾದಲ್ಯಾ? ಗೋವಿಂದಭಟ್ಟಾ ಎಲ್ಲೀದ ಕೊಡತಾನ? ಸಹ್ಜ ಕೇಳಿದೆ ಆಂs."

"ಏನ ಹರಕತ್ತ ಇಲ್ಲ ಬಿಡರಿ. ಕೇಳಿದ್ದು ಠೀಕನs ಆತು. ನೀವು ಯಜ ಮಾನರು; ನಾವು ನಿಮ್ಮ ಆಶ್ರಿತರು. ನಮ್ಮ ಸುಖ-ದುಃಖ ನೀವ್ ಕೇಳದೇ ಬ್ಯಾರೇದವರು ಯಾರ ಕೇಳಬೇಕು? ನನ್ನ ಫೀ ಏನು? ಇಂದಿನ ತನಕಾ ಅಂತೂ ಮಾಫೀನs! ನೈವೇದ್ಯಂತೂ ಪಂತಮಾಮಾ ಅವರಲ್ಲೆ ಆಗತದ. ಇನ್ನ ಅರಿವಿ

ಅಂಚಡಿಗೂ ಅನ್ನದಾತಾನs ದಾತಾ. ಜೋಗಕಾಕಾ ಅವರೂ ಅಷ್ಟಿಷ್ಟು ಆಗೀಗ ನೆರವಾಗತಾರ."

"ಅಂತೂ ನಡದsದ ಅನ್ನು. ಆದರೂ ದಾದಲ್ಯಾ, ಇದೆಲ್ಲಾ ಏನಂತೀ, 'ಟೆಂಪ್ರರಿ ಮೇಜರ್' ಏನಪಾ. ಬಿ.ಏ. ಆತೂ – ಮುಂದೇನು? ತತಃ ಕಿಂ? ಗೋವಿಂದಭಟ್ಟಗ ನೀ ಒಬ್ಬನs ಇದ್ದೀಯಾ? ಸ್ವಾಲಕ ಏಳ ಮಂದಿ ತಮ್ಮಾ-ತಂಗ್ಯೆಂದರು ಇದ್ದಾರ ನಿನಗ. ಅವರ ಮುಂಜಿವಿ – ಮದಿವಿ – ವಿದ್ಯಾ ಅದನೋ ಇಲ್ಲೋ? ಅದರದೇನು ವ್ಯವಸ್ಥಾನಪಾ? ನೀ ಏನು ಸಣ್ಣಾವ ಅಲ್ಲ ಏನಪಾ? ಕೈಗೆ ಬಂದ ಮಗಾ ಗೋವಿಂದಭಟ್ಟಗ. ಮುಂಜಿವಿ ಮದಿವಿ ಅಂತs ಅವಂದೂ ವ್ಯಾಪ ಬೆಳಕೋತನs ಹೋಗೂದು. ಅಂವಗ ನೆರವಾಗೂದು ಇಂಥಾ ವ್ಯಾಳ್ಯಾದಾಗs ಅಲ್ಲೇನು? ನೀನೂ ಚೂರ-ಚಾರ ಮದ್ದsತ ಮಾಡಕೋತ ಇದ್ದೀ ಅಂದರ ಅಂವಗೂ ಅಷ್ಟು ಠೀಕಾ. ಹೌಂದಲ್ಲೋ ನನ್ನ ಮಾತಾ?"

"ಅಗದೀ ರಾಸ್ತ ಮಾತ ಹೇಳಿದಿರಿ. ಇಬ್ಬರ ತಮ್ಮಂದಿರದು ಮುಲಕೀ ಪರೀಕ್ಷಾ ಆತು. ಮುಂದೇನು ಅನ್ನೂ ವಿಚಾರ ನಡದದ ನಮ್ಮದೂ. ಅಲ್ಲೇ ಬೆಳಗ್ಯಾಂವಾಗ ಯಾರದರ ಮನೀ ನೋಡಿ ಅವರನಿಷ್ಟು ಇಡಬೇಕಂತ ಮಾಡೀನಿ. ನಾಯಕ ವಕೀಲರದು ನಕಾರ ಬರಲಿಕ್ಕಿಲ್ಲಂತ ಭರೋಸ ಅದs."

"ಹೀಂಗs. ಅಂತೂ ನೀನೂ ಘಾಲ್‌ಚಾಲೀ ನಡಿಸೀ ಅಂಥಾಂಗ ಆತು. 'ರಿಸ್ಪೊನ್ಸಿಬ್ಲಿಟಿ ರಿಯಲಾಯಜ್' ಮಾಡೂ 'ಸೆನ್ಸ್' ಅದs ದಾದಲ್ಯಾ ನಿನ್ನಲ್ಲೆ. ನಿನ್ನ ತಮ್ಮಂದಿರನ ಬೆಳಗಾಂವ್ಯಾಗ ಇಡೂ ಖಟಿಪಿಟಿ ನಡಿಸೀನಿ ಅನೂತ್ಲೇ ನೆನಪಾತು. ಏನಪಾ ಅಂದರs, ನಂದೊಂದು ಸೂಚನಾ ಅದs ದಾದಲ್ಯಾ. ಅದರ್‍ಹಾಂಗ ಮಾಡತಿದ್ದರ ನೋಡು. ಅದಕs ಏನಪಾ, ಇಂದ ಭೆಟ್ಟಿ ಆಗಿ ಹೋಗು ಅಂತ ಅಂದದ್ದು. ಮತ್ತ ಮರತ ಉಳೀತs ಹಜಾರ ಕೆಲಸದ ಲಿಗಾಡದಾಗ ಉಳಿದs ಹೋತು. ಬೆಳಗಾಂವ್ಯಾಗ ನಮ್ಮ 'ಎಗ್ಸಿಕ್ಯೂಟಿವ್ ಇಂಜಿನಿಯರ್' ಸಾಹೇಬರೇನು ಇದ್ದಾರಲಾ, ಅವರಿಗೆ ಒಬ್ಬ ಬ್ರಾಹ್ಮಣರ ಹುಡುಗಂದು ಅವಶ್ಯ-ಕತಾ ಅದs. ಅಷ್ಟಿಷ್ಟು ಬಾಜಾರಾ – ಪೂಜಿ-ಪುನಸ್ಕಾರಾ, ಭಾಳ ಆದರ ಚೂರ ಚಾರು ಆಫೀಸಿನ ಕೆಲಸಾ, ಅಷ್ಟ ಮಾಡಿಕೊಂಡು ಇರೂ ಹುಡುಗ ಬೇಕಾಗ್ಯಾನ. ತಿಂಗಳೊಪ್ಪತ್ತು, ಜಮಾಸಿದರ ನೀನs ಇರು. ಆಮ್ಯಾಲ ಮೆಲ್ಲಕ ನಿನ್ನ ತಮ್ಮನ್ನ ಸೇರಸಲಿಕ್ಕೆ ಬರತದ. ಅಪಾ, ಅವರೇನು ಪುಕಟ ದುಡಿಸಿಗೊಂಬೂದಿಲ್ಲಾ

ಊಟಕ್ಕ ಹಾಕತಾರ. ಚಾ-ಪಾಣೀ ಆಗತದ. ಅರಿವೀ-ಅಂಚಡಿ ಕೊಡತಾರ. 'ಮಸ್ಟರ್ ಕೂಲಿ' ಅಂತನ್ಯ ತಗೋತಾರ. ಊಟಾ-ಉಡಿಗಿ ಪರಭಾರೆ ಹೋಗಿ ಮ್ಯಾಲ ದಹಾ-ಬಾರಾ ರೂಪಾಯಿ ಕೈಗೆ ಹತ್ತತಾವ. ನಮ್ಮ ಬ್ರಾಹ್ಮಣ ಸಮಾಜದಾಗ ಏನ 'ಡಿಫೆಕ್ಟ್' ಅದ್ಯ ಅಂದೀ? ಆಳಸೀತನಾ! ಕೂತ ತಿನೂದು. ದುಡಿಯೂ ಕೈ ಎರಡೇ. ಆದರ ತಿನ್ನೂ ಬಾಯಿ ಮಾತ್ರ ಹತ್ತು. ಹೀಂಗಾಗಿ ಎಷ್ಟ ಘಳಿಸಿದರೂ, ನೂತದ್ದೆಲ್ಲಾ ಉಡದಾರಕ್ಯ ಸಾಕಾಗಧಾಂಗ ಆಗೇದ. ಸುಶಿಕ್ಷಿತರು ಅಂಬಾವ್ರು ಏನಿದ್ದೇವು, ಮುಂದ ಬಂದು, ಗೌರವಾ – ಅಗೌರವಾ ಅನ್ನೂ ದುರಭಿಮಾನ ಬಿಟ್ಟು ದುಡೀಲಿಕ್ಕೆ ಹತ್ತಿದೇವು ಅಂದರ, ನಮಗ್ಯ ಏಳಿಗಿ ಅದ್ಯ. ನಾ ಹೇಳೂದು ಪಟಾಸ್ತಿಲ್ಲೋ ನಿನಗ. ಈಗ, ನಿಂದ್ಯ ಉಧಾರಣೀ ತಗೋ. ಹ್ಯಾಂಗ ಕಷ್ಟಬಟ್ಟು ಕಲ್ತಿ? ಅಂ? ಕೈ ಕೆಸರ ಆದರ ಬಾಯಿ ಮೊಸರಾ! ಬೀ.ಏ.ಕ್ಕ ಬಂದರೂ ಧಾಬಳೀ ಹಚಿಗೊಂಬೂದನ್ನೇನು ಬಿಡವಲ್ಲಿ. ಯಾಕಪಾ? ನಿನ್ನ ತಂದಿ-ತಾಯಿ, ತಮ್ಮಾ-ತಂಗಿ ಅವರ ದಶಿಂದ ಹೌದಲ್ಲೋ? ಈಗ, ಒಕ್ಕಲಿ ಗ್ಯಾರನ್ಯ ನೋಡು. ಕೂಸ-ಕುನ್ನಿ ಮೊದಲಮಾಡಿಕೊಂಡು ದುಡೀತಾರ. ಅಂದಲ್ಲೇ ಅವರದು ಠೀಕದ. ಅಭಿಮಾನ ಬಿಟ್ಟು ನಾವ್ ದುಡೀದಿದ್ರ ಹಾಳಾದೇ ವಂತ್ಯ ತಿಳಕೋ ಏನಪಾ. ಗೋವಿಂದಭಟ್ಟಾ, ವಯಸ್ಸ ಆಗತ ಬಂದರೂ ಉಲುಕೋಚಿ ಇದ್ದಾನ. ತಲಿತಿರಕತನಾ ಮಾಡತಾನ. ಅಂವಗ ತಿಳಿಸಿ ಹೇಳು. ಅಂವಾ ಕಬೂಲಾದರ ಬಂದ ತಿಳಸು. ನಾನು ಇನ್ನೆರಡ ದಿನಕ ಬೆಳಗಾಂವಿಗೆ ಹೋಗಾಂವ ಇದ್ದಿನಿ. ಜಮಾಸ್ತ್ಯ, ನಿನ್ನ ಕರಕೊಂಡು ಹೋಗತೀನಿ. ತಿಂಗಳೊಪ್ಪತ್ತು ಇದ್ದ ನೋಡು. ಅಷ್ಟು, ಸಾಹೇಬರ ಮರ್ಜೀ ಹಿಡದಿಟ್ಟೆಂದರ ಸಾಕು; ಅವರು ಎಸ್.ಈ. ಆಗೂದರಾಗ, ನೀ ಬಿ.ಏ. ಎಂ.ಏ. ಆಗತೀ. ನವಕರೀದಶಿಂದ ಅರ್ಜೀ ಒಡಕೊಂಡು ಅಲದಾಡೂ ಕಾರಣ್ಯ ಬೀಳೂದಿಲ್ಲಾ. ಅಷ್ಟ 'ಇಂಪ್ರೆಶನ್' ಒಗದೀ ಅಂದರ ಬಗೀಹರೀತು. ಸಟಾಸಟಾ ಏರಿಕೋತನ್ಯ ಹೋಗತೀ."

"ನಿಮ್ಮ ಸೂಚನಾ ನನಗ ಶಂಭರ ಟಕ್ಕೆ ಪಟಾಸ್ತ್ಯ ಬಿಡಿರಿ. ತಿಂಗಳ-ದೀಡ ತಿಂಗಳಾ ವ್ಯರ್ಥ ವ್ಯಾಳ್ಯಾ ಹಾಕ್ಕೋತ ಇಲ್ಲೇ ಕೂಡತಿದ್ದೆ. ನಾ ಅಂತೂ ನಿಮ್ಮ ಜೋಡೀ ಬರೂದು ಠರಾವಾಧಾಂಗಂತ್ಯ ತಿಳೀರಿ. ಇನ್ನ ಹುಡುಗೂರ ದಶಿಂದ ಗೋವಿಂದಭಟ್ಟಗ ಹೇಳಿ ನೋಡತೀನಿ. ಜಮಾಸ್ತ್ಯ, ಠೀಕಾತು. ಇಲ್ಲಾ ಅಂದರ, ಅವರವರ ನಶೀಬಾ ಅವರವರ ಸುತ್ತ."

"ನೀ ಕಬೂಲಾಗತ್ಯೋ ಇಲ್ಲೋ ಅಂತs ನನಗ ಡುಗುಡುಗಿ ಇತ್ತು ದಾದಲ್ಯಾ. ಲಟ್ಟನs ಒಪಗೊಂಡಿ. ಠೀಕಾತು. ನಾಡದ ಹೊರಡೂ ತಯಾರಿ ಮಾಡು. ಹುಡುಗೂರದು ಮುಂದ ನೋಡಲಿಕ್ಕೆ ಬಂದೀತು. ದಾದಲ್ಯಾನ್ನ ಕರಕೊಂಡು ಬರತೀನ್ಯಂತs, ನಾ ಇಂದೇ ಪತ್ರಾ ಬರೀತೀನಿ ಸಾಹೇಬರಿಗೆ."
ಇಷ್ಟು ಹೇಳಿ ಶ್ಯಾಮರಾಯ ಎದ್ದ. ನಾನೂ ಜಾಗವನ್ನು ಬಿಡಬೇಕಾಯಿತು.

ನನ್ನ – ಶ್ಯಾಮರಾಯನ ಸಂಬಂಧ, ಗೋವಿಂದಭಟ್ಟ – ಶ್ಯಾಮರಾಯನ ಸಂಬಂಧದಂತೆ ಎಣ್ಣೆ-ಶೀಗೆಯದಾಗಿರಲಿಲ್ಲ. ತೀರ ಆತ್ಮೀಯವಾಗಿರದಿದ್ದರೂ ಹುಳಿ-ಒಗರಿನದಾಗಿರಲಿಲ್ಲ. ಶ್ಯಾಮರಾಯನ ದೃಷ್ಟಿಯಲ್ಲಿ ನಾನು, ಇನ್ನೂ ಗಂಟೆ-ಧಾಬಳಿಯ ಗೆಣೆಯ, ಬಾಯಲ್ಲಿ ಬಟ್ಟಿಟ್ಟರೂ ಜುರುಜುರು ಚೀಪ್ರುವ – ಆದರೆ ತಪ್ಪಿಯೂ ಕಚ್ಚದಿರುವ ಪ್ರಾಣಿಯಾಗಿದ್ದೆ. ಅಶನ-ವಸನ ಅಷ್ಟರ ಮಟ್ಟಿಗೆ, ನಾನು ಸಾಂಗಲಿಯ ಪಂತಮಾಮಾ ಅವರಿಗೆ ಜೋತುಬಿದ್ದಿರುವ ವಿಷಯ ಶ್ಯಾಮ ರಾಯನಿಗೆ ಅರಿತು ಗೊತ್ತಿತ್ತು. ಕಳೆದ ೨, ೨॥ ವರುಷಗಳ ಅವಧಿಯಲ್ಲಿ ನಾನು ಸಾಂಗಲಿಯಿಂದ ಊರಿಗೆ ಹತ್ತು ಸಲ ಬಂದಿದ್ದೆ. ಬಂದಾಗಲೆಲ್ಲ, ಒಂದಿಲ್ಲ ಒಂದು ಕಾರಣದಿಂದ ಅವನನ್ನು ಕಂಡಿದ್ದೆ. ದಸರೆಯಲ್ಲಿ ಬನ್ನಿ-ಬಂಗಾರ ಕೊಟ್ಟು ಅವನಿಂದ 'ಆಯುಷ್ಮಾನ್ ಭವ' ಅಂತ ಆಶೀರ್ವಾದ ತೆಗೆದುಕೊಂಡಿದ್ದೆ. ಒಮ್ಮೆ ಅವನು ಚಳಿಜ್ವರದಿಂದ ಪೀಡಿತನಾಗಿ ನಾಕೆಂಟು ದಿನ ಹಾಸಿಗೆ ಹಿಡಿದಾಗ ಊಟ-ಉಡಿಗೆ, ಮನೆ-ಮಾರಿನ ಪರಿವೆ ಇಲ್ಲದೆ ಶುಶ್ರೂಷೆ ಮಾಡಿದ್ದೆ. ಅವನು ಖುಷಿ ಯಾಗಿ ಆ ಸೇವೆಗೆಂದು ಹತ್ತು ರೂಪಾಯಿಯ ಕೂಲಿಯನ್ನು ಕೊಡಬಂದಾಗ ಗೌರವಪೂರ್ವಕವಾಗಿ ನಿರಾಕರಿಸಿದ್ದೆ. ನನಗೆ – ಗೋವಿಂದಭಟ್ಟನಿಗೆ ಅಜ-ಗಜಾಂತರ ಅಂತರವಿದೆಯೆಂದು ಒಮ್ಮೆ ಶ್ಯಾಮರಾಯನೇ ಹೇಳಿದ್ದ. ಗೋವಿಂದಭಟ್ಟ ಕಾಕಾನ ಚೇಲಾ; ದಾದಲ್ಯಾ ತೀರ ಮಳ್ಳ ಗಿರಾಕಿ ಎಂದು ಭಾವಿಸಿ, ಶ್ಯಾಮರಾಯ, ಈ ಅಜಗಜಾಂತರದ ಅಂತರವನ್ನ ಕಂಡಿರಬಹುದಾಗಿತ್ತು. ಒಂದೆರಡು ಸಲ ನನ್ನಿಂದ ಬಾತಮಿಯನ್ನು ಹೊರಡಿಸುವ ಬೇತಿನಿಂದ ಅವನು ಸಾಂಗಲಿಯ ಹಾಲ್-ಹವಾಲಿಯ ಬಗ್ಗೆ, ಪುಣೆಯ ಹಾಲ್-ಚಾಲಿಯ ಬಗ್ಗೆ ಕೇಳಿ ನೋಡಿದ್ದ. ಮುದ್ದಾಂ, ಮಳ್ಳತನವನ್ನು ಪ್ರದರ್ಶಿಸುವ ಡಾವಿನಿಂದ, ನಾನೂ, ಸಾಂಗಲಿಯ ನನ್ನ ವೈದಿಕ-ವಿದ್ಯಾ- ವಿಲಾಸ, ನನ್ನ ಅಭ್ಯಾಸದ ಗತಿ-ಪ್ರಗತಿಯನ್ನು ಕುರಿತೇ ಅವನ ತಲೆ ಚಿಟ್ಟುಹಿಡಿಸುವಂತೆ ಬಾತಮೀ ಒಪ್ಪಿಸಿದ್ದೆ. ಉಳಿದ ಬಾಬತ್ತಿನಲ್ಲಿ ತೀರ 'ಖೋಕಾ'

ಎನ್ನುವದನ್ನ ತೋರಿಸಿದ್ದೆ. ಈ ಗಿರಾಕಿಯಲ್ಲಿ ನೀರಿಲ್ಲವೆಂದು ಶ್ಯಾಮರಾಯನ ಖಾತ್ರಿಯಾಗಿತ್ತು – ಆಗಿರಬೇಕು.

ನಾನು ತೀರಾ 'ಢ' ಎನ್ನುವ ಶ್ಯಾಮರಾಯನ ಅಭಿಪ್ರಾಯಕ್ಕೆ ಒಮ್ಮೆ ಕಳಸವೇರಿತು.

ಸಾಂಗಲಿಯ ಬಾತಮಿಯನ್ನ – ಸೋನಕ್ಕ-ವಿಶ್ವಾಸ-ಕಾಕಾ ಅವರ ವಿಷಯ ವನ್ನು ಕುರಿತು ನನ್ನಿಂದ ಏನಾದರೂ ತಿಳಿಯಬಹುದೋ ಏನೋ ಎಂದು, ಶ್ಯಾಮರಾಯ ಕೇಳಿದ್ದ —

"ದಾದಲ್ಯಾ, ಆಕೀ ಏನು ಸಾಂಗಲೀ-ಪುಣೇದ ಫೇರೀ ಮಾಡತಿರತಾ ಳೇನು ?"

"ಆಕೀ ಅಂದರ ಯಾರರೀ ದಾದಾ ?"

ನಾನು ಅವನನ್ನೇ ತಿರುಗಿ ಕೇಳಿದ್ದೆ. "ಆಕೀ" ಎಂದರೆ ಸೋನಕ್ಕನೆನ್ನುವದು ನನಗೆ ಅರಿತು ಗೊತ್ತಿತ್ತು. ದಾದಾ, – ಶ್ಯಾಮರಾಯ – ಖುಷಿಯಿಂದ ಬಾರೀಕಾಯಿ ಯನ್ನು ಕಡಿದು ಬಾಯಿ ಚಪ್ಪರಿಸಬೇಕೆಂದು ಮಾಡಿದ್ದ. ಬಾರೀಕಾಯಿಯಲ್ಲಿ ಬೇವಿನಕಾಯಿಯ ಪರಕಾಯಪ್ರವೇಶವಾಗಿತ್ತು. ತೀರಾ ಅಸಡ್ಡಾಳ ಮುಖ ಮಾಡಿ ಅವನು —

"ಢಡ್ಡ ಸೂಳೀಮಗಾ ಇದ್ದೀ ಆತು. ಓ ಅಂದರ ಠೋ ಗೊತ್ತಿಲ್ಲಾ. ಉದ್ದಕ ಬೆಳೆದು ಉಧೋ ಅಂತ ನಿಂತೀ."
ಎಂದು ಶಪಿಸಿದ್ದ.

ಅಂದಿನಿಂದ ದಾದಲ್ಯಾ ಅಂದರೆ ತೀರ ಮಳ್ಳಗಿರಾಕಿಯೆಂದು ಶ್ಯಾಮ ರಾಯನ ಗ್ರಹಿಕೆಯಾಗಿತ್ತು. ಅದು ನನಗೆ ಘನ ಪಥ್ಯವಾಯಿತು.

ದಾದಲ್ಯಾ, ಎಫ್.ವಾಯ್. ಹಾಗೂ ಇಂಟರ್ ಪರೀಕ್ಷೆಗಳನ್ನು ಫರ್ಸ್ಟ ಕ್ಲಾಸಿನಲ್ಲಿ ಪಾಸಾದ ವಿಷಯ ಶ್ಯಾಮರಾಯನಿಗೆ ತಿಳಿದಿತ್ತು. ಅದನ್ನು ಕೇಳಿಯೇ ಅವನು ಅನ್ನುತ್ತಿದ್ದನಂತೆ —

"ದಾದಲ್ಯಾ ಹೌದಲ್ಲೋ, ಅಭ್ಯಾಸದಾಗ ಅಂದರ ನಮ್ಮ ರಾಜಾ ಕುದರಿ ಇದ್ಹಾಂಗ, ವ್ಯವಹಾರದಾಗ ಮಾತ್ರ ಅಗಸರ ಕತ್ತಿ ಇದ್ಹಾಂಗ. ಹೇಳಿ ಮಾಡಿಸಿದ ಶುಂಭಾ."

ಇಂಥ ಶುಂಭನನ್ನು ರಂಬಿಸಿ, ಶ್ಯಾಮರಾಯ ಅವನನ್ನು ಬೆಳಗಾಂವಿಯ

'ಎಕ್ಸ್-ಇಂಜಿನಿಯರ್' ಸಾಹೇಬರಲ್ಲಿ, ತಿಂಗಳೊಪ್ಪತ್ತು ಜೀತದ ಗಾಣಕ್ಕೆ ಬಿಗಿಯಲು ಯಾಕೆ ಅನುನಯ ನಡೆಸಿದ್ದನೋ ತಿಳಿಯಲಿಲ್ಲ.

ಗೋವಿಂದಭಟ್ಟನ ಊಟ, ದ್ವಾದಶಿಯ ಪ್ರಯುಕ್ತ, ಕಾಗೆ ಕೂಗುವದರಲ್ಲಿಯೇ ಮುಗಿದಿತ್ತು. ಪಾರಣೆ-ಪೀರಣೆಯ ಭಾನಗಡಿ ಇರಲಿಲ್ಲ. ಅಂದು ಬಿದ್ದ ತಾಮ್ರಭಸ್ಮದ ಅರ್ಕ ನಿಧಾನವಾಗಿ ಇಳಿಯುವ ಬೇತಿನಲ್ಲಿದ್ದಾಗ ನಾವು ಗೋವಿಂದಭಟ್ಟನನ್ನು ಗಾತಾಸಿದೆವು. ಸಾಂಗಲಿಯಲ್ಲಿಯ ನಮ್ಮ ವೈದಿಕವೃತ್ತಿವಿಲಾಸದ ರಮ್ಯಕಥನ ಮಾಡಿದೆವು. ಆ ಅರ್ಘ್ಯವ್ಯವಸಾಯದ ಮಹತಿಯನ್ನು ಮುಕ್ತಮಾನಸರಾಗಿ ಸಾರಿದೆವು. ನಂತರ ಈ ಭಾವನಾಪ್ರಪಂಚದಿಂದ, ವ್ಯಾವಹಾರಿಕ ಜಗತ್ತಿಗೆ ಅವತರಿಸಿ, ಗೋವಿಂದಭಟ್ಟನಿಗೆ ಅವನ ವ್ಯಾಪಕ-ಸಂಸಾರ-ಬೋಜಾದ, ಕುಟುಂಬ-ಪಟಾಲಮ್ಮದ ಭವಿಷ್ಯಕ್ಷೇಮದ ಕಲ್ಪನೆಯನ್ನು ಮಾಡಿಕೊಟ್ಟೆವು.

ಕಾಲ ಮೇಲೆ ಕಾಲು ಹಾಕಿಕೊಂಡು, ಪಡಸಾಲೆಯ ಕಂಬಕ್ಕೆ ಆತುಕೊಂಡು ಸ್ಥಾನಾಪನ್ನನಾದ ಗೋವಿಂದಭಟ್ಟ, ನಮ್ಮ ಕುಟುಂಬಯೋಜನೆಯ ಕಥನ ವೃತ್ತಾಂತವನ್ನು ತದೇಕಚಿತ್ತನಾಗಿ ಕೇಳಿ —

"ದಾದಲ್ಯಾ, ಆಸತ್ತ-ಬ್ಯಾಸತ್ತು ನಾಕ ದಿನಾ ಸೂಟೀಗ್ಯಂತ ಬಂದೀ. ಆ ಪೂಜಿ, ಆ ಸೇವಾ ಏನ ಬಿಡದ ಕರ್ಮೈ ಸೂಳೇಮಗನ್ನು. ಯಾಕ ಧಾವತಿ ಮಾಡಕೋತಿ? ಇನಾ ನನ್ನ ಕೈ ನಡೀತದ. ಇನ್ನ ಹುಡುಗೂರದು ಅಂತೀಯಾ? ಅವೇನು ನಿನ್ನ ಹಾಂಗ ಊಚ ಹೊಂಟಾವಂತ ಅನಸೂದಿಲ್ಲಾ. ಮುಲ್ಕೀ ಪರೀಕ್ಷಾ ಆಗಬೇಕಾದರೈ ಕುರೀ-ಕ್ವಾಣ ಬಿತ್ತ ಅವಕ. ಸಬನೀಸ ಇನ್‌ಸ್ಪೆಕ್ಟರನದು ವಶೀಲೀ ಹಚ್ಚಿ ಇಟ್ಟೇನಿ. ಲೋಕಲ್‌ಬೋರ್ಡ್ ಸಾಲ್ಯಾಗ ಎಲ್ಲ್ಯರ ತುರಕಿ ಬಿಡೂಣು. ದಹಾ – ಪಂಧರಾ ಬರೂದಕ ಅವರ ಹೊಟ್ಟಿ-ನೆತ್ತಿಗೆ ಆಗೂದಕ ಚಾಟಿ ಆಗತದ. ನೀ ಹೀಂಗೈ ಪೈಲಾನಂಬರ ಬಂದು, ಬಿ.ಎ. ಆದ್ಯಂದ್ರ ಮಾಮಲೇ-ಮಾಲಕರೀ ತಾನೈ ಬರತದ ನಡದು. ಅಪಾ, ಉಳಿಕೀ ಹುಡುಗೂರು ಕಲೀಬಾರದಂತ ನಂದೇನು ಇರಾದೇ ಇಲ್ಲಾ. ಅವಕ ನೆಲವಿಗೆ ಹಾರೂದರಾಗೈ ಉಸಲಗಟ್ಟತದ. ಮುಗಲಿಗೇನು ಹಾರತಾವಿನ್ನ. ನೀ ಹ್ಯಾಂಗ ಕಷ್ಟಬಟ್ಟೀ — ಧಾವತೀ ಮಾಡಕೊಂಡೀ ಅಷ್ಟ ಕುವ್ವತ್ತು ಅವಕ್ಕ ಬರ್ಾಂಗಿಲ್ಲಾ. ನೋಡು, ನಿನಗ ಹ್ಯಾಂಗ ಠೀಕ ಅನಸ್ತದ ಹಾಂಗ ಮಾಡು. ಅಕಿನ್ನೂ ಒಂದ ಮಾತು ಕೇಳು. ಶ್ಯಾಮಾ, ಇಷ್ಟ ಮೆತ್ತಗಾಗಿ ಮಾತಾಡಬೇಕಾದರ ಅಂವನ್ದೇನರ ಡಾವ್

ಇರಬೇಕು. ಅದೇನು ಘ್ವಾಡೇ ನೀರಾಗ ಮುಣಗೂ ಇಸಮು ಅಲ್ಲಾ. ನಿನಗ ಸಹಾಯ ಮಾಡಿದವರಗತೀಲೇ ತೋರಿಸಿ, ಸಾಂಗಲೀ-ಪುಣೇದ್ದು ಬಾತಮಿಾ ತಗೀಲಿಕ್ಕೂ ಹಿಂದ-ಮುಂದ ನೋಡಾಂವಲ್ಲಾ.

ಬೆಳಗಾಂವೀ ಸಾಹೇಬ ಅಂತs ಏನ ಶ್ಯಾಮು ಅಂದಾ, ಅವನೇ ಅಲ್ಲೇನು, ಆ ಧುಳೇದಿಂದ ಬದಲೀ ಆಗಿ ಬಂದಾವಾ? ಇವರದೇ ಅಲ್ಲೇನು ಸೋನಕ್ಕಗ ಬಡದ ಶಕಾ. ನಾಕ ತಿಂಗಳ ಹಿಂದಿನ ಸುದ್ದಿ – ಏನಾತಂದಿ ದಾದಲ್ಯಾ? ಆ ಕುಲಕರ್ಣೀ 'ಓರ್‌ಸೀರ' ಇದ್ದಾನಲಾ. ಅಂವಾ ಬಂದು ಗಂಟs ಬಿದ್ದಾ. ಗೋವಿಂದ ಭಟ್ಟ, ನೀವು ಬರದs ನಡಿಯೂದೇ ಇಲ್ಲಂತs. ಭಿಡೇ ಮುರೀದ್ದಕ್ಕ ಹೋಗಿದ್ದೆ. ಆಗ ಏನಾತಪಾ ಅಂದರ, ಡಾಕ್-ಬಂಗಲೇದಾಗ ಈ ಸಾಬನ ಮುಕ್ಕಾಂ ಇತ್ತು. ಹೇಣತೀ – ಮಗಳು – ಅವರ ಮಾವಾ ಎಲ್ಲಾರೂ ಬಂದಿದ್ರು. ಹುಣ್ಣಿವ್ಯಂತ ಸತ್ಯನಾರಾಯಣ ಮಾಡಿಸಿದ್ರಲ್ಲೆ. ಪೂಜಿ-ಕಥೀ ನಾನs ಮಾಡಿದೆ. ಮನಸ್ಯಾ ಹಾಂಗ ಠೀಕ ಕಾಣಸ್ತಾನ. ದೇವ-ಬ್ರಾಹ್ಮಣರ ಅಭಿಮಾನ ಅದs. ಧರ್ಮದ್ದು ಥಾಕ ಅದs. ಅವರ ಕುಟುಂಬನೂ ಏನ ಅಡ್ಡೀ ಇಲ್ಲ ಅನ್ನು. ಆದರ ಚಿಕಿತ್ಸಾ ಭಾಳಾ. ಸೋನಕ್ಕನ ದಶಿಂದ, ರಾವಜೀಕಾಕಾನ ದಶಿಂದ, ಶ್ಯಾಮುನ ದಶಿಂದ ಕೆದರಿ ಕೆದರಿ ಕೇಳಿದಳು. ನಾ ಹಾರಹಾರಸೇನs ಉತ್ತರಾ ಕೊಟ್ಟೆ. ಥಾಕ ಹತ್ತಿ ಗೊಡಲಿಲ್ಲಾ. ನಾಳೆ ನೀ ಹೋಗಿ ಅವರ ಮನ್ಯಾಗs ನಿಂದರಾಂವಾ. ಅಲ್ಲಿ ಇಲ್ಲದ ಕಿತಬೀ ಬಿಚ್ಚಬ್ಯಾಡಾ. ಕೇಳಿದ್ದಕ್ಕ ಕಿಂವೀವ್ಯಾಲ ಕೈ. ಏನು? ಇಷ್ಟರ ದಶಿಂದ ನೀ ಹೋಗೂದು ಠೀಕ ಕಾಣಸೂದಿಲ್ಲ ನನಗ. ಒಂದ ಹೋಗಿ ಒಂದ ಆತಂದ್ರ ಇಲ್ಲದ ಪಂಚೇತಿ."

"ಗೋವಿಂದಭಟ್ಟ, ನಾ ಒಂದ ಕಾರಣದ್ದಶಿಂದ ಅಲ್ಲೆ ಹೋಗಲಿಕ್ಕೆ ಕಬೂಲ ಆಗೀನಿ. ತಿಂಗಳೊಪ್ಪತ್ತು ಇರೂದರಾಗ, ಸೋನಕ್ಕಗ ಬಡಕೊಂಡ ವ್ಯರ್ಥ ಅಪವಾದದಾಗ ಏನೂ ತಥ್ಯ ಇಲ್ಲ ಅನ್ನೂದನ್ನ ಖರೇ-ಖೊಟ್ಟಿ ಮಾಡಲಿಕ್ಕೆ ಬರತದ. ಆದರ ನಿವಾರಣಾನೂ ಸಾಧ್ಯ ಇದ್ದರ ಸಾಧಿಸಿಧಾಂಗ ಆಗತದ. ಇಷ್ಟೊ ಮಿಾರಿ ಅವರು ಏನರs ಕಿಲಾಪನs ನಡಿಸಿದರ ಹೇಳಿಬಿಡತೀನಿ: ನಾ, ವೈದಿಕ ಬ್ರಾಹ್ಮಣಾ. ವಾರಾ ಹಚಿಗೋಡು ಸಾಲೀ ಕಲಿಯೂದಕ್ಕ ಇದ್ದಾಂವಾ. ಧೊಡ್ಡವರ ಮನೀ ವಿಷಯಾ ನನಗ ಹ್ಯಾಂಗ ಅವಗತ ಇದ್ದೀತಂತ. ನನಗ ಇರೂದು, ಸೋನಕ್ಕನ ಕಲ್ಯಾಣದ ಕಾಳಜೀ. ಅದೇನರs ಸಾಧಿಸ್ತ್ಯs, ಠೀಕಾ; ಇಲ್ಲs, ನನ್ನ

ಹಾದಿ ನನಗ, ಅವರದು ಅವರಿಗೆ. ಬೆಳಗಾಂವ್ಯಾಗ ಒಂದು ಅಲ್ಲಾ ಹತ್ತ ಮನೀ ಅವ್ವ ನಮ್ಮ ಪುರೋಹಿತಕೀವೂ. ಎರಡು ಹುಡೂಗೂರ್ನ ಖಪ್ಪಸೊದೇನು ಜಡಾ ಅಲ್ಲಾ."

ಅಂತೂ ಇಂತೂ ಮಾಡಿ ಗೋವಿಂದಭಟ್ಟನಿಗೆ ಸಮಜೂತ ಹಾಕಿ, ಅಸ್ಮಾದಿ ಕರು, ಶ್ಯಾಮರಾಯನ ಹಳೆಯ ಫೋರ್ಡ ಗಾಡಿಯಲ್ಲಿ ವಿರಾಜಮಾನರಾಗಿ ಬೆಳ ಗಾಂವಿಗೆ ಬಂದರು. ಕಿಲ್ಲೆಯಲ್ಲಿಯ 'ಎಕ್ಸ್-ಇಂಜಿನಿಯರ್' ಸಾಹೇಬರ ಬಂಗಲೆಯಲ್ಲಿ ಮುಕ್ಕಾಂ ಠೋಕಾಸಿದರು. ನಾವು ಇಂಟರ್ ಪ್ರಥಮ ವರ್ಗವೆಂಬುದನ್ನು ಕೇಳಿ, ಥರ್ಡಕ್ಲಾಸಿನ ಕಡೆಯ ಮೆಟ್ಟಲಲ್ಲಿಯೇ ತುದಿಗಾಲ ಮೇಲೆ ನಿಂತು ಪಾಸಾದ ಸಾಹೇಬ ಬ್ರುವರು, ಪರ್ಯಾಯವಾಗಿ ದಾದಲ್ಯಾನ, ಫಕ್ಕಡ ಇಂಗ್ರೇಜಿ– ಸಂಸ್ಕೃತದ ಚಾಚಣೀ ತೆಗೆದುಕೊಂಡರು. ಅವರ ಮನೆಯಲ್ಲಿಯೇ ಕಾಯಂತರೀಕ ಬಿಡಾರ ಬಿಟ್ಟ ಅವರ ಮಾವ – ಎಪ್ಪತ್ತು ವರ್ಷದ ಘಾಜೆಗಟ್ಟಿಗೆ ಬಂದಿದ್ದರೂ ಇನ್ನೂ ಟಿಕ್ ಎನ್ನದೆ ಪೇನ್‌ಶೆನ್ನಿಗೆ ಅಂಟಿದ, ರಾವಸಾಹೇಬ (ಇದು ಸರಕಾರದವರಿಂದ ಅವರಿಗೆ ಸಿಕ್ಕ ಬಿರುದು) ಠೋಮರೇಮಾಮಾ – ನನ್ನಿಂದ, ತಮ್ಮ ಸರ್ವೀಸ್, ರೆಕಾರ್ಡು ಹಿಂದು-ಮುಂದಾದದ್ದನ್ನು ಬಿಡಿಸಿ, ಜೋಡಿಸಿಕೊಂಡು, 'ಕ್ರಾ:ಸ್ ರೆಫರೆನ್ಸ್' ಹಾಕಿಸಿ, ಅಳಿಯನ ಆಫೀಸಿನಿಂದ ತರಿಸಿದ ಗಟ್ಟಿ-ರಟ್ಟಿನ ಫಾಯಿಲ್-ಬೋರ್ಡಿನಲ್ಲಿ ಬಂಧಿಸ್ತ ಮಾಡಿಸಿಕೊಂಡರು. ಮತ್ತು ಹುಡುಗ ದಫ್ತರೀ ಆಗಲಿಕ್ಕೆ ಲಾಯಖ್ ಇದ್ದಾನೆಂದರು.

ಈ ರಾವಸಾಹೇಬ ಠೋಮರೇಮಾಮಾ ಅವರ ಸುಕನ್ಯೆ – ಅಂದರೆ ಸಾಹೇಬರ ಮಡ್ಡಮ್ಮ ತಿ – ಸಂಜೆಯ ಮುಂದೆಯೇ ನಮ್ಮಿಂದ ತಮ್ಮ ದೇವರ ಮಂಗಳಾರತಿ ಮಾಡಿಸಿಕೊಂಡು ಪೂಜಾರ್ಹತೆಯ ಸರ್ಟಿಫಿಕೇಟು ದಯಪಾಲಿ ಸಿದರು.

ಶ್ಯಾಮರಾಯ ಸೂಚಿಸಿದ ಅಷ್ಟಿಷ್ಟು ಬಜಾರು ಮಾಡುವ ಬಜಾರಮಾಸ್ತರ ಧಂದೇ ಮಾತ್ರ ನಮಗೆ ಹತ್ತಲಿಲ್ಲ. ನಾವು ಇಲ್ಲಿಗೆ ಬಂದ – ನಮ್ಮ ಪಾಲಿಗೆ ಕಾದು ಕುಳಿತ ಮುಖ್ಯ ಧಂದೇ ಎಂದರೆ ...

ಆ ವರುಷ ಆರನೇ ಎತ್ತೆಯನ್ನು ನಪಾಸಾಗುವದನ್ನು ತಪ್ಪಿಸಲಿಕ್ಕೆ, ಜ್ವರ ಬಂದ ಕಾರಣ ನಮೂದ ಮಾಡಿ, ಪರೀಕ್ಷೆಯ ಕತ್ತರಿಯಿಂದ ನುಸುಳಿ – 'ರೀ-ಎಕ್ಝಾಮಿನೇಶನ್' ಫಾಯದೇ ತೆಗೆದುಕೊಂಡ, ಸಾಹೇಬರ ಸುಕುಮಾರಿ, ಕುಮಾರಿ

ಚಿರಂಜೀವ ಶಕೂನಿಗೆ ನಾವು ಪಾಠ-ಪ್ರವಚನರತರಾಗಬೇಕೆಂಬ ನೇಮಣೂಕಿಯ ಫರ್ಮಾನು ಹೊರಟಿತು. ಪೂಜೆ, ಸಾಹೇಬರ 'ಕಾನ್ಫಿಡೆನ್ಸಿಯಲ್ ಕರೆಸ್ಪೊಂಡೆನ್ಸ್'ದ 'ಡಿಕ್ಟೇಶನ್', ರಾವಸಾಹೇಬ ಕೋಮರೇಮಾಮಾ ಅವರ ಪಂಚಪ್ರಾಣವಾದ 'ಸರ್ವೀಸ್-ಫಾಯಿಲಿ'ನ 'ಅಪ್-ಕೀಪ್' ಇವೆಲ್ಲ 'ಮಿಸಲೇನಿಯಸ್ ಡ್ಯೂಟಿ'ಯ ಸದರಿನಲ್ಲಿ ಬರುತ್ತಿದ್ದವು. ಜೂನ ಮೊದಲನೇ ವಾರದಲ್ಲಿ ಸಾಲೆಗಳು ಸುರುವಾಗುವದೇ ತಡ, ಕು.ಚಿ. ಶಕೂನ, 'ರೀ-ಎಕ್ಸಾಮಿನೇಶನ್' ಮುಗಿಸಿ ಅವಳನ್ನು ಮುಂದಿನ ಎತ್ತೆಗೆ ಢಕಲಾಯಿಸುವ ವಿಚಾರವಾಗಿತ್ತು. ಅಷ್ಟರಲ್ಲಿ, ಪಾಸಿನಪೂರ್ತಿ ಜೇಮ್-ತೇಮ್ ಮಾರ್ಕ್ಸ ಪಡೆಯುವ ತಾಕತ್ತನ್ನು, ಕು. ಚಿ. ಶಕೂನಿಗೆ ನಾವು ತಂದು ಕೊಡಬೇಕಾಗಿತ್ತು. ಬೆಳಗಾಂವಿಯಲ್ಲಿ ಶಿಕೋಣೀ ಮಾಸ್ತರರಿಗೇನೂ ಬರಗಾಲವಿರಲಿಲ್ಲ. ಆದರೆ ಹತ್ತೆಂಟು ರೂಪಾಯಿಗೆ, ಬಹಳವಾದರೆ, ಅವರು, ಒಂದು ತಾಸಿನ ಗಂಟಲ-ಕಸರತ್ತು ಮಾಡಬಹುದಾಗಿತ್ತು. ಆದರೆ ಸಾಹೇಬ-ಕುಮಾರಿಗೆ, ಅಖಂಡ ಜ್ಞಾನಸತ್ರವಿಡುವ, ನಮ್ಮಂಥ ಛಾತ್ರಪಾಲಕನ ಅಗತ್ಯವಿತ್ತು. ಇದನ್ನು ತನಖಿಸಿಯೇ ಶ್ಯಾಮರಾಯ ನಮ್ಮನ್ನು ಯಜ್ಞಋತ್ವಿಜನನ್ನಾಗಿ ಮಾಡಿಸಿದ್ದ. ನಾವೂ, ಕು. ಚಿ. ಶಕೂನನ್ನು ಪಾಸುಮಾಡಿಸುವ ಗ್ಯಾರಂಟೀ ಕೊಟ್ಟೆವು.

ನಾವು ಮ್ಯಾಟ್ರಿಕ್ ಆಗುವ ತನಕ ಬೆಳಗಾಂವಿಯ ನಾಯಕ ವಕೀಲರ ಮನೆಯಲ್ಲಿದ್ದ ವೃತ್ತಾಂತ ತಮಗೆ ವಿದಿತವಾಗಿಯೇ ಇದೆ. ನಾಯಕ ವಕೀಲರ ಅರ್ಧ ಡಝನ್ ಮಕ್ಕಳಲ್ಲಿ ಇಬ್ಬರು ಕು. ಚಿ. ಶಕೂನ ಶಾಲೆಯಲ್ಲಿ ಶಿಕ್ಷಕರಾಗಿದ್ದರು. ಅವರು ಎಸ್. ಟಿಸೀ. ಬಿ.ಟೀ. ಬುದ್ಧಿವಂತರಿದ್ದರು. ಕು. ಚಿ. ಶಕೂನ ಗುರುಪೀಠದಲ್ಲಿ ಸ್ಥಾನಾಪನ್ನರಾದ ನಮ್ಮ ವೃತ್ತಾಂತವನ್ನು ಅವರಿಗೆ ನಿವೇದಿಸಿದೆವು. ದಾದಲ್ಯಾನ ಸಲುವಾಗಿಯಾದರೂ ಅಡ್ಡಿಯಿಲ್ಲ – ಮೇಹರ್ಬಾನಗೀ ಮಾಡಿ, ಅವನ ಸಚ್ಛಿಷ್ಯಳನ್ನು, ಪರೀಕ್ಷೆಯ ಫಾರ್ಸುಮಾಡಿ, ಮ್ಯಾಟ್ರಿಕ್ ಕ್ಲಾಸಿಗೆ ಢಕಲಾಯಿಸುವ ಬಗ್ಗೆ ವಚನ ತೆಗೆದುಕೊಂಡೆವು. ಅವರೂ ಕಬೂಲಾಗಿದ್ದರು. ಕು. ಚಿ. ಶಕೂ, ಒಮ್ಮೆ ಮ್ಯಾಟ್ರಿಕ್ಕಿಗೆ ಹೋಗಿ, ಅಲ್ಲಿಂದ ಬೇಕಾದರೆ ಪಂಢರಪುರದ ವಾರೀ ಸುರುವುಮಾಡಲಿ, ಅದರ ದೋಷ ನಮಗೆ ತಟ್ಟದು, ಎಂದು ನಾವು ಬಿನ್ನವಿಸಿಕೊಂಡ ಮಾತನ್ನು ಅವರೂ ಅನುಮೋದಿಸಿದ್ದರು. ಅಂತೂ ಒಂದು ಬಾಜೂ ನಮಗೆ ಬಂದೋಬಸ್ತ ಆಯಿತು. ಇನ್ನು ಈ ಶಿಲಾಖಂಡದಂತಿದ್ದ ಕು. ಚಿ. ಶಕೂನನ್ನು ತಿದ್ದಿ-ತೀಡುವ ಕಾರ್ಯಭಾರ ಉಳಿಯಿತು. ದಾದಲ್ಯಾನ ಕೈಯಲ್ಲಿ ಒಂದು

ಕಿವಿ ಸಿಕ್ಕು ಗಿರಡಿ ತಿರುಗಿಸಿಕೊಳ್ಳುವ ಯೋಗ ಪಡೆದುಬಂದಿತ್ತು.

ದಾದಲ್ಯಾ ಒಂದೇ ಹೊಡೆತಕ್ಕೆ ಎರಡು ಬೇಟೆ ಒಗೆದು, ಕು. ಚಿ. ಶಕೂ, ಅವಳ ತಾಯಿ – ಸಾಹೇಬರ ಮಡ್ಡಮ್ಮ್ಮತಿ ಶ್ರೀಮತೀ ರಂಗೂಬಾಯಿ – ರಂಗಕ್ಕ ಇಬ್ಬರನ್ನೂ ಬಗಲಿಗೆ ಹಾಕಿದ.

ಕು. ಚಿ. ಶಕೂ ನಮಗೆ "ಮಾಸ್ತುರ್" ಎಂದು ಸಂಬೋಧಿಸಿದಾಗ, ನಾವು ಆ ನಾಲಾಯಖವೃತ್ತಿಯ ಬಿರುದನ್ನು ಧಾರಣ ಮಾಡಲಿಕ್ಕೆ ಒಪ್ಪದೆ —

"ಶಕೂ, ಈಗs ಹೇಳಿ ಇಟ್ಟಿರತೇನಿ. ನೀ ನನಗ ಮಾಸ್ತುರ್ ಅಂತ ಅನ ಬ್ಯಾಡಾ. ಸರ್ರ್ಯಳ ದಾದಲ್ಯಾ ಅನ್ನು. ಮಾಸ್ತುರ್ ಅಂದೀ ಅಂದರ ತೀರಿತು. ನಿನಗ ವಿದ್ಯಾನs ಬರೂದಿಲ್ಲಾ. ಮಾಸ್ತುರಿಗೆ ಅಂಜಿ ಅಳಿಕಿ ಕಲೀಬೇಕಾಗತದ. ನಕ್ಕೋತ-ಕೆಲಕೋತ, ಝುಲ್ಲ ಬಿಟ್ಟು ಕಲಿಯೂಧ್ಯಾಂಗ – ಅಂಜಿ ಕಲಿಯೂಧ್ಯಾಂಗ? ನೀ ದಾದಲ್ಯಾ ಅಂದೀ ಅಂದರ ನನಗೂ ಕಲಿಸಲಿಕ್ಕೆ ಹುರುಪ ಬರತದ. ಹೀಂಗ ಅಲ್ಲಾ, ಹಿಂಗ್ಯಾಕಂತ, ಒಮ್ಮೆ ಅಲ್ಲಾ, ಹತ್ತ ಸಾರೇ ನಿನಗೂ ಧೈರ್ಯಾದಿಂದ ಕೇಳಲಿಕ್ಕೆ ಮೋಕಳೀಕ ಆಗತದ."

"ದಾದಲ್ಯಾ ಬರೋಬರೀ ಹೇಳಿದ ನೋಡ ಶಕೀ"
ರಂಗೂಬಾಯರು ನಡುವೆಯೇ ಅಡ್ಡಬಾಯಿ ಹಾಕಿದರು.

"ರಂಗಕ್ಕಾ, ನಿಮಗೂ ಒಂದ ಮಾತ ಹೇಳತೀನಿ. ಸಿಟ್ಟಿಗೆ ಬರಬ್ಯಾಡರಿ ಮತ್ತs. ಶಕುಂತಲಾಗ ಶಕೀ ಅಂತ ಕರೀತ ಬರಬ್ಯಾಡ್ರಿ. ಅದೇನ ಅಸಂಯ್ಯ ಪದ್ಧತಿ ಅಂದರಿ? ನೀವು ಶಕೀ ಅಂದರ ಆಕೀ ಗೆಳೆತ್ಯಾರೂ, ಶಕೀ-ಶೇಕೀ ಅಂತನs ಸುರೂಮಾಡತಾರ. ಛೆಂದ ಆಗಿ – ಶಕುಂತಲಾ ಅಂತ, ಬಾಯ್ತುಂಬ ಹೆಸರ ಅದs. ಹಾಂಗನರs ಕರೀತ ಬರ್ರಿ. ಇಲ್ಲs ಶಕೂ ಅಂತನರs ಅನ್ನರಿ. ನೀವು ಶಕೂ-ಶಕುಂತಲಾ ಅಂತ ಕರೀತಿದ್ರ ನಾಕ ಮಂದೀನೂ ಹಾಂಗs ಕರೀತಾರ. ನಿಮ್ಮ ಮನೀಗೆ ದಿನಾ ಬಂದ ಹೋಗೂ ಮಂದೇನು ಥ್ವಾಡೇನs? ಕಚೇರೀ ಮಂದಿ, ಕಂತ್ರಾಟದಾರರು ಒಬ್ಬರs ಇಬ್ಬರs? ಬಂದಾವ್ರೆಲ್ಲಾ ಶಕೀ-ಶೇಕೀ ಅಂದರ ಛೆಂದ ಕಾಣಸೊದಿಲ್ಲಾ. ಧೊಡ್ಡವರ ಮನೀ ಮಂದಿಗೆ ಧೊಡ್ಡ ಹೆಸರಲೆ, ಅಷ್ಟs ಗೌರವದಿಂದ ಕರೀತ ಇರಬೇಕು. ಇಜ್ಜುತ್ತದ ಪ್ರಶ್ನ ಅದ ಇದರಾಗ."

"ನೀ ಅನೂ ಮಾತು ಖರೇ ಅದs ದಾದಲ್ಯಾ. ನನಗೂ ನೋಡು; ರಂಗೂ ಬಾಯರs ಅಂದರ ಛೆಂದನs ಕಾಣಸೂದಿಲ್ಲಾ. ರಂಗೂ ಅಂತs ಒಂಟಿ ಹೆಸರು.

ಬಾಯರ್‍s ಅನೂದು ಸುಮ್ಮ ಬಹುಮಾನಕ್ಕ. ಅದಕಿಂತಾ, ನೀ ರಂಗಕ್ಕಾ ಅಂದ್ಯಲಾ, ಅದs ಠೀಕ ಅನಸ್ತದ. ಅಷ್ಟು ಆಪುಲಕೀನೂ ಇರತದ ಅದರಾಗ." ರಂಗಕ್ಕ ಸಾಥ ಮಾಡಿದರು.

ಅದೇ ಬಂದ "ಕಾಳ" ಪತ್ರಿಕೆಯಲ್ಲಿ ವ್ಯರ್ಥ ವೇಳೆ ಹಾಕುತ್ತ ಅಲ್ಲೇ ಕುಳಿತಿದ್ದ, ರಾವಸಾಹೇಬ ಠೋಮರೇಮಾಮಾ ಹರ್ಷಪುಲಕಿತರಾಗಿ —

"ದಾದಲ್ಯಾ ಹುಷಾರಿದ್ದಾನ ಆಂ ರಂಗೂ. ಶಕೀ ಮ್ಯಾಟ್ರಿಕ್ ಆಗೂ ತನಕಾ ಅಂವನ್ನ ಇಲ್ಲೇ ಹಿಡದ ಹಾಕಿಬಿಡೂ. ಶಿಕೋಣಿ-ರೀತಿ-ರಿವಾಜು ಠೀಕ ಕಲಸ್ತಾನ. ಕಣಕದ ಮುದ್ದೀ ಹಾಂಗs, ನಿನ್ನ ಮಗಳು, ಸಬ್-ಗೋಲ ಆಗ್ಯಾಳ. ಒಂದಿಷ್ಟು ಆಕಾರಾ-ಆಕೃತಿ ಬಂತಂದರ ಅಷ್ಟs ಠೀಕಾ. ವರದ ಬಾಜಾರದಾಗ ಊಚ ಗಿರಾಕೀ ನೋಡಲಿಕ್ಕೂ, ಸಸಾರಾ. ಊಂ...ಹೂಂ...ಏನಪಾ ಅಂದರ, ಆ ಇಂವಾ, ನಮ್ಮ ಶ್ಯಾಮರಾಯನ ಚಿರಂಜೀವಾ, ನಿನ್ನ ಜೋಡೀನs ಕಲೀತಿದ್ದ ನಂತಲಾ ದಾದಲ್ಯಾ. ಹೆಸರs ಮರ್‍ತಹೋತು. ರಂಗೂ, ಈಗೇನು ಅಂವಾ ಎಮ್. ಬಿ. ಬಿ. ಎಸ್.ಕ್ಕ ಇದ್ದಾನಂದ್ಯಲ್ಲs? ಹಾಂ. ಅಂವಾ ಹ್ಯಾಂಗಪಾ, ಹುಡಗಾ?"

"ವಿಶ್ವಾಸ ಹೌಂದಲ್ರೀ? ಏನ ಕೇಳತೀರಿ? ಥೇಟ ನಕ್ಷತ್ರ ಆಗ್ಯಾನ. ರೂಪದಾಗ ಅಂದ್ರ್ಯಾ; ಅಶ್ವಿನೀಕುಮಾರಾ. ವಿದ್ಯಾ ಅಂದ್ರ್ಯಾ, ಬೃಹಸ್ಪತಿ ಖಾಲೋಖಾಲ್! ಆಟಾ-ನೋಟಾ ಏನ ಹೇಳಲ್ರೀ? ಟೇನೀಸಾ-ಕ್ರಿಕೇಟಾ ಆಡಬೇಕು ಅಂವನs. ಮೆಡಿಕಲ್ಲಕ್ಕ ಹೋದನೇನ್ರಿ, ಇಲ್ಲದಿದ್ದರ, ಒಂದೇ ಗಜ್ಜಿಗೆ ಐ.ಸಿ.ಎಸ್. ಆಗಿ ಬರತಿದ್ದಾ."

"ಐ.ಸಿ.ಎಸ್.ಕ್ಕ ರೊಕ್ಕ ಸೂರಿ ಆಗಬೇಕಾಗತದ ದಾದಲ್ಯಾ, ಅದೇನ ಫುಕಟ ಆಗ್ತಾಂಗಿಲ್ಲಾ."
ತಾವು ಐ.ಸಿ.ಎಸ್.ದ ಕಲೆಕ್ಟರ್ ಆಗುವ ನಶೀಬು ಪಡೆದು ಬಂದಿರದಿದ್ದರೂ, ಹಂಗಾಮೀ ಡಿ.ಡಿ.ಸಿ.ಯಾದರೂ ಆದ ಅನುಭವದ ಮೇಲಿಂದ, ಐ.ಸಿ.ಎಸ್.ದ ಕಿಮ್ಮತ್ತು ಭಾರೀ ಎಂಬ ಕಲ್ಪನೆಯನ್ನು ನನಗೆ ಮಾಡಿಕೊಡುವ ಅಭಿನಿವೇಶದಿಂದ, ರಾ. ಸಾ. ನಿವೃತ್ತ ಡಿ. ಡಿ. ಸಿ. ಠೋಮರೇಮಾಮಾ ಹೇಳಿದರು.

"ವಿಶ್ವಾಸನ ಇಬ್ಬರು ಮುತ್ತ್ಯಾ ಹಯಾತ ಇದ್ದಾರೇನರಿ. ಸೇರಿಸ ಮಾಪಲೇ ರೂಪಾಯಿ ಅಳೀರ್‍ಯಂದರ, ಆರು ತಾಸ ರಾತ್ರ್ಯಾಗ ಅಳದಾರು.

ಒಂದಲ್ಲಾ, ಹತ್ತ ಐ.ಸಿ.ಎಸ್. ಮಾಡಸೂ ಕುವ್ವತ್ ಅದs ಅವರಲ್ಲೆ. ಶ್ಯಾಮರಾಯರ ಯೋಗ್ಯತಾನೂ ಏನು ಕಮ್ಮೀದಲ್ಲಾ."

ನಿವೃತ್ತ ಡಿ.ಡಿ.ಸಿ. ರಾ. ಸಾ. ಠೋಮರೇಮಾಮಾ ಅವರ ಅಭಿನಿವೇಶವನ್ನು ಚುಟುಕಿಯಲ್ಲಿ ಹಾರಿ ಹೊಡೆದು ದಾದಲ್ಯಾ ವಿಜಯ ಸಂಪಾದಿಸಿದ ಆವಿರ್ಭಾವದಿಂದ ವದಿಸಿದ.

"ರಂಗೂ, ನಿನ್ನ ಯಜಮಾನರ ನಿವಡ ಏನು ಹರಕತ್ತ ಇಲ್ಲ ಅನ್ನು." ರಾ. ಸಾ. ಠೋಮರೇಮಾಮಾ.

"ನನಗ ಠಾಂವಿಕಿಲ್ಲೇನು? ಎಂದ ಆ ಹುಡುಗಾ ನಾಕ ವರಷದಂವಾ ಇದ್ದಾ ಅಂದs ನೋಡೀನಿ. ಸಾಲೀ-ಪೀಲೀ ಅಂತs ಅಂವಾ ಸಾಂಗ್ಲ್ಯಾಗ ನಿಂತನಂತs, ಶ್ಯಾಮರಾಯರ ಜೋಡಿ ಇರಲಿಲ್ಲಾ. ಮೊನ್ನೆ ಯಾರೋ ಇವರ ಗುರುತಿನವರು, ಹುಡುಗಾ ದೃಷ್ಟಿ ಆಗಬೇಕು ಹಾಂಗ ಇದ್ದಾನಂತ ಹೇಳಿದರು. ಶ್ಯಾಮರಾಯರೇನು, ಕೈಯಾಗಿನ ಗಿರಾಕಿ. ನಕಾರೇನು ಎಂದೂ ನನಗ ಬರಲಿಕ್ಕಿಲ್ಲಾ. ನೋಡೂಣು, ಈಗೇನ ಅಂಥಾ ಅವಸರಾ. ಅಂವಂದೂ ಕಲಿಯೂದ ಮುಗೀಲಿ, ಶಕೀನೂ ಅಷ್ಟು ವರಷೆರಡು ವರ್ಷಾ, ಕಾಲೇಜಕ ಹೋದಲಂದರ ಠೀಕ ಆಗತದ. ಜಮಾನೂ ಯೋಗ ಇದ್ದರ ತಾನs ಕೂಡಿಬರತದ. ದಾದಲ್ಯಾ, ನೀ ಅಷ್ಟು, ಶಕೀ ಮ್ಯಾಟ್ರಿಕ್ಕ ಮಾಡಸೂ ಭಾರಾ ಹೊರೂ ಅಂದರ ನಮಗ ಝಲ್ಲ ಬಿಟ್ಟಿತು ನೋಡು."

"ರಂಗಕ್ಕಾ, ಅಕೀ ಅಭ್ಯಾಸದ್ದು ಹ್ಯಾಂಗ ಆಗೇದಂದರಿ? ತ್ಯಾಪೀ ಹಚ್ಚಿಧಾಂಗ ಆಗೇದ. ನಾಕ ಊರಾಗಿನ ಸಾಲ್ಯಾಗ ಹರಹರಕ ಕಲ್ತು ಎಲ್ಲಾ ಅರಗಚ್ಚಿ ಆಗೇದ. ಗಾಡೀ, ನಿಧಾನಾಗಿ ರೂಳಮ್ಯಾಲ ಬಂತಂದ್ರ, ಅಡಥಳ ಇಲ್ಲದ ತಾನs ನಡೀತದ ಮುಂದ. ನಾನೂ ಅಷ್ಟು ಮೇಹನತ್ ಮಾಡತೀನಿ. ಶಕೂ ಹಾಂಗ ಹುಷಾರಿದ್ದಾಳೇನ್ರೀ. ಪಾಂಕ್ತ ಆಗಿ ಅಭ್ಯಾಸ ಆಗಿಲ್ಲಂತ ಅಷ್ಟ ಧಾವತೀ ಮಾಡಬೇಕಾಗತದ. ಎರಡ ತಿಂಗಳಾ ಅಕೀನೂ ಅಷ್ಟ ಶ್ರಮಾ ತಗೋಳಲೀ. ನೋಡೀರ್ಯಂತ ಒಂದೇ ಹೊಡತಕ್ಕ ಮ್ಯಾಟ್ರಿಕ್ ಆಗತಾಳೋ ಇಲ್ಲೋ? ಸಾಂಗ್ಲೀ ಒಳಗ, ನಮ್ಮ ವಿಶ್ವಾಸನ ಮನೀ ಬಾಜೂಕ್ಕs ಜೋಗ ಶಂಕರರಾಯರಂತ ಇದ್ದಾರ. ಅವರ ಮಗಳು – ವಸೂನೂ ನಮ್ಮ ಕ್ಲಾಸಮೇಟ್‌ನs ಏನರಿ! ಮ್ಯಾಟ್ರಿಕ್ಕದಾಗ ಇದ್ದಾಗ ಅಕೀ ಸಂಸ್ಕೃತನೂ ಅಷ್ಟಕಷ್ಟs ಇತ್ತ ನೋಡರಿ.

ತಿಂಗಳೆರಡ ತಿಂಗಳು ಕಟಿಯೂದರಾಗ, ಪನ್ನಾಸ ಟಕ್ಕೇ ಮಾರ್ಕ್ಸ ಬಿದ್ದೂ. ಈಗ ಬಿ.ಎ.ಕ್ಕ ಆಕೀದು ಸಂಸ್ಕೃತನs ಮುಖ್ಯ ವಿಷಯ ಏನರಿ?"

"ದಾದಲ್ಯಾ, ವಸೂ ಅಂತ ನೀ ಏನ ಅಂದ್ಯಲಾ. ಆಕೀದು ವಿಶ್ವಾಸಂದು ಭಾರೀ ದೋಸ್ತೀ ಅಂತ. ಶ್ಯಾಮರಾಯರು ಹೇಳತಿದ್ದರು. ಮತ್ತ ಅಲ್ಲೆ ಏನರs ಸೂತ ಜಮಾಸೇದೇನು?"
ರಂಗಕ್ಕ ಪೃಚ್ಛಿಸಿದರು.

"ಛೇ, ಅಧ್ಯಾಂಗ ಜಮಾಸೀತರೀ? ವಸೂ ಅವರು ಕೊಂಕ್ಯಾ. ಪಂತ ಮಾಮಾ ಅಂದರ ವಿಶ್ವಾಸನ ದತ್ತಕ ತಂದಿ – ಸಖಾರಾಮಪಂತರು ದೇಶಸ್ತರು. ರಾವಜೀಕಾಕಾ ಅವರೂ ಹಾಂಗ ನೋಡಿದರ ಕೊಂಕಣಸ್ಥರs. ಅಜ್ಜ ಆರ ತಲೀ ಈಕಡೆ ಬಂದು ನಿಂತರು. ಅಂತs ದೇಶಸ್ಥ ಆಗಿಬಿಟ್ಟರು. ರಾಯರ ಅಭಿಷೇಕಾ ನೈವೇದ್ಯಾ ಇಲ್ಲದs, ಅವರ ಕುಲದೇವತಾ, ಗಣಪತಿ, ನೈವೇದ್ಯ ಕಾಣೂ ಹಾಂಗಿಲ್ಲಾ. ಜಾತೀ – ಪೋಟಜಾತೀ ಜಮಾಸಿದರೂ, ಕುಂಡಲೀ ಜಮಾಸ ಬೇಕು. ರಾವಜೀಕಾಕಾ ಅಂದರ ಕುಂಡಲೀ – ಕನಿಷ್ಟ – ಬತ್ತೀಸ ಗುಣಾ ಕೂಡಿ ಬರದs ಹೂಂ...ಹಾಂ...ಅನೂಅವರಲ್ಲಾ. ನಿಮ್ಮದು ವಿಶ್ವಾಸಂದು ಗೋತ್ರ ಮಾತ್ರ ಜಮಾಸ್ತದ. ಶಕೂ ಬಿ.ಎ. ಆಗಲೇಳ್ರೀ. ಈಗೇನ ಅಂಥಾ ಅವಸರಾ. ಆಕೀಗೂ ಈಗ ಅಷ್ಟs ಸೋಳಾ-ಸತ್ರಾ ವರ್ಷ ಏನರs ನಡದಿರಬೇಕು."
ನಾವು ಬಾತಮೀ ತೆಗೆಯತೊಡಗಿದೆವು.

"ಮೊನ್ನೆ ಹೋದ ಉಗಾದೀ ಪಾಡ್ಯಾಕ್ಕs ಆಕೀಗೆ ಸೋಳಾ ತುಂಬಿದೂ. ಖೋಡೀ, ಎಂಟ ವರಷದ ಕಡವ ಆಗೂತನಕಾ ಸಾಲೀಕಟ್ಟೀ ಏರಲಿಲ್ಲಾ. ಇವರಿಗ್ಯರೇ ಮ್ಯಾಲಿಂದ ಮ್ಯಾಲ ಬದಲೀ ಆಗೂದು. ಎರಡ-ಮೂರ ವರ್ಷ ಮರಾಠೀ ಕಲ್‌ತ್ಲೂ. ಎರಡ-ಮೂರ ವರ್ಷ ಗುಜರಾಥೀ ಆತು. ಒಂದೇನು ಪೂರ್ಣ ಆಗಲಿಲ್ಲಾ. ಇಂದ ಮತ್ತ ಈ ಕನಡ ಟಾಪೂದಾಗ ಬಂದು ಬಿದ್ದೇವು. ಶಕೀ ಕಾಲೇಜಕ್ಕ ಹೋದಲಂದರ ತೀರಿತು. ಇದರ ಯದ್ಲಗಾಟಾ ತ್ವಾನ ಮುಗೀತದ."

"ಹೆಂಣಮಡಗ್ಯಾರು ಕೊಟ್ಟ ಮನೀಗೆ ಹೋಗಾವ್ರೇನ್ರೀ! ನಾಕ ಭಾಷಾ ಅವಗತ ಇರೂದು ಠೀಕಾ. ನಾಳೆ, ಶಕೂನ್ನs, ಪುಣೇ-ಮುಂಬೈ ಕಡೆ ಕೊಟ್ಟರ್‍ಯಂದರ ಮರಾಠೀ ಬರೂದು ಅಗತ್ಯಾ. ಗಂಡಾ-ಹೇಣತೀ, ಬರೇ ಏನು, ಇಂಗ್ರೇಜೀ

ಒಳಗ ಮಾತಾಡಿಕೋತ ಇರಬೇಕಾಗತದs? ಕನ್ನಡಂತೂ ಮನ್ಯಾಗ ಆಡೇ ಆಡತೀರಿ. ಸಹಜಾಸಹಜೀ ತಾನs ಬರತದ. ಭಾಷಾ ಕಲಸೂದರಾಗ ನಿಮ್ಹಾಂಗ ಇರಬೇಕು. ವಿಧೀ-ನಿಷೇಧಾ ಮಾಡಬಾರದು. ನಮ್ಮ ರಾವಜೀಕಾಕಾ ನಿತ್ಯ ಕೇಸರೀ ಬಾಯಪಾಠ ಮಾಡತಿದ್ರೂ, ಒಳಗ ಬಂದರ ರಾಧಾಕಾಕೂನ ಜೋಡೀ, ತಪ್ಪಿ ಸುದ್ದೇ ಮರಾಠೀ ಮಾತಾಡತಿದ್ದಿಲ್ಲಾ."
ದೂರದ ವರೆಗೆ ಗಾಳ ಬೀಸುತ್ತ ನಾವು ಸಾಗಿದ್ದೆವು.

ನಿವೃತ್ತ ಡಿ. ಡಿ. ಸಿ. ರಾ. ಸಾ. ಠೋಮರೇಮಾಮಾ, ನಡುವೆಯೇ ಬಾಯಿ ಹಾಕಿ —

"ರಂಗೂ, ದಾದಲ್ಯಾ ಭಾರೀ ಸಮಜೂತದಾರ ಇದ್ದಾನಾಂ! ಸಣ್ಣ ವಯಸ್ಸಿನ್ಯಾಗ ಪುಷ್ಕಳ ಜ್ಞಾನಾರ್ಜನ ಮಾಡಿಕೊಂಡಾನ. ನಮ್ಮ ಶ್ಯಾಮರಾಯನ ನಿವಡಂದರ ಅಸ್ಸಲ್ ರಾಜೇಶ್ರೀ ಚಾಕು ಇದ್ಧಾಂಗ. ಶಕೀ, ದಾದಲ್ಯಾನ ಫಾಯದೇ ತಗೊಂಡರ ಅಕೀದ ಠೀಕಾ."

ಕು. ಚಿ. ಶಕೂನಿಗೆ ನಮ್ಮ ಅಭಿಜಾತ ಜ್ಞಾನದ ಫಾಯದೇ ಮಾಡಿಕೊಡುವ ವೇಳೆಯಾದದ್ದರಿಂದ ನಾವು ಅವಳ ಕೋಣೆಯ – ಅಭ್ಯಾಸಿಕೆಯ ಕಡೆಗೆ ನಡೆದೆವು.

ಸಾಹೇಬರ ಬಂಗಲೆಗೆ ನಮ್ಮ ಆಗಮನವಾಗಿ ಇನ್ನೂ ಹದಿನೈದು-ಇಪ್ಪತ್ತು ದಿನ ಕೂಡ ಆಗಿರಲಿಲ್ಲ. ಅಷ್ಟರಲ್ಲಿ, ಬೇಕಾದಷ್ಟು ಮಾಹಿತೀ ಸಂಗ್ರಹಿಸಿದೆವು. ರಂಗಕ್ಕ, ಕು. ಚಿ. ಶಕೂ, ನಿವೃತ್ತ ಡಿ. ಡಿ. ಸಿ. ರಾ. ಸಾ. ಠೋಮರೇಮಾಮಾ ಬಗಲಿಗೆ ಬಿದ್ದಿದ್ದರು. ಇನ್ನು ಸಾಹೇಬ ಬುವರು. ಅವರು ಇಂಜಿನೀಯರಿಂಗ್ ವಿದ್ಯೆ ಕಲಿತಿದ್ದರಿಂದ, ಆ ವಿಷಯದಲ್ಲಿ ಕದಾಚಿತ್ ಪಾರಂಗತರಿದ್ದಿರಬಹುದಾಗಿತ್ತು. ಅದು ನಮಗೆ ಅವಗತವಾಗುವಂತಿರಲಿಲ್ಲ. ಆದರೆ ನಮಗೆ ಜಿವ್ಹಾತಲಾಮಲಕವಾದ ಸಂಸ್ಕೃತ – ಇಂಗ್ರೇಜೀ ಮಾತ್ರ, ಸಾಹೇಬರ ಜ್ಞಾನಖಾತೆಯ ಸದರಿನಲ್ಲಿ, ಒಂದು ಸಂಪೂರ್ಣ ಶೂನ್ಯ, ಇನ್ನೊಂದು ಕೆಲಸದ ಮಟ್ಟಿಗೆ ನಡೆಯುವಷ್ಟು ಜಮಾ ಇದ್ದವು. ಅವರ ಸಂಸ್ಕೃತವಂತೂ ಅಪ್ರತಿಮವೇ ಆಗಿತ್ತು. "ದಾದಲ್ಯಾ ಬಂದದ್ದು ಭಂಗಾರವಾಯಿತು" ಎಂದು ಹೇಳುವ ಹುಕಿಯಲ್ಲಿ ಅವರು ಒಂದಲ್ಲ ಹತ್ತು ಸಲ, "ರತ್ನಂ ಸಮಾಗಚ್ಛತು ಕಾಂಚನೇನ" ಎಂಬ ಪಲ್ಲವಿಯನ್ನು ಹಾಡೇ ಹಾಡುತ್ತಿದ್ದರು. ಯಾತರ ಸಂಬಂಧ ಯಾವುದಕ್ಕೂ ಇರಲಿಲ್ಲ. ನಾವೂ ಒಂದಿಷ್ಟು ಹರೇಮೀ ಜಾತಿ! ನಮ್ಮ ಸಂಸ್ಕೃತಪಾಂಡಿತ್ಯದ ಘನ ಪ್ರದರ್ಶನವನ್ನು ಮಾಡಲು

ಅನನ್ಯಶರಣಭಾವದಿಂದ ವಾದಿರಾಜ ಯತಿಗಳಿಗೆ ಬೆನ್ನುಬಿದ್ದಿದ್ದೆವು. ಅವರ ಹಯಗ್ರೀವಸ್ತೋತ್ರದಲ್ಲಿಯ "ಸಕ್ಷ್ವೇಲಭಕ್ಷ್ಯ ಮೃತಿದಾಕ್ಷಿಶ್ರವೋಗಣಜ। ಲಾಕ್ಷೇಪ ಪಾಶ ಯಮುನಂ ।" ಎಂಬ ಚರಣವನ್ನು ನಾಲಿಗೆಯು ಚಲಾಕು ಮಾಡಿ, ನಾವು ಸರಾಗವಾಗಿ ಅನ್ನುವಾಗ, ಸಾಹೇಬರು ಆನಂದತುಂದಿಲರಾಗಿ ತೆಕ್ಕೆಗೆ ಬೀಳುತ್ತಿರಲಿಲ್ಲ, ನಮ್ಮ ಪುಣ್ಯ.

ನಮ್ಮ ಮುತ್ತಿನಂತಹ ಕೈಬರಹ – ಸಾಹೇಬರ ಪಿ. ಡಬ್ಲ್ಯೂ. ಡಿ. ಇಂಗ್ಲೀಷನ್ನು ಚಾಣೆಹೊಡೆದು, ಅಲ್ಲಲ್ಲಿ 'ಪಾಲಿಶ್' ಮಾಡುವ ಸಫಾಯದಾರ್ ಇಂಗ್ರೇಜೀ ಭಾಷೆ ಅವರಿಗೆ ಮೋಹಿನಿ ಹಾಕಿದ್ದವು. ಒಮ್ಮೆ ಅವರ ಆಫೀಸಿನ ಹೆಡ್‌ಕ್ಲಾರ್ಕ್ – ಫಾಯನಲ್-ಫೇಲ್-ಪಟಾಯಿತ – ತನ್ನ ಅಲಗರ್ಜಿತನದಿಂದ ನಮ್ಮ ಅಂತಸ್ತನ್ನ ಮೇಲಕ್ಕೇರಿಸಲು ಕಾರಣಕರ್ತನಾದ. ಯಾವನೋ ಒಬ್ಬ ಪೆನ್‌ಶನ್‌ದಾರ ಪಂತೋಜಿ – ಪಿಂಚಣಿಯನ್ನು ಪಡೆದು ಮನೆಯಲ್ಲಿ ಸುಖವಾಗಿ ಇರಲಾರದೆ, ಮತ್ತೆ ನವಕರಿ ಮಾಡುವ ಚುಟುಚುಟುವಾಗಿ – ಕಾಂಪ್ಯೂಟರನೋ, ಕಾಪಿಯಿಂಗ್ ಕ್ಲಾರ್ಕನೋ, ಯಾವುದೋ ಒಂದು ಜಾಗಕ್ಕೆ ಅರ್ಜಿ ಹಾಕಿದ್ದ. ಈ ನಿವೃತ್ತ ನೌಕರೇಚ್ಛುವಿಗೆ ನವಕರಿ ಸಿಗುವದು ಅಶಕ್ಯವೆಂದು ಆ ಬಡಪ್ರಾಣಿಯ ಅರ್ಜಿಯನ್ನು ನಿಕಾಲೆಯಲ್ಲಿ ತೆಗೆಯುವಾಗ, ನಮ್ಮ ಹೆಡ್‌ಕ್ಲಾರ್ಕಸಾಹೇಬ, ತನ್ನ ಠರಾವಿಕ ಫಾಯನಲ್ ಕಂಟ್ರೀಭಾಷೆಯಲ್ಲಿ "as you are too old" ಎಂದು ಆ ಅರ್ಜಿದಾರನ ವೃದ್ಧಾಪ್ಯದ ದಾರುಣ ಕಲ್ಪನೆಯನ್ನು ನಿರ್ದಯತೆಯಿಂದ ಮಾಡಿದಾಗ, ನಾವು ಇಡೀ ಈ ವಾಕ್ಯಮಾಣಿಕ್ಯದ ಮೇಲೆ ಕೆಂಪು ಮಸಿಯ ಗೀಟು ಎಳೆದು "The undersigned regrets his inability to entertain the applicant in view of his advanced age" ಎಂದು ಬರೆದಾಗ, ಸಾಹೇಬರ ಖುಷಿ, ಪಾತಾಳಗಂಗೆ. ಆಕಾಶಗಂಗೆಯನ್ನು ನೀರ-ಕ್ಷೀರವಾಗಿ ಅಪ್ಪಿ ಮುದ್ದಾಡಲು ನೆಗೆದಂತಾಯಿತು. ಸಾಹೇಬರು ಕುಳಿತ ಖುರ್ಚಿಯ ಮೇಲೆ 'ಟಾಪ್ಸಿ-ಟರ್ವಿ' ಆಗಿ ಗಜಮು ನಿಲ್ಲಲಿಲ್ಲ ನಮ್ಮ ದೈವ.

"ದಾದಲ್ಯಾ, ನಾ 'ಅಂಡರ್-ಸೆಕ್ರೆಟರಿ' ಏನರs ಆದರ ನಿನ್ನ ಸೇಕಟರಿಯೇಟದ ತನಕಾ ಒಯ್ಯುತೀನಿ, ಬಿಡೂದಿಲ್ಲಾ. ನಿಧಾನ ನಿನ್ನ, ಎಸ್. ಈ. ಹೆಡ್‌ಕ್ಲಾರ್ಕನ್ನರs ಮಾಡತೀನಿ" ಎಂದು ಭರವಸೆ ಕೊಟ್ಟಿದ್ದರು.

ಜಾಲ ವ್ಯವಸ್ಥಿತವಾಗಿ ಬೀಸಿದ್ದರ ಬಗ್ಗೆ ದಾದಲ್ಯಾನಿಗೆ ಖಾತ್ರೀ ಆಯಿತು.

ಇಲ್ಲಿಯ ಬಸ್ಸಾನ ಠೀಕ-ಠಾಕ ಕುಳಿತ ಮೇಲೆ ಸಾದ್ಯಂತ ಹಕೀಕತ್ತನ್ನು ವಿಶ್ವಾಸನಿಗೆ ಬರೆದು ತಿಳಿಸಿದೆ. ಉತ್ತರವನ್ನು C/o ನಾಯಕ ವಕೀಲರ ವಿಳಾಸಕ್ಕೆ ಬರೆಯೆಂದು ಬಿನ್ನವಿಸಿದ್ದೆ. ಇಲ್ಲದಿದ್ದರೆ ನಮ್ಮ ಶಿಷ್ಯಮಣಿ ಕು. ಚಿ. ಶಕೂ, ಉತಾವಿಳಳಾಗಿ ಪತ್ರವನ್ನು ಒಡೆದು ಓದಿದರೆ ಒಂದು ಹೋಗಿ ಒಂದಾಗುವ ಪಂಚೇತಿ!

"ದಾದಲ್ಯಾ, ಭಾಳ ಉದ್ದ ನೀರಿಗೆ ಹೋಗಬ್ಯಾಡಾ. ಇಲ್ಲದಿದ್ದರ ಗೋವಾ ಲಾಟರೀ ಹಾಂಗ ಆದೀತು ಮಗನs. ಅಲ್ಲೆ ರೊಕ್ಕನರs ಕೈಗೆ ಹತ್ತಿತು. ಇಲ್ಲೆ, ನಿನ್ನ ಶಿಷ್ಯಳs ತನ್ನ ಕೈ ನಿನ್ನ ಕೊಳ್ಳಿಗೆ ಒಗದರ, ಊದೂದು ಕೊಟ್ಟು ಒದರೂದು ತಗೋಬೇಕಾದೀತು! ಮಗನs, ವಸೂಂದು-ನಂದು ಹ್ಯಾಂಗ ಜಮಾಸೀತು ಅಂತ ಭಂಪ ಹೊಡದೀಯಲ್ಲs? ಅಂತೂ ನನ್ನ ಜೋಡೀ, ನಿನ್ನ ಕು. ಚಿ. ಶಕೂನ್ನ ಸುರಗ್ಯಾಗ ಕೂಡಸಬೇಕನೂ ಡಾವ್ ನಡಸೀದಿ. ಠೀಕ. ವಸೂಗ ನಿನ್ನ ಪತ್ರಾ ಕಳಸ್ತೀನಿ. ಒಂದs ಸಾಂಗಲೀಗೆ ಹೋಗು. ನಿನ್ನ ಹರದs ತಿಂತಾಳ. ಸಾಂಗಲೀಗೆ ಎಂದ ಹೋಗಾಂವಾ? ಲಗೂ ಹೋಗು. ಅಭ್ಯಾಸೇನಂತ ಅಲಗರ್ಜಿತನಾ ಮಾಡಬ್ಯಾಡಾ. ಕ್ಲಾಸ್ ಬರಬೇಕ ದಾದಲ್ಯಾ. ಪೈಲಾ ನಂಬರು ದಾದಲ್ಯಾನ ಜಾಗೀರಿ ಅಂತ, ಕಾಕಾ ಭವಿಷ್ಯ ನುಡದಾರ. ಅದನ್ನ ಖರೆಮಾಡಿ ತೋರಿಸ ಬೇಕು. ಪಂತರು ಕದಾಪಿ ಅಸತ್ಯ ವದಸೂದಿಲ್ಲಾ. ಅದರಾಗ – ನಿನ್ನ ಕಾಕಾ! ತಿಳೀತೇನು?"

ವಿಶ್ವಾಸ ಪತ್ರ ಬರೆದು ತಿಳಿಸಿದ್ದ.

ಮೊನ್ನೆ ಗೋವಿಂದಭಟ್ಟ ಯಾವುದೋ ಕೆಲಸದ ನಿಮಿತ್ತ ಬೆಳಗಾಂವಿಗೆ ಬಂದು ನಾಯಕ ವಕೀಲರಲ್ಲಿ ಇಳದಿದ್ದ. ಊಟಕ್ಕೆ ಕುಳಿತಾಗ ನಾಯಕ ವಕೀಲರು ನಗನಗುತ್ತ ಹೇಳಿದರು:

"ಗೋವಿಂದಭಟ್ಟ, ದಾದಲ್ಯಾ ಬೀ.ಏ. ಆಗಲಿ, ಎಮ್.ಏ. ಆಗಲಿ, ಏನs ಆಗಲಿ, ಘಂಟೀ ಸೋಬತೀ ಏನು ಬಿಡೂದಿಲ್ಲ ಮತ್ತs. ಖರೇ ವೈದಿಕಬ್ರಾಹ್ಮಣನ ರಕ್ತ ಆಡತದ ನೋಡರಿ ಅವನಲ್ಲೆ. ದೀಡ – ಎರಡ ತಿಂಗಳಾ ಆರಾಮು ಸೂಟೀ ಕಳಿಯೂದು ಬಿಟ್ಟು ಮತ್ತ ದೇವರನ ತೊಳೆಯೂದಕ್ಕ ನಿಂತಾ."

"ರಾಯರs, ನಮ್ಮ ರಾವಜೀಕಾಕಾ ಒಂದ ಕಥೀ ಹೇಳತಿದ್ದರೇನರಿ. ಏನಂತಂದರ: ಒಬ್ಬ ನಿಷ್ಠಾವಂತ ಬ್ರಾಹ್ಮಣ ಇದ್ದನಂತ. ಒಮ್ಮೆ ಮಳ್ಳತನದಲೆ, ನಾಕ ಮಂದಿ ತುಡಗರ ಸೋಬತಿಗೆ ಬಿದ್ದು, ಒಬ್ಬರ ಮನೀಗೆ ಕಳವಿಗೆ ಹೋದನಂತ.

ಕಳ್ಳರು. ಮನೀಗೊಂದು ಧೊಡ್ಡ ಖಿಂಡೀ ಖಡವಿದರು. ಈ ಬ್ರಾಹ್ಮಣಗ ಹೇಳಿದರು: ಅಪ್ಪ ನೀ ಒಳಗ ಹೋಗಿ ಇದ್ದಬಿದ್ದದ್ದನ್ನ ಎಬ್ಬಿಸಿಗೊಂಡ ಬಾ. ನಾವು ಇಲ್ಲೆ ಕಾವಲ ನಿಂತಿರತೇವು ಅಂತs. ಈ ಹುಚ್ಚಪ್ಯಾಲೀ ಹೋತ ಏನ್ರೆಪಾ ಒಳಗ. ಆಗ ನವರಾತ್ರಿ ಬ್ಯಾರೇ. ಕೇಳತೀರ್ಯಾ? ದೇವರ ಕ್ವಾಣ್ಯಾಗ, ಧೊಡ್ಡು ಎರಡು ತುಪ್ಪದ ನಂದಾದೀಪಾ–ಸಾಲಸಮೇ, ಢಣಾ ಢಣಾ ಬೆಳಗತಿರೂವು. ತಿಕ್ಕಿ-ತಿಕ್ಕಿ ಲಕಲಕಸೂ ಅಂಥಾ ಘಂಟೀ. ಬ್ರಾಹ್ಮಣಗ ಹುಕೀ ಉಕ್ಕಿತು. ಅಲ್ಲೇ ಘೂಟಕ್ಕ ಇದ್ದ ಮಡೀ ಹಚಿಗೊಂಡು ವಸ್ತ್ರಾಂತರ ಆದಾ. ಮಂಗಳಾರತೀಗೇ ಕೂತಾ. ಢಣಾ ಢಣಾ ಅಂತ ಘಂಟೀ ಬಾರಿಸಿದಾ. 'ದೀಪಂ ಗ್ರಹಾಣ ದೇವೇಶ' ಅಂತs ಇಂವಾ ಕೂಗಿದರ ಹೊರಗಿನ ತುಡುಗರ್‍ಯಾಕ ಸುಡ್ಲಿಕ್ಕೆ ನಿಂತಾರು? ಒಳಗ ಮಲಗಿದ ಮಂದಿ, ಘಾಬರ್‍ಯಾಗಿ ಎದ್ದ ಬಂದು, ಇಂವನ್ನ ಹಿಡದು ಕೇಳಿದರು. ಬ್ರಾಹ್ಮಣೇನು, ಸರ್ರsಳ ಜವಾಬ ಕೊಟ್ಟಾ: "ಏನ ಸುಡತೀರಿ ಬಿಡ್ರ್ಯೆಪಾ. ಬಂದದ್ದಲ್ಲಾ ಬಾರಿಸಿದ್ದಲ್ಲಾ. ಆ ತುಡಗಸೂಳೇಮಕ್ಕಳ ಬೆನ್ನಹತ್ತಿ ಬಂದೆ. ಇಲ್ಲೆ ದೇವರನ ನೋಡಿ ಧನ್ಯತಾ ಅನಿಸ್ತ್ಯು. ಕೂತೆ ಮಂಗಳಾರತಿಗೆ. ಶ್ರೀಹರೀ ನೀ ಸರ್ವಾಂತರ್‍ಯಾಮಿ ಇದ್ದೀಯಪಾ. ನಿನ್ನ ಲೀಲಾ ಅಗಾsಧ ಅದs" ಅಂದಾ. ಮನೀಯವರು ಮಾಡತಾರೇನು? ಮಡೀಕಸಗೊಂಡು, 'ನಡೀ ಸೂಳೇಮಗನs' ಅಂತ, ಹೊಡದು ಹೊರಗ ಹಾಕಿದರು. ತಾತ್ಪರ್‍ಯಂದರ, ದಾದಲ್ಯಾಗ ಘಂಟಿ ಕಾಣಿಸ್ತ್ಯು ಅಂದರ ಬೇಭಾನ ಆಗತಾನ. ಘಂಟೀ ಮ್ಯಾಲಿನ ಮುಖ್ಯಪ್ರಾಣನ ತಳೀ ಏನರs ಇರಬೇಕಂವಾ ಪೂರ್ವಜನ್ಮದಾಗ."

ನಮ್ಮ ಗೋವಿಂದಭಟ್ಟ, ಮಗನ ತಾರೀಫು-ಕಮ್–ಕಥೆ ಎರಡೂ ಹಾಸು ಹೊಕ್ಕಾಗಿ ಹೆಣೆದು ಹೇಳಿದ. ಆದರೆ ಆ ವೈದಿಕಬ್ರಾಹ್ಮಣನಂತೆ, ದಾದಲ್ಯಾ, ಸಿಕ್ಕು ಒಪ್ಪಾಡುವ ಜಾತಿಯಲ್ಲವೆಂಬ ಖಾತ್ರೀ ಗೋವಿಂದಭಟ್ಟನಿಗೂ ಖಾಸ್ ಇತ್ತು. ಇರಲಿ.

ಇಲ್ಲಿಗೆ ಬಂದು ನಾನು ಪುಕ್ಕಟೆ ಮಯ್ಯುತ್ತಿರಲಿಲ್ಲ. ಜೋಳದ ಪಾಳಿಯನ್ನು, ಕಾ. ಜಿ. ಏಕೂನ ಶಿಕೋಣಿಯಿಂದ, ಸಾಹೇಬರ ಕಚೇರಿ ಕೆಲಸದ ನಿಮಿತ್ತದಿಂದ, ರಾ. ಸಾ. ಸೋಮರೇಮಾಮಾನ ಸೇವೆಯಿಂದ ತೀರಿಸುತ್ತಿದ್ದೆ. ಈ ಎಲ್ಲ ಕೆಲಸಗಳನ್ನು ನಾನು ಲೀಲಾಜಾಲವಾಗಿ ನೆರವೇರಿಸುತ್ತಿದ್ದೆ. ಆ ಬಗ್ಗೆ ಯಾರದೂ ಕುರುಕುರು-ಕಿರಿಕಿರಿ ಇರಲಿಲ್ಲ. ನನಗೆ ಬೇಕಾದ ವಿಷಯ ಬೇರೆಯೇ ಆಗಿತ್ತು.

ನನ್ನ ಧಡಪಡ ಅದರ ಸಲುವಾಗಿ ನಡೆದಿತ್ತು. ದೇಹ, ಸೇವೆಯಲ್ಲಿ ದಂಡಿಸುತ್ತಿತ್ತು. ಮನಸ್ಸು, ಶ್ಯಾಮರಾಯ – ಸಾಹೇಬರು– ಸೋನಕ್ಕ ಅವರ ಸುತ್ತು ಅಹೋರಾತ್ರಿ ಸುತ್ತಿ ಸುಳಿಯುತ್ತಿತ್ತು.

ಶ್ಯಾಮರಾಯ-ಸಾಹೇಬರ ಸಂಬಂಧ ಕೇವಲ ಕಂತ್ರಾಟದಾರ – ಆಫೀಸರ ಎಂಬುವಷ್ಟರ ಮಟ್ಟಿಗೆ ಇರಲಿಲ್ಲವೆಂಬ ಖಾತ್ರೀ ನನಗಿತ್ತು. ಬಹಳ ಹಿಂದಿನಿಂದ ಇಬ್ಬರಿಗೂ ಚಾಂದೀ-ಖುರಾಕಿನ ಸಂಬಂಧವಂತೂ ಇದ್ದೇ ಇತ್ತು. ಅದರ ಕೂಡ ಇಬ್ಬರಲ್ಲಿ ಆತ್ಮೀಯತೆಯೂ ಇತ್ತು. ಶ್ಯಾಮರಾಯ, ಬೆಳಗಾಂವಿಯಲ್ಲಿ ಕಂತ್ರಾಟ ವ್ಯವಹಾರವನ್ನು ಮೊದಲುಮಾಡಿ ಒಂದೆರಡು ವರುಷ ಸಂದಿರಬೇಕು – ಅಷ್ಟರಲ್ಲಿ ಸಾಹೇಬರು ಧುಳೆಯಿಂದ ಇಲ್ಲಿಗೆ ವರ್ಗವಾಗಿ ಬಂದಿದ್ದರು. ಶ್ಯಾಮರಾಯನ ಹವ್ಯಾಸದ ನೀರಿಗೆ ಎಸರು ಬಂದಿತ್ತು. ಸಾಹೇಬರ ಆಗಮನದಿಂದ ಅದರಲ್ಲಿ ಬೇಳೆ ಬಿತ್ತು. ಶ್ಯಾಮರಾಯನ ಬ್ಯಾಂಕ ಖಾತೆಯ ವೃಕೋದರ-ಚೀಲ ಹೊಟ್ಟೆ ಹಿಗ್ಗಿಸಲಿಕ್ಕೆ ಎಲ್ಲ ಕೂಡಿಬಂದಂತಾಯಿತು. ಈಗಾಗಲೇ ಶ್ಯಾಮರಾಯ ಪ್ರಥಿತ ಯಶ ಕಂತ್ರಾಟದಾರನೆಂಬ ನಾಮೆಯನ್ನು ಪಡೆದಿದ್ದ. ಬೆಳಗಾಂವಿಯ ಪ್ರತಿಷ್ಠಿತ ಸಮಾಜದಲ್ಲಿ ಗಣ್ಯಸ್ಥಾನವನ್ನು ದೊರಕಿಸಿಕೊಂಡಿದ್ದ.

ಶ್ಯಾಮರಾಯ, ಹಿಂದೆ, ತಮ್ಮ ಕೈಕೆಳಗೆ ಕೆಲಸ ಮಾಡಿದವನೆಂದು, ಈಗ ತಮ್ಮ ಡಿವ್ಹಿಜನ್ನದಲ್ಲಿಯ ಒಬ್ಬ ಕಂತ್ರಾಟದಾರನೆಂದು, ಲಘುವಾಗಿ ಭಾವಿಸದೆ, ಸಾಹೇಬ ಬ್ರುವರು, ಅವನನ್ನು ಆಪ್ತ ಸ್ವಕೀಯನಂತೆ, ಒಬ್ಬ ಇಜ್ಜತ್ತಿನ ವ್ಯಕ್ತಿಯಂತೆ ಕಾಣುತ್ತಿದ್ದರು. ಅವರು ಕೊಡುತ್ತಿದ್ದ ಗೌರವ, ಶ್ಯಾಮರಾಯನ ಇಂದಿನ ಪರಿಸ್ಥಿತಿಯಲ್ಲಿ ಅಸ್ಥಾನವಾಗಿರಲಿಲ್ಲ.

ಇದೆಲ್ಲವನ್ನೂ ಸೂಕ್ಷ್ಮವಾಗಿ ಅವಲೋಕಿಸಿ, ತನಿಖಿಸಿ, ನಾನು ನನ್ನ ಜಾಡನ್ನು ನಿವಾಂತವಾಗಿ ನೇಯತೊಡಗಿದೆ.

ಶ್ಯಾಮರಾಯ-ಸಾಹೇಬರಲ್ಲಿ ಬಳಕೆಯಂತೂ ಅತಿಯಾಗಿತ್ತು. ಋಣಾನುಬಂಧದ ಬೆಸುಗೆ ಗಟ್ಟಿಮುಟ್ಟಾಗಿತ್ತು. ಅಂತರಂಗದ ಆತ್ಮೀಯ ಮಾತುಕತೆ ಇಬ್ಬರಲ್ಲೂ ಸರಾಗವಾಗಿ ನಡೆಯುತ್ತಿದ್ದವು. ನಮ್ಮಲ್ಲಿ ಋಣಾನುಬಂಧ ಬೆಳೆದು ಬರುವದು ಅಷ್ಟೇ ಪುರಸೊತ್ತು. ಋಣಾನುಬಂಧ ಬೆಳೆದುಬಂದ ಮನೆತನದಲ್ಲಿ, ಒಂದು ಗಂಡುಕೂಸು – ಒಂದು ಹೆಣ್ಣುಕೂಸು, ಇನ್ನೂ ತೊಟ್ಟಿಲಲ್ಲಿ ಕಾಲು ಬಡಿದು, ಬಾಯಿ ಚಪ್ಪರಿಸುತ್ತಿದ್ದರೂ ಸಾಕು, ಅವಕ್ಕೆ ಅಲ್ಲಿಯೇ ಬಾಸಿಂಗಬಂಧನ

ವಾಗುತ್ತದೆ. ನಿದಾನ, ಆ ಬಗ್ಗೆ ವಚನ-ಪ್ರತಿವಚನದ ಲೇವಾ-ದೇವಿಯಾದರೂ ಆಗುತ್ತದೆ. ಈಗಂತೂ ಶ್ಯಾಮರಾಯನ ಚಿರಂಜೀವರು ಬೆಳೆಯುತ್ತಿದ್ದರು. ಯಶೋವಿಲಾಸದ ಮೆಟ್ಟಲುಗಳನ್ನು ಏರುತ್ತಿದ್ದರು. ಇತ್ತ ಸಾಹೇಬರ ಕನ್ಯೆ, ಹರೆಯದ ಹೊಸ್ತಿಲನ್ನು ದಾಟುತ್ತಿದ್ದಳು. ಅಂಗಳದಲ್ಲಿನ ಇಂಥ ಪಾರಿಜಾತಗಳನ್ನು ಕಡೆಗಣಿಸಿ, ಸಾಹೇಬರು ಮುಗಿಲಿನಂಗಳಕ್ಕೆ ಕೈಚಾಚುವವರಲ್ಲ. ಇಂಥ ವರರತ್ನಗಳನ್ನು ಬಿಟ್ಟು, ಅವರೇನು ಮಗಳನ್ನು ಸ್ವಯಂವರಕ್ಕೆ ನಿಲ್ಲಿಸಬೇಕಾಗಿರಲಿಲ್ಲ.

ನಮ್ಮ ಕು. ಚಿ. ಶಕೂನನ್ನು, ವಿಶ್ವಾಸನಿಗೆ ತೆಗೆದುಕೊಳ್ಳುವದರ ಬಗ್ಗೆ ಖಚಿತವಾಗಿ, ಸಾಹೇಬರಿಗೆ, ಶ್ಯಾಮರಾಯ, ಮಾತೇನಾದರೂ ಕೊಟ್ಟಿದ್ದಾನೋ ಹೇಗೆ ಎನ್ನುವ ವಿಚಾರ ನಮ್ಮ ತಲೆ ತಿನ್ನತೊಡಗಿತು. ಹಾಗೆ ಮಾತು ಕೊಡುವ ಅಧಿಕಾರವನ್ನು ಅವನು ತಾನಾಗಿಯೇ ಕಳೆದುಕೊಂಡಿದ್ದ. ವಿಶ್ವಾಸನ ಪರವಾಗಿಯಂತೂ ಅವನಿಗೆ ಮಾತನಾಡಲು ಅಧಿಕಾರವೇ ಇರಲಿಲ್ಲ. ಸುರೇಶನ ಬಗ್ಗೆ ಅವನು ವ್ಯವಹರಿಸಬಹುದಾಗಿತ್ತು. ಆದರೆ ಈಗ ಅದೂ ಅವನಿಗೆ ಅಸಾಧ್ಯವಾಗಿತ್ತು. ಕು. ಚಿ. ಶಕೂ ಸುರೇಶನ ವಯಸ್ಸಿನ ಮಾನದಿಂದ ಅಷ್ಟೇ ಎರಡು-ಮೂರು ವರುಷ ಕಿರಿಯವಳಾಗಿರಬಹುದು. ಅವನಿಗಿಂತ ಹೆಚ್ಚಾಗಿ, ಸಾಹೇಬ-ರಂಗಕ್ಕರ ಕಣ್ಣು ವಿಶ್ವಾಸನ ಮೇಲೆ ವಿಶೇಷವಾಗಿತ್ತು. ರೊಕ್ಕ– ಉತ್ಪನ್ನ – ವಿದ್ಯೆಯ ದೃಷ್ಟಿಯಿಂದ, ವಯಸ್ಸಿನ ಮಾನದಿಂದ, ಕು. ಚಿ. ಶಕೂನಿಗೆ, ವಿಶ್ವಾಸನೇ ಅನುರೂಪ ವರನೆಂದು ಅವರ ನಂಬಿಗೆಯಾದಂತಿತ್ತು. ಆದರೆ ಕಾಕಾ-ಸೋನಕ್ಕ ಇಂಥ ಈ ಸಂಬಂಧಕ್ಕೆ ಒಪ್ಪುವ ಶಕ್ಯತೆ, ಕಲ್ಪನೆಗೆ ಅತಿ ದೂರವಾಗಿತ್ತು.

ಶ್ಯಾಮರಾಯ-ಸೋನಕ್ಕನ ಪ್ರಕರಣ ಸಾಹೇಬಮಂಡಳಿಗೆ ತಿಳಿದಂತೆಯೂ ಇರಲಿಲ್ಲ. ಹಾಗೇನಾದರೂ ತಿಳಿದದ್ದೇ ಆಗಿದ್ದರೆ, ಇಷ್ಟು ವಿಶ್ವಾಸದವನಾದ ನನ್ನಲ್ಲಿ ಅವರು ಕಿಲಾಪಿಸದೆ ಬಿಡುತ್ತಿರಲಿಲ್ಲ. ಹೆಣ್ಣುಹೆಂಗಸಾದ ರಂಗಕ್ಕ ಚಿಕಿತ್ಸಿಸದೆ ಬಿಟ್ಟಿದ್ದರೆ ಜಾತಿಗೇ ಹೊರತಾಗುತ್ತಿದ್ದರು. ಹೆಣ್ಣು ತಳಿಗೆ ಅಪವಾದವಾಗುತ್ತಿದ್ದರು, ಅವರಾಗಿಯೇ ಕೇಳಿದರೆ ತಂತಾನೇ ಸುದ್ದಿ ಹೊರಬಿದ್ದೀತಲ್ಲವೆಂದು ನಾನು ದಾರಿ ಕಾಯುತ್ತಿದ್ದೆ. ಅವರು ಆ ಬಗ್ಗೆ ಬೇಗ ಕೇಳಿದಷ್ಟು ಒಳ್ಳೆಯದೆಂದು ಗುಣಿಸಿದ್ದೆ. ಆ ರೀತಿ ಅವರ ಚಿಕಿತ್ಸೆಗೆ ಆಸ್ಪದಮಾಡಿಕೊಡಲು, ಅವರೆದುರು, ವಿಶ್ವಾಸನ – ರಾವಜೀಕಾಕಾ ಅವರ – ತಾರೀಫು ಮಾಡುತ್ತಲೂ ಇದ್ದೆ. ನನ್ನ ತಾರೀಫು

ನಡೆದಂತೆ ಅವರಿಗೆ ವಿಶ್ವಾಸನ ಬಗ್ಗೆ ತೀವ್ರ ಆಸಕ್ತಿ ನಿರ್ಮಾಣವಾಗತೊಡಗಿತು. ಅವರು ಅವನ ಬಗ್ಗೆ ತೀರ ಉತಾವಿಳರಾಗತೊಡಗಿದರು.

ಒಂದು ದಿನ ಶ್ಯಾಮರಾಯ ತನ್ನದೊಂದು ದೊಡ್ಡ ಮೊತ್ತದ ಬಿಲ್ಲು ಇತ್ತೆಂದು ಬಂದವ, ನೇರವಾಗಿ ಸಾಹೇಬರ ಬಂಗಲೆಗೇ ಬಂದ. ಸುವರ್ಣಪುಷ್ಪ ದಕ್ಷಿಣೆಯನ್ನು ಇಲ್ಲಿಯೇ ಸಮರ್ಪಿಸಿ, ಬಿಲ್ಲು, ಸಂಜೆಯೊಳಗಾಗಿ ಪಾಸಾಗಿ, ಚೆಕ್ ಕೈಗೆ ಬರುವಂತೆ ಮಾಡಿಕೊಂಡ. ಬಾಜಾರೀ ಸೀರೆ ಭಾರೀ ಭಾರವಾಗುತ್ತದೆಂದು ಸ್ಥೂಲಕಾಯದ ರಂಗಕ್ಕನವರ ಅಸರಂತ ತಕರಾರು ಕೇಳುತ್ತಿದ್ದ ಶ್ಯಾಮರಾಯ, ಈ ಸಾರೆ ಬಂಗಲೆಗೆ ಬರುವಾಗಲೇ, ಎರಡು, ರೇಶಮಿ ಅಂಚಿನ ಬನಾರಶೀ ಪತ್ತಲಗಳನ್ನು – ವಾಯಲ್ ಕೂಡ ಝುಕ್ಕಿಸಿರಬೇಕು – ಅಂಥ ಶೌಂವಾರೀ ತಂದು, ಸಾಹೇಬರ ಅಪರೋಕ್ಷದಲ್ಲಿ, ಮೊದಲೇ ಬಾಯೀಸಾಹೇಬರ ಉಡಿ ತುಂಬಿದ್ದರಿಂದ ಅವರು ತೀರ ಖುಷಿಯಾಗಿ, ಶ್ಯಾಮರಾಯನಿಗೆ, ಸಂಜೆಯ ಊಟದ ಅಕ್ಷತೆಯನ್ನೇ ಕೊಟ್ಟಿದ್ದರು. ಸಾಹೇಬರ ಪರವಾನಗಿಯ ಅಗತ್ಯ ರಂಗಕ್ಕನಿಗೆ ಇರಲಿಲ್ಲ. ಶ್ಯಾಮರಾಯ, ಸಾಹೇಬರಿಗೆ, ಸುವರ್ಣಪುಷ್ಪದಕ್ಷಿಣೆಯನ್ನು ಸಮರ್ಪಿಸುವಾಗ, ಶ್ರೀಮತೀಸಾಹೇಬರೂ, ಅವರ – ಅಂದರೆ ಸಾಹೇಬರ – ಖಾಸಾ ಕೋಣೆಯ ಹೊಸ್ತಿಲ ಒಳ-ಹೊರಗೇ ಸರ್ವಸಾಕ್ಷಿಯಾಗಿ ನಿಂತಿದ್ದರು. ಸಾಹೇಬರು, ದಕ್ಷಿಣೆಯನ್ನು ಸವ್ಯಾಪಸವ್ಯಮಾಡಿ, ರಂಗಕ್ಕನಿಗೆ ಕೊಡುತ್ತ —

“ಇಂದ ಮುಕ್ಕಾಂ ಅದs ಇಲ್ಲೋ ಶ್ಯಾಮರಾವ್? ಏನ ಕುದರೀ ಏರೇ ಬಂದೀರ್ಯೋ?”

ಎಂದು ಕೇಳುವ ಪುರಸೊತ್ತು ಅಷ್ಟೇ – ರಂಗಕ್ಕ ಅಡ್ಡಬಾಯಿ ಹಾಕಿದರೇ —

“ಏನಿಲ್ಲಾ, ನಾ ಎಲ್ಲಾ ಅವರಿಗೆ ಅಗಾವ ಆಮಂತ್ರಣ ಕೊಟ್ಟೇ ಇಟ್ಟೇನಿ, ಸಂಜೀ ಊಟದ್ದು. ಬಂದೇ ಬರ್ತಾರ. ನೀವೂ ಅಷ್ಟು ಹೇಳಿಬಿಡ್ರೀ ಅಂತ ಹೇಳಲಿಕ್ಕೆ ಬಂದಿದ್ದೆ.”

“ನೀವ್ ಹೇಳಿದರ ಆತಲಾ ಬಾಯೀಸಾಹೇಬ. ನನಗೇನು ಈ ಮನೀ ಹೊರಗಿಂದs? ಎಂದೇನು ನಾನು ಉಂಡಿಲ್ಲs, ತಿಂದಿಲ್ಲs? ಸಾಹೇಬರs ಹೇಳಬೇಕೂ ಅನ್ನೊ ಜರೂರಿ ಇಲ್ಲಾ. ನನಗೂ ನಾಳಿಷ್ಟು ಊರಾಗ ಕೆಲಸ ಅದ. ಮುಕ್ಕಾಂ ಮಾಡsಬೇಕಾಗೇದ.”

ಆಮಂತ್ರಣ ಸ್ವೀಕರಿಸಿದ ಶ್ಯಾಮರಾಯ ದೇಶಾವರೀ ನಗೆ ನಗುತ್ತ ಉತ್ತರಿಸಿದ.

"ಇಂದಿನ ಆಮಂತ್ರಣ ಅಕೀದು. ನಾಳಿಂದು ನಂದು. ಎರಡ ದಿನಾ ನಿಮಗೇನ ಬಿಡಗಡಿ ಇಲ್ಲಾ. ನಾಳೆ ಸಂಜಿಕೆ ನಿಮ್ಮ ಕೆಲಸದ ವ್ಯಾಲ ಹೋಗೂಣು. ಇನ್‌ಸ್ಪೆಕ್ಶನ್ ಇಟಗೊಂಡೀನಿ. ನೀವೂ ಜೋಡಿಗಿರೂದು ಠೀಕಾ."
ಸಾಹೇಬರು.

"ಅಂದರ, ನಾಳೆ ಸಂಜೀ ಕ್ಯಾಂಪು ನಮ್ಮ ವಾಡೇದಾಗs ಆಗಲಿ ಹಂಗಾರs". ವಾಡೇಯಲ್ಲಿ ಕುಳಿತೇ ಕೆಲಸದ ಚಾಚಣೀ ಮಾಡಿಸುವ ಡಾವಿನಿಂದ ಶ್ಯಾಮರಾಯ ಮಾತನಾಡಿದ ಸಾಹೇಬರಿಗೆ ಬೇಕಾದದ್ದೂ ಅದೇ.

"ಸ್ಪೆಂಡಿಡ್ ಐಡಿಯಾ ಶ್ಯಾಮರಾವ್ ನಿಮ್ಮದು. ನಿಮ್ಮ ವಾಡೇ ಕಣ್ಮುಟ್ಟಾ ನೋಡೂ 'ಆಪೋರ್ಚಿನಿಟಿ' ಬಂದರ ಯಾಕ ಬಿಡಬೇಕು? ನಿಮ್ಮ ವಾಡೇ ಅಂದರ ಅಗದೀ ಹರ್ಮ್ಯ ಆಗೇದಂತ ಕೇಳೀವಿ. ಶನಿವಾರವಾಡಾದ ಪ್ಯಾಟರ್ನ್ ವ್ಯಾಲ ಕಟ್ಟಿಸಿದ್ದಂತ. ಹೌದೇನು?"

"ಮಿನಿಯೇಚರ್ ಶನಿವಾರವಾಡಾ ಅಂದರೂ ನಡದೀತು. ಪೇಶ್ವೇ ಅವರು, ತಮ್ಮ ಸ್ವಾರೀ ಇಕಡೆ ಬಂದರ ಮುಕ್ಕಾಂ ಮಾಡೂದಕಂತ ಕಟ್ಟಿಸಿದ್ದು. ಬಾಯೀ-ಸಾಹೇಬ, ನೀವೂ ಅಷ್ಟು ಪಾದಧೂಳೀ ಹಾಕಿದಿರಿ ಅಂದರ ನಾ ಧನ್ಯ ಆಧಾಂಗs. ತಾಂವೂ ನಡದಬಿಡರಿ. ನಮ್ಮ ಗಣಪತಿದೇವಸ್ಥಾನಾ ವಗೈರೆ ನೋಡೂಹಾಂಗ ಅವs. ಎರಡ ದಿನಾ ನಿಮಗೂ ಅಷ್ಟೇ ಚೇಂಜ್ ಆಧಾಂಗ. ಭಾಳ ದಿನದಿಂದ ನಾ ಹೇಳಕೋತ ಬಂದಿದ್ದೆ, ಇಬ್ಬರದೂ ಮುಕ್ಕಾಂ ವಾಡೇದಾಗ ನಾಕ ದಿನಾನರs ಆಗಲೀ ಅಂತs. ಯೋಗನs ಒದಗಿಧಾಂಗ ಕಾಣಲಿಲ್ಲ. ಇದ ಸಾಹೇಬರು ತಾವಾಗೇ ಒಪಿಗೊಂಡಾರುಂದವ್ಯಾಲ ತೀರಿತು. ನನಗ ಭಾರೀ ಸಮಾಧಾನ ಆತು."

ಶ್ಯಾಮರಾಯ, ಸಾಹೇಬ-ಮಡ್ಡಮ್ಮತಿಯರನ್ನು ಬಗಲಿಗೆ ಹಾಕಿಕೊಳ್ಳ ಬೇಕೆಂದು ಬೇತು ನಡಿಸಿ ಮಾತನಾಡಿದರೆ, ಸಾಹೇಬ-ಶ್ರೀಮತೀಸಾಹೇಬರು, ಅದಕ್ಕಿಂತಲೂ ಹೆಚ್ಚು ಅನುಕೂಲರಾಗಿ, ಶ್ಯಾಮರಾಯನ ಮರ್ಜೀ ಹಿಡಿಯುವ ಆರ್ಜವತೆಯಿಂದ ಮಾತನಾಡಿ, ಅವನ ಆಮಂತ್ರಣ ಸ್ವೀಕರಿಸಿದರು. ಶ್ಯಾಮ ರಾಯನ ಬೇತು, ಸಾಹೇಬರಿಗೆ ತಿಳಿದಿರದಿದ್ದರೂ, ಸಾಹೇಬರ ಡಾವ್ ಶ್ಯಾಮ ರಾಯನಿಗೆ ಹೊಳೆದಿತ್ತು. ಶ್ಯಾಮರಾಯನಲ್ಲಿ ಪಂತ-ಕುಟುಂಬದ ದೊಡ್ಡಿಸ್ತಿಕೆ ಇರದಿದ್ದರೂ ಅವರಲ್ಲಿಯ ಮುತ್ಸದ್ದಿತನ ಗನೀಮಿಕಾವಾ ರೋಮರೋಮದಲ್ಲಿ ಸೆಲೆಯಾಡುತ್ತಿತ್ತು.

ಸಂಜೆಯು ಮುಂದೆ ಎಸ್. ಈ. ಸಾಹೇಬರಿಂದ ನಮ್ಮ ಇ. ಇ. ಸಾಹೇಬರಿಗೆ ಅಗತ್ಯದ ಕರೆ ಬಂದದ್ದರಿಂದ ಅವರು "ಈಗ" ಬರುತ್ತೇನೆಂದು ಹೇಳಿ ಗಡಿಬಿಡಿಯಿಂದ ಹೊರಟುಹೋದರು. ನಮ್ಮ ಶಿಷ್ಯಮಣಿ, ಗೆಳತಿಯರು ಬಂದು ಗಂಟೇ ಬಿದ್ದರೆಂದು ಸಿನೇಮಾಕ್ಕೆ ಹೋದಳು. ಶ್ಯಾಮರಾಯನ ಔತಣದ ಭರ್ಜರೀ ತಯಾರಿಯಲ್ಲಿ ರಂಗಕ್ಕ ದಂಗಾದರು. ನಿವೃತ್ತ ಡಿ. ಡಿ. ಸಿ. ರಾ. ಸಾ. ಠೋಮರೇ ಮಾಮಾ ಅವರು ನಿತ್ಯ ಎರಡು-ಮೂರು ಮೈಲು ಅಡ್ಡಾಡಿ, ಗಾಳಿಸೇವನ ಮಾಡದಿದ್ದರೆ, ಸಂಜೆಯ ಊಟದ ಪಂಕ್ತಿಗೆ ಕೂಡುವ ತಾಕತ್ತನ್ನೇ ಪಡೆಯುತ್ತಿರಲಿಲ್ಲವಾದ ಕಾರಣ, ಪೇನಶನ್ ಪ್ರಣಾಲಿಗೆ ಒಪ್ಪುವಂತಹ ಅವಲಕ್ಷಣ ಪೋಷಾಕು ಮಾಡಿಕೊಂಡು, ನಾಕು ಗಂಟೆಯ ಹೊತ್ತಿಗೇ ಬಂಗಲೆಯಿಂದ ಹೊರಬಿದ್ದು ಹೋಗಿದ್ದರು. ಹೀಗಾಗಿ, ನನಗೆ ಶ್ಯಾಮರಾಯ, ಶ್ಯಾಮರಾಯನಿಗೆ ನಾನು "ಸಹಸೋಬತಿ"ಯಾಗದೆ ಗತ್ಯಂತರವಿರಲಿಲ್ಲ.

ಬಂಗಲೆಯ ಮುಂದಿನ ವಿಶಾಲ ತೋಟದಲ್ಲಿ ಶ್ಯಾಮರಾಯ ಶತಪಥ ಮಾಡುತ್ತ, ನಮಗೂ ಅದನ್ನು ಮಾಡಿಸುತ್ತ, ಮೆಲ್ಲಗೆ ಬಾತಮೀ ಹಿರಿಯುವ ಸಂಧಾನಕ್ಕೆ ಪೀಠಿಕೆ ಹಾಕತೊಡಗಿದ:

"ದಾದಲ್ಯಾ, ನೀ ಅಂದರ ಒಂದ ಪ್ರವಾಹೀಪದಾರ್ಥ ಇದ್ಧಾಂಗ ಇದ್ದೀದಿ. ಉಧಾರಣಾರ್ಥ, ನೀರಾ. ನೀರಿಗೇನು ಆಕಾರ ಆದನs ಏನದs? ಎಂಥಾ ಬೇಕಾದಂಥಾ ಆಕಾರದ ಬಾಟ್ಲೀ ಒಳಗ ಹಾಕರ್‍ಯದನ್ನ. ಆ ನೀರಾ ಆ ಬಾಟ್ಲೀ ಆಕಾರ ತಗೋತದ. ಬಾಟ್ಲ್ಯಾಗಿಂದ ನೆಲಕ ಸುರಿವಿತ್ಯs, ನೆಟ್ಟಗ ಹರದ ಹೋಗತದ. ಹರದು ಹೋಗೂ ಮುಂದ ಸುದ್ದೇ ಅದಕೊಂದು ಆಕಾರ ಬಂತೇ. ಹಾಂಗ ನೀ ಇದ್ದೀ. ಅಲ್ಲೆ ಸಾಂಗ್ಲ್ಯಾಗ ಪಂತರ ಮನ್ಯಾಗ ಶಿಸ್ತ ಬಸ್ತಾನ ಕೂಡಿಸಿಗೊಂಡಿ. ಹಿಂದಕ ಬೆಳಗಾಂವ್ಯಾಗ ನಾಯಕ ವಕೀಲರಲ್ಲಿ ಇದ್ದಿ. ಅವರಿಗೂ ಹೆಸರ ಬರೂ ಹಾಂಗ ಅಭ್ಯಾಸ ಮಾಡಿ, ಸೇವಾ ಮಾಡಿ ವಾಹವ್ವಾ ಅನಿಸಿಗೊಂಡಿ. ಇಂದ, ಇಲ್ಲೆ ತಂದ ಬಿಟ್ಟರ, ಇಲ್ಲ್ಯೂ ಹೊಂದಿಕೊಂಡ ನಡದೀ ಅಂತs. ನೀ ಅಂದರ ಒಂದ ವರ್ಣನಾತೀತ ವ್ಯಕ್ತಿಯಂತ ಹೇಳಿದರು ಇದೇ ಈಗ ಸಾಹೇಬರು. ಹೇಳಿ ಇಟ್ಟಿರತೇನಿ ದಾದಲ್ಯಾ. ಸಾಹೇಬರನ ಹಿಡದ ಇಟಗೋ; ಘಾಯದೇ ಆಗದs ಹೋಗೂದಿಲ್ಲಾ. ನಿನಗ ಜಮಾಸ್ತದಿಲ್ಲೋ ಹೇಳು? ಅದು ಮುಖ್ಯ ಮುದ್ದೇ..."

"ಶಿಸ್ತ ಜಮಾಸೇದ ತಗೋರಿ. ಶಕೂನ ಮ್ಯಾಟ್ರಿಕ್ಕ ಮುಗಿಸೇ ಹೋಗಂತ

ಗಂಟಬಿದ್ದಾರ, ಸಾಹೇಬರು – ರಂಗಕ್ಕಾ. ಫ್ರೀಶಿಪ್, ಸ್ಕಾಲರ್‌ಶಿಪ್ ಇರದಿದ್ದರ ನಾನೂ ಇಲ್ಲೇ ಠಾಣೇ ಹಾಕತಿದ್ದೆ. ಆದರೂ ದೀಪಾವಳೀ ಸೂಟ್ಯಾಗ ಬಂದು ಆಕಿನ್ನ ತಯಾರ ಮಾಡತೀನ್ಯಂತ ಹೇಳೀನಿ."

"ಶಕೂನ ದಶಿಂದ ಮತ್ತೇನಂತಿದ್ದರು. ಏನರs ಸುದ್ದೀ ತಗದಿದ್ದರೇನು, ರಂಗೂಬಾಯರು?"

"ನಾ ಈ ಮನೀಗೆ ಹೊಸಬಾ. ನನ್ನ ಮುಂದ ಹ್ಯಾಂಗ ತಗದಾರು? ಶಕೂನ ಶಿಕೋಣೀ ಆತು, ನಾ ಆತು. ಉಳದ ಬಾಬತ್ತಿನ್ಯಾಗ ಅಗದೀ ನಿರ್ಲಿಪ್ತ ಇದ್ದ ಬಿಟ್ಟೀನಿ. ದೇವರಪೂಜೀದು ಭಾನಗಡೀ ಇರದಿದ್ದರ ಅಡಿಗೀಮನೀ ಕಡೇ ಸುದ್ದೇ ಹಣಿಕಿ ಹಾಕತಿದ್ದಿಲ್ಲಾ."

"ಅಷ್ಟ ನಿರ್ಲಿಪ್ತ ಆಗಿ ಇರೂದೂ ಠೀಕ ಅಲ್ಲ ದಾದಲ್ಯಾ. ಚೂರ-ಚಾರು ಅವರ ಮಾತ-ಕಥೀ ಒಳಗ ಲಕ್ಷ್ಯ ಹಾಕತಿರೂ. ನಿನ್ನ ಏನರs ಕೆದರಿ ಕೆದರಿ ಕೇಳಿದರ ಠಾಂವಿಕಿಲ್ಲಂತ ಕಿಂವೀಮ್ಯಾಲ ಕೈ ಇಟಗೋ. ಮತ್ತ ಆಕೀ ಹುಡುಗೂರು ಪುಣೇದಾಗ ನಿಂತಿದ್ದರ ದಶಿಂದ ಏನರs ಕಿತಿಬಿ ನಡಸಿದ್ದರೇನು?"

"ಶಕೂನ್ನ ಹತ್ತ ಊರ ಅಡ್ಡಾ್ಯಡಿಸಿ ನಾವೇ ಆಕೀದು ಅಭ್ಯಾಸ ಕೆಡಿಸಿ ದೇವು. ಶ್ಯಾಮರಾಯರ್‍ಹಾಂಗ ಘಟ್ಟಿ ಧೈರ್ಯಾಮಾಡಿ, ಒಂದೇ ಠಿಕಾಣದಾಗ, ತಮ್ಮ ಹುಡುಗೂರನ ಇಟ್ಟಾರ, ಹಾಂಗ ನಮ್ಮ ಶಕೂನ್ನೂ ಇಟ್ಟಿದ್ದರ, ಆಕೀ ಅಭ್ಯಾಸ ಸುರಳೀತ ಸಾಗತಿತ್ತು, ಹೀಂಗ ಮಾತ್ರ ಅಂದರು. ಅದs ಇಂಪ್ರೆಶನ್ ಆಗೂಹಾಂಗ ನಾನೂ ದುಜೋರಾ ಕೊಟ್ಟೆ."

"ಬರೋಬರಿ ಮಾಡಿದಿ. ಉಳದ ವಿಷಯದ್ದಶಿಂದ ಚಕಾರ ಶಬ್ದ ತಗೀ ಬ್ಯಾಡಾ. ಇದ್ನೋಡು, ಅವರ ಮನಸಿನ್ಯಾಗ, ಶಕೂನ್ನ ವಿಶ್ಯಾಗ ಕೊಡೂದದ. ಆದರ ದಶಿಂದ ನನ್ನಿಂದ ನಕಾರ ಬರಲಿಕ್ಕಿಲ್ಲ ಅನ್ನೂ ಖಾತ್ರೀನು ಅವರಿಗೆ ಅದs. ಈಗೇನು ಅಂಥಾ ಅವಸರಾ – ಹೋಗಲಿ ನಾಕಾರ ವರ್ಷಾ – ಅವನ ಕಲಿಯೂದು ಮುಗೀಲಿ ಅಂತs ಆಶಾ ಹಚ್ಚಿ ಢಕಲಾಸಿಗೋತ ಬರತೀನಿ. ಮುಂದಿನ ಮಾತು ಮುಂದs. ಅಲ್ಲೀ ತನಕಾ ನನ್ನ ಧಂದೇ ಸುರಳೀತ ಸಾಗತದ. ಹಿಂದಾಗಡೇ, ಹುಡುಗಾ ನಮ್ಮ ಕೈಯಾಗಿಲ್ಲಾ ಅಂತ, ಕೈ ಎತ್ತಿದರ, ಏನ ಫಾಶೀ ಕೊಡತಾರs? ಮುಂದ, ಉಪಾಯ ಇಲ್ರ್ಯೆಪಾ ಅಂತs, ಕೈ ಊರಿದರಾತು."

"ಖರೇ ಅದs ನಿಮ್ಮ ಮಾತಾ."

"ಅದಕs ನೋಡು. ಅವರ್ನ ಊರಿಗೆ ಕರಕೊಂಡು ಹೊಂಟೀನಿ. ಅಷ್ಟ ವಾಡೇ-ಪೀಡೇ ನೋಡಿದರಂದರ ಬಾಯಾಗ ನೀರs ಬಿಡತಾವ. ನಾ ಅವರ ಬೆನ್ನ ಹತ್ತೂದರ ಬದಲೀ, ತಾಂವs ದೀಡ ನಮಸ್ಕಾರ ಹಾಕ್ಕೋತ ಬರತಾರ. ನಾಳೆ, ಸುರೇಶ ಏನರs ಬೀ.ಈ.-ಪೀ.ಈ. ಆದಂದ್ರ ನೋಡಲಿಕ್ಕೆ ಬಂದೀತು. ಅಂವಗ ಶಕೂನ್ನ ಕೊಡೂಹಾಂಗ ಇದ್ದರ ನಮ್ಮ ಕಬೂಲಿ ಅದs. ವಿಶ್ಯಾನ ಜವಾಬ್ದಾರೀ ಅವನ ದತ್ತಕ ತಂದೀ-ತಾಯೀ ಕಡೇ ಅಂತ ಬಟ್ಟಮಾಡಿ ತೋರಿಸಿ ದೇವು ಅಂದರ, ಇಕಡೆ ನಕಾರ ಹೇಳಿಧಾಂಗೂ ಆಗಲಿಲ್ಲಾ, ಅಕಡೆ ಒಪ್ಪಿ ಗೊಂಢಾಂಗೂ ಆಗಲಿಲ್ಲಾ. ನೀ ಏನು ಮತ್ತ ಅವರ ಮುಂದ ಇದರ ಸಂಬಂಧೀ ಮಾತಾಡಬ್ಯಾಡಾ, ಅಂs. ರಂಗೂಬಾಯರೂ ಅಂದರ 'ಶಾರ್ಕ' ಮೀನ ಇದ್ಹಾಂಗ. ಸಮುದ್ರs ಅವರು ಮುಣಗೂ ಜಾಗಾ. ನನಗ ಅನಕೂಲ ಆಗಿರ ಬೇಕು, ಹಾಂಗ, ಬೇತಲೇ ಮಾತಾಡಿಕೋತ ಇದ್ದಬಿಡೂ, ತೀರಿತು."

"ಏನ ಶ್ಯಾಮರಾವ್, ಸಣ್ಣ ಪುರೋಹಿತನ ಜೋಡೀ ಏಕಾಂತ ನಡಧಾಂಗ ಕಾಣಸ್ತದs? ನಮಗ ಪರವಾನಗೀ ಅದs ಇಲ್ಲೋ ಬರಲಿಕ್ಕೆ?"
ರಂಗಕ್ಕ ದೇಶಾವರೀ ನಗೆ ನಗುತ್ತ ನಾವಿದ್ದಲ್ಲಿಗೆ ಬಂದರು.

"ಛೇ, ಛೇ, ಬಾಯೀಸಾಹೇಬ, ನಿಮ್ಮ ಅಪರೋಕ್ಷದಾಗ ನಮ್ಮದೇನು ಏಕಾಂತಾ? ದಾದಲ್ಯಾ, ಚೊಂಟಿ ಇದ್ದಾನ. ಅವನ ಜೋಡಿ ಏನ ಮಾತಾಡೂದು? ಧೊಡ್ಡ ಕುಟುಂಬದ ಹಿರೇ ಮಗಾ. ತಂದೀ ವೈದಿಕಬ್ರಾಹ್ಮಣಾ. ಮನೀ ತುಂಬೇ ಹುಡುಗೂರು-ಹುಪ್ಪಡೀ ಇದ್ದಾಂವಾ. ಅಪಾ, ಅವರ ಗತೀ ಏನು? ಶಿಕ್ಷಣದ ವ್ಯವಸ್ಥಾ ಏನು? ಮದಿವಿ-ಮುಂಜಿವೀ ವಿಚಾರೇನು? ನೀ ಒಬ್ಬನs ಪರಭಾರೇ ಇದ್ದು ಕಲ್ತರ ಮುಗೀಲಿಲ್ಲಾ. ಜಮಾಸ್ತಿದ್ದರ ಇಲ್ಲೇ ಒಂದು ಸಣ್ಣ ಮನೀ ಬಾಡಿಗೀ ಹಿಡದು ಉಳದ ಹುಡುಗೂರ ಶಿಕ್ಷಣಾ ಸಾಗಸೂ. ಶಕೂನ ಮ್ಯಾಟ್ರಿಕ್ಕನೂ ಬಗೀಹರಸು. ನೀನೂ ಬೀ.ಏ. ಮುಗಸು. ಸಾಹೇಬರು ಇದ್ದಾರ. ನವಕರಿಗೇನು ದದಾತಿ ಇಲ್ಲಾ ಅಂತs ತಿಳಿಸಿ ಹೇಳತಿದ್ದೆ. ದಾದಲ್ಯಾ ಸಾಂಗಲೀಗೆ ಹೋಗಲಿಲ್ಲಾ ಅಂದರ, ಅಲ್ಲೂ್ಯ ಅಡಚಣೀ. ನಮ್ಮ ಮಾವನವರಿಗೆ ಕೈ ಮುರ ಧಾಂಗs ಆಗತದ. ವಿಶ್ವಾಸ ಹೆಚ್ಚು, ದಾದಲ್ಯಾ ಕಡಿಮೀ ಅನೂ ಭಾವನಾ ಅವರು ತರಿಸಿಗೊಟ್ಟಿಲ್ಲಾ. ವಿಶ್ವಾಸನ ಕಲಿಯೂದು ಮುಗಿಯೂ ತನಕಾ. ಯಾರರs ಅವರ ಜೋಡಿಗೆ ಬೇಕೇಬೇಕು. ಎಲ್ಲಾ ಪಂಚೇತ್ಯದ."

"ಅಂಥಾಂಗ ಶ್ಯಾಮರಾವ್, ವಿಶ್ವಾಸಂದು, ಈ ವರ್ಷ ಮೊದಲನೇ ಎಂ.ಬಿ.ಬಿ.ಎಸ್. ಅಂದರ್‍ಯಲ್ಲs? ಸೂಟಿಗೆ ಅಂವಾ ಬಂದಿರಬೇಕಲಾ ಸಾಂಗಲೀಗೆ? ಒಮ್ಮೆ ಕರಸರಿ ಇಲ್ಲಿಗೆ ಅಂವನ್ನ. ಎಂದ ಅಂವಾ ನಾಕ ವರ್ಷದ ಕೂಸ ಇದ್ದಾಗ ನೋಡಿದ್ದೆ."

"ನಮ್ಮ ವಿಶ್ಯಾಗ ರಾವಜೀಕಾಕಾ ಅಂದರ ಮುಗದ್sಹೋತೇನ್ರಿ. ನೀವs ನೋಡೀರ್‍ಯಲಾ? ಎಂದ ಅಂವಾ ನಾಕ ವರ್ಷದಂವಾ ಇದ್ದಾ, ಅಂದs ಊರಿಗೆ, ರಾವಜೀಕಾಕಾ ಅವರ ಕಡೇ ಹೋಗಿಬಿಟ್ಟಾ. ನನ್ನ ಜೋಡೀನೂ ಅಂವಾ ಕೂಡಿ ಇಲ್ಲಾ. ಏನ ಆಗೂದು ಅಜ್ಜಾ-ಅಜ್ಜೀ ಜೋಡೀನs! ಈಗಂತೂ ವರ್ಷ ದೀಡ ವರ್ಷ ಆತು, ಮುಂಬೈಯಾಗ ಇದ್ದಾನ. ಅಲ್ಲದs ಮೆಡಿಕಲ್ ಕಾಲೇಜಿಗೆ ಸೂಟೀನೂ ಅಗದೀ ಕಡಿಮಿ. ನಾಕೆಂಟ ದಿನಾ ಪುಣೇದಾಗ ನಿಂತು ತಿರಿಗಿ ಮುಂಬೈಗೇ ಹೋಗಿಬಿಡಾಂವಾ. ಎರಡ ವರ್ಷದ ಮ್ಯಾಲಾತು, ಸಾಂಗ ಲೀಗೂ ಹಾದೇ ಇಲ್ಲಂತ."

ಶ್ಯಾಮರಾಯ ಬರೇ ಭಂಪು ಹೊಡೆಯುತ್ತಿದ್ದ. ಮುಖದ ಮೇಲೆ ಯಾವ ಚಲ-ವಿಚಲತೆ ಇಲ್ಲದೆಯೂ ಅವನ ಬುರುಡೆಯ ಗಾಡಿ ನಿತಾಂತವಾಗಿ ಉರುಳುತ್ತ ನಡೆದಿತ್ತು. ಈ ಬಹುರೂಪಿ ಯಕ್ಷ-ರಾಕ್ಷಸನ ಸಾಮರ್ಥ್ಯ ಅಸಾಮಾನ್ಯವೆಂದು ಕೊಂಡೆ. ವಿಶ್ವಾಸನ ಕೂಡ ಚಕಮುಕಿ ಹಾರಿ, ಅವನ ಬಲಿಯನ್ನೇ ತೆಗೆದುಕೊಳ್ಳುವ ಪಣವನ್ನು ಪುಕಾರಿಸಿದ ವ್ಯಕ್ತಿ—ಅವನ ಕೈಯಿಂದ ಕಪಾಳಮೋಕ್ಷ ಪಡೆದ ವ್ಯಕ್ತಿ—ಈಗ ಅದರ ನೆನಪೂ ಕೂಡ ಸಂಪೂರ್ಣ ಅಳಿಸಿದವರಂತೆ ನಿರ್ಲಿಪ್ತಭಾವನಾಗಿ ಮಾತನಾಡುವ ಪಾಂಗನ್ನು ನೋಡಿ ನನಗೇ ಅಚ್ಚರಿಯಾಯಿತು.

ಪುಣೆಯಲ್ಲಿ ನಡೆದ ದುರ್ಘಟನೆಯ ವಾಸ ಕೂಡ, ನನಗೆ ಇರಲಿಕ್ಕಿಲ್ಲ ವೆಂದು ಶ್ಯಾಮರಾಯುನ ಕಲ್ಪನೆಯಾಗಿರಬೇಕು. ಗೋವಿಂದಭಟ್ಟನ ಉಡದ ಓಡಿತ ನನ್ನಲ್ಲಿಲ್ಲವೆಂಬ ಖಾತ್ರೀ ಆಗುವ ರೀತಿಯಲ್ಲಿ, ನಾನೂ ನಾಟಕೀಯವಾಗಿ ವರ್ತಿಸಿ, ಅವನ ಮಾತಿಗೆ ನಿಂತಕಾಲಮೇಲೆ ಒಪ್ಪಿಗೆ ಕೊಟ್ಟು, ಬೆಳಗಾಂವಿಗೆ ಬಂದು ನಿಂತಿದ್ದೆ. ಅವನು ಹೇಳಿದ್ದಕ್ಕೆ ಕೌಲೆತ್ತಿನಂತೆ ಗೋಣು ಹಾಕಿದ್ದೆ. ಬೀ.ಎ. ಕ್ಲಾಸಿಗೆ ಬಂದರೂ, ಇನ್ನೂ ಧಾಬಳಿ-ಘಂಟೆ ಎಂದರೆ ಜೀವ ಬಿಡುವಂತೆ ಮಾಡುತ್ತಿದ್ದೆ. ಇದ್ದೆಲ್ಲವನ್ನೂ ತನಿಖಿಸಿದ ಶ್ಯಾಮರಾಯುನಿಗೆ ನನ್ನ 'ಏವ್ಹರೇಜ್ ಕ್ಯಾಲಿಬರ್'ದ ಕಲ್ಪನೆಯಾಗಿರಬೇಕು. ಅಂತೇ ಅವನು, ನನ್ನನ್ನು ಶಕೂನ ಲಿಕೋಣೆಗೆ, ಸಾಹೇಬರ

ಮನೆಯ ದೇವರಪೂಜೆಯ ಗಾಣಕ್ಕೆ ಬಿಗಿದು, ಪ್ರಸಂಗ ಬಂದರೆ ನನ್ನ ಫಾಯದೇ-ಗೈರಫಾಯದೇ ತೆಗೆದುಕೊಳ್ಳುವ ಅಮಿಷವಿಟ್ಟುಕೊಂಡಿರಬೇಕು. ಆದರೆ ದಾದಲ್ಯಾ ...

ತನ್ನ ಬೈಗಣ ಛಾಪಿನ ಚೊಣ್ಣದ ಕಿಸೆಯಲ್ಲಿ ಇಂಥ ಹತ್ತು ಶ್ಯಾಮರಾಯ, ಇಪ್ಪತ್ತು ಸಾಹೇಬರು, ಐವತ್ತು ರಂಗಕ್ಕರನ್ನು ಯಃಕಶ್ಚಿತ್ ಸದರಿನಲ್ಲಿ ಒಗೆದು ನಡೆದ ರಾಜಠೀವಿ ಇನ್ನೂವರೆಗಂತೂ ಯಾರಿಗೂ ಆದಂತಿರಲಿಲ್ಲ. ಆಗುವ ಸಂಭವವೂ ಇರಲಿಲ್ಲ. ದಾದಲ್ಯಾ, ಆ ಬಾಬತ್ತಿನಲ್ಲಿ ಅಜೇಯ-ಅಭೇದ್ಯನಾಗಿಯೇ ಉಳಿಯಲಿದ್ದ. ಭೋಳೇ, ಕು. ಚಿ. ಶಕೂ, 'ರೀ-ಎಕ್ಝಾಮಿನೇಶನ್'ದಲ್ಲಿ ಪಾಸಾದರೆ, ಅವನ ಜನ್ನಗುದುರೆ ಸಾಂಗಲೀಪುರಾಭಿಮುಖವಾಗಿ ಧಾವಿಸಲಿತ್ತು. ವಸೂನನ್ನು – ದಸ್ತುಗೀರ್ಯಾನನ್ನು ಎದುರು ಕೂಡಿಸಿಕೊಂಡು, ಬೆಳಗಾಂವಿಯಲ್ಲಿ ತಾನು ಮಾಡಿದ ನಾಟಕವನ್ನು ಪುನರಭಿನಯಿಸಿ ತೋರಿಸಲಿತ್ತು.

ದಾದಲ್ಯಾ ತನಗೆ ಬೇಕಾದ ಬಾತಮೀ ಸಂಗ್ರಹಿಸಿದ್ದ. ಶ್ಯಾಮರಾಯನ ಧೋರಣೆ-ನಿಲುವನ್ನು ಅರಿತುಕೊಂಡಿದ್ದ. ಸೋನಕ್ಕನ ದುರಂತ ಕಥೆಯ ರವಷ್ಟೂ ಕಲ್ಪನೆ, ಸಾಹೇಬ-ರಂಗಕ್ಕರಿಗೆ ಇಲ್ಲದಿರುವ ಬಗ್ಗೆ ಖಾತ್ರೀಮಾಡಿಕೊಂಡಿದ್ದ. ಮದ್ದು ಒಣಗಿ ತಾರವಾದ ಮೇಲೆ, ಆ ಸುರಂಗದ ಬಾಯಿಗೆ ಶ್ಯಾಮರಾಯನನ್ನು ಕೂಡಿಸಿ, ಕಿಡಿ ಸ್ಪರ್ಶಮಾಡಿ, ಅವನನ್ನು 'ಎಕ್ಸ್‌ಪೋಜ್' ಮಾಡುವ ನಿರ್ಧಾರ ಮಾಡಿಕೊಂಡಿದ್ದ. ಶ್ಯಾಮರಾಯನ ನಾಲಾಯಖತನ – ಸ್ವಾರ್ಥಸಾಧಕತ್ವ ಇವು ಬಯಲಿಗೆ ಬಿದ್ದು, ಸಾಹೇಬ-ರಂಗಕ್ಕರ ಕಣ್ಣು ತೆರೆದರೆ, ಸೋನಕ್ಕನ ವನವಾಸಕ್ಕೆ ದಿನ ತುಂಬಿ, ಅವಳ ದುರಂತಜೀವನದ ಕಥೆ ಮಂಗಳಕ್ಕೆ ತಿರಗುವದೆಂದು ಭಾವಿಸಿ, ದಾದಲ್ಯಾನ ಹುರುಪು ದ್ವಿಗುಣಿಸಿತು. ಇಲ್ಲಿ ಬಂದು ನಿಂತ ಬಗ್ಗೆ ಅವನಿಗೆ ಧನ್ಯತೆ ಎನಿಸತೊಡಗಿತು.

ಆದರೆ ಈ ಧನ್ಯತೆಯ ಸುಖವನ್ನು ಅನುಭೋಗಿಸುವ ಅವಕಾಶ ದಾದಲ್ಯಾನ ಅದೃಷ್ಟದಲ್ಲಿರಲಿಲ್ಲ. ದಾದಲ್ಯಾ ಯಾರಿಗೋ ಸುರಂಗ ಹೊಡೆಯುವ ಸನ್ನಾಹ ನಡೆಸಿದಾಗ, ಅವನ ಶಿಷ್ಯೋತ್ತಮಳೇ ಸಣ್ಣ ಪಟಾಕ್ಷಿ ಹಾರಿಸಿ ಅವನನ್ನು ಬೆಳಗಾಂವಿ ಯಿಂದ ಹದ್ದುಪಾರುಮಾಡಿಬಿಟ್ಟಳು. ದಾದಲ್ಯಾ, ಹೌಹಾರಿ ನಿಂತು, ಹಿಂದಿರುಗಿ ನೋಡಿದರೆ ಮೈಮೇಲೆ ಬಂದೀತೆಂದು, ಒಂದೇ ನೆಗೆತದಲ್ಲಿ, ಸಾಂಗಲಿಗೆ ಹಾರಿ ಬದುಕಿಕೊಂಡ. ವೈದಿಕಬ್ರಾಹ್ಮಣವಟುವಿಗೆ ಜನ ಗುದುರೆಯ ಆರೋಹಣ

ಸೌಭಾಗ್ಯವಿರಲಿಲ್ಲ. ತನ್ನ ಬಾಪ್ಪ ತ್ವಾಷ್ಟ್ರಕ್ಕೇ ಅವನು ಶರಣೆನ್ನಬೇಕಾಯಿತು.

ಕು. ಚಿ. ಶಕೂ ಸಾಹೇಬರ ಏಕಮೇವಾದ್ವಿತೀಯ ಕನ್ಯೆ. ಅಚ್ಚೆಯ ಮುಂಗಡಿಗೂಸು. ಕೆಳಗೆ-ಮೇಲೆ, ನೀರಿನಂತೆ ರೊಕ್ಕ ಹರಿಯುತ್ತಿತ್ತು. ಶಕೂನಿಗೆ ಯಾತರ ದದಾತಿಯೂ ಇರಲಿಲ್ಲ. ಆದರೆ ತಲೆಯಲ್ಲಿ 'ಚೀಜ' ಎಂಬ ಒಂದು ಪದಾರ್ಥವಿರುತ್ತದೆ. ಅದನ್ನು ಮಾತ್ರ ಸಾಹೇಬರು-ರಂಗಕ್ಕ ಮುಕ್ತಮಾನಸರಾಗಿ ಕು. ಚಿ. ಶಕೂನಿಗೆ ಕೊಡಲು ಅಸಮರ್ಥರಾಗಿದ್ದರು. ಅದನ್ನು ನನ್ನ ಕೈಯಿಂದ ಕೊಡಿಸುವ ಪ್ರಯತ್ನ ನಡೆಸಿದರು. ಆ ಚೀಜ ಎಂಬ ಪದಾರ್ಥ, ಅವಳಲ್ಲಿ ಸುಪ್ತ ಭಾಗೀದಾರನಂತೆ (ಡಾ:ರ್ಮಂಟ್ ಪಾರ್ಟ್‌ನರ್) ಸ್ತಬ್ಧವಾಗಿ ಮಲಗಿತ್ತೆಂಬ ಕಲ್ಪನೆ ಇನ್ನೂವರೆಗೆ ಅವರಿಗೆ ಬಂದಿರಲಿಲ್ಲ. ಹಾಗೆ ಬರುವದಕ್ಕೆ ಅವಕಾಶವೂ ಇರಲಿಲ್ಲ.

ಕಾರಣ —

ಸಾಹೇಬರು, ಸಾಹೇಬಕೀ ಮಾಡಿದ ಕಾಲ ಇಂದಿನ ಮಾನದಿಂದ ತೀರ ಹಳೆಯದು. ಜರಾಜೀರ್ಣವಾದದ್ದು. ಅವರ ಬಂಗಲೆಗೆ ಬರುವ ನಿತ್ಯಾವಳೀ ಪಾಗಾ – ಸಬ್‌ಡಿವ್ಹಿಜಿನಲ್ ಆಫೀಸರ್, ಓವ್ಹರ್‌ಸೀಯರ್, ಆಫೀಸಿನ ಕಾರಕೂನ ಪಟಾಲಮ್, ಅಕಾಲಿಕ ಜಠರತ್ವ ತಂದುಕೊಂಡದ್ದು. ಅವರು ಸಾಹೇಬರನ್ನು ಕಾಣಲಿಕ್ಕೆ ನಿತ್ಯವೂ ಬಂಗಲೆಯ ವಾರೀಮಾಡುತ್ತಿದ್ದರು. ಬಂದಾಗಲೆಲ್ಲ ಮುಂಭಾಗದ ಗೇಟಿನ ಬಳಿಯಲ್ಲಿ – ತೊಣಸಿಬಡಕ, ಅಡಪುಹತ್ತಿದ ಶ್ವಾನಗಳಂತೆ ಅತ್ತಿತ್ತ ಹಣಕಿಹಾಕುತ್ತ, ಸಾಹೇಬರ ಬಟ್ಲರ್ – ಅಡಿಗೆ-ನೀರಿನವ – ಕಸ-ಮುಸುರೆಯುವ – ಬಂಗಲೇ-ಚೌಕೀದಾರ – ಕಡೆಗೆ ಬಂಗಲೇ-ಮಾಳೀ ಆದರೂ ಕಣ್ಣಿಗೆ ಬಿದ್ದರೆ, ಧ್ರುವಬಾಲನಿಗೆ ಅಪ್ರಾಪ್ಯ ಪರಮಾತ್ಮನ ಅಚಾನಕ ಸಂದರ್ಶನ ಸಿಕ್ಕಂತೆ, ಬೇಭಾನರಾಗಿ, ನೇತ್ರಪಲ್ಲವಿ-ಕರಪಲ್ಲವಿಯ ಅನುನಯ-ಚಮತ್ಕಾರ ಮಾಡಿ, ಸಾಹೇಬರ ಹಾಲ್‌ಚಾಲೀ ತಿಳಿದುಕೊಳ್ಳುತ್ತಿದ್ದರು. ಸಾಹೇಬರ ಬುಲಾವಣೀ ಬಂದರೆ, ಅಂಗಿಯ ತೆಳಗಿನ ಗುಂಡಿಯನ್ನು ಮೊಟ್ಟಮೊದಲಿನ ಕಾಜಿಯಲ್ಲಿ, ಮೇಲಿನ ಗುಂಡಿಯನ್ನು ತೀರ ಕೆಳಗಿನ ಕಾಜಿಯಲ್ಲಿ ಬುಡಮೇಲಾಗಿ ತುರುಕಿಕೊಂಡು. ಎಣ್ಣೆಗಮಟ ನಾಸೀಪುಡೀಬಣ್ಣದ ಟೊಪ್ಪಿಗೆಯನ್ನು ಇನ್ನೂ ಗಟ್ಟಿಯಾಗಿ ತಲೆಗೆ ತುರುಕಿಕೊಂಡು, ಅದು ಭದ್ರವಾಗಿ ಕುಳಿತ ಬಗ್ಗೆ, ಇನ್ನೊಮ್ಮೆ. ವಾಮನನಂತೆ, ಕಾಲಿನಿಂದಲ್ಲದಿದ್ದರೂ, ಕೈಯಿಂದ ಒತ್ತಿ ನೋಡಿಕೊಂಡು. ಕೋಟಿನ ಮೂರೂ

ಬಿರಡಿಗಳನ್ನು ಬಂಧಿಸ್ತವಾಗಿಸಿ, ಉಳಿದ ಅನ್ಯಭಾಗದಿಂದ ಎದೆ ಕಾಣಿಸಬಾರದೆಂದು ವಾಮಹಸ್ತದಿಂದ ಕೋಟಿನ ಕಾಲರನ್ನು ಜೋಡಿಸಿ, ಮುದ್ದೆಮಾಡಿ, ಬಲಹಸ್ತವನ್ನು ಸಲಾಮೀ ತಯಾರಿಗೆ ಮೀಸಲಿಡಿಸಿ, ಬಂಗಲೆಯ ಪೋರ್ಚಿನ ಗೋಡೆಗೆ ನಿಂತು ಇಣಿಕಿ-ಹಣಿಕಿ ಹಾಕತೊಡಗಿದರೆ, ಯಾರು ಈ ಉತ್ಕಂಠಿತಾವಿಲಾಸರನ್ನು ನೋಡಬೇಕು ನೀವೇ ಹೇಳಿರಿ? ಈಗಿನ ಓವ್ಹರಸೀಯರ್ ಹುಡುಗರಾದರೋ – ಮೊದಲನೇ ಪಗಾರ ಕೈಗೆ ಬರುವದರಲ್ಲಿಯೇ ಹರಕಚಂದ ಮಾರಾವಾಡಿಯಲ್ಲಿ, ಉದ್ದರಿ ಲೆಕ್ಕ ಬರೆಸಿ, ನಾಕು ರಂಗೀತ-ಬುಶ್-ಶರ್ಟ, ಎರಡು ವೂಲನ್ ಪ್ಯಾಂಟು ಹೊಲಿಸಿ, ಗುಳಗುಳೀತ ದಾಡೀಮಾಡಿಕೊಂಡು, ಸ್ನೋ – ಸುಣ್ಣದ ರಾಡಿ, ಪಾವಡರ – ಬಿಳೀ ಖಡುವಿನಪುಡಿ ಮುಖಾರವಿಂದಕ್ಕೆ ಲೇಪಿಸಿಕೊಂಡು, ಟ್ರಿಮ್ ಆಗಿ, ಸಾಹೇಬರ ಇಂಟರ್‌ವ್ಯೂ ತಾವೇ ತೆಗೆದುಕೊಳ್ಳುವವರಂತೆ ಆಗಮಿಸುತ್ತಿದ್ದರು. ಆಗ ಇನ್ನೂ ಇಂಥ ಸುದಿನ ಉದಿಸಿರಲಿಲ್ಲ. ಆಗ ಬೈಗಣ ಛಾಪ ಅರಿವೆಯ ಒಂದು ಪಾಯಜಮಾ, ಒಂದು ಸ್ವಚ್ಛ ಬಿಳೀ ಶರ್ಟು ಇಷ್ಟು ಸಿಂಗಾರದಲ್ಲಿ ಹುಡುಗನಿದ್ದರೆ ತೀರಿತು. ಅವನು ಘನ ಫ್ಯಾಶನ್ನದ 'ಅಲ್ಟ್ರಾ ಮಾಡರ್ನ್' ಪ್ರತೀಕದಂತಿರುತ್ತಿದ್ದ.

ಆಗ ಸಾಹೇಬರ ಬಂಗಲೆಗೆ ಬಂದು ಹೋಗುವ ಜನ-ಜಾತ್ರೆಯಲ್ಲಿ – ಬೇಕಾದರೆ, ಆತ್ಮಸ್ತುತಿ ಎನ್ನಿರಿ, ನಮ್ಮ ಹರಕತ್ ಇಲ್ಲ – ನಾವೇ ಅಲ್ಟ್ರಾ-ಮಾಡರ್ನ್ ಅಶ್ವಿನೀಕುಮಾರರಾಗಿದ್ದೆವು. ಸಾಹೇಬರ ಮನೆಯ ಸಾಬಾಣದಲ್ಲಿ ನಿತ್ಯ ನಮ್ಮ ಅರಿವೆ ಮಡಿಯಾಗಿ ಶುಭ್ರ-ಧವಳವಾಗುತ್ತಿದ್ದವು. ತಲೆಯನ್ನು 'ಕ್ಲೋಜ್-ಕಟ್-ಕ್ರಾಪ್' ಅಲಂಕರಿಸಿತ್ತು. ಹುಷಾರೀ ತೇಜ, ಕಣ್ಣಲ್ಲಿ ಮುಖದಲ್ಲಿ ದೀಪ್ತಿಮಂತವಾಗಿತ್ತು. ಅಖಂಡ ಹತ್ತೆಂಟು ವರುಷದಿಂದ ಘೃತಸೇವನತೃಪ್ತವಾದ ದೇಹ, ಹಸ್ತಿದಂತದಲ್ಲಿ ಎರಕಹೊಯ್ದು, ಹೇಳಿಮಾಡಿಸಿದಂತಿತ್ತು. ಬೆಳಗಾಂವಿ-ಸಾಂಗಲಿಯ ಸಂಸ್ಕೃತಿ, ಕೃಷ್ಣಾ-ಕೋಯನಾ ಸಂಗಮದಂತೆ ನಮ್ಮಲ್ಲಿ ದಿವ್ಯ ಮನೋಹಾರಿಯಾಗಿತ್ತು. ಕು. ಚಿ. ಶಕೂ, ನಮ್ಮಿಂದ, ಇಂಗ್ಲೀಷ-ಸಂಸ್ಕೃತದ ಕೂಡ, ಶಕುಂತಲಾ-ದುಷ್ಯಂತ ಪ್ರಕರಣದ ಪ್ರಾಥಮಿಕ ಪಾಠವನ್ನು ಒಂದಿಷ್ಟು ಅವಗತ ಮಾಡಿಕೊಳ್ಳಲು, ದಾದಲ್ಯಾನ ಈ ದೇಹ-ರೂಪ-ಘಡಣವೂ ಕಾರಣವಾಯಿತು. ಅದಕ್ಕೆ ಅವನ ಅವಿವೇಕತನವೂ ಕಾರಣವಾಯಿತು.

ಕು. ಚಿ. ಶಕೂ ಉತ್ತಮ ರೀತಿಯಿಂದ 'ರೀ-ಎಕ್ಸಾಮಿನೇಶನ್'ದಲ್ಲಿ

ಪಾಸಾದಳು. ದಾದಲ್ಯಾನ ವಾಹವ್ವಾ ನಡೆಯಿತು. ಸಾಹೇಬರ ಪಿ.ಡಬ್ಲ್ಯೂ.ಡಿ. ಇಂಗ್ರೇಜಿ, ವೇಳೆ-ಅವೇಳೆಯಲ್ಲಿ ಜಾಗೃತವಾಗಿ, ವೇಸೂವಿಯಸ್ ಜ್ವಾಲಾಮುಖಿಯಂತೆ, "The whole credit of Shaku's success must go to ದಾದಲ್ಯಾ" ಎಂದು ಸುಖ-ಹರ್ಷದೆಸರು ಚಿಮ್ಮಿಸತೊಡಗಿತು. ದಾದಲ್ಯಾನೂ ಖುಷಿಯಲ್ಲಿ ಮತ್ತನಾದಾಗ, ತನಗರಿಯದಂತೆಯೇ ಹಾವಸೆಗಲ್ಲಿನ ಮೇಲೆ ನಡೆದು ಅನಾಮತ್ತಾಗಿ ಅಂಗಾತನ್ಹಾದ.

ಸುಮ್ಮನೇ ಕೂಡದೆ, ಕು. ಚಿ. ಶಕೂನಿಗೆ ಮ್ಯಾಟ್ರಿಕ್‌ದ ಇಂಗ್ಲೀಷ್-ಸಂಸ್ಕೃತ ಸಿಲೆಕ್ಶನ್ ತರಲು ಹುಕುಂ ಬಜಾಯಿಸಿದ. ಅಂದು ಸುಮೂರ್ತವಿದ್ದುದರಿಂದ, ತನ್ನ ಶಿಷ್ಯಮಣಿಗೆ ಪಾಠದ ಮೂರ್ತಮಾಡುವೆನೆಂದು ಹೇಳಿದ. ಅವಳೂ ದಾದಲ್ಯಾನ ಫರ್ಮಾನು ಮನ್ನಿಸಿ, ಪುಸ್ತಕ ತರಿಸಿದಳು. ದಾದಲ್ಯಾ ಅಂದು ಸಂಜೆಯು ಮುಂದೆಯೇ ಪಾಠ-ಮೂರ್ತದ ಕಾಯಿ ಒಡೆದ.

ಇಂಗ್ಲೀಷ್ ಸಿಲೆಕ್ಶನ್ ಪುಸ್ತಕವನ್ನು ಶಕೂ, ಕಣ್ಣು ಮುಚ್ಚಿ ತೆಗೆಯಬೇಕು. ಎದೆ ಬಿಚ್ಚಿ ಅಂಗಾತಾದ ಪುಸ್ತಕದ – ಬಲಭಾಗದಲ್ಲಿ ಬಂದದ್ದು, ಪದ್ಯವಿರಲಿ, ಗದ್ಯವಿರಲಿ ಅದನ್ನು ದಾದಲ್ಯಾ ಕಲಿಸಬೇಕು ಎಂಬ ಮೋಜಿನ ಕರಾರನ್ನು ಶಿಷ್ಯಮಣಿ ತಾನೇ ಹಾಕಿದಳು. ಅವಳ ಝುಲ್ಲು ಬಿಟ್ಟು ಬಹಳ ದಿನಗಳಾಗಿದ್ದವು. ಈಗ ಕು. ಚಿ. ಶಕೂನಲ್ಲಿಯ 'ಡಾರ್ಮಂಟ್-ಪಾರ್ಟನರ್' – ಸುಪ್ತ ಚೀಜು, ಜಾಗೃತವಾಗಿ ಗರುಡಭರಾರಿಯಾಗುವ ಬೇತಿನಲ್ಲಿತ್ತು. ಪದ್ಮಪಾಣಿ ಬುದ್ಧನಂತೆ ಕುಳಿತು, ನಮ್ಮ ಪ್ರಬುದ್ಧ ಶಿಷ್ಯಳು, ಪುಸ್ತಕ ತೆರೆದು, ಕಮಲನಯನದ ಪಕಳಿ ಬಿಚ್ಚಿದಾಗ ಅವಳ – ನನ್ನ ಕಣ್ಣಿಗೆ ಬಿದ್ದ – ಬಲಭಾಗದಲ್ಲಿಯ ಉಕ್ತಿ-ಮುಕ್ತಕ: "I fear thy kisses, gentle maiden"

ಎಂಬ ಪ್ರೇಮವೀರ ಶೆಲ್ಲಿಯ ಸಾಜೂಕು ಮಾತು. ದಾದಲ್ಯಾ, ಈಗಿನ ಬೀಟೀ ಬುದ್ಧಿವಂತರಂತೆ ಇಂಗ್ರೇಜಿಯನ್ನು ಕನ್ನಡದಲ್ಲಿ ಕಲಿಸುವ ಗೋತ್ರದವನಲ್ಲ. ಝುಲ್ಲು ಬಿಟ್ಟ ಶಿಷ್ಯಳಿಗೆ ಶೆಲ್ಲಿಯ ಏರಿಯಲ್ ಧರ್ತಿಯಲ್ಲಿಯೇ ಅವಳು ದಂಗಾಗುವಂತೆ – ಆ 'ಕಿಸಿಸ್' ಸುಧೆಯ ಅರ್ಕದೀದ ಗುಂಗಾಗುವಂತೆ ಅವಳ 'ಜಂಟಲ್ ಮೇಡನ್‌ತ್ವ' ಜಾಗರಿಸಿದ. ಕು. ಚಿ. ಶಕೂ ಈಗ ಮ್ಯಾಟ್ರಿಕ್ಕಿಗೆ ಬಂದಿದ್ದರೂ ಹದಿನೇಳು – ಹದಿನೆಂಟು ಪ್ರಾಯದವಳಿದ್ದಳು. ಹರಾಫುರಿಯ ಮೇಡನ್ ಆಗಿದ್ದಳು. 'ಕಿಸಿಸ್' ಅಂದರೇನುಂಬುವದನ್ನು, ವಾರದಲ್ಲಿ ಏರಡ್ಮೂರು ಸಲ,

ವಾಡಿಯಾ ಸಿನೇಮಾದ ತಾರೆಯನ್ನು, "20th Century Fox"ದವರ ನಟಿಯುರನ್ನು ರಜತಪರದೆಯ ಮೇಲೆ ನೋಡಿ, ಅವಗತಮಾಡಿಕೊಂಡಿದ್ದಳು. ಅದರಲ್ಲೇನು ಮಹಾ ಎನ್ನುವ ನಿರ್ಲಕ್ಷ್ಯಭಾವದಿಂದ —

"ದಾದಲ್ಯಾ, ಒಂದಿಷ್ಟು ಮುದ್ದು ಕೊಟ್ಟರ, ಮೈಲಿಗಿ ಆದವರ ಗತೀಲೇ, 'I fear thy kisses' ಅಂತs ಯಾಕ ಅಂತಾನ ಶೆಲ್ಲೀ?"
ಪ್ರುಚ್ಛೆಯು ಸರಳನ್ನು ಎಸೆದಳು.

"ಶಕೂ, ಶೆಲ್ಲೀ, ಭಾರೀ ಚಾವಟಾ. ಎಲ್ಲಾ ಬಗೀಹರಿಸಿದ ಮ್ಯಾಲ ಸಾಜೂಕತನಾ ತೋರಸಾಂವಾ. ಅಂವಗೇನು ಮಡೀ-ಮೈಲಿಗಿ, ವಿಧೀ-ನಿಷೇಧಾ ಇಲ್ಲಾ. ಈ ಬಾಬತ್ತಿನ್ಯಾಗ ಅಜೀರ್ಣ ಆಗೂತನಕಾ ಯಾವುದೋ ಇಸಮಿನ ಮುದ್ದು ತಗೊಂಡಾನ. ಸಾಕಾಗೂತ್ಲೇ, 'I fear thy kisses' ಅಂತ ಒಂದ ಸಾಲ ಗೀಚ್ಯಾನ. ಯಾಕ 'I fear thy kisses' ಅನ್ನೂದಕ ಕಾರಣಾ ನೋಡಿದಿಲ್ಲೋ ಹ್ಯಾಂಗ ಕೊಟ್ಟಾನ? ಅದಕs ಅಂವಾ ಚಾವಟ ಇದ್ದಾನಂದೆ."

ಅಂದು ನಾವು ಪರೀಟಿ ಘಡಿಯ ಇಸ್ತ್ರಿಯ ಶರ್ಟ-ಪಾಯಜಾಮಾ-ಭೂಷಣರಾಗಿದ್ದೆವು. ಮೊಳಕೆಯಂತೆ ಎದ್ದ ತಲೆಗೂದಲನ್ನು, ಕು. ಚಿ. ಶಕೂನ, ಬ್ರಿಲಿಯಂಟಾಯಿನ್ನು – ಕೋಮಿನಿಂದ ಸಾದುಮಾಡಿ ಓರೆಯಾಗಿ ಹಿಕ್ಕಿಕೊಂಡಿದ್ದೆವು. ಅವಳು ಪರೀಕ್ಷೆಯಲ್ಲಿ ಪಾಸಾದ ಅಭಿಮಾನವಂತೂ ನಮ್ಮ ನಖ-ಶಿಖಾಂತ ಕಾರಂಜಿಯನ್ನು ಪುಟಿಪುಟಿಸುತ್ತಿತ್ತು. ಶೆಲ್ಲಿಮಹಾಕವಿ, ಕಣ್ಣಲ್ಲಿ ಬಂದು, ತುಟಿಯಲ್ಲಿ ವಿರಾಜಮಾನನಾಗಿದ್ದ. ಕು. ಚಿ. ಶಕೂ ಅಧೀರಳಾಗಲು, ಉತಾವಿಳವಾಗಲು, ಮದನಮನೋಹರ ಪಾಂಗಿನಲ್ಲಿ, ಕಾಮ-ರತಿಯರು ಜೋಡಾಗಿ ಬಂದು ಶರ ಪ್ರಯೋಗದ ಧಾವತಿಪಡುವ ಅಗತ್ಯವಿರಲಿಲ್ಲ. ಬೇಟೆ ಎದ್ದಿತ್ತು. ನಾಯಿಯೂ ತಯಾರಾಗಿತ್ತು. ಶಕೂ, ಪಾಠ-ಮೂರ್ತಕ್ಕೆ ಬರುವಾಗ ಸರ್ವಸಿಂಗಾರಿಯಾಗಿಯೇ ಬಂದಿದ್ದಳು. ಹಿಂದೆ ಅವಳಲ್ಲಿ ಕಾಣದಿದ್ದ, ತೋರಿಸಲೆಂದು ತವಕಿತವಾಗಿದ್ದರೂ, ನಾವು ನೋಡದಿದ್ದ, "ಏನೋ" ಹೊಸತನ – ಉಲುಕೋಚಿ ವಿಲಾಸ ಇಂದೇ ಕಾಣತೊಡಗಿತು. ನಮ್ಮ ನಾಲಿಗೆ ಅಚಾನಕವಾಗಿ – ನಮಗರಿಯದಂತೆ, ಹೃದಯವನ್ನು ಬರಿದುಮಾಡಿತು —

"I fear thy kisses ಅಂತs ನಾ ಅಂದರೂ, ಶಕೂ, ನೀ ಮಾತ್ರ, " 'Thou needs't not fear mine' ಅಂತನs ಅನ್ನು."

ಮಾತು ಮಿಂಚಿ ಘಾತವಾಯಿತು.

"I never fear your kisses ದಾದಲ್ಯಾ."

ಶಕೂ, ಏನೋ ಮಟಮಟಿಸಿ, ನನ್ನ ಮುಖವನ್ನು ತನ್ನ ಅಂಗೈರಂಗದಲ್ಲಿ ಹಿಡಿದು ಲಟಲಟನೆ ಮುದ್ದಿಸಿಬಿಟ್ಟಳು. ನಾನೂ ಅವಳ ಕೊರಳ ಸುತ್ತು ಕೈ ಸುತ್ತಿ, ಮುಖದಲ್ಲಿ ಮುಖವಿರಿಸಿ ಆ ಮಜಾದ ಮಾಸಲೇ ತೋರಿಸಿದೆ.

ದಾದಲ್ಯಾ, ವಾತ್ಸ್ಯಾಯನರ ಗರಡಿಯಲ್ಲಿ ಅ – ಆ ಗೀಚಿದ.

ಅಧರಮಿಲನದಿಂದ ತೊಟ್ಟಿಕ್ಕಿದ್ದ ನಿಶಾ ಇಳಿಯಿತು. ಅಮೃತಕುಂಭವನ್ನು ಬೋರಲಾಗಿ ಹಾಕಿದಂತಾಯಿತು. ಆ ಖಾಲೀ ಕುಂಭದಲ್ಲಿ ಪ್ರಜ್ಞೆಯ ಗಾಳಿ ಬೀಸತೊಡಗಿತು. ದಾದಲ್ಯಾನ ಕಪಾಳಿಗೆ, ವಿಶ್ವಾಸನ ಪತ್ರ ತೆಪರಾಕಿ ಹೊಡೆದಂತಾಯಿತು.

ಉದ್ದುನೀರಿಗೆ ಇಳಿಯಬೇಡವೆಂದು, ಹಿಂದೆಯೇ ವಿಶ್ವಾಸ ಜಾಗರಿಸಿದ್ದ. ನೀಗದ ಲಿಗಾಡು ಕೊಳ್ಳಿಗೆ ಬಿದ್ದೀತೆಂದು ಸೂಚಿಸಿದ್ದ. ಗಮಜಿನಲ್ಲಿದ್ದ ದಾದಲ್ಯಾ ಆ ಸೂಚನೆಯನ್ನು ಅಲಕ್ಷಿಸಿ ಮದಾಂಧನಾಗಿದ್ದ. ತನ್ನ ರೂಪದ – ವಿದ್ಯೆಯ ಜಂಬದ ಝುಳದ ಮೇಲೆ, ಬಾಲಿಶ ಶಕೂನ ಜೀವಕುಸುಮವನ್ನು ಹಿಡಿದ. ನಿಷ್ಪಾಪ ಕುಮಾರಿಯ ಜೀವಕಲಿಕೆಗೆ ಹರಿತ ನಖದ ದಂಶ ಮಾಡಿಸಿದ.

ತನ್ನಿಂದ ಘಟಿಸಿದ ಹೀನಕೃತಿಯಿಂದ ಅವನಿಗೇ ಲಜ್ಜೆ ಬರತೊಡಗಿತು. ಕಣ್ಣು ಪರಿ ಮೆಲ್ಲನೆ ಬಿಡತೊಡಗಿತು. ದಾದಲ್ಯಾ, ತನ್ನ ಶಕೂನ ಸಂಬಂಧ ಅಳೆಯತೊಡಗಿದ. ಅವಳು ತನಗೆ ಶಿಷ್ಯಳಾಗಿ, ವಿದ್ಯಾದಾನ ಸ್ವೀಕರಿಸಲು ಬಂದಳು. ತಾನು ಗುರುವಾಗಿ ಅದನ್ನು ಅವಳಿಗೆ ಮುಕ್ತಮನಸ್ಸಿನಿಂದ ಧಾರೆ ಎರೆದ. ಇದನ್ನು ಮೂಸವಂದು ತಾನು ಶಕೂನ ಕೂಡ, ಬ್ರಹ್ಮ-ಸರಸ್ವತೀ ನಾತೇ ಜೋಡಿಸಬಾದಾಗಿತ್ತು. ಶಕೂ, ನಾಳೆ ದೊಡ್ಡವಳಾಗಿ ದೊಡ್ಡ ಮನೆಗೆ ಹೋಗುವ ಹೆಣ್ಣು. ತಾನು ಕಂಗಾಲ ವೈದಿಕಬ್ರಾಹ್ಮಣ. ಅವಳಿಗೆ – ತನಗೆ ಜಮೀನ ಅಸ್ಮಾನಿನ ಅಂತರ. ಅವಳು ಬಾಲಿಶ ಹರಾಹುರಿಗೆ ಬಿದ್ದರೆ ತಾನೂ ಬೀಳಬಾರದಾಗಿತ್ತು. ಕರ್ಮ-ಧರ್ಮಸಂಯೋಗದಿಂದ, ನಾಳೆ, ಅವಳು ಸುರೇಶನ ಹೆಂಡತಿಯಾಗಿ ಅಂತಃಪಟ ಹಿಡಿಸಿಕೊಳ್ಳಲು ನಿಂತರೆ, ತಾನು ಯಾವ ಮುಖದಿಂದ ಅವರ ಪೌರೋಹಿತ್ಯ ನಡೆಸುವ ಧೈರ್ಯ ಮಾಡಬೇಕು? ಯಾವ ಬಾಯಿಂದ, 'ಅರ್ಥೇಂಚ – ಕಾಮೇಚ' ಸಪ್ತಪದಿ ಹೇಳಿಸಬೇಕಾದೀತು?

ದಾದಲ್ಯಾ, ಇನ್ನೂ ಕಾಲು ಜಾರಿಲ್ಲ; ಕಣ್ಣಿಗೆ ಕಾಮದ ಮಂಜು ಅಡರಿದೆ. ಮನಸ್ಸಿಗೆ ಮಾದಕ ನಂಜು ತೊಡರಿದೆ. ಅದನ್ನು ಹರಿದು ಬಿಸಾಡು. ತೊಳೆದು ಜಳ ಜಳ ಮಾಡು. ಸೋನಕ್ಕನ ಮಂಗಳಕ್ಕೆಂದು ಬಂದು ಇಲ್ಲಿ ತಳ ಊರಿದವ ನೀನು. ಅದನ್ನು ಮರೆತು, ನೀನೇ ಸುರಿಗೆಯಲ್ಲಿ ಸಿಂಗಾರಾಗುವ ತಯಾರಿ ನಡಿಸಿರುವೆ. ನಿಸ್ತರಿಸದ ಭಾನಗಡಿ ಕೊಳ್ಳಲ್ಲಿ ಬಿದ್ದರೆ, ಸುರಿಗೆಯ ಬದಲು ಸಿದಿಗೆಯಲ್ಲಿ ವಿರಾಜಮಾನನಾಗಬೇಕಾದೀತು. ದಾದಲ್ಯಾ, ನಿನ್ನ ಪಾಡು, ನಾಯಿಯ ಪಾಡಾದೀತು. ರಾವಜೀಕಾಕಾ, ಬಾಗಿಲಲ್ಲಿ ನಿಲ್ಲಿಸಿಗೊಡಲಿಕ್ಕಿಲ್ಲ. ವಸೂ, ಬಾಗಿಲು ಮುಚ್ಚಿಕೊಂಡಾಳು. ಗೋವಿಂದಭಟ್ಟ ಗತಪ್ರಾಣನಾದಾನು. ಸಾಹೇಬರು – ರಂಗಕ್ಕನಿಗೆ ಊರಲ್ಲಿ ಮೋರೆ ಉಳಿಯಲಿಕ್ಕಿಲ್ಲ. ಉಂಡ ಮನೆಯ ಗಳಗಳ ಗಣೀತವನ್ನು ದಾದಲ್ಯಾ, ಮಾಡಬೇಡ. ಶಕೂನ ಸುಪ್ತಚೇತನೆಯನ್ನು ಕೆದಕಿ-ಕೆದರಿ ಉರಿ ಎಬ್ಬಿಸಬೇಡ. ಬರೇ ನಿನ್ನ ಒಂದೇ ಕೈಯಲ್ಲಿ ಅವಳ ಮೃದು-ಕೋಮಲ ಜೀವಸುಮವೂ ಆ ಧಗಿಯಲ್ಲಿ ಹುರಪಳಿಸುವಂತೆ ಮಾಡಬೇಡ. ಇನ್ನೂ ಏನೂ ಕೈಮೀರಿಲ್ಲ. ಕೈ ಅಳವಿನಾಚೆಗೆ ಧಾವಿಸಿಬಿಡು. ಶಕೂ ಪಾಸಾದಳು. ನಿನಗೆ ಕೀರ್ತಿ ಬಂತು. ಅದು ನಿತ್ಯ ಹಸಿರು ಮುರಿಯುತ್ತಿರಲಿ, ಮಲಮಲಿಸುತ್ತಿರಲಿ. ದಾದಲ್ಯಾ, ಪ್ರೇಮ-ಪ್ರೀತಿ, ದಾಂಗುಡಿಬಿಟ್ಟು ನಿಧಾನವಾಗಿ, ನಿವಾಂತವಾಗಿ ಬೆಳೆಯುತ್ತದೆ. ಕಾಮ, ಕರಿಕೆ-ಕಳ್ಳಿಯಂತೆ ಅಸ್ಥಾನದಲ್ಲೂ ಅವಾಢವ್ಯವಾಗಿ ಕೈಕಾಲು ಚಾಚುತ್ತದೆ. ಅದರ ಸಮೂಲ ನಾಶ ನಿನಗೆ ನಿಸ್ತರಿಸದಂತಾದೀತು. ಜಾಗ ಬಿಡು, ದಾದಲ್ಯಾ, ಈ ಜಾಗ ಬಿಡು. ನಿನ್ನ ನಿರ್ಗಮನದಿಂದ, ಶಕೂ – ನೀನು, ಇಬ್ಬರೂ ಬದುಕಬಹುದು, ಬಾಳಬಹುದು. ನಿಮ್ಮ ಜೀವನ-ಮಂಗಳ ಅದರಲ್ಲಿದೆ. ನಿನ್ನ ಕಾಯಂ ನಿರ್ಗಮನದಲ್ಲಿದೆ. ಈ ಮನೆಯ – ಶಕೂನ ತ್ಯಾಗದಲ್ಲಿದೆ. ಆ ತ್ಯಾಗದಲ್ಲಿಯೇ ಖಚಿತ, ನಿನ್ನ ಅವಳ ಕಲ್ಯಾಣವಿದೆ.

ದಾದಲ್ಯಾ ಅಂತರ್ವಾಣಿಯ ಕರೆಗೆ ಓಗೊಟ್ಟು, ಸಾಹೇಬರು-ರಂಗಕ್ಕನನ್ನು ನಿರುಪಾಯವೆಂದು ಅಗಲಿ, ಶಕೂನನ್ನು ಗತ್ಯಂತರವಿಲ್ಲವೆಂದು ತೊರೆದು, ಎರಡು ತಿಂಗಳ ಋಣಾನುಬಂಧದ, ಮಾತೃ-ಪಿತೃವಾತ್ಸಲ್ಯದ ಕಗ್ಗಂಟು ಹರಿದುಕೊಂಡು ಬೆಳಗಾಂವಿಯನ್ನು ಬಿಟ್ಟ.

ಸಾಹೇಬರು, ರಂಗಕ್ಕ, ನಿವೃತ್ತ ಡಿ. ಡಿ. ಸಿ. ಠೋಮರೇಮಾಮಾ, ದಾದಲ್ಯಾನನ್ನು ಜಡಮನಸ್ಸಿನಿಂದ ಬಿಡಲಾರದೆ ಬೀಳ್ಕೊಟ್ಟರು. ಸಾಹೇಬರು,

ದಾದಲ್ಯಾನಿಗೆ ವರುಷಕ್ಕೆ ಸಾಲುವಷ್ಟು ಅರಿವೆ-ಅಂಚಡಿ ಹೊಲಿಸಿಕೊಟ್ಟರು. ಇದು ಶಿಕೋಣೀ ಫೀ ಅಲ್ಲ – ನಿನ್ನ ಪಗಾರವೂ ಅಲ್ಲ – ದಾದಲ್ಯಾ ನಿನ್ನ ಅಡಚಣೆಗೆ, ಅನುವು-ಆಪತ್ತಿಗೆ ಇರಲಿ ಎಂದು ರೋಖು ನೂರು ರೂಪಾಯಿ ಕೊಟ್ಟರು. ತಪ್ಪದೆ ಪತ್ರ ಬರೆದು ಕುಶಾಲೀ ತಿಳಿಸುತ್ತಿರು ಎಂದು ತಾಕೀತು ಮಾಡಿದರು. ನಮ್ಮ ಅವ್ವನಿಗೆ ಇರಲೆಂದು, ರಂಗಕ್ಕ ಎರಡು ಭಾಂಡು ಕೊಡಿಸಿ ಕೊಟ್ಟರು. ತನ್ನ ಕೋಣೆಗೆ ಕರೆದು, ಕೊನೆಯ ಗಳಿಗೆಯಲ್ಲಿ, ಶಕೂ, ಕಣ್ಣೀರು ತಂದು —

"ದಾದಲ್ಯಾ, ನನ್ನ ನೆನಪ ಇರಲಿ"

ಎಂದು ಸ್ವಾಕ್ಷರಿ ಮಾಡಿ, ತನ್ನ ಭಾವಚಿತ್ರ ಕೊಟ್ಟಳು. ಹದಿನೇಳು ವರುಷದ ಆ ಮುಗ್ಧ ಮನೋಹಾರೀ ಜೀವದ ಭಾವಚಿತ್ರ ವಾತ್ಸಲ್ಯದ ಜೀವಂತ ಪ್ರತೀಕವಾಗಿ ಇಂದಿಗೂ ಶಾಬೂತಾಗಿ ದಾದಲ್ಯಾನಲ್ಲಿದೆ.

ದಾದಲ್ಯಾ ತನಗೆ ಯಾರ ಋಣಮುಕ್ತಿಯೂ ಇಲ್ಲವೆಂದು, ಸಾಹೇಬರ, ರಂಗಕ್ಕನ, ಠೋಮರೇಮಾಮಾ ಅವರ ಪಾದಗಳನ್ನು ಅಶ್ರುತರ್ಪಣದಿಂದ ನೆನಿಸಿ, ಶಕೂನನ್ನು ಸೋದರವಾತ್ಸಲ್ಯದಿಂದ ನೇವರಿಸಿ, ಬೆಳಗಾಂವಿಯ ನಿರೋಪ ತೆಗೆದುಕೊಂಡ.

## ಮೂರು

ನಮ್ಮೂರ ಗೌಡರಿಗೆ ತಮ್ಮ ಮಕ್ಕಳನ್ನು ಹಳ್ಳಿಯಲ್ಲಿಟ್ಟು ಅಡ್ನಾಡಿ ಮಾಡುವದಕ್ಕಿಂತ ಶಾರದಲ್ಲಿಟ್ಟು ಕಲಿಸಿ ಮುಂದೆ ತರುವದು ಸೂಕ್ತವೆಂದು – ಸುಧಾರಿತ ಲಕ್ಷಣವೆಂದು ಕಂಡುಬಂದಿತು. ತಮ್ಮ ದೋಸ್ತ ರಾವಜೀಕಾಕಾ ಅವರ ಸಲಹೆ ಕೇಳಿದರು. ಬೆಳಗಾಂವಿಯಲ್ಲಿ ಮನೆಮಾಡಿ, ಹುಡುಗರ ದೇಖರಖೀಗೆ ಸಣ್ಣ

ಅಥವಾ ದೊಡ್ಡ ಗೌಡತಿಯನ್ನು ಇಡುವದು ಒಳ್ಳೆಯದೆಂದು ಕಾಕಾ ಸೂಚಿಸಿದರು. ಗೌಡರ ಪೇಢೀ ಮುಂಚಿನಿಂದಲೂ ಬೆಳಗಾಂವಿಯಲ್ಲಿ ಇದ್ದೇ ಇತ್ತು. ತಮಗೆ ಹೋಗಿ ಬಂದು, ಅಲ್ಲಿ ಇಲ್ಲಿಯ 'ಮ್ಯಾಣೇಜ್‌ಮೆಂಟ್' ಮಾಡಲಿಕ್ಕೆ ಅನುಕೂಲವಾದಂತಾಯಿತೆಂದು, ಅವರು, ಬೆಳಗಾಂವೀ ಗೃಹದ ಉದ್ಘಾಟನಾ ಸಮಾರಂಭವನ್ನು ಗೋವಿಂದಭಟ್ಟ ನಿಶ್ಚಯಿಸಿ ನಿರ್ಧರಿಸಿದ ಸುಮೂರ್ತದಲ್ಲಿ ಅವನ ಸ್ವಹಸ್ತದಿಂದ ಜರುಗಿಸಿಯೇಬಿಟ್ಟರು.

ಗೌಡರ ಮೊದಲ ಇಬ್ಬರು ಹೆಂಡಂದಿರು ಅಪತ್ಯರಹಿತರಾಗಿಯೇ ತೀರಿಕೊಂಡಿದ್ದರು. ಈಗ ಹಯಾತ ಇದ್ದ–ನಂಬರ ಒಂದು, ಅನುಕ್ರಮನಂಬರು ಮೂರು – ಹೆಂಡತಿಯಲ್ಲಿ ಮಕ್ಕಳಾಗುವ – ಅಂದರೆ – ವಂಶಕುಲಲಲಾಮ ಗಂಡಸು-ಮಕ್ಕಳಾಗುವ ದಾರಿಯನ್ನು ಐದಾರು ವರುಷ ಕಾದು ನೋಡಿದರು. ಅವರಿಗೆ ಹಯಾತ ನಂಬರ ಒಂದು – ಅನುಕ್ರಮನಂಬರು ಮೂರನೇ ಹೆಂಡತಿಯಲ್ಲಿ, ಕಣ್ವಋಷಿಯ ಜಂಬೂಫಲದಂತೆ, "ಗಂಗಿ" ಏಕಮಾತ್ರ ಕನ್ಯಾಫಲವಾಗಿ ದೊರೆತಳು. ನಾನು, ವಿಶ್ವಾಸ, ಗಂಗಿ ಕೂಡಿ ಆಡಿ ಬೆಳದದ್ದರಿಂದ ಈ ಸಲಿಗೆಯ ಪ್ರಯೋಗಸಲ್ಲಾಪ ಮಾಡಿದ್ದೇನೆ. ಈ ಕಾದಂಬರಿಯನ್ನು, ಯದಾ-ಕದಾಚಿತ್ ಓದುವ ದುರ್ಧರ ಪ್ರಸಂಗ ಬಂದರೆ, ಗಂಗಿಯ ಗಂಡ, ಈ ಪ್ರಯೋಗವನ್ನು ಉದಾರಾಂತಃಕರಣದಿಂದ ಕ್ಷಮಿಸುವನೆಂಬ ಭರವಸೆ ಇದೆ, ಇರಲಿ. ಈ ಗಂಗಿಯ ಅವತಾರಕಾರ್ಯವಾದ ಮೇಲೆ, ಗೌಡತಿ ಬಂಜೆ-ಲಕ್ಷಣ ತೋರಿಸಿದರು. ಗೌಡರು ಮತ್ತೆ ಹೊರಗಿನ ಹೆಣ್ಣು ತಂದು ಮನೆಯಲ್ಲಿ ಸವತೀಮತ್ಸರದ ವಿಷಬೀಜವನ್ನು ಬಿತ್ತಬಾರದೆಂದು ಪ್ರೋಕ್ತ ವಿಚಾರಮಾಡಿ, ಹಿರೇಗೌಡತಿ, ಮದುವೆಗೆ ನೆರೆದು ನಿಂತ, ತಮ್ಮ ತಂಗಿಯನ್ನೇ ಗೌಡರಿಗೆ ತಂದು, ಧಾರೆಯೆರೆದು, ಹಯಾತ ನಂ. ೨. ಅನುಕ್ರಮ ನಂಬರು ನಾಲ್ಕಕ್ಕೆ ಹೆಂಡಿರ ಮಾಲೆಯನ್ನು ಮುಗಿಸಿದರು. ಈಗ ಅಕ್ಕ-ತಂಗಿ ಒಂದೇ ಗಿಡದ ಆಶ್ರಯದಲ್ಲಿ ಬೆಳೆದು ಬಾಳುತ್ತಿದ್ದಾರೆ. ಅವರಿಗೆ ಶುಭಮಸ್ತು, ಕಲ್ಯಾಣಮಸ್ತು, ಎಂದು ಹೇಳುತ್ತೇವೆ. ಇರಲಿ.

ಸಣ್ಣ ಗೌಡತಿ ವಯಸ್ಸಿನ ಮಾನದಿಂದ, ಉತ್ಸಾಹದ ಮಾನದಿಂದ ಗೌಡರ ಅಭಿಷಿಕ್ತರಾಣಿಯಾದರು. ಹಿರೇಗೌಡತಿ ರಿಕಾಮು ವೇಳೆಯನ್ನ ಹಾಕದೆ ಗೌಡರ ಆಸ್ತಿಯ ಅಭಿವೃದ್ಧಿಯೋಜನೆಗೆ ತೊಡಗಿದರು. ಗೌಡರಿಗಿಂತ ಅವರಿಗೇ ಹೆಚ್ಚಾಗಿ, ಈ ಅವಾಢವ್ಯ ಆಸ್ತಿಯ ಸೂಕ್ಷ್ಮ ಪರಿಚಯ – ಶಿಸ್ತ ಮ್ಯಾಣೇಜಮೆಂಟ

ಗೊತ್ತಿದೆ. ಇದರಿಂದಾಗಿ ಬೆಳಗಾಂವಿಯ ಮನೆಯಲ್ಲಿ ಹುಡುಗರ ಕೂಡ, ಸಣ್ಣ ಗೌಡತಿ ಇರುವದೆಂದು ಠರಾವಾಗಿ, ದೊಡ್ಡ ಗೌಡತಿ ಊರ ಮನೆಯಲ್ಲಿ ನಿಲ್ಲು ವಂತಾಯಿತು. ಗೌಡರು, ಮಗ್ಗದಲ್ಲಿಯ ಲಾಳದಂತೆ, ಅತ್ತಿಂದಿತ್ತ ಇತ್ತಿಂದತ್ತ ನಿರಾಯಾಸವಾಗಿ, ನಿಃಶಂಕವಾಗಿ ಅಲೆದಾಡಲು ಮೋಕಳೀಕರಾದರು.

ಗೋವಿಂದಭಟ್ಟ, ಗೌಡರ ನರ್ಮ ಸಚಿವ. ಗೌಡರ ಯೋಜನೆ-ಹಂಚಿಕೆಯ ಅಲಿಖಿತ ರೆಕಾರ್ಡಕೀಪರ್. ಗೌಡರ ಬೆಳಗಾಂವೀ ಮನೆಯ ಹಂಚಿಕೆ ಕಾರ್ಯಗತ ವಾಗುವ ಮುನ್ನ, ಗೌಡರೇ ಗೋವಿಂದಭಟ್ಟನಿಗೆ ಹೇಳಿದರು:

"ಭಟ್ಟಾ, ನಿನ್ನ ಎರಡ ಪಾರಗೋಳ ಯವಸ್ಥಾ ಏನ ಮಾಡಿದೀ? ನಮ್ಮ ತಾಬಂಡೀ ಊಟಾ ನಿಮಗ ನಡಿಯೂದಲ್ಲಾ. ಇಕಾ, ಓದಾಕ, ಬರೆಯಾಕ, ಮಲಗಾಕ, ನಮ್ಮ ಮನ್ಯಾಗಿನ ಒಂದ ಕ್ವಾಣೀ ಬಿಟ್ಟಕೊಡತೇನಿ. ನಮ್ಮ ವಕೀಲರ ಮನ್ಯಾಗ ಒಬ್ಬನ್ನ, ನಾಈಕ ವಕೀಲರ ಮನ್ಯಾಗ ಒಬ್ಬನ್ನ ಇಡೂ ಯವಸ್ಥಾ ಮಾಡತೀನಿ. ಅವೂ ಕಲಿತು ಮುಂದ ಬರಲಿ, ದಾದಲ್ಯಾನ್ಹಾಂಗs."

ಗೌಡರು, ಗೋವಿಂದಭಟ್ಟನ ಪುತ್ರದ್ವಯ "ಪಾರಗೋಳ" ಸಮಸ್ಯೆ ಬಿಡಿಸಿದರು. ಆ ಹುಡುಗರೂ "ಹಿರೇ ಅಕ್ಕನ ಚಾಳಿ ಮನೆಯಂತ ಮನೆಯಲ್ಲಾ" ಅನ್ನವಂತೆ, ದಾದಲ್ಯಾನ, ಥಾಬಳೀ-ಘಂಟೆ-ಅಭ್ಯಾಸದ ದಾರಿಯಲ್ಲೆ ನಡೆಯತೊಡಗಿದರು.

ಗೋವಿಂದಭಟ್ಟ ತನ್ನ ಸಮಸ್ಯಾಪರಿಹಾರದ ವೃತ್ತಾಂತವನ್ನು, ರಾವಜೀ ಕಾಕಾ ಅವರಿಗೆ ಬರೆದು ತಿಳಿಸಿದ್ದರ ಕೂಡ, ದಾದಲ್ಯಾ ಸೂಟಿಯಲ್ಲಿ ಕೂಡ, ನಿರು ದ್ಯೋಗಿಯಾಗದೆ, ನೂರು ರೂಪಾಯಿ – ಎರಡು ಭಾಂಡು ಗಳಿಸಿದ ವಿಷಯವನ್ನೂ ತಿಳಿಸಿದ್ದ; ತಿಳಿಸಿದ್ದನೆಂದರೆ, ತಾನೇ ಬರೆದು ತಿಳಿಸಿರಲಿಲ್ಲ. ನನ್ನ ತಮ್ಮನ ಕಡೆಯಿಂದ ಪತ್ರ ಬರೆಸಿಸಿದ್ದ. ಹಾಗೆ ನೋಡಿದರೆ ಗೋವಿಂದಭಟ್ಟನಿಗೆ – ಬರವಣಿಗೆಗೆ ಅಡ್ಡ ಬೆಂಕಿ ಹಾಯುವದಿಲ್ಲ. ಎರಡರದೂ ಎಣ್ಣೆ-ಶೀಗೆಯ ನಾತೇ! ಎಷ್ಟೇ ಕಂಠ ಶೋಷವಾದರೂ ಸರಿ, ಗೋವಿಂದಭಟ್ಟ, ನಿರಾಯಾಸವಾಗಿ ಹತ್ತು ಸಲ ಭಾಗವತ ಪಾರಾಯಣ ಮಾಡಿಯಾನು. ಆದರೆ ಹತ್ತು ದಿನ ಕುಳಿತು, ನಿಂತು ಲೆಕ್ಕಣಿಯ ಕೂಡ ಕುಸ್ತಿ ಹಿಡಿದರೂ "ಭಾಗವತ"ವೆಂಬ ನಾಕು ಅಕ್ಷರ ಬರೆಯುವದರಲ್ಲಿ ಬವಳಿ ಬಂದು ಬಿದ್ದಾನು. ಗೋವಿಂದಭಟ್ಟನಿಗೆ ಅಂಟಿದ ಈ ಲೇಖನ-ಶಾಪ ಒಂದು ರೀತಿಯಿಂದ ವರವೇ ಆಗಿದೆ. ಇಲ್ಲದಿದ್ದರೆ ಅವನ ವೇಳೆ-ಅವೇಳೆಯಲ್ಲಿಯ ಪತ್ರ ವ್ಯವಹಾರ ಬಹಳ ಭಾನಗಡಿಗೆ ಕಾರಣವಾಗುವ ಸಂಭವವಿತ್ತು.

ಗೋವಿಂದಭಟ್ಟ ತಿಳಿಸಿದ ಈ ಗಳಿಕೆಯ ಕಥನವನ್ನು ರಾವಜೀಕಾಕಾ ಅವರಿಗೆ ಸಮಕ್ಷಮದಲ್ಲಿ ನಿವೇದಿಸುವ ಅದೃಷ್ಟ ನಮಗೆ ಬಲು ಬೇಗ ಬಂದಿತು. ಕಾರಣ, ತಮ್ಮಾಜಿಯ ಕಿರುಕುಳಕ್ಕೆ ರಮಾಕಕ್ಕಿ ಬಹಳ ಬೇಸತ್ತಿದ್ದರು. ಅವನ ಸೆರೆ ಬಿಟ್ಟರೆ ಸಾಕೆಂದಿದ್ದರು. ಅಷ್ಟೇನೂ ವಯಸ್ಸಾಗಿರದಿದ್ದರೂ, ತಮ್ಮಾಜಿಯ ಸಲುವಾಗಿ, ರಮಾಕಕ್ಕಿ ಥಕಾಸಿದ್ದರು. ರಾಚಪ್ಪ– ಗೋವಿಂದಭಟ್ಟರಿಗೆ ಈ ವಿಷಯ ಗೊತ್ತಿತ್ತು. ಅವರು ಇದನ್ನು ರಾವಜೀಕಾಕಾ ಅವರಿಗೆ ತಿಳಿಸಿದ್ದರು.

ಗಂಡ ಬಿಟ್ಟ ಚಿಂತೆಯಿಂದ, ಅಪವಾದ ಅಡರಿದ ನೋವಿನಿಂದ, ಇತ್ತೀಚೆ ಸೋನಕ್ಕ ಬಹಳ ಖಂಗಿಸಿದ್ದರು. ಸಂಣಾಗುತ್ತ ನವೆಯುತ್ತ ನಡೆದಿದ್ದರು. ಕಾಕಾ, ವಿಶ್ವಾಸ, ಗಿರಿಜಾ ಇವರ ಅಭಯದಿಂದ ಅವರ ಚಿಂತೆ, ನವೆತ ಅಟ್ಟಿಸು ವಂತಿರಲಿಲ್ಲ. ನಾಕು ಹುಡುಗರು – ಕೊನೆಯ ಹಂತಕ್ಕೆ ಬಂದು ನಿಂತ ರಾವಜೀ ಕಾಕಾ, ಅವರ ಸಲುವಾಗಿ, ಸೋನಕ್ಕ ಕಣ್ಣಲ್ಲಿ ಜೀವ ಹಿಡಿದುಕೊಂಡು ದಿನ ಹಾಕುತ್ತಿದ್ದರು. ರಾವಜೀಕಾಕಾನಿಗೆ, ಸೋನಕ್ಕನ ಈ ನವೆತದ ಸ್ಥಿತಿ ದಾರುಣ ವಾಗಿತ್ತು. ತಮ್ಮ ಹುಡುಗರ ಆಣೆ-ಜೂರಿ ಹಾಕಿದರೆ, ಸೋನಕ್ಕ, ಅಷ್ಟರಮಟ್ಟಿಗೆ, ತಾವು ನಿಶ್ಚಿಂತರಾಗಿದ್ದೇವೆ, ನೀವು ಹಲಾಕಾಗಬೇಡಿರೆಂದು ಧೈರ್ಯ ಕೊಡು ತ್ತಿದ್ದರು. ಆದರೆ ಅದರಲ್ಲಿ ತಥ್ಯವಿರಲಿಲ್ಲ. ಅದನ್ನು ರಾವಜೀಕಾಕಾ ಅರಿತಿದ್ದರು. ಗಿರಿಜಾ ಹೇಳಿದಳು: ರಮಾಕಕ್ಕಿ ಬರಲಿ. ಮನೆತನಕ್ಕೆ ಹಿರಿಯಳು. ಸೋನಕ್ಕನನ್ನು ರಾಧಾಕಾಕೂನ ವಾತ್ಸಲ್ಯದಿಂದ ನೋಡಿಕೊಂಡಾಳು. ಹೆಂಗಸಿನ ಸುಖ-ದುಃಖ ನಮಗೆ ತಿಳಿಯುವಂತೆ ಆಡಿ-ತೋಡಿಕೊಂಡು ಸಮಾಧಾನ ಹಚ್ಚಿಕೊಳ್ಳುವಂತೆ, ಅದು ನಿಮಗೆ ಸಾಧಿಸದು – ಎಂದು. ರಾವಜೀಕಾಕಾ ಅವರಿಗೆ ಗಿರಿಜಾನ ಸಲಹೆ ಪಟಾಸಿತು. ರಮಾಕಕ್ಕಿಯನ್ನು ಪುಣೆಗೆ ರವಾನಿಸಬೇಕೆಂದು, ಗೌಡರಿಗೆ, ರಾಚಪ್ಪನಿಗೆ, ಕಾಕಾನಿಂದ ಕಾಗದ ಬಂದಿತು.

ರಮಾಕಕ್ಕಿ ಪುಣೆಗೆ ಹೊರಟರು. ಮಿರಜಿಯ ವರೆಗೆ ಒಬ್ಬರೇ ಬರುವ ಅವರನ್ನು ಪುಣೆಯ ವರೆಗೆ 'ಎಸ್ಕಾರ್ಟ್' ಮಾಡುವ ಕೆಲಸ ನನಗೆ ಬಂದಿತು. ಕಾಕಾ ಆ ಕೆಲಸವನ್ನು ನನಗೆ ಒಪ್ಪಿಸಿದರು. 'ಹರ್ ಹೈನೆಸ್ ಡೌಗರ್' ರಮಾಕಕ್ಕಿ ಇಂಥ ಗಾಡಿಯಿಂದ ಮಿರಜಿಗೆ ಬರುತ್ತಾರೆಂದು ಅಗಾವು ಟಪಾಲು ರಾವಜೀಕಾಕಾ ಅವರ ನರ್ಮಸಚಿವ ರಾಚಪ್ಪನಿಂದ ಬಂದಿತು. ನಾವು ಒಂದು ಕೈಚೀಲದಲ್ಲಿ ಎರಡು ಅಂಗಿ, ಎರಡು ಚಣ್ಣ, ಒಂದು ಪಂಚೆ ತುರುಕಿಕೊಂಡು ರಮಾಕಕ್ಕಿಯ

ಎ.ಡಿ.ಸಿ. ಆಗಿ ಪುಣೆಗೆ ಹೋಗುವ ಪ್ರಯುಕ್ತ ಮಿರಜೆಯ ನಿಲ್ದಾಣಕ್ಕೆ ಬಿಜಯಂಗೈಸಿದೆವು.

ಮರುದಿನ ಇನ್ನೂ ಬೆಳಗುಹರಿದಿರಲಿಲ್ಲ – ರಾವಜೀಕಾಕಾ – ಗಿರಿಜಾ, ಸೋನಕ್ಕನಿಗೆ ರಮಾಕಕ್ಕಿಯನ್ನು ಹವಾಲ್ತೀಮಾಡಿ ಮೋಕಳೀಕರಾದೆವು. ಸಾಂಗಲೀ ಬಿಟ್ಟ ಮೇಲೆ ಸೋನಕ್ಕನ ದರ್ಶನವಾಗಿರಲಿಲ್ಲ. ಕಾಕಾ – ಗಿರಿಜಾನನ್ನು ನೋಡಿರಲಿಲ್ಲ. ಆ ಮಾತಿಗೆ ೨–೩ ವರುಷದ ಸನಿಯಕ್ಕೆ ಬಂದಿತ್ತು. ದಾದಲ್ಯಾ ಜಗತ್ತನ್ನೇ ಮರೆತು, ಸೋನಕ್ಕ – ಕಾಕಾ – ಗಿರಿಜಾನನ್ನು ಆರಾಧಿಸಿದ. ತನ್ನನ್ನು ತಾನೇ ಮರೆತು ಅವರ ಸೇವೆಯ ಧನ್ಯತೆ ಪಡೆದ.

ಬೆಳಗಾಂವಿಯ ತನ್ನ ವಾಸ್ತವ್ಯದಲ್ಲಿ ಬಂದ, ಸಾಹೇಬ – ರಂಗಕ್ಕ ಅವರ ಸಾದ್ಯಂತ ಹಕೀಕತ್ತು ಹೇಳಿದ. ಅವರ, ಶ್ಯಾಮರಾಯನ ಡಾವಿನ ಕತೆಯನ್ನು ವಿವರಿಸಿದ. ಸಾಹೇಬರ ಸಾರಳ್ಯ, ರಂಗಕ್ಕನ ಚಿಕಿತ್ಸಕ ಬುದ್ಧಿಯ ಬಗ್ಗೆ, ಅವರ ಔದಾರ್ಯದ ಬಗ್ಗೆ ಒಂದೂ ಬಿಡದೆ ಕಥನಮಾಡಿದ. ರಾವಜೀಕಾಕಾ ಎಲ್ಲವನ್ನೂ ಶಾಂತಚಿತ್ತರಾಗಿ ಕೇಳಿಕೊಂಡರು. ಸಾಹೇಬರ – ರಂಗಕ್ಕನ ಔದಾರ್ಯವನ್ನು, ನಿರ್ಮಲ ಅಂತಃಕರಣವನ್ನು ಮೆಚ್ಚಿಕೊಂಡರು. ಸೋನಕ್ಕ ಏನೂ ಹೇಳಲಿಲ್ಲ. ರಾವಜೀಕಾಕಾ ಅವರೇ ಮೌನ ಮುರಿದು —

"ಶ್ಯಾಮಗ, ಈ ನಾಟಕಾ ಎಲ್ಲೀ ತನಕಾ ಹೋದೀತು ಅನ್ನೂದರ ಅಂದಾಜು ಹತ್ತಿಧಾಂಗ ಇಲ್ಲಾ. ವಿಶ್ವಾಸನ ಮ್ಯಾಲ ಅವಂದೇನು ಅಧಿಕಾರ ಇಲ್ಲಾ; ಅದು ಖರೇ. ಆದರ ಸುರ್ಯಾ, ಸತೀಶ, ಕಿಶೋರ ಅವರ ಭವಿಷ್ಯಾ ತಾನs ಠರಾಸಾಂವಾ ಅಂತ ಡಾವ್ ಹೂಡಿದರ ಮತ್ತ ಹೊಸಾ ಸಮಸ್ಯಾನs ಉದ್ಭವ ಆಗತಾವ. ಭಾಳ ಆದರ ವರ್ಷ ಎರಡ ವರ್ಷಾ ಅವನೂ ಈ ಮಾತs ಮುಂದ ಥಕಲಾಸಿಗೋತ ಬಂದಾನು. ಪ್ರಸಂಗನs ಮೈಮ್ಯಾಲ ಬಂದರ ಮಾಡಾಂವೇನು? ನಾಳೆ, ಆ ಸಾಹೇಬರs ಬಂದು ನಮಗs ಕೇಳಿದರು? ಹೆಣ್ಣ ಹಡದವರ ಕರಳಾ. ಭಲೋ ಮನೀಗೆ ಬೀಳಲಿ, ಅವರ ಕಲ್ಯಾಣ ಆಗಲೀ ಅನ್ನೂ ಆಶಾ ಇರೂದsನs! ನಕಾರ ಹೇಳಲಿಕ್ಕೂ ಸಕಾರಣ ಬೇಕಾಗತದ. ನಮ್ಮ ಈರ್ಷಾs, ಹಾಂಗ ನೋಡಿದರ, ಯಾರ ಮ್ಯಾಲನೂ ಇಲ್ಲಾ. ಶ್ಯಾಮಾ, ತಾನs ಅಪವಾದ ಕೊಟ್ಟಾನ. ಕತ್ತೀ ಕಟ್ಟ್ಯಾನ. ಸಾಹೇಬರು – ಅವರ ಕುಟುಂಬಾ ನಮಗೇನ ಅನ್ಯಾಯ ಮಾಡ್ಯಾರ? ನೋನಾಗ ಅನ್ಯಾಯ ಆಗೇದ. ಮಾಯದಂಥಾ ಘಾಯ ಆಗೇದ.

ಅವನ್ನ ಮಾಡಿದಂವಾ ಶ್ಯಾಮಾ. ಅಂವಾ ಸೋನಾನ ಎದರಿಗೆ ಅಡ್ಡಬಿದ್ದು ಕ್ಷಮಾ ಬೇಡಿಕೋಬೇಕು. ಅತ್ತೀ-ಮಾವಗ, ಹೊಟ್ಟೀಲೇ ಹುಟ್ಟಿದ ಮಗ್ಗs, ತನಗ ಪಶ್ಚಾತ್ತಾಪ ಆದ ಖಾತ್ರೀ ಮಾಡಿಕೊಡಬೇಕು. ಅಂದ್ರ ಏನರs ಈ ಸಮಸ್ಯಾ ಬಗೀಹರೀತದ. ದಾದಲ್ಯಾ, ಆ ಕಾಲ ಬರಲಿ, ದೇವರು ಶ್ಯಾಮಗ ಬುದ್ಧೀ ಕೊಡಲಿ, ಅಂತ ಬೇಡಕೋತೀನಿ."

"ಕಾಕಾ, ಒಡದ ಕನ್ನಡೀ ಎಷ್ಟಂತ ಹೊಂದಸವರು? ಏನಂತ ಹೊಂದಸವರು? ಒಡದದ್ದು ಒಡದsಹೋತು. ಅವರ ಜೀವನದಾಗ ಸಂಶಯು ಮೂಡೇದ. ತಮ್ಮ ಸ್ವಾರ್ಥ ಸಾಧಸ್ತದ ಅಂದರ ಅವರು ಅಡ್ಡಬೀಳಲಿಕ್ಕೂ ಹಿಂದ-ಮುಂದ ನೋಡ್ತಾಂಗಿಲ್ಲಾ. ಯಾ ಸಾಹೇಬರ ದಶಿಂದ ಅವರ ಮನಸ್ಸು ಕಲಕಿತ್ತು, ಅಂಥಾವರ ಮನ್ಯಾಗs ಇಂದ ಸುತ್ತಾ್ಯಡತಾರ. ತಮ್ಮ ಮಗ್ಗs, ಅವರ ಮಗಳ್ಳs ತಗೊಂಬೂ ಭಾಷಾ ಆಡತಾರ. ನಿಮ್ಮ ಬಾಯಲೇ, ವಿಶ್ಯಾನ ಬಾಯಲೇ ಇಂಥಾ ಮಾತು ಬಂದೀತೇನು? ಸಾಹೇಬರ ದಶಿಂದ, ರಂಗಕ್ಕನ ದಶಿಂದ ನನಗೂ ಏನು ದ್ವೇಷ ಇಲ್ಲಾ, ಮತ್ಸರಿಲ್ಲಾ. ಯಾಕ ಇರಬೇಕು ಹೇಳರಿ? ನಮ್ಮ ಸುಳೀನs ಹೀನ ಅದs. ಮುಂದಿಗಂದು ಏನ ಫಾಯದೇ? ಹೇಣತಿನ್ನ ಬಿಟ್ಟೀನಿ; ಇಂಥಾ ಕಾರಣದ್ದಶಿಂದ ಬಿಟ್ಟೀನಿ, ಅಂದಿದ್ರ, ಸಾಹೇಬರಿಗೆ ಇವರ ಯೋಗ್ಯತಾನರs ತಿಳೀತಿತ್ತು. ನನ್ನs, ಹುಡಗೂರ ದೇಖರಖಿಗೆ ಇಟ್ಟ ಕಾರಣಾ ಯಾಕ ಹೇಳಬೇಕಾಗಿತ್ತು? ನಾಳೆ, ಹೆಣ್ಣ-ಗಂಡಿನ ಮಾತ-ಕಥೀಗೆ, ಸಾಹೇಬರs ಬರಲಿ, ರಂಗಕ್ಕನವರs ಬರಲಿ, ಈ ಮಾತಿನ ಉಲಗಡಾ ಆಗದs ಇರೂದಿಲ್ಲಾ. ಖರೇ ಖೊಟ್ಟಿ ಅಂದ ಹೊರಬೀಳತದ. ಇವರಿಗೆ ತಮ್ಮ ಬಣ್ಣಾ ಬಯಲಾಯ್ತಂತ ಕಿಚ್ಚು ಹತ್ತೂದೇ. ನನ್ನ ಹರಲಿ ಆಗೂದೇನು ತಪ್ಪಿಧಾಂಗ ಆಗೂದಿಲ್ಲು. ಕಾಕಾ, ನನ್ನ ಕಣ್ಣ ಮುಚ್ಚದs, ನನ್ನ ಜೀವ ನೀಗದs, ನಿಮ್ಮ ಸಮಸ್ಯಾ ಬಿಡೂದಿಲ್ಲಾ."

"ನನ್ನ ಸೋನಾನ ಕಣ್ಣ ಮುಚ್ಚಿ, ಜೀವ ನೀಗಿ ಈ ಸಮಸ್ಯಾ ಬಗೀಹರದದ್ದನ್ನ ನೋಡಲಿಕ್ಕೆ, ನಿನ್ನ ಕಾಕಾ ಜೀವಂತ ಉಳದಾನಂತ ತಿಳಿದೀ ಏನು ಸೋನಾ? ಸೋನಾಗ ಕಲಂಕಿಲ್ಲಾ. ಅಪವಾದ ಇಲ್ಲಾ ಅನೂ ಠಾಂವಿಕಿ ಅಂವಗ ಇಲ್ಲೇನು? ನಿನ್ನ ಕಾಕಾ, ಸೋನಾ, ನೀ ಬದಕೀಯಂತ, ನೀ ಬದಕಬೇಕಂತ, ತಾ ಬದಕ್ಯಾನ. ಟುಕುಟುಕು ಜೀವಾ ಹಿಡದಾನ. ಅಕೀ, ನಿನ್ನ ಕಾಕೂ ಹೋದಾಗs ಅವನೂ ಹೊಂಟಿದ್ದಾ. ಕಾಲ ಬಂದಿಲ್ಲಂತ ಶ್ರೀಹರಿ ಆಜ್ಞಾ ಆತು. ಅಂಥಾ ಕಾಲ ಬಂದರ,

ನೀನು-ನಾನು ಎಲ್ಲಾರೂ ಹೊರಡಬೇಕು. ಗುಬ್ಬಿ-ಕಾಗಿ-ನಾಯಿ-ನರೀನೂ ಸಾಯುತಾವ. ನನ್ನ ರಾಜಾ ಕುದರೀನೂ ಕಣ್ಣ ಮುಚ್ಚಿತು. ಒಂದರದು ಸಾವಾ, ಇನ್ನೊಂದರದು ಮಹಾನಿರ್ವಾಣಾ! ಸೋನಾ, ನೀ ಸಾಯೂ ಜೀವನಲ್ಲಾ. ವೈದೇಹೀ ಹಾಂಗ, ನಿಂದು ಮಹಾನಿರ್ವಾಣ ಆಗಬೇಕು. ನಿನ್ನ ಕಾಕೂನ್ಹಾಂಗ ಮಹಾನಿರ್ವಾಣ ಆಗಬೇಕು. ಗಂಡಾ, ಜೀವಂತ ಇರತ್ಯನs ಕೂಕಮಾ ಅಳಿಸಿ ಗೋತೀನಿ ಅನೂ ಪ್ರತಿಜ್ಞಾ ಮಾಡೂ ಪಂತರ ನೊಸೀ, ಸಾವಿನ ಭಾಷಾ ಆಡ ಬಾರದು. ನಿರ್ವಾಣದ ಭಾಷಾ ಆಡಬೇಕು. ಬದಕೂ ಭಾಷಾ ಆಡಬೇಕು. ನೀ, ಈಗ ಸುದ್ದೇ ಜೀವಂತ ಬದಕಿಲ್ಲಾ. ಸತ್ತ ಬದಕೀ ಅನೂದರ ಕಲ್ಪನಾ ಅದs ನನಗ. ಹಾಂಗs ಬದಕಿ ಇರೂ. ಆದರ ಖಂಬೀರ ಆಗಿ ಬದಕಿ ಇರೂ.

ರಾಮಪ್ರಭು ಸೀತಾದೇವೀನ್ನ ಅಗ್ನಿದಿವ್ಯ ಮಾಡಿಸಿದರು. ತಾಯಿ, ತಪ್ತ ಕಾಂಚನಧಾಂಗ ಅಪ್ರತಿಮ ತೇಜದಿಂದ ಗೆದ್ದು ಬಂದಳು. ಪ್ರಭೂನ ಸಂಶಯಾ ಸುಟ್ಟು ಕರಕಾತು. ಅವರ ದಾಂಪತ್ಯಜೀವನಾ ಮತ್ತ ಹೊಂದಿಕೊಂಡಿತು. ಸಂಸಾರ ನಡೀತು. ಆದರ, ಶ್ರೀರಾಮಗ, ಸೀತಾದೇವಿ, ನಿರಂತರ ಅಗ್ನಿಕನ್ಯಾ ಆಗಿ ಉಳಿದಿರ ಬೇಕಂತ ನನಗ ಅನಸ್ತದ. ವಾಲ್ಮೀಕಿ ಇದರ ದಶಿಂದ ಏನ ಬರದಾರೋ ನನಗ ಠಾಂವಿಕಿಲ್ಲಾ. ಶ್ಯಾಮಗ ನಿನ್ನ ದಶಿಂದ ಇರೂ ಸಂಶಾ ನಿವಾರಣಾ ಆದರೂ, ಅಂವಗ ಪಶ್ಚಾತ್ತಾಪ ಆದರೂ, ನೀ, ಸೋನಾ, ಸೀತಾನ್ಹಾಂಗ ನಿರ್ಲಿಪ್ತ ಇರತೀ. ಶ್ಯಾಮ ಏನ ಮಾಡ್ಯಾನು, ಏನ ಮಾಡಲಿಕ್ಕಿಲ್ಲಾ, ನಿನ್ನ ಜೀವನಾ ಯಾ ರೀತೀ ಸಾಗೀತು, ಎಲ್ಲಿಗೆ ಹೋಗಿ ಹತ್ತೀತು ಅನ್ನೂದರ ಸ್ಪಷ್ಟ ಕಲ್ಪನಾ ಅದs ನನಗ. ಅದಕs ಖಂಬೀರ ಆಗು. ಸಾಹೇಬರs ಬರಲಿ, ಅವರ ಕುಟುಂಬನs ಬರಲಿ, ನಾನs ಹೇಳತೀನಿ. ಸೋನಾಗ ಅಕೀ ಗಂಡಾ ಇಂಥಾ ಅಪವಾದ ಕೊಟ್ಟಾನ. ಅದರಾಗ ಅರ್ಥ ಇದ್ದರ—ನಿಮ್ಮ ಹಾದಿ ನಿಮಗ, ನನ್ನ ಹಾದಿ ನನಗ. ದೇವರ ಮ್ಯಾಲ ವಿಶ್ವಾಸ ಕೂಡಲಿಕ್ಕಿಲ್ಲ ಮಂದೀದು. ಆದರ ರಾವಜೀಕಾಕಾನ ಮಾತಿನ ಮ್ಯಾಲ ಖಾತ್ರೀಲೇನs ಕೂಡತದ, ಅನೂ ಧೈರ್ಯಾ ಅದs ಅಂವಗ. ಆ ಧೈರ್ಯಾ, ಅಂಥಾ ಆತ್ಮವಿಶ್ವಾಸಾ, ಸೋನಾ ಎಲ್ಲಾರಿಗೂ ಬರೂದಿಲ್ಲಾ. ಅದು ದೈವದತ್ತ ಇರತದ. ನಿನ್ನ ಕಾಕಾಗ ಅದರ ವರಾ ಅದs."

"ಹರಲಿಗೆ ನೀ ಅಂಜಬ್ಯಾಡಾ. ಹರಲಿ ರಿಕಾಮಚೋಟರ ಅನ್ನಾ. ಯಾರಿಗೆ ಹರಲಿ ಬಿಟ್ಟಿಲ್ಲಾ? ತಾಯೀ ಸಮಾನ ಪಂಚಕನ್ಯಾರು. ಅವರ ಪ್ರಾತಃ

ಸ್ಮರಣೀ ಮಾಡತೇವು. ಅದೇ ಬಾಯಲೇ ಅವರ ಹರಲೀ ಸುದ್ದೀ ಮಾತಾಡತೇವು. ಅವರಿಗೂ ಅದರ ಶಕಾ ಬಡೀದs ಹೋಗಲಿಲ್ಲಾ. ನೀನು-ನಾನು ಯಾ ಗಿಡದ ತೊಪ್ಪಲಾ, ಆಡಕೊಂಬೂ ಸಾವಿರ ಬಾಯಿಗೆ? ಬಾಯಿ ಆಡತಾವಂತ, ನಾಲಗಿ ಮಸೀತಾವಂತ, ಕಣ್ಣ ಮುಚ್ಚೂದು ಸೋನಾ, ಖಂಬೀರಾಗು. ಮರ್ದುಮಕೀ ತೋರಸು. ರಾವಜೀಕಾಕಾನ ಸೊಸಿಗೆ – ವಿಶ್ಯಾನ ತಾಯಿಗೆ ಶೋಭಿಸೂ ಭಾಷಾ ದಾಗ ಮಾತಾಡು. ನಿನ್ನ ಕಾಕಾಗ ಧನ್ಯತಾ ಅನಸ್ತದ. ಅವನ ಜೀವಕ್ಕ ನಿಶ್ಚಿಂತಿ ಬರತದ. ಅವನ ಆತ್ಮಾ ಶಾಂತ ಆಗತದ."



ಮಾತಾಡುವವರು ಕಾಕಾ ಆಗಿದ್ದರೂ, ಅವರಲ್ಲಿ ಪಂತಕುಟುಂಬದ ಮೂಲ ಪುರುಷರು – ಶಿವರಾಮಪಂತರು, ಗಂಗಾಧರಪಂತರು ಪರಕಾಯಪ್ರವೇಶ ಮಾಡಿ ದಂತಿತ್ತು. ರಾವಜೀಕಾಕಾನ ತೇಜಸ್ವೀ ವಾಣಿಗೆ, ಶುಭ್ರಧವಳ ನಡತೆಗೆ ಅನಂತಸ್ರಾವಕಚೇತನರಾಗಿ, ಸಂಜೀವಿನೀಸಾಮರ್ಥ್ಯವೆರೆಯುವಂತಿತ್ತು. ಮಾತು ನಿಲ್ಲಿಸಿ, ಕಾಕಾ ಹಿಂಬದಿ ಕೈಕಟ್ಟಿಕೊಂಡು, ಪಡಸಾಲೆಯಲ್ಲಿ ಶತಪಥ ನಡೆಸಿ ದಾಗ, ಹೀನ ವಿಚಾರ, ಹೀನ ಭಾವನೆ, ನಾಮರ್ದತನ, ಮೃತ್ಯುಭೀತಿ, ಅವರ ವಜ್ರಪಾದಾಘಾತಕ್ಕೆ ಸಿಕ್ಕು ಧೂಳೀಧೂಸರಿತವಾಗುವಂತಿತ್ತು. ಸೋನಕ್ಕನ ಜೀವನವನ್ನು ಮಂಗಲಮಯ ಮಾಡುವ ವಿಚಾರದಿಂದ, ಯಾರದೋ ಮನೆ ಯಲ್ಲಿ ಘಂಟೆ ಬಡೆದು, ನೂರು ರೂಪಾಯಿ, ಎರಡು ಭಾಂಡು ಅಷ್ಟರ ಕೂಲಿ ಯಿಂದ ಸಂತುಷ್ಟನಾದ ದಾದಲ್ಯಾ, ಈ ಮಹಾತೇಜಸ್ಸಿಗೆ, ಧೈರ್ಯಮೇರುವಿಗೆ ಅಡ್ಡಬಿದ್ದ. ಕಾಕಾ, ಇನ್ನೂ ತಂದ್ರಿಯಲ್ಲೇ ಇದ್ದರು. ಏನೋ ನೆನಪಾದವರಂತೆ —

"ಸೋನಾ, ನೀ ಏನಂದೀ? ಒಡದ ಕನಡೀ ಅಂತ ಯಾಕ ಅನಕೊಂಡಿ? ಯಾರ ಕನಡಿ, ಯಾವ ಕನಡಿ ಒಡದದ? ಕನಡಿ ಒಡದ್ಯದ ಅನೂದು ನಿನ್ನ ಭ್ರಮಾ. ಆ ಶುಭ್ರ ಕನಡೀ ಮ್ಯಾಲ ಶ್ಯಾಮನ ಧೂಳ ಕೂತಿತ್ತು. ನೀ ಅದನ್ನ ಒರಿಸಿ ತಗದಿ. ಕನಡಿ ಒಡದಿಲ್ಲಾ. ಬುಕಣಿ ಆಗಿಲ್ಲಾ. ಧೂಳ ಹಾರೇದ. ಕಲೇ ಅಳಿಸೇದ. ನೀನs ನೋಡಿ ಖಾತ್ರೀ ಮಾಡಕೋ! ಗಿರಿಜಾಗ ಕೇಳು, ರಮಾಕಕ್ಕಿಗೆ ಕೇಳು, ದಾದಲ್ಯಾಗ ಕೇಳು? ಯಾರ್ನ ಯಾಕ ಕೇಳೂದು? ನಿನ್ನ ಕಾಕಾ, ಸೋನಾನ ಕಾಕಾ, ತನ್ನ ಅಂತಃಕರಣದ ಕೂಸಿಗೆ ಚಾಲವರದ ಹೇಳತಾನ. ಅಂವಗ ಖಾತ್ರೀ ಅದs, ತನ್ನ ಸೋನಾ ನಂಬತಾಳ ಅನೂದು."

"ಕಾಕಾ, ನಾ ನಂಬಿದೆ. ನನಗ ಜೀವದಾಗ ಜೀವ ಬಂತು. ಸಾಯೂ

ಭಾಷಾ, ಕಣ್ಣಮುಚ್ಚೊ ಭಾಷಾ ನಾ ಇನ್ನ ಆಘಾಂಗಿಲ್ಲಾ. ನೀವು ಸಮಾಧಾನ ಆಗರಿ. ಶಾಂತ ಆಗರಿ."

"ನಾ ಶಾಂತನsss ಇದ್ದೀನಿ, ಸೋನಾ, ನಾ ಶಾಂತನsss ಇದ್ದೀನಿ. ನನಗ ಅಶಾಂತಿ, ಅಸಮಾಧಾನಾ, ಅಪೋಷಣಭಾವನಾ ಒಮ್ಮೇ ಬರತದ. ಅದು ಬರಬಾರದೂ ಅಂತsss ಸಾಧನಾ ನಡಸೀನಿ. ನಿಗ್ರಹ ನಡಸೀನಿ. ಬರಲಿಲ್ಲsss, ಠೀಕಾ. ಬಂದರ, ಅದು ಬಂದೇ ತೀರಬೇಕೂ ಅಂತ ಶ್ರೀಹರೀ ಇಚ್ಛಾ ಇದ್ದರ, ಸೋನಾ, ನಾನು-ನೀನು ಅದನ್ನ ತಪ್ಪಸೂದು ಸಾಧ್ಯ ಇಲ್ಲಾ. ಆ ದಾಹಕ ಸಾಮರ್ಥ್ಯಾ, ನಿನ್ನ ಕಾಕಾನ್ನೂ ಬಲೀ ತಗೊಂಡೀತು. ಆದರ ಸೋನಾ, ಅದು ಬರಬಾರದು. ಪಂತಕುಟುಂಬದ ಕ್ಷೇಮದ ದೃಷ್ಟಿಯಿಂದ ಅದು ಬರಬಾರದು, ಅಂತ ನನ್ನ ಸಾಧನಾ ನಡದsದ. ನೀ ಸಾಯೂ ಭಾಷಾ ಆಡಿದೀ ಅಂದರ, ಸುಪ್ತ ಅಗ್ನೀ ತಾನsss ಕೆದಕತದ. ಸೋನಾ, ಅಗ್ನಿಮಂಥನ ಮಾಡಬ್ಯಾಡಾ."

ಪಾಂಡೂ ಚಹಾ ತಯಾರಾದ ವರದಿ ಮಾಡಿದ. ಸೋನಕ್ಕ – ರಮಾಕಕ್ಕಿ ಎದ್ದು ಒಳಗೆ ಹೋದರು. ರಮಾಕಕ್ಕಿ ನಡುಮನೆಯ ಬಾಗಿಲಲ್ಲಿ ನಿಂತು, ಸನ್ನೆ ಮಾಡಿ, ನನ್ನನ್ನು, ಗಿರಿಜಾನನ್ನು ಒಳಗೆ ಕರೆದು —

"ನೀವು ಇದರಿಗೆ ಇದ್ದರೀ ಅಂದರ ಕಾಕಾ ಮತ್ತ ತಲೀ ಕೆಡಿಸಿಗೋತಾರ. ಅನಕಾ ಅವರ ಕಣ್ಣಿಗೇ ಬೀಳಬ್ಯಾಡರಿ. ಹಿತ್ತಲಮನೀ ಪಡಸಾಲಿಗೆ ನಡೀರಿ ಎಲ್ಲಾರು. ಕಾಕಾನ ಚಹಾ ಪಾಂಡೂ ಬಗೀಹರಸತಾನ. ಚಹಾ ಮುಗಿಸಿ ಅವರಿಷ್ಟು ಅಡ್ಡಾsಡಿಕೊಂಡ ಬರಲಿ. ತಾಂವsss ಶಾಂತ ಆಗತಾರ."

ರಮಾಕಕ್ಕಿ ಸೂಕ್ತ ವಿಚಾರ ಸೂಚಿಸಿದರು. ಅವರು ಸುಮಸುಮಾರು ಕಾಕಾನ ವಯಸ್ಸಿನವರು. ಅವರ ಸ್ವಭಾವವನ್ನ ಚಿಕ್ಕಂದಿನಿಂದ ಅರಿತು ಬಲ್ಲವರು. ಅವರಲ್ಲಿ ತಿಳುವಳಿಕೆಯೂ ಮಾಗಿತ್ತು. ಪಂತ-ಘರಾಣೆಯಲ್ಲಿ ಉಳಿದ ಹಿರಿಯು ಳೆಂಬ ಗೌರವದಿಂದ ಕಾಕಾನಿಗೂ ಪೂಜ್ಯರಾಗಿದ್ದರು. ರಾಧಾಕಾಕೂನ ದೊಡ್ಡಿಸ್ತನ ದೊಡ್ಡಿಸ್ತಿಕೆ, ಮನೋವೈಶಾಲ್ಯ ರಮಾಕಕ್ಕಿಯಲ್ಲಿಯೂ ಇದ್ದವು. ರಾಧಾಕಾಕೂ ಬದುಕಿದ್ದರೆ, ಸೋನಕ್ಕನ ಚಿಂತೆ ರಾವಜೀಕಾಕಾ ಅವರಿಗೆ ಅಷ್ಟಾಗಿ ಇರುತ್ತಿರಲಿಲ್ಲ. ಸೋನಕ್ಕನ ಆಗತಿಕ ಜೀವ, ಹರಲಿಯ ಭೀತಿಯನ್ನು ಎಷ್ಟೋ ದೂರ ಮಾಡಲು ಯತ್ನಿಸಿದರೂ, ಅದರ ಕರಾಳಛಾಯೆ ಒಮ್ಮೊಮ್ಮೆ ಗಾಢವಾಗಿ, ಮೇಘ ಸದೃಶವಾಗಿ ಸೋನಕ್ಕನನ್ನ ಆವರಿಸುತ್ತಿತ್ತು. ಸೋನಕ್ಕ ಒಳಒಳಗೇ ನವೆಯು

ತ್ತಿರುವ ಭೀತಿ ಕಾಕಾ ಅವರಿಗೆ ಬಲವಾಗಿತ್ತು. ಈ ನವೆತ, ಈ ಕ್ಷಯಸಾಧನೆ ಸೋನಕ್ಕನನ್ನು ಅಕಾಲಮೃತ್ಯುವಿನೆಡೆಗೆ ಎಳೆಯುತ್ತಿರುವ ಶಂಕೆ ಅವರನ್ನು ಬಾಧಿಸುತ್ತಿತ್ತು. ಗಿರಿಜಾ, ರಮಾಕಕ್ಕಿ ಸೋನಕ್ಕನನ್ನ ಸಂಬಾಳಿಸಲೆಂದು ಯೋಚಿಸಿ ಅವರು ರಮಾಕಕ್ಕಿಯನ್ನು ಪುಣೆಗೆ ಕರೆಸಿಕೊಂಡಿದ್ದರು.

ಸೋನಕ್ಕನನ್ನು ಸಂಬಾಳಿಸಲು ಕಾಯಂತರೀಕವಾಗಿ ಸಾಂಗಲಿಯಿಂದ ಬನೂಮಾಮಿ ಬಂದು ನಿಲ್ಲುವದು ಶಕ್ಯವಿರಲಿಲ್ಲ. ಶಕ್ಯವಿರಲಿಲ್ಲವೆನ್ನುವದಕ್ಕಿಂತ ಅವರಿಗೆ ಮಗಳ ಅಗತಿಕ ಜೀವನವನ್ನು ಪ್ರತ್ಯಕ್ಷವಾಗಿ ನಿತ್ಯ ನೋಡುವದು ಅಸಹನೀಯವಾಗಬಹುದಾಗಿತ್ತು. ಅದಕ್ಕಿಂತ ರಮಾಕಕ್ಕಿ ಬಂದರೆ ಠೀಕ ಎಂದು ಕಾಕಾ ಯೋಚಿಸಿರಬೇಕು. ಅವರ ಅಂದಾಜು ತಪ್ಪಲಿಲ್ಲ. ಕಾರಣ, ರಮಾಕಕ್ಕಿ ಬನೂಮಾಮಿಯನ್ನೂ ಮೀರಿಸುವ ವಾತ್ಸಲ್ಯಮೂರ್ತಿಯಾಗಿದ್ದರು. ಅವರ ಆಗಮನ ಸಹವಾಸದಿಂದ, ಅಂತಃಕರಣದ ಆರೈಕೆಯಿಂದ, ಸೋನಕ್ಕನ ಅಂತ ರಂಗದ ಮಥನ ಕುದಿತ ಅಟ್ಟಿಸಬಹುದಾಗಿತ್ತು. ಜೀವಕ್ಕೆ ಒಂದಿಷ್ಟು ನೆಮ್ಮದಿ ಬರಬಹುದಾಗಿತ್ತು.

ರಮಾಕಕ್ಕಿಗೆ ಊರಲ್ಲಿ ಹೇಳಿಕೊಳ್ಳುವಂಥ ಸುಖವಿರಲಿಲ್ಲ. ತಮ್ಮಾಜಿಯ ಅಂದಾಧುಂದೀ ಖರ್ಚಿನ–ಅವಿವೇಕ ಕಿಲಾಪದ ಪ್ರಯುಕ್ತವಾಗಿ ಉದ್ಭವಿಸುವ ಭಾನಗಡಿಗಳನ್ನು ನಿಸ್ತರಿಸುವದರಲ್ಲಿಯೇ ಅವರು ಥಕಾಸಿಹೋಗಿದ್ದರು. ಅವನನ್ನು ಅಂಕಿತದಲ್ಲಿಟ್ಟುಕೊಳ್ಳುವದರಲ್ಲಿಯೇ ಹಣ್ಣಾಗಿದ್ದರು. ಕಾಕಾ ಊರಲ್ಲಿದ್ದಾಗ ತಮ್ಮಾಜಿ, ಬಾಲ ಸುಟ್ಟ ಬೆಕ್ಕಿನಂತೆ ಮೆತ್ತಗಿದ್ದ. ಅವರು "ತಮ್ಯಾ" ಎಂದು ಕಣ್ಣು ತೆರೆದರೇ ಸಾಕು, ಅಂಜಿ ಒದ್ದೆಯ ಮುದ್ದಿಯಾಗುತ್ತಿದ್ದ. ಈಗ ಕಾಕಾಅವರ ಅಂಜಿಕೆ ಹಾರಿತ್ತು. ಅವರ ಗೃಹತ್ಯಾಗ–ಗ್ರಾಮತ್ಯಾಗ ಅವನಿಗೆ ಅನುಕೂಲ ಸಿಂಧುವೇ ಆಯಿತು. ದೇಖರಖಿಯ ತಿಪಲೂ ಇಲ್ಲದ್ದರಿಂದ ಬಿಡಾಡಿ ದನದಂತೆ ಮೋಕಳೀಕನಾಗಿದ್ದ. ಶ್ಯಾಮರಾಯನ ಪೇಂದ್ಯಾ ಆಗಿ ಅವನ ಸುತ್ತು ಸುಳಿಯು ತ್ತಿದ್ದ. ಅಲ್ಲದೆ ಆಜನ್ಮ ತನ್ನ ಕ್ಷೇಮ-ಕುಶಲದ ಜವಾಬುದಾರಿಯನ್ನು ಶ್ಯಾಮ ರಾಯ ವಹಿಸಬೇಕೆಂಬ ಬಾಯಿಕರಾರಿನ ಮೇಲೆ, ತನ್ನ ಹೊಲಗಳನ್ನು ಶ್ಯಾಮ ರಾಯನಿಗೆ ಸಾಗಿಸಲಿಕ್ಕೆ ಬಿಟ್ಟಿದ್ದಾನೆಂಬ ದಟ್ಟ ವಾರ್ತೆಯೂ ಇತ್ತು. ಇತ್ತೀಚೆಗೆ ತಮ್ಮಾಜಿಯ ನಿತ್ಯ ಪಂಕ್ತಿ, ಚಾ-ಫಳಾರ ಶ್ಯಾಮರಾಯನಲ್ಲಿಯೇ ಆಗುತ್ತಿತ್ತು. ಹೊಲಗಳು ಶ್ಯಾಮರಾಯನ ಸಾಗುವಳಿಯಲ್ಲಿದ್ದವು. ಜನರ ಕಾಯಾಸಕ್ಕೆ ಅನ್ಯ

ಸಾಕ್ಷಿ-ಪುರಾವೆಯ ಅಗತ್ಯ ಬೇಕಿರಲಿಲ್ಲ. ತಮ್ಮಾಜಿ, ಇಂಥದೊಂದು ವ್ಯವಸ್ಥೆಯನ್ನು ಮಾಡಿಕೊಂಡಾನೆಂದು ತಿಳಿದ ದಿನವೇ ರಮಾಕಕ್ಕಿ ನಮ್ಮ ಮನೆಗೆ ಬಂದು ಗೋವಿಂದಭಟ್ಟನ ಮುಂದೆ ಹೇಳಿದ್ದರು:

"ಗೋವಿಂದಭಟ್ಟ, ಆ ತಮ್ಯಾನ ಕೈತರ್ಪಣಾ ಯಾರಿಗೆ ಬೇಕಾಗೇದ? ನಾ ಏನು ಸ್ವರ್ಗಕ್ಕ ಹೋಗೂದೂ ಅಷ್ಟರಾಗs ಅದs. ಅಂವ ಮಗಾ ಅಂತs ಇಷ್ಟ ದಿನಾ ಸಂಬಾಳಿಸಿಗೊಂಡು ಬಂದೆ. ಅವನ ಯದ್ವಾ-ತದ್ವಾ ಚ್ಯಾಷ್ಟೀ ಏನು ನಿಂದ್ರೊಲ್ಲದು. ನಂದೂ ಇಲ್ಲೀ ಋಣಾನs ಮುಗದದ. ನಾಳೆ ನಾ ಸತ್ತೆನಂದರ, ಕಾಕಾ ಏನು, ನಂದು ಹಾದೀ ಹೆಣಾ ಮಾಡಿಗೊಡೂದಿಲ್ಲಾ. ಹತ್ತ ಪತ್ರೊಳಿ ಅನ್ನಾ ಹಾಕತಾರ ಅನ್ನೂ ಭರೋಸ ಅದ ನನಗ. ಪುಣೇದ ಮನ್ಯಾಗ ನನಗೂ ಇಷ್ಟು ಚಾಟ ಮಾಡರೀ ಅಂತ ಕಾಕಾಗ ತಿಳಿಸಿಬಿಡರಿ."

ಕಾಕಾನಿಂದ, ಜರೂರ ರಮಾಕಕ್ಕಿಯನ್ನು ಕಳಿಸಿಕೊಡಬೇಕೆಂದು ಗೌಡರಿಗೆ, ರಾಚಪ್ಪನಿಗೆ ಕಾಗದ ಬಂದವು. ಅಂತೇ ರಮಾಕಕ್ಕಿ ಪುಣೆಗೆ ಪ್ರಯಾಣಿಸಿದ್ದರು.

## ನಾಲ್ಕು

ನಮ್ಮ ಕಾಲೇಜಿನ ಸರ್ – ಅಂದರೆ ಪ್ರೊಫೆಸರ್ – ಲೆಕ್ಚರರ್ ಅವರ, ತಾಯಂದರಲ್ಲಿ, ಅವರ ಟುಕುಂಬಗಳಲ್ಲಿ, ಇನ್ನೂ, ಧಾರ್ಮಿಕ ಸನಾತನೀ ಚೇತನೆ ಪ್ರಜ್ವಲಿತವಾಗಿತ್ತೆಂಬ ನಿಮಿತ್ತದಿಂದ ದಾದಲ್ಯಾನ ಕ್ಷೇಮವೂ ಶಾಬೂತಾಗಿತ್ತು. ದಾದಲ್ಯಾ ಪಾಂಕ್ತವಾಗಿ ಎಂದೂ ಟರ್ಮ ತುಂಬಿಲ್ಲ. ತುಂಬುವ ಇಲ್ಲದ ತಿಪಲನ್ನೂ ತಲೆಗೆ ಹಚ್ಚಿಕೊಂಡಿಲ್ಲ. ಅದರ ಕಾಳಜೀ ಅವನಿಗಿಂತ ಹೆಚ್ಚಾಗಿ, ಪ್ರೊಫೆಸರ್-ಲೆಕ್ಚರರ್‌ಆದಿ ಮಂಡಲಿಯ "ಮಂಡಳಿ"ಗೆ ಇದೆ. ಈ ಮಂಡಳಿಯಲ್ಲಿಯ ತಾಯಂದಿರಿಗೆ ದಂಡವತ್‌ಪ್ರಣಾಮ ಸಲ್ಲಿಸಿ, ಅವರ ಶ್ರೀಮತೀ

ಅವರಿಗೆ ಅನುನಯಿಸಿ, ಮೊರೆಹೊಗುವ ಬಿನ್‌ಖರ್ಚಿನ ವ್ಯವಸಾಯುವನ್ನು ದಾದಲ್ಯಾ ಹಸ್ತಗತಮಾಡಿಕೊಂಡಿದ್ದಾನೆ. ಬೆಳಗಾಂವಿಯಲ್ಲಿ ಕು. ಚಿ. ಶಕೂನ ಅಧ್ಯಯನ ಅಧ್ಯಾಪನ ಉದ್ಯಾಪನೆಯುನ್ನು ಮುಗಿಸಿ, ಸಾಂಗಲಿಗೆ ಬರುವಾಗ ಹದಿನೈದು ಇಪ್ಪತ್ತು ದಿನ ತಡವಾಗಿಯೇ ಬಂದಿದ್ದ. ಅಲ್ಲಿಂದ ಬಂದನಂತರ ಒಂದು, ಒಂದೂ ವರೆ ತಿಂಗಳು ಹಾಗೂ ಹೀಗೂ ತೆಗೆಯುವದರಲ್ಲಿಯೇ, ರಮಾಕಕ್ಕಿಯನ್ನು ಹಿಂಬಾಲಿಸಿ ಪುಣೆಗೆ ಹೋಗಿ ಬಂದ. ಗೌರಿ-ಗಂಗೆಯರು ಬಂದು ಹೋದರು; ಗಣಪತಿ ತನ್ನ ವಾರ್ಷಿಕ ಆಗಮನ ಮುಗಿಸಿ ತೆರಳಿದ. ದಾದಲ್ಯಾ, ಅಭ್ಯಾಸಕ್ಕಿಂತ ಹೆಚ್ಚಾಗಿ ಇವರ ಸಮಾಚಾರವನ್ನು ತೆಗೆದುಕೊಳ್ಳುವದರಲ್ಲಿಯೇ ಅಧಿಕ ವೇಳೆಯನ್ನು ಖರ್ಚುಹಾಕಿದ. ದೀಪಾವಳೀ ಸೂಟಿ ತಲೆಬಾಗಿಲಲ್ಲಿಯೇ ಬಂದಿತ್ತು. ಸಾಹೇಬರಿಂದ, ಕು.ಚಿ. ಶಕೂನಿಂದ ಒತ್ತಾಯದ ಕಾಗದ – ಆಗ್ರಹದ ಆಮಂತ್ರಣ – ಬಂದರೆ ಮತ್ತೆ ಅವನು ಬೆಳಗಾಂವಿಗೆ ದಯಮಾಡಿಸಬೇಕಾಗುತ್ತಿತ್ತೋ ಏನೋ? ವೈದಿಕ ಬ್ರಾಹ್ಮಣನ ಅಗತ್ಯ ಇನ್ನೂ ಜನರಿಗೆ ಏನಕೇನಪ್ರಕಾರೇಣವಾದರೂ ಅಡ್ಡಿಯಿಲ್ಲ, ಇದೆಯಲ್ಲವೆಂಬ ಅಭಿಮಾನ ದಾದಲ್ಯಾನಿಗಿತ್ತು. ಅವನು ಪುಣೆಯಿಂದ ಸಾಂಗಲಿಗೆ ಬರುವ ಹೊತ್ತಿಗೆ, ಜೋಗ ಶಂಕರಕಾಕಾ ಅವರು, ದಾದಲ್ಯಾನ ಜಮುಖಂಡೀ ಪ್ರವಾಸದ ಅಗಾವು ತಿಕೀಟು ತೆಗಿಸಿಯೇ ಇಟ್ಟಿದ್ದರು.

ಜಮುಖಂಡಿಯಲ್ಲಿಯ ಜೋಗರ ಬೀಗರ ಮನೆಗೆ, ನಾಲ್ಕೈದು ಸಾವಿರದ ಬೆಲೆ ಬಾಳುವ ಮುತ್ತುಕೋದ, ತೋಡೇ-ಗಾಡೇ, ಬಿಲ್‌ವರ, ಬಂಗಾರದ ಬಳೆ, ಡಾಬುಗಳನ್ನು ಒಯ್ಯುವ, ಒಯ್ದು ಮುಟ್ಟಿಸುವ ಹೊಣೆಗಾರಿಕೆ ದಾದಲ್ಯಾನಿಗೆ ಕಾದಿತ್ತು. ಈ ಸರಕನ್ನು ಮುಟ್ಟಿಸುವ ಕೆಲಸವನ್ನು ಶ್ರೀಮತೀ ಶಂಕರಕಾಕಾ ಜೋಗ – ಅಂದರೆ ಪಾರ್ವತೀಕಾಕೂ – ಅವರೇ ಮಾಡುವವರಿದ್ದರೂ, ದಾದಲ್ಯಾ ಅವರ ಅಂಗ ರಕ್ಷಕನಾಗಿ ಹೋಗಬೇಕೆಂದು ಠರಾವಾಗಿತ್ತು.

“ದಾದಲ್ಯಾ, ಗುಡ್ಡಕ್ಕ ಕಲ್ಲ ಹೊತ್ತವರ್‍ಹಾಂಗ, ಸುಮುನ್ಯ, ಯಾಕ ಕಾಲೇಜಕ್ಕ ಹರಕೀ ಹಾಕತೀ? ಸಾಂಗಲೀ ಒಳಗ ಒಂದು ‘ಟೂರಿಸ್ಟ ಗೈಡ್ ಏಜನ್ಸಿ’ನರ್‍ಯ ತಗೀ. ಶಿಸ್ತ ಧಂದೇನರ್‍ಯ ನಡೀತದ. ಫರ್ಸ್ಟ್ ಟರ್ಮ್ ಇರೂದ್ಯ ಜೇಮ್-ತೇಮ್ ಮೂರ ತಿಂಗಳಾ. ಒಂದ ತಿಂಗಳೇನು ನಿನ್ನ ‘ರೋಲ್-ಕಾಲ್’ ಪಾಂಕ್ತ ಆಗಿ ಬಿದ್ದಿಲ್ಲಾ. ಓದತೀ ಯಾವಾಗ. ಕ್ಲಾಸ್ ಹ್ಯಾಂಗ ಬರತೀ. ಎಲ್ಲಾ ನಿಂದು, ಗುಂಭನ್ಯ ಅದ್ಯ ದಾದಲ್ಯಾ?”

ನಮ್ಮ ಜಮಖಿಂಡೀ ಪ್ರಯಾಣಪೂರ್ವದಲ್ಲಿ ವಸುಧಾಬಾಯಿಯವರು ಕಿತಬಿ ನಡೆಸಿದ್ದರು.

"ವಸುಧಾಬಾಯರ್ರ, ತಮ್ಮ ದಾದಲ್ಯಾ, ತಪ್ಪಿ ಈ ದರಿದ್ರ ಭಾರತಾ – ದಿ ಇಂಡಿಯಾ – ದಾಗ, ಭರತವರ್ಷೇ, ಜಂಬೂದ್ವೀಪೇ, ಕೃಷ್ಣಾತೀರೇ, ಶಾಲಿವಾಹನಶಕೇ ಎಷ್ಟರಾಗೋ ಹುಟ್ಟ್ಯಾನ. ಒಂದs, ಇಂಗ್ಲಂಡ-ಅಮೇರಿಕಾದಾಗ ಏನರs, ಅಂವಾ ಅವತಾರಕಾರ್ಯ ಮಾಡಿದ್ದನಂದರ, ಅವನ ಇದೂ – ಈ ತಲೀ ಒಳಗಿನ ಚೀಜ ಅನ್ನೂ – ಮೆಂದೂ-ಪಿಂಡಾ, ಲಕ್ಷ ಡಾಲರಕೇನರs ಇನ್ಶೂರ್ ಆಗತಿತ್ತು. ಏನ ಮಾಡೂದು ? ಬಂದದ್ದಲ್ಲಾ – ಬಾರಿಸಿದ್ದಲ್ಲಾ ಅನ್ನೂ ಭಾನಗಡ್ಯಾಗ ಅದನ್ನ ವ್ಯರ್ಥ ಖರ್ಚೀಹಾಕೂದು ನಡದ್ವದ. ಹಾಲಿನ ಹವ್ಯಾಸಾ, ಕಟಕ ನೀರಮಜ್ಜಿಗೀ ಮ್ಯಾಲಿಂದ ಬಗೀಹರಿಸಿದರಂತ, ನಿಮ್ಮ ಮರಾಠೀ ವ್ಹ್ಯೂಣ್ ಅದs ಅಲ್ಲಾ, ಹಾಂಗ ಅವನ ಗರುಡಭರಾರೀ ಬುದ್ಧೀ, ಜೋಗಕನ್ಯಾ ವಸೂನ್ನ, ಕು. ಚಿ. ಶಕೂನ್ನ, ತಿದ್ದಿ ತೀಡಿ ಮೂರ್ತೀಮಾಡೂದರಾಗ ನಿಃಸ್ಸತ್ವ ಆಗಲಿಕ್ಕೆ ಹತ್ತೇದ. ಅಪಾತ್ರದಾಗ ಬುದ್ಧಿ-ಜ್ಞಾನದಾನ ನಡದ್ವದ..."

ನನ್ನ ಮಾತು ಇನ್ನೂ ಮುಗಿದಿರಲಿಲ್ಲ. ಅಷ್ಟರಲ್ಲಿಯೇ ಉತಾವಿಳಲಾಗಿ ವಸೂ —

"ದಾದಲ್ಯಾ, ನಾ ಅಂದರ ಕಟಕನೀರಮಜ್ಜಿಗಿ ಅನಬೇಕಾಗೆದಿಲ್ಲೋ ನಿನಗs..."

ಎಂದು ನುಡಿದಳು. ನಮ್ಮ ಎಡಗಿವಿ ಅವಳ ಬಟ್ಟ ಚಿಮ್ಮಟಿಗೆಯಲ್ಲಿ ಸಿಕ್ಕು ವಿಲಿವಿಲಿ ಒದ್ದಾಡತೊಡಗಿತು.

"ವಿಶ್ಯಾ ಬರಲಿ. ಮಾಡತೇವು ನಿನ್ನ ವಾಲಗಾ. ಬೆಳಗಾಂವ್ಯಾಗ ಎರಡ ತಿಂಗಳು ಬಕ್ಕಳ ಖುರಾಕ ಬಿದ್ದ್ವದ. ನಾಲಿಗಿ ಹರತ ಆಗೇದ."

"ಕಿಂವೀ ಬಿಡೂ ಮಾರಾಯಳ. ನಮ್ಮ ಗೋವಿಂದಭಟ್ಟ ಸುದ್ದೇ ತಪ್ಪಿ ತಿರಿವಿದ್ದಿಲ್ಲ ಓಂಗs. ನೀ ಅದನ್ನ ಉಗಾಸಲಿಕ್ಕೆ ಹತ್ತೀ ಈಗ."

"ಗೋವಿಂದಭಟ್ಟಾ, ಪಾಪ, ಮಡೀ ವೈದಿಕಬ್ರಾಹ್ಮಣಾ. ಕತ್ತೀ ಕಿಂವೀ ಹ್ಯಾಂಗ ಮುಟ್ಟ್ಯಾನು ? ನನಗೇನು ಮಡೀ-ಮೈಲಿಗೀ ಅಂಜಿಕಿಲ್ಲಾ. ದಿನಾ ಹತ್ತ ಸಾರೆ ಓಂಗ ಗಿರಡಿ ತಿರಿಗಿಸಿದೆ ಅಂದರ ನೀನs ಬರತೀ ಹಾದಿಗೆ. ಜಮಖಿಂಡಿಗೆ ಹೋಗಿ ಬಾ. ತೋರಸ್ತೀನಿ ಕೈ."

"ಕೈ ತೋರಸ್ತೀನಿ ಅನೂತ್ಲೇ ನೆನಪಾತು ನೋಡ ವಸೂ. ಕೈ ನೋಡೂದೂ ನಮಗ ಅಷ್ಟಿಷ್ಟ ಜ್ಞಾನಾ ಅವಗತ ಅದs. ಬಾಯೀಸಾಹೇಬ, ಚೀರೋ ಒಮ್ಮೆ ಕೈಯಾಗ ಸಿಕ್ಕು ಮರ್ಯೋ ಅಂತ ಮರಗೂ ತನಕಾ ಬಿಡಲಿಲ್ಲ ನಾವು ಅಂವನ್ನs! ಒಡಕ ಪಾಟೀ ಮ್ಯಾಲ, ತಿಂಗಳ-ದೀಡ ತಿಂಗಳಾ, ಅಡ್ಡಾ-ಉದ್ದಾ ಗೆರೀ ಎಳಿಯೂದ ರಾಗ, ಜ್ಞಾನರೇಖಾ, ಲಗ್ನರೇಖಾ, ಧನಾ-ಸಂತಾನ-ಹೃದಯಾ ಎಲ್ಲಾ ರೇಖಾ, ಏನ ಸರsಳ ಅವನೋ, ಏನ ಎಲ್ಲ್ಯರs ಕಟ್ ಆಗ್ಯಾವೋ ಅನ್ನೂದನ್ನ ಬುಡೆ ಬುಡಕ್ಯಾರಕಿಂತಾನೂ ಜಾದಾ ಖಾತ್ರೀಲೆ ಹೇಳೂವಷ್ಟು ಜ್ಞಾನ ಆತು. ಹೇಳಲಿಕ್ಕೆ ನಮಗ ಸುವರ್ಣಪುಷ್ಪದಕ್ಷಿಣೀ ಆಶಾ ಏನಿಲ್ಲಾ. ಚಾ-ಪಾಣೀ ಮ್ಯಾಲೂ ಬಗೀ ಹರೀತದ."

"ಒಳಗ, ಕಾಕೂ, ಅವಲಕ್ಕಿಗೆ ಒಗ್ಗರಣೀ ಹಾಕಿದ್ದರ ವಾಸ ಬಡೀತ ಕಾಣಸ್ತದ ಅಪ್ಪನ ಮೂಗಿಗೆ. ಅದಕ್s ಚಾ-ಪಾಣೀ ಮ್ಯಾಲ ಬಗೀಹರಸೂ ಭಾಷಾ ಸುರೂ ಮಾಡೀದಿ. ಬರೇ ತಿನೂದರ ಕಡೇನs ಧ್ಯಾಸಾ."

"'ಅನ್ನಂ ಮಾ ನಿಂದ್ಯಾತ್ ತದ್ ವ್ರತಂ' ಇತಿ ಗೋವಿಂದಭಟ್ಟ ಪ್ರೋಕ್ತ ಗಾಯತ್ರೀಮಂತ್ರದ ಸಾಧಕರು ನಾವು. ಆರ್ಯವಚನಪಾಲಕರು. ಅದರ ಸಾಧನಾ-ಪಾಲನಾ ಅಖಂಡ ನಡದಿರಬೇಕಂತs, ಪರಮಾತ್ಮ ಅನೂ 'ಫ್ಯಾಕ್ಟರಿ ಮ್ಯಾನೇಜರ್' ಏನ ಇದ್ದಾನಲಾ, ಅಂವಾ, ತಮ್ಮಂಥಾ ದಾತಾರನ್ನ ನಿರ್ಮಾಣ ಮಾಡತs ಇರತಾನ. ಆಂs. ದಾತಾರ ಅನೂತ್ಲೇ ಧ್ಯಾಸಕ್ಕ ಬಂತು. ವಸೂ 'ವುಡ್-ಬಿ-ಡಾಕ್ಟರ್' ವಿಶ್ವಾಸರಾವ್ ಸಖಾರಾಮಪಂತ ದಾತಾರ ಅವರದೇನರs ಬಾತಮೀ? ನಮ್ಮ ಭೆಟ್ಟಿಗೆ ಅಲ್ಲದಿದ್ದರೂ, ತಮ್ಮ ದರ್ಶನಾಕಾಂಕ್ಷೀ ಆಗಿ ಬರೂ ವಿಚಾರಾ?"

"No news is good news ದಾದಲ್ಯಾ."

"ಅಂದರ ಅವರ ಆಗಮನಾ ಖಾತ್ರೀಲೇನs ಅಂಧಾಂಗಾತು. ಅದಕs ತಾಂವು ಜಮಖಂಡೀ ಪ್ರೋಗ್ರ್ಯಾಮ್ ಕ್ಯಾನ್ಸಲ್ ಮಾಡಿ ಇಲ್ಲೇ ತಳಾ ಊರೂದು ಅಂತs ತರಾಸೀರಿ ಕಾಣಸ್ತದ. ಬಾಯೀಸಾಹೇಬ, ಇನ್ನೂ ಎದರಾಗ ಏನಿಲ್ಲಾ. ಹಾಲಿನವರು ಒಂದಕಡೆ. ಬಟ್ಟಲದವರು ಇನ್ನೊಂದ ಕಡೇ. ಆದರ ನಡವs, ವಸುಧಾ-ವಿಶ್ವಾಸರಾಯರದು ಗುಟಕ್-ಗುಟಕ್ ನಡದ್ವದ. ಕ್ಷೀರಧಾರಾನs ಬಾಯಿಗೆ ಹಿಡಧಾಂಗ ಬಾಯಿ ಚಪ್ಪರಿಸಲಿಕ್ಕೆ ಹತ್ತ್ಯಾವ."

"ದಾದಲ್ಯಾ, ಕ್ಷೀರಧಾರಾ ಅಂತ ಏನೋ ಅಂದ್ಯಲಾ. ಎಲ್ಲ್ಯರs ಅಭಿಷೇಕದ ಔತ್ನ ಏನರs ಬಂದದೇನು?"
ಏನೋ ಕೆಲಸದ ನಿಮಿತ್ತವಾಗಿ ಪಾರ್ವತೀಕಾಕೂನ ಕಡೆಗೆ ಬಂದ ಬನೂಮಾಮೀ ನಾವಿದ್ದಲ್ಲಿಗೆ ಬರುತ್ತ ಕೇಳಿದರು.

"ಏನರs ಬಾಯಿ ಬಿಟ್ಟ್ಯಂದರ ನೋಡ್ಯಾಂ, ದಾದಲ್ಯಾ."
ವಸೂ ಮತ್ತೊಮ್ಮೆ ಕಿವಿಯ ಗಿರಡಿಯನ್ನು ತಿರುಗಿಸುತ್ತ ಹೇಳಿದಳು.

"ಮಾಮೀ, ತ್ರಾಸ ಆತರೀ. ಈ ಕಿಂವೀ ಹೀಂಗs ಸಿಕ್ಕು ಒದ್ದ್ಯಾಡಲಿಕ್ಕೆ ಹತ್ತಿ. ನಾ ಏನು ಕೇಳಬಾರದು ಕೇಳಿದ್ದಿಲ್ಲಾ. ನಾ ಊರಾಗ ಇಲ್ಲದಾಗ, ವಿಶ್ಯಾನ ಪತ್ರ ಏನರs ಬಂದಿತ್ತೇನು ಅಂತ ಅಷ್ಟs ಕೇಳಿದ್ದೆ."

"ದಾದಲ್ಯಾ ಅಷ್ಟs ಕೇಳಿದ್ದರ, ಮಾಮೀ, ನಾನೂ ಸರ್ರಳ ಉತ್ತರಾ ಕೊಡತಿದ್ದೆ. 'ಹಾಲಿಲ್ಲಾ ಬಟ್ಲ ಇಲ್ಲಾ ಗುಟಕ್' ಯಾಕ ನಡದದ ಅಂತ ಯಾ ಉದ್ದೇಶದಿಂದ ಅಂದಿದ್ದ ಕೇಳ್ರಿ. ನೂರ ಮನೀ ಘಂಟಿ ಬಡಕೋತ ಅಡ್ಯಾಡತಾನ. ಹೋದಲ್ಲೆಲ್ಲಾ, ವಿಶ್ವಾಸ, ಮಸ್ತ ವರಾ ಏನ್ರ್ಯಪಾ, ನಾ ಜವಮಾಸಿಕೊಡತೀನಿ ಅಂತ ಪ್ರಚಾರಕೀ ಹೊಡದ ಬರತಾನ. ಇಲ್ಲೆ ಬಂದು, ಮುದ್ದಾಂ ನನ್ನ ಮುಂದs ಅದರ ಪಟಾ ಬಿಚ್ಚತಾನs. ನನಗ-ವಿಶ್ಯಾಗ, ಹಾಲಿಲ್ಲಾ ಬಟ್ಲ ಇಲ್ಲಾ ಗುಟಕ್ ಯಾತರಲೇ ಅಂತೀರಿ ಅಂತ ಕೇಳತಾನ."

"ವಸೂ, ದಾದಲ್ಯಾ ದಾದಲ್ಯಾ, ಹರಾಹುರೀಗೆ ಬಿದ್ದಾ. ವಿಶ್ಯಾ ಬರಲಿ. ಇಂವನ ಚೆಟ್ಟಾನs ಬೆಳಗತಾನs. ನಿನ್ನ ಕಾಣೂತ್ಲೇ ಗುರ್ ಮಾಡತಾನ. ಮೊನ್ನೆ ದೇವರಪೂಜೀ ಮಾಡತನs ನಡವs ಗಾಡೀ ನಿಂದರಸಿದಾ. ನೇವಿದ್ಯಾ ಇಡತೀರೇನಂತ ಕೇಳಲಿಕ್ಕೆ ಬಂದಾವಾ, ನನಗೇನಂತಾನಂದೀ, ಮಾಮೀ, ವಿಶ್ಯಾಂದೂ ವಸೂಂದೂ, ಕುಂಡಲೀ ಹೀಂಗ ಮಸ್ತ ಕೂಡತದ ನೋಡರೀ. ಪುಣೇದಾಗ ನಾನಾ ಅನೂ ಜೋತಿಷಿಗೋಳು ದಂಗ ಆದರು ಅಂತs. ಗೋವಿಂದಭಟ್ಟಾ, ಬರೇ ಪೂಜಿ-ಪುನಸ್ಕಾರಾ ಅಷ್ಟs ಕಲಿಸಿರಬೇಕಂತ ಮಾಡಿದ್ದೆ. ದಾದಲ್ಯಾ ಚೌಸಷ್ಠ ಕಲಾನೂ ಕಲತಾನ. ಅದಕs ಎಲ್ಲೆ ಹೋದಲ್ಲೆ ಅಟ್ಟಿಸಿಹೋಗತಾನ. ಜಮಖಂಡಿಗೆ ಹೋಗಿ ಬರಲಿ. ನಿಮ್ಮ ಮಾಮಾನ ಕಡಿಂದ ಪತ್ರ ಬರತ್ಯದಿಲ್ಲೋ ನೋಡತಿರೂ. ದಾದಲ್ಯಾನ್ನ ನಮ್ಮಲ್ಲೆ ಇಡತೀರೇನಂತ. ಜಮಖಂಡೀ ಕಾರಭಾರಕೀ ಕೊಟ್ಟರೂ ಮಾಡತಾನ."

"ಮಾಮೀ, ನೀವಿಷ್ಟು ಅಂದರ ಸಾಕು. ದಾದಲ್ಯಾ, ಒಂಟೀ ಡುಬ್ಬಾನs ಏರಿ ಕೂಡತಾನ. ಜಮಖಂಡಿಗೆ ಹೋಗತಾನ. ನಾಕ ದಿನಾ ಅಷ್ಟs ಅರಾಮು ಅನಸ್ತದ, ನೋಡರಿ ನನಗ. ಪೀಡಾದ ಯುದ್ದಲಗಾಟ ತಪ್ಪಿತೂ ಅಂತ."

ನಾನು ನಾಕು ದಿನ ಜಮಖಂಡಿಗೆ ಹೋಗಿಬರುವದರಲ್ಲಿಯೇ ಭಾನಗಡಿ ಯಾಗಿತ್ತು.

ವಿಶ್ವಾಸ ದೀಪಾವಳಿಯ ಸೂಟಿಗೆ ಬಂದಿದ್ದ. ಬಂದದ್ದು ಯಥಾಯೋಗ್ಯ ವಾಗಿತ್ತು. ಇದರಲ್ಲಿ ಭಾನಗಡೀ ಇರಲಿಲ್ಲ. ವಿಶ್ವಾಸ ಬಂದದ್ದಕ್ಕೆ ವಸೂ ಖುಷಿ ಯಾಗಿದ್ದಳು. ಅದು ಸಹಜವಿತ್ತು. ಅದರಲ್ಲಿ ಭಾನಗಡೀ ಇರಲಿಲ್ಲ. ದಸ್ತಗೀರ್‍ಯಾ, ತನ್ನ ಫೆಜ್‌ಕ್ಯಾಪಿನ ರೇಶಿಮೆಯ ಕರಿಯ ಗೊಂಡೆಯನ್ನು ಹುಂಜದಂತೆ ದಿಮಾಕಿ ನಿಂದ ಹಾರಿಸುತ್ತ ಅರ್ಧಡಾಕ್ಟರ್ ವಿಶ್ವಾಸನ ಜೊತೆಯಲ್ಲಿ ಅಸರಂತ ಅಲೆಯು ತ್ತಿದ್ದನಂತೆ. ದೋಸ್ತೀ ಖಾತರ ಇದೂ ಸರಿಯಾಗಿತ್ತು. ಇದರಲ್ಲಿಯೂ ಭಾನ-ಗಡಿಯ ವಾಸನೆ ಇರಲಿಲ್ಲ.

ಆದರೆ......

ಭಾನಗಡೀ ಮಾಡಿತ್ತು, ಸಾಂಗಲೀ ಪೋಸ್ಟ ಆಫೀಸು.

ದಾದಲ್ಯಾನ ಹೆಸರಿಗೆ ಬಂದ ಒಂದು ಮುಗಿಲ ತಿಳಿನೀಲವರ್ಣದ ಪಾಕೀ ಟನ್ನು ಅವನ ಅನುಪಸ್ಥಿತಿಯಲ್ಲಿ, ವಿಶ್ವಾಸನ ಕೈಗಿರಿಸಿ ಅದು ಭಾನಗಡೀ ಭಾಗೀ ದಾರಿಯಾಗಿತ್ತು. ವೈದಿಕಬ್ರಾಹ್ಮಣನ ಬಾಯಿ ಒಂದೇ ಒಡಕಿರುವದಿಲ್ಲ; ಅವನ ನಶೀಬೂ ಮುಕ್ಕಾಗಿರುತ್ತದೆ. ಅದೇನು ಸುಳ್ಳಲ್ಲ ನೋಡಿರಿ. ಅವನಲ್ಲಿ ಏನಾದರೂ ಮಜಬೂತ ಇದ್ದು, ಬಂದದ್ದನ್ನು ಹೊರಬಿಡದೆ ಗಪ್‌ಮಾಡುವದೆಂದರೆ ಅದು ಅವನ ಕೂಳಿನ ತೋಬರಿ. ಅದು ಮಾತ್ರ ಸದೋದಿತ ಖಾಲೀ ಇದ್ದು, ಏನು ಹಾಕಿದರೂ, ಎಷ್ಟು ಹಾಕಿದರೂ ದಕ್ಕಿಸಿಕೊಂಡು, ಅಪೂರ್ಣ-ಅತೃಪ್ತ-ಅಪೂರ್ತ ವಾಗಿಯೇ ಉಳಿಯುತ್ತದೆ. ಆದರೆ ನಶೀಬು......ಅದು ಮಾತ್ರ ಸಹಾಸ್ರಾಕ್ಷ ನಂತೆ ಛಿದ್ರಮಯವಾಗಿರುತ್ತದೆ. ಒಂದು ಸಣ್ಣ ಮಾತು – ಒಂದು ಕ್ಷುಲ್ಲಕ ಗುಪಿತ, ಇಷ್ಟನ್ನೂ ಕೂಡ ಅದಕ್ಕೆ ದಕ್ಕಿಸಿಗೊಡುವ ಶಕ್ತಿಯನ್ನು ವಿಧಾತೃ ಅದಕ್ಕೆ ಕೊಟ್ಟಿಲ್ಲ.

ದಾದಲ್ಯಾನ ಒಂದು ಸಣ್ಣ ಗುಪಿತವನ್ನು ಈ 'ಸ್ಕಾಯ್-ಗ್ರೀನ್' ಪಾಕೀಟು ಖಾಲೀಮಾಡಿತು.

ದಾದಲ್ಯಾ ಸಂಜೆಯ ಗಾಡಿಗೆ ಜಮಖಂಡಿಯಿಂದ ಬಂದ. ಅವನು ಬಂದಾಗ ವಿಶ್ವಾಸ-ವಸೂ, ವಿಶ್ವಾಸನ ಕೋಣೆಯಲ್ಲಿ ಯಥಾಪ್ರಕಾರ ಜಮಾಸಿದ್ದರು. ವಿಶ್ವಾಸ ಬಂದಾನೆಂಬ ಸುದ್ದಿ ಕೇಳಿ ಬೇಭಾನನಾದ ದಾದಲ್ಯಾ, ಅವನನ್ನು ಅಪ್ಪಿ ಮುದ್ದಾಡುವ ಅತಿರೇಕ ಉತ್ಸಾಹದಿಂದ ಅವನ ಕೋಣೆಗೆ ಹೋದರೆ —

"ಹಂs, ದಾದಲ್ಯಾ, ಅಲ್ಲೇ ಅಲ್ಲೇ, ದೂರ ನಿಂದರು. ಸನೇಕ ಬಂದಗಿಂದೀ. ನಿನಗ ಠಾಂವಕಿಲ್ಲ ಕಾಣಸ್ತದ?"
ಎಂದು ವಸೂ ನಮ್ಮನ್ನು ಕೋಣೆಯ ಬಾಗಿಲಲ್ಲೇ ತಡೆದು ನಿಲ್ಲಿಸಿದಳು. ಇಬ್ಬರೂ ಗಂಭೀರರಾಗಿದ್ದರು ಬೇರೆ. ನಮಗೇನೋ ಪ್ರಕರಣ ಘೋಟಾಳೇದ್ದಿರ ಬೇಕೆಂದೆನಿಸಿತು.

ಗೋವಿಂದಭಟ್ಟನ ತಾಯಿ – ನಮ್ಮ ಅಜ್ಜಿ, ಕಳೆದ ಹತ್ತು ವರ್ಷಗಳಿಂದಲೂ ಟುಕುಟುಕು ಎನ್ನುತ್ತಿದ್ದಳು. ಅಂತಕನ ದೂತರಿಗೆ ಕಿಂಚಿತ್ತು ದಯವಿಲ್ಲವೆಂದು ಕೈಲಾಗದ ದಾಸರು ಹಾಡಿದ್ದಾರೆ. ಆದರೆ ಆ 'ಡ್ಯೂಟಿ ಬೌಂಡ್' ದೂತರು ಬಂದರೆ ಅವರು ಬರುತ್ತಿದ್ದ ಭಾಸ ಬಂದರೇ ಸಾಕು, ನಮ್ಮ ಅಜ್ಜಿ, ಪ್ರಾಣಾಂತಿಕ ದಮ್ಮಿನ-ಕೆಮ್ಮಿನ ಅಪ್ಪನಂತೆ ಖೇಕರಿಸಲಿಕ್ಕೆ ಸುರುವುಮಾಡಿದರೆ ಆ ಅಂತಕನ ದೂತರು, ಸಹಿ-ಸಲಾಮತ್ ಪಾರಾಗಿ, ಜೀವಂತ ಪಾರಾಗುವದು ಕಠಿಣವಾಗಿಬಿಡುತ್ತಿತ್ತು. ಪರೆಬಿಟ್ಟ ಹಾವಿನಂತೆ, ಒಮ್ಮೆ ಖೆಮ್ಮಿ ಗೆದ್ದ ಅಜ್ಜಿ, ಪೆನ್‌ಶನ್ ಘಾಜೆಗಟ್ಟಿ ದಾಟಿದ್ದರೂ, ನವಕರಿಯಲ್ಲಿ ಮತ್ತೆ 'ಎಕ್ಸ್‌ಟೆನ್ಶೈನ್' ಸಿಕ್ಕ ಚಾಕರೀ-ಚಿಕಾಟೀ-ವ್ಯಕ್ತಿಯಂತೆ ಟಾಣಳಾಗುತ್ತಿದ್ದಳು. ನನಗೆ ಗೊತ್ತಿರುವಂತೆ ಅವಳು ಈ ಸಾಧನೆಯನ್ನು ಕಳೆದ ಹತ್ತು ವರ್ಷಗಳಿಂದಲೂ ಮಾಡಿದ್ದಾಳೆ. ಗೊತ್ತಿರದೆ ಎಷ್ಟು ವರ್ಷ ಥಕಲಾಪಟ್ಟೀ ನಡೆಸಿದ್ದಾಳೋ ಅದು ಅಚಿಂತ್ಯ ಪರಮಾತ್ಮನಿಗೇ ಠಾಂವಿಕೆ.

ಅವಳೇನಾದರೂ ಈಗ ಟ್ಯಾಂ ಹೊಡೆದಳೇ – ಟಿಕ್ ಎಂದಳೇ – ಅದಕ್ಕೇ ನಮ್ಮನ್ನು ಸಮೀಪಗತವಾಗಿಸದೆ, ಶುದ್ಧಿವಿಚಾರದಿಂದ ದೂರ ನಿಲ್ಲಿಸಿದರೇ ಎನ್ನುವದು ತಿಳಿಯಲಿಲ್ಲ. ಹಾಗೇನಾದರೂ ಇದ್ದರೆ, ನಾನು ಕೈಕಾಲು-ಮೋರೆ ತೊಳೆದುಕೊಳ್ಳಲು ಬಚ್ಚಲಿಗಿಳಿಯುವ ಮುಂಚೆ, ಬನೂಮಾಮೀ ಅವರೇ ಹೇಳುತ್ತಿದ್ದರು. ಜಲಸ್ಪರ್ಶಮಾಡಿಸಿಗೊಡುತ್ತಿರಲಿಲ್ಲ. ನಮ್ಮ ವಿಚಾರಚಕ್ರ ಕುಂಬಾರನ ತಿಗರಿಯಂತೆ ಇನ್ನೂ ಗಿರಕಿಹೊಡೆಯುವಾಗ, ಎರಡೂ ಹುಲಿ ಮುಸಿ ಮುಸಿ ನಗತೊಡಗಿದವು. ಕಣ್ಣು ಪಿರಿಕಿರಿದು ಮಾಡತೊಡಗಿದವು. ಅಜ್ಜಿ ಟ್ಯಾಂ ಎಂದಿರಬೇಕೆಂಬ

ಕಲ್ಪನೆಗೆ ಘೂಸಿಗೋ ಆಯಿತು. ಭಾಸ ಆಭಾಸವಾದ ಫಾಯದೇ ಅಜ್ಜಿಗೆ ದೊರಕಿ ಮತ್ತೆ ಅವಳಿಗೆ 'ಎಕ್ಸೈಟ್ಮೆನ್ಟ್' ಸಿಕ್ಕಿತು. ಆ ಬಗ್ಗೆ ನಮಗಂತೂ ಖಾತ್ರೀ ಆಯಿತು.

ವಿಶ್ವಾಸ-ವಸೂ, ಮಿಕ-ಯುತಿ ಇನ್ನೂ ಮುಸಿನಗೆಯ ಲಾಸ-ವಿಲಾಸ ದಲ್ಲಿಯೇ ಇತ್ತು.

"ನಾ ಜಮಖಿಂಡೀಯಿಂದ ಬರೂದರಾಗ ವಿಶ್ಯಾ ಹ್ಯಾಂಗ ಅಚಾನಕ ಆಗಿ ಬಂದ ಇಳದಾ ಅನೂದಕ್ಕ ನಗತೀ ಹೌದಲ್ಲೋ? ವಸೂ, ನೀ 'No news is good news' ಅಂದಾಗs ನನಗ ಅನಿಸಿತ್ತು. ವಿಶ್ಯಾನ ಆಗಮನಾ ಖಚಿತಂತ. ನನ್ನ ಚಕಿತಮಾಡಬೇಕೆಂತ ಡಾವ್ ಮಾಡಿದ್ದಿ. ಅದು ಸಾಧಿಸ್ತ್ಯೂ ಅನ್ನೂದಕ್ಕ ನಿಮ್ಮ ನಗೀ-ನೇತ್ರಪಲ್ಲವಿ. ನನಗ ಗೊತ್ತಿಲ್ಲೇನು?"

"ದೇವರs ಅಂತ, ಇದs ಊರಿಂದ ಬಂದೀದಿ, ದಾದಲ್ಯಾ. ಅಷ್ಟ ಚಹಾ-ಪಿಹಾ ಬಗೀಹರಸು. ಶಂಕರಕಾಕಾಗ ಜಮಖಿಂಡೀ ಪ್ರೋಗ್ರಾಮುದ್ದು ವರದೀ ಒಪ್ಪಿಸಿ ಬಾ. ನಿವಾಂತಾಗಿ ಕೂಡೂಣು. ದಸ್ತಗಿರ್ಯಾನೂ ಬರಾಂವ ಇದ್ದಾನ, ಇದರಗಷ್ಟ ಅದs. ಶಿಸ್ತ ಆಗಿ ರಂಧಾಹೊಡೆಯೂದದs ಮಗನs. ಭಾಳ ದಿನಾ ಆತು, ಭೆಟ್ಟಿ ಆಗದs."

ವಿಶ್ವಾಸ ಮಾತು ಮಿಂಚಿಸಿದ. ಅಷ್ಟರಲ್ಲಿ ಅಡುಗೆಯ ಮನೆಯ ಒಳಗಿಂದ ಬನೂಮಾಮೀ —

"ದಾದಲ್ಯಾ, ಚಹಾ ಆಗೇದ. ಇಲ್ಲೇ ಬರತೀರ್ಯೋ ಏನ ಅಲ್ಲಿಗೆ ಒಯ್ಯತ್ಯೋ ನೋಡು. ಚಹಾ ಕುಡದ ಕೂಡರಿ ಪರಟಿಗೆ. ಆ ಸಾಬ ಬಂದನೋ ಇಲ್ಲೋ ಇನಾ? ಇನ್ನ ನೀ ಬಂದಿ. ಬೆಳಗ ಆದರೂ ಬಗೀಹರಿಯೂದಿಲ್ಲ ಹರಟಿ. ನೀ ಬರೂ ಹಾದೀನs ನೋಡತಿದ್ದರು ಇಬ್ಬರೂ."

ಎಂದು ಹೇಳಿದರು.

ಮೂವರ ಚಹ ಕೋಣೆಯಲ್ಲಿಯೇ ಮುಗಿಯಿತು. ಕಪ್ಪು-ಬಸಿ ಬಚ್ಚಲು ಮನೆಯಲ್ಲಿ ಮಡಗಿಸಿ ಬಂದೆ. ನಾನು ತಿರುಗಿ ಕೋಣೆಗೆ ಬರುವಷ್ಟರಲ್ಲಿ, ವಸೂ, ಅಡಿಕೆಯ ಪುಡಿಯ ಡಬ್ಬಿಯಿಂದ ಸಣ್ಣ ಚಮಚೆಯಲ್ಲಿ ಅಡಿಕೆಯ ಪುಡಿ ಎತ್ತಿ, ತೈನಾತಿಯ ಆಳಿನಂತೆ ಎದುರು ಬಂದಳು. ಈ ರಾಜಸನ್ಮಾನದ ಅರ್ಥ ನಮಗೆ ಅವಗತವಾಗಲಿಲ್ಲ.

"ಹೂಂ. ಮತ್ತೇನ ದಾದಲ್ಯಾ, ಎಲ್ಲಾ ಖುಶಾಲsa?"
ವಿಶ್ವಾಸ ಕೇಳಿದ.




"ಎಲ್ಲಾ ಆರಾಮsa?"
ವಸೂನ ಕಿತಬಿ.

"ಜಮುಖಂಡೀ ಏನಂತದಪಾ?"
ವಿಶ್ವಾಸನ ಪ್ರುಚ್ಛೆ.

"ಜಮುಖಂಡೀ ಹವಾ-ಪಾಣೀ ಹ್ಯಾಂಗಪಾ?"
ವಸೂನ ದುಜೋರಾ.

"ಜಮುಖಂಡೀ ವಾಸ್ತವ್ಯದಾಗ......"
ವಿಶ್ವಾಸನ ಅರೆಗಚ್ಚಿ ಮಾತು.

"ಲಿಕೋಣೀ-ಬಿಕೋಣೀ ಗಿರಾಕಿ ಏನರsa......?
ವಸೂನ, ವಾಕ್ಯಪೂರ್ಣಮಾಡುವ ಸನ್ನಾಹ.

"ಇಕಾ, ಕೇಳೂದು ಕೇಳತೀರಿ. ಒಬ್ಬರsa ಕೇಳರಿ. ಒಂದsa ಗುಂಡ ಹಾರಲಿ. ರಾವಜೀಕಾಕಾನ ಜೋಡನಳೀ ಬಂದೂಕಿನ್ಹಾಂಗ ಡಬಲ್-ಬಾರ್ ಆಗೂದು ಬ್ಯಾಡಾ. ದಾದಲ್ಯಾ ಚಿತ್-ಪಟ್ ಆದಾನು."
ಅರ್ಥಾತ್ ಅಸ್ಮಾದಿಕರು.

"ನೀ, ಯಾರ್ನರsa ಚಿತ್-ಪಟ್ ಮಾಡೂ ಮಗಾ. ನೀ ಎಂದಾರsa ಚಿತ್-ಪಟ್ ಆದೀಯಾ?"
ವಿಶ್ವಾಸ.

"ಇಲ್ಲೆ, ಸಾಕ್ಷಾತ್ ನ್ಯಾಯದೇವತಾ – ದೇವತಾ – ಸ್ತ್ರೀರೂಪಿ ಅನ್ನೂ ದೃಷ್ಟಿಯಿಂದ, ವಸುಧಾಬಾಯರು ಸ್ಥಾನಾಪನ್ನ ಆಗ್ಯಾರ. ತಾಂವು, ಡಾ. ವಿಶ್ವಾಸರಾವ ದಾತಾರ, ತಮ್ಮ ಫಿರ್ಯಾದೀ ಏನಂಬೂದನ್ನ ಅವರ ಮುಂದ ದಾಖಲ್ ಮಾಡರಿ. ನಾವೂ ನಮ್ಮ ಬಾಜೂ ಮಂಡಸ್ತೇವು. ದೇವತಾ ನ್ಯಾಯನಿರ್ಣಯ ಕೊಡಲಿ"
ನಾವು.

"ಕಬೂಲsa ದಾದಲ್ಯಾ. ಹಿಂದಾಗಡೇ ನೀನು ಅನ್ಯಾಯ ಆತಂತ ಪೇಚ್ಯಾಡಿ. ಜಡ್ಜಮೆಂಟ್ ಪ್ರಕಾರ ನಡೀಲಿಕ್ಕೆ ಕಬೂಲ ಆಗಬೇಕು."
ವಿಶ್ವಾಸ.

"ಅಲಬತ್."

ನಾವು.

"ನಮ್ಮ ಫಿರ್ಯಾದೀ ಈ ಪ್ರಕಾರ ಅದs. ಏನಂದರ, ದಾದಲ್ಯಾ ಅವಿಶ್ವಾಸೀ ಇದ್ದಾನ. ಅರಗಚ್ಚಿ ಸತ್ಯ ಕಥನ ಮಾಡತಾನ. ಪೂಜಿ-ಪುನಸ್ಕಾರದ ನೆವದಿಂದ, ಶಿಕೋಣೀ-ಪಿಕೋಣಿ ನೆವದಿಂದ ಪಾಂಡವದ್ಯುಮಣೀ ಪಾರ್ಥ ಆಗಿ, ಸುಭದ್ರಾನ್ನ ಹರಣಮಾಡತಾನ. ವ್ಯರ್ಥ ಅಕಿನ್ನs ಉತ್ಕಂಠಿತಾ ಅಭಿಸಾರಿಕಾನ್ನ ಮಾಡತಾನ. ವಿರಹಜ್ವರಪೀಡಿತಾನ್ ಮಾಡತಾನ. ಇಷ್ಟ ಭಾನಗಡೀ ಮಾಡಿದರೂ, ತಾ ತಾ ಕೃಷ್ಣನ್ಹಾಂಗ ನಿರ್ಲಿಪ್ತ ಇದ್ದೀನಿ ಅನ್ನೂ ಭಾಸಮಾಡತಾನ. ಇವು ನನ್ನ 'ಗ್ರೇವ್ಹ್ ಚಾರ್ಜಿಸ್' ಅವs. ನೀ 'ರಿಫ್ಯೂಟ್' ಮಾಡೂ ಹಾಂಗ ಇದ್ದರ ಮಾಡು."

ವಿಶ್ವಾಸ ಫಿರ್ಯಾದ ದಾಖಲಮಾಡಿದ. ಈಗಾಗಲೇ ನಾವು ಗಳಿತಾವಸಾನರಾಗಿದ್ದೆವು. ಆದರೂ ಮೀಸಿಗೆ ಮಣ್ಣು ಹತ್ತಿಲ್ಲವೆಂದು ತೋರಿಸುವ ಆವಿರ್ಭಾವದಿಂದ —

"ಇವು 'ಗ್ರೇವ್ಹ್ ಚಾರ್ಜಿಸ್' ಅಲ್ಲಾ. 'ಬೇಸಲೆಸ್ ಎಲಿಗೇಶನ್' ಅವs. "I plead non-guilty to the charges, your Honour".

ಹಿಂದೀ ಸಿನೇಮಾದಲ್ಲಿ ಕಂಟ್ರೀ ಬ್ಯಾರಿಸ್ಟರ – ಅಪರಾಧಿಗಳು ತಪ್ಪೋ-ಒಪ್ಪೋ, ಇಂಥ ವಾಕ್ಯಮಾಣಿಕ್ಯವನ್ನು ಹೆಣೆಯುತ್ತಿದ್ದರು. ಅದನ್ನು ಕೇಳಿದ್ದ, ನಾವು ಪಾಠಮಾಡಿಕೊಂಡ, ಈ ಅದ್ಭುತ ಕೋರ್ಟಿನ ಭಾಷೆಯನ್ನು ಜಡಿದು ಮೋಕಳೀಕರಾದೆವು.

"ವಿಶ್ವಾಸರಾವ್, ನಿಮ್ಮ ಚಾರ್ಜಿಸ್ 'ಸಬ್‌ಸ್ಟ್ಯಾನ್ಶಿಯೇಟ್' ಮಾಡಲಿಕ್ಕೆ ದಾಖಲೇ ಏನರs ಅವs ಏನು? ಇದ್ದರ ಹಜರಮಾಡಬೇಕು"

ನ್ಯಾಯದೇವತೆ ಗಂಭೀರವಾಗಿ ಹೇಳಿದರು.

"ಲೇಖೀ ಸಾಕ್ಷೀ ಅವs ನಮ್ಮ ಕಡೇ. ಓದಿ ತೋರಸ್ತೇನಿ ನೋಡರಿ" ಎಂದು ನುಡಿದು, ವಿಶ್ವಾಸ ಕಿಶೆಯಲ್ಲಿಯ 'ಸ್ಕಾಯ್-ಗ್ರೀನ್' ಪಾಕೀಟಿನಿಂದ 'ಪಿಂಕ್-ಕಲರ್-ಲೆಟರ್' ನಲ್ಲಿಯ ಬಾತಮೀ ವಾಚನಕ್ಕೆ ಸುರುವುಮಾಡಿದ:

*My dear — dearest Dadalya,*

I have no letters from you dear Dadalya. Why so? Your dear Shaku is very anxious. Where are you? What

are you doing? I remember you very very much. You stand before my eyes. You stand before my mind. How can I forget you? Dear Dadalya, I remember the poem you taught me. I remember that also which you gave me. When I remember that, I feel very happy. How can I forget that? I have kept that pleasure in my heart. But you don't remember me Dadalya. Why are you silent? Don't sit silent. Please write me very long and sweet letters. If you don't write I will also not write. Dear Dadlaya, when are you coming to us. You promised me to come in Divali. Will you come? Father is anxious. Mother is anxious. Mama is also anxious. They remember you very very much. Please write early, write quickly. I am waiting your long long sweet letter. Will you write?

Have I not improved my English Dadalya? How do you find my English? Is it sweet? Is it nice? Please tell me.

I am always yours lovely

—ಶಕೂ.

ಶಕ್ರ, ವಜ್ರಾಯುಧ, ಮಹಾರುದ್ರ ತ್ರಿಶೂಲ, ಚಕ್ರಿ, ಚಕ್ರ, ಕೋದಂಡ ಪಾಣಿ ರಾಮ, ಮಹಾಧನುರ್ಧರ ಪಾರ್ಥ, ತಮ್ಮ ಸರ್ವ ದಿವ್ಯಾಸ್ತ್ರಗಳನ್ನು ಏಕಕಾಲಕ್ಕೆ ದಾದಲ್ಯಾನ ಮೇಲೆ ಎಸೆದರು. ದಾದಲ್ಯಾ ಕುಳಿತಲ್ಲಿಯೇ ಕಣ್ಣು ಮುಚ್ಚಿ ತಣ್ಣಗಾದ. ದಾದಲ್ಯಾನ ಅಜ್ಜಿಯನ್ನು ಅರಸಿ ಬಂದ ಅಂತಕನ ದೂತರು ಬರಿಗೈಯಿಂದ ಮರಳುವದು ನಾಮರ್ದತನವೆಂದು, ಅಜ್ಜಿಯ ಬದಲಿಗೆ, ಈ ಮೊಮ್ಮಗನನ್ನೇ ಎಳೆದುಕೊಂಡು ಹೊರಟಂತಿತ್ತು. ಈ ಸತ್ಯವಾನನ ಪ್ರೇತದ ಬೆನ್ನಿಗೆ, ಯಾವ ಸತಿ, ಸಾವಿತ್ರಿಯೂ, ಬರುವ ಲಕ್ಷಣವಿರಲಿಲ್ಲ. 'Lovely ಶಕೂ'

ದಾದಲ್ಯಾನ 'ಗ್ರೇವ್ಹ್‌ಯಾರ್ಡ್'ನ್ನ ಹಮುಚೌಕ 'ಲೆಟರ್-ಹೆಡ್'ನಲ್ಲಿ ಸಿದ್ಧಮಾಡಿದ್ದಳು. ಇನ್ನು ಪರಲೋಕದಿಂದಲೇ ಅವಳು 'ಲಾಂಗ್ ಸ್ಟೀಟ್ ಲೆಟರ್ಸ್'ಗಳನ್ನು ಅಪೇಕ್ಷಿಸದೆ ಗತಿ ಇರಲಿಲ್ಲ. ಹತಪ್ರಭನಾದ ದಾದಲ್ಯಾ, ಕುರ್ಚಿಯಲ್ಲಿ ಹೆಣವಾಗಿ ಕುಳಿತ. ಒಂದು ಕಿವಿಯಲ್ಲಿ ವಿಶ್ಯಾ, ಇನ್ನೊಂದು ಕಿವಿಯಲ್ಲಿ ವಸೂ –

"My dear — dearest ದಾದಲ್ಯಾ"

ಎಂದು

"Your lovely — ಶಕೂ".

ಎಂದು – ಪಿಸುಗುಟ್ಟಿದರು. ಇಬ್ಬರೂ ಒಂದೊಂದು ಬದಿಯ ಪಕ್ಕಡಿಯನ್ನು ತಿವಿದರು. ನಾನು ಕಣ್ಣು ಬಿಟ್ಟಕೂಡಲೇ,

"Is it nice? Is it sweet?"

ಎಂದು ವಿಶ್ಯಾ ಅಂದ.

"Your lovely — ಶಕೂ"

ಎಂದು ವಸೂ ಅಂದಳು.

ವಿಶ್ವಾಸ ತನ್ನ ಟ್ರಂಕಿನಿಂದ 'ಲೆಟರ್‌ಪ್ಯಾಡ್' ತೆಗೆದು ಮುಂದೆ ಮಾಡಿದ. ವಸೂ, ಅಲ್ಲೇ ಮೇಜಿನ ಮೇಲಿದ್ದ ವಿಶ್ವಾಸನ ಪೆನ್ನನ್ನು ನನ್ನ ಕೈಯಲ್ಲಿರಿಸಿದಳು. ವಿಶ್ವಾಸ ಹೇಳಿದ:

"ಹೂಂ. ಸುರೂ ಆಗಲಿ ದಾದಲ್ಯಾ. "My dear — dearest lark ಶಕೂ ಅಂತs. ಅನುಮಾನ ಯಾಕ ಮಗನs? ದಿನಾ ಒಂದು ಪತ್ರಾ ಬರೆಯೂ ಶಿಕ್ಷಾ ನಿನಗ. ನನ್ನೂ 'ಬೇಸಲೆಸ್ ಎಲಿಗೇಶನ್ಸ್' ಅಂದ್ಯಲ್ಲs. ಇನ್ನ ಶಕೂನ ಜೋಡೀ ಮಾಟ ಆಗಿ ಸುರಗ್ಯಾಗ ಕೂಡೂ ತನಕಾ ಹತ್ತ್ಯು ನಿನಗ ಪತ್ರಲೇಖನ ಧಂದೇ."

"ವಿಶ್ಯಾ-ವಸೂ ಒಂದಿಷ್ಟು ದಮ್ಮ ತಿನ್ನರಿ. ಶಾಂತರೀತಿಯಿಂದ ಕೂತಗೊಂಡು ನನ್ನ ಅಂಬೋಣ ಕೇಳಕೋರಿ. ವಿಶ್ಯಾ, ಖರೇ ಹೇಳತೀನಿ. ನೀ ನಂಬೂ, ಬಿಡೂ. ನೀ ನಂಬತೀ ಅನ್ನೂ ಖಾತ್ರೀ ಅದs ನನಗ. ಹೀಂಗ ಆದದ್ದು ಖರೇ. ವಿಶ್ಯಾ, ನಾ ತಪ್ಪ ಮಾಡಿದೆ. ಶಕೂ, ಮುಗ್ಧ ಕೂಸಿನಂಥಾ ಹುಡಿಗೀ. ನನ್ನ ಕಡೇ ವಿದ್ಯಾ ಕಲಿಯೂಡಕಂತ ಬಂದಳು. ಒಂದ ಕ್ಷಣಾ ನನ್ನ ಕಾಲು ಜಾರಿತು. ನಾ ಗೈರ ಫಾಯದೇ ತಗೊಂಡೆ. ಮಾಡಿದ ತಪ್ಪು ಲಗೇಚ ತಿಳೀತು. ಆ ಕೂಸಿನ ಕಲ್ಯಾಣದ

ದೃಷ್ಟಿಯಿಂದ – ಮಂಗಲದೃಷ್ಟಿಯಿಂದ ಬೆಳಗಾಂವೀ ಬಿಟ್ಟೆ. ಅಣ್ಣಾ ತಂಗಿನ್ನ ಹರಸೂ ಹಾಂಗ ಅಕಿನ್ನ ಹರಸಿದೆ. ಆ ಕೂಸಿಗೆ ನನ್ನ ಹರಕೀ ಅರ್ಥ ಆಗಲಿಲ್ಲಾ. ಆದಕs, ಹೀಂಗ ಪತ್ರಾ ಬರದಾಳ. ನಂದು ಶಕೂಂದು ಗುರು-ಶಿಷ್ಯನಾತೇ ಬಂದಿತ್ತು. ಸಂಬಂಧ ಬಂದಿತ್ತು. ಅಕೀ ನನಗ ತಂಗೀ ಸರೀ ಆಗಿದ್ಲು. ಆದನ್ನ ಒಂದ ಕ್ಷಣಾ ಮರತು ನಾ ಪಾಪಾ ಮಾಡಿದೆ. ಅದರ ಪ್ರಾಯಶ್ಚಿತ್ತಾ, ನನಗ ಪಶ್ಚಾತ್ತಾಪದಿಂದ ಸಿಕ್ಕsದ. ಕ್ಷಣದ ತಪ್ಪಿಗೆ ನಿರಂತರ ಮರಗೂದರಕಿಂತಾ ಅದನ್ನು ತೊಳದು ನಿರ್ಮಲ ಆಗೂದು ಠೀಕಾ. ನಾ ಅದನ್ನ ಮರತು ಮೋಕ ಳೀಕ ಆಗೀನಿ. ತಪ್ಪು ಶಕೂಂದಲ್ಲಾ. ಶಕೂನ್ನ ತಪ್ಪ ಹಾದಿಗೆ ಎಳದಾಂವ ನಾನು. ಪ್ರೀತಿ ಕುರುಡಂತಾರ. ಪ್ರೀತಿ ಅಲ್ಲಾ ಕುರುಡು. ಕಾಮಾ – ಉನ್ಮಾದಾ ಅದು ಕುರುಡದ. ಆ ಉನ್ಮಾದದ ಕ್ಷಣಾ ಎಂದೋ ಕಣ್ಣ ಮುಚ್ಚಿತು. ದಾದಲ್ಯಾ ಅದನ್ನ ಮಣ್ಣ ಮಾಡಿ ಭಾಳ ದಿನಾ ಆತು. ಶಕೂ ಧೊಡ್ಡ ಮನೆತಾನದ ಕೂಸು. ಧೊಡ್ಡ ಮನೀಗೆ ಹೋಗಾಕಿ. ಇನ್ನೂ ತಿಳವಳಿಕಿ ಬೆಳದಿಲ್ಲಂತ ಹೀಂಗ ಬರದಾಳ. ಅದು ಬೆಳೀತಂದರ, ತಾನs ತಿಳಕೋತಾಳ. ತಿಳೀಲಿಲ್ಲಂದರ, ದಾದಲ್ಯಾ, ಅಣ್ಣ ಆಗಿ ಆ ತಂಗಿಗೆ ತಿಳವಳಿಕಿ ತಂದ ಕೊಡತಾನ. ಎಲ್ಲಾರಿಗೂ ವಸೂನ ದೈವದತ್ತ ತಿಳವಳಿಕಿ ಇರೂದಿಲ್ಲಾ. ಎಲ್ಲಾರಿಗೂ ವಿಶ್ಯಾನ ನಿಗ್ರಹಸಾಮರ್ಥ್ಯ ಇರೂದಿಲ್ಲಾ. ದಾದಲ್ಯಾ, ತಪ್ಪ ಹೆಜ್ಜೀ ಇಟ್ಟಿದ್ದಾ. ಆದರೂ ತಿದ್ದಿಕೊಂಡು ಗೆದ್ದಾನ. ಶಕೂನ್ನೂ ತಿದ್ದ್ಯಾನು ಅನ್ನೂ ಧೈರ್ಯಾ ಅದs ಅಂವಗ. ನಾ ಇದನ್ನೆಲ್ಲಾ ನಿನಗ ಬರದು ತಿಳಸಲಿಲ್ಲಾ. ತಿಳಸಬಾರದು ಅನ್ನೂ ಭಾವನಾ ಏನ ಇದ್ದಿದ್ದಿಲ್ಲಾ. ಆ ವಿಷಯನs ನಾ ಪೂರಾ ಮರತಬಿಟ್ಟಿದ್ದೆ. ಏನೂ ಘಟಿಸಲಿಲ್ಲಾ ಅಂತ ನಿಶ್ಚಯಿಸಿಕೊಂಡಿದ್ದೆ. ಈಗೂ ಅಷ್ಟೇ.

ವಿಶ್ಯಾ, ನಾ, ಬೆಳಗಾಂವ್ಯಾಗ, ಶಕೂನ ಪ್ರೇಮಸಂಪಾದನಾಕ ನಿಂದರಲಿಲ್ಲಾ. ಘಂಟೀ ಬಡಿಯೂದಕ ನಿಂದರಲಿಲ್ಲಾ. ನಿಂತ ಕಾರಣs ಬ್ಯಾರೇ ಇತ್ತು. ಇಷ್ಟ ಆಗೂದು ವಿಧಿಲಿಖಿತ ಇತ್ತು. ಅಷ್ಟ ಆತು. ಆದರ ನಾನು, ಅದನ್ನ ಅಳಸೂ ಸಾಮರ್ಥ್ಯ ಪಡಕೊಂಡೆ. ಅಳಿಸಿ ಬಂದೆ. ಶಕೂ, ಇಂದಿಲ್ಲ ನಾಳೆ, ತಾನೂ ಇದನ್ನ ಮರೀತಾಳ. ಈ ಮಂಜು ತಾನs ಹರೀತದ. ಶಕೂ ಸ್ವರ್ಣಗೌರಿ ಆಗ್ಯಾಳ. ನಾ ಕಾಡಿಗೀ ಬಟ್ಟ ಇಟ್ಟೆ. ಆದರ ತಪ್ಪ ತಿಳದ ಕೂಡಲೇ ನನ್ನ ಪುಣ್ಯಾ ಬಸದು ಅದನ್ನ ಒರಸೀಸಿ. ತೊಳದೀನಿ. ಆ ಗೌರಿಗೆ ಅದರ ಕಲಂಕಿಲ್ಲಾ. ವಿಶ್ಯಾ, ನೀನು-ವಸೂ

ಇದನ್ನ ಸಂಬಾಳಿ. ನಾ ಧನ್ಯ ಆದೆ. ಇನ್ನೂ ನಿಮಗ ಅಪನಂಬಗಿ ಇದ್ದರ ಹೇಳರಿ. ಇಂದೇ ದಾದಲ್ಯಾ ನಿಮ್ಮ ಕಡೀ ನಿರೋಪ ತಗೋತಾನ. ಹೊಗದೇಶಿ ಆಗಿ ಈ ಜಾಗಾ ಬಿಡತಾನ."

ನಾನು ಆರ್ಜವತೆಯಿಂದ ಹೇಳಿದೆ. ಎದೆಯನ್ನೇ ಬರಿದು ಮಾಡಿದೆ.

"ಆಲ್‌ರೈಟ್ ದಾದಲ್ಯಾ. ನಿನ್ನ ಪ್ರಕರಣ ಬಗೀಹರೀತು. ಪತ್ರಾ ನೋಡಿದರ ಶಕೂ ಅಗದೀ ಉತಾವಿಳ ಆಧಾಂಗ ಕಾಣಸ್ತದ. ಅದರ ಬಂದೋಬಸ್ತ ಆಗ ಬೇಕು. "If she is too sensitive" ಪ್ರಸಂಗ ವಿಕೋಪಕ್ಕ ಹೋಗಬಾರದು. ನಾ, ಮೊದಲs ತಿಳಿಸಿದ್ದೆ ನಿನಗ. ಊದೂದು ಕೊಟ್ಟು ಒದರೂದು ತಗೋ ಬೇಕಾದೀತಂತ. ನೀ ಭಾನಗಡೀ ಮಾಡೂದೇನು ಬಿಡಲಿಲ್ಲಾ."

"ವಿಶ್ಯಾ, ಒಟ್ಟs ತಲ್ಯಾಗೇನೂ ಹೋಗಧಾಂಗ ಆಗೇದ. ಅಗದೀ ಸುನ್ನ ಆಗೀನಿ."

"ದಾದಲ್ಯಾ, ಈ ಪತ್ರಾ ನಮ್ಮ ಕೈಯಾಗ ಸಿಕ್ಕಿತು. ನಮಗ, ನಿನ್ನ ಶಕುಂತಲಾ-ದುಷ್ಯಂತ-ಪ್ರಕರಣಾ ಅವಗತ ಆತೂ ಅಂತs ನಿನ್ನ ತಲೀ ಮಡ್ಡ ಆಗೇದೇನು? ಮೊನ್ನೆರ ಹೇಳತಿದ್ದಿ: ಒಂದ ಲಕ್ಷ ಡಾಲರಕೇನೋ ಇನ್ಶೂರ್ ಮಾಡತಿದ್ರು ನಿನ್ನ ಡೋಗೀ ಅಂತs. ಒಂದ ಚೂರು ಸಾಕು – ಅದರಾಗಿನ ಮಾಸಲೇ ತೋರಸು. ನಿನ್ನ ಸಮಸ್ಯಾ ಪರಿಹಾರ ಆಗತದ."

ಸತ್ತ ಬೇಟೆಯನ್ನು ಬಣ್ಣದ ಕೋಲಿನಿಂದ ಬಡಿಯುತ್ತ ವಸುಧಾಬಾಯರು ಹೇಳಿದರು. ವಿಶ್ವಾಸನ ಕಡೆಗೆ ನೋಡಿ ಕಣ್ಣು ಮಿಟುಕಿಸಿದರು.

"ಓ.ಕೆ. ಆಗಲೀ. ಶಕೂನ ಅಪ್ಪಗ ಪತ್ರಾ ಬರೀತೀನಿ. ವಿಶ್ವಾಸ ಮುಂಬೈ ಯಿಂದ ಬಂದಾನ. ಕನ್ಯಾ ತೋರಿಸಿ, ವರಾ ನೋಡೂ ಹಾಂಗ ಇದ್ದರ ಬರ್ರೆಂತ. ಶಕೂ ಬಂದಲಂದರ ಅಡ್ಡಬಿದ್ದು ಕೈಕಾಲ ಕಟಿಗೋತೀನಿ. ಮಾರಾಯಳs, ಇನ್ ಮುಂದ ಮಾತ್ರ, ಇಂಥಾ ಪತ್ರಾ ಬರೀಬ್ಯಾಡಂತ. ನಾ ಸೂಳೇಮಗಾ ವೈದಿಕ ಬ್ರಾಹ್ಮಣಾ. ಘಂಟೀ ಗೆಣ್ಯಾ. ನನಗ-ನಿನಗ ಎಲ್ಲೀ ಸಂಬಂಧಾ – ಏನ ಸೂತ್ರಾ ಅಂತs. ವಿಶ್ಯಾನ್ನ ನೋಡಿದ ಮ್ಯಾಲ ನನಗ ಯಾಕ 'ಡಿಯರ್' 'ಡಿಯರೆಸ್ಟ್' ಅಂದಾಳು. ನನ್ನ ಧ್ಯಾಸ ಬಿಡತದ ಅಕೀಗೆ. ವಿಶ್ಯಾನ ಧ್ಯಾಸ ಸುರೂ ಆಗತದ. ಮದಿವಿ ಆಗೂ ತನಕಾ ಹೆಣ್ಣಹುಡಗ್ಯಾರಿಗೆ ಎಷ್ಟ ಮಂದಿ ಇಂದ್ರ-ಚಂದ್ರರ ಕಲ್ಪನಾ ಬಂಡ ಹೋಗತದೋ ಏನೋ? ಏನೋ ಅಪಾ, ನನ್ನ ತಪ್ಪ ಆಗೇದ.

ಒಪಿಗೊಂಡೀನಿ. ಶಕೂಗ ಇಷ್ಟ ಸಮಜೂತ ಹಾಕೂ ಹಾದೀ ತೋರಸರೀ ಅಂದರ, ಗಂಟಿಗೆ ಕಗ್ಗಂಟನs ಹಾಕಲಿಕ್ಕೆ ಹತ್ತ್ಯಾರ."
ನಾವೂ ಜೋರು ಮಾಡಿದೆವು.

"ವಸೂ, ಇಸಮಾ, ಅಟಿಕೇಪಾರ ಆಗೇದ. ಬೆಳಗಾಂವಿಗೆ ಪತ್ರಾ ಬರದರೂ ಬರೀತs. ಘುತ್ತ ಅಂತs ಶಕೂನ ಅವತಾರ ಇಲ್ಲೆ ಆತಂದ್ರು ಇಲ್ಲದ ಪಂಚೀತಿ. ಆ ಪತ್ರಾ ಕೊಡೂ ಅಂವಗ. ಕೂಡಲಿ ಮಗಾ, ಬೆಳತನಕಾ ಓದಿಕೋತ. ದಾದಲ್ಯಾನ ಸಮಸ್ಯಾ ನನಗ-ನಿನಗ ಇಲ್ಲಾ. ತಾ ಮಾಡಿದ ಭಾನಗಡೀ ತಾನs ನಿಸ್ತರಸವಲ್ಲನ್ಯಾಕ. ಏನ, ದಾದಲ್ಯಾ ?"

"ನನ್ನ ಖಾಸಗೀ ಪತ್ರಾ ಒಡದು ಓದೂದು 'ಬ್ರೀಚ್ ಆಫ್ ಟ್ರಸ್ಟ್' ಅಲ್ಲೇನಪಾ ? ನಾ ಉತ್ತರಾನರs ಬರೀತಿದ್ದೆ. ಪತ್ರಾನರs ಹರೀತಿದ್ದೆ. ನನ್ನ ಬಾಯಿಂದ ಕೈಫಿಯತ್ ತಗೊಂಡಿರಿ. ಚಾಲವರದ ಹೇಳಿದೆ. ತಪ್ಪ ಆಗೇದಂದೆ. ಎದಕ್ಕೂ ಹಣೇಧಾಂಗ ಆಗೀರಿ. ಶಕೂನ್ನ ತಂಗಿಯಂತ ತಿಳಕೊಂಡೀನಿ. ಇದರ ಮ್ಯಾಲ ಇನ್ನೇನು ಇಲಾಜ ಇಲ್ಲಾ. 'ಅಪೀಲ್' ಇಲ್ಲಾ. I have nothing to add."

"ವಾಃ, ವಾಃ, ವಾಃ ಪಟ್ಟೇ. ಏನ ಝಕಾಸ ಅಭಿನಯ ಮಾಡಿದ್ಯೋ ? ವಿಶ್ವಾಮಿತ್ರಾ, ಮೇನಕಾಗ "ಕುಚ್ಛ ಮಾಲೂಮ್ ನಹೀ" ಅಂತ ಹೇಳೂ ಮುಂದ ನಿನ್ನ 'ಪೋಜ್'ನ್ಯಾಗs ನಿಂತಿರಬೇಕು ನೋಡು. ದಾದಲ್ಯಾ, ನಿನ್ನ 'ಲವ್ಲೀ' ಶಕೂಂದು ಒಮ್ಮೆ ಸಂದರ್ಶನ ಮಾಡಸಲಾ. ಸಂದರ್ಶನದಾಗ ನಿನ್ನ ಮಡ್ಡ ಇಳೀತಿದ್ರು ನೋಡೂಣು. ಕ್ಯೌಂ ವಸೂ ?"

"ಆ ತಂಗಿ ಹಿಡೀಬಾರದs ಹಿಡದರ, ಇಲ್ಲೆ, ಈ ತಂಗೀದೇನ ಗತೀ ? ಹೊಸಾ ಸಮಸ್ಯಾನs ಮತ್ತ ಸುರೂ ಅಲ್ಲಾ."
ನಾನು.

'ದಾದಲ್ಯಾ. ನಿನ್ನ ಎಲೀಮ್ಯಾಲ ಜೊಂಯ್ ಅಂತ ನೊಣಾ ಮುಕ್ಕರ್ಯಾವ. ಅವನ್ನ ಮೊದಲ ಝಾಡಿಸಿಗೋ. ನಂದ್ಯಾಕ ಕಾಳಜೀ ನಿನಗ. ಕಾಕಾ-ಕಾಕೂಗ ನಾ ಒಬ್ಬಾಕೀನೇ ಮಗಳು. ನನ್ನ ವಿಚಾರ ಮಾಡಲಿಕ್ಕೆ ಅವರಿಗೆ ರಗsಡ ವ್ಯಾಳ್ಯಾ ಶಿಲ್ಲಕ ಅದs."
ವಸೂ.

"ವರಸಂಶೋಧನಾಕ್ಕ ಅಶ್ವಮೇಧದ ಜರೂರಿನೂ ಇಲ್ಲಾ. ತೊಟ್ಟಿಲ ದಾಗs ಬಾಸಿಂಗ ಕಟ್ಟೇದ."

ನಾನು.

"ಹೌದೇನ ವಸೂ?"

ವಿಶ್ವಾಸ.

"ದಾದಲ್ಯಾ ನಿನ್ನ ಪುರೋಹಿತಾ. ಅಂವಗs ಠಾವಿಕಿ. ಬನೂಮಾಮೀ ಮುಂದ ಹೇಳತಿದ್ದನಂತ: ವಿಶ್ಯಾಂದೂ-ವಸೂಂದು ಕುಂಡಲೀ, ಹೀಂಗ ಮಸ್ತ ಕೂಡತದ ಮಾಮೀ, ಅದನ್ನ ಬರದ ಬ್ರಹ್ಮ ಸುದ್ದೇ ದಂಗ ಆಗಿರಬೇಕೂ ಅಂತs. ನೀಯರs ಈಗ, ಶಕೂನ್ನ ನೋಡಲಿಕ್ಕೆ ತಯಾರಾಗಿ. ಜಮಾಸ್ತಿದ್ದರ ನೋಡು ಅಲ್ಲೇ. ದಾದಲ್ಯಾನ ವಶೀಲೀನೂ ಅದs."

"ಇಬ್ಬರೂ ಮುಗಳನಗೀ ನಗಬ್ಯಾಡರಿ. ನಿಮ್ಮದೇನು ಠಾಂವಿಕಿಲ್ಲಂತ ತಿಳೀಬ್ಯಾಡ್ರಿ. ಆ ಹುಚ್ಚಹುಡಿಗಿ ಏನೋ ಒಂದು ಪತ್ರಾ ಗೀಚಿದರ ಇಷ್ಟ ಕಿತಿಬಿ ಮಾಡಿದಿರಿ. ನಿಮ್ದೂ 'ವ್ಹಾಲ್ಯೂಮ್'ಗಟ್ಟಲೇ ಆಗತಾವ. ಇಂಗ್ರೇಜೀ, ಮರಾಠೀ ಭಾಷಾಕ ಪತ್ರ-ಸಾಹಿತ್ಯದ್ದು ಬರಗಾಲನs ಇಲ್ಲಧಾಂಗ ಆಗತದ, ಅವನ್ನ ಏನರs 'ಪಬ್ಲಿಶ್' ಮಾಡಿದರ. ಸಾಂಗಲೀ – ಮುಂಬೈ ಪೋಸ್ಟ್-ಆಫೀಸಿಸ್ ನಿಮ್ಮ ವ್ಯಾಲs ಬದಕ್ಯಾವs. ಒಂದ ಕುಡ್ಡ ಪತ್ರಾ ನನಗ ಬಂದರ ನಿಮಗೇನ ಸಂಕಟಾ, ಎಂಥಾ ಕಸಿವಿಸಿ? ದೀಪಾವಳೀ ಸೂಟಿಗೆ ಹ್ಯಾಂಗೂ ಬೆಳಗಾಂವಿಗೆ ಹೋಗಾವನs ಇದ್ದೀನಿ. ಶಕೂಗ ಸಮಜೂತ ಹಾಕತೀನಿ. 'All's well that ends well' ಖಲಾಸ್. ಜೀವನದಾಗ ಒಂದೊಂದು 'ಫೇಜ್' ಬರತಿರತಾವ. ಆತು ನಮಗೂ ಬಂತು. ಹೋತು. ಅದಕ್ಯಾಕ ಇಷ್ಟ ಕಾಳಜೀ. ಇಷ್ಟ ಚಿಂತಿ?"

ನಾವು ಇನ್ನೂ ಮಾತಾಡುವವರಿದ್ದೆವು. ಅಷ್ಟರಲ್ಲಿ ಶಂಕರಕಾಕಾ ಬಂದಿದ್ದಾರೆ, ಮನೆಯ ಕೀಲೀಕೈ ಬೇಕಾಗಿದೆಯೆಂದು ಬನೂಮಾಮೀ, ವಸುಧಾನಿಗೆ ಹೇಳ ಬಂದರು. ಪಾರ್ವತೀಕಾಕೂ ಜಮಖಂಡಿಯಲ್ಲಿಯೇ ಉಳಿದದ್ದರಿಂದ, ಮನೆಯಲ್ಲಿ ಶಂಕರಕಾಕಾ-ವಸುಧಾ ಇಬ್ಬರೇ ಇದ್ದರು. ವಸೂ ಇಲ್ಲಿಗೆ ಬರುವಾಗ ಶಂಕರಕಾಕಾ ಬಾಜಾರಭಾವದ ನಾಡೀಪರೀಕ್ಷೆಗೆ ಯಥಾಪ್ರಕಾರ ಹೋಗಿರಬೇಕು. ಅಂತೇ ವಸೂ ಮನೆಗೆ ಕೀಲಿ ಹಾಕಿ ಬಂದಿದ್ದಳು. ಅಲ್ಲದೆ ಅವಳ ಚಂದ್ರಾಮ ಇಲ್ಲಿರುವಾಗ, ಅಲ್ಲಿ, ಆ ಚಕೋರಿಗೆ ಚೈನಾದರೂ ಹೇಗೆ ಬೀಳಬೇಕು?

"ವಿಶ್ಯಾ, ಹೋಗತೀನ್ಯಪಾ. ಕಾಕೂ ಊರಿಂದ ಬರೂ ತನಕಾ, ಒಲೀ ಸೇವಾ ಬೆನ್ನಿಗೆ ಹತ್ತೇದ. ಅಷ್ಟ ಪಿಟ್ಲs-ಭಾತ್ ಬಗೀಹರಿಸಿ ಬರತೀನಿ. ಮತ್ತ ಕೂಡೂಣಂತ ದಾದಲ್ಯಾನ ಚಂಪೀಗೆ."

ವಸೂ ನಮ್ಮ ನಿರೋಪ ಪಡೆಯುತ್ತಿದ್ದಂತೆ – ಶಂಕರಕಾಕಾ, ಪಂತಮಾಮಾ, ಯಮಳರಂತೆ, ಜಯ-ವಿಜಯರಂತೆ ಕೋಣೆಯ ಬಾಗಿಲಲ್ಲಿ ಹಜರ್ ಆದರು.

"ವಸೂ, ಮುಂಜಾನೆ ಅನ್ನಾ ಹಂಜಕ್ಕಿ ಆಗಿತ್ತೇನು? ಹೊಟ್ಟಿ ಕುಟ್ಟಿಹಿಡದs ದಂತ, ಶಂಕರಕಾಕಾನ ತಕರಾರ ನಡದ್ವದ. ಸಾಂಗಲೀ ಕಾಲೇಜಕಿಂತಾ, ಇಕಿನ್ನ ಹಿಂಗಣೇಕ್ಕ ಹಾಕಿದ್ದರ ಠೀಕ ಆಗತಿತ್ತು. ಗೃಹಿತಾಗಮಾಕ್ಕ ಅಡಿಗಿ ಅಂಬಲಿ ಎಲ್ಲಾ ಕಲಸ್ತಾರಂತ ಹಾಡಲಿಕ್ಕೆ ಹತ್ತ್ಯಾರ ನಿಮ್ಮ ಕಾಕಾ. ನಿನ್ನ ಅಂಬೋಣೇನು?"

"ಪಂತಮಾಮಾ, ಮುಂಜಾನೆ ಮೊದಲನೇ ಪಂಕ್ತಿಗೆ ಕಾಕಾ ಊಟಕ್ಕ ಕೂತರು. ಎರಡನೇ ಪಂಕ್ತಿಗೆ ನಾ ಕೂತೆ! ನನಗ ಭಾಂಡೀ ಕೆರೀಬೇಕಾತು. ಇಂದ ನನ್ನ ಪಿಟ್ಲs-ಭಾತದ ಸಮಾಚಾರ ನೀವs ತಗೋರಿ. ಪಾರ್ವತೀಕಾಕೂ ಹಿಂಗಣೇದ ಅಪ್ಪನ್ಹಾಂಗ ಅಡಿಗೀ ಕಲಸ್ತಾರನೂದು ಠಾಂವಿಕ್ಯಾಗತದ. ಮುಗಳ ಅಡಗೀ ತಾರೀಫ್ ಮಾಡೂದಕ್ಕ ಹಾಂಗ ಹೇಳಿರಬೇಕು, ಕಾಕಾ. ಅರ್ಧಾ ತಾಸಿ ನೊಳಗ ಬರತೀನಿ ನೋಡರಿ, ಊಟಕ್ಕ ಎಬ್ಬಸಲಿಕ್ಕೆ. ತಯಾರೀ ಒಳಗ ಇರ್ರಿ."

"ಹೋಗಾಕ್ಯಂತ ನಿಂದರು. ದಾದಲ್ಯಾ, ಏನ ಮಾತ ಕೇಳಕೋತ ನಿಂತೀ ಮುಗನs ಮಳ್ಳನ್ಹಾಂಗ? ದೇವರಮುನ್ಯಾಗs ಬಟ್ಟಲದಾಗ ಮಂತ್ರಾಕ್ಷತಿ ಇರ ಬೇಕು. ತಗೊಂಡು ಬಾ. ಪಾರ್ವತೀಕಾಕೂ ಊರಿಂದ ಬರೂತನಕಾ, ಕಾಕಾ, ವಸೂಗ ಕಾಯಂ ಔತ್ನಾ ಕೊಡು. ಎಂಥಾ ಪುರೋಹಿತನೋ ನೀನು? ಯಜ ಮಾನರು ಹೇಳಬೇಕೇನು ಇಂಥಾ ತಂತ್ರಾs."

ಪಂತಮಾಮಾ.

"ಇದೇನ ಪಂತಮಾಮಾ, ಎಂಟಾನೆಂಟ ದಿನಾ ನಿಮ್ಮ ಮನೀಗೆ ಬಂದು ಬಡಿಸಿದ ಎಲೀಮ್ಯಾಲ ಕೂಡಂತೀರೇನು? ಕಾಕೂ ಹೋದಾಗಿನಿಂದ ಒಪ್ಪತ್ತಿಲ್ಲ ಒಪ್ಪತ್ತು ನಿಮ್ಮಲ್ಲೇ ಊಟ ನಡದ್ವದ. ನನಗೇನಾಗೇದ? ಅಡ್ಡ್ಯಾಡಿಕೋತs, ಒಂದ ಅನ್ನಾ – ಒಂದ ಸಾರು ಇಳಸ್ತೀನಿ. ಅದೇನಿಲ್ಲಾ. ನಾವ್ ಬರಾವರಲ್ಲ ಅಂ, ಮತ್ತs"

ವಸೂ.

"ನೋಡಪಾ ವಿಶ್ಯಾ, ನೀನs ಹೇಳು. ನಮ್ಮದೇನು ನಡಿಯೂ ಹಾಂಗ ಕಾಣಸೂದಿಲ್ಲಾ."
ಪಂತಮಾಮಾ.

"ಪತ್ಯಾರನs ಕಿಂವಿ ಚುಚ್ಚೂದು ವಾಜಿಮಿ. ಪಂತಮಾಮಾ ನಮಗ ಇಂದ ಗುರುವಾರಾ. ಊಟ ವರ್ಜ. ವಿಶ್ಯಾ ಒಬ್ಬನs ಉಂಬಾವಾ. ಒಬ್ಬನ ದಶಿಂದ ಒಲೀ ಎಲ್ಲೆ ಮುಸರೀಮಾಡೂದು. ಅಂವನೂ ಬೇಕಾರ ಅಕಡೇನ ಹೋಗಲಿ. ಮುಂಬೈ ಊಟಾ ಉಂಡು ಬಾಯಿ ಕೆಟ್ಟಿರಬೇಕು. ವಸೂನ ಪಿಟ್ಲs ಭಾತ್ ಸಮಾಚಾರಿಷ್ಟು ತಗೊಂಡ ಬರಲಿ. ಅಡಿಗೀ ಪರೀಕ್ಷಾ ಅಗಾವ ಆಗೂದು ಠೀಕಾ."
ನಾವು.

"ವಸೂ, ಶೆಟ್ಟಿ ಏಳೂರು ಸುತ್ತಿ ಮತ್ತ ತನ್ನ ಲೆಕ್ಕಕ್ಕs ಬಂದಾ. ಹ್ಯಾಂಗ ಹೊಡದ ನೋಡು, ದಾದಲ್ಯಾ, ಮುಂಗಾಲಪುಟಿಗೀ. ಬನೂಮಾಮಿಗೆ ಅಡಿಗೀ ಧಾವತೀ ಬಿಡಿಸಿದಾ. ನಿನಗ ಅಡಿಗೀ ಹಚ್ಚಿದಾ. ವಿಶ್ಯಾಗ ಪರೀಕ್ಷಾ ತಗೊಂಬೂ ಕೆಲಸಾ ಕೊಟ್ಟಾ. ಮತ್ತ ತಾ ತಾ ಮೋಕಳೀಕನs. ಗುರುವಾರಂತ ಬಿಟ್ಟಾ. ಇಲ್ಲದಿದ್ದರ ತಾನೂ ಪಂಕ್ತಿಗೆ ಬಂದು ಕೂಡವನs. ನಡೀ ಇನ್ನ. ಇಲ್ಲೀ ಔತ್ನಾ ಅಂತೂ ದಾದಲ್ಯಾ ತಪ್ಪಿಸಿದಾ. ಇನ್ನ ಹರಟ್ಯಾಗ ಕೂತರ, ವಿಶ್ಯಾ-ನಾನು, ಹತ್ತ ಬಡದರೂ ಊಟಾ ಕಾಣಲಿಕ್ಕಿಲ್ಲಾ."
ಶಂಕರಕಾಕಾ.

"ಎಲ್ಲೆ ಹೊಂಟಿರಿ? ಬ್ಯಾಳಿ ಬೆಂದದ. ಚಪಾತಿ ಆಗ್ಯಾವ. ಎಂಟ ಬಡಿಯೂತ್ಲು ಎಲೀಮ್ಯಾಲ ಕೂತೀರ್‍ಯಂತ. ಕಾಕೂ ಬರೂತನಕಾ, ನಿಮ್ಮ ಮನ್ಯಾಗಿನ ಒಲ್ಯಾಗ ಬೆಕ್ಕ ಮಲಗಲಿ ಅರಾಮು. ಹಾಂಗ ನಮ್ಮದು ಠರಾವನs ಆಗೇದ. ವಸೂ, ನೀ ಅಷ್ಟು ನೆರವಾಗು. ನೀ ಗುರುವಾರದ ಫರಾಳ ಮಾಡು. ನಾ ಅಡಿಗೀ ಬಗೀಹರಸ್ತೀನಿ. ಎಲ್ಲಾರೂ ಒಂದs ಪಂಕ್ತೀಗೆ ಕೂತಬಿಡರಿ."
ಬನೂಮಾಮೀ ಒಳಗೆ ಬಂದು ಹೇಳಿದರು.

"ದಯಮಾಡಸರಿ, ವಸುಧಾಬಾಯರs. ನಾ ಹೇಳಿದ್ಧರಪಲೇ ಹೋಗಿದ್ರಿ, ಪಿಟ್ಲs-ಭಾತ್ ಪರೀಕ್ಷಾ ಚುಟುಕ್ಯಾಗ ಬಗೀಹರಿಸಿ ಪಾಸ ಆಗತಿದ್ದರಿ. ಪಾಸ ಆಗ ದಿದ್ದರೂ ಎತ್ತ್ಯರs ಹಾಕತಿದ್ದರು. ಇನ್ನs 'ಪಬ್ಲಿಕ್-ಸರ್ವೀಸ್-ಕಮೀಶನ್'ದ

ಮುಂದ ಬರಬೇಕಾತು. ಕಠೀಣದ. ಯಜಮಾನರದು ನಾಡೀಪರೀಕ್ಷಾ. ಮಾಮಾ-ಮಾಮೀದು ನಾಲಗೀಪರೀಕ್ಷಾ. ಗ್ರೇಸ್‌ಮಾರ್ಕ್ಸ್‌ದ ಜರೂರಿ ಅನಿಸಿದರ ನಮ್ಮನ್ನ ಬೇಕಾರ ಲೆಕ್ಕಕ್ಕ ಹಿಡೀರಿ. ಶಂಕರಕಾಕಾ ಅವರಿಗೆ ಮಾರ್ಕ್ಸ್ ಕೊಡೂ ಅಧಿಕಾರನs ಇಲ್ಲಾ. ನಾ ಇಷ್ಟು ವಿಶ್ಯಾನ್ನ ಅಡ್ಜ್ಯಾಡಿಸಿಕೊಂಡ ಬರತೀನಿ. ಬರೂದರಾಗ ತಯಾರೀ ಇಡರಿ. 'ಪಂಕ್ಚುಯಾಲಿಟಿ'ಗೂ ಭಾಳ ಮಹತ್ವ ಅದ ಪಿ. ಎಸ್. ಸಿ. ಎಕ್ಜಾಮಿನೇಶನ್‌ದಾಗ."

ನಾವು.

"ಹೋಗಿಬಾರಪಾ, ತಾಸೆರಡತಾಸು. ನಾಕೆಂಟ ದಿನಾ, ನೀ ಕಾಣತಿದ್ದಿಲ್ಲಂತ ಸಾಂಗ್ಲೀ ಮಂದಿಗೆ ಭಣಭಣ ಅನಸ್ತಿತ್ತು. ಮತ್ತ ದಾಖಲ್ ಆದ ಸಾಕ್ಷೀ ತೋರಿಸಿ ಬಾ. ನಡೀರಿ ಶಂಕರಕಾಕಾ, ನಾವೂ ಅಷ್ಟು ಗುಡೀತನಕಾ ಹೋಗಿಬರೂಣು."

ಪಂತಮಾಮಾ.

ನಾನು, ವಿಶ್ವಾಸ ದಸ್ತಗೀರ್‍ಯಾನ ಅಂಗಡಿಯ ಕಡೆಗೆ ಹೊರಟೆವು. ನನಗೆ ವಿಶ್ವಾಸನ ಕೂಡ ಬಹಳಷ್ಟು ಮಾತನಾಡುವದಿತ್ತು. ದಸ್ತಗೀರ್‍ಯಾ ವಿಶ್ಯಾ ಏಕಜೀವ ಭಿನ್ನಶರೀರಿಯಾಗಿದ್ದರು. ಅವನನ್ನು ಬಿಟ್ಟು ಮಾತನಾಡುವದರಲ್ಲಿ ಅರ್ಥವಿರಲಿಲ್ಲ. ನಾವು ಇಬ್ಬರೇ ಆಡಿದ ಮಾತುಗಳನ್ನ, ತೋಡಿಕೊಂಡ ಸುಖ-ದುಃಖವನ್ನ, ವಿಶ್ಯಾ, ದಸ್ತಗೀರ್‍ಯಾನಿಗೆ ವರದಿಮಾಡದೆ ಇರುತ್ತಿರಲಿಲ್ಲ. ದಸ್ತಗೀರ್‍ಯಾ-ವಿಶ್ಯಾನ ಮೈತ್ರಿ ಜಮಾಸಿದಂದಿನಿಂದ ಅವನಿಗೆ, ಪಂತಕುಟುಂಬದಲ್ಲಿಯ ಸರ್ವ ವಿಷಯ-ಸರ್ವಸಮಸ್ಯೆ ಅವಗತವಿದ್ದವು. ವಿಶ್ಯಾನ ವಿಚಾರಗಳಿಗೆ, ಅವನ ಯೋಜನೆಗಳಿಗೆ ಆಕೃತಿ-ಆಕಾರ ಬರಲು, ಬರುವಂತೆ, ದಸ್ತಗೀರ್‍ಯಾ ಅವನ ನರ್ಮಸಚಿವನಾಗಿ, ಸಲಹೆಗಳನ್ನು ನೀಡುತ್ತಿದ್ದ. ಸಮಸ್ಯೆಗಳಿಗೆ ಪರಿಹಾರ ಸೂಚಿಸುತ್ತಿದ್ದ. ವಿಶ್ಯಾ ಸಾಂಗಲಿಯಲ್ಲಿಯೇ ಕಲಿಯಲಿಕ್ಕೆ ನಿಂತಿದ್ದರೆ, ಪಂತಮಾಮಾನ ಆರ್ಥಿಕ ಉಲಾಢಾಲಿಯಲ್ಲಿ, ಅವರ ಸೋನಾ-ಚಾಂದೀ ವ್ಯವಹಾರದಲ್ಲಿ, ತಲೆ ಹಾಕಿ ಅವರಿಗೆ ನೆರವಾಗುವ, ತಾನೂ ಅನುಭವ ಪಡೆಯುವ ಸಂಭವವಿತ್ತು. ಈಗ ಅವನು ಮಾಡಬೇಕಾಗಿದ್ದ ಕೆಲಸವನ್ನು ದಸ್ತಗೀರ್‍ಯಾ ನಿರ್ವಹಿಸುತ್ತಾನೆ. ಪಂತಮಾಮಾ ಅವರಿಗೆ ನೆರವಾಗುವದರ ಜೊತೆಗೆ, ಆ ಉಲಾಢಾಲಿಯಲ್ಲಿಯ ವ್ಯವಹಾರದಲ್ಲಿಯ ಪೇಚು-ಡಾವ್‌ಪೇಚು ಅರಿತು ಬಲ್ಲವನಾಗಿದ್ದಾನೆ. ಬನೂಮಾಮೀ-ಪಂತಮಾಮಾ ಅವರಿಗೆ, ಈ ವೈದಿಕ ದಾದಲ್ಯಾ, ಆ ತುರುಕ ದಸ್ತಗಿರ್‍ಯಾ –

ಅವರ ಶಬ್ದದಲ್ಲಿ "ಸಾಬ"– ಇಲ್ಲದಿದ್ದರೆ, ಅವರ ಗಾಡಿ ಮುಂದೆ ನಡೆಯುವ ಗತಿಯನ್ನೇ ಪಡೆಯುವದಿಲ್ಲ. ಪಂತಮಾಮಾ ಅವರಲ್ಲಿ ಏನಕೇನ ಕಾರಣೇನ ಬೇಳೆಯಲ್ಲಿ ಬೆಲ್ಲದ ಕರಣೆ ಬಿದ್ದ ದಿನ, ದಸ್ತಗೀರ್‍ಯಾನಿಗೆ ಆಮಂತ್ರಣ ತಪ್ಪಿದ್ದಲ್ಲ. ಹೊತ್ತಿಗೆ ಬರುವದು ಸಾಧಿಸದಿದ್ದರೆ, ಸಂಜೆಯು ಮುಂದೆ ಬಂದಾದರೂ ದಸ್ತಗೀರ್‍ಯಾ, ಒಂದು ಹೋಳಿಗೆ, ಇಲ್ಲ ಎರಡು ಕಡಬು ಜಡಿದು ಹೋದರೇ ಅವರಿಗೆ ಸಮಾಧಾನ. ವಾರದಲ್ಲಿ ಒಮ್ಮೆಯಾದರೂ, ದಸ್ತಗೀರ್‍ಯಾನ 'ಮಾ' – ಅಮ್ಮಾಜಾನ – ಬುರುಕಿಯ ಮುಸುಕಿನಲ್ಲಿ ದಾರಿಯುದ್ದ ನಡೆದುಬಂದು, ಬನೂಮಾಮಿಯನ್ನು ಕಂಡು, ನಾಕು ಮಾತುಗಳನ್ನು ಆಡಿ – "ನಾವು ಮನೆಯಲ್ಲಿ ದೀಪ ಹಚ್ಚುವದು ನಿಮ್ಮ ಪುಣ್ಯದಿಂದ" ಎಂದು ಪಲ್ಲವಿಯನ್ನು ಹಾಡಿ ಹೋಗದಿದ್ದರೆ ಅವಳಿಗೂ ಸಮಾಧಾನ ಇರುವುದಿಲ್ಲ. ಬನೂಮಾಮೀ ಅವರಿಗೂ ಹಿಡಿದುಬಿಟ್ಟಂತಾಗುತ್ತದೆ. ವಸೂ, ನನಗೆ-ದಸ್ತಗೀರ್‍ಯಾನಿಗೆ, ವಿಶ್ಯಾನ 'ಎಡ-ಬಲ'ವೆಂದೇ ಹಂಗಿಸುತ್ತಾಳೆ. ಅದನ್ನು ಕೇಳಿ ದಸ್ತಗೀರ್‍ಯಾ ಹೇಳಿದ್ದ:

"ಎದೀ ಒಳಗs ಜಾಗಾ ನೋಡಬೇಕಂತ ಮಾಡಿದ್ದೆ. ಅಷ್ಟರಾಗs ತಮ್ಮ ಸ್ವಾರೀ ಅಲ್ಲೆ ಕೂತ್ಯೇಬಿಟ್ಟಿತ್ತು. ಗತೀ ಇಲ್ಲಂತ ಬಲಗೈ ಖರೀದಿಮಾಡಿದೇವು."

ದಸ್ತಗೀರ್‍ಯಾನನ್ನು ಅಂಗಡಿಯಿಂದ ಎಬ್ಬಿಸಿಕೊಂಡು ಹೊರಬಿದ್ದೆವು. ಕಾಲೇಜ ರೋಡಿನ ದಾರಿ ಹಿಡಿದೆವು. ದಾರಿಯಲ್ಲಿ ವಿಶ್ಯಾ 'ಗೋಲ್ಡಫ್ಲೇಕ್' ಪಾಕೀಟು ಖರೀದಿ ಮಾಡಿದ. ದಸ್ತಗೀರ್‍ಯಾ —

"ಮತ್ತ್ಯಾಕ ಕೊಂಡಿ ವಿಶ್ಯಾ. ಮಜಬೂತ ಆಗಿ, ಒಂದ ಪಾಕೀಟ ಅದs ನನ್ನ ಕಿಸೇದಾಗ."

ಎಂದ.

"ದಾದಲ್ಯಾಗs ಬೇಕು ದೀಡ ಪಾಕೀಟಾ. ಏನ ದಾದಲ್ಯಾ? ಈ ಬ್ರ್ಯಾಂಡು ನಡೀತದಿಲ್ಲೋ? ನಿಂದೇನರs 'ಸ್ಪೆಶ್ಯಾಲಿಟಿ' ಅದನೋ?"

ವಿಶ್ಯಾ ಕೇಳಿದ.

"ಎಂಥೆಂಥಾದೋ ನಡದsದಂತ. ಇನ್ನ ಇದೂ ನಡೀದ ಏನು? ವಿಧಿ-ನಿಷೇಧಾ ಎದರಾಗೂ ಇಡಲಿಲ್ಲಂತ; ಇದರಾಗರೇ ಯಾಕs? ಬ್ರ್ಯಾಂಡ ಅಂದ್ಯಾs? ಕೊಂಡು ಸೇದೂ ಚಟಾ ಇಲ್ಲಾ. ಕೊಟ್ಟರ ಬ್ಯಾಡ ಅನ್ನೂ ಹಟಾ ಇಲ್ಲಾ ನಮಗ. ಹೀಂಗ ಆಗಿ, ಬಿನ್‌ಬ್ರ್ಯಾಂಡ ನಾನು. ಇನ್ನ ಅದೂ ಇಲ್ಲದಾಗ ಬೇಕೇ ಬೇಕು ಅಂತ

ಅನಸೂದಿಲ್ಲಾ. ಇದ್ದಾಗ ಬಿಡೂ ಹವ್ಯಾಸ ಇಲ್ಲಾ. ಸೇದಾಗ ಸುಖ ಅನಸ್ತದ. ಸೇದದs ಇದ್ದಾಗ, ಸೇದಲಿಲ್ಲಲಾ ಅನ್ನೂ ವ್ಯಸನ ಏನು ಆಗೂದಿಲ್ಲಾ."
ನಾನು.

"ದಸ್ತಗೀರ್‍ಯಾ, ದಾದಲ್ಯಾ, ಬೀ.ಏ.ಕ್ಕ ತಗೊಂಡದ್ದು 'ಎಕನಾಮಿಕ್ಸ್'. ಆದರ ಬರೇ 'ಫಿಲಾಸಫೀ' ಜೀವದಾಗ ಮುರಡೇದ ಕಾಣಸ್ತದ. ಆಚಾರ್ಯತ್ರಯರನ್ನ ಹಾತಭಟ್ಟೀ ಇಳಿಸಿ ಹೊಡದಾನ ಕಾಣಸ್ತದ. ಬರೇ ಲೆಕ್ಚರ ಹೊಡೀಲಿಕ್ಕೆ ಹತ್ಯಾನಲಾ."
ವಿಶ್ವಾಸ.

"ಲೆಕ್ಚರ ಅಲ್ಲ ವಿಶ್ಯಾ. ಬರೇ ವರದೀ ಒಪ್ಪಸೂದು ನನ್ನ ಕೆಲಸಾ. ನೀನು-ದಸ್ತಗೀರ್‍ಯಾ 'ಇನ್ಫರೆನ್ಸ್' ತಗೀರಿ. ನಿರ್ಣಯಕ್ಕ ಬರ್ರಿ. ಮುಂದಿನ ವಿಚಾರಾ, ಯೋಜನಾ ನಿಮ್ಮೂ. ನಾ ಜಮುಖಂಡಿಯಿಂದ ಬಂದ ಕೂಡಲೇ ನಿನ್ನ ಕರಕೊಂಡು ಹೊರಬೀಳಬೇಕಂತ ಮಾಡಿದ್ದೆ. ನನ್ನ ಪತ್ರದ ಪ್ರಕರಣಾ ಅಡಗೊಡ್ಡೀ ಹಾಂಗ ಎದ್ದಿತು. ಎದ್ದದ್ದು ಠೀಕನs ಆತು. ಪರ್ಯಾಯದಿಂದ ಅದು ಮಾತಿನ್ಯಾಗ ಬಂದs ಬರತಿತ್ತು. ಹೋಗಲಿ, ಆದರದಶಿಂದ ನಾಯೇನ್ ಅಷ್ಟು 'ಪರ್ಟಿಕ್ಯುಲರ್' ಆಗಿಲ್ಲಾ. ಅದನ್ನ ಸೀರಿಯಸ್ಲೀನೂ ತಗೊಂಡಿಲ್ಲಾ. 'It's a trifling matter'. ನಾನು ಬೆಳಗಾಂವ್ಯಾಗ ನಿಂತದ್ದು ಯಾಕ ಅನೂದನ್ನ ಹೇಳತೀನಿ ಅಂದಿದ್ದೆ. ಅದು ಮುಖ್ಯ ಮುದ್ದೇ."

ನಾನು ಬೆಳಗಾಂವಿಯಲ್ಲಿ ನಿಂತು, ಸಾಹೇಬರ-ರಂಗಕ್ಕನ ಹೃದಯಪರಿಚಯ ಮಾಡಿಕೊಂಡಿದ್ದೆ. ಅವರ ಅಂತರಂಗವನ್ನು ಕಲಕಿ ನೋಡಿದ್ದೆ. ಅನ್ಯ ವಿಷಯಗಳ ವಿವರವನ್ನು ಸೂಕ್ಷ್ಮವಾಗಿ ಅವಲೋಕಿಸಿದ್ದೆ. ಅವರಿಗೆ ಶಕೂ ಒಬ್ಬಳೇ ಕನ್ಯೆ. ಗಂಡು ಸಂತಾನದ ಆಶೆ ಇರಲಿಲ್ಲ. ಹಿಂದೆ-ಮುಂದೆ ಹತ್ತಿ-ಹೊಂದಿದ ಬಳಗವಿರಲಿಲ್ಲ. ಅವರು ಗಳಸಿದ ಆಸ್ತಿ ಇತ್ತು. ಇನ್ನೂ ಕೈಕಾಲು ಚಾಚಿ ಬೆಳೆಯುತ್ತಿತ್ತು. ಅವರಿಗೇ ಅಂಟಿ ನಿಂತ. ರಾ. ಸಾ. ಠೋಮರೇಮಾಮಾನ ಅಮಾಪ ಸಂಪತ್ತಿತ್ತು. ಅದೂ ಇವರಿಗೇ ದಕ್ಕಲಿತ್ತು. ಹೀಗಾಗಿ ಅವರು ಶಕೂನ ಸಲುವಾಗಿ ಯೋಗ್ಯ ಮನೆತನ, ಇರ್ಭುತ್ತಿನ ಘರಾಣೇ ನೋಡುವದು ಸಹಜವಿತ್ತು. ಅವರಿಗೆ ಶ್ಯಾಮರಾಯನಿಗೆ ಹತ್ತು-ಇಪ್ಪತ್ತು ವರುಷದಿಂದ ಬೆಳೆದುಬಂದ ಸಂಬಂಧ; ಋಣಾನುಬಂಧ. ನಾಕು ವರುಷದ ಕೂಸಿದ್ದಾಗಿನಿಂದಲೂ ಅವರು ವಿಶ್ಯಾನನ್ನು ಬಲ್ಲರು.

ತಮಗಿಂತ ಯೋಗ್ಯತೆಯಲ್ಲಿ, ಮಾನ-ಪಾನದಲ್ಲಿ ಪಂತಘರಾಣೇ ಊಚ ಎನ್ನು ವದು ಅವರಿಗೆ ಗೊತ್ತಿತ್ತು. ವಿಶ್ವಾ ದತ್ತಕ ಹೋಗಿ, ದೊಡ್ಡ ಆಸ್ತಿಗೆ ಏಕಮೇವ ಅಧಿಕಾರಿಯಾಗಿರುವ ವಿಷಯವೂ ಅವರಿಗೆ ತಿಳಿದಿತ್ತು. ಅವರ ಕಣ್ಣು ವಿಶ್ವಾನ ಮೇಲಿತ್ತು. ಅಲ್ಲದೆ, ಈ ವಿಶ್ವಾ, ಶ್ಯಾಮರಾಯನ ತಾಬೇದಾರೀ ವ್ಯಕ್ತಿಯಲ್ಲ. ಪಂತಮಾಮಾ ಅವರ ವಸ್ತು – ಎಂಬ ಬಗ್ಗೆ ಅವರಿಗೆ ಖಾತ್ರೀ ಆಗಿತ್ತು. ಅದು ಆಗುವ ರೀತಿಯಲ್ಲಿ ನಾನು ಅವರನ್ನು ತಿದ್ದಿ ಮೆದ್ದಿದ್ದೆ.

ಒಂದು ದಿನ ಸಹಜವಾಗಿ ಮಾತಿಗೆ ಮಾತು ಬಂದು ಸಾಹೇಬರು ಹೇಳಿ ದ್ದರು. ಆಗ ಇನ್ನೂ ವಿಶ್ವಾಸನ ಜನನವಾಗಿರಲಿಲ್ಲವಂತೆ. ಅವರೂ ಶ್ಯಾಮ ರಾಯರೂ ಕೂಡಿಯೇ ಒಂದೇ ಡಿವ್ಹಿಜನ್ನಿನಲ್ಲಿ ಕೆಲಸಮಾಡುತ್ತಿದ್ದರಂತೆ. ಆಫೀಸಿ ನಲ್ಲಿ ಜೊತೆಯಾಗಿ ಇರುವದರ ಕೂಡ, ನೆರೆಮನೆಯವರೂ ಕೂಡ ಆಗಿದ್ದರು. ಒಂದು ಸಲ ದೀಪಾವಳಿಯ ಹೊತ್ತಿಗೆ ರಂಗಕ್ಕ ತೌರಮನೆಗೆ ಹೋಗಿದ್ದರು. ಆಗ ಒಂಟಿಯಾದ ಸಾಹೇಬರಿಗೆ, ಶ್ಯಾಮರಾಯನಲ್ಲೇ ಅಖಂಡ ಹಬ್ಬದ ಔತಣವಿತ್ತು. ನರಕಚತುರ್ದಶಿಯ ದಿನ, ಸೋನಕ್ಕ, ಅವರಿಗೆ ಶ್ಯಾಮರಾಯರಿಗೆ ಕೂಡಿಯೇ ಆರತಿಮಾಡಿದರು. ಸಾಹೇಬರು ಅಕ್ಕ-ತಂಗಿಯ ಸೌಭಾಗ್ಯವನ್ನು ಪಡೆದು ಬಂದಿರಲಿಲ್ಲ. ಅಂದು ಸೋನಕ್ಕ ತಂಗಿಯಾಗಿ ಅವರಿಗೆ ಆರತಿ ಬೆಳಗಿದಳು. ತಮಗೆ ಮಾನಸ-ತಂಗಿಯೊಬ್ಬಳು ದೊರಕಿದಳೆಂದು ಸಾಹೇಬರು ಒಂದು ಸಮಾಧಾನಪಟ್ಟು ಕೊಂಡರು. ಅಂದು ಅವರು ಆರತಿಯಲ್ಲಿ ಸೋನಕ್ಕನಿಗೆ ಆಹೇರಿ ಹಾಕಿದ್ದರು. ಇಂದಿನ ಮಿತಿಗೂ, ಅವರು, ಅಷ್ಟೇ – ಅಂದು ಹಾಕಿದ ಹಣದಷ್ಟೇ – ಆಹೇರಿ ಯನ್ನು ಪ್ರತಿದೀಪಾವಳಿಯ ದಿನ, ಅವರ ಹೆಸರಿನಿಂದ ಮೀಸಲು ಇಡುವ ಪರಿಪಾಠ ಹಾಕಿಕೊಂಡಿದ್ದಾರೆ. ಅದರಲ್ಲಿ ಖಂಡವೆಂಬುದೇ ಬಿದ್ದಿಲ್ಲ. ಒಮ್ಮೆ 'ಸೋನಕ್ಕನನ್ನು ಕರೆಯಿಸಿಕೊಂಡು, ಅಂದು ಅವರಿಗೆ ಈ ಆಹೇರಿಯನ್ನು ಒಪ್ಪಿಸ ಲಿದ್ದೇನೆ. ಜೀವಮಾನವಿರುವ ತನಕ, ಕೈನಡೆಯುವ ತನಕ ಅವರು ಈ ಆಹೇರಿ ಯನ್ನು ತಪ್ಪಿಸಲಾರೆ' ಎಂದು ಹೇಳಿದ್ದರು.

ಅವರ ಈ ಕಥನ ಕೇಳಿದ ದಾದಲ್ಯಾ ಕರಗಿ ನೀರಾಗಿದ್ದ. ಇಂಥ ದೊಡ್ಡ ಜೀವನ–ಅಂತಃಕರಣದ ಜೀವನ–ಶ್ಯಾಮರಾಯ ಭಾವಿಸಿದಂತೆ ಕಳಂಕಿತವಲ್ಲವೆಂದು ನಿರ್ಧರಿಸಿಕೊಂಡಿದ್ದ. ಆದರೆ ಅವರಿಗೆ, ಶ್ಯಾಮರಾಯ, ಸೋನಕ್ಕನಿಗೆ ಆರೋಪಿಸಿದ ಅಪವಾದದ ಕಲ್ಪನೆ ಇರಲಿಲ್ಲ. ರಾವಜೀಕಾಕಾ–ವಿಶ್ವಾ, ವಜ್ರಹೃದಯೀ; ಅವರು

ವಿಚಲಿತರಾಗುವದು ಅಷ್ಟು ಸಹಜವಲ್ಲ. ಆದರೆ ಬೆಣ್ಣೆಯಂತೆ ಮೃದು ಮುದ್ದೆ ಯಾದ ಸಾಹೇಬರು, ಈ ಅಪವಾದದ ವಾರ್ತೆಯನ್ನು ಕಿವಿಯಿಂದ ಕೇಳಿದ ಕ್ಷಣವೇ ಭೂಪತಿತರಾಗುತ್ತಿದ್ದರು. ಕರಗಿ ಕರಕಾಗುತ್ತಿದ್ದರು. ಈ ಅಪವಾದದ ಮೂಲ ಕಾರಣ ತಾವೇ ಎಂದು ತಿಳಿದರೆ ಹೃದ್ರೋಗಕ್ಕೆ ಬಲಿಯಾಗುತ್ತಿದ್ದರು. ಈ ಅಪವಾದದ ಮೃತ್ಯುಛಾಯೆ ಇಲ್ಲಿ ಸೋನಕ್ಕನನ್ನು – ಅಲ್ಲಿ ಸಾಹೇಬರನ್ನು ಬಲಿಕೊಳ್ಳುತ್ತಿತ್ತು. ಸೋನಕ್ಕ ಬದುಕಬೇಕು, ಸಾಹೇಬರೂ ಬದುಕಬೇಕು. ಎರಡೂ ಮನೆತನ ಹೊಂದಬೇಕು. ಶ್ಯಾಮರಾಯನ ಕಣ್ಣುಪರೆ ಹರಿದು ಅವನ ತಪ್ಪು ಅವನಿಗೇ ತಿಳಿಯಬೇಕು. ಈ ಕಗ್ಗಂಟಿನ ಸಮಸ್ಯೆ ಬಿಡಬೇಕು.

ರಾವಜೀಕಾಕಾ ಅವರಿಗೆ ನಾನು ಇದರ ತ್ರೋಟಕ-ವರದಿ ಮಾಡಿದ್ದೆ. ಇದ್ದೆಲ್ಲವನ್ನು ಮತ್ತೆ ವಿವರವಾಗಿ ವಿಶ್ಯಾನಿಗೆ ಹೇಳಿದೆ —

"ದಾದಾ, ತನ್ನ ಬ್ಯಾಳೀ ಬೇಯಿಸಿಗೊಂಬೂದರ ಸಲುವಾಗಿ, ಶಕೂ-ಸುರೇಶನ ಸಂಬಂಧಕ್ಕ ಒಪ್ಪಿಗಿ ಕೊಡೂ ನಾಟಕಾ ಮಾಡ್ಯಾನು. ನೀನು 'ಔಟ್ ಆಫ್ ಕ್ವೆಶ್ಚನ್' ಅನ್ನೂದು ಅಂವಗ ಠಾಂವಿಕ್ಯದ. ನಿಂದು ವಸೂಂದು ಸಂಬಂಧದ ಕಲ್ಪನಾ ಎಲ್ಲಾರಿಗೂ ಅದ. ನಾನು ಸುರೇಶ-ಶಕೂನ ದಶಿಂದ ಹೇಳಿದಾಗ, ರಾವಜೀಕಾಕಾ 'ಯಸ್– ನೋ' ಎರಡೂ ಹೇಳಲಿಲ್ಲಾ. ಸೋನಕ್ಕನೂ, ಸುಮ್ಮನೇ ಇದ್ದರು. ಸುರೇಶ-ಶಕೂನ ಸಂಬಂಧ ಕೂಡಿದರ, ವಿಶ್ಯಾ, ದೊಡ್ಡ 'ಪ್ರಾಬ್ಲೆಮ್' ಬಿಡೂ ಸಂಭವ ಅದ. ಯಾರದೂ ಬಲೀ ಆಗದ 'ಪ್ರಾಬ್ಲೆಮ್' ಬಿಡೂ ಆಶಾ ಅದ. ವಿಶ್ಯಾ, ಅದನ್ನ ಬಿಡಸದ ನಿನಗ ಶಾಂತೀ ಇಲ್ಲಾ. ಯಾರಿಗೂ ಸಮಾಧಾನ ಇಲ್ಲಾ."

ಶ್ಯಾಮರಾಯ ಸಾಹೇಬರೆದುರು, ರಂಗಕ್ಕನವರ ಎದುರು, ನಾಟ್ಯಪೂರ್ಣ ಅಭಿನಯಮಾಡಿ, ಅವರನ್ನು ಮುಗ್ಧಗೊಳಿಸಿದ್ದ. ಹುಡುಗರ ಅಭ್ಯಾಸದ – ರಾವಜೀಕಾಕಾ ಅವರ ಕ್ಷೇಮದ ದೃಷ್ಟಿಯಿಂದ ಸೋನಕ್ಕನಿಗೆ ಪುಣೆಯಲ್ಲಿರದೆ ಗತಿಯಿಲ್ಲ. ಹತ್ತು-ಹದಿನೈದು ದಿನಕ್ಕೊಮ್ಮೆ ತಾನೇ ಪುಣೆಗೆ ಪ್ರಯಾಣಿಸಿ ಅವರೆಲ್ಲರ ಸಮಾಚಾರ ತೆಗೆದುಕೊಂಡು ಬರುತ್ತೇನೆ. ತೊಂದರೆ ತನಗೇ ಆಗುತ್ತದೆ. ಆದರೆ ಉಪಾಯವಿಲ್ಲವೆಂದು ಖಾತ್ರೀ ಆಗುವ ರೀತಿಯಲ್ಲಿ ಎಲ್ಲರ ಮುಂದೂ ಸಾರುತ್ತ ನಡೆದಿದ್ದ. ಸಾಹೇಬರಿಗಂತೂ ಶ್ಯಾಮರಾಯನ ಮಾತು ನೂರಕ್ಕೆ ನೂರು ಪಾಲು ಪಟಾಸಿತ್ತು. ಅವನ ಕುಟುಂಬವಾತ್ಸಲ್ಯ ಅವರನ್ನು ಪುಲಕಿತ

ವಾಗಿಸಿತ್ತು. ಅವರು ಶ್ಯಾಮರಾಯನ ಬಗ್ಗೆ ಕಟ್ಟಿಕೊಂಡ ಬಣ್ಣಬಣ್ಣದ ಕಲ್ಪನೆ, ಅವನ-ತಮ್ಮ ಸಂಬಂಧ, ಋಣಾನುಬಂಧ, ರಕ್ತಸಂಬಂಧದಲ್ಲಿ ಸಂಗಮಿಸಿದರೆ ಆಗುವ ಕಲ್ಯಾಣ – ಅವರನ್ನು ಕಾಜಿನಮನೆಯಲ್ಲಿ ನಿರ್ಧಾಸ್ತವಾಗಿರಲು ಬಿಟ್ಟಿದ್ದವು. ಸೋನಕ್ಕನಿಗೆ ಬಂದ ಅಪವಾದದ ಒಂದು ಸಣ್ಣ ಹರಳೂ ಕೂಡ, ಆ ಕಾಜಿನಮನೆಗೆ ಆರು-ಪಾರು ತೂತು ಕೆಡವಿ ಅದರಲ್ಲಿ ವಿಷವಾಯು ಹರಿದಾಡುವಂತೆ ಮಾಡೀತೆಂಬ ವಿಚಾರ ಅವರ ಕಲ್ಪನೆಗೆ ಅತೀತವಾಗಿತ್ತು.

ಅವರ ಡಿವ್ಹಿಜನ್‌ದಲ್ಲಿ, ಶ್ಯಾಮರಾಯನ ಹೆಸರಿಗೆ ನಾಕಾರು ದೊಡ್ಡ ಕಾಮಗಿರಿ ಮಂಜೂರಾಗಿದ್ದವು. ಅವು ಮುಗಿಯುವ ತನಕ ಶ್ಯಾಮರಾಯ ಸಾಹೇಬರ ಮೂಗಿಗೆ ತುಪ್ಪ ಸವರುತ್ತ, ಅವರಿಗೆ, ಸುರೇಶನ ಆಶೆಯನ್ನು ಹಚ್ಚುತ್ತ ತನ್ನ ಸ್ವಾರ್ಥ ಸಾಧಿಸಿಕೊಳ್ಳಲಿದ್ದ. ಅಷ್ಟರಲ್ಲಿ ಸಾಹೇಬರಿಗೆ ಬದಲೀ-ಗಿದಲೀ ಆದರೆ ಅವನು ಗೆದೆಯುತ್ತಿದ್ದ. ಇಷ್ಟೂ ಮೀರಿ ಪ್ರಸಂಗವೇ ಮೈಮೇಲೆ ಬರುವಂತೆ ಕಂಡರೆ – ಅವನು ಶಕೂ-ಸುರೇಶರ ಸಂಬಂಧಕ್ಕೆ ಒಪ್ಪಿಗೆ ಕೊಡುತ್ತಿದ್ದ, ಕೊಡಬಹುದಾಗಿತ್ತು. ಅದರಲ್ಲಿಯೂ ಅವನಿಗೆ ಹಾನಿ ಇರಲೇ ಇಲ್ಲ. ಶಕೂನ ಕೂಡ, ಸಾಹೇಬರ ಮನೆಯ ಲಕ್ಷ್ಮಿಯೂ ಬರುತ್ತಿದ್ದಳು. ಶ್ಯಾಮರಾಯನ ಡಾವಿನಲ್ಲಿ ಇಂಥದೇ ಏನೋ ಮುತ್ಸದ್ದಿತನದ ನೀರಾಡುತ್ತಿತ್ತು.

ನನ್ನ ವಿವರಣೆಯನ್ನು ಶಾಂತಚಿತ್ತನಾಗಿ ಕೇಳಿಕೊಂಡು ವಿಶ್ಯಾ ಹೇಳಿದ:

"ಆದರ ದಾದಲ್ಯಾ, ತಾಯಿಗೆ ಬಂದ ಅಪವಾದದ ಕಿಡಿ, ದಾದಾನ ಎಲ್ಲಾ ವಿಚಾರದ ಬುಡದಾಗ ಅಡಿಗಿ ಕೂತದ. ಅದು ಹಾರಿತಂದರ, ಅವನ ಮನೋರಾಜ್ಯ ಎಲ್ಲಾ ನೆಲಸಮಾ ಆಗೂದನ್ಸ. ಆ ಕಿಡೀ ಹಾರಲಿಕ್ಕೇಬೇಕು. ಠಿಣಗಿ ಹೊತ್ತಿ ಬೆಂಕಿ ಏಳಲಿಕ್ಕೇಬೇಕು. ಅದನ್ನ ದಾದಾ, ತಾನೇ ಹೊತ್ತಿಸಿಗುಡೂದಿಲ್ಲಾ. ಒಂದ ದಿನಾ ಅಚಾನಕ ಆಗಿ, ಅವನ ಕೈ ಕಣ್ಣ ತಪ್ಪಿ ಆ ಉರೀ ತಾನ್ಸ ಭಡಕಾಸಿಗೊಂಡು ಏಳತದ. ಅದರ ಝಳಾ ನಮಗ ಬಡದೇಬಡೀತದ. ಆದರ ತನಗ ಅದರ ಸ್ಪರ್ಶನೂ ಆಗೂದಿಲ್ಲಾ ಅನ್ನೂ ಖಾತ್ರೀ ಅದ್ಸ ದಾದಾಗ."

"ಸೋನಕ್ಕನೂ ಇದೇ ಮಾತ್ಸ ಹೇಳಿದರು. ತಮ್ಮ ಕಣ್ಣ ಮುಚ್ಚದ್ಸ, ತಾಂವು ಜೀವಾ ನೀಗದ್ಸ ಈ ಸಮಸ್ಯಾಪರಿಹಾರ ಆಗೂದಿಲ್ಲಂದರು."

ರಾವಜೀಕಾಕಾ ಸೋನಕ್ಕನಿಗೆ ಹೇಳಿದ ಧೈರ್ಯದ ಮಾತು, ತೋರಿಸಿದ ದಾರಿಯ ಸಾದ್ಯಂತ ಹಕೀಕತ್ತನ್ನು ನಾನು ವಿಶ್ವಾಸನಿಗೆ ಹೇಳಿದೆ. ವಿಶ್ವಾಸ ಎಲ್ಲ

ವನ್ನೂ ಕೇಳಿಕೊಂಡ. ಸಿಗರೇಟಿನ ಕೊನೆಯ ಝುರುಕಿಯನ್ನು ಎಳೆದು, ಹೊಗೆ ಬಿಟ್ಟು, ತ್ರೋಟಕವನ್ನು ಬಟ್ಟಿನ ಬಿಲ್ಲು ಮಾಡಿ ದೂರ ಚಿಮ್ಮಿದ. ಸಿಗರೇಟಿನ ತ್ರೋಟಕ ಕಿಡಿಯುಗುಳುತ್ತ ದೂರ ಸಿಡಿದು ಬಿತ್ತು.

"ಬಲಿವ್ ದದ್ಯಾತ್ – ಬಲಿವ್ ದದ್ಯಾತ್" ಅಂತ ಯಾರದೋ ಅಖಂಡ ಅಮಂಗಳ ಘೋಷಣಾ ನಡದದ ದಾದಲ್ಯಾ. ಪಂತಕುಟುಂಬದ್ದು ಬಲೀ ಕೇಳ ಲಿಕ್ಕೆ ಹತ್ತೇದ ಕಾಲಾ. ಅದು, ರಕ್ತಾನs ಮುಕ್ಕಳಸೂದು. ಅದನ್ನ ಕೊಡದs ನಮಗ ಮಾರ್ಗ ಇಲ್ಲಾ.. ಅದಕs ನಾ ನಿನಗ ಹಿಂದಕೇ ಹೇಳಿದ್ದೆ: ಸ್ಪಷ್ಟಮಗ್ರೇ ಭವಿಷ್ಯತೀ ಅಂತ.

ದಸ್ತಗೀರ್‍ಯಾ, ನನಗ ಇದರ ಸಮಸ್ಯಾ ಬಿಡಸಬೇಕಂದರ ಅದಕ ಒಂದs ಸೀದಾ-ಸಾದಾ ರಾಸ್ತಮಾರ್ಗ ಅದs. ಅದೂ ಅಂದರ, ಸ್ಪಷ್ಟಾಗಿ ಸಾಹೇಬರಿಗೆ ಈ ಅಪವಾದದ ವಿಷಯ ತಿಳಸೂದು. ನಮ್ಮ ಕ್ಷೇಮದ್ದಶಿಂದ ಅಲ್ಲಾ, ಅವರ ಹಿತದ್ದಶಿಂದ. ಅವರಿಗೆ, ಕಾಕಾಗ ಅಡ್ಡಬಿದ್ದು, ದಾದಾ ಕ್ಷಮಾಯಾಚನಾ ಮಾಡ ಬೇಕು. ತಾಯೀ ಕಾಲ ಹಿಡಕೊಂಡು ಕ್ಷಮಾ ಕೇಳಬೇಕು. ಅಂದರ, ತಾಯಿಗೆ ಬಂದ ಅಪವಾದ ಅಳಸ್ತದ. ಆದರ ದಾದಲ್ಯಾ, ಆಕೀ ಸುಖೀ ಮಾತ್ರ ಆಗೂ ದಿಲ್ಲಾ. ದಾದಾನ ಜೋಡೀ ಸಂಸಾರಮಾಡೂದಿಲ್ಲಾ. ಸಂನ್ಯಾಸಿನೀ ಹಾಂಗ ಇರತಾಳ. ಆಕೀ ಸುಖದ ಆಶಾ – ಸಂಸಾರದ ಆಶಾ – ಅದರ ಮೋಹಾ – ಅದರ ಇಚ್ಛಾ, ಎಲ್ಲಾ, ಎಂದೋ ಸುಟ್ಟು ನಿಶ್ಚಿಂತಳಾಗ್ಯಾಳ. ಈಗ ತಾಯೀ ಸತ್ತ ಬದಕ್ಯಾಳ. ದಾದಲ್ಯಾ, ಆಕಿನ್ನ ದಾದಾ ಕೊಂದಾನ. 'ಫಿಜಿಕಲೀ' ಆಕೀ ಅವತಾರ ಮುಗಿಸಿದ್ದನಂದರ ನನಗ ಕೆಟ್ಟ ಅನಸ್ತಿದ್ದಿಲ್ಲಾ. ಆದರ ಆಕಿನ್ನ ಈ ನರಕ ಜೀವನದಾಗ ಬಿಟ್ಟದ್ದಕ್ಕ – ಆಕೀಗೆ ಅಖಂಡ ಸಂಕಟ ಕೊಟಕೋತ ಇದ್ದದ್ದಕ್ಕ ನನಗ ತಳಮಳ ಆಗತದ. ಸಂತಾಪಕ್ಕ ಎಸರ ಬರತದ. ದಾದಾ ಆಕೀ ಕಾಲನೂ ಹಿಡ ಕೊಂಡಾನು. ಕ್ಷಮಾನೂ ಕೇಳ್ಯಾನು. ಆದರ ಅದು ತನ್ನ ಸ್ವಾರ್ಥ ಸಾಧಸೂದರ ದಶಿಂದ. ಆಕೀ ಸುಖಕ್ಕ – ಆಕೀ ಸಮಾಧಾನಕ್ಕ ಅಲ್ಲಾ. ದಾದಾ ತಾಯೀ ಜೀವನದಾಗ ಹುಳೀ ಹಿಂಡ್ಯಾನ. ಆಕೀ ಜೀವನಾ, ದಾದಲ್ಯಾ, ಒಡದ ಹಾಲಾ. ತಾಯೀ ಒಡದ ಕನಡೀ ಹೊಂದಸಬ್ಯಾಡರೀ ಅಂತ ಅಂದ ಮಾತು ಅಕ್ಷರಶಃ ಸತ್ಯಮಾತು. ಕಾಕಾ ಹೇಳಿಧಾಂಗ, ತಾಯೀ ನಿರ್ಲಿಪ್ತ ಆಗಿ ಇದ್ದಾಳು – ತೇಜಸ್ವೀ ಆಗಿ ಇದ್ದಾಳು. ಆ ಅಗ್ನಿ ಮಂದಿಗೂ ಅಸ್ಪೃಷ್ಟಾ – ತಾನೂ ಸ್ವಯಂ

ಜ್ವಲಂತಾ. ಅದು ಮಂದೀ ಕಣ್ಣ ಕುಕ್ಕಿಸಿದರೂ ಆತ್ಮದಹನಕಾರ್ಯ ನಡಸೇ ಇರತದ. ಈ ಬೆಂಕ್ಯಾಗ ತಾಯೀ ಅಖಂಡ ಜೀವಮಾನ ಹುರಪಳಿಸಿಗೋತ ಇರಬೇಕು. 'ಪ್ರಾಬ್ಲೆಮ್' ಬಿಡೂ ವಿಷಯ ಆಗದೀ 'ಸುಪರ್‌ಫೀಶಿಯಲ್' ಆಗೇದ. ಮಹಾ ಸಾಗರದ ನಡವ ನೀರು, ನಿತಾಂತ ಶಾಂತ ಇರತದಂತ. ಅದು ಕಣ್ಣಿಗೆ ಅಷ್ಟs ಶಾಂತ. ಆದರ ಅದರ ಅಂತರಂಗಾ ವಡವಾನಲಗರ್ಭ ಇರತದ. 'ಪ್ರಾಬ್ಲೆಮ್' ಬಿಟ್ಟರ, ನಮಗ ಬರೂ ಶಾಂತೀ-ಸಮಾಧಾನಾ ಇಂಥಾದ್ದು."

"ನಿನ್ನ ಮಾತು ನನಗೂ ಮಾನ್ಯ ಅದs ವಿಶ್ಯಾ. ಆದರ ನಂದೂ ಒಂದ ವಿಚಾರ ಕೇಳು. ಸೋನಕ್ಕನ ತೋರಿಕೀ ವನವಾಸ ಮುಗದರೂ ಅವರು ಸುಖೀ ಆಗ ಲಾರರು ಅನ್ನೂದು ಇಂದ ಗೃಹೀತ ಆದ ಮಾತಾ. ಅವರ ಆತ್ಮದಹನದ ಕಾರ್‍ಯಾ, ನಿತಾಂತ ಆಗಿ ನಡದೀತನ್ನೂದು ನಿಶ್ಚಿತಾ! ಅದನ್ನ ತಪ್ಪಸೂದು ಹರಿ-ಹರ-ಬ್ರಹ್ಮ ರಿಗೂ ಸಾಧ್ಯ ಇಲ್ಲಾ. ಅದಕ್ಕ ಪರಿಹಾರನs ಇಲ್ಲಂದಮ್ಯಾಲs, ಅಷ್ಟs ಬಲೀ ಯಿಂದ ಕಾಲ ತೃಪ್ತ ಆಗಲಿ. ಅವನ ನಾಲಿಗಿ, ಸುತ್ತೂ ರಾಚಿ, ಇದ್ದಬಿದ್ದದ್ದನ್ನ ನೆಕ್ಕದಿರಲಿ. ಒಂದ ಬಲೀಯಿಂದ, ಪಂತಕುಟುಂಬ ಬದಕತsದ. ಬಾಳತsದ. ಒಂದ ಜೀವಾ, ನೂರ ಜೀವಕ್ಕ ಸಂಜೀವಿನೀ ಆಗತದ. ನಮ್ಮ ಗೌಡರ ಭಾಂವೀ ಕಥೀ ನಿನಗ ಗೊತ್ತ ಅದs ಇಲ್ಲೋ? ದಸ್ತಗೀರ್‍ಯಾಗ ಠಾಂವಿಕಿಲ್ಲಾ. ನಮ್ಮ ಗೌಡರ ಹಿರ್‍ಯಾರು, ತಮ್ಮ ತ್ವಾಟದಾಗ ಒಂದು ಮಹಾರಾಯ ಭಾಂವೀ ಏನೋ ಹೊಡಸಿದರು. ವರ್ಷಾನಗಟ್ಟಲೇ ಆದರೂ ಅದಕ ನೀರs ಬೀಳಲಿಲ್ಲಂತ. ಒಮ್ಮೆ ಆ ಮನೆತನದಾಗಿನ ಹಿರ್‍ಯಾರ ಕನಸಿನ್ಯಾಗ ಮುತ್ತೈದಿ ಒಬ್ಬಾಕಿ ಬಂದು, ನರಬಲೀ ಕೊಡರೀ ಅಂತ ಬೇಡಿಧಾಂಗ ಆತಂತ ! ಕುಟುಂಬಕ್ಷೇಮದ ದೃಷ್ಟಿಯಿಂದ. ಹಿರ್‍ಯಾರ ಸೊಸೀ, ತುಂಬಿದ ಬಸಿರ ಮುತ್ತೈದಿ, ತನ್ನ ಬಲೀನs ಕೊಡಲಿಕ್ಕೆ, ಭಾಂವ್ಯಾಗ ಕಟ್ಟಿಸಿದ ಕ್ವಾಣೀ ಹೊಕ್ಕಳು. ಪಾವಟಣಗಿ ಪಾವಟಣಗಿ ನೀರ ಏರಕೋತ ಬಂತು. ನೂರ ವರ್ಷದ ಸನೇಕ ಬಂತಂತ ಆ ಮಾತಿಗೆ. ಎಂಥಾ ನೀರಿನ ಅರಬ ಬಿದ್ದರೂ, ಗೌಡರ ಭಾಂವೀ ನೀರಾ, ಒಂದ ಇಂಚೇನು ತೆಳಗ ಸರಿಯೂದಿಲ್ಲಾ. ಮಹಾಬಲಿ ಕೊಟ್ಟ ತಾಯಿ ಜಾಹ್ನವೀ – ಆ ಭಾಂವಿಗೆ ಜಲಧಾರಾ ಹಿಡಿದಾಳ. ವಿಶ್ಯಾ, ಸೋನಕ್ಕನ ಬಲೀ ಆದರ, ಇಂಥಾ ಮಹಾ ಬಲೀನs ಆಗತದ. ಬರೂ ನೂರ ವರ್ಷಾ ಸಾವಿರ ವರ್ಷಾ – ಅದು ಪಂತಕುಟುಂಬದ ಮಹಾವೃಕ್ಷಕ್ಕ ಸಂಜೀವಿನೀ ಚೇತನಾ ಆಗತದ. ಜೀವನದಾಯೀ ಸಾಮರ್ಥ್ಯ ಆಗತದ. ಈ ಬಲೀ ತಪ್ಪಿತೂ

ಅಂದರ, ಸೋನಕ್ಕನೂ ಬದಕೂದಿಲ್ಲಾ, ಕಾಲನೂ ಪಂತಕುಟುಂಬದ ಬಲೀ ತಗೋಳದ ಇರೂದಿಲ್ಲಾ."

"ಈ ವಿಚಾರಾ ನನಗ ಬಂದಿಲ್ಲಂತ ಇಲ್ಲ ದಾದಲ್ಯಾ. ನೀ ಆಡಿ ತೋರಿಸಿದಿ. ತಾಯೀ ಬಲೀ ಆಗಲೀ ಅನ್ನೂದಕ್ಕ ನನ್ನ ನಾಲಗಿ ಏಳಲಿಲ್ಲ ಅಷ್ಟೇ! ಆದರ ದಾದಲ್ಯಾ ದಾದಾ ಎಷ್ಟೇ ಸ್ವಾರ್ಥೀ ಆದರೂ, ಅಭಿಮಾನಾ-ದುರಭಿಮಾನಾ ಮುಕ್ಕ ಆಗಿಗೊಡೂಅಂವಾ ಅಲ್ಲಾ. ಈ ದುರಭಿಮಾನದ ಆಗ್ರಹಕ್ಕ ಬಿದ್ದs, ಅಂವಾ, ತಂದೂ – ಪಂತಕುಟುಂಬದ್ದೂ ವಿನಾಶ ಸನೇಕ ತರಲಿಕ್ಕೆ ಹತ್ಯಾನ. ದುರ್ಯೋಧನ-ತಳೀ ಮೃತ್ಯುಂಜಯು ಆಗೇದ ದಾದಲ್ಯಾ! ಚಿರಂಜೀವೀ ಆಗೇದ! ದಾದಾನಂಥವರ್ನ್ನ ಅದು ನಿಮಿತ್ತ ಮಾಡಕೋತದ. ಆಗಲಿ ದಾದಲ್ಯಾ. ಏನಾಗೂದದ್ದs ಆಗಿಹೋಗಲಿ.

ಸೂಟೀ ಮುಗಿಸಿ ತಿರಗಿ ಹೋಗಾಗ ಪುಣೇಕ್ಕ ಇಳದೇ ಹೋಗತೀನಿ. ಕಾಕಾ-ತಾಯೀ ಜೋಡೀ ಇದರ ಪ್ರಸ್ತಾಪಮಾಡತೀನಿ. ಸಾಹೇಬರೇನು, ಬರೇ ದಾದಾನ ಮಾತಿಗೇ ಒಪಿಗೊಂಡು, ಶಕೂನ್ನ ಸುರೇಶಗ ಕೊಡೂದರ ದಶಿಂದ ಹಾದೀ ಕಾಯಕೋತ ಕೂಡೂದಿಲ್ಲಾ. ಕಾಕಾನ ಕಿಂವೀಮ್ಯಾಲೂ ಒಂದ ಮಾತು ಹಾಕತಾರ. ದಾದಾ, ಒಬ್ಬನೇ ಇದರಾಗ ಮುಖ್ಯ 'ಫ್ಯಾಕ್ಟರ್' ಅಲ್ಲಾ ಅನ್ನೂ ಕಲ್ಪನಾ ಅವರಿಗೂ ಇರಬೇಕು. ಅಂಥಾ ಪ್ರಸಂಗನs ಬಂದರ, ಕಾಕಾ ತಾಂವು ಒಬ್ಬರs ಎಂದೂ 'ಡಿಸಿಜನ್' ತಗೊಂಬೂದಿಲ್ಲಾ. ತಾಯಿನ್ನೂ ಕೇಳತಾರ. ನನ್ನೂ ಕೇಳತಾರ. ಪಂತಮಾಮಾ ಬನೂಮಾಮೀನ್ನೂ ಕೇಳತಾರ. ಆಗ ಎಲ್ಲಾರೂ ಕೂಡಿ ನಿರ್ಣಯು ತಗೋಳಿಕ್ಕೆ ಬಂದೀತು. ಅದರ ನಿಕಾಲೇ ಆಗೂದು ಎಷ್ಟ ಮಹತ್ವದ್ದು ಅದs, ನಂದೂ-ವಸೂಂದೂ ಜಮಾಸೂದೂ ಅಷ್ಟs ಕಠೀಣದ. ಅದರ ನಿರ್ಣಯು ಆಗೂ ತನಕಾ, ಇದು ಅನಿರ್ಣೀತನs ಉಳಿಯೂದು."

"ಅದರದೂ ಒಂದು 'ಪ್ರಾಬ್ಲೆಮ್' ಏಳೂ ಸಂಭವ ಅದs ವಿಶ್ಯಾ. ನಾ ಜಮುಖಂಡಿಗೆ ಹೋದಾಗ, ಇದರ ವಾಸನಿ ಬಡೀತು. ಪಾರ್ವತೀಕಾಕೂನ ಅಣ್ಣನ ಮಕ್ಕಳೂ ಬೆಳದು ನಿಂತವರಿದ್ದಾರ. ಇಬ್ಬರೂ ಅವಳಿ-ಜವಳಿ. ಒಬ್ಬಾ ಎಂ.ಏ.ಕ. ಇನ್ನೊಬ್ಬಾ ಎಂ.ಎಸ್‌ಸಿ.ಗೆ ಇದ್ದಾನ. ಇಬ್ಬರೂ ನಕ್ಷತ್ರಧಾಂಗ ಇದ್ದಾರನ್ನೂದು ಖರೇ. ಆದರ ಐ.ಸಿ.ಎಸ್.ದ್ದು – ಸಂಸ್ಥಾನೀ ರಾಜಕನ್ಯಾಗೋಳದು ಕನಸಿನ್ಯಾಗ ಇದ್ದಾರ. ಸಖಶಿಖಾಂತ ಘಮೇಂಡಿ ತುಂಬೇದ. ಅವರ ಮನೀ ಭಡಜೀದು –

ನಂದು ಸಹಜಾಸಹಜೀ ದೋಸ್ತೀ ಜಮಾಸಿತು. ಮಾತಕಥೀ ತಗದೆ. ಶಂಕರಕಾಕಾ ಅವರ ಬೀಗರು – ಅವರ ಬೀಗಿತ್ತಿ ಮನಸಿನ್ಯಾಗ ಒಬ್ಬ ಹುಡುಗ್ಗ ವಸೂನ್ನ ತಗೊಂಬೂದದ. ಆಸ್ತೀ ಅಳ್ಯಾನ ಕೈ ಬಿಡೂದಿಲ್ಲಾ ಅನ್ನೂ ಭರೋಸ ಅದ. ಆದರs ಶಂಕರಕಾಕಾ ಪಾರ್ವತೀಕಾಕೂಗ, ನಿನ್ನ ವಿಚಾರಾ. ಈಗ ಪಾರ್ವತೀ ಕಾಕೂನ್ನ, ಅವರು, ಇದs ಮಾತಿನ ನಿರ್ಣಯಕಂತ ಕರಿಸಿಗೊಂಡಾರಂತ ಬಾತಮೀ ಹತ್ತ್ಯಾ. ಶಂಕರಕಾಕಾ, ವಸೂನ ವಿಚಾರ ಬಿಟ್ಟು ಬ್ಯಾರೇ ಏನರs ಹೇಳೂದಿದ್ದರ ಹೇಳರಿ ಅಂತ ನಿರ್ಣಾಯಕ ಅಭಿಪ್ರಾಯ ತಿಳಿಸ್ಯಾರಂತs."

"ದಾದಲ್ಯಾ ಇದು ಇಷ್ಟಕs ಮುಗಿಯೂದಿಲ್ಲಾ. ಇನಾ 'ಕಾಂಪ್ಲಿಕೇಟೆಡ್' ಆಕ್ಕೋತನs ಹೋಗತದ. ಶಂಕರಕಾಕಾ, ಮನಕ್ಕ ಅಂಜದಿದ್ದರೂ ಜನಕ್ಕ ಅಂಜ್ಯರs ವಿಚಾರಮಾಡೂ ಪ್ರಸಂಗ ಬರತ್ತದ. ನಂದೂ ವಸೂಂದು, ಸ್ನೇಹಾ-ಪ್ರೀತಿ ನಮಗ ವರಾ ಆಗದs ಶಾಪನs ಆದೀತಂತ ಅನಸ್ತದ. ಅದು ಪರಿಹಾರ ಇಲ್ಲದ ಶಾಪನs ಆಗಿ ಉಳೀತದ. ನಿಧಾನ ಈ ಜನ್ಮದಾಗಂತೂ ಇಬ್ಬರಿಗೂ ಮುಕ್ತಿ ಆಶಾ ಇಲ್ಲಾ. ಬಿಡಗಡೀ-ಬಂಧನಾ, ಎರಡೂ ಇಲ್ಲದ ಒಂದ ಅವಾಸ್ಥಾದಾಗ ನಾವು ಬದಕಬೇಕಾದೀತಂತ ಅನಸ್ತದ……"

"ವಿಶ್ಯಾ, ವಸೂ ಯಾರು? ಹ್ಯಾಂಗ ಇದ್ದಾಳ ಅನ್ನೂದರ ಠಾಂವಿಕಿ ನಿನಗದ. ಆಕೀಗೆ ನಿನಗ ಬಿದ್ದ ತಳಕ ಬಿಡಸೂದು ಯಾರಿಂದೂ ಶಕ್ಯ ಇಲ್ಲಾ. ವಸೂ ಏನು ಕೂಸ ಅಲ್ಲಾ, ಸೋನಕ್ಕವರ ಅಪವಾದದ ಮ್ಯಾಲ ವಿಶ್ವಾಸ ಇಡ ಲಿಕ್ಕೆ. ಶಂಕರಕಾಕಾಗೂ ಈ ವಿಷಯಾ ಠಾಂವಿಕಿಲ್ಲಂತ ಹ್ಯಾಂಗ ಅನಮಾನಸ್ತೀ? ಅವರದು – ಪಂತಮಾಮಾಂದು ಅಣ್ಣ-ತಮ್ಮಂದಿರ ನಾತೇ. ಸುಖ-ದುಃಖ ಹೇಳಿಕೊಳ್ಳದ ಇರೂದು ಶಕ್ಯನs ಇಲ್ಲಾ. ಸೋನಕ್ಕನ ನೀತೀ ದಶಿಂದ ಅವರು ಬ್ಯಾರೇ ಕಲ್ಪನಾ ಮಾಡಕೊಂಬೂದು ಅಶಕ್ಯ ಅದs. ಕೂಸ ಇದ್ದಾಗಿನಿಂದ ಅವರ್ನ ಎತ್ತಿ ಆಡಿಸಿದವರು ಶಂಕರಕಾಕಾ. ಅವರಿಗೆ ಸಂಶಾನs ಬಂದಿದ್ದರ, ಅವರು, ವಸೂಂದು-ನಿಂದು ದೋಸ್ತೀ ಬೆಳಿಸಿಗೊಡತಿದ್ದಿಲ್ಲಾ. ಏನಾರೇ ಗಡಿಬಿಡಿ ಮಾಡಿ, ವಸೂನ ಲಗ್ನಾ ಬಗೀಹರಸತಿದ್ದರು. ಅವರಿಗೆ ಖರೇ-ಖೋಟ್ಟೇ ಎಲ್ಲ್ಯದ ಅನ್ನೂದರ ಮಾಹಿತಿ ಅದs. ಅದಕs ನಿರ್ಧಾಸ್ತ ಇದ್ದಾರ. ವಸೂಗ ಇದರ ಸಂಬಂಧೀ ಮಾಹಿತೀ ಇರೂದು ಠೀಕಾ. ಅದನ್ನ ನೀ ಬಿಚ್ಚಿ ಹೇಳಿಬಿಡು. ಮುಚ್ಚಿಟ್ಟು ನೀನೂ ನವೀಬ್ಯಾಡಾ, ಆಕಿನ್ನೂ ಕತ್ತಲ್ಯಾಗ ಇಡಬ್ಯಾಡಾ. ಆಕೀ

ಯಾರನೂ ನಂಬಲಿಕ್ಕಿಲ್ಲಾ – ನಿನ್ನ ನಂಬತಾಳ ಅನ್ನೂ ಭರೋಸ ಅದs ನಮಗ. ಇನ್ನ ಸೂರ್ಯಾನ ಪ್ರಶ್ನಿ. ಅವನ ಬೀ. ಈ. ಮುಗಿಯೂ ತನಕಾ ಅಂತೂ ಯಾರಿಗೇನು ಮಾತಾಡೂ ಸೋಯೀನs ಇಲ್ಲಾ. ಅಲ್ಲದs ಅಂವಾ ಏನು, ನೀ ಹಾಕಿದ ಉಗಳ ದಾಟೂ ಅಂವಾ ಅಲ್ಲಾ. ಅಂವಗೂ ಸೋನಕ್ಕನ ಚಿಂತೀ ವಿಷಯಾ ಗೊತ್ತನs ಅದs. ಅದರ ಪರಿಹಾರ ಆಗದs ಅಂವಾ ಏನು, ನಿಮ್ಮ ದಾದಾನ ಮಾತಿಗೆ ರುಕಾರ ಹೇಳೂದಿಲ್ಲಾ. ದಾದಾ, ಸುರ್ಯಾ-ಸತೀಶ-ಕಿಶೋರರ ಸಮಸ್ಯಾ, ಅವರ ಕ್ಷೇಮಾ ತನ್ನ ಹೊಣೇ, ತಾ ಅದಕ್ಕ ಜವಾಬ್ದಾರಾ ಅಂತs ನಿರ್ಣಯಕ ನಿಂತರs, ಆಗ ಸೋನಕ್ಕನ ಅಪವಾದದ ವಿಷಯ ತಗಿಯೂಣು. ಕಾಕಾ, ತಮ್ಮ ಕರಳ ಕಿತ್ತಿ ಅಂವನ ಕೈಗೆ ಎಂದೂ ಕೊಡೂದಿಲ್ಲಾ. ದಾದಲ್ಯಾ, ನೀ ಬೆಳಗಾಂವೀ ಬಾತಮೀ ತರೂತ ಬಾ. ದಾದಾನ ಹಾಲ್‌ಚಾಲೀ ತಪಾಸ ಇಡೂ. ಅದರ ವರದೀ ನನಗ ಮಾಡತಿರು. ದಾದಾ ಕಂಯಿ-ಕುಂಯಿ ಮಾಡಲಿ. ಒಂದ ಕೈ ನೋಡೇಬಿಡತೀನಿ. ನಿಮ್ಮ ದಾದಾಗ ಸುರ್ಯಾನ ಕಾಳಜೀನೂ ಇಲ್ಲಾ. ಶಕೂನ ವಿಚಾರನೂ ಇಲ್ಲಾ. ಅವಗ ತನ್ನ ಸ್ವಾರ್ಥ ಒಂದೇ ಕಾಣಸ್ತದ. ತನ್ನ ಎಲ್ಲಾ ಕೆಲಸ ಮುಗಿಯೂ ತನಕಾ, ಅಂವಾ ದಿನಾ ಹಾಕ್ಕೋತ ಬರಾಂವಾ. ನಮಗ ಬೇಕಾದದ್ದೂ ಅದೇ. ವಿಶ್ಯಾ, ನಿನ್ನ ಕೋರ್ಸ್ ಮುಗೀಲಿ. ನಿನ್ನ ಸಾಧನಾ ಅದರ ದಶಿಂದ ನಡದ್ವದ. ಅದರಿಂದ ಕಾಕಾ ಅವರಿಗೆ – ಸೋನಕ್ಕಗ ಎಂಥಾ ಆನಂದ ಆದೀತು ಅನ್ನೂದರ ಕಲ್ಪನಾ ನಿನಗ ಅದs. ನೀ ಸುಖೀ ಆಗೂದರಿಂದ, ಅವರ ಅರ್ಧಾನರs ದುಃಖಾ, ಸಂಕಟಾ ಕಡಿಮಿ ಆಗತದ. ಅದನ್ನ ನೀ ಪೂರ್ಣಮಾಡು. ಸೋನಕ್ಕಗ-ರಾವಜೀ ಕಾಕಾಗ, ನನ್ನ-ನಿನ್ನ ನಡುವ ಭೇದ ಅದs, ಅಂತರ ಅದs ಅಂತ ಎಂದೂ ಅನಿಸಿಲ್ಲಾ. ಅದನ್ನ ಮತ್ತ ಸಿದ್ಧಮಾಡಿ ತೋರಸಲಿಕ್ಕೆ ನೀ ಒಂದ ಕೆಲಸಾ ಮಾಡು. ನಿನ್ನ ಚಿಂತೀ ಜವಾಬ್ದಾರೀ ನನಗ 'ಟ್ರಾನ್ಸ್‌ಫರ್' ಮಾಡು. ಬಂದದ್ದನ್ನ ನೋಡಕೊಳ್ಳಿಕ್ಕೆ ನಾ ಇದ್ದೀನಿ. ದಸ್ತಗೀರ್ಯಾ-ವಿಶ್ಯಾ ಅಂದರ 'ಇನ್‌ಸೆಪರೆಬಲ್ಸ್'. ಜೋಡಗೋಳೀ ಅನೂ ಮಾತಿಗೆ ಬಟ್ಟಾ ತರಬ್ಯಾಡಾ. ದೀಪಾವಳೀ ಮುಗಿಯೂ ತನಕಾ, ಮುಗನs, ಆರಾಮ ಎಲ್ಲಾ ಮರತು, ನಿನ್ನ 'ಲಾರ್ಕ್'ನ ಜೊಡೀ ಮಜಾ ಮಾಡು……"

ದಸ್ತಗಿರ್ಯಾ ಇನ್ನೂ ಮಾತನಾಡುತ್ತಿದ್ದ – ಎಂಟೂವರೆಯ ಸಾಂಗಲೀ-ಮಿರಜಿಯ ಲೋಕಲ್ ಗಾಡಿಯು ಸಿಳ್ಳು ತೂರಿಬಂದಿತು.

"ದಾದಲ್ಯಾ ಹೊತ್ತಾತು. ಹಾದಿ ನೋಡತಿರಬೇಕು ಮನ್ಯಾಗ. ನಡೀರಿ ಹೋಗೂಣ ಇನ್ನs"
ಎಂದು ನುಡಿದು ವಿಶ್ವಾಸ ಎದ್ದ.

ನಾವು ಮನೆಗೆ ಬಂದಾಗ ಒಂಭತ್ತು ಬಾರಿಸಿಹೋಗಿತ್ತು. ಹೊತ್ತುಮಾಡಿ ಬಂದ ತಪ್ಪನ್ನು ವಿಶ್ಯಾ ದಾದಲ್ಯಾನ ಕೊರಳಿಗೆ ಕಟ್ಟಿದ. ಇನ್ನೂ ಪೃಚ್ಛಾ-ಪ್ರಚ್ಛೆಯ ಚರ್ಚೆ ನಡೆದಿರುವಾಗಲೇ ನಾನು ಚಿಲಖತ್ತು ಇಳಿಸಿ, ಕೈಕಾಲು ಮುಗಿಸಿ, ಧಾಬಳಿ-ಕಾಷಾಯಧಾರಿಯಾಗಿ ದೇವರ ಮನೆಯಲ್ಲಿ ಪದ್ಮಾಸನಸ್ಥನಾಗಿ ಮಂಗಳಾರತಿ ಎತ್ತಿದ್ದೆ.

"ದೀಪಂ ಗ್ರಹಾಣ ದೇವೇಶ ತ್ರೈಲೋಕ್ಯತಿಮಿರಾಪಹ" ಮಂತ್ರವನ್ನು ಕಂಚಿನ ಕಂಠದಿಂದ ಪಠಿಸುತ್ತಿದ್ದೆ. ಆಗಲೇ ವಿಶ್ವಾಸನ ಕೂಡ ಆಡಿದ ಮಾತಿನಿಂದ ದಸ್ತಗೀರ್‍ಯಾನ ಹುರುದುಂಬಿಸುವ ಅಭಯವಾಣಿಯಿಂದ ಚಲ-ವಿಚಲವಾದ ಮನಸ್ಸು ತ್ರೈಲೋಕ್ಯತಿಮಿರಾಪಹನಿಗೆ ದೀಪಾರಾಧನೆ ಒಪ್ಪಿಸುವಾಗ ತೀರ ವಿನಮ್ರವಾಗಿತ್ತು. ಬೇಭಾನವಾಗಿತ್ತು. ಅವನ ಹೃದಯ, ಕಂಠ ತುಂಬಿಬಂದಿತ್ತು. ವಿಶ್ವಾಸ ಅದನ್ನು ಗುರುತಿಸಿದ. ಮಂಗಳಾರತಿಯ ಸ್ವೀಕಾರಕ್ಕೆ ಬಂದಾಗ ನನ್ನನ್ನು ಕಣ್ತುಂಬ ನೋಡಿ, ಖಚಿತ ಮಾಡಿಕೊಂಡ. ಅದರ ಅರ್ಥ ನಮ್ಮಿಬ್ಬರಿಗೇ ಆಗಿತ್ತು.

ವಿಶ್ವಾಸ ಬಂದದ್ದರಿಂದ ನನ್ನ ದೀಪಾವಳಿ ಸಾಂಗಲಿಯಲ್ಲಿಯೇ ಸಾಂಗ ವಾಯಿತು. ನಾನು ಹಬ್ಬಕ್ಕೆ ಬರಬಹುದೆಂದು ಗೋವಿಂದಭಟ್ಟ-ಅವ್ವ-ಹುಡುಗರು ನಿರೀಕ್ಷಿಸಿದ್ದರು. ಅವರಿಗೆ ನಿರಾಶೆಯಾಯಿತು. ದಾದಲ್ಯಾನ ತಾಯಿ, ಬಡ ವೈದಿಕಬ್ರಾಹ್ಮಣಿತಿ, ದಾದಲ್ಯಾ ಗಳಿಸಿ ತಂದ, ಸಾಹೇಬರ ಮನೆಯವರು ಕೊಂಡು ಕೊಟ್ಟ ಎರಡೂ ಭಾಂಡುಗಳನ್ನು ಇನ್ನೂ ತನ್ನ 'ಸೇಫ್ ಡಿಪೋಜಿಟ್ ವ್ಹಾಲ್ಟ್' ನಲ್ಲಿಯೇ ಜತನವಾಗಿ ಇಟ್ಟಿದ್ದಳು. ದಾದಲ್ಯಾ ಹಬ್ಬಕ್ಕೆ ಬಂದರೆ, ತಾನೊಂದು, ನನ್ನ ತಂಗಿಯೊಂದು ಗಳಿಗೆ ಮುರಿಯಬೇಕೆಂದು ಮಾಡಿದ್ದರಂತೆ.

"ನಿನ್ನ ಅಣ್ಣ ತಂದದ್ದು. ದೊಡ್ಡ ಹಬ್ಬಾ. ನೀನs ಮೊದಲ ಉಟಗೋ. ನಾ, ದಾದಲ್ಯಾನ ಲಗ್ಗಂದಾಗs ಘಳಗಿ ಮುರೀತೀನಿ."
ಎಂದು ಕಣ್ತುಂಬ ಆನಂದಾಶ್ರು ತಂದು ನನ್ನ ತಂಗಿಗೆ ಹೇಳಿದ್ದಳಂತೆ. ನನ್ನ ತಮ್ಮ ತನ್ನ ಭಾಷೆಯಲ್ಲಿ ಇದೆಲ್ಲ ಬರೆದು ತಿಳಿಸಿದ್ದ. ಎಂದೂ ಅಳದ ದಾದಲ್ಯಾ ಅಂದು ಅತ್ತು ಸಂಕಟಪಟ್ಟ. ಈ ದೇವತಾ-ಸದೃಶ – ಪಾರ್ವತೀ-ಪರಮೇಶ್ವರ

ಸದೃಶ ತಂದೆ-ತಾಯಿಗೆ ಸಾಂಗಲಿಯಿಂದಲೇ ಉದ್ದಂಡ ನಮಸ್ಕಾರ ಹಾಕಿದ. ನನ್ನ ತಮ್ಮನ ಪತ್ರವನ್ನು ವಿಶ್ಯಾ ಓದಿದ. "ದಾದಲ್ಯಾ, ನಿಂದs ಸೌಭಾಗ್ಯ ದೊಡ್ಡದು. ನನಗ ಅಷ್ಟೂ ಇಲ್ಲಾ" ಎಂದು ಉಸುರ್ಗರೆದ. ಆ ನಿಟ್ಟುಸಿರಿನಲ್ಲಿ ಅನಂತವೇದನೆ ಇತ್ತು. ಅಪಾರ ಸಂಕಟವಿತ್ತು.

## ಐದು

ಪೋಸ್ಟಮನ್ ಪಾಂಡೂ ಒಂದು ಜಡಭಾರವಾದ ಪಾಕೀಟನ್ನು ರಾಜಪ್ಪನ ಮುಂದೆ ಇಟ್ಟು, ಪರತಪಾವತಿಯ ಮೇಲೆ ಸಹಿ ಮಾಡಿಸಿಕೊಂಡ. ಹೆಗಲಿಗೆ ಹಾಕಿದ, ರಜಿಸ್ಟರ, ಮ. ಆ. ಇದ್ದ ಚೀಲವನ್ನು ಕೆಳಗಿಟ್ಟು, ಕೈಯಲ್ಲಿಯ ಕಾಗದದ ಕಟ್ಟನ್ನು ಅದರ ಮೇಲೆ ವ್ಯವಸ್ಥಿತವಾಗಿ ಇರಿಸಿ, ಪಾಂಡು ರಾಜಪ್ಪನ ಮುಂದೆ ಮಂಡಿಸಿ —

"ಕಾಕಾ ಅವರದೇನೋ ಖಾಸ್ ಖಲಿತಾ ಬಂಧಾಂಗದ ರಾಜಪ್ಪಣ್ಣಾ ?" ಎಂದು ಪ್ರಸ್ತಾಪ ಮಾಡಿದ.

ಪಾಕೀಟು ಹರಿದು ಕಾಗದದ ಕಟ್ಟನ್ನು ಹೊರತೆಗೆಯುತ್ತ —

"ಹೊಲಮನೀ ಕಾಗದಾ. ಗಾಳ ಆದ-ಗೀದಾವಂತ ರಜಿಸ್ಟರಲೇ ಕಳಸಿಧಾಂಗ ಅದs."

ರಾಜಪ್ಪ ಉತ್ತರಿಸಿದ.

ಪಾಂಡೂ ಬೀಡೀ ಬಂಡಲ್ಲಿನಿಂದ ಒಂದು ಬೀಡಿಯನ್ನು ತೆಗೆದು ಅದನು ಎಡಗೈಯಲ್ಲಿ ಓಡಿದು ಬಲಗೈಯಿಂದ ಕಡ್ಡಿ ಗೀಚಿ, ಒಂದೆರಡು ನಿಮಿಷ ಬೀಡಿಯ ಬಾಯಿಗೆ ಕಾವು ಕೊಟ್ಟಪರಂತೆ ಮಾಡಿದ; ಅದನ್ನು ಬಾಯಲ್ಲಿ ಹಿಡಿದು ಉಸಿರು ಬಿಟ್ಟು, ಹೊಗೆ ಸರಾಗವಾಗಿ ಬರುವ ಖಾತ್ರೀ ಮಾಡಿಕೊಂಡು, ಬೀಡಿಯನ್ನು

ಎಡಗೈ ಅನಾಮಿಕದ ನಡುವೆ ಸೇರಿಸಿ, ಒಂದು ದೀರ್ಘ ಝುರುಕಿ ಎಳೆದು ಹೊಗೆ ಬಿಟ್ಟ. ಪಾಂಡೂ ನಿವಾಂತವಾಗಿ ಹೊಗೆ ಬಿಡುವದನ್ನು ನೋಡಿ, ಈ ಗಿರಾಕಿ ಬೇಗ ಜಾಗ ಬಿಡಲು ಬಂದಿಲ್ಲ – ಟಪಾಲ ಹಂಚುವಿಕೆಯು ಕೂಡ, ತನ್ನ ಜಿಹ್ವಾಚಾಪಲ್ಯ ತೋರಿಸುವದರಲ್ಲಿಯೂ ಪಾಂಡೂ ಎತ್ತಿದ ಕೈ – ಏನಾದರೂ ಸುದ್ದಿ-ಸಮಾಚಾರ, ಊರ ಕಿಲಾಪ ಹೇಳುವ ಹುಕಿಯಲ್ಲಿರಬೇಕೆಂದು ಕಾಯಾಸಕಟ್ಟಿ ರಾಚಪ್ಪ ಕೇಳಿದ:

"ಮತ್ತೇನ ಪಾಂಡೂ, ಎಲ್ಲಾ ಠೀಕನs? ಏನರs ವಿಶೇಷಾ?"

"ನಿನಗ ಕೊಟ್ಟೆನಲಾ ಪಾಕೀಟಾ ಅದs ವಿಶೇಷಾ. ರಾವಜೀಕಾಕಾ ಊರ ಬಿಟ್ಟಮ್ಯಾಲ ಇಂದ ಅವರ ದರ್ಶನ ಆಧಾಂಗ ಆತ ನೋಡಪಾ, ಈ ಪಾಕೀಟ ನೋಡೂತ್ಲೇ. ಪತ್ರೇ-ಗಿತ್ರೇ ಮೊಡೀ ಒಳಗ ಅವರs ಬರದಾರ. ಟಪಾಲದಾಗ ಈ ಪಾಕೀಟ ಬರೂತ್ಲೇ, ಖರೇ ಅಂದರ, ರಾಚಪ್ಪಾ, ಕಣ್ಣಿಗೆ ಒತಿಗೊಂಡೆ! ಕಾಕಾ ಊರಾಗಿದ್ದಾಗ, ನನಗ ವಾರದಾಗ ನಾಕಾರ ಸಾರೇನರs ವಾಡೇದ ಹರಕಿ ಇಲ್ಲದ ಇರತಿದ್ದಿಲ್ಲಾ. ನಾಕ ಆರ – ಪತ್ರಾ, ಕೇಸರೀ. ಟಪಾಲ ಒಯ್ದಾಗ ಚಹಾದ ವ್ಯಾಳ್ಯಾ ಇರಲಿ ಬಿಡಲಿ, ಕಾಕೂ ಒಳಗ ಕರದ, ನಡಮನೀಯೊಳಗ ಕೂಡಿಸಿ, ಒಂದ ಉಂಡಿ ಚಹಾ ಇಲ್ಲದs ಎಂದೂ ಕಳಸ್ತಿರಲಿಲ್ಲಾ. ಏನಿತ್ತು? ಏನಾತು? ಈಗ ಶ್ಯಾಮರಾಯಗೂ ಸರಕಾರೀ ಟಪಾಲು ಬರತಾವ. ತಮ್ಮಾಜಿನ್ನ ರನ್ನರ್ ಮಾಡಿಧಾಂಗ ಆಗೇದ. ಬಂದ ಟಪಾಲು ಅವನ ಕಡೇ ಕೊಡಬೇಕಂತ ಅಧಾರಟೀನs ಕೊಟ್ಟ ಇಟ್ಟಾನ. ಛಲೋ ಆತಂದೆ. ದಿನಾ ಬೆಳಗಾದರ ಅವರ ನರೀ ಮಾರೀ ನೋಡೂದರ ತಪ್ಪಿತಂದೆ. ಇಂದ ಟಪಾಲದ ಹೊತ್ತಿಗೆ ಶ್ಯಾಮರಾಯನs ಬಂದಿದ್ದಾ. ಕಾಕಾ ಅವರ ಪಾಕೀಟಿನ ಮ್ಯಾಲs ಅವನ ಕಣ್ಣ ಇತ್ತು. ಗೋವಿಂದ ಮಾಸ್ತರೂ ಹರೇಮಿ. ಅಂವಾ ಜಾಗಾ ಬಿಡೂತನಕಾ ಪಾಕೀಟ ಹೊರಗ ತಗದು ನನ್ನ ಕೈಗೆ ಕೊಡಲೇ ಇಲ್ಲಾ. ತಮ್ಮಾಜಿ ಹಾದ್ಯಾಗ ಗಂಟಬಿದ್ದು, ರಗಡ ಕಿತಿಬೀ ನಡಿಸಿದಾ. ಪತ್ರೇಹಚ್ಚಿಗೊಟ್ಟರ ಕೇಳು. ಇಪ್ಪತ್ತ ವರ್ಷದ ಸನೇಕ ಏನರs ಬಂದಿರಬೇಕ ರಾಚಪ್ಪಾ, ನಾ ಚಾಕರೀ ಮಾಡಲಿಕ್ಕೆ ಹತ್ತಿ. ಇಲ್ಲೇ ಹುಟ್ಟಿದೆ. ಇಲ್ಲೇ ಬೆಳದೆ. ಏನು ನಿನಗ ಅರೀದ ಮಾತ ಅದsನs? ಬುದ್ಧಿ ಬಂದ ಮ್ಯಾಲಿಂದರ ನೆನಪಲೇ ಹೇಳಬೇಕಂದರ, ಮೂವತ್ತ-ಮೂವತ್ತೈದು ವರ್ಷಾ ಏನರs ಆಗಿರ ಬೇಕು, ವಾಡೇದಿಂದ ಮಜ್ಜಿಗಿ ಮಸರಾ ತರದs ತುತ್ತ ಇಡತಿದ್ದಿಲ್ಲಾ. ಆ ತಾಯಿ ಕರಳ ಥಣ್ಣಗ ಮಾಡತಿದ್ದಳು. ಒಂದ ದಿನಾ ಏನರs ನನ್ನ ಹ್ಯಾಣತೀ, ಹುಡುಗ್ರೂ,

ಅಲಗರ್ಜಿತನಾ ಮಾಡಿ ಮಜ್ಜಿಗ್ಗೆ ಹೋಗದಿದ್ದರ, ಪಾಂಡೂನ ಪಾಲಿಂದು ಪಾತೇಲೀ ಮಜ್ಜಿಗಿ ಮಸರಾ, ಗಿರಜಾ, ಇಲ್ಲs, ಭಟ್ಟನ ಮಗಾ ದಾದಲ್ಯಾ, ನಮ್ಮ ಮನೀ ತನಕಾ ತಂದ ಕೊಡಬೇಕು. ವರಷದಾಗ ಬರೂ ನವರಾತ್ರ್ಯಾಗ ನನ್ನ ಹೇಣತೀ, ಭಟ್ಟನ ಹೇಣತೀ ಗೋದಕ್ಕಾ ಜೋಡೀ ಮುತ್ತೈದಿ ಅಂತs ಹೋದರs, ಸೀರೀ-ಖಣಾ-ದಕ್ಷಿಣಿ ಇಲ್ಲದs ಎಂದೂ ಬರಲಿಲ್ಲಾ. ರಾಧಾಕಾಕೂ ಹೋದ ಮ್ಯಾಲs, ನಾ ನನ್ನ ಹೇಣತಿಗೆ ನನ್ನ ರೊಕ್ಕದಲೇ ಭಾಂಡ ಖರೀದಿ ಮಾಡಿದ್ದು. ಈ ಪಿಂಡಾ, ಅವರ ಪುಣ್ಯಾಧ್ಲೇನs ಬೆಳೀತು ರಾಚಪ್ಪಾ. ಎರಡ ಹ್ಯಾಂಗ ಬಯಸೀತು ಅವರಿಗೆ? ನಿನ್ನ ಹೆಸರಲೆ, ದೇವಸ್ಥಾನದ ಹೆಸರಲೆ, ಕಾಕಾ ಅವರಿಂದ ಕಾಗದ ಏನರs ಬಂದರ ಅವನ್ನ ಶ್ಯಾಮರಾಯಗ ಕೊಡೂತ ಬಾ ಪಾಂಡು. ಈ ಸೇವಾ ಏನು ಫುಕಟ ಹೋಗೂದಿಲ್ಲಾ ಅಂತ ವಶೀಲಿ ಹಚ್ಚಲಿಕ್ಕೆ ಬಂದಿದ್ದಾ ತಮ್ಮಾಜಿ. ಮಗನs, ಈಗ ಬರೇ ಎಂಟ ಮಣತಾ ಮಣದೀದಿ. ಹೊಡದರ ಹದಿನಾರ ಕಡೇ ಸೊಟ್ಟ ಆದೀ ಅನೂತ್ಲೇ ಜಾಗಾ ಬಿಟ್ಟಾ. ಗೋವಿಂದಭಟ್ಟಾ – ನಾನು ಗಳಸ್ಯ ಕಂಠಸ್ಯ ಅನ್ನೂದರ ಠಾಂವಿಕಿ ನಿನಗದ ರಾಚಪ್ಪಾ. ಅಂವಾ ದೋಸ್ತೀಖಾತರಂತ, ನನಗ ಎಲ್ಲಾ ಸುದ್ದೀನೂ ಹೇಳ್ಯಾನ. ಅದು ನನಗೂ ಠಾಂವಿಕ್ಯದ ಅಂತs, ಅಷ್ಟ ಹುಷಾರ್‍ಯಾಗಿದ್ದೆ. ಯಾರ ಮನೀ ದ್ವಾಸಿಗೆ ತೂತ ಇಲ್ಲ ರಾಚಪ್ಪಾ? ಗೊತ್ತ ಆದs ಅಂತs ಬಾಯಿಗೆ ಬಂದ ಹಾಂಗ ಭಕಾಸಿಗೋತ ಆಡ್ಯಾಡಬಾರದು. ಭಕಾಸೂದು ನಾಯೀ ಜಾತಿ. ಮನಸ್ಯಾಗ ಅನ್ನದ ಸ್ಮರಣಾ ಇರಬೇಕಾಗತದ. ರಾಚಪ್ಪಾ, ಕುಲಕರಣೀ ರಂಗಣ್ಣ ಏನರs ಭೆಟ್ಟಿ ಆಗಿದ್ನೇನು ಅಲೀಕಡೆ ನಿನಗ, ನಾಕಾರ ದಿನದಾಗ?"

"ನಾನೂ ಒಂದಿಷ್ಟು ಕೆಲಸ ಇತ್ತಂತ ಹೇಳಿಕಳಿಸಿದ್ದೆ. ಊರಾಗಿಲ್ಲಾ, ಅಂವಾ ಗೌಡರೂ ಕೂಡಿ ಬೆಳಗಾಂವಿಗೆ ಹೋಗ್ಯಾರಂತ ಸುದ್ದಿ ಬಂತು. ಯಾಕ ಪಾಂಡು? ಏನರs ಕೆಲಸ ಇತ್ತೇನು?"
ರಾಚಪ್ಪ ಕೇಳಿದ.

"ಕೆಲಸ ಏನ ಇಲ್ಲನ್ನು. ಆದರ ಏನ ಸುಡತೀ ಬಾರಪಾ. ಒಂದ ಸೂಕ್ಷ್ಮ ಖಾತಮೀ ಇತ್ತು. ಭಟ್ಟನ ಮುಂದ ಹೇಳಿದರ ಇಲ್ಲದ ರಂದೀನs ಮಾಡಾಂವಾ. ನಿನ್ನ ಮುಂದ ಹೇಳದs ಗತಿ ಇಲ್ಲಾ."
ಇಷ್ಟು ಹೇಳಿ, ಪಾಂಡೂ, ಅತ್ತಿತ್ತ ಯಾರ ಸುಳಿವೂ ಇಲ್ಲವೆಂಬುದನ್ನು ತನಿಖಿಸಿ

ಒಂದಿಷ್ಟು ರಾಚಪ್ಪನ ಕಡೆಗೆ ಸರಿದು, ಅವನ ಕಿಂವಿಯಲ್ಲಿ ಏನೋ ಪಿಸುಗುಟ್ಟಿದ. ಅದನ್ನ ಕೇಳಿದವನೇ ರಾಚಪ್ಪ ಕಣ್ಣು ಹಿಗ್ಗಿಸಿ,

"ಖರೇನs ಪಾಂಡೂ?"

ಎಂದು ಅಚ್ಚರಿಗೊಂಡವನಂತೆ ಮುಖಮಾಡಿ ಕೇಳಿದ.

"ನೀ ಅಣ್ಣಾಅವರ ಜಾತಿಯವನs ಆದರೂ, ಬಳ್ಳೊಳ್ಳಿ ಉಳ್ಳಾಗಡ್ಡಿ ಮುಟ್ಟಾಂವಲ್ಲಾ. ಅದರ ವಾಸನೀನs ನಿನಗ ಹೇಸಿಕಿ ತರತsದ. ಎಷ್ಟ ಧೂರ ದಾಗ ಇದ್ದರೂ ಅದರ ವಾಸನಿ ನಿನಗ ಲಟ್ಟನೇ ಬಡೀತದ. ಇನ್ನಾ ಹ್ಯಾಂಗ ಬಡದಿಲ್ಲಾ ಅಂತೀನಿ? ಈಗ ಅದನ್ನ ಗಡಿಗ್ಯಾಗ ಮುಚ್ಚಿಟ್ಟದ. ಒಂದು ಚೂರ ಅದರ ಮುಚ್ಚಳಾ ಅಕಡಿಕಡೆ ಆಗಲಿ. ತೂರಿ ಬರತsದ ಇಲ್ಲೋ ನೋಡತಿರು ನಾತಾ. ರಾಚಪ್ಪಾ, ವಾಡೇಕ್ಕ ಗ್ರಾಣ ಹಿಡೀಲಿಕ್ಕೆ ಹತ್ತಿತು. ಅದರ ತೇಜs ಮಾಯ ಆಗಲಿಕ್ಕೆ ಹತ್ತಿತು. ಗೌಡರಿಗೆ ರಂಗಣ್ಣಗ ಈ ಬಾತಮೀ ಠಾಂವಿಕ್ಯದ. ಅವರು ಊರಾಗಿಲ್ಲಂತ ಅದು ನಿನಗ ತಿಳಿದಿಲ್ಲಾ. ಬಂದಮ್ಯಾಲ ತಾನs ತಿಳೀತದ. ಬರತೀನಪಾ, ಇನಾ ಬಟವಡೇಕ್ಕ ಸುರೂ ಮಾಡಿಲ್ಲಾ. ಕಾಕಾಅವರ ಕಾಗದಾ ಜರೂರೀದು ಇದ್ದಿರಬೇಕಂತ ಮೊದಲ ನಿನ್ನ ಕಡೇನs ಬಂದೆ."

ಎಂದು, ಪಾಂಡೂ ಆರಿದ ಬೀಡಿಯನ್ನು ಮತ್ತೊಂದು ಕಡ್ಡಿ ಗೀಚಿ ಹೊತ್ತಿಸಿ, ಅಂಚೆಯ ಹಸಿಬೆಯನ್ನು ಹೆಗಲಿಗೇರಿಸಿ ಬಟವಡೆಗೆ ಹೊರಟ.

ದೇವಸ್ಥಾನದಲ್ಲಿಯ ತನ್ನ ಕಚೇರೀ ಕೋಣೆಯಲ್ಲಿ ರಾಚಪ್ಪ ಏಕಾಂಗಿಯಾದ. ಅವನ ಕೈಯಲ್ಲಿ, ರಾವಜೀಕಾಕಾ ಅವರಿಂದ ಬಂದ ಕಾಗದದ ಕಟ್ಟು ಇತ್ತು. ಅವನ ಕಣ್ಣು ಆ ಬರವಣಿಗೆಯನ್ನು ಹೀರುತ್ತಿದ್ದವು. ಆದರೆ ಮನಸ್ಸು ಅನ್ಯಲೋಕ ವಿಹಾರಿಯಾಗಿತ್ತು.

ಶ್ಯಾಮರಾಯ ಊರಿಗೆ ಬಂದು ವಾಡೆಯಲ್ಲಿ ಬೈಠಕ ಹಾಕಿದ ದಿನವೇ, ರಾಚಪ್ಪ ತನ್ನ ಕಚೇರಿಯನ್ನು ದೇವಸ್ಥಾನದ ಅಧಿಕೃತ ಕಚೇರೀ ಕೋಣೆಗೆ ಸ್ಥಲಾಂತರಿಸಿದ. ಅದು ಹಾಗೆ ನೋಡಿದರೆ, ದೇವಸ್ಥಾನದಲ್ಲಿಯೇ ಇರಬೇಕಾದದ್ದು. ಆದರೆ ರಾವಜೀಕಾಕಾ, ತಮ್ಮ ಅನುಕೂಲಕ್ಕಾಗಿ, ಅದನ್ನು ವಾಡೆಯಲ್ಲಿ ನಡೆಸುತ್ತಿದ್ದರು. ಈ ಅಧಿಕೃತ ಕಚೇರಿಯ ಬಗ್ಗೆ, ದೇವಸ್ಥಾನದ ಬಗ್ಗೆ ಅಷ್ಟು ವಿವರ ಕಥನ ಅವಶ್ಯಕ. ಅವಧರಿಸಬೇಕು.

ಪಂತರ ವಾಡೇ ಸುತ್ತಲಿನ ಹತ್ತಿಪ್ಪತ್ತು ಹಳ್ಳಿಗಳಲ್ಲಿ "ಮಹಾಪ್ರಸ್ಥ"ವಿರು

ವಂತೆಯೇ, ಈ ಗಣಪತಿದೇವಸ್ಥಾನವೂ ಅದರ ಭವ್ಯತೆ-ದಿವ್ಯತೆಯೂ ಜನಜನಿತ ವಾಗಿದೆ. ಊರ ಮಧ್ಯದಲ್ಲಿ, ಹಮ್‌ಚೌಕು ಒಂದೂ ಒಂದೂವರೇ ಎಕರೆಯ ಭೂಮಿಯನ್ನು ದೇವಸ್ಥಾನದ "ಚಾಯನಾ ಭಿತ್ತಿ" ತೋಳ ತೆಕ್ಕೆಯಲ್ಲಿ ಆವರಿಸಿ ಹಿಡಿದಿದೆ. ಇಲ್ಲಿ ಗುಡಿಯು ಆಕಾರ ಪಡೆದು ಏಳತೊಡಗಿದಂತೆ, ಅದರ ಸುತ್ತು ಮುತ್ತೂ, ಊರು ಕಸೂತಿಯಂತೆ ಹೆಣೆದುಕೊಂಡಿತಂತೆ. ಈ ಜಾಗದಲ್ಲಿ ಬಂದು ನಿಂತಾಗ, ಶ್ರೀಮಂತ ಪೇಶ್ವೇ ಅವರಿಗೆ ಏನೋ ಶುಭಸೂಚನೆಯಾದವಂತೆ. ಅವರು ಅದನ್ನು ನೆಚ್ಚಿ, ತಮಗಾಗಿ ಒಂದು ವಾಡೇ,–ಕುಲದೇವತೆಗಾಗಿ ಈ ದೇವಸ್ಥಾನವನ್ನು ನಿರ್ಮಿಸಿದರು. ತಾವು ಗೆದ್ದು ಪಡೆದ ಭೂಮಿಯನ್ನು ದೇವ ಸ್ಥಾನಕ್ಕೆ, ಅದರ ಮೇಲ್ವಿಚಾರಣೆಗೆ ನಿಯಮಿತರಾದ ಪಂತಕುಟುಂಬೀಯರಿಗೆ ಆಚಂದ್ರಾರ್ಕ ನಡೆಯುವಂತೆ ಅಂದು ದತ್ತಿಬಿಟ್ಟರು. ಇರಲಿ.

ಈ ಭವ್ಯ ದೇವಸ್ಥಾನದ ಮಹಾದ್ವಾರ ಎರಡು ಮಾರು ಅಗಲ, ನಾಕು ನಾಕೂವರೆ ಮಾರು ಉದ್ದವಾಗಿದೆ. ಅಖಂಡ ಶಿಲೆಯನ್ನೇ ಕೊರೆದು ನಿರ್ಮಿಸಿ ದಂತಿದೆ. ಮಹಾದ್ವಾರವನ್ನು ದಾಟಿದ ನಂತರ ವಿಶಾಲವಾದ ಕಲ್ಲಿನ ಚೌಸೊಪ್ಪು. ಮುಖ್ಯ ದೇವಸ್ಥಾನವನ್ನು ಈ ಚೌಸೊಪ್ಪು, ತೋಳು ಬಳಸಿ ಬಾಚಿ ನಿಂತಂತಿದೆ. ಚೌಸೊಪ್ಪಿನ ಕಟ್ಟೆಯಿಂದ ಹತ್ತು ಹದಿನೈದು ಅಡಿ ಮುಂದೆ ಸಾಗಬೇಕು, ಅಂದರೆ ಮುಖ್ಯ ದೇವಸ್ಥಾನದ ಸಂಗಮರವರೀ ಶಿಲಾಸ್ಫಟಿಕದ ಶುಭ್ರ ಕಟ್ಟಡ, ಮೇಘಾಚ್ಛಾ ದನ-ನಿವೃತ್ತಿಯಾದ ನಂತರ ಪಳಚ್ಚೆಂದು ಹೊಳೆಯುವ ಹಿಮಾಂಶುವಿನಂತೆ ಕಣ್ಣ ಎದುರಿಗೇ ಬಂದು, ಆ ಎದೆಯೆತ್ತರದ ಕಟ್ಟೆಯ ಅಂಗೈಯಲ್ಲಿ ಮನೋಹಾರಿ ಯಾಗಿ ವಿರಾಜಿಸುತ್ತದೆ. ಅದರ ರಚನೆ, ಗರಿಗೆದರಿ ಮುಗಿಲಮುಖವಾಗಿ ಉಡ್ಡಾಣ-ಸನ್ನಾಹದಲ್ಲಿದ್ದ ಗರುಡಪಕ್ಷಿಯಂತಿದೆ. ಮುಖ್ಯ ದೇವಸ್ಥಾನದ ಕಟ್ಟಡ ಗರುಡಮುಖವಾದರೆ, ಅದರ ಒಂದು ಪಾರ್ಶ್ವದಲ್ಲಿಯ ಕಚೇರಿ-ಕೋಣೆಗಳು, ರೆಕಾರ್ಡು-ರೂಮುಗಳು – ಇನ್ನೊಂದು ಬದಿಯ ಅತಿಥಿ-ಅಭ್ಯಾಗತರಿಗೆ ನಿರ್ಮಿತ ವಾದ ವಾಸಮಂದಿರಗಳು, ಗರುಡನ ಗರಿಗೆದರಿದ ಪಕ್ಕದಂತಿವೆ. ಮುಖ್ಯ ದೇವಸ್ಥಾನದಲ್ಲಿಯ ಗರ್ಭಗುಡಿ ೧೫×೧೫ ಫೂಟಿದ್ದು ಹಮ್‌ಚೌಕಾಗಿ, ಅಚ್ಚ ಕೃಷ್ಣಶಿಲೆಯಲ್ಲಿ ನಿರ್ಮಿತವಾಗಿದೆ. ಕಮಲಪೀಠದ ಮೇಲೆ ಮಂಡಿತನಾದ ಮಹಾ ವಿನಾಯಕ ಇದೇ ಈಗ ಎದ್ದು ಬರುವ ಸನ್ನಾಹದಲ್ಲಿರುವನೋ ಏನೋ ಎನ್ನು ವಷ್ಟು ಉಗ್ರಭಯಂಕರನಾಗಿದ್ದಾನೆ. ಅಲ್ಲಿ ಅಸರಂತ – ಅಹೋರಾತ್ರಿ ಋಗ

ಝಗಿಸುವ ಲಕಲಕಿಸುವ ಎದೆಯೆತ್ತರದಳತೆಯ ಜೋಡು ಸಮೆಯ ನಂದಾದೀಪ, ಅವನ ಉಗ್ರತೆಯನ್ನು ಎತ್ತಿ ತೋರಿಸಲು ಬೆಳಗುತ್ತಿರುವದಕ್ಕೇ ನಿರ್ಮಾಣ ವಾಗಿರಬೇಕು. ಈ ಉಗ್ರಭಯಾನಕ ವಿಘ್ನಹರ್ತಾರನನ್ನು ಕಂಡಾಗ, ಭಕ್ತಿಗಿಂತ ಭೀತಿಯಿಂದಲೇ ನೋಡುವವರು ನತಶಿರರಾಗುತ್ತಾರೆ. ಬಹಳ ಹೊತ್ತು ನೋಡು ವದಕ್ಕೂ ಕೂಡ ಆಗುವದಿಲ್ಲ.

ದೇವಸ್ಥಾನದ ಹಿಂಬದಿಗೆ ಮತ್ತೆ ಪೌಳಿ; ಸ್ವಯಂಪಾಕದ ಮನೆ, ಉಗ್ರಾಣ, ನೀರಿನಮನೆ ಒಂದು ಬದಿಗಿದ್ದರೆ, ಇನ್ನೊಂದು ಬದಿಗೆ, ಅಡುಗೆ-ನೀರಿನವರ, ತೋಟದ ಮಾಳಿಗಳ, ಇತರ ತೈನಾತಿಗಳ ನಿವಾಸಗಳಿವೆ. ಮುಖ್ಯ ದೇವಸ್ಥಾನ, ಈ ಕಟ್ಟಡಗಳು ಅರ್ಧಜಾಗವನ್ನು ಆಕ್ರಮಿಸಿದ್ದರೆ, ಉಳಿದರ್ಧ ಜಾಗವನ್ನು ತೋಟ, ದೇವರ ಭಾಂವಿ ಆಕ್ರಮಿಸಿವೆ. ನಿತ್ಯನೇಮದಿಂದ ದೇವರಪೂಜೆಗೆ ಬೇಕಾಗುವಷ್ಟು, ಸಾಕಾಗಿ ಉಳಿಯುವಷ್ಟು ಹೂ-ಪತ್ರಿ ಕೊಡುವ ತೋಟ, ವರ್ಷದ ಸರ್ವಕಾಲ ಹಚ್ಚು-ಹಸಿರು ಮುರಿಯುತ್ತಿರುತ್ತದೆ. ಭಾವಿಯಲ್ಲಿ ಕೆಂದಾವ ರೆಯ ಬಳ್ಳಿ ದಾಂಗುಡಿ ಬಿಟ್ಟು ಅವಾಢವ್ಯವಾಗಿ ಹರಡಿಕೊಂಡಿದೆ. ಭಾವಿಯಲ್ಲಿ ಮೊಟ್ಟೆಯಾಡುತ್ತಿದೆ. ಆದರೆ ಯಾರಿಗೂ ಈಸಲಿಕ್ಕೆ ಅನುಮತಿ ಮಾತ್ರ ಇಲ್ಲ. ಕೊಡ ತುಂಬಿ ತಂದು. ಭಾವಿಯ ಕಟ್ಟೆಯ ಮೇಲೆ, ಹೊರಗೇ ಸ್ನಾನ ಮುಗಿಸ ಬೇಕು.

ಗುಡಿಯಲ್ಲಿ ವಾಸವಾದ ಅಡಿಗೆಯ-ನೀರಿನ ಇತರ ತೈನಾತಿಗಳ ಕುಟುಂಬ ಇಂದೇ ಬಂದು ಇಲ್ಲಿ ಸೇರಿಲ್ಲ. ಪಂತಕುಟುಂಬ ಇಲ್ಲಿಗೆ ಬಂದು ನೆಲಸಿ ನಿಂತಾಗಲೇ ಅವರೂ ಸೇವೆಗೆಂದು ನಿರ್ಮಿತರಾಗಿ ಬಂದಿದ್ದಾರೆ. ಅಡಿಗೆ-ನೀರಿನವರು ವಾಯೀ ಕರ ಭಡಜೀಮಂಡಳಿ ಅವರಿಗೆ ಮಾಸಾಶನದ ಕೂಡ, ಕಾಯಂ ಉತ್ಪನ್ನದ ಜಮೀನು-ಜುಮ್ಲಾ, ಇನಾಮೀ ಭೂಮಿಗಳಿವೆ. ದೇವಸ್ಥಾನದಲ್ಲಿ ನಿತ್ಯ ಪಂಚ ಪಕ್ವಾನ್ನದ ದೇವರ ನೈವೇದ್ಯದ ಅಡಿಗೆ ತಪ್ಪಿದ್ದಲ್ಲ. ವಕ್ರತುಂಡನ ಮಹಾನೈವೇದ್ಯ ಪ್ರತಿನಿತ್ಯ ದೇವಸ್ಥಾನದ ಸ್ವಯಂಪಾಕಗೃಹದಲ್ಲಿಯೇ ಆಗಬೇಕು. ರಾವಜೀಕಾಕಾ ಅವರ ವಾಡೆಯಿಂದ, ಗೋವಿಂದಭಟ್ಟ, ಬೆಳ್ಳಿಯ ತಾಟಿನಲ್ಲಿ ತರುತ್ತಿದ್ದ ಮೋದಕದ ನೈವೇದ್ಯಕ್ಕೆ ವಿನಾಯಕನಲ್ಲಿ 'ಸೆಕೆಂಡ್ ಪ್ರಿಫರೆನ್ಸ್'. ಶ್ರೀಮಂತರು ವಿನಾಯಕನ ಪೂಜೆ-ನೈವೇದ್ಯಕ್ಕೆ ದತ್ತಿಬಿಟ್ಟ ಉತ್ಪನ್ನದಿಂದಲೇ, ನಿತ್ಯ ಅವರ ಹೆಸರಿನಲ್ಲಿಯೇ ಮಹಾನೈವೇದ್ಯ ಅವನಿಗೆ ಅರ್ಪಿತವಾಗಬೇಕು. ಇಲ್ಲಿ ಮಹಾನೈವೇದ್ಯ ತೋರಿಸಿದ

ನಂತರ, ಅದರಲ್ಲಿಯ ಒಂದಿಷ್ಟು ಭಾಗ ವಾಡೆಗೆ ಪ್ರಸಾದವೆಂದು ಹೋಗುತ್ತದೆ. ಉಳಿದ ಪ್ರಸಾದ ಭುಂಜನಕ್ಕೆ, ಪೂಜೆಯಲ್ಲಿ ಗೋವಿಂದಭಟ್ಟನಿಗೆ ನೆರವಾಗಲೆಂದು ನಿಯಮಿತನಾದ ತಪಕೀರ ಗುರುಭಟ್ಟ, ಅಡುಗೆ-ನೀರಿನ ವಾಯೀಕರ ಮಂಡಳಿ ಇರುತ್ತಾರೆ. ಗೋವಿಂದಭಟ್ಟನಿಗೆ, ಕಾಕಾಅವರ ಸಹಪಂಕ್ತಿಯಲ್ಲಿ ಉಪವಿಷ್ಟವಾಗಿರಬೇಕಾದ ಪ್ರಯುಕ್ತ ಅವನು ಇಲ್ಲಿಯ ಭೋಜನದಲ್ಲಿ ಸಹಭಾಗಿಯಾಗುವದಿಲ್ಲ.

ಮಹಾಮಂಗಳಾರತಿ-ನೈವೇದ್ಯದ ಹೊತ್ತಿಗೆ ಪಂತಮಂಡಳಿ ಬರಲೇಬೇಕು. ರಾವಜೀಕಾಕಾ ಸ್ನಾನ ಮುಗಿಸಿ, ಶುಭ್ರವಸನಧಾರಿಯಾಗಿ ರೇಶಿಮೆಯಂಚಿನ ಉಪರಣೆಯನ್ನು ಹೊದ್ದು, ವಿಶಾಲಫಾಲದಲ್ಲಿ ಗೀರುಚಂದನದ ರೇಖೆ ತೀಡಿಕೊಂಡು, ರಜತಸ್ಥಾಲೀಹಸ್ತರಾಗಿ ಬಂದು, ನೂರು ಪ್ರದಕ್ಷಿಣೆ ಮುಗಿಸಿದ ನಂತರ ಅಖಂಡ ಘಂಟಾನಾದದಲ್ಲಿ, ನಗಾರಿ-ನೌಬತ್ತಿನ ಮಂಗಳ-ನಿನಾದದಲ್ಲಿ, ಗೋವಿಂದಭಟ್ಟ, ಬೆಳ್ಳಿಯ ದೊಡ್ಡ ತಾಟಿನಲ್ಲಿ ಪಂಚಾರತಿ ಇಟ್ಟು ಮಂಗಳಾರತಿಗೆ ಮೊದಲು ಮಾಡುತ್ತಾನೆ. ತಪಕೀರ ಗುರುಭಟ್ಟ ಪಂಛೇರು ಭಾರದ ಘಂಟೆಯನ್ನು ಎತ್ತಿ ಬಾರಿಸುತ್ತಾನೆ.

ಸುಖಕರ್ತಾ ದುಖಹರ್ತಾ ವಾರ್ತಾ ವಿಘ್ನಾಚೀ ।
ನಿರವೀ ಪುರವೀ ಪ್ರೇಮ ಕೃಪ ದಯಾಂಚೀ ॥

ಗದಗಮಿಸತೊಡಗುತ್ತದೆ. ಮಂತ್ರಪುಷ್ಪವಾಗಿ, ತೀರ್ಥ-ಪ್ರಸಾದದ ವಿನಿಯೋಗವಾಗುತ್ತದೆ. ಗುಡಿಯಲ್ಲಿ ಆಗ ನೂರಿನ್ನೂರು ಜನರು ನೆರೆದಿರುತ್ತಾರೆ. ಅಂದು ಗುಡಿಯಲ್ಲಿ ಅತಿಥಿ-ಅಭ್ಯಾಗತ-ಪಾಂಥಸ್ತರಿದ್ದರೆ, ಕಾಕಾ, ಅವರಿಗೆ ಗುಡಿಯಲ್ಲಿಯೇ ಪ್ರಸಾದವಾಗಬೇಕೆಂದು ವಿನಮ್ರವಾಗಿ ಬಿನ್ನವಿಸುತ್ತಾರೆ.

ಸಂಜೆಯ ಮಂಗಳಾರತಿಯದೂ ಅಷ್ಟೇ. ಕಾಕಾ ಬರಲೇಬೇಕು. ಅವರ ಕುಟುಂಬದಲ್ಲಿಯ ಸರ್ವಮಂಡಳಿಯೂ ಬರಲೇಬೇಕು. ತಮ್ಮಾಜಿಗೂ ಈ ಶಿಕ್ಷೆ ತಪ್ಪಿದ್ದಲ್ಲ.

ಈಗ ಕಾಕಾ ಊರಲ್ಲಿಲ್ಲ. ಅವರ ಪಂತ-ಸಚಿವ – ದೇವಸ್ಥಾನದ ಆಸ್ತಿಯ ಮೇಲ್ವಿಚಾರಣೆಗೆ ನಿಯಮಿತನಾದ ರಾಚಪ್ಪ – ಕಾಕಾಅವರನ್ನು ಪ್ರತಿನಿಧಿಸುತ್ತಾನೆ.

ಶ್ಯಾಮರಾಯ ಕಾಕಾ ಅವರ ಖಾಸ್‌ಕುಮಾರನಾದರೂ ಅವನಿಗೆ ಈ ಪ್ರಾತಿನಿಧ್ಯದ ಪ್ರತಿಷ್ಠೆ ಇಲ್ಲ.

ರಾಚಪ್ಪ ಮಂಗಳಾರತಿಯ ಹೊತ್ತಿಗೆ, ಸ್ನಾನಮಾಡಿ, ಮಡಿಯಾಗಿ, ವಿಭೂತಿ ಫಾಲನಾಗಿ ಬಂದೇ ತೀರುತ್ತಾನೆ. ಕಾಕಾ, ಹಾಗೆ ನೋಡಿದರೆ ಅಷ್ಟು ಕಡಕ್ ಅಲ್ಲ. ಚಹಾ-ತಂಬಾಕದ ಬಾರು ಇಲ್ಲದೆ ಅವರಿಗೆ ನಡೆಯುತ್ತಿರಲಿಲ್ಲ. ಪೂಜೆ-ಮಂಗಳಾರತಿಯ ಮುಂಚೆ, ಅವರು ಎರಡು ಸಲ ಚಹಾ, ಹತ್ತು ಸಲ ತಂಬಾಕದ ಬಾರು ಮುಗಿಸಿರುತ್ತಿದ್ದರು. ಆದರೆ ರಾಚಪ್ಪ, ಹೊತ್ತು ಹೊರಡುವಷ್ಟರಲ್ಲಿ ಒಮ್ಮೆ ಸ್ನಾನ ಮುಗಿಸಿ, ಶಿವಪೂಜೆಯನ್ನು ಬಗೆಹರಿಸಿ, ಅನಶನ ಹೊಟ್ಟೆಯಿಂದಲೇ ದೇವಸ್ಥಾನದ ಕಚೇರೀ ಕೋಣೆಗೆ ಬಂದು ಕೆಲಸದಲ್ಲಿ ತೊಡಗುತ್ತಾನೆ. ಗೋವಿಂದಭಟ್ಟ ಮಹಾಮಂಗಳಾರತಿಯ ತಯಾರಿಯಾದ ವರದಿ ಕಳಿಸುತ್ತಲೇ, ದೇವರ ಭಾವಿಗಿಳಿದು ಕೊಡ – ಎರಡು ಕೊಡ ನೀರು ತಂದು, ಮತ್ತೊಮ್ಮೆ ಸ್ನಾತನಾಗಿ – ಮಡಿಯಾಗಿ ಮಂಗಳಾರತಿಗೆ ಬರುತ್ತಾನೆ. ಅದು ಮುಗಿದ ನಂತರ ಮನೆಗೆ ಹೋಗಿ ಮೊದಲ ತುತ್ತು ಇಡುತ್ತಾನೆ. ಕಾಕಾ, ಸಂಜೆಯ ಮಂಗಳಾರತಿಯ ಹೊತ್ತಿಗೆ ಬರೇ ವಸ್ತ್ರಾಂತರಾಗಿ. ಪೀತ ಇಲ್ಲವೇ ಜಾಂಬಳಿಯ ರೇಶಿಮೆಯ ಮಡಿಯಲ್ಲಿ ಗುಡಿಗೆ ಬರುತ್ತಿದ್ದರು. ರಾಚಪ್ಪ, ಸಂಜೆಯಾದರೂ ಸರಿ. ಸರಿರಾತ್ರಿಯಾದರೂ ಸರಿ, ಸ್ನಾನವಿಲ್ಲದೆ, ದೇವರ ಗರ್ಭಾಂಕದ ಬಳಿಗೆ ಸುಳಿಯುವದಿಲ್ಲ.

ಕೈಕಾಲು, ಮೋರೆಗಿಷ್ಟು ಜಲಸಿಂಚನ ಮಾಡಿಕೊಂಡು, ವಿಭೂತಿಧಾರಣೆ ಮಾಡಿ, ಮಡಿಯಾದ ಅಭಿನಿವೇಶದಿಂದ ಬೆಳಗುಹರಿಯುವದರಲ್ಲಿ ನ್ಯಾರಿಯ ತಾಬಂಡಿಯನ್ನು ಮುಂದಿಟ್ಟುಕೊಂಡು ಕೂಡುವ ರಾಚಪ್ಪನ ಸ್ವಜಾತಿಬಾಂಧವರು.

"ಹಾರೂಟ್ಯಾರ ಅನ್ನಾ ಉಣತಾನs. ಅವರ ಮಾಡಿಧಾಂಗs ಮಾಡಾಕ ಬೇಕಲಾ."

ಎಂದು ರಾಚಪ್ಪನನ್ನು ಟೀಕಿಸುತ್ತಾರೆ. ಆದರೆ ಚರಂತಿಮಠದ ಅಯ್ಯನವರು ಮಾತ್ರ, ರಾಚಪ್ಪನ ನಿಷ್ಠೆ-ವ್ರತವನ್ನು ಮನವಾರೆ ಮೆಚ್ಚಿಕೊಂಡು –

"ರಾಚೋಟೀ ಶಿವಗಣದ ಪೈಕೀ. ಇಲ್ಲೀ ಮನಸ್ಯಾ ಅಲ್ಲಾ. ಎಲ್ಲಾರಿಗೂ ಅಂಥಾ ಪುಣ್ಯಾ ಬರೂದಿಲ್ಲಾ. ಅದು ಮ್ಯಾಲಿನ ಅವಂದs ಪ್ರಸಾದಾ."

ಎಂದು ಅಸರಂತ ಹಾಡುತ್ತಾರೆ.

ರಾಚಪ್ಪ ದೇವಸ್ಥಾನದ ಆಸ್ತಿಯ ಅದರ ದೇಖರಖಿಯ ಅಧಿಕೃತ ಕರಣಿಕ.

ಈ ಮುಂಚೆ ಗದಿಗೆಯ್ಯನವರ ಅಣ್ಣ, ಅದಕ್ಕೂ ಮೊದಲು ಅವರ ತಂದೆ – ಅವರ ಅಜ್ಜ ಈ ಕರಣಿಕ ಸ್ಥಾನದಲ್ಲಿ ವಿರಾಜಮಾನರಾಗಿದ್ದರು. ಗದಿಗೆಯ್ಯನವರ ಅಣ್ಣ, ಲಕ್ಷ್ಮಣರಾವಜೀ – ರಾವಜೀಕಾಕಾ ಅವರ ಸಚಿವಸ್ಥಾನದಲ್ಲಿದ್ದಾಗಲೇ ಒಂದು ದಿನ ಶಿವಸದನಕ್ಕೆ ಬಿಜಯಿಸಿದರು. ಗದಿಗೆಯ್ಯನವರು, ಲೋ. ಬೋ. ಖಾತೆಯಲ್ಲಿ ಶಿಕ್ಷಣದಾನರತರಾಗಿದ್ದರು. ಆ ಹೊತ್ತಿಗೆ ರಾಚಪ್ಪ ಕೈಗೆ ಬಂದ ಮಗನಾಗಿದ್ದ. ರಾಧಾಕಾಕೂ ಅವನನ್ನು ವಿಷಮಶೀತಜ್ವರದ ಯಮ-ದವಡೆಯಿಂದ ಬಿಡಿಸಿದ ಪುಣ್ಯಾತಗಿತ್ತಿಯಾಗಿದ್ದರು. ಗದಿಗೆಯ್ಯನವರು ಜೀವದಾನೀ ತಾಯಿಗೆ, ಹೊಟ್ಟೆಯ ಮಗನನ್ನು ದತ್ತಕಮಾಡಿದಂತೆ ಮಾಡಿದರು.

"ಶ್ಯಾಮ ಸುಳ್ಳಾ, ರಾಚೋಟೀನs ಖರೇ ನನ್ನ ಕರಳಿನ ಕುಡೀ"

ಎಂದು ರಾಧಾಕಾಕೂ ನಿತ್ಯ ಹಾಡುತ್ತಿದ್ದರು. ರಾಚಪ್ಪ ಪಂತಜೀವನದ ಹಾಲಿನಲ್ಲಿ ಸಕ್ಕರೆಯಂತೆ ಬೆರೆತಿದ್ದ. ರಾಚಪ್ಪ ಬರೇ ಕರಣಿಕಪೀಠದಲ್ಲಿ ಮಂಡಿಸಲಿಲ್ಲ. ಕಾಕಾ ಅವರ ಹೃದಯಪೀಠದಲ್ಲೂ ಮಂಡಿತನಾದ. ಅವರ ಪರಮ ವಿಶ್ವಾಸಿ, ಕ್ಷೇಮಚಿಂತಕ, ಕ್ಷೇಮರಕ್ಷಕನಾಗಿ ನಿಂತ.

ಕರಣಿಕ-ಕಾರ್ಯಕಕ್ಕೆ ಪ್ರತಿಫಲವಾಗಿ, ರಾಚಪ್ಪನಿಗೆ ದೇವಸ್ಥಾನದ ಆಸ್ತಿಯಿಂದ ಸಂಬಳ ದೊರಕುತ್ತಿದೆ. ಕಾಕಾ ಅವರ ಸ್ವಂತ ಆಸ್ತಿಯ ದೇಖರಖಿಯೂ ಅವನದೇ. ಇದರ ಬಗ್ಗೆ ಕಾಕಾ ಸಂಬಳ ಕೊಡುವದಿಲ್ಲ. ನನಗೆ ಗೊತ್ತಿರುವಂತೆ, ದಸರೆಯ ದಿನ, ಸಂಕ್ರಾಂತಿಯ ದಿನ, ರಾಚಪ್ಪ ಅವನ ಹೆಂಡತಿ ಜೊತೆಯಾಗಿ ವಾಡೆಗೆ ಬನ್ನಿ-ಬಂಗಾರ, ಎಳ್ಳು-ಬೆಲ್ಲ ಕೊಡಲು ಹೋಗುತ್ತಿದ್ದರು. ಅವರು ಬಂದೊಡನೆ, ರಾಧಾಕಾಕೂ, ರಾಚಪ್ಪನ ಹೆಂಡತಿಯನ್ನು ಕರೆದುಕೊಂಡು ಹೋಗಿ, ಅಡುಗೆಯಮನೆಯಲ್ಲಿ ಮಣೆ ಹಾಕಿ ಕೂಡಿಸಿ, ಕೈಯಾರೆ ಅರಿಷಿಣ-ಕುಂಕುಮದ ಮಂಗಲತಿಲಕ ವಿಟ್ಟು, ಅಕ್ಕಿ-ಶ್ರೀಫಲದ ಉಡಿ ತುಂಬುತ್ತಿದ್ದರು. ಉಡಿ ತುಂಬಿದ ಬೊಗಸೆ ಅಕ್ಷತೆಯ ಗರ್ಭದಲ್ಲಿ, ಹತ್ತು-ಹನ್ನೆರಡು ತೊಲೆಯ ಚಿನ್ನದ ನಾಜೂಕು ಆಭರಣ ವಿರುತ್ತಿತ್ತು. ಅವಳಿಗೆ ಟೋಪುಸೆರಗಿನ ಶೀರೆ, ರೇಶಿಮೆಯ ಖಣದ ಆಹೇರಿ ಸಂಪಾಯವಾಗುತ್ತಿತ್ತು. ಉಡಿ ತುಂಬಿಸಿಕೊಂಡು ಬಂದು, ಡಬಡಬಿಸುವ ಕಣ್ಣೀರಿಂದ, ಕಾಕಾ ಅವರಿಗೆ ರಾಚಪ್ಪನ ಹೆಂಡತಿ, ಕಾಲುಮುಟ್ಟಿ ಆಶೀರ್ವಾದ ಬೇಡಿದಾಗ, ಕಾಕಾ, ಶೆಲ್ಲೆಯ ಚುಂಗಿನಿಂದ ಕಂಬನಿ ಒರಿಸಿಕೊಂಡು, ಮಗಳ ತಲೆಯನ್ನು ನೇವರಿಸಿದಂತೆ, ಅವಳಿಗೆ ಅಖಂಡಸೌಭಾಗ್ಯದ ವಾತ್ಸಲ್ಯಹಸ್ತ ನೇವರಿಸಿ

ಆಶೀರ್ವದಿಸುತ್ತಿದ್ದರು. ಕಾಕಾ ಅವರ ಈ ನಿರ್ಮಲ ವಾತ್ಸಲ್ಯ ಅಷ್ಟೇ ರಾಚಪ್ಪನಿಗೆ ಸಾಕಾಗಿರುತ್ತದೆ. ಅವನು —

"ಕಾಕಾ, ಮತ್ತ ಋಣಾ ತೀರಸಥಾಂಗ ಮಾಡಿದಿರಿ."

ಎಂದು ಬಿಕ್ಕಳಿಸಿ ಗದ್ಗದಿತನಾಗುತ್ತಾನೆ. ಕಾಕಾ, ಪುತ್ರವಾತ್ಸಲ್ಯದಿಂದ, ಎದೆ ದುಂಬಿ ಬಂದು ರಾಚಪ್ಪನ ಬೆನ್ನು ಸವರುತ್ತಾರೆ. ಅವರ ಮೌನದಲ್ಲಿ ಈ ಪ್ರೀತಿ-ವಾತ್ಸಲ್ಯ-ತೀರ್ಥಕ್ಕೆ ಮಹಾಪೂರ ಬಂದಿರುತ್ತದೆ.

ರಾಧಾಕಾಕೂನ ನಿರ್ವಾಣದ ನಂತರ ಕಾಕಾ ವಾಡೇ ಬಿಟ್ಟರು. ಅಲ್ಲಿಯ ತನಕ ದಸರೆಯ, ಸಂಕ್ರಾಂತಿಯ ಈ ಉಡುಗೊರೆ ಎಂದೂ ತಪ್ಪಲಿಲ್ಲ. ಅಂಥ ಭಾಗ್ಯಕ್ಷಣವನ್ನು ಕಂಡು ನನ್ನ ಕಣ್ಣು ಪಾರಣೆಯಾಗಿದೆ.

ಈಗ ದಸರೆಯ ಬನ್ನಿ-ಬಂಗಾರ, ಸಂಕ್ರಾಂತಿಯ ಎಳ್ಳು-ಬೆಲ್ಲ, ಕಾಕಾ ಅವರಿಗೆ ಟಪಾಲಿನ ಮೂಲಕ ರವಾನೆಯಾಗುತ್ತವೆ. ರಾಚಪ್ಪ ಅದನ್ನು ಎಂದೂ ತಪ್ಪಿಸುವದಿಲ್ಲ. ರಾಚಪ್ಪ ಪುಣೆಗೆ ಹೋದಾಗ ಅವನಿಗೆ ಹಬ್ಬದ ಆಹೇರಿ ಸೋನಕ್ಕನ ಮಂಗಳಹಸ್ತದಿಂದ ನಿವೇದಿತವಾಗುತ್ತದೆ. ಕಾಕಾ ಪದ್ಧತಿಯಲ್ಲಿ ಎಂದೂ ಹೈಗೈ ಆಗಗೊಡುವದಿಲ್ಲ.

ಆದರೆ ಕಾಕಾ ರಾಚಪ್ಪನ ಬಗ್ಗೆ ಏನೋ ಕಾಯಂತರೀಕ ವ್ಯವಸ್ಥೆಯನ್ನು ಮಾಡಿದ್ದಾರೆಂದು ಹಾರಿಕೆಯ ವದಂತಿ! ಅದು ರಾಚಪ್ಪನಿಗೂ ಗೊತ್ತಿಲ್ಲ. ಕಾಕಾನ ವಿನಾ ಅನ್ಯ ಯಾರಿಗೂ ಗೊತ್ತಿಲ್ಲ. ಕಾಕಾ ಅವರ ಆಸ್ತಿ ವಿಲೇವಾಟದ ಕಾಗದ-ಪತ್ರದಲ್ಲಿ ಅದು ನಮೂದಿತವಾಗಿ, ಬೆಳಗಾಂವಿಯ ನಾಯಕ ವಕೀಲರ ತಿಜೋರಿಯಲ್ಲಿ ಬಂಧಿಸ್ಥ-ಪಾಕೀಟಿನಲ್ಲಿ ಶಾಬೂತಾಗಿ ಇದೆ. ಅದರ ಅಂತ ಸದ್ಯಕ್ಕಂತೂ ಯಾರಿಗೂ ಹತ್ತುವಂತಿಲ್ಲ.

ಶ್ಯಾಮರಾಯ ಊರಿಗೆ ಬಂದು ವಾಡೆಯಲ್ಲಿ ಅನಧಿಕೃತವಾಗಿ ಠಾಣೆ ಹಾಕಿದ. ಇಲ್ಲದ ರಸಕಸಿಗೆ ಆಸ್ಪದ ಬೇಡವೆಂದು ರಾಚಪ್ಪ ತನ್ನ ಕಚೇರಿಯನ್ನು ದೇವಸ್ಥಾನಕ್ಕೆ ಬದಲಿಸಿದ.

ಗುಡಿಯಲ್ಲಿಯ ಈ ಕಚೇರಿಯೂ ಕೂಡ, 'ಮಿನಿಯೇಚರ್' ಪೇಶ್ವಾಯೀ ದರ್ಬಾರೇ ಸರಿ. ೩೦ × ೩೦ ಫೂಟು ಅಡ್ಡಗಲದ ದೊಡ್ಡ ಹಾಲ್. ಅದಕ್ಕೆ ಹೊಂದಿ ೧೨×೧೬ರ ಎರಡು ಕೋಣೆಗಳು. ಕಾಗದ-ಪತ್ರಗಳನ್ನು ಇಡಲು ಎರಡು ಜಡ ಭಾರವಾದ ಆಳೆತ್ತರದ ಕಟ್ಟಿಗೆಯ ಕಪಾಟು. ಕೋಣೆಯಲ್ಲಿ, ಹಾಲಿನಲ್ಲಿ ಇಂಚು

ದಪ್ಪವಾದ ಹರಿದ್ವರ್ಣದ ಜಮಖಾನೆ, ಲೋಡು, ಗಾದಿ. ಗೋಡೆಗೆ ಹಸಿರು-ಬಿಳೀ ಬಣ್ಣದ ಎಣ್ಣೆಬಣ್ಣ. ಹಾಲಿನಲ್ಲಿಯ ಗೋಡೆಗೆ ೪-೫ ಫೂಟು ಎತ್ತರವಾದ ಕರಿ ಕಟ್ಟಿಗೆಯ ದಪ್ಪ ಚೌಕಟ್ಟಿನಲ್ಲಿ ಕೂಡಿಸಿದ ವಕ್ರತುಂಡಮಹಾಕಾಯನ ಭವ್ಯ ಭೀತಿಪ್ರದ ತೈಲಚಿತ್ರ. ಈ ವಾತಾವರಣದಲ್ಲಿ ಒಮ್ಮೆ ಸುಳಿದು ಬಂದರೆ ಸಾಕು, ನಮಗೆ, ಇನ್ನೂರು ವರುಷದ ಹಿಂದಿನ ಯಾವುದೋ ಒಂದು ರಾಜಹರ್ಮ್ಯದಲ್ಲಿ – ಮಹಾದೇವಸ್ಥಾನದಲ್ಲಿ – ಸುಳಿದು ಬಂದ ಭಾಸವಾಗುತ್ತದೆ. ಕಾಕಾ, ಈ ಭವ್ಯತೆ ದಿವ್ಯತೆ ಮಸಕಾಗದಂತೆ ಅತೀವ ದಕ್ಷತೆ ವಹಿಸುತ್ತಾರೆ. ಅವರು ಇಂದು ಇಲ್ಲಿ ಇಲ್ಲ, ಅದು ನಿಜ. ಆದರೆ ಅವರು ಹಾಕಿಟ್ಟ, – ನಡೆಸಿಕೊಂಡು ಬಂದ ಪರಂಪರೆ ಅಚ್ಚಳಿಯದೆ ಮುಕ್ಕಾಗದೆ ನಡೆದುಬಂದಿದೆ.

ರಾಜಪ್ಪನ ಕಚೇರಿಕೋಣೆಯ ಬದಿಗೇ ಇದ್ದ ಇನ್ನೊಂದು ಕೋಣೆಯ ಮೂಲೆಯಲ್ಲಿ ನೆಲಸಮವಾಗಿ ಕೂಡಿಸಿದ ಕಟ್ಟಿಗೆಯ ಚೌಕಟ್ಟಿನಲ್ಲಿ ೩×೩ ಅಡ್ಡಗಲ ಅಳತೆಯ, ಕೋಣೆಯ ನೆಲಮನೆಗೆ ಇಳಿಯುವ ಜಿನ್ನೆಯ ಬಾಗಿಲು. ಆ ಬಾಗಿಲಿಗೆ ಅಲೀಗಡದ – ಪಂಭೇರು ಭಾರದ ಭದ್ರ ಕೀಲಿ. ನೆಲಮನೆಯ ಆರಂಕಣದ ಜಾಗವನ್ನು ಆಕ್ರಮಿಸಿ ನಿಂತ ನಾಕು ತಿಜೋರಿಗಳಲ್ಲಿ, ಗಜಾನನಮಹಾಶಯನ, ಸ್ವರ್ಣ-ಮುತ್ತು-ರತ್ನಗಳ, ವಸ್ತ್ರ-ಆಭರಣಗಳಿವೆ. ಭಾರೀ ಬೆಲೆಯ ಪೀತಾಂಬರಗಳಿವೆ. ಅಭಿಷೇಕ-ಅರ್ಚನೆಯ ರಜತ–ಸ್ವರ್ಣದ ಉಪಕರಣಗಳಿವೆ. ಗಣೇಶಚತುರ್ಥಿಯಲ್ಲಿ ಅಥವಾ ಪಂತರ ಮನೆಯಲ್ಲಿ ಏನಾದರೂ ಮಂಗಲಕಾರ್ಯ ನಡೆಯುವ ಸಮಯದಲ್ಲಿ, ಈ ಎಲ್ಲ ವಸ್ತು-ವಸ್ತ್ರ-ಆಭರಣ ಉಪಕರಣಗಳಿಗೆ ಪ್ರಕಾಶದ ಪರಿಚಯವಾಗುತ್ತದೆ. ವರುಷದಲ್ಲಿ ಹತ್ತೆಂಟು ದಿನ ಅವು ಉಸಿರಾಡಿಸಿ ಉಳಿದ ೩೫೦ ದಿನ ಅವು ಮತ್ತೆ ಕುಂಭಕರ್ಣನಿದ್ರೆಯಲ್ಲಿ ಈ ನೆಲಮನೆಯಲ್ಲಿ ಉಸಿರುಗಟ್ಟುತ್ತವೆ. ಈ ವೈಭವರಕ್ಷಣೆಗೆ ಕಚೇರಿಯ ಬಾಗಿಲಲ್ಲಿ ಇಬ್ಬರು ಮುಚ್ಚು-ಗತ್ತಿಯ ಶೀಖರು, ಮಹಾದ್ವಾರದ ಬಾಗಿಲಲ್ಲಿ, ಬಂದೂಕಧಾರೀ ಖುದಾ-ಈ-ಖಿದಮತಗಾರ ಪಠಾಣರು. ಆಳಿ-ಪಾಳಿಯಿಂದ ಅಹೋರಾತ್ರಿ ಗಸ್ತಿ ಇರುತ್ತಾರೆ. ಅವರೂ ತಲೆತಲಾಂತರದಿಂದ ದೇವಸ್ಥಾನದ ಊಳಿಗಕ್ಕೆ ಸೇರಿದವರೇ.

ಈ ವೈಭವಸಂಪತ್ತು, ಶ್ರೀಮಂತ ಪೇಶ್ವೇ ಅವರಿಂದ ದತ್ತಿಯಾಗಿ ಗುಡಿಗೆ ಬಂದಿದೆ. ಗುಡಿಯ ಮೇಲ್ವಿಚಾರಣೆ, ಅದರ ನಿಗಾ, ಈ ಸಂಪತ್ತಿನ ರಕ್ಷಣೆಯ

ಭಾರ ಪಂತಕುಟುಂಬದ ಮೇಲಿದೆ. ಪಂತರು ಜೀವ ಕೊಟ್ಟಾರು. ಆದರೆ ಈ ಸಂಪತ್ತಿಗೆ ಕೈಹಚ್ಚಲಿಕ್ಕಿಲ್ಲ. ಅನ್ಯರಿಗೂ ಹಚ್ಚಗೊಡಲಿಕ್ಕಿಲ್ಲ. ಗಂಗಾಧರಪಂತರ ಆಳಿಕೆಯಲ್ಲಿ ಪೆಂಡಾರಿಗಳು ಒಮ್ಮೆ ಈ ವೈಭವವನ್ನು ದೋಚುವ ಆಮಿಷದಿಂದ ದರೋಡೆ ಬಂದರು. ಗಂಗಾಧರಪಂತರು, ನಮ್ಮ ಗೋವಿಂದಭಟ್ಟನ ಮುತ್ತಜ್ಜ, ನಾಯಕರಾಗಿ ನಿಂತು, ನೂರು ಜನ ಊರಿನ ಗಂಡಾಳುಗಳನ್ನು ಕೂಡಿಸಿ, ಪೆಂಡಾರಿಗಳನ್ನು ಓಡಿಸಿದರಂತೆ. ಅಂದಿನ ಚಕಮಕಿಯಲ್ಲಿ ನಮ್ಮ ಪ್ರಪಿತಾಮಹಾಜೀಯ ಪಿತಾಜಿ ತನ್ನ ಒಂದು ಕೈಯನ್ನು ಕಳೆದುಕೊಂಡು ಅಂಗವಿಕಲನಾದ. ಗಂಗಾಧರ ಪಂತರು, ಈ ನಿಷ್ಠೆಯನ್ನು ಮೆಚ್ಚಿ, ತಮ್ಮ ಸ್ವಂತ ಆಸ್ತಿಯಲ್ಲಿಯ ನಾಲ್ಕು ಹೊಲಗಳನ್ನು ಅವನಿಗೆ ದತ್ತಿಬಿಟ್ಟರು. ಇಂದಿಗೂ ಅವರ ದಾನದ ಈ ಹೊಲಗಳು ನಮ್ಮ ಮನೆತನಕ್ಕೆ ನಡೆದಿವೆ. ವೈದಿಕವಲ್ಲದೆ ಶೂರ ಶಿಪಾಯಿಯ ನೆತ್ತರೂ ನಮ್ಮ ಧಮನಿಯಲ್ಲಿ ಆಡುತ್ತಿತ್ತು ಎನ್ನುವದಕ್ಕೆ ಅವು ಸಾಕ್ಷಿಯಾಗಿವೆ. ಇರಲಿ.

ಈ ಸಂಪತ್ತು ಗುಡಿಯ ಮಾಲ್ಕಿಯದಿರುವದು ನಿಜ. ಅದರ ರಕ್ಷಣೆಯ ಭಾರ ಪಂತಕುಟುಂಬದ ಮೇಲಿರುವಂತೆ, ಊರಿನವರ ಮೇಲೂ ಇದೆ. ವಿನಾಯಕ ಪಂತರ ಕುಲದೈವವಾಗಿರುವಂತೆ ಊರವರ ಗ್ರಾಮದೇವತೆಯಾಗಿದ್ದಾನೆ. ಬಸವಣ್ಣ, ಹಣಮಪ್ಪ, ಲಕ್ಷ್ಮೀನಾರಾಯಣ ದೇವಸ್ಥಾನಗಳಿಗೆ, ನಮ್ಮೂರಿನ ಎಲ್ಲ ಜಾತಿ – ಎಲ್ಲ ಕೋಮಿನಲ್ಲೂ 'ಸೆಕೆಂಡ್ ಪ್ರಿಫರನ್ಸ್', ವಿನಾಯಕ ಮೊದಲು, ನಂತರ ಉಳಿದವರ ಪಾಳಿ. ಗೌಡರು, ದರ್ಗಾದ ಪೀರ, ಚರಂತಿಮಠದ ಅಯ್ಯನವರು, ಹಿರೇಮಠದ ಅಯ್ಯನವರು ಕುಲಕರ್ಣಿಯವರ ನಾಕು ಮನೆತನದಲ್ಲಿ, ಕುಲಕರ್ಣಿಕಿಯ ಪಾಳೀ ಇದ್ದ ಮನೆತನದ ಒಬ್ಬ ಪ್ರತಿನಿಧಿ, ದೇವಸ್ಥಾನದ ಟ್ರಸ್ಟೀ-ಪಂಚರಿರುತ್ತಾರೆ. ಗುಡಿಯ ಕ್ಷೇಮದ ದೃಷ್ಟಿಯಿಂದ – ಊರಿನ ಪ್ರಾತಿನಿಧ್ಯ--ಜವಾಬುದಾರಿಯ ದೃಷ್ಟಿಯಿಂದ ಈ ವ್ಯವಸ್ಥೆಯನ್ನು ಬಳವಂತರಾವಜೀ ಅವರು ಮಾಡಿದರು. ಅದು ರೂಢಿಯಾಯಿತು. ದೇವಸ್ಥಾನ – ಅದರ ಆಸ್ತಿ–ಪಂತರ ದೇಖರಖಿಯಲ್ಲಿ ಇದ್ದರೂ, ಊರವರ ಜವಾಬುದಾರಿಯ ಸಂಸ್ಥೆಯಾಯಿತು.

ಈ ಹೊಣೆಯನ್ನು ಕಾಕಾ ಊರು ಬಿಡುವಾಗ, ತಮ್ಮ ಪ್ರತಿನಿಧಿ ರಾಜಪ್ಪ, ಊರಿನ ಪ್ರತಿನಿಧಿ ಟ್ರಸ್ಟಿಗಳ ತಾಬೇಮಾಡಿಯೇ ಊರು ಬಿಟ್ಟಿದ್ದರು. ಇವರ ಭರವಸೆಯ ವಿಷಯದಲ್ಲಿ ಕಾಕಾ ನಿಃಶಂಕರಾಗಿದ್ದರು. ಶ್ಯಾಮರಾಯ ಊರಲ್ಲಿ ವಾಡೆಯಲ್ಲಿ ನಿಂತಿದ್ದರೂ ಅವನು ತಾನಾಗಿಯೇ ಈ ಆಸ್ತಿಯ ದೇಖರಖಿಯ

ಮೇಲ್ವಿಚಾರಣೆಯ ಅಧಿಕೃತ ಪ್ರತಿನಿಧಿಯಾಗುವದು ಸಹಜಾಸಹಜೀ ಶಕ್ಯವಿರಲಿಲ್ಲ. ಅವನನ್ನು ಕಾಕಾ ನಿಯುಮಿಸಬೇಕು; ಪಂಚರು ಒಪ್ಪಬೇಕು.

ಹಿರೇಮಠದ ಪ್ರಸ್ತುತ ಪೀಠಸ್ಥರಾದ ಅಯ್ಯನವರಿಗೆ, ಕಾಕಾಅವರಿಗೆ ಒಂದು ಪ್ರಕರಣದಲ್ಲಿ ರಣಕತ್ತಲಾಯಿತು. ಈ ಅಯ್ಯನವರಿಗಿಂತ, ಸ್ವಭಾವದಲ್ಲಿ ವಿದ್ಯೆಯಲ್ಲಿ ನೀತಿಯಲ್ಲಿ ಮಿಗಿಲಾದ ಇನ್ನೊಬ್ಬ ಸಾಧುಗಳಿಗೆ ನ್ಯಾಯವಾಗಿ ಈ ಪೀಠದ ಅಧಿಕಾರ ಹೋಗಬೇಕಿತ್ತು. ಇವರ ಹಿಂದಿನ ಅಯ್ಯನವರು, ಶಿವೈಕ್ಯ ರಾಗುವ ಸಮಯದಲ್ಲಿ ಆ ರೀತಿ ಯೋಗ್ಯ ವ್ಯಕ್ತಿಗೆ ಪಟ್ಟವಾಗಬೇಕೆಂದು ಬಯ ಸಿದ್ದರು. ಆದರೆ ಆ ಜಾತಿಯಲ್ಲಿಯ ಯಾದವಿಯಿಂದಾಗಿ ಯೋಗ್ಯ ವ್ಯಕ್ತಿಗಳಿಗೆ ಸಿಗಬೇಕಾದ ಪಟ್ಟ ಸಿಗಲಿಲ್ಲ. ಇಂದಿನ ಪೀಠಸ್ಥ ಅಯ್ಯನವರು ಏನಕೇನಪ್ರಕಾರೇಣ ಪಟ್ಟವಿಭೂಷಿಸಿದರು. ಊರಿನ ಕ್ಷೇಮದ ದೃಷ್ಟಿಯಿಂದ ಕಾಕಾ ಅವರು ಇದನ್ನು ನಿರೋಧಿಸಿದರು. ಆಯಿತು, ಅಂದಿನಿಂದ ಕಾಕಾ-ಅಪನವರಲ್ಲಿ ಅವಿಶ್ವಾಸ-ಅಪ ನಂಬಿಕೆಯ ಬೀಜ ಊರಿತು. ಕಾಕಾ, ಬಲಾಢ್ಯರಾಗಿದ್ದರು. ನೀತಿಯ-ನ್ಯಾಯದ ವಜ್ರಸ್ತಂಭವಾಗಿದ್ದರು. ಸ್ವಾಮಿಗಳಿಗೆ ಅವರೆದುರು ಕತ್ತಿಕಟ್ಟಿ ಬಾಳಿ ಬದುಕುವದು ಅಶಕ್ಯವಿತ್ತು. ಕಾಕಾ, ಮನಸ್ಸು ಮಾಡಿದ್ದರೆ, ಅಪನವರ ಬಣವನ್ನು ಬಣವೆಯಂತೆ ಉರಿಸಿ ಭಸ್ಮಮಾಡಿಬಿಡುವ ತಾಕತ್ತವಾನರಿದ್ದರು. ಆದರೆ ಗುಬ್ಬಿಯ ಮೇಲೆ ಮಹಾಸ್ತ್ರಪ್ರಯೋಗ ಮಾಡಲಿಲ್ಲ. ಅದನ್ನು ಅಲಕ್ಷ್ಯ ಮಾಡಿದ್ದರು. ಅಲಕ್ಷಿತ ಗುಬ್ಬಿ, ಅಂತರಂಗದಲ್ಲಿ, ಅವರ ಅಪರೋಕ್ಷದಲ್ಲಿ ತನ್ನ ಶಕ್ತಿಯನ್ನು ನೂರ್ಮಡಿಸಿ ಕೊಂಡು ಗರುಡಶಕ್ತಿಯನ್ನು ಪಡೆಯುತ್ತಿತ್ತು. ಕಾಕಾ ಊರು ಬಿಟ್ಟಿದ್ದರಿಂದ ತನ್ನ ಪಕ್ಕದಲ್ಲಿಯ ಸಾಮರ್ಥ್ಯವನ್ನು ಪ್ರಕಟಿಸಲು, ನಿರಾತಂಕ ಉಡ್ಡಾಣ– ನಿರಾಬಂಧ ವಿಹಾರಕ್ಕೆ ಮೋಕಳೀಕವಾಗಿತ್ತು.

ಪಂತಕುಟುಂಬದಲ್ಲಿಯ ವಜ್ರಬಂಧ ಶ್ಯಾಮರಾಯನ ಛಿದ್ರದಿಂದ ಬಿರುಕು ಗೊಂಡ ಪ್ರತ್ಯಯ, ರಾಧಾಕಾಕೂನ ತಾಳಿ-ಬಳೆಯ ಪ್ರಕರಣದಲ್ಲಿಯೇ ಊರವ ರಿಗೆ ಅವಗತವಾಗಿತ್ತು. ಊರ ಹಿರಿಯರು, ಜೀವನಾಡಿಯಂತಿದ್ದ ಗೌಡರು, ಚರಂತಿಮಠದ ಅಪನವರು, ದರ್ಗಾಪೀರ, ಕಾಕಾ ಅವರ ಆಪ್ತಸ್ವಕೀಯರಾಗಿದ್ದರು. ಅವರ ಸುಖದುಃಖದಲ್ಲಿ ಸಮಭಾಗಿಯಾಗಿದ್ದರು; ಅವರು ಈ ಛಿದ್ರ ಬಾಯಿ ಬಿಟ್ಟು ಬಕಾಸುರನ ಅವತಾರಧಾರಣೆ ಮಾಡದಂತೆ ದಕ್ಷತೆ ವಹಿಸಿದ್ದರು. ಶ್ಯಾಮ ರಾಯನ ಯಾವ ಹಾಲ್‌ಚಾಲಿಗೂ ಆಸ್ಪದ ಕೊಡುತ್ತಿರಲಿಲ್ಲ. ಅವನನ್ನು ಅಲಕ್ಷಿತ

ಬಾಬಿನ ಸದರಿನಲ್ಲಿ ಒಗೆದಿದ್ದರು. ರಾವಜೀಕಾಕಾ ಅವರನ್ನು ನೀರಲ್ಲಿ ನೋಡು ತ್ತಿದ್ದ ಹಿರೇಮಠದ ಅಯ್ಯನವರು, 'ಕಂಟಕೇನೈವ ಕಂಟಕವ್' ಎಂಬಂತೆ, ರಾವಜೀ ಕಾಕಾ ಅವರ ಮೇಲಿನ ದ್ವೇಷವನ್ನು, ಶ್ಯಾಮರಾಯನ ಸಹಾಯದಿಂದ ಸಾಧಿಸಲು ಹೊಂಚುಹಾಕಿ ಕಾದಿದ್ದರು. ಅವನ ಊರಲ್ಲಿಯ ವಾಸ್ತವ್ಯ – ಆಸ್ತಿಯ ಮೇಲ್ವಿಚಾರಣೆಯ ಅಪ್ರಾತಿನಿಧ್ಯ ಅವರಿಗೆ ಅನುಕೂಲಸಿಂಧುವಾದವು. ಮನೆ ಯಿದ್ದೂ ಬಳಗವಿಲ್ಲದ, ಊರಿದ್ದೂ ಸಹಕಾರವಿಲ್ಲದ ಶ್ಯಾಮರಾಯನಿಗೆ ಸಂನ್ಯಾಸಿ ಗಳ ತೆಕ್ಕೆಬಿತ್ತು. ಅವರ ಸ್ನೇಹಸಂಸ್ಕಾರದ ಭಸ್ಮಲೇಪ ಇವನಿಗೂ ಆಯಿತು.

ರಾವಜೀಕಾಕಾ ಅವರಿಗೆ, ಗೌಡರಿಂದ ಈ ವಿಷಯ ತಿಳಿದಿತ್ತು. ಆದರೆ ಗ್ರಾಮಪಂಚಾನನರಲ್ಲಿಯ, ಚತುರಾನನರ ಬಲ ತಮಗಿದ್ದ ಕಾರಣ – ಜೀವಕ್ಕೆ ಜೀವವನ್ನು ನಿವಾಳಿಸಿ ಒಗೆಯುವ ರಾಚಪ್ಪನಂಥ ವಿಶ್ವಾಸಿಕ ನಿಷ್ಠಾವಂತ ಸಚಿವ ನಿದ್ದ ಪ್ರಯುಕ್ತ ಅವರು ನಿರ್ಧಾಸ್ತರಾಗಿದ್ದರು.

ಇಂಥ ನಿರ್ಧಾಸ್ತ ಸ್ಥಿತಿಯಲ್ಲಿದ್ದ ಅವರು, ಬಹಳವಾದರೆ, ಸುರೇಶನ ಕಡೆ ಯಿಂದ, ಕಿಶೋರನ ಕಡೆಯಿಂದ, ಪತ್ರ ಬರೆಯಿಸಿ ಅದಕ್ಕೆ ತಮ್ಮ ಸಹಿಯನ್ನು ಮಾತ್ರ ಮಾಡುತ್ತಿದ್ದರು. ಖುದ್ದ ತಾಂವಾಗಿಯೇ ಪತ್ರ ಬರೆಯುವ ಭಾನಗಡಿ ಯಲ್ಲಿ ಬೀಳುತ್ತಿರಲಿಲ್ಲ. ಆದರೆ ಇಂದು ಬಂದ ಕಾಗದ, ಅವರ ಸ್ವಹಸ್ತದಲ್ಲಿತ್ತು. ವಿಳಾಸವನ್ನು ಅವರೇ ಮುತ್ತಿನಂತಹ ಮೋಡೀ-ಲಿಪಿಯಲ್ಲಿ ಬರೆದಿದ್ದರು. ಮೇಲೆ ಅದನ್ನು ರಜಿಸ್ಟರ-ಪೋಸ್ಟಿನಿಂದ ಕಳಿಸಿದ್ದರು.

ಅವರಿಂದ ಬಂದ ಈ ಕಾಗದವನ್ನು ರಾಚಪ್ಪ ಒಂದಲ್ಲ – ಹತ್ತು ಸಲ ಓದಿ ನೋಡಿದ. ಮತ್ತೆ ಮತ್ತೆ ತಿರಿವಿ ಹಾಕಿದ. ತಲೆಯ ಮೇಲೆ ಕೈಆಡಿಸಿದರೇನಾದರೂ ವಿಚಾರ ಮಿಂಚಬಹುದೆಂದು ಎಡಗೈಯಿಂದ ಖಲ್ವಾಟವನ್ನು ನೇವರಿಸಿ ನೋಡಿದ. ಅದಕ್ಕೂ ಅಸನರಿಯದಂತಾಗಲು, ತಲೆಯನ್ನು ಬಲಗೈಯಿಂದ ಕೆದರಿಕೊಂಡ. ಕಾಕಾನ ತುಪ್ಪದ ತಲೆಯ ವಿಚಾರ ತನ್ನ ಹುಳ್ಳಾನುಚ್ಚಿನ ಡವಗಿಗೆ ಹಣಿಯದೆಂದು ನಿರಾಶನಾದ. ಮತ್ತೆ ಅವರ ಕಾಗದವನ್ನು ಎದುರಿಗಿರಿಸಿಕೊಂಡು, ಎಡಗೈಯಿಂದ ತಲೆ ಹಿಡಿದುಕೊಂಡು, 'ಕ್ರಾಸ್-ವರ್ಡ'ಶೋಕಿಗಳು, 'ಕಾಯಿಂಡ್' ಅಥವಾ 'ಮಾಯಿಂಡ್'ದಲ್ಲಿಯ ಕೆ. ಎಂ. ಅಕ್ಷರಯೋಜನೆಯ ಸಾಧ್ಯಾಸಾಧ್ಯತೆಯ ಬಗ್ಗೆ ನೇತಿನೇತಿಯ ದ್ವಿಧಾಭಾವ ಮೂಡಿದಾಗ ಅನಿಶ್ಚಿತರಾಗಿ ಡೋಲಾಯಮಾನಸ ರಾಗುವಂತೆ, ರಾಚಪ್ಪನೂ ವಿಮನಸ್ಕನಾದ. ಕೆ. ಎಂ.ಗಳ ಉಸಾಬರಿಯನ್ನು

ಬಿಟ್ಟು, ಬಗ್ಗಿ ಕುಳಿತು ಕಾಗದವನ್ನು ನೋಡುತ್ತಿದ್ದವ, ತೆಕ್ಕೆಗೆ ವಾಲಿ ಜಂತಿಮುಖ ನಾದ. (ಮುಗಿಲು-ಮುಖ ಸ್ವೀಕೃತಯೋಗ್ಯವಾದಂತೆ – ಈ ಜಂತೀ-ಮುಖವನ್ನೂ, ಕೊಯನಲ್ ಡೋಜನ್ನು ಅಸಡ್ಡೆಮುಖ ಮಾಡಿ ಗಂಟಲ ಕೆಳಗೆ ದೂಡುವಂತೆ, ಸ್ವೀಕರಿಸುವಿರಾಗಿ ನಂಬಿದ – ದಾದಲ್ಯಾ) ಜಂತಿಯ ಕುಲಾಬಿಯಿಂದ, ಅಂಕಣದ ತೊಲೆಯ ವರೆಗೆ, ಒಂದು ಜೇಡ, ಜಾಲದೆಳೆಯನ್ನು ಹಾಸಿ ಜಾಲದ ಪೂಲು ಕಟ್ಟುವ ಸತತ ಶ್ರಮದಲ್ಲಿದ್ದದ್ದು ಕಂಡಿತು. ಗದಿಗೆಯ್ಯನವರು, ಶ್ಯಾ. ಮಾ. ಆಗಿ ಹಯಾತ ಇದ್ದಾಗ, ಎರಡನೇ ಎತ್ತೆಯ ಹುಡುಗರಿಗೆ ಕೈತಾ (ಕವಿತಾ) ಕಲಿಸುವಾಗ —

"ಒಂದು ಜೇಡವು ತನ್ನ ಗೂಡನು ಕಟ್ಟಲೋಸುಗ ಗೆಳೆಯನೇ"

ಎಂದು ಯಾವನೋ ಗೆಳೆಯನಿಗೆ, ಎರಡನೇ ಪಠ್ಯಪುಸ್ತಕದ ಆಶುಕವಿ ಸತತ ಪ್ರಯತ್ನ ಮಾಡಿ, ಸಿದ್ಧಿಯನ್ನು ಪಡೆ, ಎಂದು ಬೋಧಿಸಿದ ಕವಿತೆಯನ್ನು ನೆನೆಸಿ ಕೊಂಡ. ರಾಚಪ್ಪನೂ ಮುಲ್ಕೀಪರೀಕ್ಷೆ ಮುಗಿಸಿದ್ದರಿಂದ, ಅವನಿಗೆ ಕವಿತೆಯ ಶಬ್ದಾರ್ಥ ಜಮಾಸಿತು. ಆದರೆ ಅದರ ಬೋಧನೆಯ ಭಾವಾರ್ಥ ಗಂಟಲಲ್ಲೇ ಅಟಕಾಯಿಸಿತು.

"ಕಾಕಾ, ಏನೋ ಘೋಟಾಳೆ ಮಾಡಿದರು"

ಎಂದು ತನ್ನಷ್ಟಕ್ಕೆ ತಾನೇ ಮಟಮಟಿಸಿ, 'ರಾಮಸೇವಕ' ಎಂದು ಕೂಗಿದ. ಕಚೇರೀ ಕೋಣೆಯ ಮುಂದಿನ ಕಟ್ಟೆಯ ಮೇಲೆ ಮುಚ್ಚುಗತ್ತಿಯ ಪಹರೆ ಮಾಡುತ್ತಿದ್ದ, ರಾಮಸೇವಕ ಒಳಗೆ ಬಂದು,

"ಕ್ಯಾ ಹುಕುಂ ಜೀ"

ಎಂದು ಕೇಳಿದ.

"ಇಕಾ, ಕಚೇರೀ ಬಾಗಲಕ ಕೀಲೀ ಹಾಕಿ ಕೈ ತಾ. ನನಗ ಜರಾ ದಗದೈತಿ. ಹೊರಗ ಹೋಗಿ ಬರತೀನಿ"

ಎಂದು ಕಾಕಾ ಅವರಿಂದ ಬಂದ ಕಾಗದವನ್ನು ತನ್ನ ಕೋಟಿನ ಒಳಕಿಸೆಯಲ್ಲಿ ಜೋಪಾನವಾಗಿ ಸೇರಿಸಿ, ತಲೆಗೆ ಮುಂಡಾಸವಿಟ್ಟುಕೊಂಡು, ಕೋಣೆಯಿಂದ ಹೊರಬಿದ್ದ. ರಾಮಸೇವಕ ಕೀಲಿ ಹಾಕಿ ತಂದು ಕೊಟ್ಟ ಕೈಯನ್ನು ಕಿಸೆಯಲ್ಲಿ ಹಾಕಿ, ಅವನತಮುಖನಾಗಿ ಸರಸರನೆ ನಡೆದುಬಿಟ್ಟ.

ದ್ವಾದಶಿಯ ಪ್ರಯುಕ್ತ ಸಂಜೆಯ ಪುರಾಣಕ್ಕೆ ಬಿಡುವಿಲ್ಲ ಕಾರಣ, ಗೋವಿಂದಭಟ್ಟ ಮನೆಯಲ್ಲಿಯೇ ಇದ್ದ. ಇದ್ದನೆಂದರೆ ಖಾಲೀ ಮಾತ್ರ ಇರಲಿಲ್ಲ.

ನಿಮ್ಮ 'ಯ್ಯಾಶ್-ಪಾ:ಟ್' ಮಾದರಿಯ ಸಣ್ಣ ಕಲಪರಟೆಯಲ್ಲಿ, ಅಷ್ಟು ರಂಗ ವಲ್ಲಿಯ ಪುಡಿ ಚೆಲ್ಲಿ, ಸವೆದು ಸವಕಳಿಯಾಗಿ, ಹೋದಲ್ಲೆಲ್ಲ ಬಾದ-ಬನಾವಟ್, ಎಂದು ನಕಾರ ಹೇಳಿಸಿಕೊಂಡು, ಅಪೇಕ್ಷೆಯಂತೆ ತಿರುಗಿ ಬಂದ, ಒಂದು ದೊಡ್ಡ ಡಬ್ಬೂ – ಎರಡು ದುಡ್ಡಿನ ದುಡ್ಡು – ನನ್ನ ಆಧುನಿಕ ತರುಣಮಿತ್ರರು ಇದನ್ನು ನೋಡಿರುವ ಸಂಭವವಿಲ್ಲ, ಇರಲಿ – ಆ ಡಬ್ಬೂ-ದುಡ್ಡಿನ ಮಧ್ಯದಲ್ಲಿ ರಂಧ್ರ ಮಾಡಿ, ಸಫೇದ ಮಾಡಿದ ಬಿದಿರಿನ ತುಂಡನ್ನು ಸೇರಿಸಿ, ಗೃಹೋದ್ಯೋಗ ನಿರ್ಮಿತ ಟಕಳಿಯಲ್ಲಿ ಕ್ಷೀರಧಾರೆ ಹಿಡಿದಂತೆ ನೂಲು ತೆಗೆಯುತ್ತಿದ್ದ. ೧೨೦–೧೪೦ ಕಾವುಂಟ್ ಎಂದೇನೋ ಅನ್ನುವರಲ್ಲ – ಅಂಥ ದಾರದಿಂದ, ಅವನ ನಿತ್ಯಾವಳೀ ಮನೆಯ ಗಂಡುಪಾಗಾಕ್ಕೆ ಜೋಡಿ, ಒಂಟಿ, ಲೆಕ್ಕದಿಂದ ಯಜ್ಞೋಪವೀತದ ವಾರ್ಷಿಕ ಪುರವಠೆಯಾಗಬೇಕು. ಅದರ ಮಕ್ತೇದಾರೀ ಗೋವಿಂದಭಟ್ಟನದು. ಶ್ರಾವಣಿಯ ಹೊತ್ತಿಗೆ ಸರಿಯಾಗಿ ಈ ಮಕ್ತೇದಾರಿಯ ಕಂತ್ರಾಟು ಮುಗಿಯ ಬೇಕು.

ದೇವಸ್ಥಾನದ ಕಚೇರೀಕೋಣೆಯಿಂದ ಹೊರಬಿದ್ದು ಬಂದ ರಾಚಪ್ಪ ದಾರಿ ಯಲ್ಲಿ ಎಲ್ಲೂ ನಿಲ್ಲದೆ, ಥೇಟ ಗೋವಿಂದಭಟ್ಟನ ಕಡೆಗೇ ಬಂದ. ಇಬ್ಬರದೂ ಗುಜುಗುಜು ಗುಣುಗುಣು ನಡೆದು, ನೂಲು ತೆಗೆಯುತ್ತಿದ್ದ ಟಕಳಿ, ಅಖಂಡ ಭ್ರಮಂತಿಯನ್ನು ನಿಲ್ಲಿಸಿ, ಕಲಪರಟೆಯಲ್ಲಿ ನಿಃಸ್ಸತ್ವಜಡವಾಗಿ ಮೆಲ್ಲಗೆ ಮಡಗಿತು. ಅದನ್ನು ಅದರ ಸ್ವಸ್ಥಾನದಲ್ಲಿ ಅಂದರೆ ಗಣಪತಿಮಾಡದಲ್ಲಿ ಇರಿಸಿ, ಗೋವಿಂದ ಭಟ್ಟ, ಅಲ್ಲೇ ಗೂಟಕ್ಕಿದ್ದ ತನ್ನ ಹಸಿರು ಶಾಲು ಎಳೆದ. ಶಾಲು ಗೋವಿಂದಭಟ್ಟನ ಬರಿಮೈಯನ್ನು ಮುಚ್ಚಿ ಅಲಂಕರಿಸಿತು. ಭಟ್ಟ, ಪಡಸಾಲೆಯ ಮೂಲೆಯಲ್ಲಿ ಮಡಗಿದ ಹಳೆಯ ಮೊಚ್ಚೆಗಳನ್ನು ಕಾಲಿಗೆ ಸೇರಿಸುವ ಹೊತ್ತಿಗೆ ಸರಿಯಾಗಿ, ನಡು ಮನೆಯಿಂದ ಪಡಸಾಲೆಯ ಬಾಗಿಲಿಗೆ ಬಂದು ನಿಂತ, ತನ್ನ ಶ್ರೀಮತಿಯನ್ನು ನೋಡಿದ. ಇದು ಇನ್ನು "ಎಲ್ಲಿಗೆ" ಎಂದು ನನಗೆ ಅಡ್ಡಬಾಯಿಹಾಕಿ ಅಪಶಕುನ ಮಾಡೀತೆಂದು, ಮುಂಗಡ ಅಂದಾಜಿನಿಂದ ಗೋವಿಂದಭಟ್ಟ –

"ಇಕಾ, ನನಗಿಷ್ಟು ಜರೂರಿ ಕೆಲಸ ಅದs. ಹೊರಗ ಹೋಗಿಬರತೀನಿ. ಇಂದ, ನಂದೇನು ಸಂಜೀ ಮಮ್ಮು ಇಲ್ಲಾ. ಫರಾಳದ ಹಾದೀನೂ ನೋಡ ಬ್ಯಾಡಾ ತಿಳೀತೇನು?"

ಎಂದು ಅವಳು ತಿಳಿದುಕೊಂಡದ್ದರ ದಾಖಲೆಯನ್ನು ಕೂಡ ದಾದುಮಾಡದೆ

ಹೊರಟ.

ಐದು-ಹತ್ತು ನಿಮಿಷದ ಅವಧಿಯಲ್ಲಿ ರಾಚಪ್ಪ-ಗೋವಿಂದಭಟ್ಟ-ಯುತಿ, ಚರಂತಿಮಠದ ಅಂಗಳದಲ್ಲಿ ಧುತ್ತೆಂದು ಬಂದು ಇಳಿಯಿತು.

ಅಪನವರು, ಅಪರಾಹ್ನ, ತಮ್ಮ ಧ್ಯಾನಮಂದಿರದಲ್ಲಿ ಅಲೌಕಿಕ ಚಿಂತನ-ಧ್ಯಾನ-ಮನನ-ವಾಚನರತರಾಗಿರುತ್ತಾರೆ. ಹೊತ್ತು ಪಾಡಿಗೆ ತಿರುಗಿದಂತೆ, ಅವರು ಆ ಅಲೌಕಿಕ-ತಂದ್ರಿಯಿಂದ ಲೌಕಿಕ ಜಾಗರ-ಲೋಕಕ್ಕೆ ಹೊಡಮಳ್ಳುತ್ತಾರೆ. ಆ ಅಂಚಿತ್ಯ-ಲೋಕದಿಂದ ಅದೇ ಮರಳಿದ ಅವರು, ಮಠದ ಮೊಗಸಾಲೆಯಲ್ಲಿ ಕಟ್ಟಿದ ತೂಗುಮಂಚದಲ್ಲಿ ವಿರಾಜಮಾನರಾಗಿದ್ದರು. ಮಠದ ಮರಿ, ಹರಿಣ ಶಿಶುವಿಗೆ ಧಾನ್ಯ ತಿನಿಸುತ್ತಿರುವದನ್ನು ನೋಡುತ್ತ ಕುಳಿತಿದ್ದರು. ಈ ಯುತಿಯನ್ನು ಕಂಡು ಮುಗುಳುನಗೆ ಮಿಂಚಿಸುತ್ತ —

"ಬರ್ರಿ, ಗೋವಿಂದಭಟ್ಟ, ಬಾ ರಾಚೋಟೀ, ಇದೇನು ಆಕಸ್ಮಿಕ ಆಗಮನ ಇಬ್ಬರದೂ?"
ಎಂದು ಸ್ವಾಗತಿಸಿದರು.

"ಸ್ವಾಮೀ ಸನ್ನಿಧಾನಕ್ಕ ಅಕಸ್ಮಿಕ ಪ್ರಯಾಣನs ಅಲ್ಲೇನು? ಅಪ್ಪನ ಮನೀಗೆ ಮಗಾ ಬರೂದಕ್ಕ ಪರವಾನಗೀ ಜರೂರೀನ ಇಲ್ಲಾ. ನಾವು ಬಂದದ್ದರಿಂದ ಅಪನವರಿಗೆ ವ್ಯತ್ಯಯ ಏನ ಬರಲಿಲ್ಲಲಾ ಮತ್ತs?"
ಗೋವಿಂದಭಟ್ಟ ಕೇಳಿದ.

"ಮಠದ ಬಾಗಲಾ ಎಂದರ ಮುಚ್ಚಿತ್ತೇನು ಗೋವಿಂದಭಟ್ಟಾ? **ಅವನ** ಮನೀಗೆ ನೀವು ಬಂದಿರಿ. ಅಲ್ಲಿಗೆ ಬರೂದಕ್ಕ ಯಾರದ್ಯಾಕ ಪರವಾನಗೀ. ನನಗ ಯಾತರ ವ್ಯತ್ಯಯಾ?"

ರಾಚಪ್ಪ ಅಪನವರಿಗೆ ಅಡ್ಡಬಿದ್ದು ಆಶೀರ್ವಾದ ಪಡೆದ. ಮೇಲೆ ಬಂದು ಇನ್ನೇನು ಗೋವಿಂದಭಟ್ಟ ಸ್ವಾಮಿಗಳಿಗೆ ನಮಸ್ಕರಿಸುವವ, ಅಪನವರು ಅವನನ್ನು ಅರ್ಧಕ್ಕೇ ಹಿಡಿದೆಬ್ಬಿಸುತ್ತ –

"ಗೋವಿಂದಭಟ್ಟ, ಈ ಅಸ್ಥಾನ-ಸನ್ಮಾನ ಬ್ಯಾಡಂತ ಭಾಳ ಸಾರೇ ಹೇಳೀನಿ ನಿನಗ. ನೀ ಬಿಡವಲ್ಲೀ."
ಎಂದರು.

ಗೋವಿಂದಭಟ್ಟ ಹಸಿರುಶಾಲಿನಲ್ಲಿ ಕೈಹಾಕಿ, ಯಜ್ಞೋಪವೀತವನ್ನು

ಹೊರತೆಗೆದು ತೋರಿಸುತ್ತ –

"ಅಪನವರs, ಇಷ್ಟರಿಂದs ನಾ ಹ್ಯಾಂಗ ಶ್ರೇಷ್ಠ ಆದೇನು? ಏಳ ಜನ್ಮದ ಪುಣ್ಯಾ ಬಸದರೂ ನಿಮ್ಮ ಯೋಗ್ಯತಾಕ್ಕ ಬರಲಿಕ್ಕಿಲ್ಲಾ. ನಾ ವೈದಿಕಬ್ರಾಹ್ಮಣಾ. ಘಂಟೀ-ಪುರಾಣದ ಕೂಲೀಯುಂವಾ. ಪ್ರಪಂಚಾ-ಹೆಂಡರು-ಮಕ್ಕಳು-ಸಂಸಾರಾ ಅನ್ನೂ ಅಧೋಗಾಮೀ ವೃತ್ತೀಯುಂವಾ. ತಾಂವು ಸರ್ವಸಂಗತ್ಯಾಗೀ. ಆದರೂ ವಿಶ್ವಕುಟುಂಬೀ. ಊರ್ಧ್ವಗಾಮೀ ತೇಜಾ ತಮ್ಮದು. ನೀವು ಸೂರ್ಯಾ – ನಾ ಪಣತಿ ಅಪನವರs". 16726

"ಗೋವಿಂದಭಟ್ಟ, ವಿಶ್ವಕುಟುಂಬಾ, ಜಗತ್-ಕಲ್ಯಾಣಾ ಅನ್ನೂ ಶಬ್ದಾ ಭಾಳ ಥೊಡ್ಡೂ ಏನಪಾ. ಸಣ್ಣ ತೆಕ್ಕಿಗೆ ಸಣ್ಣ ಮಾತs ಛಲೋ. ಸಂಸಾರಮಾಡಲಿಕ್ಕೆ ಬರದಾಂವಾ ಸಂನ್ಯಾಸಿ ಆಧಾಂಗ. ಸಣ್ಣ ಪ್ರಪಂಚಾ, ಸಣ್ಣ ಸಂಸಾರಾ, ಒಂದು ಸಣ್ಣ ಕುಟುಂಬಾ, ಅಷ್ಟನs ಛೆಂದ ಆಗಿ ನಡಸಲಿಕ್ಕೆ ಬರದಾಂವಾ, ಅದನ್ನ ವೈನ ಆಗಿ ಕಟ್ಟದಂವಾ, ವಿಶ್ವಕುಟುಂಬಾ ವಿಶ್ವಕಲ್ಯಾಣಾ ಏನ ಮಾಡ್ಯಾನು? ನೂರ ಸಂಸಾರ ಕೂಡಿ ಒಂದು ಊರಾ, ನೂರು ಊರ ಕೂಡಿ ಒಂದ ದೇಶಾ. ಹತ್ತ ದೇಶ ಕೂಡಿದ್ದು ಒಂದು ವಿಶ್ವಾ. ಸಂಸಾರ ಅಂದರ ಈ ದೊಡ್ಡ ವಿಶ್ವಸಂಸಾರದ ಯಂತ್ರದಾಗಿಂದು ಒಂದ ಸ್ಕ್ರೂ-ಮಳಿ. ಯಂತ್ರ ಅಷ್ಟs ಮುಖ್ಯಾ, ಈ ಸ್ಕ್ರೂ-ಮಳೀ ಏನು ಅಂತ ಅದನ್ನ ಅಲಕ್ಷ್ಯಮಾಡಲಿಕ್ಕೆ ಬರೂಹಾಂಗಿಲ್ಲಾ. ಅದನ್ನೂ ಒರಸಬೇಕು. ಅದಕೂ ಎಣ್ಣೀ ಹಾಕಬೇಕು. ಅದನ್ನೂ ನಿಗಾ ಇಡಬೇಕು. ಏನು ಸಣ್ಣ ಸ್ಕ್ರೂ ಅಂತ ನಿರ್ಲಕ್ಷ್ಯ ಮಾಡಿದರ ಅದs ಬಿಘಡಾಸಿ ಯಂತ್ರನs ಬಂದಬೀಳೂದು. ಛೆಂದ ಸಂಸಾರ ಯಾರಿಗೆ ಮಾಡಲಿಕ್ಕೆ ಬರತದ, ಯಾರ ಮಾಡಿದರು – ಅವರs ಜಗತ್-ಕಲ್ಯಾಣದ ಧುರಾ ಎತ್ತಿದರು. ಮುಂದೂ ಎತ್ತತಾರ. ನನ್ನಂಥಾ ಬಾವಾ-ಬೈರಾಗಿ ಅಲ್ಲಾ. ನಮ್ಮದು ನೀತೀ ಒಳಗ, ರೀತೀ ಒಳಗ, ಜೀವನದಾಗ ಕದಲ-ಬದಲ ಕಂಚೀಬದಲ ನಡದsದ. ಸರ್ವರೀತಿ ಯಿಂದೂ ಉಸಲಗಟ್ಟಲಿಕ್ಕೆ ಹತ್ತೇದ. ನಾವು ಸ್ವಾಮಿಗೋಳು ಸುಳ್ಳು ಮಾತಾಡ ಲಿಕ್ಕೆ ಬರೂದಿಲ್ಲಾ. ಖರೇ ಆಡಬೇಕs, ಅದೂ ಪಾಪದ ಸದರಿನ್ಯಾಗ ಬರತದಲ್ಲಾ ಅನ್ನೂ ಅಳಕಾ. ಆ ಅಂಜಿಕಿ, ಈ ಅಳಕಾ, ಒಂದು ಹಿಡದೇನಂತದ; ಇನ್ನೊಂದು, ಬಿಟ್ಟರ ಕಚ್ಚೇನಂತದ! 'ಆತ್ಮಸ್ವಾರ್ಥೇ ತ್ಯಜೇತ್ ಸರ್ವಂ' ಅಂದರು ಹಿರ್ಯಾರು. ಆದರ ನಾವು, ನೀ ಅಂಧಾಂಗ, ಸರ್ವತ್ಯಾಗೀ ಬಾವಾ-ಬೈರಾಗಿಗೋಳು

ಆತ್ಮಸ್ವಾರ್ಥೇ ಆತ್ಮವಂಚನಾ ನಡಿಸೇವು. ಇರ್‍ಲಿ ಬಿಡು ನಮ್ಮ ಚರ್ಚಾ. ರಾಚೋಟಿಗೆ ಬ್ಯಾಸರ ಬಂದಿರಬೇಕು. ಅಂವಾ 'ಕಾಯಕನs ಕೈಲಾಸ' ಅನ್ನೂ 'ಬ್ರೀಡದಂವಾ'. ಹೇಳರಿ, ಜೋಡೀ ಆಗಿ ಯಾಕ ಇಬ್ಬರದೂ ಆಗಮನ ಆಗಿತ್ತು. ಏನರs ವಿಶೇಷಾ? ಖರೇ ಅಂದರ, ನಾನೇ ನಿಮಗ ಹೇಳಿಕಳಸಾಂವ ಇದ್ದೆ. ಗೌಡರೂ ಊರಾಗಿಲ್ಲಾ. ಅವರೂ ಬಂದರ ಠೀಕ ಅಂತ ಸುಮ್ಮ ಇದ್ದೆ. ನೀವs ಬಂದಿರಿ. ಗುಣಾನs ಆತು."

ಅಪನವರ ಎದುರು ತನ್ನ ಲೌಕಿಕ-ಸಮಸ್ಯೆಯನ್ನು ಇಟ್ಟು ಪರಿಹಾರ ಪಡೆಯಲು ಬಂದ ರಾಚಪ್ಪನಿಗೆ, ಸ್ವಾಮಿಗಳ – ಗೋವಿಂದಭಟ್ಟನ ಚರ್ಚೆಯಲ್ಲಿಯ ಸಮಸ್ಯೆಯೇ ದಿಕ್ಕು ತಪ್ಪಿಸಿತು. ಅವನ ಜೀವನದಲ್ಲಿ ಏಕರಸವಾಹಿನಿಯಾಗಿ ಹರಿಯುವ ತ್ರಿವೇಣಿ, ಸೇವೆ, ನಿಷ್ಠೆ, ತ್ಯಾಗದ್ದು. ಅಪನವರಂತೆ ಚಿಂತನದಲ್ಲಿ ವೇಳೆಗಳೆಯಲು ಅವನಿಗೆ ವೇಳೆ ಸಾಲುತ್ತಿರಲಿಲ್ಲ. ಮಾತಿನ – ವಿಚಾರದ ಹೊನಲನ್ನು ತಿರುಗಿಸುವ ಬೇತಿನಿಂದ ಅವನು –

"ಕಾಕಾ ಅವರಿಂದ ಕಾಗದ ಬಂದಿತ್ತು. ತಮ್ಮ ಪಾದಕ್ಕೂ ಅರಿಕೆ ಅದs ಅದರಾಗ. ಅದಕs ಸನ್ನಿಧಾನಕ್ಕ ಬಂದೇವು."
ಎಂದು ಪೀಠಿಕೆ ಹಾಕಿದ.

"ಕಾಕಾ ಖುಷಾಲ ಇದ್ದಾರs? ಉಳದ ಮಂಡಳೀ ಕ್ಷೇಮ ಅದನs? ಕಾಕಾ ಏನಂತಾರ? ನನಗೂ ಅರಿಕೆ ಅದs ಅಂದಿ. ನನ್ನೂ ಒಳಗ ಹಾಕಿ ಬರದಾರಂದರ ಏನರs ವಿಶೇಷನs ಇರಬೇಕು. ಗೋವಿಂದಭಟ್ಟ, ಕಾಕಾ, ಊರ ಬಿಡಾಗs ಹಡಗದ ಚುಕ್ಕಾಣೀ ಕೆಳಗ ಇಟ್ಟರು. ಅವರು ಬಂದಾರು, ಮತ್ತ ಈ ಭಾರಾ ಹೊತ್ತಾರು ಅಂತ ಅನಸೊಲ್ಲದು. ಶ್ರೀರಾಮಗ – ಪಾಂಡವರಿಗೆ ಬರೇ ಹದಿನಾಕ ವರ್ಷದ್ದs ವನವಾಸದ ಮಿತಿ ಇತ್ತು. ಕಾಕಾ ಅಖಂಡ ಅಗಲಿದರೇನೋ ಅಂತ ಅನಸಲಿಕ್ಕೆ ಹತ್ತೇದ. ವಿಶೇಷ ಏನರs ಅದs ಏನ್ ರಾಚೋಟೀ?"
ಅಪನವರು.

"ಒಂದಿಷ್ಟು ವಿಶೇಷನs ಅದs ಅನ್ನರಿ. ಮಠದ ಹಿಂದಿನ ತ್ವಾಟಕ ಹೋದರ ಹ್ಯಾಂಗs? ಮಾತಾಡಲಿಕ್ಕೂ ಠೀಕಾ. ಸಂಜೀ ವ್ಯಾಳ್ಯಾ. ಇಲ್ಲೆ ಮತ್ತs ಮಂದೀ ಗರ್ದೀ ಆಗೂದು."
ರಾಚಪ್ಪ.

"ಹೌದು ಅದs ಠೀಕ ಜಾಗಾ. ಅಲ್ಲಿಗೇ ನಡೀರಿ."

ಮೂವರೂ ಮಠದ ಹಿಂಬದಿಯ ತೋಟಕ್ಕೆ ಹೋಗಿ, ಬಾವಿಯ ದಂಡೆಯ ಮೇಲಿನ ವಿಶಾಲ ವಟವೃಕ್ಷದ ಸುತ್ತಲೂ ಕಟ್ಟಿದ ಕಟ್ಟೆಯ ಮೇಲೆ ಕುಳಿತರು. ರಾಚಪ್ಪ, ಗೋವಿಂದಭಟ್ಟ, ಅಪನವರಿಂದ ಅನತಿದೂರದಲ್ಲಿ ಕುಳಿತರು. ರಾಚಪ್ಪ ಕಿಶೆಯಿಂದ ಕಾಕಾಅವರ ಕಾಗದ ತೆಗೆದು, ತೀರ ಮೆಲ್ಲಗಿನ ದನಿಯಲ್ಲಿ ಓದ ತೊಡಗಿದ:

**ಶ್ರೀ**

ಕ್ಷೇಮ ಪುಣೆ ತಾ॥...............

ಚಿ॥ ರಾಚೋಟಿಗೆ ಅನೇಕ ಉತ್ತಮ ಆಶೀರ್ವಾದಳು. ಇತ್ತಕಡೆ ಸರ್ವ ಕ್ಷೇಮ. ನಿಮ್ಮೆಲ್ಲರ ಕ್ಷೇಮಕ್ಕೆ ಆಗಾಗ ಬರೆಯುತ್ತಿರಬೇಕು. ತರುವಾಯ ಪತ್ರ ಬರೆಯಲಿಕ್ಕೆ ಕಾರಣವೇನೆಂದರೆ, ಮ.ರಾ.ರಾ. ಶಿವ ಲಿಂಗಪ್ಪಗೌಡರು, ನನಗೆ ಬರೆದ ಪತ್ರದ ವಿಷಯವನ್ನು ನಿಮ್ಮೆಲ್ಲರಿಗೆ ತಿಳಿಸಿರಬೇಕು. ಅದರ ಕಾರಣವಾಗಿ ಸಾಧಕ-ಬಾಧಕ ವಿಚಾರಮಾಡಿ, ಅಖೇರ ನಿರ್ಣಯಕ್ಕೆ ಬಂದಿದ್ದೇನೆ. ಮತ್ತು ಆಸ್ತಿಯ ವಿಷಯದಲ್ಲಿ ಈ ರೀತಿಯಾಗಿ ವ್ಯವಸ್ಥೆ ಮಾಡಿದ್ದೇನೆ. ಮ. ರಾ. ರಾ. ನಾಈಕ ವಕೀಲರಿಗೂ ಅದೇ ಪ್ರಕಾರ ತಿಳಿಸಿದ್ದೇನೆ. ನೀನು ಅವರನ್ನು ಜರೂರ ಭೆಟ್ಟಿಯಾಗಿ ಅವರ ಹೇಳಿಕೆಯ ಪ್ರಕಾರ ನಡೆಯಬೇಕು.

ವಾಡೆಯ ಹಾಗೂ ದೇವಸ್ಥಾನದ ಆಸ್ತಿಯ ಕಾರಭಾರದಲ್ಲಿ ಚಿ. ಶ್ಯಾಮ ಹಸ್ತಕ್ಷೇಪ ನಡೆಸಿದ್ದು ತಿಳಿಯಿತು. ಭತ್ತದ ಸುಗ್ಗಿಯ ಹೊತ್ತಿಗೆ ನಿನಗೂ ಅವನಿಗೂ ಮನಸ್ತಾಪವಾದ ವಿಷಯವೂ ತಿಳಿಯಿತು. ಅವನಿಗೆ ಹಸ್ತಕ್ಷೇಪಮಾಡಲು ಯಾವ ಅಧಿಕಾರವೂ ಇಲ್ಲ. ಕಾಯದೇಶೀರ ರೀತಿ ಯಿಂದ ನಾನು ಅವನಿಗೆ ಕಾರಭಾರು ಮಾಡಲು ಅಧಿಕಾರವನ್ನು ಕೊಟ್ಟಿಲ್ಲ.

ಈಗ ಅವನು ಚಿ. ತಮ್ಮಾಜಿ ಹಾಗೂ ನಬೀಸಾಬನ ಜಮೀನುಗಳನ್ನು ತಾಬೇದಲ್ಲಿ ತೆಗೆದುಕೊಂಡು ಸ್ವಂತ ಸಾಗುವಳೀ ನಡೆಸಿದ್ದಾನಂತೆ. ಆ ರೀತಿ ಮಾಡಲು ಅವನು ಸರ್ವೇಸರ್ವಾಧಿಕಾರಿಯಾಗಿದ್ದಾನೆ. ಆದರೆ ತನ್ನ ಕೆಲಸದ ಸಲುವಾಗಿ ಅವನಿಗೆ ವಾಡೆಯ ಆಳು-ಕಾಳು, ದನ-ಕರಗಳನ್ನು ಉಪಯೋಗಿಸಲು ಬರುವದಿಲ್ಲ. ಅವನು ಈಗ ಉಪಯೋಗಿಸುತ್ತಿರುವದು ಅಕ್ಷಮ್ಯ ಅಪರಾಧ. ವಾಡೇ – ಅದರ ಆಸ್ತಿಪಾಸ್ತಿ ದೇವಸ್ಥಾನದ್ದು. ಶ್ರೀಮಂತರದು. ಅದರ ಉಪಯೋಗವನ್ನು ನಾವು ಮಾಡುವದು ಕೃತಘ್ನತನದ್ದು. ತಂದೆ-ಮಕ್ಕಳಲ್ಲಿ ವಿತುಷ್ಟಿ ಉತ್ಪನ್ನವಾಗಬಾರದೆಂದು ನೀನು ಈ ಮಾತನ್ನು ನಮಗೆ ತಿಳಿಸಿಲ್ಲ. ಆದರೆ ದೇವಸ್ಥಾನದ ಹೆಸರಿನಲ್ಲಿಯ ಅರ್ಧ ಜಮೀನುಗಳನ್ನು ಗೌಡರು ಸಾಗಿಸುತ್ತಿದ್ದು, ಅವುಗಳನ್ನು ತನಗೆ ಬಿಟ್ಟು ಕೊಡಬೇಕೆಂದು ಚಿ. ಶ್ಯಾಮು ಅವರಿಗೆ ತಗಾದೆ ನಡೆಸಿದ್ದಾನಂತೆ. ಈ ಪ್ರಯುಕ್ತ ಅವರು ನನಗೆ ಬರೆದಿದ್ದಾರೆ. ಅದು ಶಕ್ಯವಿಲ್ಲ. ಅವನು ಸ್ವಂತ ಸಾಗುವಳಿಯನ್ನು ಮಾಡಿಕೊಳ್ಳುತ್ತಿದ್ದರೆ, ತನ್ನ ಮಾಲ್ಕೀ ಜಮೀನುಗಳನ್ನು ಮಾಡಿಕೊಳ್ಳಲಿ. ತನ್ನ ಆಳು-ಕಾಳು ಬಿರಾಡದ ವ್ಯವಸ್ಥೆಯನ್ನೂ ಮಾಡಿಕೊಳ್ಳಲಿ. ಅವನಿಗೆ ವಾಡೆಯಲ್ಲಿ ಇರುವ ಅಧಿಕಾರವಿಲ್ಲ. ನೀನು ಮುಂಚಿನಂತೆ ಕಚೇರಿಯನ್ನು ವಾಡೆಗೆ ಬದಲಿಸಬೇಕು. ಸರ್ವ ದೇಖರಖಿಯನ್ನು ಅಲ್ಲಿಂದಲೇ ಸಾಗಿಸಬೇಕು. ಕಮತಿಗ್ಯಾ ನಿನ್ನ ಮದತಿಗೆ ಇದ್ದೇ ಇರುತ್ತಾನೆ. ದೇವಸ್ಥಾನದ ಜಮೀನುಗಳ ಸಾಗುವಳಿ ಈಗ ಇದ್ದಂತೆಯೇ ನಡೆಯಬೇಕು. ಯಾವ ರೈತನೂ ತಾನೇ ಒಲ್ಲೆನ್ನುವ ತನಕ ಅವನನ್ನು ಬಿಡಿಸಬಾರದು. ಮತ್ತು ನನ್ನ ಸ್ವಂತ ಸಾಗುವಳೀ ಕೆಳಗಿದ್ದ ಜಮೀನುಗಳನ್ನು ಹೊಸದಾಗಿ ಯಾರಿಗೂ ಲಾವಣೀತರೀಕ ಹಚ್ಚಬಾರದು.

ನನ್ನ ಸ್ವಂತ ಆಸ್ತಿಯ ಸಾಗುವಳಿಯ ಬಗ್ಗೆ ತಿಳಿಸುವದೇನಂದರೆ, ಊರ ಮುಂದಿನ ತೋಟ ಹಾಗೂ ಗಿರಿಜಾನ ಹೆಸರಿನಲ್ಲಿದ್ದ ಎರಡು ನಂಬರಗಳನ್ನು ನೀನು ಕಾಯಂತರೀಕ ಮನೆಯಿಂದ ಸಾಗಿಸಿಗೋ. ಅದರ ಇನಾಮೀ-ಪತ್ರವನ್ನು ಮ.ರಾ.ರಾ. ಶ್ರೀ. ನಾಈಕ ವಕೀಲರು ಮಾಡುತ್ತಾರೆ. ಅದರಂತೆ ಹಕ್ಕ-ರಜಿಸ್ಟರದಲ್ಲಿ ಪಾಣೀ ನಿನ್ನ ಹೆಸರಿಗೆ ಮಾಡಿಸಬೇಕು. ಕೆರಿಯ ಕೆಳಗಿನ ತರೀ ಜಮೀನು ಹಾಗೂ ತೆವರಿನ ಹೊಲದ ಎಲ್ಲಾ

ಉತ್ಪನ್ನವನ್ನು ಪ್ರತಿವರ್ಷ ಗೋವಿಂದಭಟ್ಟನಿಗೆ ಮುಟ್ಟಿಸಬೇಕು. ಅವನ ಮನೆತನಕ್ಕೆ ಇದರ ಉತ್ಪನ್ನ ಸದಾಕಾಲ ನಡೆಯುವ ವ್ಯವಸ್ಥೆ ಮಾಡಿದ್ದೇನೆ. ಉಳಿದ ಹೊಲಗಳ ಉತ್ಪನ್ನ ಹಾಗೂ ಗೌಡರ ಪೇಢಿಯಲ್ಲಿದ್ದ ಮುದ್ದತೀ ಠೇವಿನ ಹಣದ ಬಡ್ಡಿಯನ್ನು ಪುಣೆಗೆ ಕಳಿಸುತ್ತಿರಬೇಕು. ನನ್ನ ಸ್ವಾರ್ಜಿತ ಆಸ್ತಿಯ ವಿಲೇವಾಟದ ಅಧಿಕಾರ ಕೇವಲ ನನಗೇ ಇರುವದರಿಂದ ಅದರಲ್ಲಿ ಯಾರದೂ ಹಸ್ತಕ್ಷೇಪ ನಡೆಯಲಾರದು. ತಿಳಿಯಬೇಕು.

ಪೂಜ್ಯ ಸ್ವಾಮಿಗಳ ಸನ್ನಿಧಾನಕ್ಕೆ ಈ ಪತ್ರವನ್ನು ಒಪ್ಪಿಸಿ ಅವರ ಆಶೀರ್ವಾದದ ಪ್ರಕಾರ ನಡೆಯಬೇಕು. ಮ.ರಾ.ರಾ. ಶಿವಲಿಂಗಪ್ಪಗೌಡರಿಗೂ ತಿಳಿಸಬೇಕು. ಚಿ. ಶ್ಯಾಮನನ್ನು ಕರೆಸಿ, ಸಾಧ್ಯವಾದರೆ ಅವನಿಗೆ ಅಪ್ಪಣೆಯನ್ನು ಕೊಡಿಸಬೇಕೆಂದು ಸ್ವಾಮಿಗಳಿಗೆ ಅರಿಕೆಮಾಡಿಕೊಳ್ಳಬೇಕು. ಅವರಿಗೆ ಶಿ. ನ. ಗಳನ್ನು ತಿಳಿಸಬೇಕು.

ಪೀಕ-ಪಾಣಿಯ ಬಗ್ಗೆ ಬರೆಯಬೇಕು.

ಇಂತೀ,

ಗಣಪತ ಬಳವಂತರಾವಜೀ ಪಂತ.

ತಾ. ಕ. ನಾವು ಪುಣೆಗೆ ಬಂದಾಗಿನಿಂದ ಇರುತ್ತಿದ್ದ ಬಂಗಲೆಯನ್ನು ಅದರ ಮಾಲಿಕರು ಮಾರಾಟಕ್ಕೆ ತೆಗೆದಿದ್ದರು. ಮನೆ, ನನಗೂ – ಚಿ. ಕು. ಸೌ. ಸೋನಕ್ಕಹಾಗೂ ಹುಡುಗರ ಮನಸ್ಸಿಗೂ ಬಂದಿತ್ತು. ಮೊನ್ನೆ ೨೦,೦೦೦ಕ್ಕೆ ಖರೀದಿ-ಪತ್ರವಾಯಿತು. ಚಿ.ಕು.ಸೌ. ಸೋನಕ್ಕನ ಹೆಸರಿನಲ್ಲಿ ಖರೀದಿ-ಪತ್ರ ಮಾಡಿಸಿದೆ. ಪುಣೆಯಲ್ಲಿ ಒಂದು ಮನೆಯಾದ ಸಮಾಧಾನ ಅನಿಸಿತು.

ಅಪನವರು ಕಣ್ಣು ಮುಚ್ಚಿ ತದೇಕಚಿತ್ತರಾಗಿ ಪತ್ರವಾಚನವನ್ನು ಆಲಿಸುತ್ತಿದ್ದರು. ವಾಚನ ಮುಗಿದರೂ ಕಣ್ಣು ಬಿಡಲಿಲ್ಲ. ಓದು ಮುಗಿಸಿದ ರಾಚಪ್ಪ

ಕೇಳುತ್ತಿದ್ದ ಇನ್ನೊಬ್ಬ ಶ್ರೋತಾ, ಗೋವಿಂದಭಟ್ಟ, ಸ್ವಾಮಿಗಳ ಮೌನಕ್ಕೆ ಭಂಗ ತಾರದೆ ಅವರು ಅಪ್ಪಣೆ ಕೊಡಿಸುವ ದಾರಿಯನ್ನು ಉತಾವಿಳರಾಗಿ ಕಾಯ ತೊಡಗಿದರು.

"ಕಾಕಾನ ರುದ್ರವೀಣಾ ಮಿಡೀತು, ಗೋವಿಂದಭಟ್ಟ. ಕಾಕಾ, ಅಖಂಡ ಜೀವನಾ ಈ ಕ್ಷುರಸ್ಯ ಧಾರಾ ನಿಯಮ ಪಾಲಿಸಿಗೋತ ಬಂದಿದ್ದರು. ದೇವಸ್ಥಾನದ ಆಸ್ತೀ ಉಪಯೋಗಾ-ಉಪಭೋಗಾ ಎಂದೂ ಅವರು ಸ್ವಂತದ್ದಶಿಂದ ಮಾಡ ಕೋಳಲಿಲ್ಲಾ. ವಾಡೇ-ದೇವಸ್ಥಾನಾ ಶ್ರೀಮಂತರದು ಖರೇ. ಅವರು ಹೋದ ಮ್ಯಾಲೂ, ಇದು ಅವರ ಹೆಸರ್ಲೆ ನಡೀಲಿ ಅನ್ನೂ ನಿಷ್ಠಾದಿಂದ, ಅದನ್ನ ತಮ್ಮ ಸ್ವಂತ ಮಾಲ್ಕೀಹಕ್ಕ ಮಾಡಕೊಳ್ಳಲಾರದೆ ಸಾಗಿಸಿಗೋತ ಬಂದರು. ಶ್ರೀಮಂತರು ಹೋದರೂ, ಅವರು ನಿಂದರಿಸಿದ ಗುಡೀ, ಕಟ್ಟಿದ ಊರಾ ಹೋಗಲಿಲ್ಲಂತ, ಆ ಊರ ದೈವತದವರನ, ಜಾತೀ-ಜಮಾತೀ ನೋಡದs ಪಂಚರಂತ ಮಾಡಿ ದರು. ಕಾಕಾ ಒಂದ ದಿನಾ ಏನು ದೇವಸ್ಥಾನದ ಆಸ್ತೀ, ದನಾ-ಕರಾ, ಆಳು ಕಾಳಿಗೆ, ಸ್ವಂತ ಸಾಗುವಳೀದಶಿಂದ ಕೈ ಹಚ್ಚಲಿಲ್ಲಾ. ಅವರ ಸ್ವಂತ ಆಸ್ತೀ ಸಾಗುವಳೀ, ಗಿರಿಜಾನ ಮುನ್ಯಾಗಿನ ಧಾಬೇದಾಗ ಕಟ್ಟಿದ ಎಂಟ ಎತ್ತಿನ ಮ್ಯಾಲs ನಡೀತು. ಬಿತ್ತೂ ತತೀಗೆ, ಸುಗ್ಗೀಹೊತ್ತಿಗೆ, ಗೌಡರ ದನಾ ಇಲ್ಲs ಬಾಡಗೀ ದನಾ ತಂದು ಸಾಗುವಳೀ ಸಾಗಸಬೇಕು. ಈಗ ಶ್ಯಾಮಾ ಅದರ ಗೈರಫಾಯದೇ ತಗೊಂಬೂದು ನೋಡಿ, ಅವರು ಖವಳಾಸಿರೂದು ಸಹಜೀಕನs ಅದs. ಬಸವ ಣ್ಣನ ಗುಡೀ ಕಟ್ಟಾಗ, ತಿಂಗಳಾನಗಟ್ಟಲೇ, ವಾಡೇದ ಎತ್ತಾ-ಗಾಡೀ ಗುಡ್ಡ ದಿಂದ ಕಲ್ಲ ತಂದ್ವು. ಯಾಕ ರಾಚೋಟಿ? ವಾಡೇ ಊರವರದು. ಬಸವಣ್ಣಾ ಊರ ದೈವತಾ. ಊರ ದೈವತಕ್ಕ ವಾಡೇದ ಸೇವಾ ಇರಲಿ ಅಂತ ಹಾಂಗ ಮಾಡಿ ದರು. ಈಗ ಶ್ಯಾಮುನದಶಿಂದ ಕಾಕಾ ಏನ ಬರದಾರ, ಅದರಾಗಿನ ಅಕ್ಷರ ಅಕ್ಷರ ಸತ್ಯ ಅದs. ಶ್ಯಾಮುನ ಮ್ಯಾಲಿನ ಈರ್ಷಾದಿಂದ ಅವರು ಈ ರೀತಿ ಬರದಿಲ್ಲಾ. ಈ ಪೃಥಾ ಕೆಟ್ಟಾ, ಇದಕ ಈಗs ಇಷ್ಟು ಅವಕಾಶ ಕೊಟ್ಟರ ಅದು ಹೊಗೀಹಾಂಗ ಮನೀ ತುಂಬೇ ವ್ಯಾಪಿಸೀತು ಅನ್ನೂ ಧೋರಣಾದಿಂದ ಬರದಾರ. ಒಂದು ಎಳಿ ನುಂಗಲಿಕ್ಕೆ ಅನುವು ಆತಂದರ, ಶ್ಯಾಮಾ, ಇಡೀ ಹಚಡಾನs ನುಂಗ್ಯಾನು ಅನ್ನೂ ಅಂಜಿಕಿ ಅವರಿಗೆ. ಕಾಕಾ ತಗೊಂಡ ಕಾಳಜೀ ರಾಸ್ತ ಅದs. ಸರ್ವಮಾನ್ಯನೂ ಅದs. ಇದರ ದಶಿಂದ ಶ್ಯಾಮುಗ ಹೇಳಲಿಕ್ಕೆ ಏನೂ ಅಂಜಿಕಿಲ್ಲಾ. ನಾನು ಆ

ಜವಾಬ್ದಾರೀ, ಕಾಕಾನದಶಿಂದ ಪೈಮ್ಯಾಲ ತಗೋತೀನಿ. ನೀ ಝುಲ್ಲ ಬಿಡೂ ರಾಚೋಟಿ.

ಇನ್ನ ಕಾಕಾ ಅವರ ಸ್ವಂತ ಮಾಲ್ಕೀ ಭೂಮೀ ವಿಲೇವಾಟಾ – ಅದರ ವ್ಯವಸ್ಥಾ ಅವರಿಗೆ ರಾಸ್ತ ಕಂಡ ರೀತೀಲೇ ಮಾಡೂದಕ್ಕ ಅವರಿಗೆ ಅಧಿಕಾರ ಅದ. ಶ್ಯಾಮಾ ಅದಕ್ಕ ಅಡ್ಡಬರೂ ಕಾರಣs ಇಲ್ಲಾ. ಬಂದರೂ ಅವಂದೇನೂ ನಡಿಯೂದೂ ಇಲ್ಲಾ. ಅದನ್ನ ಅಂವಗ ತಿಳಸೂ ಜರೂರೀನೂ ಇಲ್ಲಾ. ಶ್ಯಾಮುಗ ಹ್ಯಾಂಗ ಇದನ್ನೆಲ್ಲಾ ಹೇಳೂದು, ಅನ್ನೂ ಪಂಚೇತೀಯಿಂದ ನೀವು ನನ್ನ ಕಡೇ ಬಂದೀರಿ. ಆ ಭಾರಾ ನಂದು. ಅದರ ಕಾಳಜೀ ಬಿಡಿರಿ."
ಸ್ವಾಮಿಗಳು ಸಮಸ್ಯೆ ಬಿಡಿಸುವ ವಿಚಾರದಿಂದ ಹೇಳಿದರು.

"ಅಪನವರು ಊರ ಕ್ಷೇಮದ ದೃಷ್ಟಿಯಿಂದ, ಕಾಕಾಅವರ ಮ್ಯಾಲಿನ ಪ್ರೀತಿಯಿಂದ, ಈ ಭಾರಾ ಹೊರತಾರ ಅನ್ನೂ ಭರೋಸ ಇತ್ತ ನಮುಗ. ಅಧಿಕಾರ ವಾಣಿಯಿಂದ ಶ್ಯಾಮರಾಯುಗ ಅಪಣೀ ಕೊಡಸ್ತಾರನ್ನೂ ಭರೋಸನೂ ಅದs. ಆದರ ನಾಳೆ ಈ ಮಾತು, ನೀವು ಶ್ಯಾಮರಾಯನ್ನ ಕರಸಿ ಹೇಳಿದಿರಿ; ಅಂವಾ ಅಮಾನ್ಯಮಾಡಿ, ಊರಾಗೆಲ್ಲಾ ಇದರ ಕಿತಬೀ ಮಾಡಕೋತ ಹೊಂಟಾ; ಅಪನವರಿಗೆ ನಮ್ಮ ಮನೀ ಪಂಚೇತಿ ಯಾಕs ಅಂತ ಭರಾಸಿಗೋತ ಹೊಂಟಾ, ಅಂದರs, ಪಂತಕುಟುಂಬದಾಗಿನ ಛಿದ್ರಾ ಊರವರಿಗೆ ಕಂಡೀತು. ಮನೀ ಒಳಗ ಹೊತ್ತಲಿಕ್ಕೆ ಹತ್ತಿದ ಕಿಚ್ಚಿನ ಝಳಾ ಊರಿಗೂ ತಾಕೀತು, ಅನ್ನೂ ಭಯಾ ನಮುಗ. ಕಾಕಾ ಅವರ ಹಯಾತೀ ಒಳಗs ಆ ಕುಟುಂಬ ಒಡೀಬಾರದು, ಅದರ ನಾಲಾಯಖೀ ಆಗಬಾರದು ಅನ್ನೂ ಸಂಕಟಾ. ಶ್ಯಾಮರಾಯುಗ ದುಡ್ಡಿಂದು, ದೊಡ್ಡವರ ವಶೀಲೀದು, ಘಮೆಂಡೀ ಅದs. ಊರಾಗಿನ ಲಫಂಗರದು ಬೆಂಬಲ ಅದs. ಕಾಕಾ ಊರಾಗಿದ್ದರು. ಯಾವನರs ಕಂಯಿ-ಕುಂಯಿ ಅಂದಿದ್ದರ ಅವರ್ನ ಮೆಟ್ಟೂ ತಾಕತ್ತ ಇದ್ದಾವರಿದ್ದರು. ಇಂದ ಅವರೂ ಇಲ್ಲಾ. ಈ ರಿಕಾಮ್ ಚೋಟ ಮಂದೀಗೆ ಊತ ಬಂಧಾಂಗ ಆಗೇದ. ತ್ಯಾಪೀ ಬಸಗೋಂಡಾ, ನಮ್ಮ ಇರಬಸಯ್ಯಾ, ನಬೀಸಾಬಾ, ಕಾಕಾ ಇರೂ ಮುಂದs ಹಾರ್‍ಯಾಡಿದವರು. ಕಾಕಾ ಅವರ ಉಸಾಬರಿಗೆ ಬರತಿದ್ದಿಲ್ಲಾ ಅಷ್ಟs. ಈಗ ಅವರು ಬಿಡಾಡಿ ದನಾ ಆಧಾಂಗ ಆಗ್ಯಾರ. ಬೇಭಾನ ಆಗ್ಯಾರ. ಶ್ಯಾಮರಾಯಾ ಅವರಿಗೆ ಅಷ್ಟಿಷ್ಟು ಕಂತ್ರಾಟವ ಕೆಲಸಾ ಬ್ಯಾರೇ ಕೊಡಿಸ್ಯಾನ. ರಸ್ತೇದ ಮ್ಯಾಲs ಹತ್ತ ಬುಟ್ಟಿ ಗರಸ ಒಗೆಯೂದು,

ಅಷ್ಟು ಖಡೀ ಕೂಡಸೂದು. ನಾಕ ಆಳ ಇಟ್ಟು ಮಾಡತಾರ. ಹತ್ತ ಆಳಿನ ಕೂಲೀ ಬಗಲಿಗೆ ಹಾಕತಾರ. ಮಜಾ ಮಾಡಲಿಕ್ಕೆ ಬಿನ್-ಶ್ರಮದಲೇ ರೊಕ್ಕ ಸಿಗತದ. ಕಾಕಾ ನಾಕ ಅಣೇ ರೊಕ್ಕಾ ಕೊಡಬೇಕಾದರ, ಗುಂಜಿತೂಕ ಭಂಗಾರ ಒತ್ತೀ ಇಡೂ ಅಂತಿದ್ದರು, ಅಂತ ಊರಾಗ ಹೇಳಕೋತ ಅಡ್ಡ್ಯಾಡಲಿಕ್ಕೆ ಹತ್ತ್ಯಾರ. ಕಾಕಾ ಕಿಶೇದಾಗಿನ ರೊಕ್ಕಾ ಕೊಡತಿದ್ದರು. ಶ್ಯಾಮರಾಯನ್ಹಾಂಗ ಸರಕಾರೀ ಖಜಾನಿಗೇ ಭೋಕ ಹೊಡೀತಿದ್ದಿಲ್ಲಾ, ಅನ್ನೂದು ಮಂದಿಗೆ ತಿಳಿಯೂದಿಲ್ಲಾ.

ಇದs ಕಾವಿನ್ಯಾಗ, ಶ್ಯಾಮರಾಯನ್ನ ವಾಡೇ ಬಿಡಿಸಿದರ ಹೊತ್ತೂ ಕಿಚ್ಚಿನ್ಯಾಗ ಹುಲ್ಲ ಹಾಕಿಧಾಂಗ ಆಗೂದು. ಶ್ಯಾಮರಾಯಗ ಆಯತಾ ಅನಕೂಲ ಪ್ರಸಂಗನs ತಂದುಕೊಟ್ಟಹಾಂಗ ಆಗತದ. ಅದಕ, ನಾ ಏನು ಅನೂದಂದ್ರs. ಕಾಕಾನs ಥ್ವಾಡೇ ದಿನಾ ದಮ್ಮ ತಿನಬೇಕು. ನಮತೇ ಧೋರಣಾ ವಹಿಸಬೇಕು. ತನಗ ಪ್ರತಿಕಾರನs ಇಲ್ಲಾ ಅಂತ ಶ್ಯಾಮರಾಯಗ ಅನಿಸಿದರ ತಾನs ನರಮ್ ಆಗತಾನ. ಇಲ್ಲs, ಕಾಕಾನೇ ಬಂದು ವಾಡೇದಾಗ ನಿಂದರಬೇಕು. ಅಂದರ, ಶ್ಯಾಮರಾಯನ ಉತ್ಥಾಪನಾ ತಂತಾನs ಆಗತದ. ಅಪನವರದು ಏನ ಅಂಬೋಣ ಇದಕ್ಕs?"

ಗೋವಿಂದಭಟ್ಟ ಹೇಳಿದ.

"ಕಾಕಾ ಬಂದು ವಾಡೇದಾಗ ನಿಂತರ ಭಂಗಾರs ಆಗತದ ಅನೂದು ನಿರ್ವಿವಾದ ಅದs ಗೋವಿಂದಭಟ್ಟ. ಆದರ ಅವರು ಬರೂದು ಅಶಕ್ಯನs ಅದ. ಸಾರಸಾರ ವಿಚಾರಮಾಡೇ ಈ ರೀತೀ ಪತ್ರಾ ಬರದಾರ. ಕಾಕಾ, ಬೀಳೂ ಗಿಡಕ ಆಸರ ಕೊಡದs. ಚಿಗಿಯೂ ಬಳ್ಳಿಗೆ ಆಧಾರ ಆಗಿ ಪುಣೇದಾಗ ನಿಂತಾರ. ನಾಕ ಹುಡುಗೂರ ಶಿಕ್ಷಣಾ, ಸೋನಕ್ಕನ ಅಗತಿಕ ಜೀವನಾ, ಆ ಹುಡುಗೂರ ಮುಂಜಿವಿ-ಮದಿವಿ, ಈ ಮುಪ್ಪಿನ್ಯಾಗ ಅವರ ಕೊಳ್ಳಿಗೆ ಬಿದ್ದಾವ. ಈ ಹಳ್ಳಿ – ಇವರ ಸಂಕುಚಿತ ಜೀವನಾ, ಕಾಕಾ-ಶ್ಯಾಮುನ ತಲೀ ತನಕಾ ದಕ್ಕಿತು. ಕಾಲಾ, ಭರಾಟೀಲೇ ಬದಲಾಕ್ಕೋತ ನಡದ್ವದ. ನೀ, ನಿನ್ನ ಹುಡುಗೂರಿಗೆ, ಇಂಗ್ರೇಜಿ ವಿದ್ಯಾ ಬರದಿದ್ದರ ನಡಿಯೂದಿಲ್ಲಂತ ಶಾರದಾಗ ಇಟ್ಟೀ. ಗೌಡರೂ ಹಾಂಗs ಮಾಡಿದರು. ನಿನ್ನ ದಾದಲ್ಯಾ ಮುಂದ ಬಂದಾ. ಜೀವನಕ್ಕ ಅನ್ನಾ-ನೀರಾ ಅಗತ್ಯ ಇದ್ಧಾಂಗ ವಿದ್ಯಾನೂ ಅಗತ್ಯದ. ಈ ಊರ ಆಶಾ, ಕಾಕಾ ತಮ್ಮ ದಶಿಂದ ಬಿಡದಿದ್ದರೂ, ಆ ಕೂಸಗೋಳ ದಶಿಂದ ಬಿಡಬೇಕಾಗೇದ. ಅದರಾಗೂ ಅವರದು

ಅಪಾರ ತ್ಯಾಗನs ಅದ. ಇಲ್ಲೇ ಹುಟ್ಟಿ ಬೆಳದ ಮನಸ್ಯಾಗ, ಇಲ್ಲೀ ಮಣ್ಣಿಂದು – ಇಲ್ಲೀ ನೀರಿಂದು, ವಾಸನಾ ಸತ್ತರೂ ಬಿಟ್ಟದ್ದಲ್ಲಾ.

ಈ ಮಠದಾಗ ಹಿರೇ ಅಪನವರು ಇದ್ದಾಗ, ನನ್ನ ಕಾಶಿಗೆ ಕಳಿಸಿದರು ವಿದ್ಯಾರ್ಜನಕ್ಕ. ಮಠದ ನಿರ್ಲಿಪ್ತತನಾ ಅಷ್ಟರಾಗs ಮೈ ಉಂಡಿತ್ತು. ಆದರೂ ಗೋವಿಂದಭಟ್ಟ, ಹೇಳತೀನಿ, ಇಲ್ಲಿಂದ ಹೊರಡಾಗ, ಯಾರಿಗೂ ತಿಳೀಧಾಂಗ ಐದ ಮುಟಿಗಿ ಮಣ್ಣು ಮುಚ್ಚಿ ಒಯ್ದಿದ್ದೆ. ನನಗ ಏನರs ಆದರ, ಆಗಿ ಅಲ್ಲೇ ದೇಹ ಇಟ್ಟರ, ನನಗ ಮಣ್ಣ ಆಗೂ ಮುಂದ, ಈ ನನ್ನ ಊರಿಂದು, ಈ ಐದ ಮುಟಗೀ ಮೃತ್ತಿಕಾ ಹಾಕಿ ಅದರ ಮ್ಯಾಲ ನನ್ನ ಕೊರಡ ದೇಹಾ ಇಡರಿ ಅಂತs ಅಲ್ಲೀ ನನ್ನ ಸಹಪಾಠಿಗೋಳಿಗೆ ತಿಳಿಸಿ ಇಟ್ಟಿದ್ದೆ. ಆ ಮೃತ್ತಿಕಾ, ನಿತ್ಯ ಕಣ್ಣಿಗೆ ಒತಿಗೋತಿದ್ದೆ. ಕಾಕಾಗೂ ಇಂಥಾ ವಾಸನಾ ಇಲ್ಲಾ ಅಂತ ಅಲ್ಲಾ. ಆದರೂ ಆ ವಾಸನಾ – ಆ ಸ್ವಾರ್ಥಾ ಅಂತಿಮ ಕ್ಷಣಕ್ಕ ಬರೂ ಸ್ವಾರ್ಥಾ. ಬರಬೇಕಾದ ಸ್ವಾರ್ಥಾ. ಅದಕೂ ತರ್ಪಣ ಬಿಟ್ಟು ಕಾಕಾ ನಿಸ್ವಾರ್ಥೀಯಾಗಿದ್ದದ್ದು ತಮ್ಮ ದಶಿಂದಲ್ಲಾ, ಕುಟುಂಬದ್ದಶಿಂದ. ಅದರ ಕ್ಷೇಮದ್ದಶಿಂದ. ನಾನು-ಗೌಡರು ಅವರಿಗೆ ಎಡಗೈ-ಬಲಗೈ ಇದ್ದೇವು. ರಾಚೋಟಿ ಕೇವಲ ಹೃದಯನs ಇದ್ದಾನ. ಇದರ ಠಾಂವಿಕಿ ಅದs ಅವರಿಗೆ. ಅದಕs ಈ ಭಾರಾ ನಮ್ಮ ಮ್ಯಾಲ ಹಾಕ್ಯಾರ.

ಇಂದ ರಾಚೋಟಿಗೆ ಬಂದ ಪಂಚೇತಿ, ಈ ಭಾರಾ ಹೊರೂದರದಲ್ಲಾ. ಅಂವಾ ಈ ಊರ ವೀರಭದ್ರಾ. ಆದರ ಅಂವಗ ಬಂದ ಪಂಚೇತಿ, ಕಾಕಾನ ಅಕಾಲಿಕ ದಾನಪತ್ರದ್ದು. ತನ್ನ ಹೆಸರಲೇ ಯಾಕ ಹೊಲಾ ಹಚ್ಚಿದರು. ನೀನೇ ಸಾಗಿಸಿಗೋ ಅಂತ ಯಾಕ ಬರದರೂ ಅನು ಪಂಚೇತಿ. ಗೋವಿಂದಭಟ್ಟ, ಕಾಕಾಗ ನೀನು ಭೀಷ್ಮ ಅಂತೀದಿ. ಅದು ಅಗದೀ ಖರೇ. ಧರ್ಮರಾಜಾ ಒಮ್ಮೆನ್ಯರs ಅಸತ್ಯ ನುಡದು ನರಕದರ್ಶನಾ, ಕ್ಷಣಮಾತ್ರ ಮಾಡಿಕೊಂಡಾ. ಕಾಕಾಗ ಆ ಅಸತ್ಯದ್ದು ಠಾಂವಿಕಿಲ್ಲಾ. ಅವರು ಒಮ್ಮೆ ಆಡಿದ ಮಾತು, ಕೊಟ್ಟ ವಚನಾ, ಹರಿಹರಬ್ರಹ್ಮ ಬಂದರೂ ತಿರಗಸಾವರಲ್ಲಾ. ಗಿರಿಜಾನ ಕಥೀ ನಿನಗ ಗೊತ್ತs ಅದಲ್ಲ. ನೀ ಬಾ, ನನ್ನ ವಚನ ಹೋತೂ ಅಂದರು. ಆಗ ಅವರಿಗೆ ಇನ್ನೂ ಇಪ್ಪತ್ತೈದರ ಹರೇ. ಲಕ್ಷ್ಮಣರಾವಜೀ ಬ್ರ ಅಲ್ಲಿಲ್ಲಾ. ಊರಾಗಿನ ಹಿರ್‍ಯಾರಿಗೆ ಎದರಿಗೆ ನಿಂತು ಯಾಕs ಅಂತ ಕೇಳೂ ಛಾತೀ ಇರಲಿಲ್ಲಾ. ಇದನ್ನ ಕೇಳಿದ ದಿನಾ, ನಮ್ಮ ಹಿರೇ ಅಪನವರು ನನಗ ಅಂದಿದ್ದರು: ತಮ್ಮಾ, ಮೂವತ್ತಮೂರು

ಕೋಟಿ ದೇವತಾಗೋಳ ಇದ್ದಾರ ಅಮೃತ ದಕ್ಕಿಸಿಗೋಳಲಿಕ್ಕೆ. ಒಂದ ಹಾಲಾ ಹಲಕ್ಕ ಅವನ್ಸ ಗತೀ. ರಾವಜೀ ಅಂಥಾ ಹುಡುಗಾ ಅಂತ್ಸ, ಅಪನವರ ಮಾತು ಆಶೀರ್ವಾದ ಆಧಾಂಗ ಆತು. ಗಿರಿಜಾಗ ಕೊಟ್ಟ ಮಾತು ಇಂದಿನ ಮಿತಿಗೂ ನಡಕೋತ ಬಂದ್ಸದ.

ರಾಚೋಟಿಗೆ ನಾ ಏನರ್ಸ ಕಾಯಂತರೀಕ ವ್ಯವಸ್ಥಾ ಮಾಡತೀನಿ ಅಂತಿದ್ದರು. ಈಗ ಏನ ಮಾಡ್ಯಾರ ಅದು ಅವರಿಗೆ ಶೋಬಸ್ತದ. ರಾಚೋಟೀ, ಈ ದಾನಾ, ಕಾಕಾಅವರು ನಿನಗ ಸೇವಾದ್ದಶಿಂದ, ನಿಷ್ಕಾಮದ್ದಶಿಂದ – ಮಾಡಿದ್ದಲ್ಲಾ. ಕೇವಲ ವಾತ್ಸಲ್ಯದ್ದಶಿಂದ. ಅದನ್ನ ನೀ ಸ್ವೀಕಾರ ಮಾಡೂದರಿಂದ ಅವರ ಆತ್ಮಕ್ಕ ಸಮಾಧಾನ ಅನಸತದ.

ಇಂದಿಲ್ಲ ನಾಳೆ, ಕಾಕಾಅವರು ಇಷ್ಟು ಮಾಡೇಮಾಡತಿದ್ದರು. ಅವರ ನಾಳೆ ಮಾಡೂದನ್ನ ಇಂದ್ಸ ಮಾಡಬೇಕಾದರ, ಅವರಿಗೆ ಶ್ಯಾಮುನ ಉಪದ್ವ್ಯಾಪದ ಸಂಶಾ ಬಂದ್ಸದ. ಅಂವಾ ನಾಳೆ, ಖಟ್ಲೆ-ಖೋಕಲೇ-ದಾವೆ-ಕಚೇರೀ ಅಂತ್ಸ ಎಳದಾಡ್ಯಾನು – ಅದರ ವ್ಯಾಧೀ, ತಮ್ಮ ಪಶ್ಚಾತ್, ಹುಡುಗೂರ ಬೆನ್ನಿಗೆ ಬ್ಯಾಡಾ ಅನ್ನೂ ದೂರದೃಷ್ಟಿಯಿಂದ, ಈ ವಿಲೇವಾಟ-ವ್ಯವಹಾರ ಮುಗುಸೂದು ಠೀಕಂತ ಮಾಡ್ಯಾರ. ಅವರು ಇಲ್ಲೆ ಇದ್ದರೂ ಅಷ್ಟು ಮಾಡೇಮಾಡತಿದ್ದರು.

ಅಪನವರಿಗೆ ಪಂತಕುಟುಂಬದಲ್ಲಿಯ ಸರ್ವ ವಿಷಯದ ಸೂಕ್ಷ್ಮ ಪರಿಚಯ ಇತ್ತು. ಕಾಕಾ ಅವರ ಸ್ವಭಾವದ ಅರಿವೂ ಇದ್ದಿತು. ಕಾಕಾ ಅವರ ಋಣಪರಿಹಾರ ರಾಚಪ್ಪನಿಗೆ ಇರಲಿಲ್ಲ. ಅವರು ಈ ದಾನಪತ್ರವನ್ನು ಮಾಡಿರದಿದ್ದರೂ ಅವನಿಗೆ ಋಣಮುಕ್ತಿ ಇರಲಿಲ್ಲ. ರಾಧಾಕಾಕೂ ಅವನಿಗೆ ಜೀವದಾನ ಮಾಡಿದ್ದರು. ಕಾಕಾ ಪ್ರೀತಿಯನ್ನು ಸೂರೆಮಾಡಿ, ಅವನ ಜೀವದ ಒತ್ತಿಯನ್ನೇ ಹಿಡಿದಿದ್ದರು. ಈ ಋಣ, ರಾಚೋಟಿಯ ತಲೆಗೇ ಮುಗಿಯಬಾರದೆಂದು ಅವರು ಈ ದಾನಪತ್ರ ಮಾಡಿರಬೇಕು. ಆದರೆ ಈ ದಾನಪತ್ರದಿಂದ, ರಾಚಪ್ಪನ ಕಲ್ಯಾಣವಾಗುವದಕ್ಕಿಂತ ಹೆಚ್ಚಾಗಿ ಕಾಕಾಅವರ ಅಕಲ್ಯಾಣವೇ ಹೆಚ್ಚಾಗಿ ಆಗುವ ಸಂಭವವಿತ್ತು. ತನಗೆ–ತನ್ನ ಮಕ್ಕಳಿಗೆ, ತಾವು ಗಳಿಸಿದ ಆಸ್ತಿಯ ಉಪಭೋಗ ಸಿಕ್ಕಿರಬಾರದೆಂಬ ಡಾವ್ ಹಾಕಿ, ರಾವಜೀಕಾಕಾ ಹೀಗೆ ಮಾಡಿರಬೇಕೆಂದು ಸಾರುತ್ತ, ಶ್ಯಾಮರಾಯ ಅವರ ನಾಲಸ್ತಿಯನ್ನು ಮಾಡುವ ಭೀತಿ ಇತ್ತು. ಆಡಿಕೊಳ್ಳುವ ನೂರು ಬಾಯಿಗೆ ಇಷ್ಟೇ ಅನ್ನ ಸಾಕು. ಅದೂ ಅಲ್ಲದೆ, ಶ್ಯಾಮರಾಯನನ್ನು ವಾಡೇ ಬಿಡಿಸಲಿಕ್ಕೆ

ಕಾಕಾ ತಿಳಿಸಿದ್ದರು. ಗೌಡರಿಗೆ ಹೊಲಗಳನ್ನು ಬಿಡಕೂಡದೆಂದು ಸಂದೇಶ ಕಳಿಸಿದ್ದರು. ಈಗ ಇದ್ದ ರೈತರನ್ನು ಬಿಡಿಸಕೂಡದೆಂದು ತಾಕಿತ್ತು ಮಾಡಿದ್ದರು. ಇದೆಲ್ಲ ಶ್ಯಾಮರಾಯನಿಗೆ ಬರಷಣವೇ ಆಗಿತ್ತು. ಅವನನ್ನು ವಾಡೆಯಿಂದ ಗುಳೇಕಿತ್ತಿಸುವದಂತೂ ತೀರ ಕಠಿಣವಾಗಿತ್ತು. ಈರ್ಷೆ ಮಸೆಯುತ್ತಿತ್ತು.

ಅಪನವರ ಮಾತೆಂದರೆ, ಕಾಕಾಅವರಿಗೆ ಬ್ರಹ್ಮವಾಕ್ಯ. ಆದರೆ ಶ್ಯಾಮರಾಯನಿಗೆ ಅದರ ದರಜಿರಲಿಲ್ಲ. ಅವರು ಕರೆಯಿಸಿದರೆ ಅವನು ಬಂದು ಭೆಟ್ಟಿಯಾಗುವ ಸಂಭವವೂ ಇರಲಿಲ್ಲ. ರಾಧಾಕಾಕೂನ ತಾಳಿ-ಬಳೆಯ ಪ್ರಕರಣದಲ್ಲಿ ಅವರ ಮಾತೂ ಹುಸಿಹೋಗಿದ್ದವು. ಗೌಡರು, ಊರಿನ ಅನಭಿಷಿಕ್ತ ಅಧಿಪತಿ. ಅವರು ಗರ್ಜಿಸಿದರೆಂದು ಅವನು ನರಮ್ ಆದ. ಅವನಿಗೆ ಈಗ, ಪರೆ ಬಿಟ್ಟ ಹಾವಿನಂತಾದ ಹಿರೇಮಠದ ಅಯ್ಯನವರ – ಆ ಮಠದ ಶಿಷ್ಯಗಣದ ಬೆಂಬಲವಿದೆ. ಚರಂತೀಮಠಕ್ಕೂ – ಹಿರೇಮಠಕ್ಕೂ ಪೂರ್ವ-ಪಶ್ಚಿಮ ನಾತೇ! ಚರಂತೀಮಠದ ಅಪನವರು, ಕಾಕಾ ಅವರ ಆಪ್ತ ಹಿತಚಿಂತಕರೆಂಬ ಒಂದೇ ಕಾರಣದಿಂದ, ತಮ್ಮ ಅವರ ಹಿಂದಿನ ವೈಮನಸ್ಸನ್ನು, ಇಂದು ಕೆದಕಿ ಉರಿ ಎಬ್ಬಿಸಲು, ಅವರು ಶ್ಯಾಮರಾಯನನ್ನು ಕೈಗೋಲು ಮಾಡಿಕೊಂಡಿದ್ದರು. ಗೌಡರಿಂದ ಹೊಲಗಳನ್ನು ಬಿಡಿಸಿಕೊಳ್ಳಲಿಕ್ಕೆ ಅವರೇ ಶ್ಯಾಮರಾಯನಿಗೆ ಪುಟುವು ಕೊಡುತ್ತಿದ್ದ ವಾರ್ತೆ ಗೌಡರಿಗೂ ಹತ್ತಿತ್ತು. ರಾಚಪ್ಪ, ಚರಂತೀಮಠದ ಅಯ್ಯನವರಿಗೂ ಗೊತ್ತಿತ್ತು. ಇದನ್ನು ಕುರಿತು ಅವರಲ್ಲಿ ಮಾತು-ಕತೆ ಆಗಿದ್ದವು. ಆದರೆ ಇವರಾಗಿ ಈ ವಿಷಯವನ್ನು ಕಾಕಾಅವರಿಗೆ ತಿಳಿಸಿದ್ದಿಲ್ಲ. ಇಲ್ಲಿಯೇ ನಿಸ್ತರಿಸಬೇಕೆಂದು ಮಾಡಿದ್ದರು. ಆದರೆ ಗೌಡರು ಈ ವಿಷಯುವನ್ನು ಕಾಕಾಅವರ ಕಿಂವಿಯ ಮೇಲಿಟ್ಟು ಎಲ್ಲಾ ಪ್ರಕರಣವನ್ನು ಘೋಟಾಳೇಕ್ಕೆಬ್ಬಿಸಿದ್ದರು.

ರಾಚಪ್ಪ ಅಪನವರ ಮಾತನ್ನು ಕೇಳಿಕೊಂಡ. ಅವರಿಗೆ ಎಲ್ಲ ವಿಷಯುದ ಮಾಹಿತಿ ಇರುವದರ ಖಾತ್ರೀ ಅವನಿಗಿತ್ತು. ಅವನು ನಿಧಾನವಾಗಿ –

"ಅಪನವರಿಗೆ ಎಲ್ಲಾ ಠಾಂವಿಕ್ಯದ. ಅವರು ಕೊಟ್ಟ ಅಪಣೆಗೆ ನಂದೇನೂ ನ ಇಲ್ಲಾ. ಆದರ ಶ್ಯಾಮರಾಯನ್ನ ವಾಡೇ ಬಿಡಸೂದ್ಸ ಕಠೀಣ ಅದ. ನಾ ಕಚೇರೀ ವಾಡೇಕ್ಕ ಒಯ್ದೆನಂದರ, ಮುದ್ದಾಂ ಹೀಂಗ ಮಾಡೀನಿ ಅಂತ್ಸ ಅಂವಾ ತಿಳಕೋತಾನ. ಮೊನ್ನೆ ಪಂಚಾಯತೀ ಚುನಾವಣೀ ಒಳಗ ನನಗ ಅಂವಗ ಒಂದಿಷ್ಟು ದುಸಮುಸಿನೂ ಆಗೇದ. ಈಗ ಪಂಚಾಯತೀನೂ ಅವರ ಕೈಯಾಗ್ಸ

ಆದ್ವ. ಶ್ಯಾಮರಾಯನ್ನ ವಾಡೇ ಬಿಡಿಸಿದರ ಎರಡ ಪಾರ್ಟೀನ್ವ ಆಗತಾವ ಊರಾಗ. ಕಲ್ಲು ಬೀಳಲಿಕ್ಕೆ, ಬಣವಿ ಸುಡಲಿಕ್ಕೆ, ತೆನೀ ಚಂಡಾಡಲಿಕ್ಕೆ ಸುರವ್ವ ಆಗತದ. ನನ್ನ ಹೆಸರಲೆ ಹೊಲಾ ಆದದ್ದು – ಗೋವಿಂದಭಟ್ಟಗ ಉತ್ಪನ್ನ ಹೋಗೂದು ಇದನ್ನ ಕೇಳಿದರಂತೂ ಸಾಕು, ಅವನ ಸಿಟ್ಟಾ ನೆತ್ತಿಗೇನ್ವ ಏರತದ. ಒಂದ್ವ ರಾಸ್ತ ಹಾದೀ ಅಂದರ, ಕಾಕಾ ಅವರು ತಾಂವೇ ಥ್ವಾಡೇ ದಿನಾ ಬಂದು ವಾಡೇದಾಗ ನಿಂದರಬೇಕು. ಘಾಳಿ ಬೀಸಿ ಬಂದರ ಹೊಗೀ ತಾನ್ವ ಹೊರಗ ಹೋಗೂಹಾಂಗ, ಶ್ಯಾಮರಾಯಾ ವಾಡೇ ಬಿಡತಾನ. ಒಂದ ಒರ್‍ಯಾಗ ಎರಡ ಕತ್ತಿ ಕೂಡೂದಿಲ್ಲ ಅಪನವರ್ವ. ಕಾಕಾ ಬಂದರ ಶ್ಯಾಮರಾಯಾ ಊರ್ವ ಬಿಡತಾನ."

"ರಾಚೋಟೀ, ಶ್ಯಾಮಾ ಈ ಊರ ಬಿಡಥಾಂಗನ್ವ ಪರಿಸ್ಥಿತೀ ಆಗೇದ. ಅದು ನಿನಗ ಗೊತ್ತಿಲ್ಲ ಕಾಣಸ್ತದ. ಅಲೀಕಡೆ ನಾಕಾರ ದಿನದಾಗ, ನಿಂದೂ ಗೌಡರದೂ ಭೆಟ್ಟೀನೂ ಆಥಾಂಗ ಕಾಣಸೂದಿಲ್ಲಾ. ನಿನಗ ಹೊಲಾ-ಮನೀ-ದೇವಸ್ಥಾನಾ, ಇವನ್ನ ಬಿಟ್ಟರ ಬ್ಯಾರೇ ಯಾತರ ಧ್ಯಾಸೂ ಇರೂದಿಲ್ಲಾ. ಯಾವ ಸುದ್ದೀದೂ ಪತ್ತೇ ಇರ್‍ಯಾಂಗಿಲ್ಲಾ. ಗೋವಿಂದಭಟ್ಟಾ, ಊರ ಕಾರಭಾರ ಮಾಡಿದರೂ, ಹೊಸಾ ಸುದ್ದಿ ತಿಳಿದಿರೂ ಆ ಬಾಬತ್ಯಾಗ ನಿನ್ನ ಜಾತೀಯವನ್ವ.

ಒಂದ ಮಜಾ ಹೇಳತೀನಿ ಗೋವಿಂದಭಟ್ಟಾ. ನಾ ಇದ್ವ ಮಠದಾಗ ಮರೀ ಇದ್ದೆ. ಠಾಂವಿಕಿರಬೇಕು ನಿಮಗ. ಒಮ್ಮೆ ಹಿರೇ ಅಪನವರು ನನ್ನ ಒಂದು ಊರಿಗೆ ಕರಕೊಂಡು ಹೋಗಿದ್ದರು. ಆ ಊರಾಗ ಒಂದು ದೊಡ್ಡ ದೇವಸ್ಥಾನಾ. ದೇವಸ್ಥಾನದಾಗ್ವ ಒಂದು ಭಾಂವಿ. ಗುಡೀ ಎದರಿಗೆ ಒಂದ ಹೊಂಡಾ. ಆ ಹೊಂಡದಾಗ ಒಂದ ನಿಂಬೀಕಾಯಿ ಒಗದರ, ಅದು ನೇಮಕೀ ಗುಡ್ಯಾಗಿನ ಭಾಂವ್ಯಾಗ ಏಳೂದು. ಆಗ ನನಗ ಬಲೇ ವಿಚಿತ್ರ ಅನಿಸಿತ್ತು ಅದು. ಶ್ಯಾಮ ಊರ ಬಿಡೂದಿಲ್ಲಾ ಅನ್ನೂದನ್ನ ಹೇಳಲಿಕ್ಕೆ ಈ ಕಥೀ ಹೇಳಬೇಕಾತು. ಊರಾಗಿನ ಹೊಂಡದಾಗ ನೀವು ಏನ್ವ ಒಗೀರಿ. ಅವು ಏಳಲಿಕ್ಕೆ ಒಂದ ಠಿಕಾಣ ಮಾಡ ಕೊಂಡಾವ. ಆ ಠಿಕಾಣಂದರ, ಈ ಮಠಾ! ಬೇಕಾರ ಅದು ಭಾಂವಿ ಅನ್ನು. ತಿಳಿ ನೀರೂ ಹರದ ಬರತದ. ರಾಡಿ ನೀರೂ ಹರದ್ವ ಬರತದ. ಅವರ ಉಪದೇಶಾ ಮಂದಿ ಕೇಳತಾರೋ ಇಲ್ಲೋ ಅನ್ನೂದು ಬ್ಯಾರೇ ಮಾತು. ಆದರ ವಿಧಿ-ನಿಷೇಧ ಇಲ್ಲದ್ವ ಅವರ ಕಿಂವೀಮ್ಯಾಲ ಎಲ್ಲಾ ಸುದ್ದೀ ಇಡೂದನ್ನ ಮಾತ್ರ

ತಪ್ಪದ ಮಾಡತಾರ. ಸ್ವಾಮಿಗೋಳು ಊರ ಹಿರ್‍ಯಾರು ಅನ್ನೂದಕಿಂತಾ ಎತ್ತಿ ದವರ ಕೂಸಾ ಅನ್ನೂದು ಠೀಕ ಕಾಣಸ್ತದ. ನಿಮುಗ ಹೇಳದ ಸುದ್ದೀ, ಗೌಡರು – ಕುಲಕರ್ಣೇ ರಂಗಣ್ಣಾ ಮೊದಲು ಇಲ್ಲೆ ವರದೀ ಮಾಡಿದರು. ನಾ, ನಾಕ ದಿನಾ ಊರಾಗ ಇರೂದಿಲ್ಲಾ. ರಾಚೋಟಿ – ಗೋವಿಂದಭಟ್ಟನ ಕಿಂವೀವ್ಯಾಲ ಈ ಸುದ್ದೀ ಇಡರಿ ಅಂತ ತಿಳಿಸಿಹೋದರು. ಅವರೂ ಇಂದ ಇಲ್ಲೇ ಇದ್ದರ ಠೀಕ ಆಗತಿತ್ತು. ತಾಂವs ಹೇಳತಿದ್ದರು.

ರಾಚೋಟೀ, ಶ್ಯಾಮುಗ ತ್ಯಾಪೀ ಬಸಗೋಂಡನ ಬೀಗತನಾ ಕೂಡೇದ. ಬಸಗೋಂಡಾ ಜಪ್ಪಿಸಿ ಕೂತಿದ್ದಾ. ಕಡೀಕೂ ಬಲೀ ಒಗದಾ. ಅವನ ತಂಗಿ ಬಸವಂತಿ ಶ್ಯಾಮುನ್ನ ಕೂಡ್ಯಾಳಂತ. ಗೌಡರಿಗೆ ಗೌಡಕೀ ಹ್ಯಾಂಗ, ಹಾಂಗ ಪೋಲೀಸ-ಪಾಟೀಲಕೀದೂ ಕಣ್ಣ ಅದs. ಕತ್ಲ್ಯಾಗೂ ಅವರಿಗೆ ಕಾಣಸ್ತದ. ಬಸಗೋಂಡಗ ತನ್ನ ತಂಗೀದು, ತನ್ನದು ಮಾನ-ಮರ್ಯಾದೀಕಿಂತಾ, ಸ್ವಾರ್ಥ ಹೆಚ್ಚಿಂದನಿಸಿತು. ಅಕೀ ವಾಡೇಕ್ಕ ಬಂದರ ಬೊಬ್ಬಾಟ ಆದೀತಂತ, ಶ್ಯಾಮುನs ಬಸಗೋಂಡನ ಮನೀಗೆ ಸರಿರಾತ್ರಿ ಆದವ್ಯಾಲ ಹರಕೀಹಾಕತಾನಂತ. ಗೌಡರು ಪಾಳತೀ ಇಟ್ಟು ಇದರ ತಪಾಸ ತಗದಾರ. ಪಂತಕುಟುಂಬಕ್ಕ ಉಪಪತ್ನೀ ಶಾಪನs ಅದs. ಅದು ಶ್ಯಾಮುಗೂ ಬಡಕೊಂಡಿತು. ಶ್ಯಾಮಾ ಇದ್ದs ಊರಾಗ ತಳಾ ಊರಲಿಕ್ಕೆ ಕಾರಣೇನಂದರ, ಅಕೀ ಹೊಟ್ಟೀಲೆ ಇದ್ದಾಳಂತ! ಬಸವಂತೀ ದಶಿಂದ ಹಿಂದಕ ರಗsಡ ಧಾಂದಲೇ ಆತು. ಅಕೀ ಇಲ್ಲಿಗೆ ಬರಾಗ, ಕೈಬೀಸಿಗೋತ ಬಂದಿದ್ಲು. ಬಂಜಿತನಾ ಬಂತಂತ ತನಗ ಒಗತಾನಗೇಡಿ ಆಗಿ ಬಂದಿದ್ಲು. ಅದು ನಿನಗೂ ಠಾಂವಿಕ್ಯದ. ಅಕೀ ಹೊಟ್ಟೀಲೆ ಇದ್ದದ್ದs ಖರೇ ಇದ್ದರ, ಶ್ಯಾಮುನ ಚಂಡಿಕಿ ಪೂರಾ ಅಕೀ ಕೈಯಾಗ ಸಿಕ್ಕಾಂಗ. ಗೌಡರು, ರಂಗಣ್ಣಾ ಇಬ್ಬರೂ ಈ ಮಾತು ಹೇಳಿದರು ಅಂತs ನಂಬಿದೆ. ವಾಡೇಕ್ಕ ಸಂಬಂಧಿಸಿದ ಸುದ್ದಿ ಅಂತs ಕಳವಳ ಆತು."

"ಶ್ರೀಹರೀ, ಶ್ರೀಹರೀ... ಶ್ರೀಹರೀ......"

ಗೋವಿಂದಭಟ್ಟ ತನಗೆ ಅಗಮ್ಯವಾದ ವಿಷಯವನ್ನು ಶ್ರೀಹರಿಯ ಕೊರಳಿಗೆ ಕಟ್ಟಿದ. ರಾಚೋಟಿ ಅವನತಮುಖಿಯಾಗಿ ಕುಳಿತ. ಅಲ್ಲಿಂದ ಅಪನವರು ತಾವೇ ಹೇಳಿದರು:

"ಕಾಕಾ ಈ ಊರಿಗೆ ಬರಬಾರದು ಅನ್ನೂದು ಈ ಕಾರಣದ್ದಶಿಂದ.

ಹೊಟ್ಟೀ ಮಗಾ, ಕೈ ಹಿಡದ ಹೇಣತಿನ್ನ ಬಿಟ್ಟು, ಹೊಸಾ ಸಂಸಾರ ಕಟಿಗೊಂಡು, ಈ ಊರಾಗ ಅವರ ಕಣ್ಣ ಎದರಿಗೆ ಇರೂದು ಠೀಕ ಅಲ್ಲಾ. ಅಂವಗ ಈ ವ್ಯಾಧೀ ಕಟಿಗೊಂಡು ಬ್ಯಾರೇ ಊರಾಗ ನಿಂದರೂ ಸೋಯೀನೂ ಇಲ್ಲಾ. ಹೀಂಗ ಅದs ಅಂದರ ಅಂವಗ ನಾಕ ಮಂದ್ಯಾಗ ಮಾರೀ ತೋರಸೂ ತಾಕತ್ತ ಉಳಿಯೂದಿಲ್ಲಾ. ಕಾಕಾನ ಕಾಲದಾಗ, ಇಂಥಾದೊಂದು ಸಂಬಂಧ ಅದs ಅಂದಿದ್ದರ ಅದು ಅಭಿಮಾನ ಅನಸೂ ಬಾಬ ಆಗಿತ್ತು. ಈಗ ಅಂಥಾ ಕಾಲ ಉಳದಿಲ್ಲಾ. ಶ್ಯಾಮುನ ವ್ಯವಹಾರಾ, ಕಾಕಾ-ಗಿರಿಜಾನ ವ್ಯವಹಾರಧಾಂಗ ರಾಸ್ತರೀತೀಲೇ ಆಗಿಲ್ಲಾ. ಇದ್ದ ಹೇಣತಿನ್ನ ವಗತಾನಗೇಡಿನ್ನ ಮಾಡಿದ ಪಾಪಾ ಅವನ ಸುತ್ತ ಸುಳೀತದ. ನಾಳೆ ಬಸವಂತಿ ಬಾಣಂತಿ ಆದರ ಆ ಸಂತಾನ ಶ್ಯಾಮುನ ಕೈಗೆ ಒಪ್ಪಸ್ತಾಳ. ತನ್ನ ಸುಖದ್ದಶಿಂದ ಅದನ್ನ ಅವನ ಕೊಳ್ಳಿಗೆ ಕಟ್ಟತಾಳ. ಹುಟ್ಟಿದ ಕೂಸು ಶ್ಯಾಮುನ ಪೋಷಣೀ ಒಳಗ ಬೆಳೀಬೇಕು. ಬಸವಂತಿಗೆ ಇಂಥಾ ದುಡ್ಡ ಇದ್ದ ಗಿರಾಕಿ ಸಿಕ್ಕಾಗ, ಆಕೀ ತನ್ನ ಕ್ಷೇಮದ್ದಶಿಂದ, ಸುಖದ್ದಶಿಂದ ಶ್ಯಾಮುನ್ನ ಹಿಡದ ಇಟಗೋಬೇಕಾದರ, ಈ ಅಪತ್ಯನ್ನೂ ಸದಾ ಸಾಕ್ಷೀಮಾಡಕೊಂಡು ಇರಬೇಕಾಗತದ. ಏನ ಆದ ಸೋಕ್ಷ-ಮೋಕ್ಷ ಇಲ್ಲೇ ಆಗಲಿ ಅಂತ ಶ್ಯಾಮುನೂ ಇಲ್ಲೇ ನಿಂದರತಾನ. ಶ್ಯಾಮುನ ಹೊಸಾ ಸಂಸಾರಾ ಕಣ್‌ಮುಟ್ಟಾ ನೋಡಕೋತ, ತಮ್ಮ ಸೊಸೀ ಸಂಸಾರಾ ಹಾಳ ಆದದ್ದನ್ನ ನೋಡಕೋತ, ಕಾಕಾ ಇಲ್ಲೆ ಇರೂದು ಬ್ಯಾಡಾ. ಅವರ ಕಣ್ಮರೀಗೆ ಏನ ಹೊಲಗೇರಿ ಆದರೂ ಆಗಲಿ. ಸಿಧಾನ ಅವರು, ಪುಣೇದಾಗ ಇದರ ಝಳಾ ಬಡೀದs ಸುಖೀ ಆಗಿ ಇರಲಿ.

ಸದ್ಯಕ್ಕ ನಾವೂ ಗಡಿಬಿಡಿ ಮಾಡೂದು ಬ್ಯಾಡಾ. ನಿಮ್ಮ ಹೇಳಕೀ ಪ್ರಕಾರ ಮಾಡೇದಂತ ಕಾಕಾ ಅವರಿಗೆ ಬರದ ತಿಳಸು. ಸುಳ್ಳ ಬರೀ ಅಂತs ನಾನೇ ಹೇಳಬೇಕಾತು. ಉಪಾಯ ಇಲ್ಲಾ. ಇಂದಿನ ಕಾವು ನಾಳಿಗೆ ಇರೂದಿಲ್ಲಾ. ಕಾಕಾನೂ ಶಾಂತ ಆದಾರು. ಏನೋ ಅಚಾನಕ ರೀತೀಲೇ ತಂದೀ-ಮಗಾ ಹೊಂದಿಕೊಳ್ಳೂ ಪ್ರಸಂಗ ಬಂದರ, ಎಲ್ಲಾನೂ ಕ್ಷಮ್ಯ ಆದೀತು. ಅಷ್ಟು ಕಾಕಾ ಅವರಿಗೆ ಪತ್ರಾ ಬರೀ ಅಂದರ. ಮುಂದಿಂದು ಮುಂದ. ಶ್ಯಾಮುನ ಇಲ್ಲೀ ಭಾನಗಡೀ ದಶಿಂದ ಮಾತ್ರ ಚಕಾರ ಶಬ್ದ ಬರೀಬ್ಯಾಡಾ. ಈ ಸುದ್ದಿ ಅವರಿಗೆ ತಿಳದರ ಸೋನಕ್ಕಗ ಆಘಾತ ಆಗದs ಹೋಗೂದಿಲ್ಲಾ. ಅಂಥಾ ಪ್ರಸಂಗಾ ನಾವಾಗೇ ತರೂದು ಬ್ಯಾಡಾ. ತಿಳೀತೇನು? ಅಷ್ಟ ಮಾಡ ಅಂದರs."

ಇಷ್ಟು ಹೇಳಿ ಅಪನವರು ಎದ್ದರು. ರಾಚಪ್ಪ ಕಾಲು ಮುಟ್ಟಿ ನಮಸ್ಕರಿಸಿ ಆಶೀರ್ವಾದ ಪಡೆದ. ಗೋವಿಂದಭಟ್ಟ ನಮಸ್ಕರಿಸಿ ನಿರೋಪ ತೆಗೆದುಕೊಂಡ. ಮೂವರೂ ಮಠದ ಪಟಾಂಗಣದಲ್ಲಿ ಬಂದಾಗ ರಾತ್ರಿ ಏಳು ಗಂಟೆಯಾಗಿತ್ತು. ಮಠದಲ್ಲಿ ನೆರೆದವರಿಗೆ ಈ ತ್ರಿಮೂರ್ತಿಗಳ ಸಂಗಮ ಸಮಸ್ಯೆಯಾಯಿತು.

ಗಣಪತಿಯ ಗುಡಿಯಲ್ಲಿ ಮಂಗಳಾರತಿಯ ಹೊತ್ತಾಗಿದ್ದರಿಂದ ರಾಚಪ್ಪ, ಗೋವಿಂದಭಟ್ಟ ಇಬ್ಬರೂ ನೇರವಾಗಿ ಗುಡಿಗೇ ಬಂದರು. ನೀರು ಜಗ್ಗಿಕೊಂಡು ಭಾವಿಯ ಮೇಲೆ ಸ್ನಾನ ಮುಗಿಸಿದರು. ತಪಕೀರ ಗುರುಭಟ್ಟ ಮಂಗಳಾರತಿಯ ತಯಾರಿಯನ್ನು ಮಾಡೇ ಇದ್ದ. ಗೋವಿಂದಭಟ್ಟ ಯಂತ್ರವತ್ತಾಗಿ ಆರತಿ ಎತ್ತಿದ. ಮಹಾಮಂಗಳಾರತಿ ಮುಗಿದು ಪ್ರಸಾದವಿತರಣೆಯಾಯಿತು. ಗರ್ಭಾಂಕದ ಹಿತ್ತಾಳೀ ಸಲಾಕೆಯ ಭದ್ರವಾದ ಬಾಗಿಲು ಮುಚ್ಚಿತು. ಗುರುಭಟ್ಟ ಕೀಲಿ ಹಾಕಿ, ಕೈಯನ್ನು ಗೋವಿಂದಭಟ್ಟನ ಕಡೆಗೆ ಕೊಟ್ಟು —

"ಗೋವಿಂದಭಟ್ಟ, ಒದ್ದೀ ಬಿಡರಿ ಇನ್ನ. ಥಂಡೀ ದಿನಾ. ಶೀತ ಆದೀತು." ಎಂದಾಗಲೇ ಗೋವಿಂದಭಟ್ಟನಿಗೆ ಅರಿವು ಬಂದಿತು.

"ಆತಲಾ. ಮನೀಗೇ ಹೊಂಟೇನಿ. ಅಲ್ಲೇ ವಸ್ತ್ರಾಂತರ ಆಗತೀನಿ." ಎಂದು ನಿರ್ವಿಕಾರಚಿತ್ತನಾಗಿ ಉತ್ತರಿಸಿದ.

"ಇಂದ ಭಾಳ ಹುಡಕಿದೆ ನಿಮ್ಮನ್ನ ಗೋವಿಂದಭಟ್ಟ. ಊರs ಬುಡ ಮೇಲಾತು. ನೀವೇನು ಸಿಗಲಿಲ್ಲಾ. ಶ್ಯಾಮರಾಯನ ಬುಲಾವಣೀ ಅದs ಅಂತ, ತಮ್ಮಾಜೀ ಬಂದಿದ್ದಾ. ಜರೂರ ಬಂದು ಭೆಟ್ಟಿ ಆಗಬೇಕಂತ." ಗುರುಭಟ್ಟ ವರದಿ ಒಪ್ಪಿಸಿದ.

"ಅವನ ಅಪ್ಪನ ಅನ್ನಾ ಉಣತೀನಿ. ಈ ಮಗಂದಲ್ಲಾ. ಇಂವಾ ಕರಕಳಿಸಿ ದಾಗ ಹೋಗಿ ನಿಂದರಲಿಕ್ಕೆ ನಾ ಏನು ಫುಕಟ ಬಿದ್ದಿಲ್ಲಾ. ಇಂವಾ ಅಧಿಕಾರ ಮಾಡಾಗ ನೋಡೂಣಂತ. ಹೋಗಲಿಕ್ಕೆ ಬಂದೀತು."
ಗೋವಿಂದಭಟ್ಟ ನಿಷ್ಠುರನಾಗಿಯೇ ಮಾತನಾಡಿದ. ಗುರುಭಟ್ಟ ಟೊಂಕದಿಂದ ನಾಶೀಪುಡೀ-ಡಬ್ಬಿಯನ್ನ ತೆಗೆದು ಒಂದು ಚಿಮಟಿ ನಾಶೀ ಏರಿಸಿ ಯಥಾಪ್ರಕಾರ ಛಟಛಟ ಸೀನುತ್ತ, ಗಜಾನನಪ್ರಸಾದದಲ್ಲಿಯ ಫಲಾಹಾರ-ಪಂಕ್ತಿಗೆ ಗುಡಿಯ ಅಡುಗೆಯ ಮನೆಗೆ ನಡೆದ. ಇದೆಲ್ಲವನ್ನೂ ಮೌನವಾಗಿ ಕೇಳುತ್ತಿದ್ದ ರಾಚಪ್ಪ —

"ಭಟ್ಟಾ, ಬುಲಾವಣೀ ಯಾತಕ ಬಂದಿರಬೇಕು? ಕಾಕಾ ಅವರಿಂದ ಇಂದ

ಕಾಗದ ಬಂದ ವಾಸನಿ ಅಂವಗ ಬಡದ್ವದ. ಅದರ ದಶಿಂದ ಪಸರ್‍ವ ಕರಸ್ಯಾನೇನ ಮತ್ತ?"
ಎಂದು ಕೇಳಿದ.

"ಯಾ ಸೂಳೀಮಗ್ಗ ಠಾಂವಿಕಿ? ಇಷ್ಟೂ ಮೀರಿ ಅಂವಾ ಕೇಳಿದರ, ನನಗೇನ ಕೇಳತೀ ಬದ್ನೀಕಾಯೀ ಅಂತ ಒಂದೇ ಉತ್ತರಾ ಹೇಳತೀನಿ; ಆತಲಾ. ಮುಂದ ಅಂವಾ ಬ್ರ ಅಂದರ ಕೇಳು."

"ಒಂದಿಷ್ಟು ಶಾಂತ ಆಗು ಭಟ್ಟಾ. ಹಾಂಗ ಉತಾವಿಳ ಆಗಿ ಕೆಲಸಾ ಕೆಡಸ ಬ್ಯಾಡಾ. ಸುಮ್ನುವ ಮೋತೀ ಯಾಕ ಹರಕೊಂಬೂದು. ನಮ್ಮ ಮನೀ ಕಡೇನ್ವ ಹೋಗೂಣು ನಡೀ. ಅಲ್ಲೇ ಅಷ್ಟು ಹಣ್ಣ-ಹಾಲಾ ತಗೊಂಬಾಕ್ಯಂತ. ಹೊಟ್ಟಿ ಶಾಂತ ಆತಂದ್ರ ನೀನ್ವ ಠೀಕ ಮಾತಾಡತೀ."

ರಾಚಪ್ಪ, ಗೋವಿಂದಭಟ್ಟನನ್ನು ಕರೆದುಕೊಂಡು ತನ್ನ ಮನೆಯ ಕಡೆಗೇ ನಡೆದ. ಅಲ್ಲಿ ಇಬ್ಬರೂ ಎದುರು-ಬದುರು ಮಂಡಿಸಿ ಯಥೇಚ್ಛವಾಗಿ ಸೋನಕೇಳೀ ಸಮಾಚಾರ ತೆಗೆದುಕೊಂಡರು. ಅರ್ಧರ್ಧ ತಂಬಿಗೆ ಹಾಲು ಸೆಡ್ಡಿ ಮತ್ತೆ ಹರಟೆಗೆ ತಯಾರಾದರು.

ಗೋವಿಂದಭಟ್ಟ ಶಾಂತನಾದದ್ದನ್ನು ನೋಡಿ, ರಾಚಪ್ಪ —

"ಭಟ್ಟಾ, ಬಸವಂತೀ ಸುದ್ದೀ, ಪಾಂಡೂ ಟಪಾಲ ಕೊಡಲಿಕ್ಕೆ ಬಂದಾಗ್ವ ಹೇಳಿದ್ದಾ. ನಾವ್ವ ಅಪೇಶಿಗೋಳು. ಊರಾಗಿನ ಬಾತಮೀದ್ವ ನಮಗ ಪತ್ತೇ ಇರೂದಿಲ್ಲಾ. ಅಪನವರು ಅದಕ್ಕ ದುಜೋರಾ ಕೊಟ್ಟರು ಅಷ್ಟ್ವ."
ಎಂದು ಹೇಳಿದ.

"ಯಾರು ಪಾಂಡ್ಯಾನ್ವ? ಲವಡೀಮಗಾ ಇದರ ದಶಿಂದ ನನ್ನ ಮುಂದ ಚಕಾರ ಶಬ್ದ ತಗದಿಲ್ಲಲಾ. ಮ್ಯಾಲ ನನ್ನ ಗಳಸ್ಯ-ಕಂಠಸ್ಯ ಅಂತ ಹೇಳತಾನ."

ಪ್ರಥಮ ಶ್ರೋತಾನ ಭಾಗ್ಯವನ್ನು ತನಗೆ ತಂದು ಕೊಡಲಿಲ್ಲವೆಂದು, ಗೋವಿಂದಭಟ್ಟ, ಪಾಂಡೂನ ಮೇಲೆ ಸಂತಾಪಿಸಿದ. ರಾಚಪ್ಪ ಅವನನ್ನು ಮತ್ತೆ ದಾರಿಗೆ ತಂದು ಶಾಂತನಾಗಿಸಿದ. ಅವರ ಮಾತು ಬಸವಂತಿ-ಶ್ಯಾಮರಾಯರನ್ನು ಸುತ್ತಿ ಸುಳಿದು, ಆ ಪ್ರಕರಣದ ಸುತ್ತು ಪ್ರದಕ್ಷಿಣಾರತವಾದವು.

ಅವರು ಮಾತು ಮುಗಿಸಿ ಎದ್ದಾಗ ರಾತ್ರಿ ಬಹಳವಾಗಿಹೋಗಿತ್ತು. ದ್ವಾದಶಿಯ ನಿಃಸ್ಸತ್ವ ಚಂದ್ರ ಮೋಡಗವಿದ ಮುಗಿಲಿನಲ್ಲಿ ಕುಂಟುತ್ತ, ಕೂರುತ್ತ

ಏರತೊಡಗಿದ್ದ. ಅಡ್ಡ ಬಂದ ಗೊಡ್ಡಿ-ಮೋಡ, ಅವನ ಪಾಂಡುರ-ಪ್ರಕಾಶವನ್ನು ಅಂಧುಕಗೊಳಿಸಿ, ಆಗೀಗ ಕತ್ತಲೆಯ ಕೌದಿಯನ್ನು ಹೊಚ್ಚುತ್ತಿತ್ತು. ಕತ್ತಲೆ-ಬೆಳ ದಿಂಗಳಿನ ಕಣ್ಣುಮುಚ್ಚಾಟ ನಡೆದಿತ್ತು.

"ಗೋವಿಂದಭಟ್ಟ, ವಾಡೇದ ಬಾಜೂದ ಅಡ್ಡದಾರೀಲೇನs ಹೋಗು. ಸನೇ ಆಗತದ."
ಎಂದು ಸೂಚಿಸಿದ.

"ಬ್ಯಾಡ ಮಾರಾಯಾ. ಒಂದ ನೂರ ನಾಯಿ ಬಿದ್ದಿರತಾವ ರಸ್ತೇದಾಗ. ಜೀವಂತ ಮನೀ ಮುಟ್ಟೂ ಆಶಾನs ಇಲ್ಲಾ, ಮೈಗೆ ಅಡರಿದರ."
ಗೋವಿಂದಭಟ್ಟ ಆ ದಾರಿಯ ಉಸಾಬರಿ ಬಿಟ್ಟು ಹೇಳಿದ.

"ಅಳ್ಳಿಟ್ಟ ಅಳ್ಳಿಟ್ಟನs. ನಡೀ ಭಟ್ಟಾ, ಮನೀತನಕಾ ಬಿಟ್ಟ ಬರತೀನಿ."
ರಾಚಪ್ಪ ನಗುತ್ತ ಭಟ್ಟನನ್ನು ಹಿಂಬಾಲಿಸಿದ.

ಇಬ್ಬರೂ ವಾಡೆಯ ದಕ್ಷಿಣ ದಿಕ್ಕಿನ ಅಡ್ಡದಾರಿಯಿಂದ ಹೊರಟು ವಾಡೆಯ ಹತ್ತಿರ ಹತ್ತಿರ ಬಂದಿದ್ದರು.

ವಾಡೆಯ ಆ ಬದಿಯ ಕೋಣೆಯಲ್ಲಿ ಇನ್ನೂ ದೀಪ ಥಾಳಾಗಿ ಉರಿಯುತ್ತಿದ್ದದ್ದು ತೆರೆದ ಕಿಟಿಕಿಯಿಂದ ಕಾಣುತ್ತಿತ್ತು. ಆ ಕಡೆಯ ಕೋಣೆ ಶ್ಯಾಮರಾಯನ ಶಯನಗೃಹವೆಂಬುದು ಇಬ್ಬರಿಗೂ ಗೊತ್ತಿತ್ತು.

"ಶ್ಯಾಮರಾಯಗ ಇನಾ ರಾತ್ರಿ ಆಧಾಂಗ ಕಾಣೂದಿಲ್ಲಾ."
ಎಂದು ಮೆಲ್ಲನೆ ರಾಚಪ್ಪ ಪಿಸುಗುಟ್ಟಿದ.

"ಶಶ್, ಏ, ರಾಚೋಟೀ, ಒಂದಿಷ್ಟು ಹೀಂಗ ಗ್ವಾಡೀಮರೀಗೆ ಆಗು. ಇಕಡೆ ಬಾ...ಇಕಡೆ. ಅದೇನ ನೋಡು ಅಲ್ಲೆ! ವಾಡೇದ ಕಡೇ ಸರಕೋತ ಏನೋ ಬರ್ಧಾಂಗ ಕಾಣಸ್ತದ. ಯಾರೋ ಬರೂಹಾಂಗ ಆದs ನೋಡು."

ಗೋವಿಂದಭಟ್ಟ ರಾಚಪ್ಪನನ್ನು ಕೈಹಿಡಿದು ಎಳೆದು ವಾಡೆಯ ದಕ್ಷಿಣ ದಿಕ್ಕಿನ ಗೋಡೆಗೆ ಎದುರಾಗಿ ಇದ್ದ, ದೊಡ್ಡ ಬೇವಿನಮರದ ಮರೆಗೆ ಅವಿತು ನಿಂತ. ಉಸಿರು ಬಿಗಿಹಿಡಿದು ಅವರು ಇತ್ತಕಡೆಗೆ ಸರಿದು ಬರುತ್ತಿರುವ ಆ ಆಕೃತಿಯನ್ನು ನಿರೀಕ್ಷಿಸತೊಡಗಿದರು. ಕಿಡಿಕಿಯ ಹತ್ತಿರದ ಬಾಗಿಲಿಗೆ ಇನ್ನೂ ನಾಕಾರು ಮಾರು ದೂರದಲ್ಲಿ, ಆ ಸರಿಯುವ ಆಕೃತಿ ಬಂದಾಗ, ಮೋಡದ ಪರೆ ಹರಿದು ಅಂಧುಕ ಚಂದ್ರು ಬೆಳಗಿದ. ಮೈತುಂಬ ಬುರುಕಿ ಹೊತ್ತ ವ್ಯಕ್ತಿಯನ್ನು ಚಂದ್ರಪ್ರಕಾಶ

ತೋರಿಸಿತು. ಆ ವ್ಯಕ್ತಿ ಶ್ಯಾಮರಾಯನ ಕೋಣೆಯ ಬಾಗಿಲ ಬಳಿ ಸಾರಿ, ಬೆರಳಿನಿಂದ ಬಾಗಿಲಮೇಲೆ ಮೃದುವಾಗಿ ಸದ್ದುಮಾಡಿತು. ಬಾಗಿಲು ಓರೆಯಾಗಿ ತೆರೆಯಿತು. ಕೋಣೆಯಿಂದ ಪ್ರಕಾಶ ತೂರಿಬಂತು. ಆ ಪ್ರಕಾಶಪುಂಜದಲ್ಲಿ ಬುರುಕಿಯ – ತನ್ನನ್ನು ಯಾರಾದರೂ ಅನುಸರಿಸಿರಬಹುದೇ ಎಂಬ ಖಾತ್ರೀ ಮಾಡಿಕೊಳ್ಳಲು – ಆ ವ್ಯಕ್ತಿ ಹಿಂದಿರುಗಿ ನೋಡಿತು. ರಾಚಪ್ಪ-ಗೋವಿಂದಭಟ್ಟರಿಗೆ ಬುರುಕಿಯ ಹಿಂದೆ ನಿಂತ ಬಸವಂತಿಯ ಅಖಂಡ ದರ್ಶನವಾಯಿತು.




## ಆರು

ನಿವೃತ್ತ ಡಿ.ಡಿ.ಸಿ. ರಾ. ಸಾ. ಶೋಮರೇಮಾಮಾಅವರಿಗೆ, ಪಿಂಚಣಿಯನ್ನು ದಯಪಾಲಿಸಿ, ಸ್ವಸ್ಥವಾಗಿ ಆಯುಷ್ಯನ್ನು ಬಿನ್-ಖರ್ಚಿನಿಂದ, ಅಳಿಯನ ಮನೆಯಲ್ಲಿದ್ದು ಸಾಗಿಸಲು ಸರಕಾರದವರು ಹುಕುಂ ಮಾಡಿದ್ದರೂ, ಈ ಪ್ರಾಣಿಗೆ ಸಮಾಧಾನವೆಂಬುದೇ ಇರಲಿಲ್ಲ. ಒಂದಿಲ್ಲ ಒಂದು ಲಿಗಾಡು ಬೇಕಾಗುತ್ತಿತ್ತು. ಊರಲ್ಲಿ ಯಾರದೋ ಮನೆಯ ಮುಂದೆ ಹಂದರವೆದ್ದು, ತಾಸೇ-ಬಜಂತ್ರಿಯ ಮೊದಲನೇ ತಡಾಕಿ ಬಿದ್ದದ್ದು ಕೇಳಿದ ದಿನವೇ ಅವರು, ಮಗಳು ರಂಗಕ್ಕನ ಮುಂದೆ ಕುಂಡಿಸಿ, ಕು. ಚಿ. ಶಕೂ ದೊಡ್ಡವಳಾದ ವಿಷಯವನ್ನು, ಶಕೂನನ್ನು ಹಡೆದ ತಾಯಿಗೇ, ತಾರೀಖು – ವಾರ – ತಿಥಿಯ ಸಾಕ್ಷಿ ಹೇಳಿ ತಿಳಿಸಿಕೊಡಲು ಸುರುವು ಮಾಡುತ್ತಿದ್ದರು. ಅವರ ವಾಕ್ಯಪರಿಪಾಲನಾ ಪುತ್ರಿ ಅದನ್ನು ಯಜಮಾನರಿಗೆ ನಿವೇದಿಸುತ್ತಿದ್ದಳು.

"ಶಕೂಗ ಹದಿನೆಂಟು ತುಂಬಿದೂ ಅಂದೇ..."

ಎಂದು ಅಂದದ್ದನ್ನು ಇನ್ನೊಮ್ಮೆ ಗಟ್ಟಿಸುತ್ತಿದ್ದರು. ಸಾಹೇಬರು ಬ್ಲೂ-ಪ್ರಿಂಟದ ಸ್ವರ್ಗಪಟ ಮಡಿಚುತ್ತ,

"ಹಾಂ. ಹಾಂ...ಹಾಂ...ಹೂಂ...ಹೂಂ...ಹೂಂಂಂ... ಹೌದ ಹೌದು. ಶಕೂಗ ಹದನೆಂಟು ತುಂಬಿದ್ದು ಖರೇ. ಅಷ್ಟ ಮಾರ್ಚ ತಿಂಗಳ ಗಡಿಬಿಡಿ ಮುಗೀಲಿ, ಹಾಲ್‌ಚಾಲೀ ಸುರೂ ಮಾಡೂಣಂತ: ಶ್ಯಾಮರಾಯರನ್ನ ಈ ಸಾರೆ ಖಟ್ಟಿಗೆ ಹಚ್ಚೀಬಿಡೂಣಂತ."

"ಅಂತs...ಅಂತs...ಅಂತ ಕೂತರ್‍ಯಂದ್ರs ಅದಕ ಅಂತನs ಇಲ್ಲಧಾಂಗ ಆಗತದ. ಶ್ಯಾಮರಾಯರಿಗೆ ನಾನು ಕೇಳೂದು ವಾಜಿಮೀ ಅನಸೂದಿಲ್ಲಾ ಅಂತ ನಿಮಗ ಹೇಳೂದು."

"ರಾಸ್ತ ಅದs ನಿನ್ನ ಮಾತು. ನಾ ಕೇಳೂದs ಠೀಕಾ. ಕೇಳತೀನ್ಯಾ ಕೇಳ ತೀನಿ. ಈ ಸಾರೆ ಅವರು ಬಂದಾಗ ಕೇಳೇಬಿಡತೀನಿ. ಅವರ ಕುಟುಂಬಾ– ಸೊನಕ್ಕನ್ನೂ ಕೇಳಬೇಕು. ಶ್ಯಾಮರಾಯರ ಹಿರ್‍ಯಾರ್‍ನೂ ಕೇಳಬೇಕು. ಇಷ್ಟಾಗಿ ಹುಡುಗಾ, ಹುಡಗಿನ್ನ ಒಪಿಗೊಂಬೂ ಮಾತೂ ಮುಖ್ಯ ಅದs. ವಿಶ್ವಾಸನ್ನೂ ಕೇಳಬೇಕು. ಅಂವಾ–ಸುರೇಶಾ ಇಬ್ಬರೂ ಒಪಗೊಂಡರ ಶ್ಯಾಮರಾಯರ ಹಿರ್‍ಯಾರು ಒಪಗೊಂಡಹಾಂಗs. ವಿಶ್ವಾಸಂದು ಅಷ್ಟ ವಚಕ ಅದs ಅಂತ ಅವರ ಮ್ಯಾಲs. ದಾದಲ್ಯಾನ ಸುದ್ದಿ. ಅಷ್ಟು ತ್ರೋಟಕ ಮಾಹಿತೀ ಬರದು ತಿಳಿಸ್ಯಾನ. ಪರೀಕ್ಷಾ ಮುಗಿಸಿ ದಾದಲ್ಯಾ ಬರಬೇಕಾಗಿತ್ತು. ಶ್ಯಾಮರಾಯರೂ ಸುರೇಶನ್ನ ಕರಸತೀನಿ ಅಂತ ಕಬೂಲ ಮಾಡ್ಯಾರ. ಅಂವಾ ಶಕೂನ್ನ ಅಷ್ಟ ನೋಡಿ ಇಟ್ಟಿರಲಿ. ಅಂದಾಜ ಹತ್ತಿಧಾಂಗ ಆಗತದ. ದಾದಲ್ಯಾನ ಮಾರ್ಫತ ಅವರ ಧೋರಣಾ ತಿಳಕೋಳಿಕ್ಕೆ ಅನಕೂಲನೂ ಆಗತದ. ಏನಂತೀ, ಹೌದಂತೀಯೋ ಅಲ್ಲ ಅಂತೀಯೋ ನನ್ನ ಮಾತಾ?"

ಸಾಹೇಬರು ಯಕ್ಷ-ಪ್ರಶ್ನೆ ಮಾಡಿದರು. ಸರಿಯಾದ ಉತ್ತರ ಕೊಡದೆ ಪಾಂಡು ಪುತ್ರರಂತೆ ಗತಾವಸಾನರಾಗುವ ಸಮಸ್ಯೆ ರಂಗಕ್ಕನಿಗೆ ಇರಲಿಲ್ಲ.

"ನಿಮ್ಮ ಮಗಳ ಕಲ್ಯಾಣದ ಕಾಳಜೀ ನನಗ ಇರೂದಕಿಂತಾ, ಹೆಚ್ಚಿಗೆ ನಿಮಗ ಇರಬೇಕಾದದ್ದು. ನಾಳೆ ಅಷ್ಟ ಪುಣ್ಹೋಚನಕ ಕೂಡಂತ ಕರದರ, ಅಷ್ಟರ ಪೂರ್ತೇ ಪೀತಾಂಬರಾ ಉಟಗೊಂಡು ಬಂದು ನಿಮ್ಮ ಬಾಜೂಕ್ಕ ಕೂತೇನು. ಇದಕಿಂತಾ ನಾ ಏನು ಹೆಚ್ಚಿಗೆ ಮಾಡೂದದ."

ಈಗ ಪೀತಾಂಬರವಿಲ್ಲದೆ, ಉಟ್ಟ ಸೀರೆಯ ಮೇಲೆ ಬಂದು, ರಂಗಕ್ಕ ಸಾಹೇಬರ ಎದುರು ಹಾಕಿದ ಕುರ್ಚಿಯ ಮೇಲೆ ಕುಳಿತುಕೊಳ್ಳುತ್ತ ಹೇಳಿದರು.

"ಅಗದೀ ಕುದರೀ ಏರಿ ಬಂಧಾವರ್ಹಾಂಗ, ನೀ ನಿಂತು ಅವಸರಲೇ ಮಾತಾಡಿದರ, ನಾಸರs ಏನ ಉತ್ತರಾ ಕೊಡಲಿ? ಈಗ ಠೀಕ ಆತು. ಬಂದು ಇದರಿಗೆ ಕೂತಿ. ನಿಧಾನವಾಗಿ ಮಾತಾಡಲಿಕ್ಕೂ ಠೀಕಾ; ಸಾಕ-ಬೇಕ ಕೇಳಲಿಕ್ಕೂ ಅನಕೂಲಾ; ಏನಂತೀ?"

ಸಾಹೇಬರು ಖರೇ ಖುಷಿಯಲ್ಲಿ ಬಂದಿದ್ದರು. ರಂಗಕ್ಕನೂ ಅಸನರಿ ಅಲ್ಲ.

"ನಿಮ್ಮ ವಯಸ್ಸೇನು? ನೀವೇನು? ಇನಾ, ಸಾಕ-ಬೇಕದ ಹುಚ್ಚು ಹೋಧಾಂಗ ಕಾಣಸೂದಿಲ್ಲಾ...ಹೆಃ ಏನ ಅಳವಳ್ಳ ಮಾತಾಡತೀರಿ ತಗೀರಿ."

"ಹೆಃ ಅಂದರ ಹೂಂ ಅಂದಹಾಂಗs. ಅಳವಳ್ಳತನಾ ಏನ ಬಂತು, ನಾ ಆಡಿದ್ರಾಗs? ಈ ಕಚೇರೀ ಕಾಗದಾ ಅಂದರ ಸೈಬೇರಿಯಾದ ವಾಳವಂಟ ಇದ್ಧಾಂಗ. ಆಗ-ಈಗ ನೀ ಅಷ್ಟ ಬಂದು ಮಾತಾಡ್ತೀ ಅಂತs ನಮಗೂ ಗುದ-ಗುಲಿಕಿ ಆಗತದ. ನೀರ ಕುಡೀದಿದ್ದರೂ ನೀರಗುದರೀ ಕಂಡ ಸುಖಾ ಅನಸ್ತದ. ಅಷ್ಟs ಮಜಾ."

"ಮಜಾ ಏನ ಮಾಡತೀರಿ ನಿಮ್ಮ ತಲೀ. ಇಕಾ, ಮೊನ್ನೆ ಒಂದು ಮಜಾ ಆತು. ನಾ ಹೇಳೂದಕ್s ಮರತೆ. ಶಕೂಗ ಒಂದೆರಡು ಪತ್ತಲಾ ತಗೋಬೇಕಂತ ಮೊನ್ನೆ ಆ ಹರಕಚಂದ ಮಾರವಾಡೀ ಅಂಗಡಿಗೆ ಹೋಗಿದ್ನೆಲಾ? ಸೇಡಜೀ ಪತ್ತಲಾ ಕೊಟ್ಟಮ್ಯಾಲ ಕೇಳಿದಾ: ಬಾಯೀಸಾಹೇಬ, ಮೊನ್ನೆ ಶ್ಯಾಮರಾಯರು ತಂದ ಸೀರಿ ಪತ್ತಲಾ ಪಸಂತ ಬಿದ್ದೂ ಇಲ್ಲೋ ಅಂತs. ನನಗ ಸಂಶಾ ಬಂತೂ. ಎಲ್ಲೀ ಶೀರೀ ಏನ್‌ತಾನಾ ಅಂದೆ. ತೀಸ ಚಾಳೀಸದ ತನಕಾ, ನಾಕ ಶೀರೀ, ರೇಶಮೀ ಕಾಠದ್ದು, ಎರಡು ಪತ್ತಲಾ, ಶ್ಯಾಮರಾಯರು ಒಯ್ದಾರ ಅನ್ನೂದು ಪತ್ತೇ ಹತ್ತಿತು. ಇಲ್ಲಿಗಂತೂ ಅವರು ಬರದs ತಿಂಗಳ ಸನೇಕ ಬಂತೂ. ಯಾರಿಗೆ ಒಯ್ದಿರಬೇಕು ಶೀರೀ?"

"ಪ್ರತ್ಯೇಕ್ಕ ತಿಂಗಳಿಗೊಮ್ಮೆ ಹೋಗತಿರತಾರ. ಸೋನಕ್ಕಗ ಏನ್ಸರ ಒಯ್ದಿರ ಬೇಕು. ಅಲ್ಲೀಕಿಂತಾ ಇಲ್ಲಿಷ್ಟು ಸೋವೀ. ಬರೇಗೈಲೇ ಹೋಗೂದಕಿಂತಾ ಠೀಕಾ ಅಂತ ಒಯ್ದಿರೂ ಸಂಭವ ಅದs. ಇಷ್ಟೂ ತಿಳೀಬಾರದೇನ ನಿನಗ?"

"ಮಾತಾಡು ಅಂದರ ಮಾತಾಡಿದರು. ನಾಕ ಬಿಳೀ ಕಾಗದಾ ಕರೀ ಮಾಡಿದಾ ಕ್ಷಣಕ ಎಲ್ಲಾನೂ ತಿಳೀತಿರತದೇನು? ಶೀರ್ಯಾಂಗಿದೇನು ಠಾಂವಿಕಿ ನಿಮಗ? ಒಕ್ಕಲಿಗ್ಯಾರು ಉಡೂಹಂಥಾ ಶೀರೀ ಸೋನಕ್ಕ ಉಡತಿರತಾಳೇನು? ಎಂಥಾ

ಶೀರೀ ಒಯ್ದರು ಅಂತ ನಾ ಕೇಳಿದ್ದಕ್ಕ ಸೇಡಜೀ, ಅಂಥಾ ಮಾಸಲೇನs ತೋರಿಸಿದನಲಾ. ನಾ ಏನು ಅಷ್ಟ ಮಳ್ಳ ಇದ್ದೀನ್ಯಂತ ತಿಳದಿರೇನು?"

"ಮಳ್ಳನ್ನ ಕಂಡು ಮಳ್ಳ ಟ್ಯಾಂಟ್ಯಾಂ ಅಂದನಂತ. ಆ ಶೇಡಜೀನೂ ಪ್ಯಾಲಿ. ನೀನೂ ಮಳ್ಳಾ. ಅಲ್ಲಾ ಶ್ಯಾಮರಾಯನ ಕೊಳ್ಳಿಗೆ ಹಜಾರ ಲಿಗಾಡಾ: ಆನಾಯಾಸಾ ಬೆಳಗಾಂವಿಗೆ ಹೋಗತೀರಿ. ನಮ್ಮದಿಷ್ಟು ಜವಳೀ ತರ್ರೀ ಅಂತ ಊರಾಗ ಯಾರರs ಹೇಳಿರೂ ಸಂಭವ ಅದs. ಇಲ್ಲಂತ ಅಲ್ಲಿಕ್ಕೆ ಬರೂದಿಲ್ಲಾ. ಏನೋ ಒಯ್ದಿರೂ ಶಕ್ಯತಾ ಅದs. ನಿನಗ್ಯಾಕ ಈ ಚಿಕಿತ್ಸಾಮಾಡೂ ಚಟಾ ಹೊಕ್ಕಿತು. ಅದೇನು ಹೊಸಾದ ಅಲ್ಲನ್ನು ನಿನಗs. ಆದರೂ ಶ್ಯಾಮರಾಯರ ದಶಿಂದ ಚಿಕಿತ್ಸಾಮಾಡಾಕ್ಯಲ್ಲಾ. ಅದಕ್ಕಂತೀನಿ."

"ಯಾರೋ ಹೆಣ್ಣಮಕ್ಕಳಿದ್ದರು ಮೋಟರದಾಗ. ಸಂಜಿ ಹೊತ್ತು ಅಗಿತ್ತಂತ ಗುರುತು ಹತ್ತಲಿಲ್ಲಾ. ಶ್ಯಾಮರಾಯರ ಮಂಡಳೀ ಏನರs ಇರಬೇಕಂದಾ ಶೇಡಜೀ. ಇಲ್ಲೆಲ್ಲೆ ಬಂತು ಶ್ಯಾಮರಾಯರ ಮಂಡಳೀ? ಒಂದಿಷ್ಟು ಗುಂಭ ಕಾಣಸೂದಿಲ್ಲs? ನನಗ ಯಾಕೋ ಸಂಶಾನ ಬಂತ ತಾಯೀ."

"ಹೆಂಗಸಿಗೆ ಸಂಶಾದ ಹೊರತು ಬ್ಯಾರೇ ಧಂದೇನs ಇಲ್ಲಾ. ಹಳ್ಳೀ ಊರ ಮಂದಿ. ಫುಕಟ ಯಾರದರs ಗಾಡೀ ಅದs ಅನೂತ್ಲೇ, ಸ್ವಾರರಾಗಿ ಕೂತೇ ಬಿಡತಾರ. ಅದು ಎಲ್ಲ್ಯರs ಯಾಕ ಹೋಗವಲ್ಲದು. ಶ್ಯಾಮರಾಯರ ಗಾಡೀ ಬೆಳಗಾಂವಿಗೆ ಹೋಗತದ ಅನೂದು ಗೊತ್ತಾಗಿ ಬಂದಿರಬೇಕು ಯಾರರ ಬೆನ್ನ ಹತ್ತಿ. ನಾಕ ರೂಪಾಯಿ ಮೋಟರ ಹಾಸಲ ಉಳೀತಂತ! ನೀ ತಿಳಕೊಂಡಷ್ಟೇನು ಗುಂಭ ಇಲ್ಲ ಇದು. ಯಾಕ ವ್ಯರ್ಥ ತಲೀ ಕೆಡಿಸಿಗೋತೀ? ನಿನಗ ಸಂಶಾ ಏನು ಶ್ಯಾಮರಾಯರ ದಶಿಂದ ಬಂತೇನು? ಸೋನಕ್ಕಂದು – ಅವರದು ಎಂಥಾ ಛಲೋ ಸಂಬಂಧ ಅದs ಅನ್ನೂದು ನಿನಗ ಠಾಂವಿಕ್ಯದ. ಹೀಂಗ ಇದ್ದಾಗ, ಬ್ಯಾರೇ ಯಾತಕ ಸಂಶಾ ಬರಬೇಕು ಅವರ ದಶಿಂದ."

"ನಿಮ್ಮ ಮಾತ ಪಟಾಸಿದರೂ, ನನ್ನ ಸಂಶಾ ಏನು ನಿವಾರಣಾ ಆಗೊಲ್ಲು" ಸ್ತ್ರೀಸಹಜಸ್ವಭಾವದಿಂದ ರಂಗಕ್ಕ ಉತ್ತರಿಸಿದರು.

"'ಸಂಶಯಾತ್ಮಾ ವಿನಶ್ಯತಿ' ಅಂದಾರ ಹಿರ್ಯಾರು. ಹೆಂಗಸರನ್ನ ನೋಡೇ ಹೀಂಗ ಅಂದಿರಬೇಕು. ಠೀಕ ಎಲೀಮ್ಯಾಲ ಕೂತು, ಅಷ್ಟ ಚಮಚಮೀತ ಊಟಾ ಬಗೀಹರಸು. ತಾಸೆರಡ ತಾಸು ವಾಮಕುಕ್ಷೀ ಆಗು. ನಿನ್ನ ಸಂಶಾ, ತಾನs ಕರಗಿ

ಸೀರ ಆಗತದ. ಸಂಶಯಪಿಶಾಚಿ ಹಿಡದ ಸೆರಗು ಬಿಡತ್ವದ. ಬಾರಾ ಆತು. ಏಳಿನ್ನs. ಅಷ್ಟ ಊಟಾ ಬಗೀಹರಿಸಿ, ಕಚೇರೀ ಕಡೇ ಹಾದ ಬರತೀನಿ. ಎಸ್. ಈ. ಊರಾಗಿದ್ದರ ಕಚೇರ್‍ಯಾಗ ಕೂಡೂ ಶಿಕ್ಷಾ. ನಾಕ ದಿನಾ ಕ್ಯಾಂಪ ಅಂತs ಶಿಕಾರಿಗೆ ಹೋಗ್ಯಾನ. ಕಾಗದ ಹೋಗಿ ಬರೂ ಧಾಂವತೀನೂ ಇಲ್ಲಾ. ಸಾಹೇಬರs ಸೂಳೇಮಕ್ಕಳು, ರಾಜ್ಯಮಾಡಬೇಕು. ನಮ್ಮ ಹಾಂಗ ಟರಕ ಅಲ್ಲಾ. ನಮ್ಮ ನವಕರೀ ಅಂದರ, ವೈದಿಕಬ್ರಾಹ್ಮಣನ ಹೇಣತಿ ಇದ್ದಾಂಗ. ಸೋಡಚೀಟೀ ಸುದ್ದೇ ಕೊಡಲಿಕ್ಕೆ ಬರೂಹಾಂಗಿಲ್ಲಾ. ಒಂದ ಪೇನಶನ್ ಆದರರs ಮುಗೀಬೇಕು; ಇಲ್ಲs. ಪೇನಶನ್ ಆಗೂದರಾಗ ಟಕ್ ಅಂದು ಟ್ಯಾಂ ಹೊಡದರರs ಮುಗೀ ಬೇಕು. ಜನ್ಮಸೋಬತೀ ನಿನ್ನ ಹಾಂಗs......"

"ನಾನೂ, ನವಕರೀ ಜನ್ಮಸೋಬತೀ ಆಗೇವಂತ ಠೀಕ ನಡದದ ನಿಮ್ಮದು. ಬರ್‍ರಿನ್ನ ಊಟಕ್ಕ. ಊಟಕ್ಕ ಎಬ್ಬಿಸೂಣಂತ ಬಂದಾಕಿ ಇಷ್ಟೊತ್ತನಕಾ ಕೂತೆ. ಮಾವಾಗ, ಈಗ ಬಂದೇ ಅಂತs ಹೇಳಿ ಬಂದಿದ್ದೆ. ಅವರಿಗೆ ಕೂತಲ್ಲೇ ನಿದ್ದಿ ಹತ್ತಿರಬೇಕು."

ರಂಗಕ್ಕ ಹೇಳಿದ ಶ್ಯಾಮರಾಯನ ಶೀರೆಯ ಪ್ರಕರಣವನ್ನು ಸಾಹೇಬರು ಅಷ್ಟು ಮನಸ್ಸಿನ ಮೇಲೆ ತೆಗೆದುಕೊಳ್ಳಲೇ ಇಲ್ಲ. ಅವರಿಗೆ ಆಫೀಸು – ಅದರ ಭಾನಗಡೀ 'ಸಿನಿಯಾರಿಟಿ' – ತಾಂವು ಎಸ್. ಈ. ಆಗಬೇಕಾದರೆ ಇನ್ನೂ ಎಷ್ಟು ದಾರಿ-ಕಲ್ಲುಗಳನ್ನು ದಾಟಬೇಕು – ಯಾವ ಕ್ಲೃಪ್ತಿ ಮಾಡಬೇಕು, ಯಾರನ್ನು ಖುಷಿಯಾಗಿಸಬೇಕು, ಇವೆಲ್ಲದರಲ್ಲಿ ಮೂರು ನಾಲ್ಕಾಂಶ ತಲೆ ಖರ್ಚಾದರೆ, ಉಳಿದ ಒಂದು ನಾಲ್ಕಾಂಶದಲ್ಲಿ, ಸಂಸಾರ, ರಂಗಕ್ಕನ ಕೂಡ ಮಾತಿನ ಮಜಾ ಮಾಡುವದು ಖರ್ಚೀ ಬೀಳುತ್ತಿತ್ತು. ಶೀರೆ ಕೊಡಿಸಿದ ಧೋತರದವರ ಭಾನಗಡಿ ಅವರಿಗೆ ವಿದಿತವಾಗುವಂತಿರಲಿಲ್ಲ. ಆ ವಿಷಯದಲ್ಲಿ ಥೇಟ ಶುಕಮುನಿಯಾಗಿ ದ್ದರು. 'How to influence people' ಎಂಬ ಪುಸ್ತಕ ಓದಿ, ಅದರಲ್ಲಿಯ ಎಲ್ಲವನ್ನೂ ಬಿಟ್ಟು, ಯಾರಾದರೂ ಅಪರಿಚಿತರು, ಅವರು ಹೆಣ್ಣು-ಗಂಡು ಯಾರೇ ಇರಲಿ – ಭೆಟ್ಟಿಯಾದರೆ ದೇಶಾವರೀ ಮುಗುಳುನಗೆಯ ಪ್ರಥಮ ಶರಸಂಧಾನ ಮಾಡಬೇಕೆಂಬ ನಿಯಮವನ್ನು ಅಷ್ಟೇ ನೆನಪಿನಲ್ಲಿ ಇಟ್ಟುಕೊಂಡಿ ದ್ದರು. ಸಾಹೇಬರು ಧುಳೆಯಲ್ಲಿದ್ದಾಗ ಸೋನಕ್ಕನ ಕೂಡ ಮಾತನಾಡುವಾಗ ಹೀಗೇ ದೇಶಾವರೀ ನಗೆಯನ್ನು ನಕ್ಕು, ಶ್ಯಾಮರಾಯನಿಗೆ ಸೋನಕ್ಕನಲ್ಲಿ ಅಖಂಡ

ಸೂತಕ ಕಾಣುವಂತೆ ಮಾಡಿದ್ದರು. ತಾವು ನಗುವದರ ಪರಿಣಾಮ ಎಲ್ಲಿಗೆ ಹೋದೀತೆಂಬ ಬಗ್ಗೆಯೂ ಅವರಿಗೆ ಕಾಳಜೀ ಇರಲಿಲ್ಲ. ಕಾರಣ ಅದು ಮೂಲತಃ ನಿಷ್ಪಾಪವಾಗಿರುತ್ತಿತ್ತು. ಶಕೂನನ್ನು ನೋಡಿದಾಗಲೂ ಅವರು ಮಗುವಿನಂತೆ ನಗುತ್ತಿದ್ದರು. ರಂಗಕ್ಕನನ್ನು ನೋಡಿದರೂ ಕೂಸು ಮಳ್ಳಿಯಲ್ಲಿ ನಗೆ ಮಿನುಗಿಸುವಂತೆ ತುಟಿಯಲುಗಿಸುತ್ತಿದ್ದರು. ಅವರ ದೇಹಕ್ಕೆ ವಯಸ್ಸಾಗಿದ್ದರೂ, ಮನಸ್ಸು ಇನ್ನೂ ವರುಷದ ಮಗುವಿನಂತೆ ನಿರ್ಮಲವಾಗಿತ್ತು. ಖ್ಯಾಲಿಯ ಅರ್ಥ ಕೂಡ ಹೊಳೆಯುದಷ್ಟು ಮುಗ್ಧವಾಗಿತ್ತು. ಅಂತೇ ಅವರಿಗೆ ಶ್ಯಾಮರಾಯನ ಶೀರೆಯ ಭಾನಗಡಿ ತಲೆಗೆ ಹತ್ತಲಿಲ್ಲ. ರಂಗಕ್ಕನಿಗೆ ಮಾತ್ರ ಆ ಶೀರೆಯ ಧ್ಯಾಸ ಬಿಡಲಿಲ್ಲ.

ಶಿಕಾರೀ ಕ್ಯಾಂಪಿನಿಂದ ಬಂದ ಎಸ್.ಈ. ಸಾಹೇಬರು ಮುಂದಿನ ಕ್ಯಾಂಪಿನಲ್ಲಿ ಸಾಹೇಬರನ್ನು ಜೊತೆಗೇ ಕರೆದುಕೊಂಡು ಹೋದರು. ಬಕ್ಕಳ ಐದಾರು ದಿನಗಳ ಮುಕ್ಕಾಂ ಇತ್ತು. ಅವರು ಹೋದ ಮರುದಿನವೇ, ಅಚಾನಕವಾಗಿ, ಶ್ಯಾಮರಾಯ, ಸಾಹೇಬರ ಬಂಗಲೆಗೆ ಬಂದ. ಅವರು ಊರಲ್ಲಿಲ್ಲದ್ದರಿಂದ ಬಿಲ್ಲು ಆಗುವದು ಶಕ್ಯವಿಲ್ಲವೆಂದು ಅಂದೇ ತಿರುಗಿ ಊರಿಗೆ ಹೋಗಿಬಿಡುವದಾಗಿ ರಂಗಕ್ಕನವರಿಗೆ ತಿಳಿಸಿದ. ನಿವೃತ್ತ ಡಿ.ಡಿ.ಸಿ. ರಾ. ಸಾ. ಠೋಮರೇಮಾಮಾ – ರಂಗಕ್ಕ ಅವನನ್ನು ಹೋಗಲು ಬಿಟ್ಟರಲ್ಲ ಅವನು ಹೋಗುವದು. ಕು. ಚಿ. ಶಕೂನ ಬಗ್ಗೆ ಖಟ್ಟಿಗೆ ಹಚ್ಚಿ ಕೇಳಿಯೇಬಿಡುವದೆಂದು ಅವರು ನಿರ್ಧರಿಸಿದ್ದರು. ಶ್ಯಾಮರಾಯ ನಿರ್ವಾಹವಿಲ್ಲದೆ ಅಂದು ಸಂಪು ಮೇಜವಾನಿಯ ಭೋಜನಕ್ಕೆ ನಿಲ್ಲಬೇಕಾಯಿತು.

ಶ್ಯಾಮರಾಯನ ಹಳೆಯ ಫೋರ್ಡುಗಾಡಿಯ ರಥಿಕ ಖಾದರನೂ ಅಂದು ಅನ್ಯತ್ರ ಮುರಗೀ-ಬಿರಿಯಾಣೀ ಬಾಡಿಸಿಕೊಳ್ಳಲಿಕ್ಕೆ ಹೋಗದೆ, ಸಾಹೇಬರಲ್ಲಿಯ ಸಸಾರ ಮೇಜವಾನಿ, ಶ್ರೀಖಂಡಪುರಿಗೆ ನಿಂತುಬಿಟ್ಟ.

'ಮೇಜರ್‌ಮೆಂಟ್' ಚೆಕ್ ಮಾಡಿಸಿ – ಬಿಲ್ಲು ತಯಾರ ಇಡಿಸಲು, ಫಲ-ಮಂತ್ರಾಕ್ಷತೆ ಇಲ್ಲದೆ ಸಾಗುವದಿಲ್ಲ. ಅಷ್ಟು ಕೆಲಸವನ್ನು ಬಗೆಹರಿಸಿ ಬರಬೇಕೆಂದು. ಶ್ಯಾಮರಾಯ ಆಫೀಸಿಗೆ ಹೋದ. ರಂಗಕ್ಕ ತಮಗೆ ಒಂದಿಷ್ಟು ಬಜಾರು ಮಾಡುವದಿದೆ – ಗಾಡಿಯನ್ನು ಒಯ್ಯುತ್ತೇನೆಂದು ತಿಳಿಸಿ, ಶ್ಯಾಮರಾಯನ ಫೋರ್ಡವಾಹನರಾಗಿ ಬಜಾರಕ್ಕೆ ಹೋದರು. 'ಗನ್-ಶಾಪ್'ನಲ್ಲಿ ರಂಗಕ್ಕನಿಗೆ ತುಂಬ ಖರೀದಿ ಇತ್ತು. ಅದು ಮುಗಿಯುವ ತನಕ ಖಾದರ್, ಗಾಡಿಯ ಮರೆಗೆ ನಿಂತು ಬೀಡಿ ಸೇದುವದು ಬೇಡವೆಂದೆನಿಸಿಯೋ ಏನೋ, ಅವರು

ಖಾದರನಿಗೆ ಚಾ-ಪಾಣೀ ಮುಗಿಸಿ ಬರಲು ಒಂದು ಸ್ವಚ್ಛ ರಜತ-ರೂಪ್ಯಕವನ್ನು ಅವನ ಕೈಯಲ್ಲಿ ಹಾಕಿದರು. ಖಾದರ್, ಬಾಯೀಸಾಹೇಬರ ಔದಾರ್ಯವನ್ನು ಮೆಚ್ಚಿಕೊಂಡು, ಅಲ್ಲೇ ಇದ್ದ ಇರಾಣೀ ಅಂಗಡಿ ಹೊಕ್ಕ.

ರಂಗಕ್ಕ ಬಾಜಾರು ಮುಗಿಸಿ ತಿರುಗಿ ಮನೆಗೆ ಮರಳಿದಾಗ ಸಂಜೆಯು ಏಳು ಗಂಟೆಯಾಗಿತ್ತು.

ನಡುಮನೆಯಲ್ಲಿ ಹಾಕಿದ ತತ್ತಿಯಾಕಾರದ ಊಟದ ಮೇಜಿನ ಮೇಲೆ ಪಂಕ್ತಿ ಜೋರಾಗಿ ಸಾಗಿತ್ತು. ರಾ. ಸಾ. ಠೋಮರೇಮಾಮಾ – ಶ್ಯಾಮರಾಯ ಒಂದು ಬದಿಗೆ, ಕು. ಚಿ. ಶಕೂ – ರಂಗಕ್ಕ ಇನ್ನೊಂದು ಬದಿಗೆ ಎದುರು-ಬದರು ಮಂಡಿಸಿ ಶ್ರೀಖಂಡದ ಸಮಾಚಾರ ತೆಗೆದುಕೊಳ್ಳುತ್ತಿದ್ದರು. ನಡುನಡುವೆ ಸಾರಿನ ಭುರಕಿಯನ್ನು ಹೊಡೆಯುತ್ತ, ರಾ. ಸಾ. ಠೋಮರೇಮಾಮಾ –

"ಮೆಣಸಿನ ಸಾರಾ, ಆಹಾs, ಏನ ದಿವ್ಯ ಆಗೇದಂದಿರಿ ಶ್ಯಾಮರಾವ್? ಹುಳಿಮಧುರ ಶ್ರೀಖಂಡಕ್ಕ, ನಾಲಗಿ ಹರತ ಆಗಲಿಕ್ಕೆ ಮೆಣಸಿನ ಸಾರs ಠೀಕಾ. 'ಅರೇ ವಿಷ್ಣೂ, ವಿಚಾರತೋಸ ಕಾಯ್ ವಾಥ ಸಾಹೇಬಾನಾ ಶ್ರೀಖಂಡ. ಹಾಂs ತಸs. ಭರೂದೇ ಬಸೀ.' ಶ್ಯಾಮರಾವ್, ರಾತ್ರೀ ಊಟಾ; ಅಪಚನಾ-ಗಿಪಚನಾದ್ದು ಅಂಜಿಕಿಲ್ಲ ಮತ್ತs. ಒಂದ ಶ್ರೀಖಂಡ ನೋಡಿರಿ. ಬೇಕಾದಷ್ಟು ಭರತೀ ಹಾಕರಿ. ಕರಗಿ ನೀರೇ ಆಗೂದು. ಅದs, ಒಂದ ಬಿಟ್ಟು ಎರಡ ಜಿಲೇಬೀ ತಿನ್ನರಿ. ಕಮರಥೇರಿ ಸುರುವs. ಶ್ಯಾಮರಾವ್, ನೀವೇನೋ ಭಿಡೇಮಾಡಿ ಕೊಂಬೂಹಾಂಗ ಕಾಣಸ್ತದರ್ರೈಪಾ? ನೀವs ಹೀಂಗ ಮಾಡಿದರ, ನಮಗೂ ಅರಹೊಟ್ಟಿ ಆಗತದ ನೋಡಿರಿ."

ಶ್ಯಾಮರಾಯುನನ್ನು ಆಗ್ರಹಪಡಿಸುತ್ತ, ನಿರ್ಭಿಡೆಯಿಂದಲೇ, ಶ್ರೀಖಂಡ ಪುರಿಯ ಧ್ವಂಸರತರಾಗಿದ್ದರು.

"ಛೇ. ಭಾಳ ಆತ್ರ್ಯಪಾ. ಇಲ್ಲೆ ಬರೂತ್ಲೇ, ಬಾಯೀಸಾಹೇಬರ ಮೇಜ ವಾಸಿ ತಪ್ಪಿದ್ದs ಅಲ್ಲಾ. ಬರೂ ಮುಂದ, ನಾಕ ದಿನಾ, ಅಗಾವ ಉಪವಾಸ ಇದ್ದ ಬರೂದು ಠೀಕಾ. ಅಂದ್ರ ಏನರs ಜಮಾಸ್ತದ."
ಶ್ಯಾಮರಾಯ ರಂಗಕ್ಕನನ್ನು ಖುಷಿಮಾಡುವ ಬೇತಿನಿಂದ ಮಾತನಾಡಿದ.

"ನೀವೇನು ಅಂಥಾ ಉಣಬಾರದ ಉಣಾವ್ರಿ. ಎರಡ ಬಸೀ ಶ್ರೀಖಂಡ ದಾಗs ಕೂತೀರಿ, ಇನಾ. ನಾಕ ಬಸೀನರs ತಗೋಳದೇ ಏಳ್ವಾಂಗಿಲ್ಲ ಶ್ಯಾಮ

ರಾವ್. ಬೇಕಾರ ಕಡೀ ಅನ್ನಾ ಬಿಡಾಕ್ಯರಂತ. 'ವಿಷ್ಣೂ, ತೂ ವಿಚಾರ್‍ವತ ಉಭಾರೂ ನಕೋಸ. ವಾಢತ ಜಾ. ಶ್ಯಾಮರಾಂವನಾ ಆಣಖೀನ ಏಕ ಬಸೀಭರ ಶ್ರೀಖಂಡ ವಾಢ.'... ಸಾಹೇಬರು ಇಲ್ಲಂತ ಭಿಡೇಮಾಡಿಕೋಬ್ಯಾಡರಿ... ಶ್ಯಾಮರಾವ್, ನೀವೇನು ಹೊರಗಿನವರು ಅಲ್ಲಾ."
ರಂಗಕ್ಕ ಆಗ್ರಹಪಡಿಸತೊಡಗಿದರು.

"ಅದೇನ ಇಲ್ಲ ಬಾಯೀಸಾಹೇಬ. ಭಿಡೇ ಯಾತಕ ಅದಕ್ಕs. ಉಳ್ಳಿಕ್ಕಿ-ತಿಲ್ಲಿಕ್ಕಿ ಯಾತರ ಭಿಡೇ. ಆದರೂ ನೋಡರಿ. ಚೋಟ ಹೊಟ್ಟೀ ಒಳಗ ಎಷ್ಟಂತರ ಹಿಡಿಸೀತು? ಇಂದ ಬಾಯೀಸಾಹೇಬರು ಖುದ್ದ ತಾಂವs ಹೋಗೂಣಾತು ಬಾಜಾರಕ. ನನಗ ಹೇಳಿದ್ದರೂ ಆಗತಿತ್ತಲಾ. ಖಾಸಗೀ ಖರೀದೀ ಏನರs ಇರಬೇಕಂತ ನಾನು ಬರಲೇನು ಅಂತ ಕೇಳಲಿಲ್ಲಾ."

"ಖಾಸಗೀ ಖರೀದಿ ಯಾತರದು ಶ್ಯಾಮರಾವ್? ಈಗ ಶಕೂ ಕಾಲೇಜಕ ಹೋಗೂ ಹುಡಿಗಿ. ಅಕೀಗೆ ನೂರಾಎಂಟು ಸಾಮಾನ ಬೇಕಾಗತಾವ. ಪೈಲಾ ತಾರೀಖಿಗೆ ಅಕೀ ಯಾದೀ ತಯಾರs ಇರತದ. ನಿಮ್ಮ ಸುರೇಶಂದೂ ಪರೀಕ್ಷಾ ಮುಗೀತಲ್ಲs? ಎಂದ ಬರಾಂವ ಅಂವಾ? ಲಗೂನs ಕರಸಿಬಿಡರಿ."

"ಪರೀಕ್ಷಾ ಮುಗದು ಹದನೈದ ದಿನದ ಮ್ಯಾಲ ಆತು. ಭಲೋ ಮಾಡ್ಯಾನಂತ. ಕ್ಲಾಸ ಬಂದರೂ ಬಂದಾನು. ಮುಂದ ಏನ ಮಾಡಾಂವಾ ಅನೂದನ್ನ ಅವನ್ನs ಕೇಳಿ ಠರಾಸಬೇಕಾಗೇದ. 'ಫಸ್ಟ್‌ಕ್ಲಾಸ್' ಬಂದರ, 'ಅಸಿಸ್ಟಂಟ್ ಎಂಜಿನಿಯರ' ಜಾಗಾ ನಿರಾಯಾಸಲೇ ಸಿಗತದ. ಮುಂದ ಏರಕೋತ ಹೋಗಲಿಕ್ಕಿ ವ್ಯಾಳ್ಯಾ ಹತ್ತೂದಿಲ್ಲಾ. ಮುಂಬೈಯಾಗೂ ದೊಡ್ಡ ಫರ್ಮ ಅವs. ಅಲ್ಲೆ ಸೇರಿಕೊಂಡರೂ ದೊಡ್ಡ ಪಗಾರಾ ಸಿಕ್ಕs ಸಿಗತದ. ಅಂವಾ ತನಗ ಠೀಕ ಅನಿಸಿ ಧಾಂಗ ಮಾಡಲಿ."
ರಂಗಕ್ಕನ – ಕು. ಚಿ. ಶಕೂನ – ರಾ. ಸಾ. ಠೋಮರೇಮಾಮಾನ, ಉತ್ಸಾಹ, ಲವಲವಿಕೆಯನ್ನು ಕೆರಳಿಸುತ್ತ ಶ್ಯಾಮರಾಯ ಭಂಪಿನ ಸುರಬತ್ತಿ ಹಚ್ಚಿದ.

"ಶಕೂ, ನಿನ್ನ ಊಟ ಮುಗದಿದ್ದರ, ಹಾಲಿನ್ಯಾಗ ಅಷ್ಟ ಎಲೀ-ಅಡಿಕೀ ತಂಬಾಕಾ ಇಡೂ ನೋಡೂಣು."

ರಂಗಕ್ಕ ಮುದ್ದಾಂ ಶಕೂನನ್ನು ಆ ಜಾಗ ಬಿಡಿಸಿದರು. ಶ್ಯಾಮರಾಯನ ಮುಂದೆ ತನ್ನದೇ ವಿಷಯ ನಡೆಯುತ್ತಿರುವಾಗ, ತಾನು ಅಲ್ಲಿರುವದು ಸರಿಯಲ್ಲ

ವೆಂದು. ಈಗ ಬಹಳೇ ಪ್ರೋಕ್ತಳಾದ ಶಕೂ ಊಹಿಸಿ, ಕೈತೊಳೆದುಕೊಳ್ಳುವ ನೆವದಿಂದ ಎದ್ದುಬಿಟ್ಟಳು.

"ಮಾಮಾ, ಎಲ್ಲಾ ತಯಾರ ಅದs ನೋಡರಿ ಹಾಲಿನ್ಯಾಗ."
ಎಂದು ಒದರಿ ಹೇಳಿ ತನ್ನ ಕೋಣೆಗೆ ಹೋದಳು.

ತಾವೂ ಕೈತೊಳೆದುಕೊಂಡು ಮಾಮಾ, ರಂಗಕ್ಕ, ಶ್ಯಾಮರಾಯರು ಪಾನ-ಸುಪಾರಿಗೆ ಹಾಲಿನಲ್ಲಿ ನೆರೆದರು.

"ವಿಷ್ಣೂ, ತೂ ತೇವಢs, ಖಾದರಚ ವ್ಯವಸ್ಥಾ ಬsಘ. ಮಧಲ್ಯಾ ಘರೀ ವಾಢ ತ್ಯಾಂಚೇ ಪಾನ."
ಎಂದು ಹಾಲಿನಿಂದಲೇ ಅಡುಗೆಯ ವಿಷ್ಣೂನಿಗೆ ಆಜ್ಞಾಪಿಸಿ, ಶ್ಯಾಮರಾಯನ ಅನುನಯಕ್ಕೆ ಕುಳಿತರು.

"ಶ್ಯಾಮರಾವ್, ಇಂದ ಸಾಹೇಬರಿದ್ದರ ಠೀಕ ಆಗತಿತ್ತು. ಹರಟೀ-ಮಾತಿಗಷ್ಟು ಮಜಾ ಬರತಿತ್ತು. ನಿಮಗs ಅಷ್ಟು ಹಿಡದಬಿಟ್ಟಹಾಂಗ ಆಗತಿರಬೇಕು. ನೀವೂ ತಿಂಗಳಾನಗಟ್ಟಲೇ ಇಕಡೆ ಹಾಯಲೇ ಇಲ್ಲಾ. ಅಪರೂಪಧಾಂಗ ನೀವು ಬರೂದಕ ಅವರೂ ಕ್ಯಾಂಪ ಮ್ಯಾಲ ಹೋಗೂದಕ ಗಂಟs ಬಿತ್ತು. ನಿಮಗೇನು ಈ ಮನೀ ಹೊರಗಿಂದಲ್ಲಾ. ದೇವರ ದಯದಿಂದ ನಾತೇ ಕೂಡಿತಂದರ, ಸೋಯು ಠೀಕನs ಆತು. ಎಲ್ಲಾ ನಿಮ್ಮನ್ನs ಕೂಡೇದ. ಸುರೇಶಂದೂ ಕಲಿಯೂದು ಮುಗೀತು. ಹುಡಗೀದೇನು? ಲಗ್ನ ಆಗೂ ತನಕಾ ಕಾಲೇಜಕ ಹೋಗಾಕಿ. ಆಕೀ ಏನು ಕಲ್ತು, ಬೀ.ಏ. ಆಗಿ ನವಕರಿ ಮಾಡಬೇಕಾಗೇದ? ಕಲಿಸೂದು ಅಂತ ಕಲಿಸತೇವು. ದೊಡ್ಡ ಘರಾಣೇ – ಭಲೋ ಕಲ್ತಾಂವಾ – ದೊಡ್ಡ ನೌಕರೀ ಮಾಡೂ ಗಂಡ ಸಿಕ್ಕರ, ತೀರಾ ಕಲೀಲಾರದ ಹ್ಯಾಣತೀ ಅನೂ ಉಣೇವ ಭಾಸ ಆಗಿರಬಾರದಂತ ಅಷ್ಟ ಕಲಸೂದು. ಈಗ ನಂದs ನೋಡರಿ ಎಂಥಾ ಪಂಚೇತಿ ಆಗತದ. ಇವರ ಜೋಡೀ ಎಲ್ಲ್ಯರ ಪಾರ್ಟೀ-ಪಾನ-ಸುಪಾರಿಗೆ ಹೋದರs, ಮಂದಿ ಮಾತಾಡೂ ಇಂಗ್ರೇಜೀ ತಿಳಿಯೂಹಾಂಗಿಲ್ಲ. ಅವರು ನಕ್ಕರ ನಗಬೇಕು ತಿಳೀದೆ ಹುಚ್ಚರ್ಹಾಂಗ. ಇಲ್ಲs, ಏನರs ನೆವಾ ಹೇಳಿ ಅವರ ಜೋಡೀ ಹೋಗೂದನ್ನ ತಪ್ಪಸಬೇಕು. ಸೋನಕ್ಕಾ ನನಕಿಂತಾ ಠೀಕಾ. ನಾಕಾರು ಬುಕ್ಕನರs ಕಲ್ತಾಳ. ಸುರೇಶ ಒಬ್ಬನ್ನs ಕರಸಬ್ಯಾಡರಿ. ಸೋನಕ್ಕಾ, ಉಳದ ಹುಡುಗೂರನೂ ಕರಿಸಿಬಿಡರಿ. ಇಡೀ ಮೇ ತಿಂಗಳ ಸೂಟೀ ನಮ್ಮಲ್ಲೇ ನಿಂದರತಾರ. ನಿಮ್ಮ ಜೋಡೀ

ಆ ಪಳ್ಳ್ಯಾಗ ಏನ ಮಾಡತಾರs. ನಾನs ಸೋನಕ್ಕಗ ಶಕೂನ ಕಡಿಂದ ಪತ್ರಾ ಬರಸಾಕಿ ಇದ್ದೆ. ನೀವs ಬಂದರಿ ಅನಾಯಾಸಾ."

"ಅಕೀಗೆ ಅಲೀಕಡೆ ಮೈಯಾಗ ಠೀಕನs ಇರೂದಿಲ್ಲ ನೋಡರಿ. ಎಡಚೀ-ಬಿಡಚೀ ಸಣ್ಣ ಆಗಿ ಜ್ವರಾ ಬರತಾವ. ಒಂದಿಷ್ಟ ಧಾಂವತೀ ಮಾಡಿದರ ಸಾಕು, ದಮ್ಮಾನs ಹತ್ತಿಬಿಡತದ. ಇಂಜಕ್ಶನ್ ಔಷೂಧಾ ಅಲ್ಲೇ ನಡದದ. ಇಲ್ಲೆ ಕರಕೊಂಡ ಬಂದೇ ಅಂದರ, ಮತ್ತ ಹವಾ-ಪಾಣ್ಯಾಗ ಫರಕ ಬೀಳೂದು. ಏನಂದರೂ ಪುಣೇದಕಿಂತಾ ಬೆಳಗಾಂವೀ ಹವಾ ಒಂದಿಷ್ಟು ಕೋಂದಟಾ."

"ನಮಗೇನು ಇದರ ಪತ್ತೇನs ಹಚ್ಚಿಗೊಟ್ಟಿಲ್ಲಲಾ ಶ್ಯಾಮರಾವ್? ಹೀಂಗ್ಯಾಕ ಮಾಡಿದಿರಿ? ಇಷ್ಟ ಸಾರೇ ಬರತೀರಿ. ಒಮ್ಮ್ಯೂ ಇದರ ದಶಿಂದ ಚಕಾರ ಶಬ್ದ ತಗದಿಲ್ಲಾ. ಸೋನಕ್ಕಗ ಹೀಂಗ ಆಗೇದ ಅಂತ ತಿಳದಿದ್ರs ನಾವೇ ಹೋಗಿ ನೋಡಿಬರತಿದ್ದೇವಲಾ. ಅದಕೇನು ಆಗಬಾರದ ಧಾಂವತೀ ಆಗತಿತ್ತು. ಈಗನರs ಏನಾತು? ಒಂದ ದಿನಾ ನಾನs ಹೋಗಿ ಬರತೀನಿ. ನನಗ ಯಾಕೋ ಕಸಿವಿಸಿನs ಅನಸಲಿಕ್ಕೆ ಹತ್ತ್ಯ್ಯ. ಪಾಪಾ, ಮನ್ಯಾಗ ಹಿರೇ ಹೆಣ್ಣಮಕ್ಕಳಿದ್ದರ ನೋಡಕೋತಿದ್ದರು. ಅಡಿಗಿ-ನೀರಿನವರದು ಏನ ಭರೋಸಾ?"

"ಛೇ, ಛೇ ಬಾಈಸಾಹೇಬ, ಇದೇನು ಅಂಥಾ ಘಾಬರ್ಯಾಗೂ ಜಡ್ಡ ಅಲ್ಲಾ. ಇಲದಿದ್ದರ ನಾ ಏನು ಹೇಳದೇನs ಇರತಿದ್ದಿನೇ? ನಾ ಇಲ್ಲೇ ನಿಂದರತಿದ್ದನೇ? ಜೀವದಕಿಂತಾ ಘುಳಿಕಿ ಹೆಚ್ಚಿಂದೇನು? ಅಲ್ಲೆ ನಮ್ಮ ಕಾಕಾ ಅವರೂ ಇದ್ದಾರ. ಹುಡುಗೂರೂ ಅವs. ನಮ್ಮ ಧೂರದ ಕಕ್ಕೀನೂ ಅಲ್ಲೇ ಇರತಾರ. ಕಾಳಜೀ ಮಾಡೂ ಕಾರಣೇನ ಇಲ್ಲಾ. ಇಷ್ಟ ಜ್ವರಾ – ನೆಗಡಿ – ಖೆಮ್ಮಿಗೆ ಅಂಜಿದರ ಹ್ಯಾಂಗs? ಇಲ್ಲೆ ಕರಕೊಂಡ ಬಂದರ, ಅಕೀ ನನ್ನ ಜೋಡೀ ಹಳ್ಳಿಗೆ ಬರೂ ಆಕಿ. ಔಷಧ-ಉಪಚಾರ ನೆಟ್ಟಗ ಆಗೂ ಠಿಕಾಣ್ಯಲ್ಲ ಅದು. ಇಂಜಕ್ಶನ್ ಮಾಡಸೂದಕ ಮತ್ತ ಬೆಳಗಾಂವೀ ತನಕಾ ಬರಬೇಕು. ಆತs, ನಾನರs ಒಂದೇ ಠಿಕಾಣದಾಗ ಎಲ್ಲೆ ಇರತೀನಿ? ಹತ್ತ ಕಡೇ ಕೆಲಸ ನಡದಾವs. ಒಂದ ದಿನಾ ಒಂದು ಕೆಲಸದ ಮ್ಯಾಲಂದರೂ ವಾರದ ಏಳ ದಿನಾ ಸಾಲೂದಿಲ್ಲಾ. ಅದಕs ಎಲ್ಲಾ ವಿಚಾರ ಮಾಡಿ, ಅಕಿನ್ನ ಪುಣೇದಾಗ ಇಟ್ಟದ್ದು. ಹ್ಯಾಂಗೂ ತಿಂಗಳದಾಗ ಒಂದೆರಡ ಸಾರೇ ಹೋಗಿ ಬಂದೇ ಬರತೀನಿ. ಇಲ್ಲ ಅನೂ ಹಾಂಗಿಲ್ಲಾ."

"ಅದೇನs ಇರಲಿ ಶ್ಯಾಮರಾವ್. ಸೋನಕ್ಕನ್ನ ಇಲ್ಲಿಗೆ ಕರಸದಿದ್ದರೂ

ನಾವೇ ನಾಕ ದಿನಾ ಹೋಗಿ ಬರೂಣು. ನೀವೂ ನಡೀರಿ ಜೋಡಿಗೇ. ಧುಳೇ ಬಿಟ್ಟಮ್ಯಾಲs ನಂದೂ ಅವರದು ಭೆಟ್ಟಿ ಇಲ್ಲಾ. ಭೆಟ್ಟಿ ಆಧಾಂಗೂ ಆತು. ಹುಡ ಗೂರು-ಹುಪ್ಪಡಿನ್ನ ನೋಡಿಧಾಂಗೂ ಆತು. ಸೋನಕ್ಕನ ಮೈಯಾಗ ಆರಾಮು ಇದ್ದು. ನಕ್ಕ್ಯೋತ-ಕೆಲಕೋತ ಇದ್ದರ – ಶಕೂನ್ನೂ ತೋರಿಸಿಧಾಂಗ ಆತು. ನಿಮ್ಮ ಹಿರ್‍ಯಾರನೂ ನಾ ನೋಡೇ ಇಲ್ಲಾ. ನನಗ ಅವರು ನಮ್ಮ ಮಾವಾನ ಸಮಾನಾ. ಎಂದ ಹೊರಡೂದು ಹೇಳರಿ?"

ಶ್ಯಾಮರಾಯನ ಜೀವ ಗುದಮರಿಸತೊಡಗಿತು. ಒಗೆದ ರಬ್ಬರಿನ ಚೆಂಡು ಅಷ್ಟೇ ಜೋರಿನಿಂದ ಹಿಂದಿರುಗಿತು. ಸೋನಕ್ಕನ ಜಡ್ಡಿನ ಮಾತ್ರೆಯನ್ನು ಬಿಡದೆ, ಅನ್ಯಕಾರಣ ಹೇಳಿದ್ದರೆ, ಈ ಸಂಕಟದಿಂದ ಪಾರಾಗಬಹುದಾಗಿತ್ತು. ಶ್ಯಾಮ ರಾಯ ತಳಮಳಿಸತೊಡಗಿದ. ತಿಂದ ಶ್ರೀಖಂಡ ದಕ್ಕುವ ದಿಕ್ಕು ಕಾಣಲಿಲ್ಲ. ತಾನು ಜೊತೆಗೆ ಬರದಿದ್ದರೂ, ರಂಗಕ್ಕ ಪುಣೆಗೆ ಪ್ರಯಾಣಿಸುವ ಸಂಭವವಿತ್ತು. ಅವರು ಅಲ್ಲಿಗೆ ಹೋದರೆ, ತನ್ನ ಸಾದ್ಯಂತ ಹಕೀಕತ್ತು – ಗೊತ್ತಾದರೆ – ಇಲ್ಲಿಯ ವರೆಗೂ ತಾನು ಕಟ್ಟುತ್ತ ಬಂದ – ಕಟ್ಟಿದ – ಮನೋರಮ ಹರ್ಮ್ಯ ಒಂದು ನಿಮಿಷದಲ್ಲಿ ನೆಲಸಮವಾಗುವ ಭೀತಿ ನಿಶ್ಚಿತವಿತ್ತು. ಅವನಾದರೂ ಜಾಗರೂಕತೆಯಿಂದಲೇ ದಾರಿ ನಡೆದಿದ್ದ. ಆಜೂ-ಬಾಜೂ ನೋಡೇ ಇದ್ದ. ಚದುರಂಗದ ಆಟದಲ್ಲಿಯ ಗಡಿ ಗಳಿಗೆ ವಿಜಯದ ಕಾಳಜೀ ಇರುವದಿಲ್ಲ. ಕಾಯಿ ನಡೆಯಿಸುವವರ ಕಡೆಗೇ ಕಟಾಕ್ಷ ವಿರುತ್ತದೆ. ಆ ಕಟಾಕ್ಷದಲ್ಲಿ ಅಲಗರ್ಜಿತನವಾದರೆ ಕಾಯಿ ಸಾಯುತ್ತದೆ. ಶ್ಯಾಮರಾಯನ ಕಟಾಕ್ಷ ಪಟ್ಟದ ಮೇಲಿಂದ ಅಚಾನಕವಾಗಿ ಹಾರಿತ್ತು. ಸೋನ ಕ್ಕನ ಜಡ್ಡಿನ ಕಾರಣವನ್ನು ನಾಲಗೆ ಅಜಾಗರೂಕವಾಗಿ ಮಿಂಚಿಸಿತ್ತು. ಶ್ಯಾಮ ರಾಯನ ಕಾಯಿ ಸತ್ತಿತ್ತು.

ಸೋನಕ್ಕನ ಜಡ್ಡಿನ ಕಾರಣವನ್ನು ಕೇಳಿದಾಕ್ಷಣ, ರಂಗಕ್ಕನಿಗಿಂತ ಹೆಚ್ಚು ಉತಾವಿಳರಾಗಿ ಸಾಹೇಬರೂ ಪುಣೆಗೆ ಹೊರಡುವವರೇ. ಅವರನ್ನು ಹೋಗ ಗೊಡದಿರುವದಕ್ಕೆ ಅವನಲ್ಲಿ ಸಬಲ ಕಾರಣಗಳೂ ಇರಲಿಲ್ಲ. ಯಾಕೆ ಹೋಗುತ್ತೀರಿ ಎಂದು ಕೇಳಲು ನಾಲಗೆಯೂ ಏಳುತ್ತಿರಲಿಲ್ಲ.

ಸುರೇಶನನ್ನು ಕರೆಸುತ್ತೇನೆಂದು ಹೇಳಿದ್ದು – ಅವನು ಪರೀಕ್ಷೆಯಲ್ಲಿ ಚೆನ್ನಾಗಿ ಮಾಡಿದ್ದಾನೆ –ಫರ್ಸ್ಟ್‌ಕ್ಲಾಸ್ ಬರಬಹುದು ಎಂದು ಹೇಳಿದ್ದು ಎಲ್ಲಾ ಬುರುಡೆ ಯಾಗಿತ್ತು. ಸುರೇಶ ಬೀ.ಈ. ಎರಡನೇ ವರುಷದಲ್ಲಿದ್ದಾಗಲೂ ಶ್ಯಾಮರಾಯ

ಹೀಗೇ ಹೇಳಿದ್ದ. ಸಾಂಗಲಿಯಿಂದ ಹುಡುಗರ ಅಜ್ಜ ಅಜ್ಜಿ ಪುಣೆಗೆ ಹೋಗಿದ್ದಾರೆ, ಅವರು ಹುಡುಗರನ್ನು ಕಾಣಲು ಹೋದಾಗ ಮುದ್ದಾಂ, ಅವರಿಂದ ಹುಡುಗ ರನ್ನು ಅಗಲಿಸಿ ಇಲ್ಲಿಗೆ ಕರೆಸುವದು ಸರಿಕಾಣದು ಎಂದು ತಾನೇ ಎಂಟು ದಿನ ಹೋಗಿ ನಿಂತು ಬಂದೆನೆಂದು ಸುಣ್ಣ-ಬಣ್ಣ ಎಳೆದಿದ್ದ. ಆ ಮಾತಿಗೆ ಪರುಷದ ಮೇಲಾಯಿತು. ಸುಣ್ಣ-ಬಣ್ಣದ ಚಕಳಿ ಹಾರಿ, ಅವನ ಡಾವಿನ ಮುಖ ಹಳೆಯ ಕೃಷ್ಣಾಂಜಿನದಂತೆ ಹೌಹಾರಿ ಹುಚ್ಚಿಡತೊಡಗಿತು. "ಹ್ಯಾಂಗ ಆತ ಶ್ಯಾಮ್ಯಾ ನಿನ್ನ ಫಜೀತಿ" ಎಂದು ಅದು ಖೊಕ್ ಎಂದು ನಕ್ಕಂತಾಯಿತು. ಹೊಟ್ಟೆಯಲ್ಲಿಯ ಸಂಕಟ ಗಂಟಲಿಗೆ ಬಂದು ಗದ್ದಲಮಾಡತೊಡಗಿತು. ಶ್ಯಾಮರಾಯ ದೀರ್ಘವಾಗಿ ಆಕಳಿಸಿದ್ದನ್ನು ನೋಡಿ ರಂಗಕ್ಕ—

"ಆಕರಾ ಆತು. ನಿದ್ದಿ ಬಂದಿರಬೇಕು ನಿಮಗ. ಮಲಗರಿನ್ನ"

ಎಂದು ಶ್ಯಾಮರಾಯನಿಗೆ ಮಲಗಲು ಪರವಾನಗೀ ಕೊಟ್ಟರು. ಶ್ಯಾಮರಾಯ ತನಗಾಗಿ ಬಿಟ್ಟುಕೊಟ್ಟ ಕೋಣೆಗೆ ಒಂದೇ ನೆಗೆತದಲ್ಲಿ ಹಾರಿ ಜೀವ ಬಚಾವಾಯಿ ತೆಂದು, ಇನ್ನೊಮ್ಮೆ ಆಕಳಿಸಿ, ಗೇಣೆತ್ತರದ ಗಾದಿಯ ಮೇಲೆ ದೇಹ ಚೆಲ್ಲಿದ.

ರಂಗಕ್ಕ ಒಳಗೆ ಬಂದು ಖಾದರನ ಊಟ ಮುಗಿದ ಬಗ್ಗೆ ವಿಚಾರಿಸಿದಳು. ಶ್ಯಾಮರಾಯನಿಂದ ಮಲಗುವ ಪರವಾನಗಿಯನ್ನು ಅಪೇಕ್ಷಿಸುತ್ತ,ಅವನು ಹೊರಗೆ ಬರುವ ನಿರೀಕ್ಷಣೆಯಲ್ಲಿ ಕಾದು ಕುಳಿತ. ಖಾದರ್, ಈಗಾಗಲೇ ಒಂದು ಬೀಡೀ ಬಂಡಲ್ – ಶ್ರೀಖಂಡ ಹೊಡೆದ ಪ್ರಯುಕ್ತ – ಅರ್ಧ ಪಾಕೀಟ ಚಾರಮೀನಾರ ಫಸ್ತ ಮಾಡಿದ್ದ. ಬಂಗಲೆಯ ಪೋರ್ಚಿನ ಕಟ್ಟೆಯ ಮೇಲೆ ತೂಕಡಿಸುತ್ತ ಕುಳಿತಿದ್ದ. ಶ್ಯಾಮರಾಯನ ಬದಲು, ರಂಗಕ್ಕ ಬಾಗಿಲ ತೆರೆದು ಬಂದದ್ದನ್ನು ನೋಡಿ, ಗೌರವ ದಿಂದ ಎದ್ದು ನಿಂತ.

"ಖಾದರ್ ಏನು?"

ಗೊತ್ತಿದ್ದೂ ರಂಗಕ್ಕ ಕೇಳಿದರು.

"ಹೌದರೀ ಬಾಯೀಸಾಬ"

ಖಾದರ ಉತ್ತರಿಸಿದ.

"ಊಟ ಆತಿಲ್ಲೋ ಖಾದರ್? ಎಲ್ಲೆ ಮಲಗಾಂವಾ? ಆ ಚೌಕೀದಾರನ ಖೋಲ್ಯಾಗ ಜಾಗ ಇರಬೇಕು. ಅಲ್ಲೇ ಮಲಗು. ಪಡಸಾಲ್ಯಾಗ ಝೂಜೂಮ್ ಅದ ಒಯ್ಯಿ."

ರಂಗಕ್ಕನ ಆದರದ ಮಾತಿನಿಂದ ಕರಗಿದ ಖಾದರ,

"ಬ್ಯಾಡರೀ ಬಾಯೀಸಾಬ. ನಾ ಮೋಟರದಾಗs ಮಲಗತೀನಿ. ರಾವ ಸಾಬರು ಹರ್‍ಯಾಗs ಹೊರಡತಾರೇನೋ ಕೇಳಬೇಕಂತ ಕೂತಿದ್ನಿರೀ."

"ಅಷ್ಟ ಲಗೂನs ಏನು ಹೊರಡೂದಿಲ್ಲಾ. ಆರ, ಸಾಡೇ ಆರ ಆದೀತು ಹೊರಡಲಿಕ್ಕೆ. ಖಾದರ್, ನಾಳೆ ಹೋಗೂವಾಗ ಅಷ್ಟ ಭೆಟ್ಟಿ ಆಗಿ ಹೋಗು. ನಿನ್ನ ಹುಡುಗೂರಿಗೆ ಅಷ್ಟ ಅರಿವೀ ತಗದ ಇಟ್ಟೀನಿ. ಶಕೂ ಸಣ್ಣಾಕಿ ಇದ್ದಾಗ ಹೊಲಿಸಿದ್ದು. ಹೊಸಾವು ಹ್ಯಾಂಗ ಇದ್ದೂ ಹಾಂಗs ಅವs. ನಿನ್ನ ಹುಡುಗೂರರs ಹಾಕಿಕೊಳ್ಳೀ. ಬೂಬೂನ್ನ ಛಮ್ಮ ಕರಕೊಂಡ ಬಾರೋ? ಎಂದ ಧುಳೇ ಬಿಟ್ಟ ಮ್ಯಾಲ ಆಕೀದೂ ಭೆಟ್ಟೀನೇ ಆಗಿಲ್ಲಾ. ಠೀಕ ಇದ್ದಾಳಿಲ್ಲೋ?"

"ತಮ್ಮ ಪುಣ್ಯಾ ಬಾಯೀಸಾಬ. ಎಲ್ಲಾರೂ ಅರಾಮ ಅದೀವಿ. ಆಕೀನೂ ಭಾಳ ನೆನಿಸಿಗೋತಾಳ್ರೀ ನಿಮ್ಮನ್ನ. ನಾ, ಸಾಬರ ಜೋಡೀ ಹೀಂಗ ಅಡ್ಡಾಡ್ಯಾಂವಾ. ಅವರ್ನೆಲ್ಲಾ ಕಟಿಗೊಂಡು ಎಲ್ಲೆ ತಿರಗೂದ ಆಗತದರಿ? ಅದಕs ಒಂದs ಠಿಕಾಣೇದಾಗ ಇರ್‍ಲ್ಯಂತ ಆಕಿನ್ನ, ಹುಡುಗೂರನ ತೌರಮನ್ಯಾಗs ಇಟ್ಟೀನ್ರಿ."

"ನಿನಗೂ ತ್ರಾಸ ಅಪಾ ಜೀವಕ. ಶ್ಯಾಮರಾಯರ ಕಡೇ ಇದ್ದು ಇಪ್ಪತ್ತ ವರ್ಷದ ಮ್ಯಾಲ ಆತಲs? ನೌಕರೀ ಅಂದರ ಹೀಂಗ ಇಮಾನೀಲೇ ಮಾಡಬೇಕು. ಮಲಕೋ ಅಪಾ ಇನ್ನ. ಹೊತ್ತ ಆತು."

ಎಂದು ರಂಗಕ್ಕ ಎದ್ದು ಒಳಗೆ ನಡೆದರು. ಬಂಗಲೇ ಚೌಕೀದಾರ, ಖಾದರನನ್ನು ಕರೆದುಕೊಂಡು ತನ್ನ ಕೋಣೆಯ ಕಡೆಗೆ ನಡೆದ.

ಮರುದಿನ ಶ್ಯಾಮರಾಯ ಹೊರಡುವದಕ್ಕಿಂತ ಮುಂಚಿತವಾಗಿಯೇ, ಖಾದರ, ರಂಗಕ್ಕನ ಆದೇಶದಂತೆ ಅವರಿಗೆ ಭೆಟ್ಟಿಯಾಗಿ, ಕು. ಚಿ. ಶಕೂನ ಬಾಲ್ಯಾವಸ್ಥೆಯಲ್ಲಿಯ ವಾಸಾಂಸಿಗಳನ್ನು ಪಡೆದುಕೊಂಡಿದ್ದ. ರಂಗಕ್ಕ ಖಾದರನನ್ನು ಅರಿವೆಯ ಋಣದಲ್ಲಿ ಹಾಕಿ, ಹೋದ ತಿಂಗಳು, ಶ್ಯಾಮರಾಯ, ಹರಕಚಂದ ಮಾರವಾಡಿಯಲ್ಲಿ ಯಾರಿಗಾಗಿ, ಯಾರನ್ನು ಕರೆದುಕೊಂಡು ಸೀರೆ-ಪತ್ತಲುಗಳನ್ನು ಖರೀದಿ ಮಾಡಿದರೆಂದು ಕೇಳಿಯೇಬಿಟ್ಟರು. ಖಾದರ ತಡವರಿಸದೆ —

"ಆಕೀರೀ, ನಮ್ಮ ರಾವಸಾಬರ ವೈವಾಟದಾಗಿನ ಬಸಗೋಂಡಪ್ಪನ ತಂಗಿರೀ. ಹ್ಯಾಂಗೂ ಹೋಗತೀರಿ ಇಕೀಗಷ್ಟು ಖಾತ್ರೀ ಮಾಲ ಇಸಕೊಡರಿ ನಿಮ್ಮ

ಖಾತೇದ ಅಂಗಡ್ಯಾಗ, ಅಂತ ಬಸಗೋಂಡ ಹೇಳಿದ್ರಿ. ಅದಕ ಕರಕೊಂಡ ಬಂದಿದ್ವಿ. ನಮ್ಮ ರಾವಸಾಬರು, ಹಾಂಗ ಇಲ್ಲದ ಲಿಗಾಡ ಕೊಳ್ಳಿಗೆ ಹಾಕ್ಕೊಂಬವ ರಲ್ಲರೀ. ಅವರದು – ಬಸಗೋಂಡಪ್ಪಂದು ಈಗೀಗ ಭಾರೀ ವ್ಯವಾಟಂತ ಕಬೂಲ ಮಾಡಿದ್ದರಿ."

ಅನುಮಾನ ಬರದಂತೆ ಖಾದರ ಹೇಳಿದ.

"ಶೇಡಜೀ, ಯಾರೋ ಬಾಯಿಡಿ ಇದ್ದರಂತ ಅಂದಾ. ಅದಕ ಸಗಟ ಕೇಳಿದೆ. ಯಾ ಬಾಯಡೀ ಅಂತs ?"

ರಂಗಕ್ಕನ ಕುತೂಹಲ ಇನ್ನೂ ಅದಮನೀಯವಾಗಿಯೇ ಇತ್ತು. ಅಗೆದರೆ ತುಣುಕು-ಮಿಣುಕು ಕೈಗೆ ಹತ್ತುವ ಭರವಸೆ ಇತ್ತು. ಆದರೆ ಅಷ್ಟರಲ್ಲಿ ಶ್ಯಾಮ ರಾಯನ ಗಾಡಿಯ ಹಾರ್ನ ಕೇಳಿಬಂದಿತು. ಖಾದರ ಗಡಿಬಿಡಿಯಿಂದ ಬಾಯೀ ಸಾಹೇಬರಿಗೆ ಸಲಾಮು ಒಪ್ಪಿಸಿ ಹೊರಟುಬಿಟ್ಟ. "ಗಿರಾಣಾಂಚೇ ದ್ಯಾನ" ಎಂದು ಗ್ರಹಣದ ದಿನ ದಾನ ಕೇಳುತ್ತ ಹೊರಟವರಿಗೆ, ಈ ವಾಸಾಂಸಿ ಕೊಟ್ಟಿದ್ದರೆ ಒಂದು ತೊಲೆಯಷ್ಟು ಪುಣ್ಯವಾದರೂ ದಕ್ಕುತ್ತಿತ್ತು. ರಂಗಕ್ಕನಿಗೆ ಅರಿವೆ ಕೊಟ್ಟ ಬಗ್ಗೆ ಅತೃಪ್ತಿಯಾಗದಿದ್ದರೂ ಸುದ್ದಿ ತಿಳಿಯಲಿಲ್ಲವೆಂದು ನಿರಾಶೆಯಾಯಿತು. ಬಿಲ್ಲಿನ ಸಲುವಾಗಿ ಏಳೆಂಟು ದಿನಗಳಲ್ಲಿ ಶ್ಯಾಮರಾಯ ಮತ್ತೆ ಬರಲಿದ್ದ. ಆಗ ಖಾದರನಿಂದ ಸುದ್ದಿ ಹೊರಡಿಸುವ ಸನ್ನಾಹ ಮಾಡಿದರಾಯಿತೆಂದು ರಂಗಕ್ಕ ಸಮಾಧಾನಹಚ್ಚಿಕೊಂಡರು.

ಗಾಡಿ ಬಂಗಲೆಯನ್ನು ಬಿಟ್ಟು ಕಿಲ್ಲೆಯ ಮಹಾದ್ವಾರದಿಂದ ಹೊರಗೆ ಬರು ತ್ತಲೇ, ಶ್ಯಾಮರಾಯ ಖಾದರನಿಗೆ. ಗಾಡಿಯನ್ನು ಹರಕಚಂದನ ಅಂಗಡಿಗೆ ಹೊಡೆ ಯುವಂತೆ ತಿಳಿಸಿದ.

"ರಾವಸಾಬ್. ಆ ಶೇಡಜೀ ಅಂಗಡಿ ಬ್ಯಾಡರಿ. ಬ್ಯಾರೇ ಕಡೇ ನೋಡ್ರಿ" ಗಾಡಿಯನ್ನು ತರಬುತ್ತ ಖಾದರ ಹೇಳಿದ.

"ಯಾಕೋ ಖಾದರ್, ಅವನ ಕಡೇ ಯಾಕ ಬ್ಯಾಡಾ? ನಿಂದು-ಅವಂದು ಏನರs ಬಿಘಡಾಸ್ತೇನು ?"

"ನಂದೇನ ಬಿಘಡಾಸಬೇಕಾಗೇದರಿ? ಆ ಮಗಾ ಎಲ್ಲಾ ಘೋಟಾಳೀ ಮಾಡಿ ನಿಮ್ಮದs ಬಿಘಡಾಸ್ಯಾನರೀ. ಹೋದ ಸಾರೆ ನಾವು ಶೀರೀ ತಗೊಂಡದ್ದನ್ನ, ನಮ್ಮ ಜೊಡೀ ಸಣ್ಣ ಬೀಬೀ ಬಂದದ್ದನ್ನ, ಎಲ್ಲಾ ಸುದ್ದೀ ಬಾಯೀಸಾಬರಿಗೆ

ಮುಟ್ಟಿಸ್ಯಾಸರೀ. ಬಾಯೀಸಾಬರು ನನ್ನ ಕರದು ಕೇಳಿದರು. ಪತ್ತೇನs ಹಚ್ಚಿಗೊಡಲಿಲ್ಲಾ. ಇನಾ ಏನ ಕೇಳಾವರಿದ್ದರೋ ಏನೋ. ನೀವು ಹಾರ್‍ನ ಬಾರಸಿದರಿ. ಸಟ್ಟನೆ ನಿಸಟಿದೆ."

"ಖಾದರ್, ಅಲ್ಲೇ ಯಾಕ ಇದನ್ನ ಹೇಳಲಿಲ್ಲಾ. ಬಾಯೀಸಾಬರ ಮೋಟೀವ್ಯಾಲ ಹೊಡಿಯೂ ಹ್ಯಾಂಗ ಹೇಳತಿದ್ದೆನ್ಯಲಾ? ಬಸವಂತಿ ನನ್ನ ರಖೇಲೀ ಯುಂತs. ಯಾರಪ್ಪಂದೇನ ಅಂಜಿಕಿ ನನಗ? ಬಸವಂತಿ, ನಮ್ಮ ಹೊಸಾ ಬಾಯೀ ಅಂತ ನೀನೇ ಯಾಕ ಹೇಳಲಿಲ್ಲಾ? ನಾಲಾಯುಖ ಇದ್ದೀ ಖಾದರ್, ನನ್ನ ಡ್ರಾಯುವ್ಹರ್ ಆಗಲಿಕ್ಕೆ. ಹರಕಚಂದನ ಅಂಗಡಿಗೆ ಹೊಡೀ ಗಾಡೀ. ಆ ಮಗ್ಗ ಹೇಳಿ ಇಡತೀನಿ. ನಿಮ್ಮ ಬಾಯೀಸಾಬರು ಬಂದರ, ಶ್ಯಾಮರಾಯಾ, ತನ್ನ ರಖೇಲೀಗೆ ಇಷ್ಟಿಷ್ಟ ಅರಿವೀ ಒಯ್ದುರಂತ ಹೇಳೂ ಅಂತ. ಮಗ್ಗs ವ್ಯಾಪಾರ ಬೇಕೋ – ಏನ ಊರ ಕಿಲಾಪ ಬೇಕೋ, ಕೇಳೇಬಿಡತೇನಿ? ಮುಂದಿನ ಸಾರೇ ಬಸವಂತಿನ್ನ ಕರಕೊಂಡ ಬಂದು ಬೆಳಗಾಂವ್ಯಾಗ ಅಡ್ಡ್ಯಾಡದಿದ್ರ ನಾ ನಮ್ಮ ಅಪ್ಪನ ಉತ್ತರಕ ಹುಟ್ಟಿದಂವನೇ ಅಲ್ಲಾ."

ಶ್ಯಾಮರಾಯನ ಆತ್ಮಗತ ಸಂಭಾಷಣೆಯನ್ನು – ಉತ್ತರ-ಪೌರುಷವನ್ನು ಕೇಳುತ್ತ ಖಾದರ, ಮೋಟರನ್ನು ರಸ್ತೆಯ ಒಂದು ಬದಿಗೆ ನಿಲ್ಲಿಸಿ, 'ಸ್ಟಿಅರಿಂಗ'ದ ಮೇಲೆ ಎರಡೂ ಕೈ ಇಟ್ಟುಕೊಂಡು ಸ್ವಸ್ಥವಾಗಿ ಕುಳಿತಿದ್ದ.

"ಹರಕಚಂದನ್ನ ಬಿಡೂ, ಯಾವನರs ಮುರಕಚಂದ ಇರವಲ್ಲನ್ಯಾಕs ಅಲ್ಲಿಗೆ ಹೊಡೀ ಗಾಡೀ. ಬಸವಂತಿಗೆ ಅರಿವೀ ತಗೋಬೇಕಾಗೇದ."

ಪತ್ತಲ, ಬ್ಲಾವುಜ-ಪೀಸ್ ಖರೀದಿ ಮುಗಿದು ಗಾಡಿ ಊರ ಮುಖವಾಯಿತು. ಶ್ಯಾಮರಾಯನ ಸಂತಾಪಕ್ಕೆ ಇತಿಮಿತಿ ಇಲ್ಲದಾಗಿತ್ತು. ರಂಗಕ್ಕನ ಉಪದ್ವ್ಯಾಪಿತನಕ್ಕೆ ಅವನು ಘನ ರೋಸಿದ್ದ. ಪಿತ್ತಶಮನಕ್ಕೆ ಬಸವಂತಿಯ ಸಾನ್ನಿಧ್ಯವೇ ದಿವ್ಯ ಔಷಧವೆಂದು ಠರಾಯಿಸಿದ್ದ. ಕದ್ದು-ಮುಚ್ಚಿ ಏನೂ ಬೇಡ. ತೋಯಿಸಿಕೊಂಡವನಿಗೆ ಮಳೆಯ ಅಂಜಿಕೆ ಏಕೆ? ಬಸವಂತಿ, ಡಾಣಾಡಂಗುರ ಮೋಟರಿನಲ್ಲಿ ಬಂದು ವಾಡೆಯಲ್ಲಿ ನಿಂತುಬಿಡಲಿ. ಬಹಳವಾದರೆ, ಅಪ್ಪನ ಕಿತ್ತೇ ಮಗ ತೀಡಿದ ಎಂದು ಜನ ಆಡಿಕೊಂಡಾರು. ಅವರು ಆಡಿಕೊಳ್ಳುವರೆಂದು ತಾನು ಅಳುಕಿ ಬದುಕಬೇಕಾಗಿಲ್ಲ. ಗಂಡುಸಾಗಿ ಬದುಕಬೇಕಾಗಿದೆ. ನೂರು. ಸಾವಿರ, ಆಡುವ ನಾಲಿಗೆಯ ಮಸೆತವನ್ನು ಎದುರಿಸಿ ಬದುಕಬೇಕಾಗಿದೆ. ಕಾಕಾ,

ಗಿರಿಜಾನನ್ನು ತಂದಾಗ ಜನ ಹೀಗೇ ಆಡಿಕೊಂಡಿರಬೇಕು. ತಾನೂ ಒಂದೆರಡು ಸಲ ಆ ಬಗ್ಗೆ ಆಡಿದ್ದ. ಕಾಕೂ ಕಣ್ಣು ವಟಾರಿಸಿದರೆಂದು ಸುಮ್ಮನಾದ. ಅಂದು ಆಡಿದ ನಾಲಿಗೆ ಸತ್ತು ನಿಃಸ್ಸತ್ವವಾದವು. ಕಾಕಾ-ಗಿರಿಜಾ ಸುಖಿಯಾದರು.

"ಖಾದರ್, ಮುರಗೀ-ಬಿರಿಯಾಣಿ ಪಕಾನೆವಾಲೇ ಅಚ್ಛಾ ಆದಮಿ ಹೈ ತೇರೆ ಸಮಝಮೇ. ಜರಾ ತರಾಶ ಕರೋ. ಗಯೋ ಬಾದ ಲೇಕ್ಕೊ ಆವ್ ಉಸ್ಕೊ."

ಶ್ಯಾಮರಾಯನ ಸ್ಕ್ರೂ ಢಿಲಾ ಆದ ಪ್ರತ್ಯಯ ಖಾದರನಿಗೆ ಬರತೊಡಗಿತು. ಬಾಯೀಸಾಹೇಬರಿಗೆ ಬಸವಂತಿಯು – ತಮ್ಮ ಸಂಬಂಧ ಬಂದಿರುವ ವಿಷಯ ಗೊತ್ತಾಗಿರಬೇಕೆಂಬ ಕಲ್ಪನೆಯಿಂದ ಶಾಮರಾಯ ಬೇಭಾನನಾಗಿರುವ ಸಂಭವವಿತ್ತು. ಶ್ಯಾಮರಾಯನ ಉತಾವಿಳ ಸ್ವಭಾವ ಖಾದರನಿಗೆ ಕಳೆದ ಇಪ್ಪತ್ತು ವರ್ಷದಿಂದಲೂ ಮಾಹಿತಿಯದು. ಸೋನಕ್ಕನನ್ನು ಬಿಟ್ಟ ಕತೆಯೂ ಖಾದರನಿಗೆ ಗೊತ್ತಿದೆ. ಆದರೆ ಉಪ್ಪುಣ್ಣುವ ಪ್ರಯುಕ್ತ ಅವನು ಅದಕ್ಕೆ ವಾಚ್ಯತೆ ಕೊಟ್ಟಿಲ್ಲ. ಶ್ಯಾಮರಾಯ ಅವನನ್ನು ಆ ರೀತಿಯಿಂದ ನಡೆಸಿಕೊಳ್ಳುತ್ತಿದ್ದ. ಅವನಿಗೆ ಖಾದರನಲ್ಲಿ ವಿಶ್ವಾಸವೂ ಇತ್ತು. ಖಾದರನಿಗೆ ಶ್ಯಾಮರಾಯನಲ್ಲಿ ವಿಶ್ವಾಸವಿದ್ದರೂ, ಸೊನಕ್ಕನ ಬಗ್ಗೆ ಅಪಾರ ಆದರ-ಗೌರವವಿತ್ತು. ಅವರು ಬಂದು ಶ್ಯಾಮರಾಯನ ಕೂಡ ಮುಂಚಿನಂತೆ ಒಗೆತನ ಮಾಡರೆಂಬ ಖಾತ್ರೀ ಇತ್ತು. ಹೋದ ತಿಂಗಳು ಬೆಳಗಾಂವಿಗೆ ಶೀರಿ ಖರೀದಿಗೆ ಬರುವಾಗ, ಇನ್ನೂ ತಾಸು ರಾತ್ರಿಯಿತ್ತು – ಬಸವಂತಿ ಬಂದು ಶ್ಯಾಮರಾಯನ ಬದಿಯಲ್ಲಿ ಮುಂಡಿತಳಾಗಿ ಪ್ರಯಾಣರತವಾದಾಗಲೇ ಖಾದರನಿಗೆ ಈ "ಪಿರೇಮು" ಪ್ರಕರಣದ ಭಾನಗಡೀ ಉಲಗಡಾ ಆದದ್ದು. ದಾರಿಯಲ್ಲಿ ಶ್ಯಾಮರಾಯ, ಅವನಿಗೆ ಹೇಳಬೇಕಾದದ್ದನ್ನು ಹೇಳಿದ. ಖಾದರ ಕೇಳಿಕೊಂಡ. ಒತ್ತುಖರಡಿನಲ್ಲಿ ಪಸರದೆ, ಮಸಿ ಇಂಗುವಂತೆ, ಶ್ಯಾಮರಾಯನ ಪ್ರಕರಣದ ಹಕೀಕತ್ತನ್ನು ಖಾದರ ದಕ್ಕಿಸಿಕೊಂಡ. ಯಾಕೆ ಎಂದು ಕೇಳಲಿಲ್ಲ. ಅದರ ಬಗ್ಗೆ ಯಾರ ಮುಂದೆ ಚಕಾರ ಶಬ್ದವನ್ನೂ ಎತ್ತಲಿಲ್ಲ. 'ಅಲ್ಲಾಕೆ ಕಸಮ್' ಎಂದು ಕೇಳಿದ್ದನ್ನು ನುಂಗಿಬಿಟ್ಟ.

ಶ್ಯಾಮರಾಯನ ತಲೆ ಹೆಗಲ ಮೇಲೆ ಭದ್ರವಾಗಿರದಾಗ ಅವನು ಮುರಗೀ-ಬಿರಿಯಾಣೀ 'ವ್ಹಾಯಿಟ್‌ಹಾರ್ಸ್' ಬಾಟಲೀ ಮಾತು ಬಹಳ ಆಡುತ್ತಿದ್ದ. ಧುಳೆಯಿಂದ, ಸೋನಕ್ಕ ಹುಡುಗರನ್ನು ಕಟ್ಟಿಕೊಂಡು ಸಾಂಗಲಿಗೆ ಹೊರಟ

ದಿನವೂ, ಅವನು ಹೀಗೇ ಅಕಾಂಡ-ತಾಂಡವ ಮಾಡಿದ್ದನಂತೆ. ಅಖಂಡ ಎರಡು ದಿನ, ಸಾಹೇಬರನ್ನು - ಸೋನಕ್ಕನನ್ನು ಉದ್ಧಾರಮಾಡಿದ್ದನಂತೆ. ಖಾದರನ ಮುಂದೆ ನೂರರ ನೋಟು ಚೆಲ್ಲಿ - "ಸೋಡಾ ಔರ್ ಬಾಟ್ಲೀ ಲಾವ್" ಎಂದು ಹುಕುಂ ಮಾಡಿದ್ದನಂತೆ. ಖಾದರ್ ನೂರರ ನೋಟನ್ನು ಮಡಿಚಿ ಕಿಶೆಯಲ್ಲಿ ಹಾಕಿಕೊಂಡು, ಒಂದು ಬಂಪರ ತುಂಬ ಆಯಿಸ್-ವಾಟರ್ ತಂದು ಕೊಟ್ಟು, ಕಾದ ತಲೆ ಕರಕಾಗದಂತೆ ನೋಡಿಕೊಂಡನಂತೆ. ಶ್ಯಾಮರಾಯನ ಖಾನಾ-ಪೀನಾ ರುಚಿ ಅಷ್ಟು ಅವಾಢವ್ಯವಾಗಿ ಬೆಳೆದಿರಲಿಲ್ಲ. ಆದರೆ ಅದರ ಸವ್ವಯ್ ಇತ್ತು. ಎಡಚಿ ಬಿಡಚಿ ಬೇಕಾಗುತ್ತಿತ್ತು. ಆದರೆ ಇಂಥ ಪ್ರಕರಣ ಖಾದರನಿಗೆ ಅರಿವಿಲ್ಲದಂತೆ - ಬೆಳಗಾಂವಿಯ ಯಾವುದೋ ಪಾರ್ಸಿಯ ಅಂಗಡಿಯಲ್ಲಿ ನಡೆದು ಮುಗಿಯುತಿತ್ತು.

ಬೆಳಗಾಂವಿಯಿಂದ ಹೊರಟ ಶ್ಯಾಮರಾಯನ ಗಾಡಿ......'ಕ್ರಾಸಿಂಗ್'ದ ಹತ್ತಿರ ಬಂದು ನಿಲ್ಲುವದು ರೂಢಿ. ಅಲ್ಲಿ ಒಂದು ಸಿಂಗಲ್ ಚಾ ಕುಡಿದು ಒಂದು ಬೀಡೀ ಸೇದದೆ, ಖಾದರ್ ಗಾಡಿಯನ್ನು ಮುಂದೆ ಬಿಡುವ ತಾಕತ್ತು ಪಡೆಯುವದಿಲ್ಲ. ಖಾದರ್ ಗಾಡಿ ನಿಲ್ಲಿಸಿ ಚಾದಂಗಡಿಗೆ ನಡೆದ. ಶ್ಯಾಮರಾಯನ ಕುದಿ ಇನ್ನೂ ಆರಿಲ್ಲವೆಂಬ ಬಗ್ಗೆ ಖಾದರನಿಗೆ ಖಾತ್ರೀ ಇತ್ತು. ಅವನು ಹರಿವೆಯಲ್ಲಿಯ ತಣ್ಣೀರು ತರಿಸಿ, ಅದರಲ್ಲಿ ಅಖಂಡ ಒಂದು ನಿಂಬೆಯ ಹಣ್ಣನ್ನು ಹಿಂಡಿಸಿ, ನಾಕು ಚಮಚೆಯ ಸಕ್ಕರೆ ಬಿಡಿಸಿ, ಪಾನಕ ಮಾಡಿ ತಂದು ಶ್ಯಾಮರಾಯನಿಗೆ ಒಪ್ಪಿಸಿದ. ಕಣ್ಣುಮುಚ್ಚಿ ಶ್ಯಾಮರಾಯ, ಸರಬತ್ ಪಾನರತನಾದಾಗ, ಅಲ್ಲಿಂದ ಜಾರಿ, ಚಾ, ಬೀಡೀ ಬಗೆಹರಿಸಿಕೊಂಡು ಬಂದ. ಅವನು ಬಂದದ್ದನ್ನು ನೋಡಿ, ಪಾನಕ ಕುಡಿದು ಖಾಲೀ ಮಾಡಿದ ಗ್ಲಾಸನ್ನು ಕೊಡುತ್ತ ಶ್ಯಾಮರಾಯ ಹೇಳಿದ:

"ಖಾದರ್, ಒಂದೆರಡು ಪಟ್ಟೀ ತಗೋ."

ಶ್ಯಾಮರಾಯನ ದನಿಯ ಮೇಲಿಂದ, ಆಸಾಮಿ ನರಮಾದ ಕಾಯಾಸ ಕಟ್ಟಿ, ಖಾದರ್ ಪಟ್ಟಿಗೆ ಇನ್ನಿಷ್ಟು ಅರ್ಕ ಹಾಕಿಸಿ, ಶ್ಯಾಮರಾಯನ ಕಾವನ್ನು ಝೀರೋ ಡಿಗ್ರಿಗೆ ಇಳಿಸುವ ವ್ಯವಸ್ಥೆ ಮಾಡಿದ. ಅರ್ಕದ ತಂಪಿಗೆ ಶ್ಯಾಮರಾಯ ಹಾಃ ಹೂಃ ಹೂಃ ಎನ್ನುವದನ್ನು ಕೇಳಿ ಖುಷಿಯಾಗಿ ಖಾದರ್ ಫೋರ್ಡ ಹಕಲಾಸಿದ.

ವಾಡೆಯ ಬಾಗಿಲಲ್ಲಿ ಗಾಡಿ ಬಂದು ನಿಂತಾಗ ಮಧ್ಯಾಹ್ನದ ಎರಡು ಎರಡೂವರೆ ಗಂಟೆಯಾಗಿತ್ತು. ಮೋಟರಿನಿಂದ ಇಳಿಯುತ್ತ ಶ್ಯಾಮರಾಯ, ಮೆಲ್ಲನೆ ಖಾದರನಿಗೆ ಹೇಳಿದ:

"ಖಾದರ್. ನೀ ಊಟಾ ಮಾಡಿ ಬರಾಗ, ಅಲ್ಲಿಷ್ಟು ತಿಳಿಸಿಬಿಡೂ, ನಾ ಊರಿಂದ ಬಂದೀನ್ಯಂತ. ಆ ಗಂಟ ಇಷ್ಟು ನೀನ್ನ ಒಯ್ದು ಮುಟ್ಟಿಸು."

"ಗಂಟ ಅಕಡೆ ಒಯ್ಯೂ ಜರೂರೀ ಇಲ್ಲಾ. ಅದರ ಮಾಲಕತೀ ಇಲ್ಲೇ ಅದಾಳ. ಅದನ್ನ ತಾ ಖಾದರಸಾಬ ಇಕಡೆ."

ಬಸವಂತಿ, ವಾಡೆಯ ಒಳಹೊಸ್ತಿಲಲ್ಲಿ ನಿಂತು ಅಚಾನಕವಾಗಿ ಮಾತು ಮಿಂಚಿಸಿದಳು. ಶ್ಯಾಮರಾಯ – ಖಾದರ್ ಇಬ್ಬರೂ ಅವಾಕ್ಕಾದರು. ಅಪ್ರತಿಭರಾದರು.

"ಹೀಂಗ್ಯಾಕ ನಿಂತರಿ? ಒಳಗ ಬರ್ರೀ."

ಬಸವಂತಿಯೇ ಶ್ಯಾಮರಾಯನನ್ನು ಜಾಗರಿಸಿ ಕರೆದಳು. ಶ್ಯಾಮರಾಯ ಮೂಕ ಪಶುವಿನಂತೆ ಅವಳ ಬೆನ್ನಿಗೆ ನಡೆದ.

ತಡವರಿಸುವ ಅಡಿಯಿಡುತ್ತ ಬರುವ ಶ್ಯಾಮರಾಯನನ್ನು ಮುಂಬಾಲಾಗಿ ನಡೆದು ಬಸವಂತಿ ನೋಡಿದಳು. ತನ್ನ ಅನುಪಸ್ಥಿತಿಯಲ್ಲಿ ಈ ಇಸಮು ವಾಡೆಯಲ್ಲಿ ಅವತರಿಸಿದ ಬಗ್ಗೆ ಶ್ಯಾಮರಾಯನಿಗೆ ದಿಗಿಲಾದ ಕಾಯಾಸ ಕಟ್ಟಿದಳು. ಮುಖದಲ್ಲಿ ನಗೆಯ ಮಂದಾರವರಳಿಸುತ್ತ—

"ನಾ ಇಲ್ಲಿ ಬಂದ ಕಾರಣಾ ಸಾವಕಾಶ ಹೇಳತೀನಿ. ನೀವಿಷ್ಟು ದಣದ ಬಂದೀರಿ. ಅರಾಮು ಮಾಡಕೋಬರ್ರಿ ಮುಂಚೆ."

ಎಂದು ಶ್ಯಾಮರಾಯನನ್ನ ಮುಂದೆ ಹಾಕಿಕೊಂಡು ಅವನ ಖಾಸಾ ಕೋಣೆಗೆ ಕರೆದುಕೊಂಡು ನಡೆದಳು.

ಬಸವಂತಿಗೆ ಈಗ ಅಷ್ಟೇ ಕೇವಲ ಮೂವತ್ತು-ಮೂವತ್ತೆರಡು ವರುಷ ಇರಬೇಕು. ಹರೆ ಗಿಮಿದಿರಿಗಿರುವ ಕಾಲ. ಗುಂಡುಮುಖ. ನಕ್ಷತ್ರದ ಹೊಳಪಿನಿಂದ ಬೆಳಗುವ ಬಟ್ಟ ಬಟ್ಟ ಎರಳೆ-ಗಣ್ಣು. ನೀಳ ನಾಸಿಕ, ಬೀಸಾಗಿ ಬೆಳೆದು, ಕೈ-ಮೈ ತುಂಬಿಕೊಂಡು, ರಕ್ತ ಚಿಲ್ ಎಂದು ಚಿಮುಕುವ ಬೇತಿನಲ್ಲಿರುವಂಥ ಅಚ್ಚ ಕೆಂಪು-ಗಜ್ಜರಿಯಂತೆ ತುಂಬಿದ ಮೈಮಾಟ, ಮುಗುಳುನಗೆಯ ಮಂದಾರದ ವರದಾನ ಪಡೆದಂಥ ಎಲೆದುಟಿ. ಒಮ್ಮೆ ನೋಡಿದರೇ ಸಾಕು. ಜೀವ ನಿವಾಳಿಸಿ ಒಗೆಯಬೇಕು, ಹಾಗಿದ್ದಳು ಬಸವಂತಿ. ಶ್ಯಾಮರಾಯನ ಆಯ್ಕೆಯಲ್ಲಿ ಅವಾಸ್ತವತೆ ಇರಲಿಲ್ಲ.

ಖಾಸಾ ಕೋಣೆಗೆ ಬಸವಂತಿಯ ಬಾಲಾಗಸಿಯಂತೆ ಶ್ಯಾಮರಾಯ ಬಂದ. ಬಸವಂತಿ, ಶ್ಯಾಮರಾಯನ ಕೋಟು-ಟೊಪ್ಪಿಗೆ ತೆಗೆದು ಗೂಟಕ್ಕಿರಿಸಿದಳು.

ಶರ್ಟಿನ ಗುಂಡಿ ಬಿಚ್ಚಿದಳು.

"ಮೈಗೆ ಏನ್ ಬಲಬರಾ ಧೂಳ ಅಡರೇದ. ಅಷ್ಟ ಝಳಾ ಝಳಾ ಜಳಕಾ ಮಾಡ ಏಳ್ರೀ. ನಾನs ತಿಕ್ಕಿ ನೀರ ಹಣಸ್ತೀನಿ. ಮೈ ಹಗ್ರುರ ಆತಂದ್ರ ನಿಮಗ ಅರಾಮು ಅನಸ್ತೈತಿ. ಹಂಡೆ ತುಂಬಾ ನೀರ ಕಾದsದ ಅನs. ಜಳಕಾ ಬಗೀಹರಿಸಿ, ಅಷ್ಟ ಉಂಡ ಅಡ್ಡಾಗರಿ. ತರತರೀತ ಆಗತೀರಿ."

ಶ್ಯಾಮರಾಯನ ಮೈ ಉಜ್ಜಿ ಉಜ್ಜಿ, ನಾಕೆಂಟು ಬಕೀಟು ನೀರು ಬಸಿದು, ಬಸವಂತಿ ಅವನನ್ನು ಅರ್ಧ ತರತರೀತನನ್ನಾಗಿ ಮಾಡಿದಳು. ಶೀರೆ ತೊಯ್ಯದಿರಲೆಂದು ಬಸವಂತಿ ಅಡ್ಡಸೆರಗು ಕಟ್ಟಿಕೊಂಡು, ಬಚ್ಚಲಿಗಿಳಿದಿದ್ದಳು. ಎದ್ದು ಕಾಣುವ ಎದೆ ಉಜ್ಜುವಿಕೆಯ ಧಾವತಿಯಿಂದ ಸ್ಪಂದಿಸುತ್ತಿತ್ತು. ಶ್ಯಾಮರಾಯ ಮಾತನಾಡದೆ, ಈ ನಯನರಮ್ಯ ದೃಶ್ಯದ ಮೂಕ-ನೋಟಕನಾಗಿ ಕುಳಿತಿದ್ದ. ಬಸವಂತಿಯ ಹಾಲ್‌ಚಾಲಿಯನ್ನು ಹಸಿದ ಕಣ್ಣಿನಿಂದ ಹೀರುತ್ತಿದ್ದ.

ಬಸವಂತಿ, ಅಡುಗೆಯ ಮನೆಯಲ್ಲಿ ಕೂಡಲಿಕ್ಕೊಂದು, ತಾಟು ಇಡಲು ಒಂದು. ಮಣೆ ಹಾಕಿದಳು. ಟುವಾಲಿನಿಂದ ತಾಟು-ಬಟ್ಟಲುಗಳನ್ನು ಒರೆಸಿದಳು. ಉಪ್ಪು-ಚಟ್ಣಿ-ಉಪ್ಪಿನಕಾಯಿ ಬಡಿಸಿದಳು. ಡಬ್ಬಿಯಲ್ಲಿಯ ಮೆಂತೇದಹಿಟ್ಟು ಒಂದು ಬದಿಗೆ ಹಾಕಿದಳು. ಅದರ ಬದಿಗೆ ನುಚ್ಚುನುಚ್ಚಾದ ಒಳ್ಳೇ ಘಮ ಘಮ ತುಪ್ಪದ ಮುದ್ದೆ ಇಟ್ಟಳು.

"ಯಾಕs. ನನ್ನ ನೋಡೇ ಹಸವ ಹಿಂಗಸಿಗೋಬೇಕೆಂತ ಮಾಡೀರೇನು? ಹಿಂದಾಗಡಿಸಿ ಐತೆಲಾ. ಈಗ ಕುಂಡರಬರ್ರಿ ಉಣ್ಣಾಕ. ಅನ್ನಾ ನೀಡತೀನಿ." ಎಂದು ಮೃದುಹಾಸ ಸೂಸಿದಳು. ಶ್ಯಾಮರಾಯನ ಊಟ ಸರಾಗವಾಗಿ ನಡೆಯಿತು. ಅಲ್ಲಿಯೇ ಇದ್ದ ಬೀಸಣಿಕೆಯಿಂದ ಬಸವಂತಿ ಮೆಲ್ಲಗೆ ಗಾಳಿ ಹಾಕತೊಡಗಿದಳು. ನಗುನಗುತ್ತ ಸಾಕು-ಬೇಕು ಕೇಳುವದಂತೂ ಸಾಗೇ ಇತ್ತು. ಶ್ಯಾಮರಾಯ ನೀರು ಕುಡಿದು. ಥಾಲಿಯನ್ನು ಕೆಳಗಿಡುತ್ತ—

"ಬಸವಂತೀ......"

ಇನ್ನೂ ಶ್ಯಾಮರಾಯ ಮಾತನಾಡುವವ. ಅವನ ಮಾತನ್ನು ಅರ್ಧಕ್ಕೇ ತುಂಡರಿಸಿ. ಬಸವಂತಿ —

"ನೀವು ಏನ ಕೇಳಾವ್ರದೀರಿ ಅನೂದು ಠಾಂವಿಕೈತಿ. ನಾ ಇಲ್ಲೆ ಹ್ಯಾಂಗ ಬಂದಿನಿ ಅಂತ ಹೌಂವಲ್ಲೋ? ಈಗ ಆ ಯಿಚಾರ ಬ್ಯಾಡಾ. ಹೊಟ್ಟಿ ತುಂಬನs

ಉಣ್ಣರಿ. ಜರಾ ಅಡ್ಡಾಗಿ ಏಳರಿ. ಉಣಾಗ ಯಿಚಾರ ಮಾಡಿದರ ಉಂಡ ಅನ್ನಾ ಮೈಗೆ ಹತ್ತೂದಿಲ್ಲಾ. ಚಾ-ಪಾಣೀ ಬಗೀಹರದಮ್ಯಾಲ ಕುಂಡ್ರೂಣಂತ. ವಾಡೇದಾಗ ಕೈದಿ ಆದನಿ, ನಿನ್ನೀ ತುಟೂ. ಇನ್ನೊಂದು ರೊಟ್ಟೀ ತಗೋರಿ. ಕೆನಿಮಸರ ಐತಿ. ನೀಡತೀನಿ. ಮಸರ ತಿಂದರ ಕಣ್ಣಿಗಿ ಮದಾ ತಾನs ಬರತೈತಿ; ಜಂಪನೂ ಲಗ್ಗನs ಹತ್ತತೈತಿ."

"ನಿನ್ನ ಭಿಡೇ ಮುರೀದ್ದಕ್ಕ ಅರ್ಧಾ ಭಕ್ಕರಿ ತಿಂತೀನಿ. ಬಸವಂತೀ, ಈ ಅಡಿಗೀ ಗುಂಡ್ಯಾಂದಲ್ಲಾ. ನಿನ್ನ ಕೈ ಅಮೃತನs ಇಳದದ."

"ದಿನಾ ಅಮರೂತ ಬೇಕಂದರ ಗುಂಡಪ್ಪ ಏನ ಮಾಡಬೇಕು? ಅಂವಗೇನು ಕುಂಡರಸಿ ಪಗಾರ ಕೊಡತೀರೇನು? ನಾ ಅಡಿಗ್ಗಿ ಕುಂತರ ನಿಮ್ಮ ಜೋಡೀ ಯಾರ ಕುಂಡರಬೇಕು? ಉಳದ ವ್ಹಾರೇ ಬಿಟ್ಟು, ನನ್ನ ಮುಂದ ಅಡಿಗೀಮನ್ಯಾಗs ಕುಂಡ್ರಾವ್ರು ನೀವೂ. ಒಣಿಗ್ಗಿ ಜರಾ ಖಾರ ಹೆಚ್ಚ ಆಗಿರಬೇಕು. ನನ್ನ ಅಂದಾಜ ದಲೇ ಹಾಕಿದ್ದೆ. ನಿಮಗ ಈಟ ಖಾರ ಬಗೀಹರಿಯಾಣೆಲ್ಲ ಅಲ್ಲಾ?"

"ನೀ ಹೀಂಗ ಸಂವಿ ಸಂವಿ ಆಡಕೋತ ಮುಂದ ಕೂತರ ಸಾಕು. ಬರೇ ಬಾಯಿಲೇ ಹಸಿಮೆಣಸಿನಕಾಯಿ ತಿಂದೂ ದಕ್ಕಿಸಿಕೋತೀನಿ. ಅಬ್ಬs! ನಾಕ ವರ್ಷದಾಗ ಇಂಥಾ ಊಟಾ ಕಂಡಿದ್ದಿಲ್ಲ ಬಸವಂತಿ! ಊಟದ ಖರೇ ಸುಖಾ ಇಂದ ಬಂತು. ಅರೇ, ಮತ್ಯಾರಿಗೆ ಈ ತಾಟಾ? ಮತ್ಯಾಕ ಪಲ್ಲ್ಯಾ ಚಟ್ನೀ ಬಡಸ್ತೀ?" ಶ್ಯಾಮರಾಯ ವಿಸ್ಮಿತನಾಗಿ ಕೇಳಿದ. ನಗೆಮಲ್ಲಿಗೆಯ ಕಂಪು ಸೂಸುತ್ತ—

"ನೀವು ಉಂಡ ಗೆದ್ದಿರಿ. ನನ್ನ ಕಳ್ಳು ಥಣ್ಣಗಾಗಾಕ ಬ್ಯಾಡೇನು? ಹಾಂಗs ಏಟ ದಿನಾ ಉಪಾಸ ಇರೂ ಅಂತೀರಿ?"
ಬೇರೊಂದು ತಾಟಿನಲ್ಲಿ ಬಡಿಸಿಕೊಳ್ಳುತ್ತ ಬಸವಂತಿ ಹೇಳಿದಳು.

"ಅಂದರs? ಇನಾ ನೀ ಉಂಡೇ ಇಲ್ಲs? ಬಸವಂತೀ, ಉಪಾಸ ಯಾಕ ಕೂತಿ ಇಷ್ಟೊತ್ತನಕಾ? ಏನ ಹುಚ್ಚಿ ಇದ್ದೀ. ನೀನೂ ನನ್ನ ಜೋಡೀನs ಯಾಕ ಕೂಡಲಿಲ್ಲ ಹಾಂಗ ಇದ್ದರ?"
ಶ್ಯಾಮರಾಯ ಕಳಕಳಿಯಿಂದ ಕೇಳಿದ.

"ಅಯ್ಯs! ಹಾರೂರ ಹೆಂಗಸರಾಟs, ಗಂಡಂದಿರ ಊಟ ಆದಮ್ಯಾಗ ಉಣಬೇಕಂತ ಬರಕೊಟ್ಟೈತೇನು? ನನಗೂ ಜರಾ ಜರಾ ತಿಳೀತೈತಿ. ನಾ ಏನು ತೀರಾ ಅಡ್ನಾಡಿ ಇಲ್ಲಾ."

ಶ್ಯಾಮರಾಯ ಅಲ್ಲೇ ಕುಳಿತ. ಬಸವಂತಿ ತನ್ನ ಆರೋಗಣೆಯನ್ನು ಬಡಿಸಿ ಕೊಂಡು ಉಪವಾಸದ ಪಾರಣೆ ಮಾಡಿದಳು. ಅವಳು ತನಗಾಗಿ ಇದೂವರೆಗೂ ಕಾದು ಕುಳಿತದ್ದು, ತಾನು ಹಸಿದು ಬರುವೆನೆಂದು ತಿಳಿದು ಸವಿಸವಿಯಾದ ಅಡುಗೆ ಮಾಡಿಕೊಂಡು, ನೀರು ಕಾಸಿ, ತನ್ನ ದಾರಿಯನ್ನು ಕಾಯುತ್ತ ಕುಳಿತದ್ದು, ಶ್ಯಾಮರಾಯನನ್ನು ಮೂಕವಿಸ್ಮಿತನನ್ನಾಗಿ ಮಾಡಿದವು. ಬಸವಂತಿಯ ಊಟ ಮುಗಿಯುವ ತನಕ ಅವನು ಅಡುಗೆಯ ಮನೆಯಲ್ಲಿಯೇ ಅವನತಮುಖನಾಗಿ, ಅವಳ ಪ್ರೀತಿ-ವಿಶ್ವಾಸ-ನಿಷ್ಠೆಯ ಆಳವನ್ನು ಅಳೆಯುತ್ತ ಶತಪಥ ಮಾಡತೊಡ ಗಿದ. ಅವನು ಇನ್ನೂ ವಿಚಾರತಂದ್ರಿಯಲ್ಲಿರುವಾಗಲೇ ಬಸವಂತಿ ತನ್ನ ಊಟ ವನ್ನು ಬಗೆಹರಿಸಿ, ಉಚ್ಛಿಷ್ಟ ಅಡಿಗೆಯ ಪಾತ್ರೆ ಬಚ್ಚಲಮನೆಯಲ್ಲಿ ಮಡಗಿಸಿ, ನೀರು-ಶೆಗಣೆಯಿಂದ ಉಂಡ ಜಾಗ, ಒಲೆಯನ್ನು ಶುದ್ಧಿಗೊಳಿಸಿ, ಕೈತೊಳೆದು ಕೊಂಡು, ಸೆರಗಿನಿಂದ ಕೈ ಒರೆಸಿಕೊಳ್ಳುತ್ತ, ನಗುನಗುತ್ತ ಶ್ಯಾಮರಾಯನ ಹತ್ತಿರ ಬಂದು —

"ಇನ್ನ ಅಡ್ಡಾಗರ್‍ಯಾಕಂತ ನಡೀರಿ ಕ್ವಾಣೆಗೆ. ನೀವ್ ಆಟು ಮಲಗಿ ಏಳರಿ. ನನಗ ಇನಾ ಮನಾರ ದಗದ ಒಟ್ಟೈತಿ."

ಎಂದು ಶ್ಯಾಮರಾಯನನ್ನು ಅವನ ಖಾಸಾ ಕೋಣೆಗೆ ಕರೆದೊಯ್ದು, ಪಲ್ಲಂಗದ ಮೇಲೆ ಒರಗಿಸಿ, ತೆಳುವಾದ ಚಾದರನ್ನು ಕಾಲಿನಿಂದ ಕತ್ತಿನ ವರೆಗೂ ಹೊಚ್ಚಿ, ಮಚ್ಛರದಾನಿಯನ್ನು ಇಳಿಬಿಟ್ಟಳು. ಕೋಣೆಯ ತೆರೆದ ಕಿಡಕಿಯನ್ನು ಮುಚ್ಚಿದಳು. ಕತ್ತಲೆ ಇಡುಗಿತು. ಬಸವಂತಿ ಮೆಲ್ಲಗೆ ಕೋಣೆಯ ಬಾಗಿಲನ್ನು ಮುಂದೆ ಮಾಡಿ, ಹೊರಗೆ ಹೋದ ಸದ್ದು ಕೇಳಿಸಿತು. ಶ್ಯಾಮರಾಯನ ದಣಿದ ಕಾಯ – ಬಸವಂತಿಯ ಮೃದು-ಕೋಮಲ-ಕರದಿಂದ – ಸುಖ-ಸ್ಪರ್ಶ ಹೊಂದಿ, ಮಾಲಿಶ್ ಆಗಿ, ಅವಳ ಅಮೃತಸಮ ಅಡುಗೆಯನ್ನು ಉಂಡು ಠಣಠಣಿತವಾದ ದೇಹ, ಜಂಪಿನ ಬಾಗಿಲಿಂದ ನುಸುಳಿ ಗಾಢನಿದ್ರೆಯ ಹಂಸತೂಲಿಕಾ-ತಲ್ಪದಲ್ಲಿ ವಿರಮಿಸಿತು.

ಶ್ಯಾಮರಾಯನ ಅಧಿಕೃತ ರಖೇಲಿ ಅನಧಿಕೃತವಾಗಿ ವಾಡೆಯನ್ನು ಹೊಕ್ಕು, ಸೋನಕ್ಕ ತೆರವು ಮಾಡಿದ ಸ್ಥಾನದಲ್ಲಿ ವಿರಾಜಮಾನಳಾದಳು. ಶ್ಯಾಮರಾಯ ಕಾಕಾಅವರ ಕಿತ್ತೇ ವಳಣದಾರ ಅಕ್ಷರದಲ್ಲಿ ತೀಡಿದ. ಪಂತರ ಕುಟುಂಬ-ವೃಕ್ಷಕ್ಕೆ ಸುರುಳುರುಳಿಯಾಗಿ ಸುತ್ತುವ ಉಪಪತ್ನೀ-ಬಳ್ಳಿ, ಗಿರಿಜಾನ ತಲೆಗೇ ಒಣಗಿ

ಮುರುಟಬಾರದೆಂದು, ಬಸವಂತಿಯು ಅಗಿಯನ್ನು ಊರಿದ.

ಸೋನಕ್ಕನನ್ನು ಬಿಡದೇ, ಶ್ಯಾಮರಾಯ ಈ ರೀತಿಯಾಗಿ ಮಾಡಿದ್ದರೆ, ಕಾಕಾ ಬಿಳಿ ಮೀಶೆಯ ಮೇಲೆ ಕೈಯಾಡಿಸುತ್ತ —

"ಶ್ಯಾಮಾ ಇಂದ ಖರೇ ಗಂಡಸರಾಗ ಬಂದಾ."

ಎಂದು ಪುಷಾರಕೀ ಹೊಡೆಯಬಹುದಾಗಿತ್ತು. ಆದರೆ ನತದೃಷ್ಟ ಶ್ಯಾಮರಾಯನಿಗೆ ಅಂಥ ಪುಷಾರಕೀ ಬಿರುದನ್ನು ಪಡೆಯುವ ಭಾಗ್ಯವಿರಲಿಲ್ಲ. ರಾವಜೀಕಾಕಾ ಅವರ ಸದರಿನಲ್ಲಿ ಇದು "ಹೇಲಪ್ಯಾ-ಧಂದೇ" ಆಗಿತ್ತು.

"ಒಂದ ಅಲ್ಲಾ ಹತ್ತ ಹೆಣ್ಣು ಆಳೇನನ್ನೂ ಮರ್ದುಮಕೀ ಬೇಕು, ಗಂಡಸ್ತನಾ ಬೇಕು, ಗಂಡಸಾದವ್ರ್ಯಾಲ."

ಎನ್ನುವ, ಏಕ ಅಧಿಕೃತ ಪತ್ನಿ – ಅನೇಕ ಅನಧಿಕೃತ ಉಪಪತ್ನಿ, ಸುಕಾಲದಲ್ಲಿ ಬಾಳಿ ಬೆಳೆದ ಜೀವ ಅವರದು. "ಎಂಥಾ ಕಾಲ" ಎಂದು ಬೇಕಾದರೆ ನೀವು ಆ ಕಾಲಕ್ಕೆ ದೋಷ ಕೊಡಬಹುದು. ಆದರೆ ಆ ಕಾಲದಲ್ಲಿ ಹುಟ್ಟಿ, ಬೆಳೆದು, ಬಾಳಿದ ಅದರ ಸಂತಾನಲಲಾಮರು ಖಚಿತವಾಗಿ ನಿರ್ದೋಷಿಗಳು. ನಿಃಷ್ಪಾಪರು. ಇದು ನಮ್ಮ ರಾಮು-ಮತ,

ಶ್ಯಾಮರಾಯ ಈಗಲೂ ಜಾಗರನಾಗಿ, ಸೋನಕ್ಕನ ಕೂಡ ಒಗೆತನ ಹೊಂದಿಸಿಕೊಂಡು. ಬಸವಂತಿಯಲ್ಲಿ ಅನುರಕ್ತನಾಗಿದ್ದರೆ, ಅದಕ್ಕೆ ಬೇಡವೆನ್ನುವ ಅಧಿಕಾರ ಯಾರಿಗೂ ಹುಟ್ಟುತ್ತಿರಲಿಲ್ಲ. ಪಂತಕುಟುಂಬದ ಪ್ರತಿಷ್ಠೆಗೆ ಕಾಡಿಗೆ ಹತ್ತುತ್ತಿರಲಿಲ್ಲ. ಅದು ಮನೆತನದ "ಪರ್ದಿಷ್ಟನ್ಸ" ಎನ್ನುವ ಸಹಜಾಸಹಜೀ ಬಾಬಿನಲ್ಲಿ ಬಂದುಹೋಗುತ್ತಿತ್ತು. ಗಿರಿಜಾ ರಾಧಾಕಾಕೂನ ತಂಗಿಯಾದಂತೆ, ಬಸವಂತಿಯೂ ಸೋನಕ್ಕನಿಗೆ ತಂಗಿಯಾಗುತ್ತಿದ್ದಳು. ಅಡೆ-ತಡೆ ಇಲ್ಲದೆ ಜಗನ್ನಾಥನ ಮಹಾ ತೇರು ಮುಂದೆ ಸಾಗಿಹೋಗುತ್ತಿತ್ತು. ಪಂತಕುಟುಂಬ ಬದುಕುತ್ತಿತ್ತು.

ಆದರೆ ಶ್ಯಾಮರಾಯ ಈಗ ಬಸವಂತಿಯನ್ನು ಕಟ್ಟಿಕೊಂಡು, ಆ ತೇರಿನ ಘಾಲಿಗೆ ಆತಂಕನಾಗಿ ನಿಂತಿದ್ದ. ಅವನನ್ನು ಬದಿಗೆಳೆದು ಒಗೆಯುವದಕ್ಕೆ, ರಾಚಪ್ಪ ಉಕ್ಕಿನ ಹಾರೆಯನ್ನು ಬೀಸಿ, ಆ ಆತಂಕವನ್ನು ಸರಿಪಡಿಸುವ ಸಾಹಸದಲ್ಲಿದ್ದ. ಆ ವೀರಭದ್ರನ ಹಾರೆಯಲ್ಲಿಯ ಸಾಮರ್ಥ್ಯಕ್ಕೆ ಆತಂಕ ಸರಿದಾಡಿದಂತಾಗುತ್ತಿತ್ತು. ತೇರು ಜೋಲಿ ಹೊಡೆದು ಮುಂದೆ ಬಂದಂತಾಗುತ್ತಿತ್ತು. ಎದುರಾಳಿಗಳು ಪಣಕ್ಕೆ ಒಡ್ಡಿದ್ದರು. ಮಹಾಕಾಲ "ಹೋ" ಎಂದು ಕಿರಚಿ, ಗಾಳಿಯಲ್ಲಿ

ಕೈ ಬೀಸಿ, ತೇರಿನ ಎಳೆತಕ್ಕೆ ಅನುಮತಿ ಸಲ್ಲಿಸುವ ಅವಕಾಶವಷ್ಟೇ ಇತ್ತು. ತೇರು ಮುಂದೆ ಸಾಗಿದ್ದರೆ – ಶ್ಯಾಮರಾಯ ದಾರಿಮಾಡಿಗೊಡದೆ ಅಡ್ಡ ನಿಂತಿದ್ದರೆ – ಅವರ ವಜ್ರಪಾದಹತಿಗೆ ಒರೆಸಿಹೋಗುತ್ತಿದ್ದ. ರಾಚಪ್ಪ ವಿಜಯೋನ್ಮಾದ ಮಾಡುತ್ತಿದ್ದ. ಮಹಾಕಾಲ ತನ್ನ ಮುಚ್ಚಿದ ಮುಟಿಗೆಯಲ್ಲಿ. ರಾಚಪ್ಪ-ಶ್ಯಾಮ ರಾಯ-ಪಂತಕುಟುಂಬದ ಭವಿಷ್ಯವನ್ನು ಬಿಗಿಯಾಗಿ ಒಡಿದುಕೊಂಡಿತ್ತು; ಅಂತಿಮ ನಿರ್ಣಯ-ಕ್ಷಣವನ್ನು ಉತಾವಿಳವಾಗಿ ಕಾಯುತ್ತ ನಿಂತಿತ್ತು.

ಅಂದು ರಾತ್ರಿ, ಶ್ಯಾಮರಾಯನ ಅಂತರ್‌ಗೃಹಕ್ಕೆ ವಾಸಕಸಜ್ಜಿಕೆಯಾಗಿ, ಬುರುಕಿಯಲ್ಲಿ ಬಿಜಯಿಸಿದ ಬಸವಂತಿಯನ್ನು ರಾಚಪ್ಪ-ಗೋವಿಂದಭಟ್ಟ ಇಬ್ಬರೂ ನೋಡಿದ್ದರು. ಕರಿಗಾಲ ಬಿದ್ದು ವಾಡೆಗೆ ಅವಕಳೆ ಬಂದಿತೆಂದು ಗೋವಿಂದಭಟ್ಟ ತಟ್ಟನೇ ಅಭಿಪ್ರಾಯ ಸೂಚಿಸಿದ. ಅದರ ಪಾವಿತ್ರ್ಯ ಮಲಿನವಾಯಿತೆಂದು ಖಳ ವಳಿಸಿದ. ಅಲ್ಲಿಂದ, ಶ್ಯಾಮರಾಯ-ಬಸವಂತಿಯರ ಉತ್ಥಾಪನೆಯನ್ನು ಅಲ್ಲಿಂದ ಮಾಡಿಸಲೆಂದು ರಾಚಪ್ಪನನ್ನು ಕೆದಕತೊಡಗಿದ. ಬಸವಂತಿಯನ್ನು ನೇರವಾಗಿ ಸಂಧಿಸಿ ಅವಳನ್ನೇ ಕೇಳಿಬಿಡುವ, ಸತ್ಯದರ್ಶನ ಮಾಡಿಸುವ ವಿಚಾರವನ್ನು ರಾಚಪ್ಪ ನಡೆಸಿದ. ಗೌಡರ ಮಾತಿನಲ್ಲಿ – ಬಸವಂತಿ ಹೊಟ್ಟೆಯಿಂದಿದ್ದ ಮಾತಿನಲ್ಲಿ – ಅವನಿಗೆ ವಿಶ್ವಾಸವಿರಲಿಲ್ಲ.

"ಶ್ಯಾಮರಾಯನ ಎದರs ಬಸವಂತೀ ಕೈ ಹಿಡಿದು ಕೇಳತೀನಿ, ಗೋವಿಂದ ಭಟ್ಟಾ. ಈ ಹಕೀಕತ್ತು ಖರೇ ಏನಂತ? ಶ್ಯಾಮರಾಯಗ ನೀ ಏನು ಭುಲತಾಪೀ ತುಂಬೀ. ನಿನಗ ಶ್ಯಾಮರಾಯಾ ಏನ ಹೇಳ್ಯಾನಂತs? ಅಕೀ ಖರೇ ಹೇಳಿದಳೂ ಠೀಕಾತು. ಇಲ್ಲs, ರಾಚೋಟಿ ಜೀವಾ ಪಣಕ್ಕ ಒಡ್ಡತಾನ. ಬಸವಂತಿಗೆ ಶ್ಯಾಮ ರಾಯನ ಭಾನಗಡೀ ಠಾಂವಿಕಿದ್ಹಾಂಗ ಇಲ್ಲಾ. ಗದ್ಲ ಆಗೇದ, ಭಟ್ಟಾ, ಏನೋ ಗದ್ಲ ಆಗೇದ."

ಆ ಗದ್ದಲಾದ ವಿಷಯವನ್ನು ಕುರಿತು ರಾಚಪ್ಪ ಚಿಂತಿಸುತ್ತಿದ್ದ. ಶ್ಯಾಮ ರಾಯ ಬಸವಂತಿಯನ್ನು ಫಸಾಸಿರಬೇಕೆಂಬ ಭಾವ ಬಲಿಯತೊಡಗಿತು. ಹಾಗೇ ನಾದರೂ ಆಗಿದ್ದರೆ, ಶ್ಯಾಮರಾಯನನ್ನು ವಾಡೆಯಿಂದ ಉತ್ಥಾಪಿಸಬೇಕು. ಬಸವಂತಿಯನ್ನು ಫಸಾಸಿದನೆಂದು ಉತ್ಥಾಪಿಸಿಬೇಕು. ಸೋನಕ್ಕನನ್ನು ಬಿಟ್ಟ ಕತೆಯನ್ನು ಅವಳಿಗೆ ತಿಳಿಸದೆ, ಅವಳ ಕಣ್ಣುಕಟ್ಟು ಮಾಡಿ, ಬಸವಂತಿಯನ್ನು ಜಗ್ಗಿ ಕೊಂಡಿರಬೇಕು. ರಾಚಪ್ಪ ಸತ್ಯ-ಅಸತ್ಯ ತನಖಿಸುತ್ತಿದ್ದ. ಶ್ಯಾಮರಾಯನ

ಬಂದೋಬಸ್ತಿಯು, ಬಸವಂತಿಯು ಕಣ್ಣುಪರೆ ಹರೆಯುವ, ದಾರಿ ಶೋಧಿಸುತ್ತಿದ್ದ.

ಪೋಸ್ಟಮನ್ ಪಾಂಡೂನ ಕೂಡ ಗೋವಿಂದಭಟ್ಟ ದೋಸ್ತೀಖಾತರ ಆಗಿ ಮಾತಾಡುವಾಗ, "ತತ್ ತ್ವಂ ಪೂಷನ್ ಅಪಾವೃಣು ಸತ್ಯಧರ್ಮಾಯ ದೃಷ್ಟಯೇ" ಎನ್ನುವಂತೆ ಶ್ಯಾಮರಾಯ-ಬಸವಂತಿಯರ ಬುರಕೀವ್ಯವಹಾರವನ್ನು ಕಣ್ಮುಟ್ಟ ಕಂಡ ಸಾಕ್ಷಿಯಾಗಿ ಹೇಳಿದ. ಪಾಂಡೂ ಇನ್ನೊಬ್ಬ ಬಂಡೂನನ್ನು ವಿಶ್ವಾಸದಲ್ಲಿ ತೆಗೆದುಕೊಂಡು ಈ ಕಥೆಗೆ ಕೋಡು ಮೂಡಿಸಿದ. ಪಾಂಡೂ-ಬಂಡೂನಿಂದ, ಗೋಮಾಜಿ ಗಣೇಶ ಕಾಪಸೇನ ವರೆಗೆ, ಬಣ್ಣ ಬದಲಾಯಿಸುತ್ತ, ಭಡಕರಂಗಿನದಾಗುತ್ತ ನಡೆದ ಈ ಸುದ್ದಿ, ತ್ಯಾಪೀ ಬಸಗೋಂಡ ಅವನ ತಂಗಿ ಬಸವಂತಿಯು ಕಿವಿಗೆ ಬಂದು ತಲುಪಿದಾಗ, ಮೂಲ-ಕಥನ-ಕಾರಣ-ಗೋವಿಂದ ಭಟ್ಟ ತೆರೆಮರೆಗೆ ಸರಿದಿದ್ದ. ಅವನ ಸ್ಥಾನವನ್ನು ರಾಚಪ್ಪ ಆಕ್ರಮಿಸಿದ್ದ. ಇಬ್ಬರೂ, ಅಪನವರ ಬಾಯಿಂದ ಈ ಸುದ್ದಿಯುನ್ನು ಕೇಳಿದ್ದರು. ಅಂದೇ ರಾತ್ರಿ, ಮರೆಯಲ್ಲಿ ನಿಂತು, ಬಸವಂತಿ ವಾಡೆಯುನ್ನು ಹೊಗುವ ದೃಶ್ಯವನ್ನು ನೋಡಿದ್ದರು. ಒಂದಿಷ್ಟು ಹೆಚ್ಚೆಂದರೆ, ಅಪನವರು ಅದನ್ನು ಹೇಳುವದಕ್ಕಿಂತಲೂ ಮುಂಚೆ ಒಂದೆರಡು ತಾಸು, ಪಾಂಡೂ ಅದನ್ನು ರಾಚಪ್ಪನ ಕಿವಿಯಲ್ಲಿ ಉಸಿರಿದ್ದ. ರಾಚಪ್ಪ ಅದನ್ನೂ ನುಂಗಿದ್ದ. ಅಪನವರು ಹೇಳಿದ್ದನ್ನೂ ದಕ್ಕಿಸಿಕೊಂಡಿದ್ದ. ತಾನು ಪ್ರತ್ಯಕ್ಷದರ್ಶಿಯಾಗಿ ನೋಡಿದ್ದನ್ನೂ ಗಿಳಂಕರಿಸಿದ್ದ. ಆದರೆ... ಆದರೆ... ಕಥೆಗೆ ಶಾಖೋಪಶಾಖೆ ಒಡದಾಗ, ಅದಕ್ಕೆ ಬಿಟ್ಟ ವಿಷಫಲ...

"ರಾಚೋಟಿ, ಬಸವಂತೀ ಕೈ ಹಿಡಿದ್ಯ ಜವಾಬ ವಿಚಾರಿಸಿದನಂತ. ಶ್ಯಾಮ ರಾಯಾ–ರಾಚೋಟಿಗೆ ಕೈಗೆ ಕೈನೂ ಹತ್ತಿತಂತ. ಅಂದೇನ ಬಸವಂತಿ ವಾಡೇ ಹೊಕ್ಕಳು, ಅಂದಿನ ಸುಟೂ ಹೊರಗs ಬಂದಿಲ್ಲಂತ. ನಿವಳ ಬಲ್ಯಾಗ ಬಿದ್ಲ ಬಿಡೂ, ಊರ-ಉಲ್ಲೂ. ಇನ್ನ ಅಕೀಗೆ ವಾಡೇದಾಗನs ಕಾಳಾಪಾಣೀ... ಬಸಗೋಂಡಾ, ನಾ ಅಂತೀನ್ಯಂತ ತಿಳಕೊಂಡೀ. ನನಗೇನ ಠಾಂವಿಕಿಲ್ಲಪಾ. ಊರಾಗ ಹೀಂಗ ಗುಜುಗುಜು ನಡದೈತಿ."

ಬಸವಂತಿಯ ಅಣ್ಣ ಬಸಗೋಂಡನ ಮುಂದೆ ಒಬ್ಬ ಚಿಕಿತ್ಸಾಪಟು ಈ ಹಿತಚಿಂತಕ ವರದಿ ಮಾಡಿದ.

ರಾಚಪ್ಪ ಕೈ ಹಿಡಿದಿದ್ದೂ ಸುಳ್ಳು. ಬಸವಂತಿ ಊರ ಉಲ್ಲೂ ಇದ್ದದ್ದೂ ಸುಳ್ಳು. ಕಥಾಂತರ ಮಾಡುವ ಕೀರ್ತನಕಾರರ ತಳಿ ನಮ್ಮಲ್ಲಿ ಚಿರಂಜೀವಿಯಾಗಿರು

ವಾಗ ಅನ್ಯರಿಗೆ ಅಂದೇನು ಲಾಭ! ಬಸಗೋಂಡನಿಗೆ ಈ ಸುದ್ದಿಯು ಸುಖ-ದುಃಖ ಎರಡೂ ಇರಲಿಲ್ಲ. ಈ ಸುದ್ದಿಯನ್ನು ಕೇಳಿ ಅವನಿಗೆ, ಬಸವಂತಿಯು ಕೈಯನ್ನು ರಾಚಪ್ಪ ಹಿಡಿದರೂ ಅಷ್ಟೇ, ಶ್ಯಾಮರಾಯ ಹಿಡಿದರೂ ಅಷ್ಟೇ, ಅವಳು ಸದ್ಯ ತನ್ನ ಕೊರಳಿಗೆ ಉರುಲಾಗಿ ಒಗೆದಿದ್ದ ಕೈ ಸಡಲಿಸಿ ಪಾರುಬಿಡವಿದಳೆಂದು ಸಮಾಧಾನ ಹಚ್ಚಿಕೊಂಡಿದ್ದ.

ಅತ್ತೆಯ ಮನೆಯವರ ಕೈಯಿಂದ ಪಾರುಬಿದ್ದು ಬಂದ ಬಸವಂತಿ, ಅಣ್ಣನ ಮನೆಯಲ್ಲಿ ರಣಕತ್ತಲಕ್ಕೆ ಕಾರಣವಾಗಿದ್ದಳು. ಬಸಗೋಂಡನ ಹೆಂಡತಿಗೆ ಸರಿಕದವ ರೊಡನೆ ನೀರು ತರಲು, ಒಗೂಣಿ ಒಯ್ಯಲು ಅನುವಿಲ್ಲದಾಗಿತ್ತು. ಕಿಸಿಕಿಸಿ ನಗು, ಪಿಸಿಪಿಸಿ ಮಾತು, ಸದ್ದಾಗದ ಮೂಗುಮುರಿತ, ಕಣ್ಣ ಚಿಟುಕು, ಅವಳ ಜೀವನಕ್ಕೆ ಚಿಟುಕುಮುಳ್ಳಾಗಿದ್ದವು. ತನ್ನ ಹರೆಯದ ರೂಪಿನ ಚೆರಗ ತೂರಾಡಬಾರದೆಂದು ಬಸವಂತಿ ಜಪ್ಪಿಸುತ್ತಿದ್ದಳು. ಮನೆ ಬಿಟ್ಟು ಹೊರಗೆ ಹಣಿಕಿಹಾಕಲು ಬೆದರು ತ್ತಿದ್ದಳು. ಅದನ್ನು ಅಪಾರ್ಥಮಾಡಿಕೊಂಡು, ಬಸಗೋಂಡನ ಹೆಂಡತಿ, ಬಸವಂತಿ ಕೂತು ಮೆಯ್ಯಲಿಕ್ಕೆ ಬಂದವಳೆಂದು ಚುಚ್ಚುತ್ತಿದ್ದಳು. ಈ ನಿಗ್ಗರ ತಾಳದೆ ಒಂದೆರಡು ಸಲ, ಬಸವಂತಿ ಬಟ್ಟೆ-ಬರೆ ಹಿಂಡಿಕೊಂಡು ಬರಲು ಊರ ಮುಂದಿನ ಹಳ್ಳಕ್ಕೆ ಹೋದರೆ, ದಾರಿಯುದ್ದ ಸಾವಿರ ಕಣ್ಣು ಹಿರಿ-ಕಿರಿದಾಗಿದ್ದವು. ಗಲ್ಲದಲ್ಲಿಯ ಚಲಾಕು ನಾಲಿಗೆ ಚ್ಯಾಂ ಹೊಡೆದಿದ್ದವು. ಅವಳಿಗೆ ಕೇಳಿಸುವಂತೆ, ತಮ್ಮತಮ್ಮಲ್ಲಿ ನಿನದಿಸುವಂತೆ "ಮಟಮಟ ಮಧ್ಯಾಹ್ನ, ತಿಟತೀಟಿ ಕುಬ್ಬಸ"ದ ವರ್ಣನೆಯನ್ನು ಯಾವನೋ ವಾರಿರುಮ್ಮಾಲದ ಗೆಣೆಯ ಮಾಡಿದ್ದ; "ಸುರತ ಚಂದ್ರುಣಿ ಹೊಂಟೆ ನಾಗಿಣಿ" ಎಂದು ಅವಳು ಬೀದಿಯಲ್ಲಿ ಹೊರಟಿದ್ದರ ಡಂಗುರ ಹೊಡೆದಿದ್ದ. ಹಳ್ಳಿಯ ಪೋಕೀ-ಲುಟಾರು ಮಂಡಳಿಯ ಮಾತು ಬಿಡಿರಿ – ಖುದ್ದ ದಾದಲ್ಯಾ, ಕಾಲೇಜಿನಲ್ಲಿ ಓದುತ್ತ – ಸಾಂಗಲಿಯಂಥ ಊರಲ್ಲಿ, ಬಸವಂತಿಯಂಥ ನೂರು ಹೆಣ್ಣುಗಳನ್ನು ದಿನವಿಡೀ ನೋಡುತ್ತಿದ್ದವ – ಒಮ್ಮೆ ಊರಿಗೆ ಬಂದಾಗ, ಬಸವಂತಿ ಯನ್ನು ಅಚಾನಕವಾಗಿ ನೋಡಿ, ಬೇಭಾನನಾಗಿದ್ದ. ಹದಿನೈದು ದಿನ ಊರಲ್ಲಿ ನಿಂತರೆ, ಹತ್ತು ದಿನ ಅವಳ ಬೆನ್ನುಹತ್ತಿ ಅಲೆದಾಡಿದ್ದ. ಅವಳು ಒಗೆಯಲಿಕ್ಕೆ ಹಳ್ಳಕ್ಕೆ ಹೋಗುವ ಉಸಾಬರಿಯನ್ನು ಬಿಟ್ಟು, ಗೌಡರ ತೋಟದಲ್ಲಿಯ ಭಾಂವಿಗೆ ಹೋದರೆ ಅಲ್ಲಿಯೂ ಗಾಠಾಯಿಸಿದ್ದ. ಅವಳಿಗೆ ಕೇಳಿಸುವಂತೆ, ಗಾಣಿಗ್ಯಾರ ಪರಸ್ಯಾನಿಗೆ ಹೇಳಿದ್ದ:

"ಪರಸ್ಯಾ ಮಗನs, ಜೀವಾ ನಿವಾಳಿಸಿ ಒಗೀತೀನಿ ನೋಡು. ಇಂಥಾ ಹೆಣ್ಣ ಸಿಕ್ಕರs."

ಬಸವಂತಿಯ ಮೇಲೆ ಜೀವ ನಿವಾಳಿಸಿ ಒಗೆಯುವ ಪಣವನ್ನು ಪುಕಾರಿಸಿದ್ದ. ಅದನ್ನು ಕೇಳಿದ ಬಸವಂತಿ – ಈಷದ್ ಮುಖ ವಾಲಿಸಿ, ಆಚಾರೆಪ್ಪನ ಮಗನ ಯೋಗ್ಯತೆ ಅಂದಾಜು ಅಳಿದಂತೆ ಮಾಡಿ, ಲಘುವಾಗಿ ನಕ್ಕಾಗ, ಅದು ತನ್ನ ಕೇಳಿಕೆಯ ಪ್ರತಿಸಾದವೆಂದು ಭಾವಿಸಿ. ವಿಜಯದ ತುರಾಯಿಯನ್ನು ತಲೆಗೆ ಸಿಗಿಸಿಕೊಂಡಿದ್ದ. ಆ ಭರದಲ್ಲಿ, ಬಸವಂತಿಯ ಹವ್ಯಾಸ ಪೂರ್ಣವಾಗದೆ – ತನ್ನ ಮೂರೆಳೆಯ ಯಜ್ಞೋಪವೀತ ಆರೆಳೆಗೆ ಏರುವ ಶಕ್ಯತೆ ಇಲ್ಲವೆಂದು ಆಚಾರ್ಯಪುತ್ರ, ಅಶ್ವತ್ಥಾಮನಂತೆ ಕಠೋರಪ್ರತಿಜ್ಞೆ ಮಾಡಿದ್ದ.

ಬಸವಂತಿ ಎಲ್ಲರಿಗೂ ಅಭೇದ್ಯ, ಅಜೇಯವಾಗಿದ್ದಳು. ಆದರೂ ಕಣ್-ಕೀಸ ರಾಗಿದ್ದಳು. ಹಸಿದ ಸಾವಿರ ಕಣ್ಣಿಗೆ ಬಲಿಯಾಗುವದಕ್ಕಿಂತ, ಮನೆಯಲ್ಲಿ ಬಂದಿ ಯಾಗಿರುವದು ಸರಿಯೆಂದು, ತಲೆಬಾಗಿಲ ಹೊಸ್ತಿಲನ್ನು ದಾಟದಾದಳು. ಅವಳು ಮಾನಕ್ಕೆ ಅಂಜಿ ಮನೆಯಲ್ಲಿ ನಿಂತದ್ದು, ಬಸಗೋಂಡನ ಹೆಂಡತಿಗೆ ಬರಷಣ ವಾಯಿತು. ಬಸವಂತಿಯ ಗೂಳಿ-ಮೇಯತದ ಟೀಕೆ ನಡೆಯಿತು. ಅಲ್ಲದೆ ಅವಳ ತುರಿತದ ಮೇಲೆ ಹೊಸ ಸುಣ್ಣದ ನೀರು ಎರಚಿದಂತೆ, ಬಸವಂತಿ ಮಾಡುವ ಮಡಿಯ ಬಡಿವಾರವೂ ಕಾರಣವಾಯಿತು.

ಬಸವಂತಿ ನಿತ್ಯನೇಮದಿಂದ, ಹಾರೂರು ಕೂಡ ಝುಕ್ಕಿಸುವ ರೀತಿಯಲ್ಲಿ ಮೈ-ಕೈ ಬಗೆಹರಿಸಿ ಉಟ್ಟ ದಟ್ಟಿಯನ್ನು ಬದಲಿಸುತ್ತಿದ್ದಳು. ಜುಮ್ಮೇಸಿಜುಮ್ಮೇ ದಂತೆ, ಸೋಮವಾರ ದಿನ ಮಾತ್ರ ನೀರಲ್ಲಿ ಮೈ ಬುಚಕಳಿಸುವ ಸವ್ವಯ್ ಇದ್ದ ಬಸಗೋಂಡನ ಹೆಂಡತಿಗೆ, ಬಸವಂತಿಯ ಈ ನಿತ್ಯಸ್ನಾನ, ವಾಸಾಂಸಿಯ ಬದ ಲಾವಣೆ, ಪಿತ್ತ ನೆತ್ತಿಗೇರಲು ಕಾರಣವಾಗಿದ್ದವು. ಒಂದರ ಸಿಟ್ಟನ್ನು ಇನ್ನೊಂದರ ಮೇಲೆ ಆರೋಪಿಸುತ್ತ, ಅವಳು ಕಡೆಗೆ ಗರತಿ-ಜೀವನದ ಅಂತಿಮ ಮಲ್ಲಿನಾಥೀ ಮಾಡುತ್ತ, ಬಸವಂತಿಯ ಎದೆಗೆ ಭಾಲಾಪ್ರಯೋಗ ಮಾಡುತ್ತಿದ್ದಳು:

"ಅತ್ತೀ ಮನ್ಯಾಗ ಯದ್ದಲಗಾಟs ಇದ್ದರ, ಮಾನವಂತಿ ಆದಾಕಿಗಿ ಆ ಊರಾಗ ಭಾಂವೀ-ಕೆರೀ ಏನು ಬರೇವ ಆಗಿದ್ದಿಲ್ಲಾ. ಅತ್ತೀ ಮನ್ಯಾಗ ಮನಾರ ನಾಕ ಯತ್ತಿನ ಒಕ್ಕಲತನಾ ಐತಿ. ಬೇಕಾಧಾಂಗ ಒಂದ ಕುಣಿಕೀ ಹಗ್ಗ ಸಿಗತಿತ್ತು."
ಎಂದು ಅವಳು ಅಸರಂತ ಇಷ್ಟು ಹಾಡುವದನ್ನು ಕೇಳಿದ ಬಸಗೋಂಡ –

"ಏ ಏಬರಾಸೀ, ಜರಾ ದಮ್ಮ ತಿಂದು ಮಾತಾಡ್ತ ಬಾ. ನಾಲಿಗ್ಯೋ ಇದರಪ್ಪನ, ಏನ ತೊಗಲ ಅಟ್ಟ್ಯೋ."
ಎಂದು ಕ್ವಚಿತ್ ಡಕಾಯಿಸಿದರೆ —

"ತಂಗೀ ಕಳ್ಳಂತ ಏರಗಟಿಗೊಂಡರಿ. ನಾಳೆ ನಾನs ಈ ಮನೀ ಬಿಟ್ಟು ಓಡಿಹ್ವಾದೆನಂದರ ಸುಮಾಕ ಇದ್ದೀರೇನು?"

ಸುಮ್ಮನಿರುವದರಲ್ಲಿ ಪುರುಷಾರ್ಥವಿದೆಯೆಂದು ಭಾವಿಸಿ ಬಸಗೊಂಡ ತೆಪ್ಪನಾಗುತ್ತಿದ್ದ.

ಶ್ಯಾಮರಾಯನ ಕಂತ್ರಾಟ ಕೆಲಸದಲ್ಲಿ, ಬಸಗೊಂಡನಿಗೂ 'ಪೀಸ್-ವರ್ಕ್'ದ ಫಾಯದೇ ದೊರಕಿ ಅವನ ಕೈಯಲ್ಲಿಯೂ ಕಾಸು ಕುಣಿಯತೊಡಗಿತು. ಅವನ-ಶ್ಯಾಮರಾಯನ ಪ್ರೈವಾಟಿ ಬೆಳೆದಿತು. ಮನೆಗೆ ಬರುವ ದುಡ್ಡಿನಲ್ಲಿ, ಬಸಗೊಂಡ, ಹೆಂಡತಿಗೆ ಹರಳಿನ ಮೂಗುಬೊಟ್ಟು, ಮೊಟ್ಟಿ ಮುತ್ತಿನ ಬೆಂಡವಾಲಿ, ತಂದ. ಶ್ಯಾಮರಾಯನಿಗೇ ಒತ್ತಿ ಒಗೆದ, ಬೆಳ್ಳಿಯ ತೋಳು-ಬಂದಿಯನ್ನು ಬಿಡಿಸಿಕೊಂಡು ತಂದ. ಅವಳ ವೊವ್ ವೊವ್... ಒಂದಿಷ್ಟು ಕಡಿಮೆಯಾಯಿತು. ಶ್ಯಾಮರಾಯನಿಂದ ತನ್ನ ಗಂಡ ಹಾದಿಗೆ ಬಂದ ವಿಷಯ ಅವಳಿಗೆ ತಿಳಿದಿತ್ತು. ಅಲ್ಲದೆ, ಅವಳ ಹೆಣ್ಣಿನ ಅಚೂಕ ಹೇರಕ ದೃಷ್ಟಿಗೆ, ಶ್ಯಾಮರಾಯ-ಬಸವಂತಿಯರಲ್ಲಿ ನೀರಾಡುತ್ತಿರುವದರ ಸಂಶಯವೂ ತಾಗಿತ್ತು. ಇಂದಿಲ್ಲ ನಾಳೆ. ಬಸವಂತಿ ವಾಡೆಯ ಮಾಲಾದರೆ ಯದ್ದಲಗಾಟವೇ ಕಡಿದಂತಾಯಿತೆಂದು ಅವಳ ಗರತಿಯ ಮೇಲಿನ ಭಾಷ್ಯ-ಕಥನ ಇತಿಹಾಸ-ಜಮಾ ಆಯಿತು. ಬಸವಂತಿಗೆ ಉಸಿರಾಡಿಸುವಂತಾಯಿತು.

ತನ್ನ, ಶ್ಯಾಮರಾಯನ ಸಂಬಂಧ ಬಂದಂದಿನಿಂದಲೂ ಬಸವಂತಿ ಅನ್ಯ ಬಿಚಾರದ ತಗಾದೆಯನ್ನು ನಡಸೇ ಇದ್ದಳು. ತೌರಿನಲ್ಲಿಯ ನರಕ-ಜೀವನದರ್ಶನ ಅವಳಿಗೆ ಅಸಹ್ಯವಾಗಿತ್ತು. ಅವಳು ಓಡಿ ಬಂದಾಗ, ಇನ್ನೂ ಅವಳ ಮುಪ್ಪಿನ ತಂದೆ-ತಾಯಿ ಬದುಕಿದ್ದರು. ಅವರಿದ್ದರೆಂದು, ಬಸಗೊಂಡನ ಹೆಂಡತಿಯ ಆಟ ಸಾಗುತ್ತಿರಲಿಲ್ಲ — ಅದು ಕಾರಣವಾಗಿ, ಬಸವಂತಿಗೆ ಆಶ್ರಯ ದೊರಕಿತು. ಇಲ್ಲದಿದ್ದರೆ, ಅವಳಿಗೆ ಬಸಗೊಂಡನ ಮನೆಯ ಬಾಗಿಲು ತೆರೆಯುವ, ತೆರೆದು ಒಳಗೆ ಕರೆದುಕೊಳ್ಳುವ ಶಕ್ಯತೆ ಇರಲಿಲ್ಲ.

ಬಸವಂತಿಗೆ ತನ್ನ ಹರೆಯದ ಚೆಲುವಿನ ಚೀಜ ಆಗುವದರಲ್ಲಿ ಸಂದೇಹ

ವಿರಲಿಲ್ಲ. ನಮ್ಮೂರಲ್ಲೇ ಗಂಡ ಬಿಟ್ಟ ಅಥವಾ ಗಂಡಂದಿರನ್ನ ತಾವೇ ಬಿಟ್ಟ ಗರತಿಯರ ತಂಡ, ಇನ್ನೊಬ್ಬ ಕಾಯಂ ಯಜಮಾನರ ಸಹವಾಸದಲ್ಲಿ ನಿತಾಂತ ಸುಖೋಪಭೋಗಿಯಾಗಿರುವದನ್ನು ಅವಳು ನೋಡಿದ್ದಳು. ಈ ಗರತಿಯರು ದೇಹ ವಿಕ್ರಯಿಸಿದಂತೆ ದೇಹದಂಡನೆಯಲ್ಲೂ ಪಟಾಯಿತರಿದ್ದರು. ಸುಗ್ಗಿಯಲ್ಲಿ ಜೋಳ ಕೊಯ್ದು, ಹತ್ತಿಬಿಡಿಸಿ, ಬಿಡಿಸಿದ ಹತ್ತಿಯನ್ನು ಅರೆದು, ಮೂರು ನಾಲ್ಕು ತಿಂಗಳದ ಅವಧಿಯಲ್ಲಿ ಸುಮಸುಮಾರು ನೂರು ರೂಪಾಯಿ ಗಂಟುಮಾಡಿ ಕೊಳ್ಳುತ್ತಿದ್ದರು. ಇದನ್ನು ತಾನೂ ಮಾಡಿದ್ದರೆ, ತಾನೇನೂ "ದೇಶಕ್ಕ ಹೊರ್ತ" ಧಂದೇ ಮಾಡಿದಂತಾಗುವದಿಲ್ಲವೆಂಬ ಧೈರ್ಯವೂ ಅವಳಿಗಿತ್ತು. ಬಜಾರೀ ಮಾಲಾಗುವದಕ್ಕೆ ಅಷ್ಟು ಧಾವತಿಪಡಬೇಕಾಗಿರಲಿಲ್ಲ. ಗಿಡದ ಬುಡದಲ್ಲಿ ಸಣ್ಣ ಚಿಕ್ಕ-ತಕ್ಕಡಿಯ ಅಂಗಡಿಯನ್ನಿಟ್ಟಿದ್ದರೂ "ಯಾಪಾರ" ಭರಾಟೆಯಿಂದಲೇ ಸಾಗ ಬಹುದಾಗಿತ್ತು. ಆದರೆ ಬಸವಂತಿಗೆ ಒಂದೇ ಗಂಡಿನ ಅಖಂಡ ಸಹವಾಸದ ಹವ್ಯಾಸ ಹೊಕ್ಕಿತ್ತು. ನಮ್ಮೂರಿನಲ್ಲೇ ಅವಳಿಗೆ ಇಂಥ ವಿಶ್ವಾಸದ, ದುಡ್ಡಿದ್ದ, ಧೈರ್ಯವಿದ್ದ ಗಿರಾಕಿ ಸಿಗುವ ಶಕ್ಯತೆ ಇತ್ತು. ಇಲ್ಲಿಗೆ ಬಂದು ಎರಡು ಮೂರು ವರುಷದ ವನವಾಸ ಸೋಸಿದಳು. ನಾದಿನಿಯ ಕೂರಲಗಿನ ಸವಿಯುಂಡಳು. ಮುಪ್ಪಿನ ತಂದೆ-ತಾಯಿ ಕಣ್ಣು ಮುಚ್ಚಿದರು. ಕೂಲಿ-ನಾಲಿ ಮಾಡಲೆಂದು, ಬಯಲಿಗೆ ಬಿದ್ದಳು. ಸಾವಿರ ಕಣ್ಣು ಅಡರಾಸಿ ಅವಳನ್ನು ಕಚ್ಚಿದವು. ನೂರು ನಾಲಿಗೆಯ ಮಸೆತ ಅವಳ ಜೀವನವನ್ನು ಛಿದ್ರ-ಛಿದ್ರಗೊಳಿಸಿದವು. ಜೀವವನ್ನು ಹಣ್ಣುಗಾಯಿ-ನೀರುಗಾಯಿ ಮಾಡಿ, ಒಮ್ಮೆ ಅದನ್ನು ನೀಗಿ ನಿರಂಬಳವಾಗ ಬೇಕೆನ್ನುವ ಮಟ್ಟಿಗೂ ಮಜಲು ಹೊಡೆದವು.

ಒಮ್ಮೆ ಖಾದರ, ಮೋಟರು ತೊಳೆಯಲೆಂದು ಕಾಕಾ ಅವರ ತೋಟದ ಭಾವಿಗೆ ಹೋಗಿದ್ದ. ಮೋಟರು ತೊಳೆದು ಅದನ್ನು ದೂರದ ಹುಣಸೆಯ ಗಿಡದ ನೆರಳಿನಲ್ಲಿ ವಿಶ್ರಮಿಸ ಬಿಟ್ಟು, ತಾನು ಬಾವಿಯ ಹತ್ತಿರದ ಬೇವಿನ ಗಿಡದಲ್ಲಿ ವಿಶ್ರಮಿಸಿದ್ದ. ಅವನು ಅಲ್ಲಿ ಮಲಗಿದ್ದು ಯಾರಿಗೂ ಕಾಣುವಂತಿರಲಿಲ್ಲ. ಜೀವ ನೀಗುವ ಈರ್ಷೆಯಿಂದ ಧಡಧಡನೆ ಬಂದ ಬಸವಂತಿ, ಬಾರಿಯ ಮೇಲಿಂದಲೇ ನೀರಿಗೆ ಧುಮುಕಿದಳು. ಒಂದೆರಡು ಗುಟುಕು ನೀರು ಕುಡಿದು ತಳ ಕಾಣಲಿದ್ದಳು. ಅವಳು ಜಿಗಿದದ್ದನ್ನು ನೋಡಿದ ಖಾದರ ತಾನೂ ಅವಳ ಬೆನ್ನಾಬೆನ್ನು ನೀರಿಗೆ ಹಾರಿ, ಅವಳನ್ನು ಎತ್ತಿ ತೆಗೆದು – ಹೊಟ್ಟೆ ಹಿಸಿಕಿ, ನೀರು ಕೊಡವಿ ಬದುಕಿಸಿದ.

ಶ್ಯಾಮರಾಯನಿಗೆ ಬಸವಂತಿಯನ್ನು ಒಪ್ಪಿಸಿ, ನಡೆದ ಕಥೆಯನ್ನು ವಿವರಿಸಿದ. ಬಸಗೋಂಡನ ಮನೆಯಲ್ಲಿ ನಿತ್ಯ ಬಸವಂತಿಯನ್ನು ಶ್ಯಾಮರಾಯ ನೋಡುತ್ತಿದ್ದ. ಅವಳ ಮುಖದ ಪರಿಚಯ ದಟ್ಟವಾಗಿತ್ತು. ಶ್ಯಾಮರಾಯನ ಕಾಮದೃಷ್ಟಿ ಅವಳನ್ನು ನೋಡಿತ್ತು. ಅವನ ಬಯಕೆ ಪೂರ್ತಿಯಾಗುವ ಗಳಿಗೆ ಸನ್ನಿಹಿತವಾಗಿತ್ತು. ನುಂಗದೆ ಉಗುಳಿದ ಮೃತ್ಯು, ಬಸವಂತಿಯನ್ನು ಶ್ಯಾಮರಾಯನಿಗೆ ಮೀಸಲು ಬಿಟ್ಟಿತ್ತು. ಅವಳನ್ನು ಬಾಡಿಸಿಕೊಳ್ಳಲು ಶ್ಯಾಮರಾಯ ನಾಲಿಗೆಯನ್ನು ರಾಚತೊಡಗಿದ. ಬಸಗೋಂಡನ ಲಗಟಕ್ಕೆ ತೊಡಗಿದ. ಅವನ ಅನುನಯ ಫಲ ಬಿಡುವ ಕಾಲ ಹಣ್ಣಾಗಿತ್ತು. ಮೂರೂವರೆ ಗಳಿಗೆಯ ಶುಭ ಕ್ಷಣ ಕಣ್ಣು ತೆರೆಯಲಿತ್ತು.

ಉಪಮೆ ನಿಮಗೆ ಅಸ್ಥಾನಪ್ರಯೋಗವೆನಿಸಬಹುದು – ಅಡ್ಡಿಯಿಲ್ಲ – ಆದರೆ ಊರ್ಮಿಳೆಯಂತೆ ದಾರಿ ಕಾಯ್ದ ಬಸವಂತಿ ಶ್ಯಾಮರಾಯನನ್ನು ಪಡೆದಳು. ಜೀವನದ ಅಗತಿಕತೆ, ವನವಾಸ ಒಮ್ಮೆ ಮುಗಿಯಿತೆಂದು ಅವಳು ಸಮಾಧಾನದ ಉಸಿರುಬಿಟ್ಟಳು.

ಶ್ಯಾಮರಾಯನ ಕದ್ದು-ಮುಚ್ಚಿನ ವ್ಯವಹಾರವನ್ನು ಅವಳು ಬಲವಾಗಿಯೇ ವಿರೋಧಿಸಿದ್ದಳು. ವಾಡೇ ಇಲ್ಲದಿದ್ದರೂ ಬಿಡಲಿ – ತನಗೊಂದು ಸ್ವತಂತ್ರ ಬಿರಾಡು ಮಾಡಿಕೊಡಬೇಕೆಂದು ಬೇಡಿಕೊಂಡಳು.

"ದಮ್ಮ ತಿನ್ನು ಬಸವಂತೀ, ಈ ಊರs ಬಿಟ್ಟರೂ ಬಿಡೂಣು. ಬೆಳಗಾಂವೀಯಂಥಾ ಶಾರದಾಗs ಇದ್ದಬಿಡೂಣು"

ಎಂದು, ಇನ್ನೂ ತನ್ನ ಠಿಕಾಣದ ಥಾಕೇ ಇಲ್ಲದ ಶ್ಯಾಮರಾಯ ಅಭಿವಚನ ಕೊಟ್ಟಾಗ ಸುಮ್ಮನಾದಳು.

ಬಸವಂತಿಯನ್ನು ಹೀಗೆ ಶ್ಯಾಮರಾಯನ ತಾಬೇದಾರೀ ಮಾಡುವಾಗ, ಬಸಗೋಂಡ ಹುಂಡಾ ತೆಗೆದುಕೊಳ್ಳದೆ ಬಿಡಲಿಲ್ಲ.

ರಾವಜೀಕಾಕಾ ಅವರಿಗೆ ಅವನದೊಂದು ಹೊಲ ಒತ್ತೀಬಿದ್ದು ಬಹಳ ದಿನವಾಗಿತ್ತು. ಆ ಒತ್ತೀ ಕಾಗದ ಕೊಳೆಯುತ್ತ ಬಂದಿತ್ತು. ಆ ಒತ್ತೀ ಕಾಗದ – ಬಡ್ಡಿಯ ಅರ್ಧ ಹಣವನ್ನು ಬಿಡಿಸಿಕೊಂಡು, ರದ್ದ ಆಗಿ ಬಸಗೋಂಡನ ಕೈಗೆ ಬಂದಿತು. "ಬಸಗೋಂಡಾ ಕೆರೀ ನೀರು ಕೆರೀಗೆ ಚೆಲ್ಲಿದಾ" ಎಂದು ಜನ ಆಡಿಕೊಂಡರು. ಬಸಗೋಂಡ, ಅವನ ಹೆಂಡತಿ ಅಂತೂ ಬಸವಂತಿಗೆ ಕೃತಜ್ಞರಾದರು. ಈ ಹೊಲದ ಹಸ್ತಾಂತರವಾದನಂತರ, ಬಸಗೋಂಡನ ಹೆಂಡತಿ,

"ಸಜ್ಜಕ-ಬಾಸಿಗೆ" ಹಾಲು ಇಲ್ಲದೆ ಊಟದ ತಾಬಂಡಿಯನ್ನು ಬಸವಂತಿಯು ಮುಂದೆ ಇಡುತ್ತಿರಲಿಲ್ಲವೆಂದು ಗೋವಿಂದಭಟ್ಟನ ವರದಿ. ಒಮ್ಮೊಮ್ಮೆ ಅವನು ಅಚೂಕ ಬಾತಮೀ ತೆಗೆದಿರುತ್ತಾನೆ. ಇದ್ದರೂ ಇರಬಹುದು.

ನಡೆದದ್ದೆಲ್ಲ 'ಆಲ್‌ಬೇಲ್' ಆಗಿಯೇ ಸಾಗಿತ್ತು. ಏಕದಮ್ ಉತಾವಿಳನಾಗದೆ, ಶ್ಯಾಮರಾಯ ಕೆಲವು ದಿನ, ಬಸಗೋಂಡನ ಮನೆಯ ಥಾಬೆಯಲ್ಲಿಯ ಶೆಗಣಿಯ ನಾತ, ಅಡಕಲ-ಕೋಣೆಯಲ್ಲಿಯ ಬಸಗೋಂಡನ ಅಪತ್ಯಪಟಾಲಮ್ಮದ ಕಿರಿಕಿರಿ ಕುರುಕುರು ಸಹಿಸಿ, ಬಸವಂತಿಯು ರಸವಂತಿ ಸಹವಾಸವನ್ನು ಸುಖದ ಸಹ್ಯ ಮಾಡಿಕೊಂಡ. ದಿನಾಲು ಮೈ ತೊಳೆದುಕೊಂಡು, ಉಟ್ಟ ದಟ್ಟಿಯನ್ನು ಬದಲಿಸುವ ಸವಯ್ ಮಾಡಿಕೊಂಡಿದ್ದ ಬಸವಂತಿಗೆ, ಈ ತಾವು, ಶ್ಯಾಮರಾಯನ ದರ್ಜೆಗೆ ಹಲಕಾ ಎನಿಸತೊಡಗಿತು. ಅಷ್ಟರಲ್ಲಿ ಬಸಗೋಂಡನ ಮನೆಯ ಗಬ್ಬಾದ ಎಮ್ಮೆ ಕೋಣ ಈಯಿತು. ಬಾಣಂತಿ ಎಮ್ಮೆ – ಅಪತ್ಯ ಕೋಣಗರು, ಅಖಂಡ ರಾತ್ರಿ, "ವ್ಹಾಂಯ್" ಎಂದು ಕರೆದು – "ಯ್ಯಾಂ" ಎಂದು ಉತ್ತರಿಸಿ ಕೀಸರಿಟ್ಟವು. ಇದಕ್ಕೆ ಬೇಸತ್ತ ಬಸವಂತಿ —

"ನಿಮಗಂತೂ ಬ್ಯಾರೇ ಬಿರಾಡ ಮಾಡೂ ಎದೀ ಇಲ್ಲಾ. ಈ ಹೇಸಿಕ್ಯಾಗ ನನ್ನ ಜಿಂವಾ ವಾಕರಸಾಕ ಹತ್ತೈತಿ. ನಾಳಿನ ಸುಟೂ ನೀವ್ ಬರೂದ ಬ್ಯಾಡಾ. ನಾನs ಬರತೀನಿ ವಾಡೇಕ್ಕ"

ಎಂದು ಹೇಳಿ, ಮರುದಿನದಿಂದ ಸರಿರಾತ್ರಿಯಾದ ಮೇಲೆ, ವಾಡೆಯ ವಾರಿಯನ್ನು ಸುರುವುಮಾಡಿದಳು.

ಕುತನಿಯ ಗಾದಿ-ರಗ್ಗಿನ ಊಬಿಗಿಂತ, ಅವಳಿಗೆ ಇಲ್ಲಿಯ ಸ್ವಚ್ಛತೆ, ನೈರ್ಮಲ್ಯ ಹೆಚ್ಚು ಆಕರ್ಷಕವಾಗಿದ್ದವು. ಶ್ಯಾಮರಾಯನಿಗೆ ಅವಳ ಬೆಚ್ಚಗಿನ ಮೈಯ – ಅಂತಃಕರಣದ ಮಾತಿನ, ಕಿಲಿಕಿಲಿ ನಗೆಯ – ಸ್ಪರ್ಶ-ಶ್ರವಣ-ಹರ್ಷ, ಜೀವ-ಚೇತೋಹಾರಿಯಾಗಿದ್ದವು. ಅವಳಿಗೆ ಅನ್ಯ ಬಿರಾಡಾಗುವವರೆಗೆ ಇದು – ಅಂದರೆ – ಅವಳು ರಾತ್ರಿ ಬಂದು, ಬೆಳಗುಹರಿಯುವನಕ ಇದ್ದು, ಮತ್ತೆ ನಿಷ್ಕ್ರಮಿಸುವದು ನಿರಾಬಂಧವಾಗಿ ಸಾಗಬಹುದಾಗಿತ್ತು. ರಾಚಪ್ಪ-ಗೋವಿಂದಭಟ್ಟ ಅದನ್ನು ನೋಡಿದ್ದರೂ ಸುಮ್ಮನೇ ಬಾಯಲ್ಲಿ ನಾಲಿಗೆ ಮಡಗಿಸಿ, ಈ ದರ್ಶನ ಘಟನೆಗೆ ವಾಚ್ಯತೆ ಕೊಡದಿದ್ದರೆ, ಕಾಲಾಂತರದಲ್ಲಿ ಅದರ ಪತ್ತೆಯಾಗಬಹುದಿತ್ತು. ಆದರೆ ಗೋವಿಂದಭಟ್ಟನ ವೈದಿಕ-ಬಾಯಿ ಎಂದಿಗೂ ಒಡಕು.

"ನಾ ಗೋವಿಂದಭಟ್ಟಾ, ವೈದಿಕಬ್ರಾಹ್ಮಣಾ. ದಿನಾ ವಕ್ರತುಂಡನ ಆರತೀ ಅಭಿಷೇಕಾ ಮಾಡೂ ಗಾಣಾಪತ್ಯಾ. ತಪ್ಪಿ ಅಸತ್ಯ ಮಾತಾಡೂ ಅಂವಾ ಅಲ್ಲಾ. 'ಚಕ್ಷುರ್ವೈ ಸತ್ಯಂ' ಬ್ರೀಡದಂವಾ ನಾನು."
ಎಂದು ಹೆಮ್ಮೆ ಕೊಚ್ಚಿಕೊಳ್ಳುತ್ತಾನೆ.

ಈ 'ಚಕ್ಷುರ್ವೈಸತ್ಯಂ'ದ ವಿಪರೀತ ಪರಿಣಾಮವಾಗಿ. ಶ್ಯಾಮರಾಯ-ಬಸವಂತಿಯ ಪ್ರಕರಣ ವಿಕಾರರೂಪ ತಾಳಿ. ಬಸವಂತಿಗೆ ಅವಗತವಾಯಿತು. ರಾಜಪ್ಪನ ಹೆಸರು ಅನ್ಯಾಯವಾಗಿ ಬದನಾಮೀ ಆಯಿತು. ಈ ಸುದ್ದಿಯನ್ನು ಬಸಗೋಂಡನಿಗೆ ತಿಳಿಸಿದ ವ್ಯಕ್ತಿ, ಅದರ ನಾದ-ನಿನಾದ ಬಸವಂತಿಯ ಕಿವಿಗೂ ಮುಟ್ಟುವಂತೆ ಜಾಗರೂಕತೆ ವಹಿಸಿದ. ಬಸಗೋಂಡನ ಮನೆಯ ಪಡಸಾಲೆಯ ಖಿಡಕಿಯ ಹಿಂದೆ ಬಸವಂತಿ ನಿಂತಿರುವ ಖಾತ್ರೀ ಮಾಡಿಕೊಂಡೇ ಈ ಹರಲಿಯ ಸುದ್ದಿಯನ್ನು, ಉಪ್ಪು-ಖಾರ-ಹುಳಿ-ಒಗರು ಸವರಿ ನಿವೇದಿಸಿದ್ದ. ಅವನು ಸುದ್ದಿ ಮುಟ್ಟಿಸಿ ಮನೆಯ ಹೊರ ಪಾವಟಣಿಗೆ ಇಳಿದು ಹೋಗಿರಬೇಕು – ಅಷ್ಟರಲ್ಲಿ ಬಸವಂತಿ ಅಣ್ಣನೆದುರು ಬಂದು ನಿಂತು —

"ಅಣ್ಣಾ, ಹರಲಿಗೆ ಅಂಜಿದ್ದರ ನಾ ಅತ್ತೀ ಮನ್ಯಾಗನs ಜೀಂವಾ ನೀಗತಿದ್ದೆ. ಸಾಯಬಾರದಂತ ಬಂದೆ. ಹರಲಿಗೆ ಅಂಜಿದ್ದರ ಶ್ಯಾಮರಾಯರನ್ನ ಹತ್ಯಾಕ್ಕ ಕರಕೊಂತಿದ್ದಿಲ್ಲಾ. ಹರಲೀ ಹೊತ್ತs ನಾ ಆಸರಾ ನೋಡಕೊಂಡೀನಿ. ಆದರs, ನಂದು-ಅವರದು ಆಟs ಹರಲಿ ಆಗಲಿ. ಅವರೂ ಧೈರ್ಯಾಮಾಡೇ ನನ್ನ ಕೂಡ್ಯಾರ. ಇನ್ನ ನಮಗ ತಳಕೈತಿ. ಇಂದಿಲ್ಲ ನಾಳೆನರs, ನಾ ಅವರ ಜೋಡೀ ಇರಾಕಿದ್ನಿ. ಸರ್ರುರಾತ್ರ್ಯಾಗ ಅವರಿವರು ಕೈ ಹಿಡಿದರೂ ಅಂತ ಅನಿಸಿಗೊಂಬೂದು ಬ್ಯಾಡಾ. ಬಸವಂತಿ ಒಬ್ಬರ ಕೈಯಾಗ ಕೈ ಕೊಟ್ಟಾಳ. ಇನ್ನೊಬ್ಬರಿಗೆ ಅದನ್ನ ಹಿಡಿಯೂ ಛಾತೀ ಆಗಾಣಿಲ್ಲಾ. ಕೈ ಹಿಡದಾವರು ಬೇಕಾರ ತೇಲಸ್ತಾರ ಸಾಕಾರ ಮುಣಗಸ್ತಾರ. ನಾ ಇಂದನs ಅವರ ಮನೀಗೆ ಹೊಂಟಿನಿ, ಅವರ ನೆಳ್ಳಿನಾಗs ನಿಂದರತೀನಿ. ಬಸವಂತಿ ನಿನ್ನ ಪಾಲಿಗೆ ಇಲ್ಲಾ. ಇಂದs ಸತ್ತಲಂತs ತಿಳೀ."
ಎಂದು ಹೇಳಿದವಳೇ, ಉಣ್ಣಲೆಂದು ಬಡಿಸಿಕೊಂಡ ತಾಬಂಡಿಯನ್ನು ಬಸಗೋಂಡನ ಮುಂದೆ ಇಟ್ಟು, ಉಟ್ಟ ಸೀರೆಯ ಮೇಲೆಯೇ ಅವನ ಮನೆ ತೊರೆದು ಮಟಮಟ ಮಧ್ಯಾಹ್ನದಲ್ಲಿಯೇ ವಾಡೆಯನ್ನು, ಯಾರ ಸಮ್ಮತಿ – ಯಾರ ಪರವಾನಗೀ ಇಲ್ಲದೆ ಹೊಕ್ಕಳು. ವಾಡೆಯಲ್ಲಿಯ ಆಳು-ಕಾಳು, ಅಡುಗೆಯ

ಗುಂಡ್ಯಾ, ಯಾರೂ ಅವಳಿಗೆ ಯಾಕೆ ಎಂದು ಕೇಳಲಿಲ್ಲ. ಶ್ಯಾಮರಾಯ-ಬಸವಂತಿಯ ಸಹವಾಸ-ಸಖ್ಯದ ವಾಸ ಅವರಿಗೆ ಬಡಿದಿತ್ತು. ಬಸವಂತಿಗೆ ಯಾಕೆಂದು ಕೇಳುವದು ತಮ್ಮ ನೀರಲ್ಲವೆಂದು ಸುಮ್ಮನಿದ್ದುಬಿಟ್ಟರು. ಆದರೆ ಶ್ಯಾಮರಾಯನ ಅನುಪಸ್ಥಿತಿಯಲ್ಲಿ ಅವಳು ವಾಡೆಯಲ್ಲಿ ಪ್ರತಿಷ್ಠಿತಳಾದದ್ದನ್ನು ಸಂಜೆಯೊಳಗಾಗಿ ಊರ ತುಂಬ ಮಾಡಿದರು.

ಗೋವಿಂದಭಟ್ಟ ಪುರಾಣದಲ್ಲಿ ವ್ಯರ್ಥ ಕಂಠಶೋಷಣೆ ನಡೆಸಿದ್ದ. ಪುರಾಣ-ಶ್ರೋತಾ-ಮಂಡಳಿ ಬಸವಂತಿಯ ಪುರಾಣವನ್ನು ಖಾಸಗೀ ಆಗಿ ನಡೆಸಿತ್ತು. ಕಟ್ಟೆಯ ಮೇಲೆ, ಗುಡಿಯಲ್ಲಿ, ಚ್ಯಾವಡಿಯ ಆಸು-ಪಾಸು, ಒಂದೇ ಸುದ್ದಿ – ಬಸವಂತಿ ವಾಡೆಯನ್ನು ಹೊಕ್ಕಳು.

“ಕಾಕಾನ ಮಗಾ, ಕೇಳ್ಯಾನs. ಹೀಂಗ ಮಾಡದಿದ್ರ ಅಂವಾ ಕುಲಕs ಹೊರತ ಆಗತಿದ್ದಾ. ಕಟ್ಟೀಕಲ್ಲು ಕಟ್ಟಿಗೇ ಕೂತ್ಯ.”
ಹಿರಿಯರು ಪ್ರೋಕ್ತವಾಗಿ ಅಪ್ರಾರ್ಥಿತವಾಗಿ ಅಭಿಪ್ರಾಯ ಸಲ್ಲಿಸಿದರು.

‘ಬಸವಂತಿ ಚರಗೀ ತಗೊಂಡು ಹೋಗಾಗರೇ ಆಟ ನೋಡಿ, ಕಣ್ ಮಿಟಕಸ್ತಿದ್ದೇವು. ಇನ್ನ ಆ ಗಿಣಿ ಹೊಕ್ಕಿತು ವಾಡೇದ ಪಂಜರಾ.”
ನಿರಾಶವಾದ-ಶೋಕೀ-ಲುಟಾರು-ತರುಣ-ವೃಂದ ಹಳಹಳಿಸಿತು.

ಶ್ಯಾಮರಾಯ ಊರಿನಿಂದ ಹಿಂದಿರುಗಿ ಬಂದ ಸುದ್ದಿಯನ್ನು ರಾಚಪ್ಪ ಕೇಳಿಕೊಂಡ. ಗುಡಿಯ ಕೋರೀಖೋಲಿಯಲ್ಲಿದ್ದ ಅಂಗೈಯಗಲದ ೧೦–೧೫ ಕೀಲಿಗಳನ್ನು ರಾಮಸೇವಕನ ಮೇಲೆ ಹೊರಿಸಿಕೊಂಡು ನೇರವಾಗಿ ವಾಡೆಗೆ ಬಂದ. ಪಡಸಾಲೆಯಲ್ಲಿ ಶ್ಯಾಮರಾಯನಿರಲಿಲ್ಲ. ಅವನು ತೋಟದ ಕಡೆಗೆ ಹೋಗಿರುವನೆಂದು ಅಡುಗೆಯ ಗುಂಡ್ಯಾ ಹೇಳಿದ. ರಾಚಪ್ಪ ಚಕಾರ ಶಬ್ದವಿಲ್ಲದೆ ಥೇಟ ಪಡಸಾಲೆಯಿಂದ ಹಿತ್ತಲುಮನೆಯ ಕೊನೆಯ ಬಾಗಿಲವರೆಗೂ ಹೋಗಿ ಬಂದ. ಗರುಡಗಣ್ಣಿನಿಂದ ವಾಡೆಯನ್ನು ಅದರ ಮೂಲೆಮೂಲೆಯನ್ನೂ ಅವಲೋಕಿಸಿದ. ಹೆಬ್ಬಾಗಿಲ ಹೊಸ್ತಿಲಕ್ಕೆ ರಂಗವಲ್ಲಿ ಇತ್ತು. ಹಿತ್ತಲುಮನೆಯ ತುಳಸೀವೃಂದಾವನದ ಸಾರಣೆ-ಕಾರಣೆಯಾಗಿತ್ತು. ಹಿತ್ತಲಲ್ಲಿಯ ಹೂಗಿಡ-ಬಳ್ಳಿಗಳ ಮಡಿಯನ್ನು ಯಾರೋ ಕೈಯಾಡಿಸಿ, ನೀರು ಹನಿಸಿದಂತಿತ್ತು. ಹತ್ತಿಪ್ಪತ್ತು ಕೋಣೆಯ ಬಾಗಿಲುಗಳ ಮೇಲಿನ ಧೂಳು ಹಾರಿ, ಹಿತ್ತಾಳಿಯ ಕಡಿ-ಕೊಂಡಿಗಳು ಲಕಲಕಿಸುವಂತಾಗಿತ್ತು. ಅಡುಗೆಯ ಒಲೆಯನ್ನು ಸಾರಿಸಿ, ರಂಗವಲ್ಲಿಯ

ನಕ್ಷತ್ರವಿಟ್ಟಿತ್ತು. ಯಮನಂತೆ ಬಂದ ರಾಚಪ್ಪ ಧರ್ಮರಾಜನಂತೆ ಹಿಮಶೀತಲ ಪಿಂಡವಾಗಿ ನಡುಮನೆಯಲ್ಲಿ ನಿಂತು ವಿಚಾರಿಸತೊಡಗಿದ.

"ಯಾಕ ರಾಚಪ್ಪಣ್ಣಾ, ವಾಡೇಕ್ಕ ಕೀಲೀ ಹಾಕಾಕ ಬಂದಿದ್ದೇನು? ಹಾಂಗs ಹೊಂಟ ನಿಂತೀ? ಕೀಲೀ ಹಾಕು. ವಾಡೇ ನಿಂದs ಐತಿ."

ಬಸವಂತಿ, ಹಿತ್ತಲು ಮನೆಯಲ್ಲಿಯ ತನ್ನ ಕೋಣೆಯಿಂದ ಹೊರಗೆ ನಡೆದು ಬಂದು ಹೇಳಿದ್ದು ಕೇಳಿಸಿತು.

"ತಂಗೀ, ವಾಡೇ ಹಿಂಗs ಸಂಬಾಳಸು. ಅದರ ನಿಗಾ ನಿನಗ ಹತ್ತ್ಯs. ದೇವರು ನಿನ್ನ ಕಳಿಸಿದಾ. ವಾಡೇಕ್ಕ ಕೀಲೀ ಹಾಕಿಸಿಗೊಡಲಿಲ್ಲಾ, ಕಾಕೂನ ಪುಣ್ಯಾ ಇನಾ ಶಾಬೂತ ಐತಿ."

ಎಂದು ನುಡಿದವನೇ ರಾಮಸೇವಕನನ್ನು ಮುಂದೆ ಹಾಕಿಕೊಂಡು ಬಂದ ದಾರಿಗೆ ತಿರುಗಿದ.

ಬಸವಂತಿ ಅವಾಕ್ಕಾಗಿ. ಜರಗಾಗಿ ಪಡಸಾಲೆಯ ಬಾಗಿಲಿಗೆ ಬಂದು ನಿಂತಳು. ರಾಚಪ್ಪನ ಶಬ್ದ ಅವಳ ಕಿವಿಯಲ್ಲಿ ನಿನದಿಸತೊಡಗಿದವು.

## ಏಳು

ರಾವಜೀಕಾಕಾ ಅವರ ಕಾಗದದ ಪ್ರಕಾರ, ಅಪನವರ, ಗೌಡರ, ನಾಯಕ ವಕೀಲರ ಸಲಹೆ ಪಡೆದು ರಾಚಪ್ಪ, ಹೊಲ-ಮನೆಯ ವ್ಯವಸ್ಥೆ ಮಾಡಿದ. ಹಾಗೆ ಮಾಡಿದ್ದರ ಬಗ್ಗೆ ಕಾಕಾ ಅವರಿಗೆ ತ್ರೋಟಕ-ವರದಿ ಮಾಡಿದ. ಆದರೆ ಊರಲ್ಲಿಯ ಅನ್ಯ ಯಾವ ಭಾನಗಡಿಯ ವಿಷಯವನ್ನೂ ಅವರಿಗೆ ತಿಳಿಸುವ ಗೋಜಿಗೆ ಹೋಗ ಲಿಲ್ಲ. ಶ್ಯಾಮರಾಯ ಕಾಯಂತರೀಕವಾಗಿ ಬಸವಂತಿಯನ್ನು ಕಟ್ಟಿಕೊಂಡು ವಾಡೆಯಲ್ಲಿ ನಿಂತ ವಿಷಯವನ್ನು ಅವರಿಗೆ ತಿಳಿಸಲಿಲ್ಲ. ದೇವಸ್ಥಾನದ ಕಚೇರಿ

ಯನ್ನು ವಾಡೆಗೆ ಸ್ಥಲಾಂತರಿಸಲಿಲ್ಲ. ಕಣ್ಣುಮರೆಯಲ್ಲಿ ಬೇಕಾದದ್ದು ನಡೆಯಲಿ ಅವರ ಪಂಚೇತಿ ತನಗೆ ಬೇಡವೆಂದು ಸ್ವಸ್ಥನಾಗಿದ್ದ. 16726

ಕಾಕಾ ಅವರ ತನಕ ಈ ಸುದ್ದಿ ಹೋಗದಿರುವದಕ್ಕೆ ಕಾರಣ, ನಾನು ರಾಜಪ್ಪ ಇಬ್ಬರೇ. ನಾಯಕ ವಕೀಲರ ಮನೆಯವರು ಪ್ರತಿವರುಷದಂತೆ ತಿರುಪತಿ ಯಾತ್ರೆಯ ಪ್ರಯುಕ್ತ ಗೋವಿಂದಭಟ್ಟನನ್ನು ಜೊತೆಗೆ ಕರೆದುಕೊಂಡಿದ್ದರು. ತಿರುಪತಿ, ಮದ್ರಾಸ, ಶ್ರೀರಂಗಪಟ್ಟಣ, ಉಡುಪಿ ಸುತ್ತಿ ಬರಲಿಕ್ಕೆ ಅವರಿಗೆ ನಿಧಾನ ತಿಂಗಳ ಅವಕಾಶವಾದರೂ ಬೇಕಿತ್ತು. ಅನಾಯಾಸವಾಗಿ ಮೇ ತಿಂಗಳ ಸೂಟಿ ಇತ್ತು. ತಾನು ಯಾತ್ರೆಗೆ ಹೊರಡಲಿದ್ದು. ಮನೆಯಲ್ಲಿ ಯಾರಾದರೂ ಜವಾಬು ದಾರಿಯ ಜನ ಬೇಕು – ಗಣಪತಿಗುಡಿಯ. ವಾಡೆಯ ಪೂಜೆಗೆ ಅಧಿಕೃತ-ವ್ಯಕ್ತಿ ಬೇಕು – ನಿನ್ನ ಪರೀಕ್ಷೆ ಮುಗಿದ ಕೂಡಲೇ ಬಂದುಬಿಡು – ದಾರಿಕಾಯುತ್ತೇನೆ – ಎಂದು ಅವನಿಂದ ಫರ್ಮಾನು ಬಂದಿತು. ಅವನ ಬಿಟ್ಟಿಯ ಯಾತ್ರೆಯ ಪುಣ್ಯ ಅಷ್ಟಾದರೂ ಪದರಲ್ಲಿ ಬೀಳಲಿ ಎಂದು ನಾನೂ ಧಾವಿಸಿ ಬಂದಿದ್ದೆ. ಸಾಂಗಲಿಯಲ್ಲಿ ಇಡೀ ಒಂದು ವರ್ಷ ಕೂಡಿದ ದಕ್ಷಿಣೆಯ, ಸ್ಕಾಲರ್‌ಶಿಪ್ಪಿನ, ಅವನು ಯಾತ್ರೆಗೆ ಹೊರಡಲಿರುವ ಸುದ್ದಿ ತಿಳಿದು ಪಂತಮಾಮಾ ಅಡಿ-ಅಡಚಣಿಗೆ ಇರಲಿ ಎಂದು ಕೈಯೆತ್ತಿ ಕೊಟ್ಟ ಇಪ್ಪತ್ತೈದುರೂಪಾಯಿ. ಎಲ್ಲವನ್ನೂ ಕೂಡಿಸಿ. ಗೋವಿಂದಭಟ್ಟನ ಕೈಯಲ್ಲಿ ಹಾಕಿ ಪರಮಾರ್ಥದ ಸಮಾಧಾನಹಚ್ಚಿಕೊಂಡೆ. ನಾಯಕ ವಕೀಲರು, ಯಾತ್ರೆಯ ಖರ್ಚು-ಖಂದೇ ವಹಿಸಿದ್ದನ್ನು ಮರೆತು, ಗೋವಿಂದಭಟ್ಟ ಊರ ತುಂಬ ಇಡೀ ದಿನ ಅಲೆದು. ಕಂಡವರ ಮುಂದೆ ದಾದಲ್ಯಾನೇ ಯಾತ್ರೆ ಮಾಡಿಸಿದ ನೆಂದು. ಮಗನ ಮಹತಿಯನ್ನು ಸಾರಿ ಸಾರಿ ಬಂದ. ನಾನು ಕೊಟ್ಟ ರೊಕ್ಕದಲ್ಲಿ ಇನ್ನೊಬ್ಬರ ಖರ್ಚು ತೇಲುವದೆಂದು ಈ ಸಲ ಅವ್ವನನ್ನು ಜೊತೆಯಲ್ಲಿ ಕರೆದು ಕೊಂಡು ಬಹಳ ಖುಷಿಯಿಂದಲೇ ಯಾತ್ರೆ ಹೊರಟ. ದೊಡ್ಡವರಾದ ನನ್ನ ತಮ್ಮಂದಿರು ಸೂಟಿಗೆ ಊರಿಗೆ ಬಂದಿದ್ದರಿಂದ, ನಿತ್ಯಾವಳೀ ಪೂಜೆಯ ಮನೆ ಗಳನ್ನು ಅವರೇ ಸಂಬಾಳಿಸುತ್ತಿದ್ದರು. ನನ್ನ ಪಾಲಿಗೆ ಗಣಪತಿಯ ಪೂಜೆ. ವಾಡೆಯ ಪೂಜೆ ಅಷ್ಟೇ ಮಿತವಾಗಿತ್ತು.

ಅಖಂಡ ಒಂದು ಒಂದೂವರೇ ವರುಷ ನಾನು ಊರ ಕಡೆಗೆ ಸುಳಿದಿರ ಲಿಲ್ಲ. ಜೆ.ಬಿ.ಪಿ.ದಲ್ಲಿ ಊರ ಉಸಾಬರಿಯನ್ನು ಮಾಡುತ್ತ ಅಲೆದದ್ದರಿಂದ ಅಭ್ಯಾಸವೂ ಆಗಿರಲಿಲ್ಲ. ಬಿ.ಎ. ಕ್ಲಾಸ್ ಬರದೇ, ಹಿಂದಿನ ರೆಕಾರ್ಡನ್ನು ಶುಭ್ರ

ವಿಟ್ಟುದರ ಫಲ ಸಿಗುತ್ತಿದ್ದಿಲ್ಲ. ಪೂಜೆ, ಸತ್ಯನಾರಾಯಣ, ಕಿಲಾಪ, ಉಸಾಬರಿಗೆ ಒಂದಿಷ್ಟು ವಿಶ್ರಾಂತಿ ದಯಪಾಲಿಸಿ, ಪರುಷಾರು ತಿಂಗಳು ಬಹಳ ಮೇಹನತ್ ಮಾಡಿ, ಒಮ್ಮೆ ಪರೀಕ್ಷೆಯ ಕುತ್ತಿನಿಂದ ಗೆದ್ದೆವು.

"ದಾದಲ್ಯಾ, ಗೋವಿಂದಭಟ್ಟನ ಸ್ವಾರೀ, ಯಾತ್ರಾದಿಂದ ತಿರಿಗಿ ಬರೂತ್ಲೇ ಬಂದಬಿಡು. ಎಂಪಿ.ಕ್ಕ 'ಟರ್ಮ' ತುಂಬೂಣಂತ."

ವಸೂ ಹೇಳಿದಳು.

"ಮಾರಾಯಳ್ಸ, ನನಗೇನು ಮದಿವಿ-ಮುಂಜಿವಿ ಬ್ಯಾಡಂತಿಯಾ? ಕಲಿಯೂ ದೇನು ಶೀಕ್ಷಾನ್ಸ ಸೂಳೇಮಗನ್ದು. ಎಂ.ಪಿ. ಕ್ಲಾಸ್ ಬಂದರ, ಇದs ಕಾಲೇಜದಾಗ. ಭಾಳ ಆದರ ಒಂದ ಜಾಗಾ ದಕ್ಕೀತು. ಏನ ಮಾಡತಾನ ನಿಮ್ಮ ಮಗಾ, ಅಂತ ಗೋವಿಂದಭಟ್ಟಗ ಯಾರರs ಕೇಳಿದರ. ಕಾಲೇಜ ಕಲಸ್ತಾನಂತ ಅಂವಾ ಹೇಳಿದರ. ನನ್ನ ಪ್ರಾಣಾ ಗಂಟಲಿಗೇ ಬರತದ ನೋಡು. ಮಾಮುಲೇ ಮಾಡತಾನ ನನ್ನ ಮಗಾ ಅನ್ನಲಿ ಒಮ್ಮೆರs, ಅದಕಂತೂ ಎಂ.ಪಿ. ಪನ್ ಬ್ಯಾಡಾ. ನಿನಗ ಎಂ.ಪಿ. ಆಗೂದು ಬಿಡದ ಕರ್ಮಾ. ಅಕಡೆ ವಿಶ್ಯಾ ಎಂ.ಬಿ.ಬಿ.ಎಸ್. ಆಗಬೇಕು. ನೀವು ಎಂ.ಪಿ. ಆಗಬೇಕು. ಅಲ್ಲೀ ತನಕಾ ತಳಕ ಬೀಳೂಹಾಂಗಿಲ್ಲಾ. ಲಗ್ನ ಆಗದ ಹುಚ್ಚ ಬಿಡ್ಡಾಂಗಿಲ್ಲಾ. ಹುಚ್ಚ ಹೋಗದ ಲಗ್ನ ಆಗೂ ಹಾಂಗಿಲ್ಲಾ. ಹೀಂಗ ಆಗೇದ ನಿಮ್ಮದು. ಸುರ್ಯಾ, ಶಿಸ್ತ ಮಾಡಿದ ನೋಡು; ಬೀ.ಈ.ಗೆ ಹೋಗಿ ಮುಂದಿನ ವರ್ಷ ಅನೂದರಾಗ ಆಫೀಸರ ಆಗಿರತಾನ ಮಗಾ. ಹೋದ ವರ್ಷ ದಿಂದs ಅವರಪ್ಪಾ ಹೇಳಕೋತ ಇದ್ದಾನ, ಈ ಸಾರೆ ಸುರ್ಯಾಂದು 'ಫೈನಲ್ ಇಯರ್' ಅಂತ. ನಮ್ಮ ಬೆಳಗಾಂವೀ ಸಾಹೇಬರಿಗೆ ಖರೇನs ಅನಿಸೇದ ಇದು. ಈಗs ಹಗ್ಗಾ ಒಕ್ಕೊಂಡು ಕೂತಾರ."

"ನಿನ್ನ 'ಲವ್ಪ್ಲೀ' ಶಕೂಂದು ಎಫ್.ವಾಯ್. ಆತಲಾ ದಾದಲ್ಯಾ. ಊರಿಗೆ ಹೋಗೂ ಮುಂದ, ಬೆಳಗಾಂವ್ಯಾಗ ಮುಕ್ಕಾಂ ಹಾಕೇ ಹೋಗಾಂವ ಇರಬೇಕಲಾ?"

"ಇಲ್ಲ ಮಾರಾಯಳ್ಸ. ಒಮ್ಮೆ ತೋಬಾ ಹೈರಾಣಾದದ್ದು ರಗsಡ ಆಗೇದ. ಇನ್ ಅಂಥಾ ಉಸಾಬರೀಗೆ ಹೋಗ್ಬಾಂಗಿಲ್ಲಾ. ಪತ್ರಾ-ಗಿತ್ರಾ ಬರದು ಶಕೂನ್ನ ಹಾದಿಗೆ ತಂದೀನಿ. ಈಗ ಆ ಬಾಬತ್ತಿನೊಳಗ ಅಕೀ ಭಾಳ ಪೋಕ್ತ ಆಧಾಂಗ ಕಾಣಸ್ತಾಳ. ಹುಚ್ಚುಚ್ಚಾರ ಏನರs ಬರೆಯೂದಿಲ್ಲಾ. ನಾಳೆ ನೀನು – ಶಕೂ.

‘ಜಾವ್ಹೂ ಜಾವ್ಹೂ’ ಆಗಾವ್ರು. ಮನೀ ಹಿರೇ ಸೊಸೀ ಅನೂ ಅಧಿಕಾರ ತಮಗ. ಅಷ್ಟ ಸಂಬಾಳಿಸಿಗೊಂಡ ಹೋಗರಿ ಆತು.”

“ಆದಾಗ ನೋಡೂಣಂತ ದಾದಲ್ಯಾ. ಅದಕೇನು ಅಂಥಾ ಅವಸರಿಲ್ಲಾ. ದಾದಲ್ಯಾ, ನಿನಗೊಂದು ಸುದ್ದೀ ಹೇಳೂದದ. ತಿರಗ್ಯಾಡಲಿಕ್ಕೆ ಹೋಗೂಣು ನಡೀ, ಹಾದ್ಯಾಗs ಹೇಳತೀನಿ.”

ಇಬ್ಬರೂ ನಮ್ಮ ಠರಾವಿಕ ಕಾಲೇಜ್-ರೋಡಿನ ದಾರಿ ಹಿಡಿದೆವು. ಗಜಾನನ ಮಿಲ್ಸ ದಾಟಿದ ಮೇಲೆ ರಹದಾರಿ ಅಷ್ಟಾಗಿ ಇರಲಿಲ್ಲ. ವಸೂ —

“ದಾದಲ್ಯಾ, ಜಮಖಂಡೀ ಪತ್ರ ಬಂದದ. ವಸೂನ ದಶಿಂದ ಫೈನಲ್ ಏನರs ತಿಳಸರಿ, ನಮಗ ಹೊರಗಿನ ಕನ್ಯಾ ಬರಲಿಕ್ಕೆ ಹತ್ತ್ಯಾವ. ನೀವೂ ಬೆಳದ ಹುಡಗಿನ್ನ ಮನ್ಯಾಗ ಇಟಗೊಂಡು ಕೂಡೂದು ಛಂದ ಕಾಣಸೂದಿಲ್ಲಾ ಅಂತs.”

“ಶಂಕರಕಾಕಾ ಏನಂದರು?”

“ಸದ್ಯಕ್ಕ ನಮಗ ಕಾರ್ಯ ಇಲ್ಲಾ ಅಂತs ಬರೀತೀನ್ಯಂದರು. ಕಾಕೂ ಮಾತ್ರ, ಅರ್ಧಾ ವಯಸ್ಸಾದ ಮ್ಯಾಲ ವಸೂನ ಲಗ್ನಾ ಮಾಡಾವ್ರೇನು? ಪಂತಮಾವಾಗ ಕೇಳರಿ? ಕಲಿಯೂವಾಗs ಎಷ್ಟ ಮಂದೀ ಲಗ್ನ ಆಗಿಲ್ಲಾ. ವಿಶ್ಯಾಂದು ಹಾಂಗ ಜಮಾಸ್ತಿದ್ದರ ಹೇಳು ಅನ್ನರಿ. ಇಲ್ಲದಿದ್ದರ ಇನಾ ಎರಡು ಮೂರು ವರುಷ ತಡದ ನಿಂದರಬೇಕು ನಾವು. ಮುಂದ, ವಿಶ್ಯಾ ಹೂಂ ಅಂದಾ ಅಂದರ ಠೀಕಾ. ಇಲ್ಲಾ ಅಂದರ ವಸೂ ಮದಿವಿ ಕಾಣದ ಕೂಡಬೇಕಾದೀತು ಅಂದರು.”

“ನಿನ್ನ ವಿಚಾರೇನು ವಸೂ?”

“ವಿಶ್ಯಾನ ಜೀವದ ಗೆಳ್ಯಾ ಅಂತೀ. ಈ ವಿಷಯದಾಗ ನನ್ನ ವಿಚಾರೇನಂತ ಕೇಳತೀಯಲಾ ದಾದಲ್ಯಾ? ನನಗ ಇರೂದು ಒಂದs ವಿಚಾರಾ. ಅದs ಫರ್ಸ್ಟ್, ಅದs ಫೈನಲ್!”

“ಇದು ಒಂದ ಬಾಜೂದ್ದಾತು. ವಿಶ್ಯಾನ ವಿಚಾರ ತಿಳೀಬೇಕಾದದ್ದೂ ಅಗತ್ಯ ಅದs. ಈಗ ಮಹತ್ವ ಇರೂದು ಅದಕ್ಕ.”

“ದಾದಲ್ಯಾ, ಇದರ ಸಂಬಂಧೀ ನಂದೂ-ವಿಶ್ಯಾಂದೂ ತಿಂಗಳಾತು ‘ಕರೆಸ್ಪಾಂಡನ್ಸ್’ ನಡದು. ಇಂದ ವಿಶ್ಯಾನಿಂದ ಮತ್ತ ಪತ್ರ ಬಂದ್ವದ...”

ವಿಶ್ವಾಸ ಪತ್ರ ಬರೆದು, ಸೋನಕ್ಕ ಅಪವಾದವನ್ನು ಹೊತ್ತುಕೊಂಡು ಧುಳೆಯಿಂದ ಬಂದಂದಿನಿಂದ ಇಲ್ಲಿಯ ವರೆಗಿನ ಸಾದ್ಯಂತ ಹಕೀಕತ್ತನ್ನು ವಿವರಿಸಿದ.

ಇದ್ದ ಸಂಗತಿ, ಪಾರ್ವತೀಕಾಕೂ-ಶಂಕರಕಾಕಾರಿಗೆ ತಿಳಿಯದೆ, ಅವರು ಈ ಬಗ್ಗೆ 'ಕನ್‌ವ್ಹಿನ್ಸ್' ಆಗದೆ, ಖಚಿತ ನಿರ್ಣಯ ತೆಗೆದುಕೊಳ್ಳದೆ, ತಾಂವೇ ಒಂದು ನಿಶ್ಚಯಕ್ಕೆ ಬರುವದು ಅಯೋಗ್ಯ. ಅದರಿಂದ ಅವರ ಜೀವ ವಿಲಿವಿಲಿಯಾಗ ಬಾರದು. ವಸೂ ಮನಸ್ಸಿನಲ್ಲಿ ತನ್ನ ಬಗ್ಗೆ ಅನ್ಯಥಾ ಭಾವನೆ ತಂದುಕೊಂಡಿರ ಬಾರದು. ಶ್ಯಾಮರಾಯನ ಅಪವಾದದಲ್ಲಿ ತಿಲಮಾತ್ರ ಹುರುಳಿಲ್ಲವೆಂದು, ತನಗೆ ಖಾತ್ರೀಯಾಗಿರುವಂತೆ ಅವರಿಗೂ ಆಗುವದು, ಇಬ್ಬರ ಕಲ್ಯಾಣದ ದೃಷ್ಟಿ ಯಿಂದಲೂ ಕ್ಷೇಮ. ವಸೂ ತನ್ನನ್ನು ನಂಬಿದ್ದರೆ, ನೆಚ್ಚಿದ್ದರೆ ಅವನ ಈ ಮಾತನ್ನೂ ಅವಳು ನಂಬಿ ನೆಚ್ಚಬೇಕು.

ಅವನ ಮಾತನ್ನು ವಸೂ ನಂಬಿದ್ದಳು. ಈ ವಿಷಯದಲ್ಲಿ ತಾನು ಮುಖ್ಯ ಘಟಕವಾಗಿರುವಾಗ, ಪಾರ್ವತೀಕಾಕೂ-ಶಂಕರಕಾಕಾ ಗೌಣರು; ಅವರು ನಂಬು ವದು ಬಿಡುವದು ತನಗೆ ಬೇಕಿಲ್ಲ; ತಾನು ಎಂದೋ ವಿಶ್ವಾನ ವಸ್ತುವಾಗಿದ್ದೇನೆ. ಎಂದಿಗೂ ಅವನ ವಸ್ತುವಾಗಿಯೇ ಉಳಿಯತಕ್ಕವಳು. ಅದು ಧ್ರುವಸತ್ಯವೆಂದು ವಸೂ ವಿಶ್ವಾನಿಗೆ ಉತ್ತರಿಸಿದ ವಿಷಯವನ್ನು ತಿಳಿಸಿದಳು. ಎಲ್ಲವನ್ನೂ ನಿಧಾನ ವಾಗಿ ಕೇಳಿಕೊಂಡು ನಾನು —

"ವಸೂ, ನಿರ್ಧಾರದ ಬಾಬತೀ ಒಳಗ ವಿಶ್ವಾ ಸೇರ ಆದರ, ನೀ ಸವ್ವಾಸೇರು ಅನೂದು ಉಘ್ಡಡ ಅದ. ಅದಕೇ ನಿಮ್ಮ ಗಟ್ಟೀ ಜಮಾಸೇದ. ತನಗ ಬಂದ ಅಪವಾದದ ಬಾತಮೀ ನಿನಗ ತಿಳದರ ನೀ ಅದನ್ನ ಅಷ್ಟ 'ಲೈಟ್ಲೀ' ಆಗಿ ತಗೊಂಡೀ ಅನೂ ಭರೋಸಾ ನಮಗ ಇದ್ದಿದ್ದಿಲ್ಲಾ. ಇದು ನಿನಗ ತಿಳೀದs, ಇಬ್ಬರ ನಡುವಿನ ಒಂದು ತೆಳ್ಳಗಿನ ಪರೀ ಹರೀದ, ತನಗ ನಿಶ್ಚಿಂತಿ ಇಲ್ಲಾ ಅಂತs ವಿಶ್ವಾ ಕುದೀತಿದ್ದಾ. ನಿನಗ ಇದನ್ನ ತಿಳಸೂದರ ದಶಿಂದ ಧಡಪಡಸ್ತಿದ್ದಾ. ಈಗ ಅದು ನಿನಗ ತಿಳೀತು. ಇಬ್ಬರಿಗೂ ಅದರಿಂದ ನಿಶ್ಚಿಂತೀ ಬಂತು. ಅದೇನು ಸಣ್ಣ ವಿಷಯ ಅಲ್ಲಾ. ವಸೂ, ನಾ, ಅಂವಗ ಜಮಖಂಡೀ ಹುಡಗೂರ ದಶಿಂದ ಹೇಳಿದಾಗ, ವಿಶ್ವಾ ಭಾಳ ಸಮಾಧಾನ ಹಚಿಗೊಂಡು ಹೇಳಿದ್ದಾ: ವಸೂ ಹೂವಿ ನಂಥಾ ಜೀವನಾ. ನನ್ನ ಉಸಲ ಝಳಾನೂ ಆಕೀಗೆ ಬಡಿಯೂದು ಬ್ಯಾಡಾ. ಆ ಹೂವ ಅರಳಲಿ. ಅದರ ಸುವಾಸ ಗಮಗಮಿಸಲಿ. ಆಕೀ ಎಲ್ಲ್ಯರ್s ಸುಖದಿಂದ ಸಂಸಾರಮಾಡಲಿ. ಆಕೀ ಮಂಗಳದಾಗs ನನಗ ಅನಂತ ಶಾಂತೀ ಅದs; ಸಮಾ ಧಾನ ಅದs. ಆ ಹುಡುಗೂರು ನಕ್ಷತ್ರ ಆಗಿದ್ದರ, ಚಂದ್ರಾಮ ಆಗಿದ್ದರ, ನನ್ನ

ವಸೂ ರೋಹಿಣಿ ಆಗಲಿ. ಅಕಿ ಅಲ್ಲೆ ಸುಖೀ ಆದರ ನನ್ನಷ್ಟ ಅಭಿಮಾನಾ ಬ್ಯಾರೇ ಯಾರಿಗೂ ಆಗೂದಿಲ್ಲಾ ಅಂದಿದ್ದಾ.

ವಸೂ, ವಿಶ್ಯಾನ ಮಾತು ಹೃದಯದಿಂದ ಬಂದದ್ದು. ಅಂವಾ ತಪ್ಪಿ ಅಸತ್ಯಮಾತಾಡೂದಿಲ್ಲಾ. ತನ್ನ ಜೀವನಾ ಮುಳ್ಳಿನ ಹಾಸಿಗಿ, ಬೆಂಕೀ ಕಾವಲಿ ಅನ್ನೂದು ಅಂವಗ ಠಾಂವಿಕ್ಯದ. ಅದರ ನೋವಾ, ಅದರ ಝಳಾ ತನಗs ಬಡೀಲಿ. ತಾನs ಹುರಪಳಸಲೀ ಅನೂ ನಿಃಸ್ವಾರ್ಥ ಅವನಲ್ಲೆ ಅದs. ಇಂಥಾ ವಜ್ರ ಹೃದಯಾ, ಅಸಾಮಾನ್ಯ ಕಾಠಿಣ್ಯ ಅಂವಗ ಬರಬೇಕಾದರ ಆ ಜೀವಾ ಎಷ್ಟು ಸಂಕಟಾ, ಎಂಥಾ ಕುದೀ ಅನುಭೋಗಸ್ತಿರಬೇಕು ನೋಡು ವಸೂ, ಸೋನಕ್ಕಾ ಈಗ ವಿರಾಗೀ ಜೀವನ ನಡಸ್ಯಾರ. ಎರಡ ಬಿಳೀ ಭಾಂಡು ಬಿಟ್ಟರ. ಮತ್ತೊಂದು ಅರಿವೀ ತೊಡೂದಿಲ್ಲಾ. ಅವರ ವಸ್ತ್ರಾ-ಒಡವೀ ತಿಜೋರ್‍ಯಾಗ ಬಿದ್ದು ಜಂಗ ತಿನ್ನಲಿಕ್ಕೆ ಹತ್ತ್ಯಾವ. ಕಾಜಿನ್ನು ಎರಡ ಬಳೀ, ಒಂದ ಕರಮಣಿ ಇವನ್ನ ಬಿಟ್ಟರ, ಒಂದು ಗುಂಜಿತೂಕ ಭಂಗಾರೇನು ಅವರ ಮೈಮ್ಯಾಲ ಸಿಗಲಿಕ್ಕಿಲ್ಲಾ. ವಿಶ್ಯಾ ಇದನ್ನ ನೋಡಿದಾ. ತಾನೂ ಅದs ದಾರೀನs ಹಿಡದಾ. ಅಂವನ ಅರಿವಿ-ಅಂಚಡಿ ನೋಡೀದಿಲ್ಲೋ? 'ಎಫ್.ವಾಯ್'ಕ ಹೋದಾಗ ಹೊಲಿಸಿದ ಅರಿವಿ ಇನ್ನಾ ತೊಡತಾನ. ಹೋದ ವರ್ಷ ನಾ ಪುಣೇಕ್ಕ ಹೋದಾಗ, ಕಾಕಾ ಕಣ್ಣಾಗ ನೀರ ತಂದು ಹೇಳಿದರು: ದಾದಲ್ಯಾ, ದೇವರು ವಿಶ್ಯಾಗ ಯಾತರಾಗ ಏನೂ ಕಡಿಮಿ ಮಾಡಿಲ್ಲಾ, ಆದರ ಅನಭೋಗಸೂ ಅವಕಾಶ ಅಷ್ಟs ಕೊಟ್ಟಿಲ್ಲಂತ. ಬಲಗೈಲೆ ಕೊಟ್ಟಾ, ಎಡಗೈಲೆ ಕಸಗೊಂಡಾ ಅಂತ ಗಳಾಗಳಾ ಕಣ್ಣೀರ ತಂದರು. ದಸ್ತಗೀರ್‍ಯಾ ಮೊನ್ನೆ ಮುಂಬೈಗೆ ಹೋದಾಗ, ವಿಶ್ಯಾನ್ನ ಹಿಡದು, ವೂಲನ್ ಅರಿವೀ ಖರೀದಿ ಮಾಡಿ, ಸೂಟಿನ ಅಳತೀ ಕೊಡಲಿಕ್ಕೆ ನಡೀ ಅಂದರ, ವಿಶ್ಯಾ ಅಂದನಂತ: ದಸ್ತಗೀರ್‍ಯಾ, ನಿನ್ನ ಅಮ್ಮಾಜಾನ್‌ಗ ಕೇಳಿ ಬಾ. ತಾಯಿ ಹೀಂಗ ಇರಾಗ, ನನ್ನ ದಶಿಂದ ವನವಾಸ ಅನಭೋಗಸ್ತಿರುವಾಗ, ನಾ ರಾಜಾನ ಐಟಲೇ ಮೆರೆದರ ಹ್ಯಾಂಗ ಅನಿಸೀತು ಅಂತs. ದಸ್ತಗೀರ್‍ಯಾ ತಂದ ಅರಿವೀ ಸುರೇಶಗ ಕಳಿಸಿದನಂತ. ಖಾದೀ ಧಾಬಳೀಹಾಂಗ ಆಗತದ. ಸಾಂಗ್ಲ್ಯಾಗ ಅದು ನಡೀತು. ಮುಂಬೈ ಯಾಗ ಇದ್ದೀ ಈಗ. ಅದನ್ನ ಒಂದಿಷ್ಟ ದಿನಾ ಬಿಡೂ ಅಂತ ದಸ್ತಗೀರ್‍ಯಾ ಗಂಟ ಬಿದ್ದರ, ವಿಶ್ಯಾ ಅವನ ಮಾತು ನಗೀಮ್ಯಾಲ ಹಾಕಿ, ಗಾಂಧೀ ಬಿಟ್ಟರೂ ಬಿಟ್ಟಾರು, ದಸ್ತಗೀರ್‍ಯಾ, ನಿನ್ನ ದೋಸ್ತೇನು ಅದನ್ನ ಬಿಡ್ಯಾಂಗಿಲ್ಲಾ, ಸಾಂಗ್ಲೀ ಸಾಲ್ಯಾಗ

ಪಣಾ ಮಾಡಿದ್ದು ನಿನಗ ನೆನಪ ಇರಬೇಕು. ನಾನು, ಗೋಂದ್ಯಾ ಇಬ್ಬರs ಅದನ್ನ ಇಂದಿನ ತನಕಾ ಪಾಲಿಸಿಗೋತ ಬಂದೆವು. ಅದು ಕಡಿತನಕಾ ನಡಿಯೂದs ದಸ್ತುಗೀರ್‍ಯಾ, ಅಂತ ಹೇಳಿದನಂತ. ವಿಶ್ಯಾನ ನಿರ್ಧಾರಂದರ ಈ ರೀತೀದು. ವಿಶ್ಯಾನ ಘಡಣ ಯಾರಿಗೂ ಬರೂದಿಲ್ಲಾ ಅನ್ನೂದು ಇದರ ದಶಿಂದ.

ಕಾಕಾ-ಕಾಕೂನ ನಿರ್ಣಯಧಾಂಗ ನಡಿಯೂದರಾಗ ನಿನ್ನ ಕಲ್ಯಾಣ ಅದ ಅಂತ ಅಂವಾ ಬರದಿದ್ದರಾಗ ಬರೇ ಅವನ ತ್ಯಾಗನs ಇಲ್ಲಾ, ನಿಂದು, ನಿನ್ನ ತಂದಿ-ತಾಯೀದು ಕ್ಷೇಮದ ಭಾವನಾನೂ ಅದs. ಕುಟುಂಬಕ್ಷೇಮದ ಚಿಂತನಾ ಅದs. ಅವರಿಗೆ ತಮ್ಮ ಮಗಳು, ಒಬ್ಬ ಅಪವಾದ ಹೊತ್ತ ವ್ಯಕ್ತೀ ಕೈಹಿಡಿದು ಮನೆತಾನಕ್ಕ ಬಟ್ಟಾ ತಂದಳೂ ಅಂತ ಅನಿಸಿರಬಾರದು ಅನ್ನೂ ಪೂರ್ಣ ಎಚ್ಚರದ. ಸೋನಕ್ಕಗ ಬಂದ ಅಪವಾದಾ ಸಹಜಾಸಹಜೀ ಅಳಸದೆ ಅವರು ಸುಖೀ ಆಗೂದಿಲ್ಲಾ. ಅವರು ಸುಖೀ ಆಗದಿದ್ದರ, ತಾನೂ ಸುಖೀ ಆಗೂದಿಲ್ಲಾ ಅನ್ನೂ ಸ್ಪಷ್ಟ ಕಲ್ಪನಾ ಅದs. ಅಂವಾ ಈ ವಿಷಯ ಬಯಲುಮಾಡಿದ್ದು ಯೋಗ್ಯ ಆತು. ನೀ ಅಂವಗ ಬರದ ಉತ್ತರನೂ ರಾಸ್ತ ಅದs. ನೀ ಕೊಟ್ಟ ಧೈರ್‍ಯಾದ ಮ್ಯಾಲಿಂದ ಇನ್ನ ಅಂವಾ ಸ್ಥಿರ್ಧಾಸ್ಥ ಆಗಿ ಇರತಾನ. ಆದರ ವಸೂ, ನಿನ್ನ ಜೀವನಾ ಇಲ್ಲೀ ತನಕಾ ಪ್ರಶಾಂತ ಆಗಿತ್ತು. ಇನ್ನ ಅದಕ್ಕೂ ಕುದೀ ಬಂತು. ಅಶಾಂತೀ ನಿರ್ಮಾಣ ಆದೀತು ಅಂತ ಅನಸ್ತದ."

"ದಾದಲ್ಯಾ. ವಿಶ್ಯಾ ಅಶಾಂತ ಇರಾಗ, ಅತೃಪ್ತ ಇರಾಗ, ನಾ ಹ್ಯಾಂಗ ಶಾಂತ ಇರಲಿ, ತೃಪ್ತ ಇರಲಿ? ವಿಶ್ಯಾನಿಂದ ನಾ ಘೂರ ಸರದು ನಿಂದರಲಿಲ್ಲಾ. ಅವನಿಂದ ಅಲಗ ಆಗಲಿಲ್ಲಾ ಅನೂ ಸಮಾಧಾನ ಬಂದ್ಯದ. ನನಗ, ವಿಶ್ಯಾಗ ಈಗ ಬಂದ ಸಮಾಧಾನನs ರಕ್ಷಾಬಂಧನ ಮಾಡತದ. ಯಾತರದೋ ತಯಾರಿಗೆ ಕಂಕಣ ಕಟ್ಟಸ್ತದ."

"ವಸೂ. ಅಪಾರ ತ್ಯಾಗಕ್ಕ ನಿನ್ನ ರಕ್ಷಾಬಂಧನ ಆತು. ಕಂಕಣ ಕಟ್ಟಿತು. ದೈವೀಘಟನಾ ಅಂತ ಏನೋ ಅಂತಾರ. ನಂದು ಅದರ ಮ್ಯಾಲ ಅಷ್ಟ ವಿಶ್ವಾಸ ಇಲ್ಲಾ. ಆದರ ಪರಿಸ್ಥಿತಿ ಚಮತ್ಕಾರ ಆಗಿ. ಕಾಗಿ ಕೂಡೂವಕ, ಟೊಂಗಿ ಮುರಿಯೂದಕ, ನಾವ್ ಹ್ಯಾಂಗ ತಳಕಹಾಕತೇವು. ಹಾಂಗೇನರs ಆದರ, ಶ್ಯಾಮರಾಯರು-ಸೋನಕ್ಕಾ ಕೂಡ್ಯಾರು. ವಿಶ್ಯಾಂದು – ನಿಂದು ಹಾದಿ ಸುಗಮ ಆದೀತು. ಇಲ್ಲದಿದ್ದರೂ, ನಿನ್ನ ರಕ್ಷಾಬಂಧನದಿಂದ ನಿನಗ ಕೀರ್ತಿ ಬಂದೀತು.

ಸಂಕಟದಾಗೂ ಸುಖಾ ಇರತದ. ಹಾಂಗs ತ್ಯಾಗದಾಗೂ ಸಮಾಧಾನ ಇರತದ ಅನ್ನೂದರ ಪ್ರತ್ಯಕ್ಷ ಅನುಭವ ಬಂದೀತು. ಊರ್ಮಿಳಾನ ಪ್ರತೀಕ್ಷಾದಾಗಿನ ಸುಖಾ-ಸಮಾಧಾನಾ ಆಕೀಗೇ ಗೊತ್ತು. ವಸೂ, ದಾದಲ್ಯಾ ನಿನಗ ಬೆನ್ನಿಗೆ ಬಿದ್ದ ಅಣ್ಣನ ಸಮಾನಾ. ಅವನ ಹರಕಿ ಅದs ನಿನಗ. ನನ್ನ ವಸೂ-ವಿಶ್ಯಾನ ಜೀವನಾ, ಊರ್ಮಿಳಾ-ಲಕ್ಷ್ಮಣನ ಜೀವನಧಾಂಗ ಆಗಲಿ ಅನೂ ಆಶೀರ್ವಾದ ಅದs ನಿಮಗ."

"ದಾದಲ್ಯಾ ನಿನ್ನ ಹರಕಿ ನನಗ ರಕ್ಷಾಮಣೀ ಆತು. ಸಮಾಧಾನ ಆತು ದಾದಲ್ಯಾ, ನನಗ ಭಾರೀ ಸಮಾಧಾನ ಆತು."

ವಿಶ್ವಾಸನ ಶಿಕ್ಷಣ ಇನ್ನೂ ಮುಗಿದಿರಲಿಲ್ಲ. ಬರೇ ಎಂ.ಬಿ.,ಬಿ.ಎಸ್. ಮುಗಿಯು ಲಿಕ್ಕೇ ಇನ್ನೂ ೨ – ೨॥ ವರುಷದ ಅವಧಿ ಇತ್ತು. ಅವನಿಗೆ ಮದುವೆ, ಸಂಸಾರದ ಬಗ್ಗೆ ಈಗಾಗಲೇ ವಿಚಾರಮಾಡುವ ಅಗತ್ಯವೂ ಇರಲಿಲ್ಲ. ಅದರ ಅಗತ್ಯ ಕಾಕಾ-ಸೋನಕ್ಕ-ಪಂತಮಾಮಾ-ಬನೂಮಾಮೀ ಅವರಿಗೂ ಇರಲಿಲ್ಲ. ಒಂದು ರೀತಿಯಲ್ಲಿ ವಸೂ ಕೂಡ ಅವಸರ ಮಾಡಿಕೊಂಡಿರಲಿಲ್ಲ. ವಿಶ್ವಾಸನ ಕೂಡ ಆಕೆಯ ಜೀವನ ಸುರುಳುರುಳಿಯಾಗಿ ಹೆಣೆದುಕೊಂಡಿತ್ತು. ನಾಕು ವರುಷ ತಡೆದು ನಿಂತರೆ, ವಿಶ್ವಾಸ-ವಸೂ, 'ಧರ್ಮೇಚ, ಕಾಮೇಚ, ಅರ್ಥೇಚ' ಹೊಂದ ಗೂಡುವದರಲ್ಲಿ ಸಂದೇಹವೇ ಇರಲಿಲ್ಲ. ಹೊಂದಿಕೊಳ್ಳುವದೂ ಸಹಜವಿತ್ತು. ಅವಳಿಗೆ ನಾಕು ವರುಷದ ಕಾಲಾವಧಿಯ ಗಣನೆ ಇರಲಿಲ್ಲ. ಅಲ್ಲದೆ ಈ ವರೆಗೆ, ವಿಶ್ವಾಸನ ಮನಸ್ಸಿನಲ್ಲಿಯ, ಜೀವನದಲ್ಲಿಯ ಕಿಚ್ಚಿನ ಸುಡಿತದ ಕಲ್ಪನೆಯೂ ಇರ ಲಿಲ್ಲ. ಸೋನಕ್ಕ ಸಾಂಗಲಿ ಬಿಟ್ಟು ಹುಡುಗರನ್ನ ಕಟ್ಟಿಕೊಂಡು, ಕಣ್ಣುಮರೆ ಇದ್ದಂತೆ ಪುಣೆಯಲ್ಲಿ ಇದ್ದುಬಿಟ್ಟಿದ್ದರು. ವಿಶ್ವಾಸನ, ಉಳಿದ ಹುಡುಗರ ಶಿಕ್ಷಣ ಸುಗಮ ವಾಗಿ ಸಾಗಿತ್ತು. ಯಾರ, ಯಾವ ಅಡೆತಡೆಯೂ ಅದಕ್ಕೆ ಬಂದಿರಲಿಲ್ಲ. ಸೂಟಿಗೆ ಒಮ್ಮೆ ವಿಶ್ವಾಸ, ಹುಡುಗರು ಸಾಂಗಲಿಗೆ ಬರುತ್ತಿದ್ದರು. ಬೇಸರಿಕೆ ಬಂದಾಗ, ಸೋನಾ ಹುಡುಗರನ್ನು ನೋಡಬೇಕೆಂಬ ಬಯಕೆ ತೀವ್ರಸಿದಾಗ, ಪಂತಮಾಮಾ-ಬನೂಮಾಮೀ ಪುಣೆಗೆ ಹೋಗಿಬರುತ್ತಿದ್ದರು. ಹುಡುಗರ ದೇಖರಖಿ, ಕಾಕಾ ಅವರನ್ನು ಸಂಬಾಳಿಸುವ ಹೊಣೆ, ಸೋನಕ್ಕನ ಮೇಲಿದ್ದ ಕಾರಣ ಅವರು ಸಾಂಗಲಿಗೆ ಬರುವದು ಶಕ್ಯವಿರಲಿಲ್ಲ. ಇದೆಲ್ಲ ಸಹಜವಾಗಿತ್ತು. ಯಾರಿಗೂ ಸಂಶಯ ಬರುವಂತಹದಿರಲಿಲ್ಲ.

ಶಂಕರಕಾಕಾ-ಪಾರ್ವತೀಕಾಕೂ ಅವರಿಗೆ ಗೊತ್ತಿದ್ದ ವಿಷಯವೆಂದರೆ – ನಾನು ನಂಬಿದಂತೆ – ಶ್ಯಾಮರಾಯ ರೊಕ್ಕದ ಸಲುವಾಗಿ ಸೋನಕ್ಕನನ್ನು ಬಿಟ್ಟರೆಂಬುದು. ರೊಕ್ಕದ ವ್ಯವಹಾರ ಕಿಚ್ಚು ಕದಡಿಸಿ, ಕಿಡಿ ಹಾರಿಸಿ, ಎಲ್ಲರ ಮನಸ್ಸನ್ನೂ ಮುರಿದಿತ್ತು. ಶಂಕರಕಾಕಾ ಮಧ್ಯಸ್ಥಿಕೆ ವಹಿಸಿ, ಆ ವ್ಯವಹಾರವನ್ನು ಮುಗಿಸಿದ್ದರು. ಈ ವ್ಯವಹಾರ ಬಗೆಹರಿಯುವಾಗ ಅವರೂ ಎಂಟಾನೆಂಟು ದಿನ ದಿನಬೆಳಗು, ರಾವಜೀಕಾಕಾ-ಪಂತಮಾಮಾ ಅವರ ಕೂಡ ಇದ್ದರು. ಗುಪ್ತ ಮಾತುಕತೆಯಲ್ಲಿ, ಕಾಗದಪತ್ರ ಚಾಳಿಸುವದರಲ್ಲಿ ಅಧ್ವರ್ಯುವಾಗಿದ್ದರು...

ಕದಾಚಿತ್ —

ಯಾರಿಗೆ ಗೊತ್ತು? ಏಕಜೀವ ಭಿನ್ನದೇಹಿಯಂತಿದ್ದ ಪಂತಮಾಮಾ ಅವರು, ಸೋನಕ್ಕನ ವಿಷಯವನ್ನು ತಿಳಿಸಿರಬೇಕು. ಹಾಸು-ಹೊಕ್ಕಾದ ಆ ಎರಡು ಜೀವನಗಳಲ್ಲಿ ಅಂತಃಪಡದೆ ಇರಲಿಲ್ಲ. ಪಂತಮಾಮಾ ಅವರಿಗಿಂತ, ರಾವಜೀಕಾಕಾ ಹೆಚ್ಚಿನ ಧೋರಣೆಯ ಜಾತಿ; ಮುತ್ಸದ್ದಿ. ಅವರಿಗೆ ವಸೂ-ವಿಶ್ವಾಸರ ಜೀವನ ಹೆಣೆದ ರೀತಿ – ಅವರ ಭವಿಷ್ಯಜೀವನದಲ್ಲಿನ ಮಂಗಳದ ಪ್ರಚೀತಿಯ ಅರಿವಿದ್ದು, ಅವರೇ ಖುದ್ದಾಗಿ ಇದನ್ನು ಶಂಕರಕಾಕಾ ಅವರಿಗೆ ವಿಶದಪಡಿಸಿರಬಹುದಾಗಿತ್ತು. ಕಾಕಾವರ ಜೀವನದಲ್ಲಿ ಮುಚ್ಚುಮರೆ ಇಲ್ಲ. ಕದಲು-ಬದಲು ಇಲ್ಲ.

ತಮಗೆ ಸದ್ಯ ಕಾರ್ಯವಿಲ್ಲವೆಂದು ಜಮಖಂಡಿಯ ಬೀಗರಿಗೆ ಅವರು ತಿಳಿಸಿರಬೇಕಾಗಿದ್ದರೆ – ಅವರು, ವಸೂ-ವಿಶ್ವಾಸನ ಕಲ್ಯಾಣದ ಬಗ್ಗೆ ನಿಶ್ಚಿಂತರಾಗಿರಬೇಕು.

ಮುಪ್ಪು ಒತ್ತಿ ಬರುವ ಹೊತ್ತಿನಲ್ಲಿ, ಸದ್ಗತಿಯ ಆಶೆಯಿಂದ ಪಂತಮಾಮಾ ದತ್ತಕಮಾಡಿಕೊಂಡಿದ್ದರು. ಕರುಳಿನ ಕುಡಿಯನ್ನು ಕಲಮುಮಾಡಿಕೊಂಡಿದ್ದರು. ಇಂದು ಆ ಕರುಳ-ಕುಡಿ ಎರಡೂ ಬಾಡತೊಡಗಿದ್ದವು. ಪಂತಮಾಮಾ ಮಗಳಿಗಾಗಿ ಪರಿತಪಿಸುತ್ತಿದ್ದರು. ಬನೂಮಾಮೀ ನವೆಯುತ್ತಿದ್ದರು. ಆದರೆ ಈ ನವೆತ ಅನ್ಯರಿಗೆ ವಿದಿತವಾಗುವಂತಿರಲಿಲ್ಲ.

ರಾವಜೀಕಾಕಾ! ರಾವಜೀಕಾಕಾ, ಈ ಶಲ್ಯದ ನಿಶಿತ ಇರಿತವನ್ನು ನೇರವಾಗಿ ಎದೆಯೊಡ್ಡಿ ಆಘಾತವನ್ನು ಸಹಿಸಿಕೊಂಡಿದ್ದರು. ಬಡ್ಡಿ-ಬಾಚಿ, ಹೊಲದ ಉತ್ಪನ್ನ ಕೂಡಿ ವರ್ಷಂಪ್ರತಿ ಹತ್ತಿಪ್ಪತ್ತು ಸಾವಿರದ ರೋಖು ಹಣ ಬರುವ, ಮನೆಯಲ್ಲಿ ಮಣಗಟ್ಟಲೆ ಬಂಗಾರ ಬಿದ್ದ, ಕುಬೇರ-ವೈಭವದ ಅಗರ್ಭಶ್ರೀಮಂತ ಧಣಿಗೆ,

ಎಂಥಾ ಸಂಕಟ, ಎಂಥಾ ತಳಮಳ ಸಹಿಸಿ. ಈ ಆಘಾತವನ್ನು ಸಹಿಸಬೇಕಾಯಿತು!

ವಿಶ್ವಾಸನ ಮುಂಜಿವೆಯನ್ನು ಪೇಶ್ವಾಯೀ ದರಬಾರು ಝುಕ್ಕಿಸುವ ಥಾಟಿ ಸಲ್ಲಿ ಜರುಗಿಸಿ. ತಮ್ಮ ಮೊಮ್ಮಗನ ವೈಭವವನ್ನು, ಮಗನ ಅಧಿಕಾರವನ್ನು ರಾಜ ರೋಷವಾಗಿ ಸಾರಿದ ಅಭಿಮಾನ-ಧಣಿಗೆ, ಸುರೇಶ-ಸತೀಶರ ಮುಂಜಿವೆಯನ್ನು ಮಂತ್ರಾಲಯಕ್ಕೆ ಹೋಗಿ ಗಪ್-ಚಿಪ್ ಮಾಡಿಕೊಂಡು ಬರುವ ಪ್ರಸಂಗ ಬಂದಿತು. ಪುಣ್ಯಾಹವಾಚನಕ್ಕೆ ಬೇಕೆಂದು, ಪಂತಮಾಮಾ-ಬಸೂಮಾಮೀ ಹೋಗಿದ್ದರು. ವಿಶ್ವಾಸನ ವ್ರತಬಂಧದಲ್ಲಿ, ರಾಚಪ್ಪ-ಗೌಡರು-ಗೋವಿಂದಭಟ್ಟ, ನಾಕೆಂಟು ದಿನ ಕಣ್ಣಿಗೆ ಕಣ್ಣು ಹಚ್ಚದೆ ದುಡಿದಿದ್ದರು. ಸರಿ. ಕಾಕಾನ ಕಾಗದ ಬಂದಿತು. ಸೋನಕ್ಕನ ಜೀವ ವಿಲಿವಿಲಿಯಾಗಬಾರದು, ತನ್ನ ಮಕ್ಕಳ ಮುಂಜಿವೆಯಲ್ಲಿ ತಾನು ಪುಣ್ಯಾಹ ವಾಚನಕ್ಕೆ ಕೂಡಲಿಲ್ಲ – ಕುಂಕುಮ ಮಂಗಳಸೂತ್ರವಿದ್ದೂ ವಿರಾಗಿಯಂತೆ, ದೂರ ನಿಂತು ಅದನ್ನು ಕಣ್ಣಾರೆ ನೋಡಬೇಕಾಯಿತು. ಮಕ್ಕಳಿಗೆ ವಾತ್ಸಲ್ಯದಿಂದ ಮಾತ್ರ ಭೋಜನ ಹಾಕುವ ಸೌಭಾಗ್ಯ ಕೂಡ ತನಗಿಲ್ಲದಂತಾಯಿತು. ಅವರ ಕರುಳಿಗೆ ಏಕ ಕಾಲಕ್ಕೆ ಸಾವಿರ ಕೆಂಜಗ ಕಚ್ಚಿದ ಸಂಕಟವಾಯಿತು. ಕಾಕಾ ಇದನ್ನೆಲ್ಲ ವಿವರಿಸಿ, ತಮ್ಮ ದುಃಖವನ್ನು ತೋಡಿಕೊಂಡು ಮುಂಜಿವೆಗೆ ಕರೆಸದಿದ್ದ ಬಗ್ಗೆ ಎಲ್ಲರ ಕ್ಷಮೆ ಕೋರಿದ್ದರು.

"ಗೌಡರs, ಕಾಕಾ ಹಾಲಾಹಲ ಕುಡದೂ ದಕ್ಕಿಸಿಗೋತಾರ. ಶಿವಾ ಅದನ್ನ ಬರೇ ಗಂಟಲದಾಗs ಹಿಡದು ಬದಕಿದಾ. ಕಾಕಾನ ರಕ್ತದಾಗs ಇಳೀತು ವಿಷಾ. ಆದರs ಕೊಲ್ಲೂ ಸಾಮರ್ಥ್ಯ ತಾನs ಕಳಕೊಂಡಿತು. ಆಗರ್ಭಶ್ರೀಮಂತಗ, ಅಭಿಮಾನೀ-ಮೂರ್ತಿಗೆ ಅಷ್ಟs ಈ ಸಂಕಟಾ ಅವಗತ ಆಗೂದು. ನಮಗ ನಿಮಗ ಅಲ್ಲಾ."

ಕಾಕಾನ ಪತ್ರ ಬಂದ ದಿನ ಅಪನವರು ಹೇಳಿದ್ದರು....

ಈ ವಿಷಯವನ್ನು ಮತ್ತೊಮ್ಮೆ ಎತ್ತಿ ಗುಟುಕರಿಸುವ ಸಮಯ ಸಮೀಪ ವರ್ತಿಯಾಗತೊಡಗಿತ್ತು.

ವಿಶ್ವಾಸ, ಒಂದು ಎತ್ತೆ ಹಾರಿಸಿ ಇನ್ನೊಂದು ಎತ್ತೆ ಅರಗಚ್ಚಿ ಮಾಡಿ ಕೊಂಡು, ಪ್ರಾಥಮಿಕ ಶಾಲೆಯಲ್ಲಿಯ ನಾಕು ವರ್ಷಗಳ ವನವಾಸವನ್ನು ೨॥–೩ ವರುಷಗಳಲ್ಲಿ ಮುಗಿಸಿದ್ದ. ಪ್ರಾಥಮಿಕ-ಶಾಲೆಯಲ್ಲಿ ಮಾಡಿದಂತೆ ಇಂಗ್ಲೀಷ ಶಾಲೆಯಲ್ಲಿ ಅಟ್ಟಸಲಿಲ್ಲ. ಆದರೆ ಸುರೇಶ-ಸತೀಶರು, ನಮ್ಮಂತೆ, ತಮ್ಮಾಜಿಯ,

ಗದಿಗೆಯ್ಯನವರ ಗರಡಿಯಲ್ಲಿ ಧಾವತಿಪಡದೆ ನೇರವಾಗಿ 'ಕಾನ್ವೆಂಟ್'ಗೆ ಹೋಗಿ. ಪ್ರಾಥಮಿಕ ಶಿಕ್ಷಣದ ನಾಕು ವರ್ಷದ ಶಿಕ್ಷೆ ತಪ್ಪಿಸಿಕೊಂಡರು. ೧೪ನೇ ವರ್ಷವೇ ಸುರೇಶ ಮ್ಯಾಟ್ರಿಕ್ ಮುಗಿಸಿ, ಎರಡು ವರ್ಷದಲ್ಲಿ ಇಂಟರ್ ಸಾಯಿನ್ಸ ಬಗೆಹರಿಸಿ ಈಗ 'ಫೈನಲ್-ಇಯರ್ ಬೀ.ಈ.'ಗೆ ಇದ್ದ. ಬೀ.ಈ. ಆದಂತೆಯೇ ಇತ್ತು. ವಿಶ್ವಾಸನ ಕಿತ್ತೇ ತೀಡುವದರಲ್ಲಿ ಸುರೇಶ ಸಮರ್ಥನಾಗಿದ್ದ. ಇಂಟರ್ ದ್ವಿತೀಯ ವರ್ಗದಲ್ಲಿ ಬಂದರೂ, ಬಿ.ಈ. ಎರಡೂ ವರ್ಷ ಪ್ರಥಮ ಶ್ರೇಣಿಯ ಲ್ಲಿಯೇ ಪಾಸಾಗಿದ್ದ. ಸುರೇಶನ ಶಿಕ್ಷಣ ಮುಗಿಯುತ್ತಿತ್ತು. ನವಕರಿ ದಕ್ಕುತ್ತಿತ್ತು. ಆಗ ಸುರೇಶನ ಮದುವೆಯ ವಿಚಾರವನ್ನು ಮಾಡಬೇಕಾಗುತ್ತಿತ್ತು. ಕೇವಲ ಪರು ಪಾರು ತಿಂಗಳ ಅವಧಿ ಅಷ್ಟೇ.

ರಾವಜೀಕಾಕಾ ವಿಷಪಾನಕ್ಕೆ ಚಷಕವನ್ನ ಎತ್ತುವ ಎತ್ತುಗಡೆಮಾಡಬೇಕಾಗು ತ್ತಿತ್ತು. ಸುರೇಶನ ಮದುವೆಯ ಬಗ್ಗೆ ಸಾಹೇಬರು, ಶ್ಯಾಮರಾಯನ ಕೂಡ ಸಂಧಾನರತರಾದ ವಿಷಯ ಅವರಿಗೆ ಗೊತ್ತಿತ್ತು. ಅದರಲ್ಲಿ ತಾವು ಆಡಬೇಕಾದ ಪಾತ್ರದ ಖಚಿತ ಪರಿಚಯ ಅವರಿಗಿತ್ತು,

ವಸೂನ ಕೂಡ ಮಾತನಾಡಿ, ಅವಳಿಗೆ ಹರಕೆ ಹೇಳಿ, ಊರಿಗೆ ಬರುವಾಗ, ನನ್ನ ವಿಚಾರಚಕ್ರ ತಿರುತಿರುಗಿ, ಮನಸ್ಸು ಉದ್ವಿಗ್ನವಾಗಿ, ಉತಾವಿಳವಾಗಿ ಈ ಎಲ್ಲ ಮಾತಿನ ಕಟು-ಸತ್ಯವನ್ನು ಕಣ್ಣೆದುರು ಕಟ್ಟಿತು.

ರಾವಜೀಕಾಕಾ ಹಾಲಾಹಲ ಕುಡಿದಿದ್ದರು. ಇನ್ನೊಂದು ಗ್ಲಾಸು ಎತ್ತಿ ಕುಡಿಯುವ ತಯಾರಿಯಲ್ಲಿದ್ದರು.

ವಿಶ್ವಾಸ ವಸೂನ ಸಖ್ಯದ ಮೇಲೆ, ಪ್ರೀತಿಯ ಮೇಲೆ, ತರ್ಪಣ ಓಡಿದು ವಿರಾಗದ ಭಸ್ಮಭಸಿತ-ದೇಹಿಯಾಗಿ ಪರವರ ಅಂಡಲೆಯುವ ಕಲ್ಪನೆ ಮಿಂಚಿತು.

ವಸೂ ರಕ್ಷಾಬಂಧಿತಳಾಗಿ, ವಿಶ್ವಾಸನ ಪ್ರೀತಿ-ಸಖ್ಯದ ಕಂಕಣ ಕಟ್ಟಿಕೊಂಡು, ತಾನೂ ಅವನಂತೆ ವಿರಾಗಿನಿ-ಶಿವೆಯಾಗಿ, ವಿಶ್ವಾಸನ ಹಿಂಬಾಲಿಗೆ ನಡೆದ ಭಾಸ ವಾಯಿತು.

ಮನೆ, ಬಳಗ, ತಾನು, ವಾತ್ಸಲ್ಯದ ಮೂರ್ತಿಯಾದ ಕಾಕಾ, ಜೀವಸಖಿ ಯಾದ ವಸೂ, ಎಲ್ಲರೂ ಇದ್ದು, ಎಲ್ಲವೂ ಇದ್ದು, ಮಗ – ತನ್ನ ಕರುಳಿನ ಕೂಸು ವಿಶ್ಯಾ – ಅನಿಕೇತನಂತೆ ಹೊರಟಿದ್ದನ್ನು ನೋಡಿ, ಸೋನಕ್ಕ ಚಿಟ್ಟನೇ ಚೀರಿ ನೆಲಕ್ಕೆ ಕುಪ್ಪಳಿಸಿ ನಿಶ್ಚೇಷ್ಟರಾದಂತೆನಿಸಿತು. "ಸೋನಾ...ಸೋನಾ...ಸೋನಕ್ಕಾ...

ತಾಯೀ...ಹತ್ತು ಬಾಯಿಯ ಕರೆಗೂ ಓಗೊಡದ ನಾಡಿಗೆ ಸೋನಕ್ಕನ ಅಗತಿಕ ಜೀವಪಕ್ಷಿ ಹಾರಿ ಪ್ರಯಾಣಿಸಿದಂತೆನಿಸಿತು. ಪಂತರ ಗೃಹಲಕ್ಷ್ಮಿ ವಾಡೆಯ ಹೊಸ್ತಿಲನ್ನು ದಾಟಿದ, ಭಯಂಕರ-ಭಯಾನಕ ಭಾಸವಾಯಿತು.

ಮೋಟಾರ-ಸ್ಟ್ಯಾಂಡಿಗೆ ಮಗನನ್ನು ಎದುರುಗೊಳ್ಳಲಿಕ್ಕೆ ಬಂದ ಗೋವಿಂದ ಭಟ್ಟ, ಅಣ್ಣನನ್ನು ಕಾಣಲಿಕ್ಕೆ ಬಂದ ನನ್ನ ತಮ್ಮಂದಿರು, ಏಕಕಾಲಕ್ಕೆ – 'ದಾದಲ್ಯಾ' ಎಂದು ಒದರಿ ಎಚ್ಚರಿಸಿರದಿದ್ದರೆ – ದಾದಲ್ಯಾ ಜಾಗರಕ್ಕೆ ತಿರುಗತ್ತಿರಲೇ ಇಲ್ಲ.

ಈ ಎಲ್ಲ ಸಂಕಟವನ್ನು ಅನುಭವಿಸುತ್ತ ಬಂದಿದ್ದ ಕಾರಣ ನನಗೆ ಬೆಳಗಾಂವಿಯಲ್ಲಿ ಇಳಿದು ಸಾಹೇಬರನ್ನು, ರಂಗಕ್ಕನನ್ನು, ಶಕೂನನ್ನು ಕಾಣುವ ಮನಸ್ಸಾಗಲಿಲ್ಲ. ಗೋವಿಂದಭಟ್ಟ ಒತ್ತಾಯಪಡಿಸಿ ಕರೆದಿರದಿದ್ದರೆ, ನಾನು ಸಾಂಗಲಿಯಲ್ಲಿಯೇ ನಿಲ್ಲುತ್ತಿದ್ದೆ. ಇಲ್ಲ, ಕಾಕಾ ಅವರ ಕಡೆಗೆ ಪುಣೆಗಾದರೂ ಹೋಗುತ್ತಿದ್ದೆ. ಆದರೆ ವಿಧಿ ಊರಿಗೆ ಎಳೆದುತಂದಿತ್ತು.

ನನ್ನ ತಾಯಿ, ಗೋವಿಂದಭಟ್ಟ ತಿರುಪತಿಯ ಯಾತ್ರೆಗೆ ಹೋದಮೇಲೆ ಗುಡಿಯ, ವಾಡೆಯ ಪೂಜೆ ನನ್ನ ಪಾಲಿಗೆ ಬಂದಿತು. ಒಂದೆರಡು ದಿನ ವಾಡೆಗೆ, ತಪಕೀರ ಗುರುಭಟ್ಟನನ್ನೇ ಅಟ್ಟಿದೆ. ಶ್ಯಾಮರಾಯನ ಕೈಯಲ್ಲಿ ಸಿಕ್ಕರೆ, ಮತ್ತೆ ಬೆಳಗಾಂವಿಯ ಪ್ರವಾಸ, ಅವನಿಗೆ ಬಾತಮೀ ಪೂರೈಸುವ ಧಾವತಿಮಾಡುವ ಪ್ರಸಂಗ ಬಂದರೂ ಬರುತ್ತಿತ್ತು. ಅದು ತಪ್ಪಿದಷ್ಟು ದಿನ ತಪ್ಪಲೆಂದು ಹೀಗೆ ಮಾಡಿದೆ. ತಪಕೀರ ಗುರುಭಟ್ಟನಿಗೆ ವಾಡೆಯಲ್ಲಿ ಓಡಾಡಿ, ಶ್ಯಾಮರಾಯನ ಮುಂದೆ ಲುಟುಪುಟುಮಾಡುವ ಚಟ ಎಂದಿನಿಂದಲೂ ಇದ್ದೇ ಇತ್ತು. ಅವನು ಬಿನ್-ತಕರಾರಿನಿಂದ ವಾಡೆಯ ಪೂಜೆಗೆ ಹೋಗಹತ್ತಿದ.

ಗುರುಭಟ್ಟ 'ಢ' ಎಂದು ಪ್ರಸಿದ್ಧನಿದ್ದರೂ ವಯಸ್ಸಿನ ಮಾನದಿಂದ ನನಗಿಂತ ಹಿರಿಯನಾಗಿದ್ದ. ಆದರೆ ತನಗಿಂತ ಸಣ್ಣವನಾದ ದಾದಲ್ಯಾ, ಸಹಜೀಕ – ತನಗಿಂತಲೂ 'ಢ' ಇರಬೇಕೆಂದು ಅವನ ಕಾಯಾಸ.

ನನಗೆ ಗುರುವಾರ ಸಂಜೆಯ ಊಟವಿರಲಿಲ್ಲ. ಮಂಗಳಾರತಿ ಬಗೆಹರಿಸಿ, ಇನ್ನೇನು ಮನೆಗೆ ಹೊರಡಬೇಕೆಂದಿರುವಾಗ, ಗುರುಭಟ್ಟ ಒತ್ತಾಯದಿಂದ ನನ್ನನ್ನು ಗಣಪತಿಪ್ರಸಾದದ ಪಂಕ್ತಿಗೆ ಎಳೆದುಕೊಂಡು ಹೋದ. ಇಬ್ಬರದೇ ಪ್ರಸಾದ ನಿವಾಂತವಾಗಿ ನಡೆದಾಗ ಮೆಲ್ಲಗೆ __

"ದಾದಲ್ಯಾ, ಯಾಕ ಮಗನs, ವಾಡೇಕ್ಕ ಹೋಗಲಿಕ್ಕೆ ಅಂಜತೀ? ಅಲ್ಲೀ

ಪೂಜಿ ನನಗ ಹಚ್ಚೇದಿ? ಹರೇದ ಹುಡಗ ಬ್ಯಾರೇ ನೀನು. ನೀ ಹೋಗದೇ ಇರೂದೇ ಠೀಕೇಳು."
ಎಂದು ನುಡಿದು, ಕಣ್ಣುಮಿಟುಕಿಸಿ, ವಿಚಿತ್ರವಾಗಿ ನಕ್ಕ. ನನಗೆ ಅವನ ಕಣ್ಣು ಮಿಟುಕಿನ, ವಿಚಿತ್ರ ನಗೆಯ ಅರ್ಥವಾಗಲಿಲ್ಲ.

"ಗುರುಭಟ್ಟ, ನೀ ಏನಂತೀ ಅನ್ನೂದು ತಿಳೀಧಾಂಗ ಆಗೇದ. ಶ್ಯಾಮ ರಾಯನ ಸೋಬತೀ ಬಿಟ್ಟರ ಸಾಕಂತ, ವಾಡೇಕ್ಕ ನಿನ್ನ ಕಳಿಸಿದ್ದೆ. ಬ್ಯಾರೇ ಯಾವ ಉದ್ದೇಶನೂ ಇರಲಿಲ್ಲಾ."
ನಾನು ಪ್ರಾಂಜಲತನದಿಂದ ಉತ್ತರಿಸಿದೆ.

"ಶ್ಯಾಮರಾಯಾ ಈಗ ಊರಾಗಿಲ್ಲೋ ದಾದಲ್ಯಾ... ನಿನ್ನೇ ಹೋದಾ. ಇನ್ನ ಎಂಟಾನೆಂಟ ದಿನಾ ಬರೂದಿಲ್ಲಂತ ಹೇಳಿ ಹೋಗ್ಯಾನ. ಅಂವಾ ಇಲ್ಲದಾಗs ಠೀಕಾ. ಅಷ್ಟs ಮಜಾ ಇರತದ. ದಾದಲ್ಯಾ, ನೀ ಮಾತ್ರs, ಎತ್ತ ಉಚ್ಚೀ ಹೊಯ್ದ್ಹಾಂಗ, ಬರೇ ಊದ್ದಕ ಪರೀಕ್ಷಾ ಪಾಸ ಆಕ್ಕೋತ ಹೋದಿ; ಉಳಿದ ಬಾಬತ್ಯಾಗ ಖೋಕಾನs ಉಳದಿ."

"ಪಂಚತಂತ್ರದ ಕಥೀಹಾಂಗs ನಿಂದು, ಕಂತ್ರಾಟಿನ ಮಾತs ನಡೀತು ಗುರುಭಟ್ಟಾ. ಒಂದಿಷ್ಟು ಒಗಟಾ ಬಿಡಿಸಿ ಹೇಳಲಾ?"

"ಪಂಚತಂತ್ರ ಅಲ್ಲ ದಾದಲ್ಯಾ, ಪಂಚತಂತ್ರ ಅಲ್ಲಪಾ. ಅಲ್ಲೇ, ವಾಡೇದಾಗ ಮಗನs ಪಾತಾಳಯಂತ್ರನs ಅದs. ಸಟಕ್ನs ಸೂಜಿಗಲ್ಲ ಜಗ್ಗಿಧಾಂಗ ಜಗ್ಗತದ. ದಾದಲ್ಯಾ 'ಲವಂಗೀ...ಕೃದಂಗೀ...ದೃದಂಗೀ'...ಆಂs ಕೇಳಿಯೋ ಇಲ್ಲೋ ವರ್ಣನಾ? ಅಂಥಾ ಚೀಜ ಅದಪಾ ಅಂಥಾ ಚೀಜು! ಮಾಲ್ ಮಸಾಲೇದಾರ್ ಮಾಲ ಅದs."
ಆ ಚೀಜು, ಆ ಮಾಲು ತನ್ನದೇ ಎನ್ನುವ ಆವಿರ್ಭಾವದಿಂದ ಗುರುಭಟ್ಟ, 'ಲವಂಗೀ –ಕೃದಂಗೀ' ಶಬ್ದಗಳನ್ನು ಎಳೆದೆಳೆದು ರಾಗರಾಗವಾಗಿ ಹೇಳಿದ.

"ಗುರುಭಟ್ಟ, ಈ ಅರಗಚ್ಚಿ ಸುದ್ದೀ ಹೇಳಿ ಅನ್ಯಾಯ ಮಾಡಬ್ಯಾಡಾ. ನಿನ್ನ ಲವಂಗೀದಿಷ್ಟು ವಿವರ-ಬಾತಮೀ ಹೇಳು.?"
ಗೊತ್ತಿದ್ದೂ ನಾನು ಕೇಳಿದೆ.

"ದಾದಲ್ಯಾ, **ನನ್ನ** ಲವಂಗೀ ಅಲ್ಲ ಮಗನs. ಕೇಳಬಾರದ ಕೇಳಿದರ, ನಿನ್ನ ಯಜಮಾನಾ ಚಟ್ಟಾನ ಬೆಳಗ್ಯಾನು ನಮ್ಮುದು. ಶಿಸ್ತ ಫಳಾರಾಗೇದ. ಹೊರಗ

ನೋಡು, ಹ್ಯಾಂಗ ಮಸ್ತ ಬೆಳದಿಂಗಳದ. ಬ್ಯಾಸಿಗೀ ದಿನಾ ಬ್ಯಾರೇ. ನಡೀ, ಥಣ್ಣಗ ಭಾಂವೀ ಕಟ್ಟೀಮ್ಯಾಲ ಬೈಠಕ್ ಹಾಕೂಣು. ಅಷ್ಟ ಎಲೀ-ಅಡಿಕಿ ಹಾಕೋತ್ನs ಹೇಳತೀನಿ."

ಇಬ್ಬರೂ ಭಾಂವಿಯ ಕಟ್ಟೆಯ ಹಾಸುಗಲ್ಲಿನ ಮೇಲೆ ಎದುರು-ಬದುರು ಮಂಡಿಸಿದೆವು. ಗುರುಭಟ್ಟ ಚಂಚಿ ಬಿಚ್ಚಿ ನಮಗೂ ತಾಂಬೂಲ ಅರ್ಪಿಸಿದ. ಇಬ್ಬರೂ ತಂಬಾಕದ ಬಾರು ಮಾಡಿದೆವು. ಉಪರಣೆಯನ್ನು ಬಿಡಿಸಿ, ಬೆನ್ನಿಗೆ ಒಂದು ಸುತ್ತು ತಂದು, ಜೋಡಿಸಿದ ಮೊಳಕಾಲಿಗೆ ಬಿಗಿದು, ಗುರುಭಟ್ಟ ತನ್ನನ್ನು ತಾನೇ ವಿರಾಮಖುರ್ಚಿಯಲ್ಲಿ ಸುಖಾಸೀನನಾಗುವಂತೆ ಸಜ್ಜುಗೊಳಿಸಿಕೊಂಡು —

"ದಾದಲ್ಯಾ, ನೀ ಊರs ಬಿಟ್ಟಿ. ಕಲಿಯೂದಿತ್ತಂತ ಬಿಟ್ಟಿ. ಠೀಕನ್ನು. ಆದರs ಊರಾಗಿನ ಕಿಲಾಪ ಬಿಡು – ನಿಧಾನ ಸುದ್ದೀ, ಅದೂ ಖುದ್ದ ಯಜಮಾನರ ಮನೀ ಸುದ್ದೀನೂ ಠಾಂವಿಕಿರಬಾರದಂದರ ಅಗದೀ ನಾಲಾಯಖೀ ಯಪಾ! ಅಂಥಾ ಇಂಥಾ ಸುದ್ದೀ ಬಿಡು, ಅವೇನು ಹಾಸಲ ಇಲ್ಲದ್ದು. ಖರೇ ಮುದ್ದೇಕ ಬಂದು ಹೇಳೂದಂದರ ದಾದಲ್ಯಾ, ನಮ್ಮ ರಾವಜೀಕಾಕಾ ಅವರ ಕಕ್ಕಾ ಗಿರಿಜಾ ಇದ್ದಾಳಲಾ, ಈಗ ಮುದಿಕಿ ಆಗ್ಯಾಳ. ಆ ಮಾತ ಬ್ಯಾರೇ. ಅಕೀ ಇನಾ ೨೪-೨೫ ವರ್ಷದಕೀ ಇದ್ದಾಗ, ಆಹಾs, ಹೀಂಗ ಇದ್ದಲಂತs, ಕೈ ತೊಳ ಕೊಂಡು ಮುಟ್ಟಬೇಕು. ರಾವಜೀಕಾಕಾ ಕೈ ತೊಳಕೊಂಡು ಬೆನ್ನೀ ಹತ್ತಿದರು, ಆ ಮಾತ ಬ್ಯಾರೇ. ಅದೇನಪಾ, ಅದು ಗತೇತಿಹಾಸಾ. ಆದರs ಇತಿಹಾಸದ ಪುನರಾವೃತ್ತೀ ಆಗತಿರತದಂತ, ಅಪನವರು ಹೇಳತಿರತಾರ ಆಂs. ಆ ಪುನರಾವೃತ್ತೀ-ಪಿನರಾವೃತ್ತೀ ನನಗೇನ ಗೆಣಸ ಗೊತ್ತು. ಆದರ ಗಿರಿಜಾನ ಪುನರಾವತಾರ ಮಾತ್ರ, ಆಃ, ಏನ ಅಪರೂಪಧಾಂಗ ವಾಡೇದಾಗ ಆಗೇದಂದೀ. ಕಾಕಾ, ಸವ್ವಾಸೇರ ಆದರ, ಶ್ಯಾಮರಾಯಾ, ದೀಡ ಯಾಕs, ಭಕ್ಕಂ ಅಡೀಚ ಸೇರನs ಅನ್ನು. ಏನ ಮಸ್ತ ಮಾಲು ಹಿಡದ ತಂದಾನಂದೀ? ದಾದಲ್ಯಾ, ಏನ ಹೆಣ್ಣೋ, ಏನ ಹೆಣ್ಣಾ! ಕಣ್ಣ ಪಾರಣ್ಯಾಗಬೇಕು. ಗೋವಿಂದಭಟ್ಟರು ಸುಮ್ಮನs ಒದರತಾರ, ವಾಡೇ ಮೈಲಿಗಿ ಆತಂತs. ದೇವತಾನ ಅವತಾರ ಆದರೆಲ್ಲ್ಯರs ಮೈಲಿಗಿ ಆಗತಿರತದs? ಶ್ಯಾಮರಾಯನ ಮ್ಯಾಲ ನಿಮ್ಮ ದ್ವೇಷ ಅದs. ಇರಲಿ. ಆದರ ಈ ಹೆಣ್ಣು ಏನ ಮಾಡೀತಪಾ? ಗೋವಿಂದಭಟ್ಟರು ವೈದಿಕದಾಗ ಶಾಣ್ಯಾರಿರಬೇಕು. ಆದರ ನಿನ್ನ ಬಿ.ಏ.ದ ಚಮಕ ಬಂದೀತೇನಪಾ ಅವರಿಗೆ? ವೈದಿಕ

ವೈದಿಕನs. ಬೀ.ಏ. ಬೀ.ಏ.ನs! ಹೌದಂತೀಯೋ ಅಲ್ಲ ಅಂತೀಯೋ?

ನನಗೂ ಪತ್ತೇ ಆಗತಿರಲಿಲ್ಲ ಏನಪಾ. ಒಂದಿನಾ ಅಂದರ – ಈ ಹೆಣ್ಣು ವಾಡೇದಾಗ ಅವತಾರಮಾಡಿದ ದಿನಾ, ಏನಾತಂದೀ: ಗೋಪಿಂದಭಟ್ಟರು, ಎಲ್ಲ್ಯೋ ಕಾರಭಾರಕ ಹೋಗಿ ಕೂತಾವ್ರು ಎರಡ ಬಡದರೂ ಪತ್ತೇನs ಇಲ್ಲಾ. ಎರಡ ಅಡೀಚಕ್ಕ ಬಂದವರs,'ಗುರುಭಟ್ಟ, ನೀ ಅಷ್ಟು ವಾಡೇದ ಪೂಜೆಗೆ ಹೋಗು. ನಾ ಗುಡೀದ ಮುಗಸ್ತೀನಿ' ಅಂತs ಗಡಿಬಿಡಿ ಸುರೂಮಾಡಿದರು. ಮಡಿ-ನೀರು, ಪಿಡಿ-ನೀರು ಗುಡಿಯಿಂದ ಬರಾಗನs ತಂದಿದ್ದೆ. ದೇವರಮನೀಗೆ ಹೋಗಬೇಕಂತ, ಅಡಿಗೀಮನೀಗೆ ಹೋದರ, ಕೂತsದಲಾ ಈ ಕನ್ಯಾ ಅಡಿಗೀ ಮಾಡಿಕೊಂಡು! ಎದೀ ಝುಲ್ ಅಂತಪಾ. ಪುಣೇದಾಗ ಗಿರಿಜಾ ಏನರs ಸತ್ತು, ಎಲ್ಲೆ ದೆವ್ವ ಆಗಿ, ಅಡಿಗೀಮನೀ ತಾಬೇದಾಗ ತಗೊಂಡಾಳೋ ಏನೋ ಅಂತs. ಮಡ್ಡೀರ ಹೊತ ಗೊಂಡು ಬಿಸಲಾಗಿಂದ ಬಂದಿದ್ದೆ ಬ್ಯಾರೇ! ಕಣ್ಣಿಗೆ ಕತ್ಲಿ ಬರೂದು. ಕೂತವರು ಯಾರು ಅನ್ನೂ ಕಾಂವಿಕ್ಯರ ಹತ್ತೊಲ್ದು. ನನ್ನ ಹಟಾ ಹಟಾ ಹಾರೂ ಮಾರೀ ನೋಡಿ, ಆ ಹೆಣ್ಣ ಏನಪಾ ಅಂದರ, ನಕ್ಕೋತ —

"ಬರ್ರಿ ಆಚಾರ್ಯಪ್ಪಾ. ಪೂಜಾಮಾಡಾಕ ಬಂದರೇನು? ಏನ ಬೇಕ ಹೇಳರಿ. ತಗದ ಕುಡತೀನೂ. ಗುಂಡಪ್ಪಾ ಎಲ್ಲಾ ಹೇಳಿ ಹೋಗ್ಯಾನ."

ಅಂತ್ಯೂ. ಕಣ್ಣ ಪರೀ ಹಾಂಗ ಹರೀಲಿಕ್ಕೆ ಸುರೂ ಆತು. ಧನೀನೂ ಅಷ್ಟ ಪತ್ತೇಹತ್ತಿಧಾಂಗ ಆತು. ಸನೇಕ ಒಂದಿಷ್ಟು ಹೋಗಿ ನೋಡತೀನಿ, ಎಲಾ ಇದರಪ್ಪನ, ಇದs, ಆ ತ್ಯಾಪೀ ಬಸಗೋಂಡ್ಯಾನ ತಂಗೀ – ಬಸವಂತೀ! ಅಂದಲ್ಲೇ ಊರಾಗಿನ ಹರೇದ ಹುಡುಗೂರ ಕಾಲಾ, ನೆಲಕs ಹತ್ತಧಾಂಗ ಆಗ್ಯಾವಲ್ಲಪಾ ಅಂತ ಅನಿಸಿತು. ರೂಪಾ, ಲಾವಣ್ಯಾ, ಹರೇದ ಯಮುಕಾ, ದಾದಲ್ಯಾ, ಎದರಾಗ ಏನೂ ತಗದ ಹಾಕೂ ಅಂಥಾದ್ದಲ್ಲಾ. ಮ್ಯಾಲ ಅಡಿಗಿ ಮಾಡಿಕೊಂಡು, ಶ್ಯಾಮ ರಾಯನ ಹಾದೀ ಬ್ಯಾರೇ ಕಾಯತಿತ್ತು. 'ಗೃಹಿಣೀ ಗೃಹಮುಚ್ಯತೇ' ನೆನಪ ಆತೇನಪಾ. ಅಷ್ಟರಾಗs ಶ್ಯಾಮರಾಯನೂ ಬಂದಾ. ನೀ ಇಲ್ಲ್ಯಾಕ ಬಂದೀ, ಹ್ಯಾಂಗ ಬಂದೀ ಅನೂದನ್ನ ಕೇಳಿಸಿಗೊಟ್ಟರ ಕೇಳು. ಹುಡಿಗಿ, ನಕ್ಕೋತ ನಕ್ಕೋತ, ಅವನ ಕೋಟೇನ ಕಳೀತು, ಸ್ನಾನಕ್ಕೇನ ಹಾಕಿತು; ಊಟಕ್ಕ ಕೂತಾಗ ಆಗ್ರಹ ಏನ ಮಾಡಿತು. ಘಾಳ್ಯೋ, ದಾದಲ್ಯಾ ಘಾಳೀ. ವಾಳದ ಬೇರಿನ ಬೀಸಣಿಕೀಲೇ ಘಾಳೀ ಹಾಕತಿತ್ತು. ನಾವೂ ಹೆಂಡರ್ನ ಮಾಡಕೊಂಡೇವು. ಬೀಸಣಕೀಲೇ ಘಾಳೀ

ಹಾಕೂದಂತೂ ಬಿಡು. ಮರದಲೇ ಹೊಡೀಲಿಕ್ಕೆ ಸುದ್ದೇ ಬರತಾವ ಸುಡ್ಲಿ. ಅಸಿಮಿಸಿ ಮಾಡಿದರ ಊದಗೊಳವೀ ತೋರಸ್ತಾವ. ಬಸವಂತೀ ನೋಡಿದರ ಬಣಜಿಗ್ಯಾರಕಿ. ಏನು ಮಡೀ-ಮೈಲಿಗಿ ಗೊತ್ತs? ಅಡಿಗಿ-ಅಂಬಲಿ ಗೊತ್ತs? ಆದರ ದಾದಲ್ಯಾ, ಆ ಬಡಸೂ ರೀವಿ, ಊಟಕ್ಕೂತಾಗ ನಕ್ಕೋತ ನಕ್ಕೋತ, ಸಾಕು-ಬೇಕು ಕೇಳೂ ಯಮಕಾ, ಛೇ, ಈ ಜನ್ಮದಾಗ ಮರಿಯಾಣಾಸಲ್ಲಾ. ಮುಂದ ಇನಾ ಏನ ಆಗತಿತ್ತೋ ಏನೋ, ದೇವರೇ ಬಲ್ಲನಪಾ. ಶ್ಯಾಮರಾಯಾ ಕೈ ತೊಳಕೋಳಿಕ್ಕ ಹೋಗೂತ್ಲೇ, ನಾ ಸಟ್ಟನೆ ಜಾರಿದೆ ನೋಡು, ದೇವರ ಕ್ವಾಣ್ಯಗಿಂದs! ವಾಡೇದಿಂದ ಬಂದವನs ಗೋವಿಂದಭಟ್ಟರಿಗೆ ವರದೀ ಮಾಡಿದೆ. ಹಿಂದಿಲ್ಲಾ-ಮುಂದಿಲ್ಲಾ ಬಕಾಸಲಿಕ್ಕೆ ಸುರೂಮಾಡಿದರು.

ಅದರ ಮ್ಯಾಲ ನಾಕೈದ ಸಾರೇ ಪೂಜಿಗೆ ಹೋಗಿ ಬಂದೆ. ಹೂವಾ, ಹಣ್ಣಾ, ಕಲಸಕ್ಕರಿ ಯಚ್ಚಾವತ್ ಪೂಜಿಗೆ ತಯಾರ ಇಟ್ಟಿರತಾಳ. ಗೋವಿಂದಭಟ್ಟರಿಗೆ ಜರಾ ದಮ್ಮ ತಿನ್ನ ಅನ್ನರಿ. ಬಲೇ ಸಿಟ್ಟಿನವರು; ದೇವರ ಪೂಜೀಮಾಡಾಗ ಸಿಟ್ಟಾ-ಸೆಡವಾ ಮಾಡಬಾರದು. ಅಂವಗ ಮುಟ್ಟೂದಿಲ್ಲ ಪೂಜಿ, ಅಂತಾಳ. ಬರೇ ಚಮಕದಾರ ಹೆಣ್ಣ ಆಗಿದ್ರ ಹೀಂಗ ಇರತಿತ್ತೇನಲೇ ದಾದಲ್ಯಾ, ಹೇಳ ನೀನs?"

ಗುರುಭಟ್ಟ ತನ್ನ ಕಥಾವಿಲಾಸ ನಿಲ್ಲಿಸಿ ನನ್ನ ಅಭಿಪ್ರಾಯ ಕೇಳಿದ.

"ಗುರುಭಟ್ಟ, ನೀ ಏನ ಹೇಳದ್ಯಲಾ, ಇದರಾಗಿನ ಒಂದಿಷ್ಟ ಸುದ್ದೀ ಗೋವಿಂದಭಟ್ಟ ಹೇಳಿದ್ದಾ. ಆದರ ನಿನ್ನ ಹಾಂಗ ಹಚಿಗೊಂಡ ಹೇಳಿದ್ದಿಲ್ಲಾ. ಅವನ ವಿಚಾರೆಲ್ಲಾ ಪೂರ್ವಗ್ರಹದೂಷಿತ ಇರತಾವ. ಗುರುಭಟ್ಟ, ನಾಳೆ ನಾನs ಪೂಜಿಗೆ ಹೋಗತೇನಿ ವಾಡೇಕ್ಕ. ನೀ ಅಷ್ಟ ಮಡಿನೀರ-ಪಿಡಿನೀರ ತುಂಬಿಟ್ಟು ಬಾ. ನಾವೂ ಅಷ್ಟು ಪರಿಚಯ ಮಾಡಿಕೊಂಬೂಣು ಬಸವಂತೀದು."

ಇಬ್ಬರೂ ಎದ್ದು ಮನೆಯ ದಾರಿ ಹಿಡಿದೆವು.

ನನಗೆ ಬಸವಂತಿಯ ವಿಷಯ ಏನೂ ಗೊತ್ತಿರಲಿಕ್ಕಿಲ್ಲವೆಂದು ಗುರುಭಟ್ಟ ಇದರ ಕಥನಮಾಡಿದ. ನಾನೂ ಗೊತ್ತಿರದವನಂತೇ ಅದನ್ನು ಕೇಳಿದೆ. ಗೋವಿಂದ ಭಟ್ಟನ 'ಸೆಕಂಡ್-ಹ್ಯಾಂಡ್' ಬಾತಮೀಗಿಂತ ಗುರುಭಟ್ಟನ 'ಚಕ್ಷುರ್ವೈ ಸತ್ಯಂ' ಸಂಗತಿಯಲ್ಲಿ ಸತ್ಯಾಂಶ ಹೆಚ್ಚಾಗಿದೆಯೆಂದು, ಅವನು ಹೇಳಿದ್ದನ್ನು, ನಾನು ಕೇಳಿ ದಂತೆ ನಿವೇದಿಸಿದ್ದೇನೆ. ಪುನರುಕ್ತಿಯಾದ ಬಗ್ಗೆ ಕ್ಷಮೆ ಇರಲಿ.

ನಾನು ಈ ಮೊದಲು ಬಸವಂತಿಯನ್ನು ನೋಡಿರಲಿಲ್ಲವೆಂದಲ್ಲ. ಬಹಳ ಸಾರೆ ಗಾಠಾಯಿಸಿದ್ದೆ. ಗಾಣಗ್ಯಾರ ಪರಿಸ್ಯಾ, ಕುಲಕರ್ಣೆ ಬಂಡ್ಯಾ, ನಾನು, ಮುತ್ತಲ ಎಲೆಯ ಸಂಗ್ರಹಕ್ಕೆ ಹೋದಾಗ, ಹೊಲದಿಂದ ಬರುವ ಬಸವಂತಿಯನ್ನು, ಭಾಂವಿಯಿಂದ ಒಗೆದ ಅರಿವೆಯ ಗಂಟನ್ನು ಶಿರೋಭೂಷಣಮಾಡಿಕೊಂಡು ಬರುವ ಬಸವಂತಿಯನ್ನು ನೋಡಿ, ನಮ್ಮನಮ್ಮಲ್ಲಿ ಕಣ್ಣುಮಿಟುಕಿಸಿ ಟ್ಯಾಂ ಹೊಡೆದಿದ್ದೆವು. ಒಮ್ಮೆ, ಅಜಮಾಸು ನಾಲ್ಕೈದು ವರುಷಗಳ ಕೆಳಗೆ, ನಾನು ಎಲೆ ಹರಿದು ಚೆಲ್ಲುತ್ತ ಗಿಡದ ತುತ್ತತುದಿಯಲ್ಲಿದ್ದಾಗ, ಕೆಳಗೆ ಎಲೆ ಆರಿಸುತ್ತ ನಿಂತ ಪರಸ್ಯಾ, ಒಗೆದ ಅರಿವೆಯ ಗಂಟನ್ನು ಹೊತ್ತುಕೊಂಡು ಬರುವ ಬಸವಂತಿಯನ್ನು ನೋಡಿ, ಏನೋ ಕಪಿಚೇಷ್ಟೆ ಮಾಡಿರಬೇಕು —

"ಯಾಕ ಪರಸ್ಯಾ, ಎಲ್ಲಾ ಕೂಡಿದರ ನನ್ನ ಮೊಳಕಾಲಮಟಾ ಸುದ್ದನ್ಸ ಆಗ್ಯಾಂಗಿಲ್ಲಾ. ಭಾಳ ಹಾರ್ಯಾಡ್ತೀ. ಇನಾ ಈಟ ಅದೀ."

ಎಂದು ಬಸವಂತಿ ಡರಕಾಯಿಸಿದ್ದನ್ನು ಗಿಡದ ಮೇಲೆ ಕುಳಿತು ಕೇಳಿದ ನಾವು ಅಲ್ಲೇ ಥಣ್ಣಗಾದೆವು. ಬಸವಂತಿ ನಮಗಿಂತ ಕನಿಷ್ಠ ಆರೆಂಟು ವರುಷದಿಂದ ದೊಡ್ಡವಳಾಗಿದ್ದರಿಂದ, ಕಣ್ಣುಹೊಡೆಯುವದಕ್ಕೂ ಕೂಡ ನಾಲಾಯಖ ಇಸಮು; ಬೇಡವೆಂದು ಪರಸ್ಯಾನನ್ನು ಬಿಡಿಸಿದ್ದೆವು. ಬಸವಂತಿ ನಮ್ಮನ್ನು ಅಂದು ದಾದುಮಾಡಿರಲಿಲ್ಲವಾದ್ದರಿಂದ, ನಾವೂ ಅವಳ ವಿಚಾರವನ್ನು ಅಷ್ಟು ಮಾಡಲಿಲ್ಲ. ಅಲ್ಲದೆ 'ಹಾರೂರ ದರಾರಾ' ಊರಲ್ಲಿ ಇದ್ದು, ಅನ್ಯಮತೀಯರು ಇನ್ನೂ ಅದಕ್ಕಿಷ್ಟು ಗೌರವವನ್ನ ಸಲ್ಲಿಸುತ್ತಿದ್ದರು. ಅಂತೇ ಕೆಳಗೆ ನಿಂತ ಪರಸ್ಯಾ ಫಜೀತಿಯಾದ; ಗಿಡದ ತುದಿಯಲ್ಲಿದ್ದ ನಾವು ಬಚಾವಾದೆವು.

ಅದಾದನಂತರ ಮತ್ತೊಮ್ಮೆ ನಮಗೆ ಬಸವಂತಿಯು ಗಂಟುಬಿದ್ದಿತ್ತು:

ಇಂಟರ್ ಪರೀಕ್ಷೆಯನ್ನು ಮುಗಿಸಿ, ಸೂಟಿಯಲ್ಲಿ ನಾನು ಊರಿಗೆ ಬಂದಿದ್ದೆ. ಹತ್ತಿಯ ಸುಗ್ಗಿ ಇನ್ನೂ ಭರಾಟೆಯಲ್ಲಿ ಇತ್ತು. ನಿತ್ಯ ಸಂಜೆಯ ಮುಂದೆ, ಬಿಡಿಸಿದ ಹತ್ತಿಯ ಭಾರವಾದ ಗಂಟುಗಳನ್ನು ಹೊತ್ತುಕೊಂಡು, ಇರುವೆ ಸಾಲಿಟ್ಟಂತೆ ಹೆಣ್ಣಾಳುಗಳು ಹೊಲದಿಂದ ಬರುತ್ತಿದ್ದರು. ಕುಲಕರ್ಣೆ ಬಂಡ್ಯಾನ ಹೊಲದಲ್ಲಿಯೂ ಸುಗ್ಗಿ ನಡೆದಿತ್ತು. ಬಂಡ್ಯಾನ ತಂದೆ ರಂಗಣ್ಣನವರು, ಕುಲಕರ್ಣಿಕಿಯ ಪೀಠದಲ್ಲಿದ್ದ ಕಾರಣ, ಅನ್ಯ ವ್ಯಾಸೇಜಮೆಂಟ ಬಂಡ್ಯಾನ ಕಡೆಗಿತ್ತು. ಕಮತಿಗ ಹತ್ತಿಯನ್ನು ಕಾಟಾಕ್ಕೆ ಹಚ್ಚಿ, ವಜನ-ಮಾಪ ಸರಿಯಾದದ್ದನ್ನು ತನಖಿಸಿ, ಪರಾಕು

ಸಾರುವ ಫರ್ಶಿಯಲ್ಲಿ, "ನಿಲಗಂಗವ್ವಾ ಕುಂಬಾರ, ಮೂರ ಮಣಾ ಆರ ಸೇರ; ದ್ಯಾಮವ್ವಾ ಟಕ್ಕೇದ, ನಾಕ ಮಣಾ ಮೂರ ಸೇರ." ಎಂದು ಒದರಿ ಹೇಳಿದ್ದನ್ನು, ಅಲ್ಲೇ ಕುಳಿತ ಬಂಡ್ಯಾ ಕಾಕರ ಲಿಪಿಗೆ ಇಳಿಸಿಕೊಳ್ಳಬೇಕು. ಇದು ಗಂಟೆ, ಅರ್ಧ ಗಂಟೆಯ ಕೆಲಸವಲ್ಲ. ಅಖಂಡ ೨॥ – ೩ ತಾಸು ನಡೆಯಬೇಕಾದ ಕಸರತ್ತು. ಐದು ನಿಮಿಷಕ್ಕೊಮ್ಮೆ ಬೀಡಿಯ ಝುರುಕಿ ಎಳೆಯುವ ಬಂಡ್ಯಾನಿಗೆ ಇದು ಕಾಳಾ ಪಾಣೀ! ಆದರೂ ಬಂಡ್ಯಾ, ಅರ್ಧ ಗಂಟೆಗೊಮ್ಮೆ ವಿಶ್ರಾಂತಿಸುವ, ಬೀಡಿ-ಸೇವನ ಪ್ರಯುಕ್ತ ಅಲ್ಲೇ ಇರುವ ತನ್ನ ಕೋಣೆಗೆ ಬರುತ್ತಿದ್ದ. ನಾವು ಅವನ ದಾರಿಯನ್ನು ಕಾಯುತ್ತ ಕೋಣೆಯಲ್ಲಿ ಕುಳಿತಿರುತ್ತೇವೆ. ಅವನು ಬಂದನಂತರ, ಇಬ್ಬರೂ ಒಂದೊಂದು ಬೀಡಿಯನ್ನು ಹಚ್ಚಿಕೊಂಡು, ಹತ್ತೀ ಬಿಡಿಸುವ ಹೆಣ್ಣಬಳಗದಲ್ಲಿ 'ಮಾಲು' ಏನಾದರೂ ಇದ್ದ ಬಗ್ಗೆ ಅಷ್ಟೇ ಚವಕಶಿ ಮಾಡುತ್ತೇವೆ. ಅದರಲ್ಲಿ ಆಸ್ಥೆ ಕಡಿಮೆ. ಆದರೆ ಚಟ.

ಇಂದು ಬೀಡಿ-ಸೇವನೆಗೆ ಬಂದ ಬಂಡ್ಯಾ–ಏಕದಮ್ ಖುಷಿಯಲ್ಲಿ ಬಂದು –

"ದಾದಲ್ಯಾ, ಹತ್ತೀ ಲೆಕ್ಕಾ ಬರದದ್ದಕ್ಕ ಇಂದ ಖರೇ ಫಲಾ ಸಿಕ್ಕಿತು. ಬಸವಂತಿ ಬಂದಾಳ ಮಗನs, ಬಸವಂತಿ ಬಂದಾಳ. ನೀ ಕೂತ ಖಿಡಕೀ ತೆಳಗs ಬೈಠಕ ಹಾಕ್ಯಾಳ ನೋಡು. ಖೋಲ್ಯಾಗೇನು, ಕಣ್ಣಮುಚಿಗೊಂಡು ಕೂತಿದ್ದೇನು ಮಗನs ?"

ಎಂದು ನುಡಿದು ನನ್ನ ಬಲಭುಜ ಚಿವುಟಿ, ತನ್ನ ಅದಮನೀಯ ಹರ್ಷವನ್ನು ಪ್ರಕಟಿಸಿದ.

ಬೀಡಿಯ ಉಸಾಬರಿಯನ್ನು ಬಂಡ್ಯಾನಿಗೆ ಬಿಟ್ಟು, ನಾನು ಕಿಡಕಿಯ ಸಲಾಕಿಗೆ ಹಣೆಹಚ್ಚಿ ಇಣಿಕಿ ನೋಡಿದೆ. ತನ್ನ ಸರದಿ ಬಂತೆಂದು, ಕೂತಿದ್ದ ಬಸವಂತಿ ಎದ್ದು ನಿಂತಿದ್ದಳು. ಅವಳ ಮುಂದೆ ಜಡಭಾರವಾದ ಹತ್ತಿಯ ಗಂಟಿತ್ತು. ಹರೆ ಗಿಮಿದಿರು ಗುತ್ತಿರುವ, ಕಾಮನ ಕಾರ್ಖಾನೆಯಿಂದ ಅದೇ ರಫ್ತ ಆಗಿ ಬಂದ ಬಸವಂತಿ ಯನ್ನ ನೋಡಿದೆ; ಬೇಭಾನನಾದೆ. ನನ್ನಲ್ಲಿಯ ಏನೋ ಉಮ್ಮಳಿಸಿ ಗಂಟಲಿಗೆ ಬಂದಿತು, ತುಟಿಯಿಂದ ಮಿಂಚಿತು —

"ಏನ ಮಾಲ ಅದನೋ ಬಂಡ್ಯಾ ? ಬವಳಿ ಬರತದ ನೋಡು ಕಣ್ಣಿಗೆ. ಜೀವಾ ನಿವಾಳಿಸಿ ಒಗೀಬೇಕ ನೋಡಲೇ. ಬಂಡ್ಯಾ, ಕುಣಿಕೀ ಹರಕೊಂಡದಂತಲಾ ಮಣಕಾ, ಖರೇ ಏನಲೇ ?"

ಎಂದು ಕೇಳಿದೆ.

ನನ್ನ ಪಿಸುನುಡಿ, ಬಸವಂತಿಯ ಕಿವಿಗೂ ಬಿತ್ತು. ಬೀಳಲೆಂದೇ ಆಡಿದ್ದೆ. ಬಸವಂತಿ ಸಟ್ಟನೆ ತಿರುಗಿ ನೋಡಿದಳು. ಒಂದು ಲಘುಹಾಸ್ಯ ಬೀರಿದಳು.

ಹತ್ತಿಯನ್ನು ಹಾಕಿದವರು ಮನೆಯ ದಾರಿಹಿಡಿಯುತ್ತಿದ್ದರು. ಜನ ವಿರಳ ವಾಗಿತ್ತು. ತನ್ನ ಸರದಿ ಬಂದಿತೆಂದು ಬಸವಂತಿ, ಹತ್ತಿಯನ್ನು ಕಾಟಾಕ್ಕೆ ಹಚ್ಚಿದಳು. ಅವಳ ಲೆಕ್ಕವನ್ನು ಸಾರಿದ್ದಾಯಿತು. ಹತ್ತಿಯನ್ನು ಕಟ್ಟಿದ ಅರಿವೆಯನ್ನು ಜಾಡಿ ಸುವ ನೆವದಿಂದ, ಬಸವಂತಿ, ಕಿಡಕಿಯ ಹತ್ತಿರ ಬಂದು, ಕಿಡಕಿಯಲ್ಲಿ ಮುಖ ಚಾಚಿ ಕುಳಿತ ನನ್ನ ಕಡೆಗೆ, ತನ್ನ ಅರೆನ್ನೋಟವನ್ನು ಬೀರಿ ಪಿಸುನುಡಿಯಲ್ಲಿ —

"ಮಣಕದ ಕುಣಿಕೆ ಬಿಚ್ಚಿದ್ದ ಖರೇ. ನಿನ್ನ ತಳಕಹಾಕ್ಕೊಂತೀನಿ. ಕಬೂಲದೀ ಯೇನು?"

ಎಂದು ಕೇಳಿ ಕಣ್‌ಮಿಟುಕಿಸಿದಳು. ದಾದಲ್ಯಾ ಉತ್ತರಿಸದೆ ಸತ್ತು ಹೆಣವಾಗಿದ್ದ.

ಈ ಪ್ರಸಂಗದ ನಂತರ ದಾದಲ್ಯಾ ಎಂಟಾನೆಂಟು ದಿನ ಮನೆ ಬಿಟ್ಟು ಹೊರ ಬೀಳಲಿಲ್ಲ. ಮನೆಯ ಅಂಗಳದಲ್ಲಿ ಬಂದು ನಿಂತು, ಬಸವಂತಿ. "ದಾದಲ್ಯಾ ಜರಾ ಹೊರಗ ಬಾ, ತಳಕಹಾಕ್ಕೊಂಬೂದೈತಿ" ಎಂದು ಒದರಿದ ಭಾಸವೇ ಅವನಿಗೆ ಏತಾಳದಂತೆ ಬೆನ್ನುಹತ್ತಿತ್ತು. ಕದಾಚಿತ್ ದಾರಿಯಲ್ಲಿ ಎಲ್ಲಿಯಾದರೂ ಬಸವಂತಿ ಗಾಠಾಯಿಸಿ, ಆಡಿದಂತೆ ಮಾಡಿ ತೋರಿಸುವ ಹಟದಿಂದ, ತೋಳತಳಕನ್ನು ಕತ್ತಿಗೆಸೆ ದಿದ್ದರೆ ದಾದಲ್ಯಾ ಖಲಾಸ್ ಆಗುವದರಲ್ಲಿ ಸಂಶಯವಿರಲಿಲ್ಲ. ಬಸವಂತಿಯ ಮಾತಿನಲ್ಲಿಯ ನಂಜು ಬಹಳ ದಿನ ಜೀವನದಲ್ಲಿ ಕಹಿ ಬಿಟ್ಟಿತು. ಸೂಟಿಯನ್ನು ಮುಗಿಸಿ ಊರನ್ನು ಬಿಡುವ ತಸಕವೂ ಚಿಟುಕುಮುಳ್ಳಾಟವಾಗಿತ್ತು.

ಆ ಮಾತಿಗೆ ಎರಡು ವರುಷ ಸಂದುಹೋಗಿವೆ. ನಿತ್ಯ ಇಂಥ ಮಾತಿನ ಶಲ್ಯದ ತಿವಿತವನ್ನು ಅನುಭವಿಸಿದ ಬಸವಂತಿ, ತೌರಮನೆಯ ನರಕಜೀವನದಲ್ಲಿ ವಿಲಿವಿಲಿ ಒದ್ದಾಡಿದ ಬಸವಂತಿ, ಇಂದು ಅದನ್ನು, ಬಹಳ ಕ್ಷುಲ್ಲಕ ವಿಷಯವೆಂದು ಮರೆತಿರ ಬೇಕು. ಇನ್ನೂ ತಲೆಯ ಮೇಲಿನ ವಾಸ ಹಾರದ 'ಪಾರ' ಮಾಡಿದ ಚೇಷ್ಟೆಯೆಂದು ಕಡೆಗಣಿಸಿರಬೇಕು.

ಅವಳು ಅದನ್ನೆಲ್ಲ ಮರೆತಿರಬೇಕೆಂಬ ಧೈರ್ಯದ ಮೇಲಿಂದಲೇ ನಾವು ವಾಡೆಯ ಪೂಜೆಗೆ ಹೋದೆವು.

ನಾನು ಪೂಜೆಗೆ ಬಂದಾಗ, ಬಸವಂತಿ ನಡುಮನೆಯಲ್ಲಿ, ಮರದಲ್ಲಿ ಅಕ್ಕಿ

ಯನ್ನು ಹಾಕಿಕೊಂಡು, ಹರಳಾರಿಸಿ ಹಸನಮಾಡುತ್ತ ಕುಳಿತಿದ್ದಳು.

ಈಗ ನಾನು ಧಾಬಳಿ ವರ್ಜ್ಯಮಾಡಿದ್ದೆ. ತೆಳುವಾದ ಗೀರಂಚಿನ ಧೋತರ ಉಡುತ್ತಿದ್ದೆ. ಪಂತಮಾಮಾ ಬಿಟ್ಟು, ರೇಶಿಮೆ-ಕಾಠದ ಉಪರಣೆಯನ್ನು ಹೊದೆಯುತ್ತಿದ್ದೆ. ನಮ್ಮ ಚಂಡಿಕೆ ಮಾಯವಾಗಿ ಬಹಳ ದಿನವಾಗಿದ್ದವು. 'ಕ್ಲೋಸ್-ಕಟ್' ಕ್ರಾಪಿನಿಂದ ತಲೆಯು ಸಿಂಗಾರಾಗಿತ್ತು. ಅಲಾಬಿಯ ಹುಲಿಯಂತೆ ಮೈಯನ್ನು ಗೋಪೀಚಂದನದ ಚಿತ್ರ-ವಿಚಿತ್ರ ಮುದ್ರೆ ಅಲಂಕರಿಸಿ ವಿಕೃತವಾಗಿಸಿರಲಿಲ್ಲ. ವಿಶಾಲವಾದ ಫಾಲದಲ್ಲಿ ರಕ್ತಚಂದನದ ಗೀರು-ರೇಖೆ ಮಾತ್ರ ಥಾಳವಾಗಿತ್ತು.

ಇಂಥ ಅರ್ವಾಚೀನ ಅವರ್ಣನೀಯ ಆಚಾರಿಯನ್ನು ನೋಡಿ, ಬಸವಂತಿ ಒಂದಿಷ್ಟು ವಿಸ್ಮಿತಳೇ ಆದಳು. ಆದರೆ ಗುರುಭಟ್ಟ ಮಡಿ-ನೀರು ತಂದಿಟ್ಟಾಗಲೇ ನಾನು ಪೂಜೆಗೆ ಬರುವ ವರದಿಯನ್ನು ಮಾಡಿರಬೇಕು. ಬಸವಂತಿ, ವಿಸ್ಮಯಕ್ಕೆ ನಗೆಯ ಮಿಸುನಿಯನ್ನು ಲೇಪಿಸಿ —

"ದೊಡ್ಡ ಆಚಾರೆಪ್ಪನ ಮಕ್ಕಳೇನು? ಊರಲಿಂದ ಎಂದ ಬಂದರಿ ಸ್ವಾಮೇರು? ಇವರು ದಿನಾ ಅಂತಿದ್ರು, 'ದಾದಲ್ಯಾ ಬರಾಂವಾ, ಇನಾ ಯಾಕ ಬರಲಿಲ್ಲ ಊರಿನಿಂದ'ಂತ. ದೊಡ್ಡ ಆಚಾರೆಪ್ಪಾ-ಅವ್ವನವರು, ಏನ ಯಂಕಪ್ಪಗ ಹೋದರಂತಲಾ?"

ಬಸವಂತಿ ಝಲ್ಲು ಬಿಟ್ಟು ಕೇಳಿದಳು.

ನಾನು ವಾಡೆಯ ವಿಶಾಲ ಝಳಜ, ಪಡಸಾಲೆಗಳನ್ನು ದಾಟಿ, ನಡುಮನೆಗೆ ಬಂದಿದ್ದೆ. ಅಲ್ಲಿಂದ ಅಡುಗೆಯಮನೆ, ಇತರ ಕೋಣೆಗಳು. ನಿಂತಲ್ಲೇ ನಿಂತು, ಒಂದು ನಿಮಿಷ ಕಣ್ಣುಬಿಟ್ಟು ನೋಡಿದೆ. ದಂಗಾದೆ. ಬಿರಾಡಿಲ್ಲದ ವಾಡೇ, ಬೆಕೋ ಎಂದು ಭಯಾನಕವಾಗಿರಬೇಕೆಂಬ ಕಲ್ಪನೆ ನಿಮಿಷಾರ್ಧದಲ್ಲಿ ಮಾಯವಾಯಿತು. ವಾಡೆಯ ಅಚ್ಚು, ಅದರ ಕಟ್ಟು, ಸ್ವಚ್ಛತೆ, ಠೀವಿ ಮಾಸದೆ ಮಸುಕದೆ ಹಿಂದೆ ಇದ್ದಂತೆಯೇ ಇತ್ತು. ವಾಡೆಯಲ್ಲಿಯ ಜನ, ಇದೇ ಒಂದೈದು ನಿಮಿಷ ಹೊರಗೆ ಹೋಗಿರಬೇಕು. ವಾಡೆಯಲ್ಲಿ ನಿರಂತರ ವಾಸ್ತವ್ಯವಿದೆ ಎನಿಸುವಂತೆ ಇತ್ತು. ಆಳಿನ ಕೆಲಸಕ್ಕಿಂತ ಹೆಣ್ಣಿನ ಕೈವಾಡ ಎಲ್ಲೆಡೆಯಲ್ಲಿಯೂ ಆಡಿದ ಪ್ರತ್ಯಕ್ಷ ಸಾಕ್ಷಿ ಇತ್ತು. ಬಸವಂತಿಯು ವಾಡೆಯನ್ನು ಮೈಲಿಗೆಗೊಳಿಸಿದ್ದು ಖಚಿತ ಸುಳ್ಳೆಂದು ಖಾತ್ರೀಯಾಯಿತು.

ದಾದಲ್ಯಾನ ಪಿಂಡ ಪಂತರ ಅನ್ನದಿಂದ ಬೆಳೆದಿದೆ. ಬೆಳೆಯುತ್ತಲಿದೆ. ಆ

ಕುಟುಂಬದ ಮುತ್ಸದ್ದೀ-ಬುದ್ಧಿ, ಮುಂದಾಲೋಚನೆ, ದೂರದೃಷ್ಟಿ, ಗಣೇತಿಯು ಬುದ್ಧಿಯಂತೆ ಸದಾ ಚಲಾಕಾಗಿರುತ್ತದೆ. ಗುರುಭಟ್ಟನ 'ಗೃಹಿಣೀ ಗೃಹಮುಚ್ಯತೇ' ಸುರಸಕಥನ ಕೇಳಿದಾಗಿನಿಂದ, ನನ್ನಲ್ಲಿಯ ಗಣೆತಿ ಜಾಗರಿಸಿ, ಲೆಕ್ಕ ಬಿಡಿಸಿ ಉತ್ತರ ತಯಾರಿಸಿದ್ದ.

ಒಂದು ನಿಮಿಷದಲ್ಲಿ ನಾನು ನಿರ್ಧಾರಕ್ಕೆ ಬಂದೆ. ಬಸವಂತಿಯ ಬಗ್ಗೆ ಅನಾರಾಯೀ ಆಸ್ಥೆ ಉತ್ಪನ್ನವಾಯಿತು. ಅವಳಿಗೆ ಹಾರುತ್ತರ ಕೊಟ್ಟು, ಗುಡ್ಡ ಸುತ್ತಿ ಮೈಲಾರಕ್ಕೆ ಎಳೆದೊಯ್ಯುವದಕ್ಕಿಂತ ನೇರ ಪರಿಚಯದ ಪ್ರಸ್ತಾಪ ಮಾಡುವದು ನೆಟ್ಟಗೆನಿಸಿತು. ಶ್ಯಾಮರಾಯ ನನ್ನ ಬಗ್ಗೆ ಅವಳ ಮುಂದೆ ಮಾತಾಡಿರಬೇಕು. ನಾನು ಊರಿಂದ ಬರುವ ದಾರಿಯನ್ನು ಕಾಯ್ದಿರಬೇಕು. ಆ ಬಗ್ಗೆ ಬಸವಂತಿ ಹೇಳಿದ್ದಳು. ಅವನಿಗೆ ನನ್ನ ಗರಜಿದ್ದ ವಿಷಯ ಅವಳಿಗೆ ವಿದಿತವಾಗಿದೆ. ನಾನು ಶ್ಯಾಮರಾಯನ ಚೇಲಾ ಇರಬೇಕೆಂಬ ಭಾವನೆ ಅವಳಿಗೆ ಬಂದಿರಬೇಕು. ಅವನ ವಿಶ್ವಾಸದಲ್ಲಿಯ ಗಿರಾಕಿ ಎಂಬ ಠಾಂವಿಕಿ ಅವಳಿಗೆ ಆಗಿರಬೇಕು. ಈಗ ಅದರ ಫಾಯದೇ ಮಾಡಿಕೊಂಡರೆ —

ಊರಿಸಿಂದ ಬಂದ ಕೂಡಲೇ ನಾನು ಮಾಡುವ ಪ್ರಥಮ ಕೆಲಸ ಅವ್ವ, ಗೋವಿಂದಭಟ್ಟ, ಅಜ್ಜಿಗೆ ಅಡ್ಡಬೀಳುವದು – ಅವರ 'ಉದ್ದಂಡ ಆಯುಷ್ಯವಂತ ನಾಗು' ಆಶೀರ್ವಾದ ಪಡೆಯುವದು. ಪಂತಮಾಮಾ, ಬನೂಮಾಮೀ ಅವರು ಕುಶಲರಿದ್ದ ವರದಿ ಒಪ್ಪಿಸುವದು. ಕಾರಣ ಗೋವಿಂದಭಟ್ಟನಿಗೆ ಅನ್ನದಾತ್ರುಗಳ ಕ್ಷೇಮಸಮಾಚಾರ, ನನ್ನ ಅಭ್ಯಾಸ ಪರೀಕ್ಷೆಗಳ ಗತಿಗಿಂತ ಮಹತ್ವದ್ದಾಗಿರುತ್ತದೆ. ನಂತರ ಅವನಿಂದ ಊರ ಕಿಲಾಪ ಕೇಳುವದು. ತಾನು ತಿರುಪತಿಗೆ ಹೋಗುವ ಗಡಿಬಿಡಿಯಲ್ಲಿದ್ದದ್ದರಿಂದ ಗೋವಿಂದಭಟ್ಟ, ನಾನು ಊರಿಂದ ಬಂದು, ಕೈ-ಕಾಲು ಮುಗಿಸಿ. ಫಲಾಹಾರ ಬಗೆಹರಿಸುವ ಹೊತ್ತಿಗೆ, ಊರಲ್ಲಿಯ ಸಾದ್ಯಂತ ಹಕೀಕತ್ತ ವಿವರಿಸಿದ. ವಾಡೆಯಲ್ಲಿ ಬಸವಂತಿ ಪ್ರತಿಷ್ಠಾಪಿತಳಾಗಿ, ವಾಡೇ ಮೈಲಿಗೆಯಾದ ವರದಿ ಮಾಡಿದ. ಅವನ ಮಾತಿಗೆ ಹೂಂ, ಹಾಂ, ಯಾಕೆ, ಏನು ಎಂದು 'ಕ್ರೊಸ್' ಮಾಡದೆ, ಅದರ ವಿವರಗಳನ್ನು ಅರಿತುಕೊಳ್ಳಬೇಕೆಂದು – ನಾನು ಅಗತ್ಯವಾಗಿ ಭೆಟ್ಟಿಯಾಗುವ, ಆಶೀರ್ವಾದ ಪಡೆಯುವ ವ್ಯಕ್ತಿ – ರಾಜಪ್ಪನ ಕಡೆಗೆ ಹೋಗಿದ್ದೆ. ರಾಜಪ್ಪ ಬಹಳ ಸಿಧಾನೀ ಮನುಷ್ಯ. ಗೋವಿಂದಭಟ್ಟನ ಉತಾವಿಳತನ ಅವನಲ್ಲಿ ಔಷಧಕ್ಕೂ ತುಟ್ಟಿ. ಅವನೂ ಎಲ್ಲ ಸುದ್ದಿಯನ್ನ ಹೇಳಿದ. ಬಸವಂತಿ ವಾಡೆಯನ್ನು

ಇಟ್ಟ ರೀತಿ ನೋಡಿ ತಾನೇ ಯಾವುದೋ ಒಂದು ನಿರ್ಧಾರಕ್ಕೆ ಬಂದಿದ್ದ. ಶ್ಯಾಮರಾಯನ ವಾಸ್ತವ್ಯದ ಮಟ್ಟಿಗೆ ನಾಕಾರು ಕೋಣೆ ಬಿಟ್ಟು, ಉಳಿದ ಮನೆಗೆ ಕೀಲಿಯನ್ನು ಜಡಿಯಬೇಕೆಂದು ಹೋದವ, ಅದರ ಅಗತ್ಯವಿಲ್ಲವೆಂದು ತಿರುಗಿ ಬಂದಿದ್ದ. ಅದೆಲ್ಲವನ್ನೂ ವಿವರಿಸಿ, ಒಂದೇ ಮಾತಿನಲ್ಲಿ—

"ದಾದಲ್ಯಾ, ಗಿಡಗನ ಬಾಯಿಗೆ ಪಾರೋಳ ಬಿದ್ಹಾಂಗ ಆಗೇದ, ಬಸವಂತಿ ಶ್ಯಾಮರಾಯಗ ದಕ್ಕಿದ್ದು. ಏನೋ ಭುಲತಾಪೀ ಹೊಡದಾನ ಆಕೀಗೆ. ಆದರ ದಾದಲ್ಯಾ, ಬಸವಂತೀ ನೀರೂ ಥ್ವಾಡೇ ಗುಮ್ಮ ಇಲ್ಲಾ. ಭಾಳ ಮಂದೀ ಕೈಮ್ಯಾಲ ತುರೀ ಇಟ್ಟು, ಶ್ಯಾಮರಾಯನ್ನ ಕೂಡ್ಯಾಳ."

ಗೋವಿಂದಭಟ್ಟನಿಗೆ, ರಾಚಪ್ಪನಿಗೆ ನಾನು ಎರಡು ವರುಷಗಳ ಹಿಂದೇ ಬಸವಂತಿಯ ಕೈಯಿಂದ ಶಾಲು-ಜೋಡೀ-ಸನ್ಮಾನ ಪಡೆದ ವಿಷಯ ಅವಗತವಿರಲಿಲ್ಲ. ಇರುವ ಶಕ್ಯತೆಯೂ ಇರಲಿಲ್ಲ. ಬಂಡ್ಯಾನಿಗೂ ಇದರ ವಾಸವಿರಲಿಲ್ಲ. ಇಲ್ಲದಿದ್ದರೆ ಅವನು ಈ ದೇಶೀ ಕಸ್ತೂರಿಯ ಪರಿಮಳವನ್ನು ಊರೆಂತ ಊರೆಲ್ಲ ಹರಡದೆ ಬಿಡುತ್ತಿರಲಿಲ್ಲ.

ಬಸವಂತಿ ತಾನಾಗಿಯೇ ಅದರ ನೆನಪನ್ನು ತೆಗೆದಿದ್ದರೆ, ದೇಶಾವರೀನಗೆಯಲ್ಲಿ ಅದನ್ನು ತೇಲಿಸಿಬಿಡುವಷ್ಟು ತಯಾರಿ ನಮ್ಮಲ್ಲಿ ಆಗಿತ್ತು. ನಾವೇ ಅದನ್ನು ನೆನಪಿಸಿ ಪರಿಚಯದ ಪ್ರಸ್ತಾಪವನ್ನು ಹಾಕಿದರೆ, ಇಂದು ಎಲ್ಲವನ್ನೂ ಮರೆತು, ಕೇವಲ ಶ್ಯಾಮರಾಯನ ಮಾಲ್ಕೀ ಮಾಲಾದ ಬಸವಂತಿ ತಾನೂ ಅದನ್ನು ನಗೆಯಲ್ಲಿ ತೇಲಿಸಿಬಿಡಬಹುದೆಂದು ಯೋಚಿಸಿ, ನೇರವಾಗಿ—

"ಬಸವಂತೀ, ಅಗದೀ ಗುರತs ಮರತಬಿಟ್ಟೇನು? ಬಸವಣ್ಣನ ಗುಡೀ ಮುಂದ ನಾವು ಮುತ್ತಲೆಲಿ ಕೂಡಸಾಗ, ಪರಸ್ಯಾಗೊಮ್ಮೆ ಡರಕಾಸಿದ್ದಿ ನೋಡು: 'ಚೋಟ ಅದೀ. ಎಲ್ಲಾ ಕೂಡಿದರ ನನ್ನ ಮೊಳಕಾಲ ಮಟಾ ಸುದ್ದೇ ಬರಾಂಗಿಲ್ಲ' ಅಂತ. ನೆನಪ ಇರಬೇಕಲಾ?"
ಎಂದು ಆ ನೆನಪು ಅವಳಿಗೆ ಮರುಕಳಿಸಬಹುದೇನೋ ಎನ್ನುವ ಭಾವನೆಯಿಂದ ಅದನ್ನು ನೆನಪಿಸಿಕೊಟ್ಟೆ.

"ದಾದಲ್ಯಾ, ನೀ ಗಿಡದ ಮ್ಯಾಲs ಕುಂತು ಪಾರಬಿದ್ದಿ. ತೆಳಗ ಇದ್ದರ ಒಂದ ಕೈ ತೋರಸ್ತಿದ್ದಿ. ಪರಸ್ಯಾಗ ಹಾಂಗ ಮಾತಾಡಲಾಕ ಕಲಿಸಿಕೊಟ್ಟಾಂವ ನೀನs ಅನೂದು ಠಾಂವಿಕಿತ್ತ ನನಗ. ಆಚಾರೆಪ್ಪನ ಮಗಾ ಅಂತ ಬಿಟ್ನಿ. ಇಲದಿರಕ ಆಗs

ಜುಟ್ಟಾ ಹಿಡೀತಿದ್ನಿ. ಈಗ ಜುಟ್ಟಾ-ಪಿಟ್ಟಾ ಎಲ್ಲಾ ತಗಸೇಬಿಟ್ಟಿಯಲಾ ದಾದಲ್ಯಾ? ಮಸಾರ ಧೊಡ್ಡಾವಸೂ ಆಗೀ. ಯಾಕ ದಾದಲ್ಯಾ, ತೀರಾ ಮರಥಾವ್ರಂಗ ಥೋಂಗ ಮಾಡತೀ? ಕುಲಕರ್ಣ್ಯಾರ ಮನ್ಯಾಗಿನ ಖಿಡಕ್ಯಾಗ ಕುಂತು ನನ್ನ ಹರೇದ ತಾರೀಫ ಮಾಡಿದ್ದ್ಯೆಲಾ? 'ಕುಣಿಕಿ ಉಚ್ಚಿದ ಮಣಕ' ಅಂದಿದ್ದಿ. ನೆಪ್ಪ ಐತಿಲ್ಲ ದಾದಲ್ಯಾ? 'ತಳಕ ಹಾಕ್ಕೊಂತೀನಿ, ಬರತೀ ಏನು' ಅಂತ ಕೇಳಿದ್ನಿ. ಸಾಲೀ ಕಲಿಯೂದಕಂತ ಊರ ಬಿಟ್ಟಿ. ಇಲ್ಲದಿರಕ ನೀನೂ ಕೈತೊಳಕೊಂಡು ಬೆನ್ನs ಹತ್ತತಿದ್ದಿ. ಆಚಾರೆಪ್ಪನ ಮಗಾ ನೀ. ಹುದಲಾಗ ಸಿಗೂ ಜಾತಿ ಅಲ್ಲ ನಿಮ್ಮದು."

ಹಿಂದೆ ನಡೆದ ಘಟನೆಗಳನ್ನು ಚಾಚೂ ಬಿಡದೆ ಬಸವಂತಿ ವರದಿ ಒಪ್ಪಿಸುವ ರೀತಿಯಲ್ಲಿ ಆಡಿತೋರಿಸಿದಳು. ಆ ನೆನಪು ಮಾಸದೆ, ಮಸಕದೆ ಇನ್ನೂ ತಳತಳಿಸುವಂತಿತ್ತು. ಬಸವಂತಿಯ ಮಾತು ನಗೆಯ ಮಕರಂದವನ್ನು ಮೂಸಿ, ಮೋದಿಸಿಯೇ ಬಂದಂತಿತ್ತು. ಪರಿಚಯ ಮರೆತಿಲ್ಲವೆನ್ನುವದರ ಬಗ್ಗೆ ದಾದಲ್ಯಾ ನಿರ್ಧಾಸ್ತನಾದ. ಇನ್ನು ನಿಃಸ್ಸಂಕೋಚವಾಗಿ ಪಟ ಬಿಚ್ಚಲಿಕ್ಕೆ ಅಡ್ಡಿಯಿಲ್ಲವೆಂದುಕೊಂಡು —

"ಬಸವಂತೀ, ಶ್ಯಾಮರಾಯರ ಸ್ವಾರೀ ಎಂದ ಬರತದ? ಊರಿಗೆ ಹೋಗಿ ಎಷ್ಟ ದಿನಾ ಆತು? ಎಲ್ಲೆ, ಬೆಳಗಾಂವಿಗೆ ಹೋಗ್ಯಾರೇನು?"

"ಎಂಟ ದಿನಾ ಬರಾಕ ಆಗಾಣೆಲ್ಲಂತ ಹೇಳಿ ಹೋಗ್ಯಾರ. ಏನ ನೇಮ ಅವರದು? ಥಾಳಿ ಇದ್ಧಾಂಗನs. ಹೀಂಗ ಮೂಡಲಕ ಐತಿ ಅನೂದ್ರಾಗs ಪಡವಲಕ ಹೊಳ್ಳತೈತಿ. ಎಂಟ ದಿನಾ ಅಂದಾರ ಖರೇ. ಘಸಕ್ಕನs ಈಗ ಮೋಟರ ಇಳವರೂ ಇಳದರs. ಹೋಗೂ ಮಟಾ ನೀ ಇನಾ ಯಾಕ ಊರಲಿಂದ ಬರಲಿಲ್ಲ ಅಂತನs ಕೇಳತಿದ್ದರು. ಇಬ್ಬರದೂ ಜಂಗೀ ಗಟ್ಟಿ ಐತಿ ಕಾಣತೈತಿ?"

"ಬಸವಂತೀ, ನಾನು ಅವರ ಮನೀ ಪೂಜಾರಿ. ಭಾಳ ದಿನಾ ಬ್ಯಾರೇ ಆತು, ನಂಪೂ ಅವರದೂ ಭೆಟ್ಟಿ ಆಗದ. ಅವರು ಊರಿಗೆ ಹೋಗೂದರಕಿಂತಾ ಮುಂಚೆ ಒಮ್ಮೆ ಭೆಟ್ಟಿ ಆಗಿದ್ದರ ಠೀಕ ಆಗತಿತ್ತು. ಬಸವಂತೀ, ಅದು ಹೋಗಲಿ ಬಿಡೂ. ಆದರ ಏೀ ಮಾತ್ರ ವಾಡೇ ಅಗದೀ ಝಕಾಸ ಇಟ್ಟೇದಿ ನೋಡು. ನೀ ವಾಡೇ ಹೊಕ್ಕಿ – ಬಳವ ಬಂದು ಸೇರಿಕೊಂಡಿತು, ವಾಡೇಕ್ಕ ಕೆಡಗಾಲ ಬಂತು, ಅಂತ ಅಂದರಂತ ಮಂದಿ. ಅವರ ಕಿವಿಗೆ ಹಳ್ಳಹಚ್ಚಿ ತಂದ ತೋರಸಬೇಕು ಇದನ್ನ. ಭಾರೀ ಸಮಾಧಾನ ಬಂತ ಬಸವಂತೀ, ವಾಡೇ ನೋಡಿ."

"ನೀ ಒಬ್ಬನರs ಅಂದಿ ದಾದಲ್ಯಾ ಈ ಮಾತಾ. ನಿಮ್ಮ ಆಚಾರೆಪ್ಪಾ

ಪೂಜಿಗೆ ಬರಾಗ ಮಾರಿಗೆ ಗಂಟ ಹಾಕ್ಕೊಂಡ್ಕ ಬರಾವ್ರು. ಹಂಗs ದುಸುಮುಸು ಮಾಡಿಕೊಂತನs ಹೋಗಾವ್ರು. ವಾಡೇದಾಗ ಹೈನ ಐತಿ. ತಿನಬಾರದs? ನಾವಿಬ್ಬರು ಏಟು ತಿಂದೇವು? ಮನ್ಯಾಗ ಪಾರಗೋಳ ಅದಾವು. ಮಸರಾ, ಮಜ್ಜಿಗಿ ಒಯ್ಯಿರಿ ಅಂತ ಹೆಪ್ಪ ಹಾಕಿದ ಭಾಂಡೇ ಇಟ್ಟರ, ಅದರ ಕಡೇ ನೋಡಿದರ ಆಣಿ. ಅವರ ಸಿಟ್ಟಾ ಇನಾ ಇಳದಿಲ್ಲಂತ, ನಾನs ನಕ್ಕು ಭಾಂಡೇ ತಗದ ಇಡಬೇಕು. ಇವರ ಜೋಡಿ ಅಡ್ಡ ಬೆಂಕಿ ಹಾಯಾಂಗಿಲ್ಲಾ. ನಾ ಏನ ಮಾಡೀನಿ ಆಚಾರೆಪ್ಪಗ? ನನ್ನ ಜೊಡೀನೂ ಹಾಗs ಮಾಡತಾರ."

"ಬಸವಂತೀ, ಗೋವಿಂದಭಟ್ಟಾ ಹಟೀ ಇದ್ದಾನ. ಅವನ ಉಸಾಬರೀನs ಮಾಡಬ್ಯಾಡಾ. ತಿಂಗಳ ದೀಡ ತಿಂಗಳಾ ಅಂವೇನು ಇಕಡೆ ಹಾಯೂದೇ ಇಲ್ಲಾ. ನಾನs ಬರತೀನಿ ಪೂಜಿಗೆ. ನೀ ಏನು ಅವನ ಮಾತು ಮನಸ್ಸಿಗೆ ಹಚಿಗೋಬ್ಯಾಡಾ. ಗೋವಿಂದಭಟ್ಟಾ ಏರಿದಾಗೊಂದು – ಇಳದಾಗೊಂದು. ಅವನ ಮನಸ್ಸೇನು ಕೆಟ್ಟದಲ್ಲಾ. ಏನರs ಒಂದ ತಪ್ಪ ಕಲ್ಪನಾ ಮಾಡಿಕೊಂಡಿರತಾನ. ನೀನೂ ಅದನ್ನ ಮರತಬಿಡು."

"ದಾದಲ್ಯಾ, ನಿನಗೂ ಇಲ್ಲೀ ಬಾತಮಿ ತಿಳಿದಿರಬೇಕಲಾ? ಗಾಳಿ ಕೊಂಬ ಹೊಡಧಾಂಗ, ನಾ ವಾಡೇ ಹೊಕ್ಕ ಸುದ್ದಿ, ದುಮದುಮಿಸಿಬಿಟ್ಟೈತಿ. ಯಾರಿಗೇನು ಅರೀದ ಮಾತಾ ಅನ್ನಾಂಗಿಲ್ಲಾ. ನೀ ವಾಡೇದ ಆಚಾರೆಪ್ಪಾ. ಇವರ ಯಿಸ್ವಾಸ ದಂವಾ ಬ್ಯಾರೇ. ನಿನಗ ಹೇಳಾಕ ಮುಚ್ಚುಮರೀ ಯಾಕs? ಖರೇವಂದರ, ದಾದಲ್ಯಾ, ಇಲ್ಲೆ ಬಂದಾನ ಸುಟೂ ಎಲ್ಲಾ ಮರಿಯೂದ ನಡದೈತಿ. ಹೊರಗಿನ ಮಂದಿ-ಮಕ್ಕಳು, ಅಣ್ಣ-ತಮ್ಮದ್ಯಾರು, ಎಲ್ಲಾರ್ನೂ ಮರತs ಇಲ್ಲಿ ಬಂದು ಸೇರಿಬಿಟ್ಟೀನಿ. ಹೊರಗ ಹೋದರ ನಾನೂ ಅವರೂ ಕೂಡೇನ ಹೋಗಬೇಕು. ಇಲ್ಲದಿರಕ ನನ್ನ ಹೆಣಾನರs ಹೊರ್ಯಾಕ ಹೋಗಬೇಕು. ನನಗ ಬ್ಯಾರೇ ದಾರೀನs ಉಳದಿಲ್ಲಾ. ಇದ್ದ ದಾರಿಗಿ ಕಟಗಳ್ಳೀನs ಬಡದ ಬಂದೀನಿ. ಅವರು ಕಡೆತನಕಾನೂ ಹಿಡದಾರು ಅನೂ ಭರೋಸದಲೇನs ಬಂದೀನಿ......"

ಬಸವಂತಿಯು ಮಾತು ಇನ್ನೂ ಮುಗಿದಿರಲಿಲ್ಲ. ಅಡುಗೆಯು ಗುಂಡ್ಯಾ, ತಮ್ಮಾಜಿಯು ಹೆಸರಿಗೆ ಬಂದ ಶ್ಯಾಮರಾಯನ ಕಾಗದ ತೆಗೆದುಕೊಂಡು ಬಂದ. ಶ್ಯಾಮರಾಯ ನಾಲ್ಕು-ಐದು ದಿನ ಬೆಳಗಾಂವಿಯಲ್ಲಿ ನಿಂತು, ಜರೂರಿಯ ಕೆಲಸದ ನಿಮಿತ್ತ, ಪುಣೇ, ಮುಂಬೈಗೆ ಹೋಗಿಬರುತ್ತೇನೆ; ತಿರುಗಿ ಬರಲು ಹತ್ತು-ಹನೆರಡು

ದಿನ ಬೇಕಾದಾವು, ಮನೆಯ ಕಡೆಗೆ ಕಾಳಜೀ ಇರಲಿ ಎಂದು ಬಸವಂತಿಗೆ ತಿಳಿಸ ಬೇಕೆಂದು ಬರೆದಿದ್ದ. ಬಸವಂತಿ ಪತ್ರದ ಒಕ್ಕಣಿಕೆಯನ್ನು ಕೇಳಿ—

"ಈಗನರs ನಾ ಹೇಳಿದ್ದೆ ದಾದಲ್ಯಾ, ಅಂವರದು ಹೀಂಗs ಅಂತs. ಹೋದರ ಆಚೀಕಡೇನs, ಬಂದರ ಈಚಿಕಡೇನs. ಮನಸs ಠಿಕಾಣೇದ ಮ್ಯಾಗ ಇರ್ಲ್ಹಾಂಗಿಲ್ಲಾ. ಅವರ ಜಿಂವಾ ಪುನೇದಾಗಿನ ಮಂದೀ ಸುತ್ತs ಸುಳೀತಿರೂದು ವಾಜಿಮಿ. ಕರಳ ಎಳತಾ ಯಾರಿಗಿಲ್ಲ ದಾದಲ್ಯಾ? ಇಲ್ಲೆ ಗುಂಡಪ್ಪ ಇರತಾನ, ಕಮತಿಗ್ಯಾ ಅದಾನ, ಆಳನೂ ಇರತಾವ. ಯಾತರದೇನ ಝುಲ್ಲ ಇಲ್ಲ ಖರೇ. ನಿನಗೂ ಸವಡ ಇದ್ದರ, ರಾತ್ರೀ ಇಲ್ಲೇ ಪಾರೇಕ ಬಾ, ದಾದಲ್ಯಾ. ಅಂದರ ನನಗ ಅಂಜಿಕಿರ್ಲ್ಹಾಂಗಿಲ್ಲಾ. ಅವರು ಬರೂ ಮಟಾ, ನಂದಂತ ಈ ದಗದಾ ಮಾಡು."

"ಅದಕ್ಯಾಕ ಇಷ್ಟ ಹೇಳೂದು ಬಸವಂತೀ? ವಾಡೇ, ಶ್ಯಾಮರಾಯರು, ನೀನು, ನನಗ ಹೊರಗಿನವರೇನು? ಮನ್ಯಾಗ ಮಲಗೂದs ಇಲ್ಲೆ ಬಂದ ಮಲಗ ತೀನಿ. ನೀಯೇನ್ ಕಾಳಜೀ ಮಾಡಬ್ಯಾಡಾ."

ಪೂಜೆಗೆಂದು ಬಂದ ದಾದಲ್ಯಾ, ವಾಡೆಯ ಪಹರೆಯ, ಬಸವಂತಿಯ ಕೂಡ ರಾತ್ರಿಸೂಕ್ತದ ಹರಟೆಯ ಔತಣ ಪಡೆದುಕೊಂಡು, ಪೂಜೆ ಬಗೆಹರಿಸಿ ಗುಡಿಗೆ ನಡೆದ.

ಬಸವಂತಿಗೆ ಮಾತುಕೊಟ್ಟಂತೆ, ಅಂದಿನಿಂದಲೇ ನನ್ನ ವಾಡೆಯ ವಾಸ್ತವ್ಯ ಸುರುವಾಯಿತು. ಹಗಲು ಪೂಜೆಯ ನಿಮಿತ್ತದಿಂದ, ಊಟದ ಪೊರ್ತೆ, ಮನೆಗೆ ಹೋಗುತ್ತಿದ್ದೆ. ರಾತ್ರಿಯ ಊಟ ಮುಗಿಯುವದಷ್ಟೇ ಪುರಸೊತ್ತು, ವಾಡೆಗೆ ಬಸವಂತಿಯ ಸಾನ್ನಿಧ್ಯಕ್ಕೆ ಧಾವಿಸುತ್ತಿದ್ದೆ. ಮೂರು-ನಾಕು ದಿನಗಳ ನನ್ನ ಈ ಹೋಗು-ಬರುವ ವ್ಯವಹಾರದಿಂದ, ಸಹವಾಸ-ಸಾಮಿಪ್ಯದಿಂದ, ನನ್ನ ಮತ್ತು ಬಸವಂತಿಯ ಬಳಕೆ ಮಾತ್ರ ಘನ ಜಮಾಸಿತು.

ಮಾತಿನಲ್ಲಿ ಬಸವಂತಿ ಕೂಡ ಅಸನರಿ ಅಲ್ಲ. ರಾತ್ರಿಯ ಪಾಳಿಗೆ ನಾನು ಹೋದಾಗ ಇನ್ನೂ ಬಸವಂತಿಯ ಊಟವಾಗಿರುತ್ತಿರಲಿಲ್ಲ. ಅದೇ ಕೂಡುವ ಬೇತಿ ನಲ್ಲಿ ಇರುತ್ತಿದ್ದಳು. ಅವಳು ಒಲೆಯಿಂದ ಒಂದಿಷ್ಟು ಅನತಿದೂರದಲ್ಲಿ ತನ್ನ ತಾಟಿಟ್ಟುಕೊಂಡು ಕುಳಿತರೆ, ನಾನು ಅವಳ ಅಡುಗೆಯಮನೆಯ ಬಾಗಿಲ ಹೊಸ್ತಿಲ ಮೇಲೆ ಧ್ವಜ ಹಾಕುತ್ತಿದ್ದೆ.

"ಊಟಾತೇನ ದಾದಲ್ಯಾ? ಒಂದ ರೊಟ್ಟಿ ತಿಂತಿದ್ದರ ನೋಡು. ಎಣೆಗಾಯಿ ಐತಿ ಓಣಗ್ಗೀ."

ಬಸವಂತಿ ಕೇಳದೆ ಬಿಡುತ್ತಿರಲಿಲ್ಲ.

"ನನ್ನ ಊಟ ಆದದ್ದು ಗೊತ್ತ ಇದ್ದs ಔತ್ನಾ ಕೊಡತೀ ಬಸವಂತೀ. ದಾದಲ್ಯಾ ಎಲ್ಲ್ಯರs ತಟ್ಟಸs ಎಲೀ ಮ್ಯಾಲ ಬಂದು ಕೂತಾನಂತ ಅಂಜಿಕಿ! ಬದ್ನೀಕಾಯೀ ಎಣಿಗಾಯಿ, ಕೈ ಮ್ಯಾಲಿನ ಭಕ್ಕರಿ, ತಿಂದರ ತಿನಬೇಕು, ಅಣ್ಣಾ ಅವರ ಮನ್ಯಾಗನs. ಹಾರೂರಿಗೆ ಎಲ್ಲಾ ಸಾಧಿಸ್ತ್ಯು. ಇವರಡ ಮಾತ್ರ ಜಮಾಸ ಲಿಲ್ಲ ನೋಡ ಬಸವಂತೀ. ಮುಂಜಾನೇ ಅಂದರ ಗಣಪತಿಪೂಜಿ ಇರತದ. ಇಲ್ಲೀ ಪೂಜಿ ಬಗೀಹರಿಸಿ ಅಲ್ಲಿಗೆ ಹೋಗಬೇಕು. ಇಲ್ಲದಿದ್ದರ ನನ್ನ ನೈವೇದ್ಯಾ ಇಲ್ಲೇ ಬಗೀ ಹರಸತಿದ್ದೆ. ಆಚಾರೆಪ್ಪಾ ಉಂಡನಂತ ದಕ್ಷಿಣಾನೂ ಕೊಡತಿದ್ದಿ..."

ನಾನು ಇನ್ನೂ ಮಾತನಾಡುತ್ತಿರುವಾಗಲೇ ಬಸವಂತಿ, ಯಾವ ಮಾಯ ದಿಂದಲೋ ಒಲೆಯಲ್ಲಿ, ಗೋವಿನ-ಜೋಳದ ತೆನೆಯನ್ನು ಹಾಕಿ ಸುಟ್ಟು, ಅದಕ್ಕೆ ಉಪ್ಪು-ತುಪ್ಪ ಸವರಿ —

"ಹಿಡೀ ದಾದಲ್ಯಾ, ನಾ ಒಂದ ರೊಟ್ಟೀ ತಿನೂದರಾಗ, ನೀನೂ ಬಗೀ ಹರಸು. ನನ್ನ ರೊಟ್ಟಿ ನಿನಗ ನಡ್ಯಾಂಗಿಲ್ಲಾ. ಇಲ್ಲದಿರಕ ನಿನ್ನ ಕುಲಗೆಡಿಸತಿದ್ನಿ."

ಬಸವಂತಿಯ ಊಟ, ನನ್ನ ಗೋವಿನ-ಜೋಳದ ಅಶ್ವಖಾದ್ಯ ಸಗಾಗವಾಗಿ ನಡೆದು ಮುಗಿಯುತ್ತಿದ್ದವು.

ಬಸವಂತಿ ವಾಡೆಯಲ್ಲಿ ಕಾಲಿರಿಸಿದ ದಿನ ಅಷ್ಟೇ, ಅಡುಗೆಯಮನೆಯಲ್ಲಿಯ ಒಲೆಯನ್ನು ಮುಟ್ಟಿದ್ದಳಂತೆ. ನಂತರ ಅದರ ಮಡಿಯನ್ನು ಮೈಲಿಗೆಗೊಳಿಸಲಿಲ್ಲ. ಹಿತ್ತಲುಮನೆಯ ಹಿಂಬಂದಿಯ ಈ ಕೋಣೆಯನ್ನು ತೆರವುಮಾಡಿಸಿಕೊಂಡು, ಅಲ್ಲಿ ತನ್ನ ಪುಟ್ಟ ಸಂಸಾರವನ್ನು ಹೂಡಿದ್ದಳು. ಅವಳ ಅಡಿಗೆ-ಅಂಬಲಿ, ಊಟ ಅಲ್ಲೇ ಆಗುತ್ತಿತ್ತು. ಕೋಣೆಯ ಒಂದು ಫಡತಾಳದಲ್ಲಿ, ಅವಳಿಗೆ ಸಾಕಾಗುವ ನಾಕೆಂಟು ಭಾಂಡೀ, ಒಂದು ಕಪ್ಪು-ಬಸಿಯ ಜೊಡು ಅಷ್ಟಿದ್ದರೆ, ಕೋಣೆಯ ಒಂದು ಮೂಲೆ ಯಲ್ಲಿ ಕುಡಿಯುವ ನೀರಿನ ಲಕಲಕಿಸುವ ಹಿತ್ತಾಳಿಯ ಕೊಡ, ಅದರ ಮೇಲೊಂದು ಚರಿಗಿ, ಚಂಬೂ, ಗೂಟಕ್ಕೊಂದು ಸುರಳಿ ಸುತ್ತಿಟ್ಟ ಹುಲ್ಲಿನ ಚಾಪೆ. ಇದರ ವಿನಾ ಅನ್ಯ ಯಾವ ಸಾಮಾನು-ಸರಂಜಾಮು ಅಲ್ಲಿ ಜಾತ್ರೆ ನೆರೆಸಿರಲಿಲ್ಲ. ಅವಳು ಅಡಿಗೆ ಮಾಡಿಕೊಳ್ಳುತ್ತಿದ್ದ – ಇದ್ದಲಿಯ ಒಲೆಯೂ ಕೂಡ, ಕೋಣೆಯ ಹೊರಗೆ ಎಲ್ಲಿಯೋ ಇರುತ್ತಿತ್ತು. ಹೊಗೆ, ಇಲ್ಲಣದ ಕಪ್ಪು ಅಡರಿ ಕೋಣೆಯ ಮುಖ ಮುಖಾಳವಾಗಿರಲಿಲ್ಲ. ಕಳೆದ ಒಂದು ವರುಷದಿಂದ ಬಸವಂತಿ ಈ ಕೋಣೆಯಲ್ಲಿ

ವಾಸ್ತವ್ಯ ಮಾಡುತ್ತಿದ್ದರೂ, ತಾನು ಅನಿಕೇತ, ಅನಂತ ಪ್ರವಾಸಿ ಎನ್ನುವ ಧರ್ತಿ ಯಲ್ಲಿದ್ದಾಳೆ.

ಇನ್ನೂ ನಸುಕು ಚಿಮುಕಿಸಿರುವದಿಲ್ಲ; ಬಸವಂತಿ ಏಳುತ್ತಾಳೆ. ಪ್ರಾತರ್ವಿಧಿ ಮುಗಿಸಿ, ಹಿತ್ತಲಲ್ಲಿಯ ಸೇದುವ ಭಾವಿಯಿಂದ ನೀರು ಜಗ್ಗಿಕೊಂಡು ಮೈತೊಳೆದು ಕೊಳ್ಳುತ್ತಾಳೆ. ಹಸಿಗೂದಲು ಬೆನ್ನ ಮೇಲೆ ಸಾಂದ್ರವಾಗಿ ಇಳಿಬಿದ್ದಿರುತ್ತದೆ. ಆದನ್ನು ಆರಬಿಟ್ಟು, ಬಾಳೆಯ ಎಲೆಯ ಒಂದು ದೊಡ್ಡ ಘಡಕಿನಲ್ಲಿ, ಹಿತ್ತಲಲ್ಲಿಯ ಹೂ-ತುಳಸಿ ಹರಿದು ತಂದು, ದೇವರಮನೆಯ ಬಾಗಿಲಲ್ಲಿ ಪೂಜೆಗೆಂದು ಇರಿಸು ತ್ತಾಳೆ. ಹೊರಬಾಗಿಲಲ್ಲಿ ನಿಂತೇ ಪಂತರ ಮನೆಯ ದೇವತಾವೃಂದಕ್ಕೆ ಕೈಮುಗಿಯು ತ್ತಾಳೆ. ಆನಂತರ ತನ್ನ ಈ ಅಡುಗೆಯ ಮನೆಯ ಕೋಣೆಗೆ ಬಂದು ಒಂದು ಕಪ್ಪು 'ಚಾ' ಇಳಿಸುತ್ತಾಳೆ. 'ಚಾ' ಬಗೆಹರಿಸಿ, ಶ್ಯಾಮರಾಯ ಊರಲ್ಲಿದ್ದರೆ, ಅವನ ಊಟದ ತಯಾರಿಗೆ, ಅಡುಗೆಯ ಗುಂಡ್ಯಾನಿಗೆ ಸೀದಾ-ಸಾಹಿತ್ಯವನ್ನು ಸಿದ್ಧಪಡಿಸಿ ಕೊಡುತ್ತಾಳೆ. ಬಸವಂತಿ ನಿತ್ಯ ತಾನೇ ನಳಪಾಕ ಸಿದ್ಧಪಡಿಸಿ ಶ್ಯಾಮರಾಯನನ್ನು ಆಕಂಠಪೂರ್ತಿ ಉಣ್ಣಿಸುತ್ತಿದ್ದಳು. ಆದರೆ ಅವನು ಬಣಜಿಗರ ಕೈಯೋಗರವನ್ನು ಭುಂಜಿಸುವ ಗಮಗಮಾಟ ಊರಲ್ಲಿ ಹರಡದೆ ಬಿಡುತ್ತಿರಲಿಲ್ಲ. ಆಕಾರ ಕೆಟ್ಟರೂ ಆಚಾರ ಕೆಡಿಸಿಕೊಳ್ಳುವ ಧೈರ್ಯ ಶ್ಯಾಮರಾಯನಲ್ಲಿರಲಿಲ್ಲ.

ವಾಡೆಯಲ್ಲಿ ಕಾಲಿರಿಸಿದ ನಂತರ ಬಸವಂತಿಯಲ್ಲಿ ವಿಪರೀತ ಬದಲಾವಣೆ ಯಾಗಿದೆಯೆಂದು ಪರಸ್ಯಾ, ಬಂಡ್ಯಾನಂತಹ ಚವಲಿ-ಪಾವಲಿ ಇಸಮುಗಳು ಹೇಳುವವದರಲ್ಲಿ ಅಷ್ಟೇನೂ ಮಹತಿ ಇರದಿದ್ದರೂ ರಾಚಪ್ಪನಂತಹ, ರಾಣೀ ಛಾಪಿನ ಗಟ್ಟಿಬೆಳ್ಳಿಯ ರೂಪ್ಯಕದಂತಹ ಗಿರಾಕಿಯೂ ಹೇಳುತ್ತಿದ್ದುದರಲ್ಲಿ ತಥ್ಯಾಂಶ ಇರಲೇಬೇಕು. ಶ್ಯಾಮರಾಯನ ಕುಬೇರ-ವೈಭವದಿಂದ ಅವಳ ಮೈ-ಕೈ ಅಲಂಕೃತ ವಾಗಬಹುದಿತ್ತು. ತೆನೆ ತಿರುವಿದ ಇಳಕಲ್ಲ ಶೀರೆಯಿಂದ ಅಂಗಾಗ ವಿಭೂಷಿತವಾಗ ಬಹುದಿತ್ತು. ವಸ್ತ್ರ-ವಸ್ತ್ರವಿನ್ಯಾಸದ ವಿವಿಧ ಪಾಂಗಿನಲ್ಲಿ, ಬಸವಂತಿ 'ಫ್ಯಾಶನ್ ಪರೇಡ್' ನಡೆಸಬಹುದೆಂದು ಬಹಳ ಜನ ಕಾಯಾಸ ಕಟ್ಟಿತ್ತು.

ಆದರೆ ಬಸವಂತಿ ಅವರ ಕಾಯಾಸದ ಗಾಳಿಹುಡೆಯನ್ನು ಕೇವಲ ಒಂದು ಮೆಲ್ಲುಸುರಿನ ಸುಳಿಯಿಂದ ಕೆಡವಿದ್ದಳು. ಕಾರಣ, ಎರಡು ಬೆರಳಳತೆಯ, ಅರಿಷಿಣ ಇಲ್ಲ ತಿಳಿನೀಲ ಅಂಚಿನ, ನೂಲಿನ ಬಿಳಿಯ ಶೀರೆಯ ವಿನಾ ಅವಳು ಬೇರೆ ಶೀರೆ ಯನ್ನು ಉಟ್ಟಿದ್ದನ್ನು ಯಾರ ಕಣ್ಣೂ ಕಾಣಲಿಲ್ಲ. ಅವಳ ಪೂರ್ವದ ಯಜಮಾನ

ಇನ್ನೂ ಹಯಾತನಿದ್ದ. ಆ ಕಾರಣವಾಗಿ, ಒಂದು ಕರಮಣಿಯ ಸರ, ಕೊರಳಲ್ಲಿ ನೇತಾಡುತ್ತಿತ್ತು. ಮುಂಗೈಯಲ್ಲಿ ನಾಕು ಕಾಜಿನ ಬಳೆ ತೊಡಕಿದ್ದವು. ಗುಂಜಿ ಭಾರದ ಬಂಗಾರವೇನೂ ಅವಳ ಮೈಮೇಲೆ ಇರಲಿಲ್ಲ.

ಬಸವಂತಿ ಊಟಕ್ಕೆ ಕೂತರೆ ಕೇವಲ ಎರಡೇ ಎರಡು ಭಕ್ಕರಿ – ಒಂದು ತುಪ್ಪದ ಕೂಡ, ಇನ್ನೊಂದು ಮಜ್ಜಿಗೆಯ ಕೂಡ – ತಿನ್ನುವದನ್ನು ನೋಡಿ ವಿಚಿತ್ರವೆನಿಸಿ —

"ಬಸವಂತೀ, ಅನ್ನಾ-ಪಿನ್ನಾ ಮಾಡೂದಿಲ್ಲೇನು? ಒಣ ಒಣಾ ಭಕ್ಕರೀ ವ್ಯಾಲs ಬಗೀಹರಸತೀಯಲಾ? ರಕರಕಾ ಆಗೂದಿಲ್ಲೇನು?"

ಎಂದು ಕೇಳಿದೆ. ಬಸವಂತಿ ತನ್ನ ನೇಹಮಿಯ ಮುಗುಳುನಗೆಯುರಳಿಸಿ —

"ಅನ್ನಾ ಉಂಡರ ವಾತ ಹಿಡಿತೈತಿ ದಾದಲ್ಯಾ. ಮಸರಾ-ಕೆನೀಗಿ ಮದಾ ಬರತೈತಿ. ಮೈ-ಮನಸಾ ಕೈಯಾಗ ಇರಬೇಕಂದರ ಸಿಕ್ಕಾಂಗ ಬಾಯಿ ಆಡಸ ಬಾರದು. ಜರಾ ನಿಗಾ ಇರಬೇಕ ನಾಲಗೀಮ್ಯಾಗs. ನೀವು ನೋಡು, ಹ್ಯಾಂಗ ಹೆಡಿಗಿ ಅನ್ನಾ, ಗಡಿಗಿ ತುಪ್ಪಾ, ಆದರೂ ಸಾಲಾಂಗಿಲ್ಲಾ. ಸುಮ್ಮಕ ಅಂತಾರ ಮಂದಿ. ತುಪ್ಪಾ ತಿನೂ ತೆಲೀ ಅಂತs. ತಲ್ಯಾಗ ಜಿಡ್ಡ ಬೆಳೀತೈತಿ."

ಎಂದು ಹೇಳಿ, ಆಹಾರ-ಪಾನೀಯ, ಶರೀರ-ಸಂಗೋಪನದ ಮೇಲೆ ತನ್ನ ಭಾಷ್ಯ ಮಾಡುತ್ತಿದ್ದಳು.

"ಏನs ಅನ್ನು ಬಸವಂತಿ, ಶ್ಯಾಮರಾಯರು ಒಬ್ಬೊಂಟಿಗ್ಯಾರ ಆಗಿ, ಊಟಾ-ಉಡಿಗ್ಯಾಗ ಹಲಾಕ ಆಗತಿದ್ದರು. ದೇವರs ನಿನ್ನs ಅವರ ಕಾಳಜೀ ತಗೊಂಬೂದಕ್ಕ ಕಳಿಸಿಧಾಂಗ ಆತು."

"ದಾದಲ್ಯಾ, ನನ್ನೇನ ಕಳಸ್ಯಾನ ದೇವರಾ? ಕೆರೀ ನೀರ ಕೆರೀಗೆ ಹಾಕೂ ವ್ಹಾರೇ ನಂದು. ನಾ ಏಟ ಮಾಡಿದರೂ ಏನು? ಅವರ ಮನೀ-ಮಂದಿ ಮಾಡಿ ಧಾಂಗ ಆದೀತs? ತಿಂಗಳದಾಗ, ನಾಕ ದಿನಾನರs ಪುನೇಕ ಹೋಗಿಬರದಿದ್ದರ ಅವರಿಗೆ ವೈನs ಅನಸ್ಹಾಂಗಿಲ್ಲಾ. ಏಟಾದರೂ ಆ ಎಳತs ಬ್ಯಾರೇ, ನಂದ ಬ್ಯಾರೇನs! ಅದು ಜೇನ ಹುಟ್ಟ ಕಟ್ಟಿಧಾಂಗ! ನಾ ಕಣಕಪ್ಪಡಿ ಜೋತಬಿದ್ಧಾಂಗ. ನನ್ನ ಆಸರಾ ಅವರಿಗೆ ಇಲ್ಲs ಇಲ್ಲಾ. ನಾನs ಅವರ ಆಸರಕ ಜೀಂವಾ ಹಿಡಿದೀನಿ."

ಬಸವಂತಿ ತೀರ ಸಹಜವಾಗಿ ಮಾತನಾಡಿದ್ದಳು. ಅದರಲ್ಲಿ ಏಚು-ಪೇಚು, ಒಳ-ಹೊರಗು ಇರಲಿಲ್ಲ. ಮಾತು ನೇರವಾಗಿ ಹೃದಯದಿಂದ ಚಿಮ್ಮಿ ಬಾದಂತೆ

ಇದ್ದವು. ಅವಳು ಕೊಟ್ಟ, 'ಜೇನ ಹುಟ್ಟು-ಕಣ್‌ಕಪ್ಪಡಿ'ಯ ಉಪಮೆಯಿಂದ ಅವಳ ನಿಲುವು, ಒಲವು, ನೆಲೆ ಹೊಳೆಯಲು ಅವಕಾಶ ಹಿಡಿಯಲಿಲ್ಲ. ಒಡಲ ನೂಲಿನಿಂದ, ದಾದಲ್ಯಾನ ವಿಚಾರ-ಜೇಡ, ಎಳೆಎಳೆಯಾಗಿ ನೂಲು ಬಿಡಿಸಿ ಜಾಲ ವನ್ನು ಹೆಣೆಯತೊಡಗಿತು.

"ಬಸವಂತಿಗೇನೋ ಭುಲತಾಪಿ ತುಂಬಿ, ಅಕೀ ಕಣ್‌ಕಟ್ಟ ಮಾಡಿರಬೇಕು ಶ್ಯಾಮರಾಯಾ"

ಎಂದು ರಾಚಪ್ಪ ಅಂದಾಜಿಸಿ ಹೇಳಿದ ಮಾತು ನೆನಪಾಯಿತು. ತಾನು ತಿಂಗಳಿ ಗೊಮ್ಮೆ ತಪ್ಪದೆ ಪುಣೆಯಲ್ಲಿಯ ತನ್ನ ಮಂಡಳಿಯ ಕಡೆಗೆ ಹೋಗಿ ಬರುವ ವಿಷಯವನ್ನು ಅವನು ಬಸವಂತಿಗೆ ಹೇಳಿದಂತಿತ್ತು. ಅದನ್ನು ಬಸವಂತಿ ಮನವಾರೆ ನಂಬಿರಲೂ ಸಾಕು. ಅವಳ ಪ್ರಾಂಜಲ ಮಾತು ಅದಕ್ಕೆ ಪ್ರತ್ಯಕ್ಷ ಸಾಕ್ಷಿ ಸಾರು ವಂತಿತ್ತು. ಬಸವಂತಿ ತೀರ ಸಹಜವಾಗಿ, ನಿರುದ್ದೇಶಪೂರ್ವಕವಾಗಿ ಈ ಗುಪಿತಕ್ಕೆ ಸಣ್ಣ ಖಿಂಡಿ ಕೆಡವಿದಳು. ಸುರಂಗ ಹಾಕಲು ಅನಾಯಾಸವಾಗಿ ಸುತಾಣ ದೊರ ಕಿತು. ದಾದಲ್ಯಾ ಮದ್ದು-ಬತ್ತಿ ಸನ್ನದ್ಧನಾಗಿಯೇ ಇದ್ದ. ಖಿಂಡಿಯ ಬಾಯಿಗೆ ಮದ್ದು ಜಡಿದು, ಬತ್ತಿ ಸೇರಿಸುವ ಸನ್ನಾಹ ಮಾಡತೊಡಗಿದ.

ಬಸವಂತಿ ಶ್ಯಾಮರಾಯನ ಕೇವಲ ರಖೇಲಿ, ಅವನ ಕೂಡ ಓಡಿ ಬಂದು ನಾಕು ದಿನ ಮಜಾ ಮಾಡಿ, ಖೊಟ್ಟಿ ಮುತ್ತಿನ ಮೂಗಬೊಟ್ಟು, ಒಂದು ಗುಂಡಿನ ಟಿಕ್ಕೆ, ನಾಕೆಂಟು ಚಂದ್ರಕಾಳೀ ಶೀರಿ, ಜರದ ಖಣ ಇಷ್ಟನ್ನೇ ಹಾರಿಸಿ, ಖುಷಿಯಾಗಿ, ದೇಹ ಕಾಯಕದ ಬೆಲೆ ಪಡೆದು, ಒಬ್ಬರನ್ನು ಖುಷಿಯಾಗಿಸಿ, ತಾನೂ ಸಂತೃಪ್ತ ವಾಗುವ ಅಲಗರ್ಜಿ ಜಾತಿಯ ಹೆಣ್ಣಲ್ಲವೆಂದು ಖಾತ್ರೀಯಾಯಿತು. ಮೂರು ದಿನ ಗಳಲ್ಲಿ ಹಾರಿಹೋಗುವ ಬೇತಿನಿಂದ ಬರುವ ಹೆಣ್ಣಿಗೆ ಇಲ್ಲದ ದಿಮಾಕು ಬಹಳ. ಬಂದ ಒಂದೇ ದಿನದಲ್ಲಿ ಸಾಮ್ರಾಜ್ಞೀಶಾಹಿ ನಡೆಸುವ ಹವ್ಯಾಸ ಅವಕ್ಕಿರುತ್ತದೆ.

ಆದರೆ ಬಸವಂತಿ……

ಬಸವಂತಿಗೆ ಏನೂ ಇಲ್ಲ! ಅವಳೆದುರು ಶ್ಯಾಮರಾಯನ ಕುಬೇರ-ವೈಭವ ಸಂಪತ್ತು ಚೆರಗ ಚೆಲ್ಲಿದೆ. ಆದರೆ ಬಸವಂತಿ, ಎಡಗಾಲಿನ ಹೆಬ್ಬೆರಳಿನಿಂದ, ಈ ವೈಭವಶ್ರೀಯನ್ನು ಚಿಮ್ಮಿಬಿಟ್ಟಂತಿದ್ದಳು.

ಎರಡು ಬೆರಳಳತೆಯ ಅರಿಷಿಣ, ತಿಳಿನೀಲ ಅಂಚಿನ ನೂಲಿನ ಶೀರೆ– ಅದೂ ಅಚ್ಚ ಬಿಳಿಯದು, ಶುಭ್ರಧವಲವಾದದ್ದು, ತನ್ನ ಕಮನೀಯಕಾಯ

ರಕ್ಷಣೆಗೆ ಸಾಕೆಂದಳು. ತನ್ನ ಜಾತಿ-ಮತ-ಪಂಥದ ಸೀಮೋಲ್ಲಂಘನ ಮಾಡಿ, ಪಂತರ ಮನೆಯ ದೇವರನ್ನು ತನ್ನ ದೈವತವನ್ನಾಗಿ ಮಾಡಿಕೊಂಡಳು. ತನ್ನ ಜಾತಿಯೇ ವಿಜಾತಿಯಾದಾಗ ಯಾರ ದೇವರು ತನಗೇನು? ಎಲ್ಲಾ ಒಂದೇ ಎಂಬ ಭಾವನೆ ಬಂದಿರಬೇಕು ಅವಳಲ್ಲಿ. ಶ್ಯಾಮರಾಯನ ದೇವರೇ ತನ್ನ ದೇವರೆಂಬ ನಂಬಿಗೆ ಇರಬೇಕು. ಆ ದೇವರಿಗೆ ಮೈ-ಕೈ ಇಲ್ಲದೆ, ಪವಿತ್ರಳಾಗದೆ ಹೂ-ಪತ್ರಿ-ತುಳಸಿ ತಂದಿಡುವದಿಲ್ಲ. ಹಿತ್ತಲಲ್ಲಿಯ ದೊಡ್ಡ ತುಲಸೀವೃಂದಾವನದ ಕಟ್ಟೆಯನ್ನು ಗೋಮಯದಿಂದ ಸಾರಿಸಿ, ರಂಗವಲ್ಲಿಯ ನಕ್ಷತ್ರವಿಡುತ್ತಾಳೆ. ವಾಡೆಯ ದೊಡ್ಡ ಹೊಸ್ತಿಲನ್ನು ಗೋಮಯದಿಂದ ತಿದ್ದಿ-ತೀಡಿ, ರಂಗವಲ್ಲಿಯ, ಅರಿಷಿಣ-ಕುಂಕುಮದ ಕಲಾ-ಕುಸುರಿ ಹೆಣೆಯುತ್ತಾಳೆ. ಶ್ಯಾಮರಾಯನ ಆಹಾರ-ವಿಲಾಸ ಆಳವಡಿಸಿದರೂ, ಮೈ ವಾತಹಿಡಿಯುವ ಕಾರಣದಿಂದ ತಾನು ಮಾತ್ರ ಎರಡೇ ಎರಡು ಭಕ್ಕರಿಯಿಂದ ಹಸಿವು ಹಿಂಗಿಸಿಕೊಳ್ಳುತ್ತಾಳೆ.

ರಾಧಾಕಾಕೂ ಇದ್ದರೆಂದು, ಅವರು ಒಡಹುಟ್ಟಿದ ತಂಗಿಯಂತೆ ನೋಡಿದರೆಂದು, ಗಿರಿಜಾ ಈ ಮನೆಯಲ್ಲಿ, ವಾಡೆಯಲ್ಲಿ ನಿರಾತಂಕವಾಗಿ, ನಿರ್ಭಿಡೆಯಿಂದ ಅಲೆಯುತ್ತಿದ್ದಳು. ಪಂತರ ಮನೆಯವರು ಭೋಗಿಸಿದ, ಭೋಗಿಸುತ್ತಿದ್ದ ಸರ್ವ ಸುಖೋಪಭೋಗಗಳನ್ನೂ ಅಧಿಕಾರದಿಂದ, ವಾತ್ಸಲ್ಯ-ಪ್ರೀತಿಯ ಆಧಾರದಿಂದ ಪಡೆದಳು – ಇನ್ನೂ ಭೋಗಿಸುತ್ತಿದ್ದಾಳೆ. ಗಿರಿಜಾ ಎಂದೂ ಯಾವ ಕಾಯಕಷ್ಟವನ್ನು ಅನುಭವಿಸಲಿಲ್ಲ. ರಾವಜೀಕಾಕಾ ಅವರ ಅನಭಿಷಿಕ್ತ ಸಾಮ್ರಾಜ್ಞಿಯಾಗಿ ವಾಡೆಯಲ್ಲಿ ಮೆರೆದು, ಅವರ ಮೇಲೂ ಪ್ರೀತಿಯ – ಆತ್ಮೀಯತೆಯ ಅಧಿಕಾರ ನಡೆಸಿದಳು – ಇಂದಿನ ಮಿತಿಗೂ ನಡೆಸುತ್ತಿದ್ದಾಳೆ... ಆದರೆ ಬಸವಂತಿ...

ಬಸವಂತಿಗೆ ಇಲ್ಲಿ ಸಾಮ್ರಾಜ್ಞೀಪಟ್ಟವಿದೆ. ಅಧಿಕಾರದ ಪದವಿದೆ. ಆದರೂ ಬಸವಂತಿ ವಿರಾಗಿಯಾಗಿದ್ದಾಳೆ. ಶ್ಯಾಮರಾಯನಿಗೆ ಒಲಿದೂ, ವಾಡೆಗೆ ಸಂಬಂಧಿಸಿಯೂ ಘನ ನಿರ್ಲಿಪ್ತ-ಜೀವನ ಸಾಗಿಸುತ್ತಿದ್ದಾಳೆ. ಅವಳಿಗೆ ಶ್ಯಾಮರಾಯ, ವಾಡೇ, ಅವರ ಕ್ಷೇಮಚಿಂತನ ಅಷ್ಟೇ ಕಾಣುವಂತಿದೆ. ಬಸವಂತಿ ತನ್ನನ್ನು ಮರೆತಿದ್ದಾಳೆ. ಯಾಕಿರಬೇಕು?

ದಾದಲ್ಯಾ, ಸೋನಕ್ಕನ ವನವಾಸ ಮುಗಿಯುತ್ತದೆ. ಶ್ಯಾಮರಾಯ ನತಶಿರನಾಗುತ್ತಾನೆ. ಕಾಕಾ ಸುಖಿಯಾಗುತ್ತಾರೆ; ನಿನ್ನ ವಿಶ್ಯಾ - ವಸೂನ ಮಂಗಳ ಸಾಧಿಸುತ್ತದೆ. ಪಂತಕುಟುಂಬದ ಗ್ರಹಣ ಬಿಡುತ್ತದೆ. ವಾಡೆಯ ದೀಪ ಬೆಳಗು

ತ್ತದೆ. ಶಿವರಾಮಪಂತರ, ಗಂಗಾಧರಪಂತರ, ಲಕ್ಷ್ಮಣರಾವಜೀ ಅವರ, ರಾಧಾ ಕಾಕೂನ ಆತ್ಮಗಳು ಮುಕ್ತಿಲೋಕದಲ್ಲಿ ವಿಶ್ರಮಿಸುತ್ತವೆ. ಅವಕ್ಕೆ ಚಿರಶಾಂತಿ ದೊರಕುತ್ತದೆ. ದಾದಲ್ಯಾ, ಧೈರ್ಯ ಮಾಡು; ಬಸವಂತಿ ನಿನಗೆ ತೀರ ಹತ್ತಿರ ಬಂದಿದ್ದಾಳೆ. ತೀರ ವಿಶ್ವಾಸದಲ್ಲಿ ಬಂದಿದ್ದಾಳೆ. ಅವಳಿಂದ ನಿನಗೆ ನಕಾರ ಬರದು. ಬಸವಂತಿ ಕುಲಕ್ಕೆ, ಜಾತಿಗೆ ಹೊರತಾಗಿ ಬಂದ ಹೆಣ್ಣಾದರೂ, ಯಾವುದೋ ಅಗಮ್ಯ ಸಂಸ್ಕಾರಮಯ ಜೀವನ ಪಡೆದು ಬಂದ ಶಪಿತ ಊರ್ವಸಿಯಾಗಿದ್ದಾಳೆ. ಪಂತರ ವಾಡೆಯಲ್ಲಿ ನಿಂತು ತನ್ನ ತಪದ ಪುಣ್ಯವೆರೆದು ಶಾಪವಿಮೋಚಿತಳಾಗ ಬಂದಿದ್ದಾಳೆ. ರಾಧಾಕಾಕೂನ ವಾಸ್ತವ್ಯದಿಂದ ಪರಮಪವಿತ್ರವಾದ ಹರ್ಮ್ಯದಲ್ಲಿ ವಿಧಿ ಅವಳನ್ನು ಶಾಪಮುಕ್ತಿಗೆಂದು ತಂದಿಳಿಸಿದೆ.

ದಾದಲ್ಯಾ, ಸುರಂಗದ ಬಾಯಿಗೆ ಮದ್ದು ತುಂಬು ಬತ್ತಿ ಚಾಚಿ ಕಡ್ಡಿ ಗೀಚು. ಶ್ಯಾಮರಾಯನ ಮನೋಮಂದಿರ ಹಾರಿಸು. ಬಸವಂತಿ ನಿನ್ನ ನೆರವಿಗೆ ಬಂದಾಳು. ನಿನ್ನ ಬೆನ್ನಿಗೆ ಬಂದಾಳು. ಅವಳಿಗರಿಯದ ಒಂದು ಗುಪಿತ ನಿನಗೆ ಅವಗತವಾಗಿದೆ. ಅದರ ಅರಿವು ಬಸವಂತಿಗೂ ಆದರೆ – ದಾದಲ್ಯಾ, ನೀನು ಗೀಚಿದ ಉರಿಯನ್ನು ರಾಚುವ ಆ ಕಡ್ಡಿಯನ್ನು ಅವಳ ಕೈಯಲ್ಲಿ ಕೊಡು. ಬಸವಂತಿ ಖಚಿತವಾಗಿಯೂ ಕೊಳ್ಳಿ ಹಚ್ಚುತ್ತಾಳೆ. ಹಿಂಜರಿಯುವ, ಅಂಜುವ, ಅಧೈರ್ಯ ಪಡುವ ಎದೆ ಅವಳಿಗಿಲ್ಲ.

ಸಾಹೇಬರಿಗೆ, ರಂಗಕ್ಕನಿಗೆ ಶ್ಯಾಮರಾಯನ ಭಾನಗಡಿ ವಿದಿತವಾದರೆ ಅವನು ತಗ್ಗಿ-ಬಗ್ಗಿ, ತನ್ನ ಸ್ವಾರ್ಥಸಾಧಕತೆಗಾದರೂ, ನಮತೇ ಧೋರಣ ಸ್ವೀಕರಿಸ ಬಹುದೆಂಬ ಭರವಸೆಯಲ್ಲಿ ಅಷ್ಟು ಬಲವಿಲ್ಲ. ಈ ಸಾಹೇಬರಿರದಿದ್ದರೆ ಇನ್ನೊಬ್ಬರ ಕಡೆಗೆ ಅವನು ಧಾವಿಸಲು ಸಮರ್ಥನಾಗಿದ್ದಾನೆ. ಕೆಲಸಕ್ಕೆ ರಾಮ್ ರಾಮ್ ಮಾಡಿ, ಬಸವಂತಿಯನ್ನು ಕಟ್ಟಿಕೊಂಡು, ಇದ್ದ ಕುಬೇರಸಂಪತ್ತಿನಲ್ಲಿ ಜೀವಮಾನದುದ್ದಕ್ಕೂ ರಾಜವೈಭವದಿಂದ ಅವನು ಎಲ್ಲಿಯೂ ಇದ್ದು ಬದುಕಬಹುದಾಗಿದೆ. ಪುಣೆಯ ತನ್ನ ಸ್ವಂತ ಮನೆಯಲ್ಲಿ ನಿಂತು, ಕಾಕಾ – ಸೋನಕ್ಕ, ಹುಡುಗರ ಕಣ್ಣೆದುರಿನಲ್ಲಿಯೇ ಹೊಸ ಸಂಸಾರ ಹೂಡಬಹುದಾಗಿದೆ. ಸಾಹೇಬರೂ ಕೂಡ, ಸುರೇಶ ಒಬ್ಬನೇ ತಮ್ಮ ಮಗಳಿಗೆ ಅಳಿಯನಾಗಲೆಂದು ಹುಟ್ಟಿದ ವರನಲ್ಲವೆಂದು ಖಾತ್ರೀ ಆಗಿ, ಅನ್ಯ ಸಂಬಂಧ ಹೊಂದಿಸಿಕೊಳ್ಳುವ ಮಾರ್ಗ ನಿಷ್ಕಂಟಕವಾಗಿದೆ. ಆದರೆ ಅವರಿಗೂ ಶ್ಯಾಮರಾಯನು ಕೊಟ್ಟ ಅಪವಾದದಿಂದ ಮುಕ್ತಿ ಇಲ್ಲ. ಸೋನಕ್ಕನೂ ಇದರಿಂದ

ವಿಮೋಚಿತರಾಗರು. ಪಂತಕುಟುಂಬದ ಅವಕಳೆ ಅಳಿಸದು. ಈ ದಾರಿ ಅಷ್ಟು ಸುಗಮವಲ್ಲ. ಸಾಂದ್ರ – ಕಂಟಕದ ಕಲ್ಲು-ಮುಳ್ಳಿನ ಹಡದಿ ಹಾಸಿದೆ. ದಾರಿಯೂ ಸಾಗದು. ಗುರಿಯೂ ಸಾಧಿಸದು. ಆದರೆ ದಾದಲ್ಯಾ......

ಬಸವಂತಿ...

ಬಸವಂತಿ ಒಂದೇ ದಾರಿ.

ಶ್ಯಾಮರಾಯ ಅನಿಕೇತನಾದಾಗ, ಅವಿವೇಕಿಯಾದಾಗ, ಆತ್ಮೀಯತೆಯ ಬಯಕೆ – ಆಶೆಗೆ ಉತಾವಿಳನಾದಾಗ, ಬಸವಂತಿ ಅವನಿಗೆ ಆಸರಾಗಿದ್ದಾಳೆ. ಅವನಿಗೆ ಆತ್ಮೀಯತೆ ತೋರಿದ್ದಾಳೆ. ಬಸವಂತಿ, ಸೋತು-ಗೆದ್ದ ಶ್ಯಾಮರಾಯನ ಜೀವಕ್ಕೆ ಸ್ಪಂದನಶಕ್ತಿಯಾಗಿದ್ದಾಳೆ. ಎಲ್ಲ ದಾರಿಗಳೂ ಮುಚ್ಚಿಕೊಂಡಾಗ, ತನ್ನೆದೆಯ ಬಾಗಿಲನ್ನು ತೆರೆದು, ಶ್ಯಾಮರಾಯನನ್ನು ಸಂತೈಸಿ ಒಳಗೆ ಸ್ವಾಗತಿಸಿದ್ದಾಳೆ. ಬಸವಂತಿಗೆ ಸತ್ಯ ವಿದಿತವಾದರೆ ಒಂದು ಹೆಣ್ಣುಜೀವನದ ಸಂಕಟ ತಳಮಳ ಮನ ವರಿಕೆಯಾದರೆ ಹೆಣ್ಣ ಕಾರುಣ್ಯ ಕರಗಿ ಅವಳು ಸೋನಕ್ಕನನ್ನು ಸಂಕಟಮುಕ್ತ ಮಾಡಬಹುದು. ನೋಡು ದಾದಲ್ಯಾ, ಸಾಹಸ ಮಾಡು. ಗೆದ್ದರೆ ಸ್ವರ್ಗ – ಸತ್ತರೆ ಮೋಕ್ಷ. ಅನ್ನಋಣಕ್ಕೆ ಅಪವಾದವಾಗಬೇಡ.

ರಾವಜೀಕಾಕಾ ಅವರು ಕೂಡುತ್ತಿದ್ದ, ಗಾದಿಗಳನ್ನು ಜೋಡಿಸಿ, ಅವರ ತೆಕ್ಕೆಯನ್ನೇ ತಲೆಗಿಂಬುಮಾಡಿ ನಾನು ನನ್ನ ಸಜ್ಜಿಕೆಯನ್ನು ಸಜ್ಜುಗೊಳಿಸಿದೆ. ನನ್ನಿಂದ ಒಂದಿಷ್ಟು ದೂರದಲ್ಲಿ ಬಸವಂತಿ, ತನ್ನ ಹುಲ್ಲಿನ ಚಾಪೆಯನ್ನು ಬಿಡಿಸಿ ಕೊಂಡಳು. ತಿಕ್ಕಿ ಲಕಲಕಿಸುವ ತಂಬಿಗೆಯಲ್ಲಿ ನೀರು ತಂದು ನನ್ನ ತಲೆಯುದೆಸೆಗೆ ಇಟ್ಟಳು. ಶ್ಯಾಮರಾಯನು ಕೂಡುವ ಮೇಜಿನ ಮೇಲೆ, ಜರ್ಮನ್ ಸಿಲ್ವರಿನ ಲ್ಯಾಂಪು ಥಣಥಣ ಉರಿಯುತ್ತಿತ್ತು. ಆದನ್ನೊಂದಿಷ್ಟು ಸಣ್ಣದಾಗಿಸಿ, ಬಸವಂತಿ, ತಲೆತುಂಬ ಪೋಕ್ತವಾಗಿ ಸೆರಗೆಳೆದುಕೊಂಡು ತನ್ನ ಹಾಸಿಗೆಯಲ್ಲಿ ಕಾಲು ಚಾಚಿ ಕುಳಿತುಕೊಂಡಳು. ನಾನು ಒಂದು ತೆಕ್ಕೆಯನ್ನು ತೊಡೆಯ ಬುಡದಲ್ಲಿಟ್ಟುಕೊಂಡು, ಇನ್ನೊಂದನ್ನು ಬಗಲಿಗೆ ಆನಿಕೆಯಾಗಿ ಮಾಡಿಕೊಂಡು ನನ್ನ ಹಾಸಿಗೆಯಲ್ಲಿ ಕುಳಿತೆ. ವಾಡೆಯ ಪಡಸಾಲೆಯಲ್ಲಿ ನಾನು – ಬಸವಂತಿ ಇಬ್ಬರೇ ಇಬ್ಬರು. ಆಳು-ಕಾಳು ಬೇಸಿಗೆಯ ಧಗೆಯನ್ನು, ಶಕೆಯನ್ನು ತಾಳದೆ ಹೊರಗೆ, ವಾಡೆಯ ಪಟಾಂಗಣ ದಲ್ಲಿಯ ಕಟ್ಟೆಯ ಮೇಲೆ ಮಲಗಿದ್ದರು.

"ಯಾಕ ದಾದಲ್ಯಾ, ಸುಮಾಕನ್ಸ ಕುಂತೀ. ಇಂದ ಯಾಕೋ ನೀ ಜರಾ

ಮಾತ ತುಟ್ಟೀ ಮಾಡೀ. ನಿದ್ದಿ ಬಂತೇನು?"
ಎಂದು ಬಸವಂತಿ ನಗುನಗುತ್ತ ಕೇಳಿದಳು.

ದೀಪದ ಅಂಧುಕ-ಪ್ರಕಾಶ ಕಣ್ಣಿಗೆ ಹಿತಕರವಾಗಿತ್ತು. ಬಸವಂತಿ ಕುಳಿತ ರೀವಿ, ತಲೆತುಂಬ ಪೋಕ್ತವಾಗಿ ಎಳೆದುಕೊಂಡ ಸೆರಗು, ಆ ಸೆರಗಿನ ಅಂಚನ್ನು ಕಚ್ಚಿ, ಹಾಲುಗಲ್ಲಗಳನ್ನು ಮುತ್ತಿ, ಅವಳ ಮುಂಗುರುಳು ಮಂದ-ಮೃದು-ಸಮೀರನ ಕೂಡ ಆಡುವ ಲೀಲೆ, ಜೀವಚೇತೋಹಾರಿಯಾಗಿದ್ದವು. ಅಂಧುಕ-ಪ್ರಕಾಶ, ಅವಳ ಕೆಂದಾವರೆಯ ಬಣ್ಣದ ದುಂಡುಮಲ್ಲಿಗೆಯ ಮುಖದ ರಂಜಕತೆಯನ್ನು ಇನ್ನೂ ರಮ್ಯವಾಗಿಸಿತ್ತು. ಪಡಸಾಲೆಯ ಮೇಲ್ಬಾವಣೆಯ ಕಿಡಕಿಯಿಂದ ಉಲುಕೋಚಿ ಚಂದ್ರನ ಶೀತಲ ಕಿರಣ ತೂರಿ ಬಂದು ಅವಳ ಅಂಗಾಂಗವನ್ನು ಬೆಳಗಿಸಿತು. ಬಸವಂತಿಯ ಕಣ್ಣಲ್ಲಿಯ ದೀಪ್ತಿಗೆ, ತುಟಿಯಲ್ಲಿಯ ಮೇಖಲಾ-ವಿಲಾಸ-ಹಾಸಕ್ಕೆ ದಾದಲ್ಯಾ ಬೇಭಾನನಾದ. ಬಸವಂತಿ ಇಲ್ಲಿಯ ಹೆಣ್ಣಲ್ಲವೆಂದ...

"ಬಸವಂತೀ, ಖರೇ ಹೇಳಲೇನು. ನೀ ಬ್ಯಾರೇ ಏನೂ ತಿಳಕೋಬ್ಯಾಡಾ. ನೀ ನಿನ್ನ ಹಾಸಿಗಿ ವ್ಯಾಲ ಬಂದ ಕೂತಾಗಿನಿಂದೂ ನೋಡಲಿಕ್ಕೆಹತ್ತೀನಿ. ನಿನ್ನ ಮಾರಿ, ಆ ತೇಜಾ, ಆ ಕಣ್ಣಾ, ಅದರಾಗಿನ ಬೆಳಕಾ, ನನಗ ಅಂಜನಾನs ಹಾಕೇದ. ಬಸವಂತೀ, ಹುಡುಗತನದಲೇ ಹಿಂದಕ ಚ್ಯಾಷ್ಟೀಮಾಡಿದ್ದೆ, ಕಣ್ಣೂ ಹೊಡದಿದ್ದೆ. ಆಗ ಹೊಡದ ಕಣ್ಣಾ, ಇಂದ ನಿನ್ನ ನೋಡಿ, ತನಗ ತಾನs ಮುಚ್ಚಲಿಕ್ಕೆ ಹತ್ತ್ಯಾವ. ನೀ ನನಕಿಂತಾ ಹಿರ್‍ಯಾಕಿ. ಅಕ್ಕನ ಸಮಾನ ನನಗ. ಬ್ಯಾರೇ ಯಾ ಭಾವನಾನೂ ಬರಲಿಲ್ಲ ಬಸವಂತಿ ನನಗ. ಈ ತೇಜಾ, ಈ ಚಮಕಾ, ದೇವರು ನಿನಗ ಕೊಟ್ಟ ಮರತಾನ ಅನ್ನೊ ಭಾವನಾ ಬಂತು. ಅದನ್ನ ಆಡಿತೋರಸದs, ಮುಕಾಟ್ಲೇ ನೋಡಕೋತ ಕೂತಿದ್ದೆ. ಪಂತರ ಮನ್ಯಾಗ ಬಳವ ಹೊಗಲಿಲ್ಲಾ. ಲಕ್ಷ್ಮೀನs ಬಂದ್ಲಂತ ಧೇನಸ್ತಿದ್ದೆ."

"ದಾದಲ್ಯಾ, ಘನ ಶ್ಯಾಣ್ಯಾ ಆಗಿಯಾಂ ಮಾತಾಡೂದರಾಗ. ಮೂಕ ದೆವ್ವಿನ್ಹಾಂಗ ಈಟೊತ್ತನಕಾ ಕುಂತು ನಂದs ಇಚಾರ ನಡಿಸಿದ್ದೇನು? ನನಗ ಅಕ್ಕರದಲೇ ಅಕ್ಕಂತ ಕರದಿ ದಾದಲ್ಯಾ. ಜೇಂವಕ ಏನ ವೈನ ಅನಿಸ್ತ್ಯಂದೀ? ಜಿಂವಾ ಹಗರಾತು. ನನಗೂ ಮಾತಾಡಕ ಝುಲ್ಲಬಿಟ್ಟಿತು. ದಾದಲ್ಯಾ, ನಾ ಈ ಮನೀಗೆ ಬಂದೀನಿ ಖರೇ. ಲಕ್ಷ್ಮೀ-ಪಿಕ್ಷ್ಮೀ ಏನ ಆಗಿಲ್ಲಾ. ಅವರು ಇಂದಿಲ್ಲ ನಾಳೆ ಪುಣೇದ ಲಕ್ಷ್ಮಿನ್ನ ಕರಕೊಂಡ ಬರತಾರು. ಅವರs ಖರೇ ಲಕ್ಷ್ಮೀ. ಅವರ ಪಾದ ಈ ಮನ್ಯಾಗ ಬಿದ್ದರೇನs

ಖರೇ! ಇಟಗೊಂಡ ಹೆಣ್ಣಾ ಕರಗಾಲನs ದಾದಲ್ಯಾ."

"ಒಳತನ್ನ ಬಸವಂತಿ, ನನ್ನ ಆಣಿ ಆಗೇದ, ಒಳತನ್ನು. ಗಿರಿಜಾಗ ಯಾರೂ ಈ ಮನ್ಯಾಗ ಆ ಶಬ್ದ ಅಲ್ಲಿಲ್ಲಾ. ನಿನಗೂ ಯಾರ ಅನ್ನಾಂಗಿಲ್ಲಾ. ಅಂದಾವರ ನಾಲಗಿ ಕತ್ತರಿಸಿಬಿಡ್ತೀತು. ಶ್ಯಾಮರಾಯಾ, ಈ ಮನ್ಯಾಗ ಹುಟ್ಟಿಬರೂದಕ ಏಳ ಜನ್ಮದ ಪುಣ್ಯಾಮಾಡಿರಬೇಕು. ನಿನ್ನ ಪಡೆಯೂದಕ್ಕೂ ಅಷ್ಟs ಪುಣ್ಯಾ ಖರ್ಚೀ ಹಾಕ್ಯಾನ."

"ಬಸವಂತೀ, ನೀ ಇಲ್ಲೆ ಬರಾಗ, ಬಸಗೋಂಡನ ಪರಲಹರಕೊಂಡs ಬಂದೀ ಯಂತ! ಇದ್ದ ಅಣ್ಣಾ. ಸತ್ಥಾಂಗಂತs ಬಂದೀಯಂತ. ಆದರ ನಾ ಮತ್ತs ಇಂದ ತಮ್ಮಾನ ನಾತೇ ಜೋಡಿಸಿಕೊಂಡೆ. ಬಸವಂತಿಗೆ ತಮ್ಮಾನ ಕಲಮ್ ಕಟ್ಟಿದೆ."

ಬಸವಂತಿ ಚಟ್ಟನೇ ಎದ್ದು ಬಂದು, ನನ್ನನ್ನು ಅನಾಮತ್ತಾಗಿ ತಡವಿ —

"ದಾದಲ್ಯಾ, ದಾದಲ್ಯಾ. ನೀ ಒಬ್ಬನs ತಿಳಕೊಂಡಿ ನನ್ನ ಮನಸಾ. ನೀ ಒಬ್ಬನs ಹಿಡದಿ ಬಸವಂತೀ ಗುರತಾ. ಖರೇ ಮನಸಲೇನs ಮಾತಾಡಿದಿ. ತಮ್ಮಾ ಅನಕೊಂಡಿ ದಾದಲ್ಯಾ. ನನ್ನ ಅಕ್ಕನ್ನ ಮಾಡಿಕೊಂಡಿ. ಬಸವಂತೀ ನೆಳ್ಳಿಗೆ ಅಂಜೂ ಮಂದಿ ಐತಿ ಊರಾಗ. ನನ್ನ ಮನಸಾ ಯಾರಿಗೂ ತಿಳಿದಿಲ್ಲಾ. ಇವರಿಗೆ, ಇವರಿಗರೇ ತಿಳೀಬೇಕಾಗಿತ್ತು. ಇನಾ ತಿಳಧಾಂಗ ಇಲ್ಲ ದಾದಲ್ಯಾ. ನಾ ಇನಾ ಮೈಮಾರೂ ಹೆಣ್ಣ ಇರಬೇಕಂತನs ಅವರ ಸಂಶಾ. ರಗsಡ ಪರೀಕ್ಷಾಮಾಡಿ ನೋಡಾಕ ಹತ್ತ್ಯಾರ! ಅವರದು, ಅವರ ಈ ಮನೀದು ನನಗ ಅಷ್ಟs ಧ್ಯಾಸ ಐತಿ. ಅವರು ನಾಳೇ ಮನೀಯವರನ ಕರಕೊಂಡು ಬರಲಿ. ವಾಡೇದಾಗ ನಿಂದರಲಿ. ನಾ ಬೆನ್ನಿಗೆ ಬಿದ್ದಿನ್ಯಂತ ಒಂದ ರೊಟ್ಟಿ. ಮನೀ ಲಕ್ಷ್ಮೀ ಉಟಗೊಂಡ ಬಿಟ್ಟ ಒಂದ ಶೀರಿ, ಆಟs ಕೊಡಲಿ, ಸಾಕಂತೀನಿ. ನನಗ ಬ್ಯಾರೇ ಆಶ್ಯಾ ಇಲ್ಲಾ, ಹುಕೀ ಇಲ್ಲಾ, ಏನೂ ಇಲ್ಲಾ, ಈಟರಾಗs ಜೀಂವಕ ಸಮಾಧಾನ ಐತಿ.

ನನಗ ಹೊಟ್ಟೀ ನೆತ್ತಿ ಕಾಳಜೀ ಇರಲಿಲ್ಲ ದಾದಲ್ಯಾ. ನನ್ನ ಹರೇದ ಮಾನಾ ಕಾಯಾಕ ಒಂದ ಆಸರ ಬೇಕಾಗಿತ್ತು. ಇವರ ನೆಳ್ಳಿನ್ಯಾಗ ಯಾಡ್ನೂ ಸಿಕ್ಕೂ. ಏನ ಸಿಕ್ಕರೂ ನನ್ನ ಮನಸ ತಿಳಕೊಂಡ ಜೀಂವಾ ಸಿಕ್ಕಿರಲಿಲ್ಲಾ. ಇಂದ ಅದು ಸಿಕ್ಕಿತು ನನಗ. ಬರೇ ಸಿಗಲಿಲ್ಲಾ. ಬೆನ್ನಲೇ ಬಿದ್ದ ತಮ್ಮಾನ ತಳ್ಳಿ ಹಾಕಿ ಸಿಕ್ಕಿತು. ದಾದಲ್ಯಾ, ನನ್ನ ಜೀಂವಾ ಖರೇನs ಹಗರ ಆತ ಇಂದ. ಇವರು, ವಾಡೇ ಎಂದನರs ಕೈಬಿಟ್ಟರ ನಾ ಹಾದೀ ಹೆಣಾ ಆಗ್ಯಾಂಗಿಲ್ಲಾ. ನನ್ನ ತಮ್ಮಾ ನನ್ನ ಕೈ ಬಿಡ್ಯಾಂಗಿಲ್ಲ ಅನೂ

ಖಾತ್ರೀ ಬಂತ ಜೀಂವಕ."

ಬಸವಂತಿ ನನ್ನ ಹಾಸಿಗೆಯ ಮೇಲೆ ಕುಳಿತು ಮಾತನಾಡುತ್ತಿದ್ದಳು. ಅಕ್ಕ-ತಮ್ಮ ಏಕಜೀವರಾಗಿದ್ದೆವು.

"ಬಸವಂತೀ, ಶ್ಯಾಮರಾಯಾ ಪುಣೇದ ಸುದ್ದೀ ತಗೀತಿರತಾನೇನು? ಹುಡುಗೂರ-ಹುಪ್ಪಡಿವಶಿಂದ ಹೇಳ್ಯಾನಿಲ್ಲೋ?"

ನಾನು ಅಕ್ಕನ ವಿಶ್ವಾಸ ಸಂಪಾದಿಸಿದ ಖಾತ್ರೀಯಾಗಿ ಕೇಳಿದೆ.

ಪುಣೆಯಲ್ಲಿ ಹುಡುಗರ ಶಿಕ್ಷಣ ನಡೆದಿದೆ. ಹುಡುಗರು ಇನ್ನೂ ಚಿಕ್ಕವರು. ಕಾಕಾ ಅವರೂ ಥಕಾಸಿದ್ದಾರೆ. ಅವರನ್ನು, ಹುಡುಗರನ್ನು ನೋಡಿಕೊಂಡಿರಲು ಜವಾಬುದಾರಿಯ ಅಂತಃಕರಣದ ಜನ ಬೇಕು. ಅದಕ್ಕೆ ಸೋನಕ್ಕ ಅಲ್ಲೇ ನಿಲ್ಲದೆ ಗತಿಯಿಲ್ಲ. ಎಡಚಿಬಿಡಚಿ ತಾನು ಹೋಗಿ ಬಂದು ಇರುತ್ತೇನೆ ಎಂದು ಎಲ್ಲರ ಮುಂದೆ ಹೇಳಿದಂತೆ, ಬಸವಂತಿಯ ಮುಂದೂ ಶ್ಯಾಮರಾಯ ಹೇಳಿದ್ದ. ಆದರೆ ಬಸವಂತಿ–ಅಸಲ್ ಜಾತಿಹೆಣ್ಣು–"ನನ್ನ ತಂದ ಸುದ್ದೀನರs ಅವ್ವಾ ಅವರಿಗೆ ತಿಳಿಸೀರಿಲ್ಲೋ" ಎಂದು ಕೇಳಿಯೇಬಿಟ್ಟಿದ್ದಳು. ಶ್ಯಾಮರಾಯ–ಅದು ಈ ಮನೆಯ ಪರ್ದಿಷ್ಟ; ತಿಳಿಸುವ ಅಗತ್ಯವಿಲ್ಲವೆಂದು ಮಾತು ಹಾರಿಸಿಬಿಟ್ಟಿದ್ದ. ಬಸವಂತಿ ಇಷ್ಟಾದರೂ ಅವನನ್ನು ಬಿಡದೆ ಖಟ್ಟಿಗೆ ಹಚ್ಚಿ–'ಬೆಳಗಾಂವ್ಯಾಗ ಮನೀಮಾಡಿ, ಅವ್ವಾ ಅವರ್ನ, ಹುಡುಗೂರ್ನ ಇಡರಿ. ಕಾಕಾ ವಾಡೇದಾಗ ನಿಂದರಲಿ. ನಿಮಗೂ ಹೈರಾಣಾಗೂದು ತಪ್ಪತೈತಿ' ಎಂದು ಹೇಳಿದರೆ 'ಬೆಳಗಾಂವಿಯಲ್ಲಿ ಮನೆಮಾಡಿದರೆ, ಮನೆತುಂಬಿಸಲು ಬಸವಂತಿಯನ್ನೇ ಕರೆದುಕೊಂಡುಹೋಗುವದೆ'ಂದು ತಿಳಿಸಿದ್ದ. ಆದರೆ ಗದ್ದ ತುಟಿ ಹಿಡಿದು, ರಂಜಿಸಿದಂತೆ ಮಾಡಿದರೆ, ಬಸವಂತಿ ಮಳ್ಳಾಗುವ ಜಾತಿಯ ಹೆಣ್ಣಲ್ಲವೆಂಬುದು ಅವನಿಗೆ ಹೊಳೆಯಲಿಲ್ಲ. ಈ ಗುಪಿತವನ್ನು ಅವನು ಮರೆಮಾಚಬೇಕೆಂದು ಯತ್ನಿಸಿದ್ದ. ಆದರೆ ಒಂದೆರಡು ಸಲ ಅನಾಮತ್ತಾಗಿ ಬಸವಂತಿಯ ಕೈಯಲ್ಲಿ ಸಿಕ್ಕು ಪೆಚ್ಚನಾಗಿದ್ದ.

ನಾಕೆಂಟು ದಿನ ಪುಣೆಗೆ ಹೋಗಿಬರುತ್ತೇನೆಂದು ಹೇಳಿ ಹೋಗಿದ್ದ. ಬರುವಾಗ ಬುಟ್ಟಿತುಂಬ ಕಾಯಿ-ಪಲ್ಯ ತಂದಿದ್ದ. ತಂದಿದ್ದ ಕಾಯಿ-ಪಲ್ಯ ಇನ್ನೂ ಮಲಮಲಿಸುತ್ತಿತ್ತು. 'ಯಾವಾಗ ತಂದಿರಿ? ಇನ್ನೂ ಹಸಿರು ಮುರಿಯುವದಲ್ಲ' ಎಂದು ಬಸವಂತಿ ಕೇಳಿದ್ದಕ್ಕೆ, 'ಬೆಳಗಾಂವಿಯಿಂದ ತಂದೆ' ಎಂದವನೇ ನಾಲಗೆ ಕಚ್ಚಿಕೊಂಡನಂತೆ. ಪುಣೆಯಿಂದ ಬೆಳಗಾಂವಿಗೆ ಹೋಗಬೇಕಾದರೆ, ನಮ್ಮೂರ ದರ್ಶನ ಮಾಡಿಕೊಂಡೇ

ಹೋಗಬೇಕು. ಅವಳಿಗೆ ಇದರ ಸಂಶಯ ಬಂದು ಖಾದರನಿಗೆ ಕೇಳಿದಳು. ಅವನೂ ಒಂದು ತುಟಿ ಎರಡುಮಾಡಲಿಲ್ಲ. ಏನೋ ನೀರಾಡುತ್ತಿರುವದರ ಭಾಸ ಅಂದಿನಿಂದ ಅವಳಿಗೆ ಬಲವಾಯಿತು. ಶ್ಯಾಮರಾಯ ಏನೋ ಮುಚ್ಚಿಡುವ ಧಡಪಡದಲ್ಲಿರುವ ಶಂಕೆ ಅವಳಿಗೆ ಬಂದಿತು. ಆದರೆ ಬಸವಂತಿ, ಈ ಗುಪಿತದ ಆಳಕ್ಕೆ ಸುರಂಗ ಹೊಡೆಯದೆ, ಆದದ್ದು ಆಗಲಿ ಬಂದದ್ದು ಬರಲಿ ಎನ್ನುವ ನಿರ್ಲಿಪ್ತಭಾವದಿಂದಲೇ ಇದ್ದಳು.

ಇದನ್ನೆಲ್ಲ ವಿವರವಾಗಿ ವಿವರಿಸಿ, ಬಸವಂತಿ ಒಂದು ದೀರ್ಘ ಉಸಿರುಬಿಟ್ಟು ಹೇಳಿದಳು:

"ದಾದಲ್ಯಾ, ಅವರು ಏನೋ ಮುಚ್ಚಿ ಇಡಾಕ ಧಡಪಡಸಲಿಕ್ಕೆ ಹತ್ಯಾರ. ಅದs ನನಗ ತಿಳೀಧಾಂಗ ಆಗ್ಯೆತಿ. ತಿಳೀತನ್ನು. ನಾ ಏನ ಮಾಡಾಕಿ ಅದೀನಿ? ಮೈ-ಮನಸಾ ಅವರಿಗಿ ಒಪ್ಪಿಸೀನಿ. ಕಾಲದಶೀಲೇ ಜಾಗಾ ನೋಡಕೊಂಡೀನಿ. ಯಾರ ಜೋಡೀನೂ ಸರೀಕತನದಲೆ ಕುಂಡ್ರೂ ಆಶಾ ಇಲ್ಲ ನನಗ. ಹಾಂಗ ಕುಂಡ್ರಂತ ಅವರು ಹೇಳಲಿ. ಅಂದs ನಾ ಈ ಜಾಗಾ ಬಿಡತೀನಿ. ಹ್ಯಾಂಗೂ ತಮ್ಮ ಆಗೀನ್ಯಂತ ಮಾತ ಕೊಟ್ಟೀ. ಅಕ್ಕಗ ಆಸರಾದೀ ಅಂತs ನಿನ್ನ ತಾವಲಿ ಬರತೀನಿ. ನೀನೂ ಕೈ ಬಿಟ್ಟರ, ಜೀಂವಾ ನನ್ನ ಕೈಯಾಗ ಐತಿ. ಆಗs, ಅತ್ತೀಮನ್ಯಾಗ ಜೀಂವಾ ನೀಗಿದ್ದರ ಈ ಧಾಂವತೀನs ಇರತಿದ್ದಿಲ್ಲಾ. ಧಾಂವತೀ ಯಂಥಾದ್ಯೆತಿ ಅನೂದು ತಿಳದ್ಯೆತಿ. ಈ ಧಾಂವತೀಮಾಡೂ ತಾಕತನೂ ಇನ್ನ ಉಳ್ಯಾಂಗಿಲ್ಲಾ. ಒಮ್ಮೆ ಚಟ್ಟನs ಕಣ್ಣ ಮುಚ್ಚತೀನಿ."

ಬಸವಂತಿ ನನ್ನ ಕೈಯನ್ನು ತನ್ನ ಕೈಯಲ್ಲಿ ತೆಗೆದುಕೊಂಡು ಮೃದುವಾಗಿ ನೀವುತ್ತ ಹೇಳಿದಳು.

"ಬಸವಂತೀ. ನಿನ್ನ ತಮ್ಮನ ಮನೀಗೆ ಇಂದೇ ಬಾ ನಾಳೇ ಬಾ. ಎಂದ ಬಂದರೂ, ಅವನ ಮನೀ ಬಾಗಲಾ ನಿನಗ ತಗದಿರತದ. ನಿನ್ನ ತಮ್ಮಾ ತಾ ಕಣ್ಣ ಮುಚ್ಚೂತನಕಾ ತನ್ನ ಅಕ್ಕನ ಕೈ ಬಿಡೂದಿಲ್ಲಂತ ವಚನ ಕೊಡತಾನ. ನನ್ನ ಕೈ ನಿನ್ನ ಕೈಯಾಗ ಅದs. ಇಬ್ಬರಿಗೂ ತಿಳೀಧಾಂಗ ದೇವರು ಈ ಕೈ ಕೂಡಿಸ್ಯಾನ. ಬಿಡಿಸಿದರ **ಅವನ**s ಬಿಡಸಬೇಕು. ಬ್ಯಾರೇ ಯಾರಿಗೂ ಅದನ್ನ ಬಿಡಸೂದು ಶಕ್ಯ ಇಲ್ಲಾ."

ಊರಲ್ಲಿಯ ಒಂದು ಸುದ್ದಿ. ಬಸವಂತಿಗೆ ದಿನ ಹೋಗಿವೆಯೆಂದು. ಅವನವ

ರಂಥ ಹಿರಿಯರ ಬಾಯಲ್ಲೂ ಈ ಮಾತು ಇವೆ. ಅದರ ಸತ್ಯ-ಅಸತ್ಯವೇನೇ ಇರಲಿ. ಕದಾಚಿತ್ ಬಸವಂತಿ ಹೊಟ್ಟೆಯಿಂದಿದ್ದದ್ದು ನಿಜವಾದರೆ......ಶ್ಯಾಮ ರಾಯನದೇನು ಭರವಸೆ? ಈ ಬೀಜ ನನ್ನದಲ್ಲ. ಬಸವಂತಿ ದಗಾ ಕೊಟ್ಟಳು ಎನ್ನು ವದಕ್ಕೆ, ಕೈ ಝಾಡಿಸುವದಕ್ಕೆ, ಅವನು ಅಸಿ-ಮಿಸಿ ನೋಡುವ ಜಾತಿಯಲ್ಲ. ಅವನಿಗೆ ಬಸವಂತಿಯು ಮೈಯ ಅಗತ್ಯವಿದೆ. ಅವಳ ಹಿಂಬಾಲದ ಅಗತ್ಯವಿಲ್ಲ. ಮೂರು ದಿನ ಅವನೊಡನೆ ಕೂಡಿ ಇದ್ದ ಬಸವಂತಿ, ನಾಳೆ ಅವನ ಕೈಗೆ ಒಂದು ಅಪತ್ಯವನ್ನೊಪ್ಪಿ ಸಿದರೆ ಅದರ ಮಾಲ್ಕೀ ತನ್ನದೆಂದು ಅವನೆಂದೂ ಒಪ್ಪಲಾರ. ಈ ಲಿಗಾಡ, ಬಸವಂತಿ ಇಬ್ಬರೂ ತನಗೆ ಬೇಡವೆಂದು, ಅವನು ಅವರಿಗೆ ಬೀದಿಯ ದಾರಿ ತೋರಿಸಲಿಕ್ಕೂ ಹಿಂದೆ ಮುಂದೆ ನೋಡುವವನಲ್ಲ. ಬಸವಂತಿ ಅಪತ್ಯಸಹಿತವಾಗಿ ಚಟ್ಟನೇ ಕಣ್ಣುಮುಚ್ಚಲು, ಜೀವ ನೀಗಲು, ಕೆರೆ-ಬಾವಿಯ ದಾರಿ ಹಿಡಿಯದೆ ಅನ್ಯ ಮಾರ್ಗವೇ ಉಳಿಯುವದಿಲ್ಲ.

ಬಸವಂತಿ ತಾನೂ ಬದುಕಬೇಕು; ಅನ್ಯರನ್ನೂ ಬದುಕಿಸಬೇಕು. ಅನ್ಯರನ್ನು ಬದುಕಿಸುವ ನಿಮಿತ್ತವಾಗಿಯಾದರೂ ಅವಳು ಬದುಕಬೇಕು. ಈಗ ಅವಳು ಬದುಕಬೇಕಾದದ್ದು ಶ್ಯಾಮರಾಯನನ್ನು ನೆಚ್ಚಿಯಲ್ಲ. ಅವನ ಆಧಾರದ ಭರವಸೆ ಯನ್ನು ನಂಬಿಯಲ್ಲ.

ವಾಡೆಗೆ ಅವಳ ಸಂಬಂಧ ಬಂದಿದೆ. ಇಂದಿಲ್ಲ ನಾಳೆ, ವಾಡೆಯ ಜನದ, ಪಂತಕುಟುಂಬದ ಸಂಬಂಧವೂ ಬಂದೀತು. ಬಸವಂತಿಯ ಕಥೆ, ಅವಳ ಗತಿ ಕಾಕಾ-ಸೋನಕ್ಕ ಅವರಿಗೂ ತಿಳಿದೀತು. ತಿಳಿಯಬೇಕು. ಶ್ಯಾಮರಾಯ ಬಸವಂತಿಯನ್ನು ವಂಚಿಸಿ ತನ್ನ ಬಲೆಯಲ್ಲಿ ಎಳೆದುಕೊಂಡ ಕತೆ ಅವರಿಗೆ ವಿದಿತವಾಗಬೇಕು. ಹಾಗೆಯೇ ಸೋನಕ್ಕನ ಸಣ್ಣಾಗುವಿಕೆ, ನವೆತದ ಕಾರಣ ಬಸವಂತಿಗೆ ಬಯಲಾಗ ಬೇಕು. ಶ್ಯಾಮರಾಯ ಸುಳ್ಳು ಅಪವಾದವನ್ನು ಸೋನಕ್ಕನ ತಲೆಗೆ ಕಟ್ಟಿದ. ಅವರನ್ನು ಬಿಟ್ಟ ವಿಷಯ ಅವಳಿಗೆ ತಿಳಿಯಬೇಕು. ಕ್ಷುದ್ರಜೀವಿ ಶ್ಯಾಮರಾಯನ ನೈಜ ಪರಿಚಯ, ಸ್ವರೂಪದರ್ಶನ ಅವಳಿಗಾಗಬೇಕು.

ಶ್ಯಾಮರಾಯ ಸೋನಕ್ಕನನ್ನು ತ್ಯಜಿಸಿದ ವಿಷಯ, ಸಾಹೇಬರನ್ನು ವಂಚಿ ಸುತ್ತ ನಡೆದ ವಿಷಯ, ಎಲ್ಲವನ್ನೂ ಮುಂಚಿನಿಂದ ನಾನು ಮತ್ತೆ ಪುರೋಚಿ ವಾಚಿ ಸಿದೆ. ಶ್ಯಾಮರಾಯ ಮಾಡಿದ, ಮಾಡುತ್ತ ನಡೆದ ಭಾನಗಡಿಯ ವಿಷಯವನ್ನು ವಿವರಿಸಿದೆ. ಅವಳ – ಶ್ಯಾಮರಾಯನ ಬಗ್ಗೆ ಊರಲ್ಲಿ ಗವುಗವಿಸುತ್ತಿದ್ದ, ಜನ

ಆಡಿಕೊಳ್ಳುತ್ತಿದ್ದ,ಬಸವಂತಿಗೆ ಗರ್ಭ ನಿಂತ ವಿಷಯವನ್ನೂ ಹೇಳಿದೆ. ಕೊನೆಗೆ ಹುಸಿ ಹೋಗದೆಂಬ ಖಾತ್ರೀ ಇದ್ದ ಒಂದು ಮಹಾಸ್ತ್ರವನ್ನೂ ಅಭಿಮಂತ್ರಿಸಿ ಎಸೆದೆ:

"ಬಸವಂತೀ, ನೀನೂ ಹೆಣ್ಣ ಹೆಂಗಸಿದ್ದೀ. ಸಂಕಟ ಅನ್ನೂದು, ಗಂಡ ಬಿಟ್ಟ ಸಂಕಟ ಅನ್ನೂದು, ಮಂದಿ ಆಡಿಕೋತಾರ ಅನ್ನೂ ಸಂಕಟದ್ದು ನಿನಗೂ ಕಲ್ಪನಾ ಅದs. ಆ ಬೆಂಕೀ-ಧಗೀ ಎಂಥಾದ್ದು ಅನ್ನೂದನ್ನ ನಿನಗ ಹೇಳೂ ಅಗತ್ಯ ಇಲ್ಲಾ. ನಿಂದೂ ಅದರಾಗ ಕೈ-ಮೈ ಸುಟ್ಟsದ. ಹುರಪಳಿಸಿ ಹೊರಬಿದ್ದೀ. ಬಸವಂತೀ, ಆ ಸಂಕಟಾ ತಪ್ಪಸೂ ಶಕ್ತಿ, ಆ ಬೆಂಕೀ ನಂದಸೂ ಎದೀ ನಿನ್ನಲ್ಲೇ ಅದs. ಶ್ಯಾಮ ರಾಯನ್ನ ಹಾದಿಗೆ ತರೂ ಶಕ್ತೀ ನಿನ್ನಲ್ಲೇ ಅದs. ಆ ಭರೋಸು ನನಗ ಇತ್ತಂತs, ನಾ ಬಾಯಿಬಿಟ್ಟು ಎಲ್ಲಾ ಹೇಳಿದೆ. ಸೋನಕ್ಕಂದು, ವಾಡೇದ್ದು ಸಂಕಟಾ ಪರಿಹಾರ ಮಾಡೂ ಅಂತs ಈಗ ಮತ್ತ ಬೇಡಕೋತೀನಿ ಬಸವಂತೀ."

"ಇವರ ಹಕೀಕತ್ತಾ ಹೀಂಗ್ಹೀಂಗ ಐತಿ ಅನೂದು ಜರಾ ಠಾಂವಿಕಿದ್ದರ, ಇವರ್ನs ಹತ್ಯಾಕ ಕರಕೊಂಬಾಗನs ಕರಾರ ಹಾಕತಿದ್ನಿ. ಫಸಾಸು ಗಂಡಸರ ಮ್ಯಾಳನs ನನ್ನ ಬೆನ್ನಹತ್ತಿತ್ತು. ಇವರು ಆ ಜಾತ್ಯಲ್ಲಾ ಅಂತ ಒಪಗೊಂಡಿನಿ. ಥೊಡ್ಡಾವರ ಮಾತಂತ ನಂಬಿದಿನಿ. ಕಾಲ ಜಾರೈತಿ ದಾದಲ್ಯಾ ನಂದು. ಹೂವಾ ಹುಲ್ಲಿನ ಕಿಂಮತಿಗೆ ಮಾರಿದ್ನಿ. ಮೈ-ಮನಸಾ ಮಾರಬಾರದ ಜಾಗಾದಾಗ ನಿಂತ ಮಾರಿದ್ನಿ. ನಾ ಹೊಟ್ಟೀಲೇ ಏನ ಇಲ್ಲಾ. ಅದರ ಅಂಜಿಕಿಲ್ಲಾ. ಬಂಜೀ ಮಾನs ಐತಿ ನನಗ. ಊರಾಗ ಆಡಕೊಂಬೂ ರಿಕಾಮಚೋಟರಿಗೆ ಹರವೀ ನೋಡಿದರೂ ಬಸರs ಕಾಣತೈತಿ. ಮೈಯs ತೊಯ್ದು ತಪಗುಡಾಕಹತ್ತಿದಕೀಗೆ ಈ ಜುಬ್ಬರ ಮಳೀಗೇನು ದರಜ ಇಲ್ಲಾ. ಈಟೂ ಮೀರಿ, ಕೈಮೀರಿ ಏನರs ಆದರ ಮಾಡಿ ದವರು ಭೋಗಸ್ತಾರು.

ದಾದಲ್ಯಾ, ಇವರ ಭರೋಸಾ ಹಿಡೀಬ್ಯಾಡ ಅಂದೀ. ಅವರು ನನ್ನ ಕೈಯಾಗ ಅದಾರೋ ಇಲ್ಲೋ ಅನೂದರ ಭರೋಸಾ ನನಗs ಇಲ್ಲ ದಾದಲ್ಯಾ. ಸೋನಕ್ಕ ಅವರ್ನ ವಗತಾನಗೇಡೀನ್ನ ಮಾಡೀರ್ಯಂತ, ಖರೇ ಏನಂತ ನಾ ಕೇಳಿದ್ರು, ನೀ ಯಾರ ಲವಡೀ ನನ್ನ ಕೇಳಾಕಿ ಅಂದರೂ ಅಂದರs. ನಾಳೆ ನೀ ಪೂಜಿಗಿ ಬಂದಾಗ ನಿನ್ನ ನೋಡಿ ನಕ್ಕ್ಯನಂದರ ಇವರs ಅನಾವ್ರು ದಾದಲ್ಯಾನ್ನೇನು ಇಟಗೊಂಡೀಏನು ಅಂತs. ನೀ ತಮ್ಮಾ – ನಾ ಅಕ್ಕಾ ಅನೂದು ಅವರ ಕಣ್ಣಿಗೆ ಕಾಣಸಾಕಿಲ್ಲಾ. ಹೆಂಗಸಾದಾಕಿ ಯಾರಿಗರs ಹೆಸರ ಇಡಬೇಕಾದರ ಬಲೇ ಜಿಕೇರಿ ಮಾಡತಾಳ.

ಬಲೇ ಹಿಂದ-ಮುಂದ ನೋಡತಾಳ. ಗಂಡಸಾ ಹಾಂಗ ಅಲ್ಲಾ. ಹಿಂದ-ಮುಂದಿನ ಇಚಾರ ಇಲ್ಲದ್ಯನs ಭಕಾಸಿಬಿಡತಾನ. ತಾ ಆಡಿದ ಮಾತಾ ಆರಪಾರ ಎದ್ರ್ಯಾಗ ನಾಟೀತನೂ ದರಜs ಇರ್ರಾಂಗಿಲ್ಲ ಅಂವಗ. ಐದ ದೀಪಾ ಹಚ್ಚಿ ಬಂದ ಗಮಜನs ಅಪನ ಕಣ್ಣ ಮುಚ್ಚಿಸಿರತೈತಿ. ದೀಪದ ತಳದಾಗಿನ ಕತ್ಲೀನs ಕಾಣಾಂಗಿಲ್ಲಾ. ಎಲ್ಲಾ ಗಂಡಸರೂ ಆಟs. ನೂರಕೊಬ್ಬಾ, ನನ್ನ ದಾದಲ್ಯಾನ್ಹಾಂಗ ಹೊಂಟಾನು.

ದಾದಲ್ಯಾ, ಮನಸಲೇನs ಇವರ ಕೈ ಹಿಡದೀನಿ. ದೇವರ ಆಣೀ ಇಟ ಗೊಂಡು ಇವರ್ನ ಕೂಡೀನಿ. ಮಾತ ಮುರ್‍ರ್ಯಾಕ, ಮನಸ ಮುರ್‍ರ್ಯಾಕ ದಾರಿ ಉಳದಿಲ್ಲ ದಾದಲ್ಯಾ ನನಗ. ಇವರ ಕೂದಲಿಗಿ ಧಕ್ಕಿ ಆಗಿರಬಾರದು. ಈ ಮನೀ ಮೆಟ್ಟಿಗೆ ಹತ್ತಿರಬೇಕು, ಅಂಥಾ ದಾರಿ ಇದ್ದರ ಹೇಳು. ನಾ ಮಾಡಾಕ ತಯಾರದೀನಿ. ಮನೀ ನೇಟ ಆಗಾಗ ಬಸವಂತೀ ಹೆಣಾ ಬೇಕಾರ ಬೀಳಲಿ. ಸಲಿಗಿ ರಿಣಾ ತೀರಸಾಗ ಉರ್ಲ ಬೀಳಲಿ ಬೇಕಾರ. ಅದರ ಅಳಕ ನನಗ ಇಲ್ಲ ದಾದಲ್ಯಾ. ನಿನ್ನ ಮಾತಿನ್ಹಾಂಗ ನಡ್ಯಾಕ ತಯಾರದೀನಿ. ಬಸವಂತಿಗೆ ಮಾತಿನ ದರಜ ಐತಿ. ತಮ್ಮನ ಕಾಳಜೀ ಐತಿ."

"ನಿನ್ನ ಮಾತಿನ ಮ್ಯಾಲ ನನ್ನ ವಿಶ್ವಾಸ ಅದs ಬಸವಂತಿ. ನೀನು ನನ್ನ ಮಾತ ನಡಿಸೀ ಅನೂ ಧೈರ್ಯಾ ಅದs. ಸೋನಕ್ಕಾ, ನನಗ – ನಿನಗ ಅಕ್ಕನ ಸಮಾನಾ. ಅವರು ಈ ಮನೀ ಲಕ್ಷ್ಮೀ. ಆ ಲಕ್ಷ್ಮೀ ಇಲ್ಲೆ ಬರಲಿ. ಈ ಮನೀ ಮತ್ತ ತುಂಬಲಿ ಅನ್ನೂ ಕಾಳಜೀ, ನೀ ತಂಗ್ಯಾಗಿ, ನಾ ತಮ್ಮ ಆಗಿ ಮಾಡೂಣು. ಶ್ಯಾಮರಾಯನ್ನ ಹಾದಿಗೆ ತರೂ ವಿಚಾರ ಹೇಳತೀನಿ. ರಾಚಪ್ಪನ ಜೋಡೀ ವಿಚಾರಮಾಡಿ ತಿಳಸ್ತೀನಿ."

"ದಾದಲ್ಯಾ, ನಾ ವಾಡೇಕ್ಕ ಬಂದಮ್ಯಾಲ ಒಂದಿನಾ ರಾಚಪ್ಪ ಬಂದಿದ್ದಾ. ವಾಡೇಕ್ಕ ಕೀಲಿ ಜಡೀಬೇಕಂತ ಬಂದಿದ್ದಾ. ಹಾಂಗನs ಸುತ್ತ ಕಣ್ಣ ಹೊಳ್ಳಿಸಿ ನೋಡಿದಾ. 'ಬಸವಂತೀ, ವಾಡೇದ ಝುಲ್ಲ ಬಿಟ್ಟಿತು.' ಅಂದವನs ತಿರಗಿ ಹೋದಾ. ಬಸವಂತೀ ಗುರುತಾ ನಿನಗ ಹತ್ತಿಧಾಂಗ, ರಾಚಪ್ಪಣ್ಣಗೂ ಹತ್ತೈತಿ. ಆದರ ಊರಾಗ ಏನ ಸುದ್ದಿ ಐತಿ ಶಾಂವಿಕ್ಯದ ಏನ ದಾದಲ್ಯಾ? ಅಂದ ರಾಚಪ್ಪಣ್ಣಾ ನನ್ನ ಕೈ ಹಿಡದು ಜಾಬ ಇಚಾರಿಸಿದನಂತ. ವಾಡೇ ಯಾರ ಪರವಾನಗೀಲಿ ಹೊಕ್ಕೀ ಅಂತs ಕೇಳಿದ್ನಂತ. ಇವರಿಗೆ ರಾಚಪ್ಪಣ್ಣಗ ಕೈಗೆ ಕೈನೂ ಹತ್ತಿತಂತ."

"ಬಸವಂತೀ. ನಾ ಎಲ್ಲಾದರ ತಪಾಸನೂ ತಗದೀನಿ. ರಾಚಪ್ಪಣ್ಣಾ ಯಾರು, ನೀ ಯಾರು ಅನ್ನೂದರ ಶಾಂವಿಕೀನೂ ನನಗ ಅದs. ಖರೇ ಒಳಗಿನ ಹಕೀಕತ್ತು ಹೇಳಲೇನ ಬಸವಂತಿ. ರಾಚಪ್ಪಾ ನಿನ್ನ ಕೈ ಹಿಡದು ಕೇಳಿದಾ ಅನ್ನೂದರ ಬೊಬ್ಬಾಟ

ಮಾಡಿದಂವಾ ಶ್ಯಾಮರಾಯಾ."

ಬಸವಂತಿ ಹೊಟ್ಟೆಯಿಂದಿದ್ದ ಸುದ್ದಿ – ಅವಳ ಕೈಯನ್ನು ರಾಚಪ್ಪ ಹಿಡಿದ ವಿಕ್ರಮ ಬೇರೆ ಯಾರ ಕ್ಷ್ಯಪ್ತಿಗಳಾಗಿರದೆ ಶ್ಯಾಮರಾಯನ ತಲೆಯಲ್ಲಿ ಮಿಂಚಿದ, ಡಾವುಗಳಾಗಿದ್ದವು. ಹಿರೇಮಠದ ಗಂಗೋತ್ರಿಯಲ್ಲಿ ಅವಕ್ಕೆ ಸೆಲೆಯೊಡಸಿ, ಊರ ತುಂಬ ಈ ಘಟಾರಗಂಗೆ ನಿತಾಂತವಾಗಿ ಹರಿಯುವ ದಕ್ಷತೆಯನ್ನು ಶ್ಯಾಮರಾಯ ತೆಗೆದುಕೊಂಡ. ಅವನ ಭಗೀರಥಸಾಹಸಕ್ಕ ಯಶ ಬಂದಿತು. ಅನ್ಯಾಯವಾಗಿ ರಾಚಪ್ಪ – ಬಸವಂತಿಯರ ಹೆಸರು ಕೆಟ್ಟಿತು.

ಈ ವಿಷಯದ ಸಾದ್ಯಂತ ವಿವರ ತಿಳಿದಿದ್ದರೂ ಬಸವಂತಿ ಅದನ್ನು ನಂಬು ವದು ಅಶಕ್ಯವಿತ್ತು. ರಾಚಪ್ಪನ ಬಗ್ಗೆ ಅವಳಲ್ಲಿ ಅಷ್ಟು ಆತ್ಮೀಯತೆ ನಿರ್ಮಾಣ ವಾಗುವ ಸಂಭವವಿರಲಿಲ್ಲ. ಆದರೆ ವಾಡೆಯ ಕೆಲಭಾಗಕ್ಕೆ ಕೀಲಿಯನ್ನು ಜಡಿದು ಬರಲೆಂದು ಹೋದ ರಾಚಪ್ಪ, ಅದರ ನಿಗಾ. ಅದರ ರೀವಿ ನೋಡಿ, ಒಂದೇ ಒಂದು ಮಾತಿನಿಂದ, ಬಸವಂತಿಯ ಮನಸ್ಸಿನಲ್ಲಿ ತನ್ನ ಬಗ್ಗೆ ಮೂಡಿದ್ದ, ಮೂಡಲಿದ್ದ ಕಿಲ್ಮಿಷವನ್ನು ಸಾಫ್ ತೊಳೆದು ಅದನ್ನು ಶುಭ್ರಧವಲವನ್ನಾಗಿ ಮಾಡಿದ್ದ.

"ಬಸವಂತೀ ವಾಡೇದ ಝುಲ್ಲ ಬಿಟ್ಟಿತು."

ಎಂದು ಹೇಳಿ ಕೀಲಿಸಹಿತ ಮರಳಿದ್ದ. ಬಸವಂತಿ ಲಟ್ಟನೇ ರಾಚಪ್ಪನ ಮಾತಿನ ಅರ್ಥ ವನ್ನು ಗ್ರಹಿಸಿದ್ದಳು. ರಾಚಪ್ಪನಿಂದ ತನಗೆ ಧಕ್ಕೆ ಇಲ್ಲವೆಂದು ನಂಬಿದ್ದಳು. ಅದನ್ನು ತನಖಿಸಿಯೇ ನಾನು ಬಸವಂತಿಗೆ ಎಲ್ಲ ಸುದ್ದಿಯನ್ನೂ ವಿವರಿಸಿ ಹೇಳಿದೆ.

"ಬಸವಂತೀ, ರಾಚಪ್ಪಗ ಶ್ಯಾಮರಾಯನ ದಶಿಂದ ದ್ವೇಷ ಅದs. ಅದು ಒಂದ ಕಾರಣದ್ದಶಿಂದ. ಅಂವಾ, ಮಾಡಿಕೊಂಡ ಹೇಣತಿಗೆ ಸುಳ್ಳ ಅಪವಾದ ಕೊಟ್ಟು ಅಕಿನ್ನ ಒಗೆತಾನಗೇಡಿನ್ನ ಮಾಡ್ಯಾನ ಅನ್ನೂದರ ದಶಿಂದ. ಉಳದ ಯಾವ ಕಾರಣದ್ದಶಿಂದನೂ ಅಂವಗ ಶ್ಯಾಮರಾಯನ ಮ್ಯಾಲ ಇರಾದೇ ಇಲ್ಲಾ. ದ್ವೇಷ ಇಲ್ಲಾ. ಸೂಡ-ಬುದ್ಧೀನೂ ಇಲ್ಲಾ. ಈ ಒಗತಾನ ಹೊಂದಿದರ ರಾಚಪ್ಪಾ, ಖುದ್ದ ತಾನs ನಿಂತು, ಶ್ಯಾಮರಾಯನ್ನ ವಾಡೇದಾಗ ಕೂಡಸ್ತಾನ. ಕಾಕಾ ಅವರ ಸೇವಾ ಯಾವ ನಿಷ್ಠಾದಿಂದ ಮಾಡತಾನ, ಅದೇ ನಿಷ್ಠಾದಿಂದ ಶ್ಯಾಮರಾಯನ ಸೇವಾನೂ ಮಾಡತಾನ."

"ರಾಚಪ್ಪಣ್ಣಾ ನಾ ಹುಡಿಗಿ ಇದ್ದಾಗಿನತುಟೂ ನನ್ನ ಬಲ್ಲಾ. ಅಂವಾ ಶಿವನ ಮನಸ್ಯಾ ಅನೂ ಠಾಂವಿಕಿ ಊರಿಗೇ ಗೊತ್ತ ಐತಿ. ನಾ ವಾಡೇ ಹೊಕ್ಕ ದಿನಾ,

ಜನಾ ಬಾಯಿಗೆ ಬಂಧಾಂಗ ಆಡಿಕೊಂಡರು. ಆದರ ರಾಜಪ್ಪ ಏನಂದ ಗೊತ್ತ ಐತೇನ ದಾದಲ್ಯಾ? ಬಸವಂತ್ಯಂತ ಇಂಥಾ ಎದೀಮಾಡಿದಳು. ಬ್ಯಾರೇ ಯಾರೂ ಅದನ್ನ ಮಾಡತಿದ್ದಿಲ್ಲಾ ಅಂತs. ಅದೂ ನನ್ನ ಕಿಂವಿಗೆ ಬಂದೈತಿ. ನನ್ನ ಅತ್ತೀಮನೀ ನಿಗ್ಗರ ಸುದ್ದಿ ರಾಜಪ್ಪಣ್ಣಗ ಗೊತ್ತ ಇತ್ತು. ಎಡ್ಡ-ಮೂರ ಬ್ಯಾರೇ ಹೊಂದಸಾಕ ನೋಡಿದಾ. ಬಗೀಹರೀಲಿಲ್ಲಾ. ಮೂರನೇ ಸಾರಿ ಓಡಿ ಬಂದಿನಿ. ನಮ್ಮ ಬಸ ಗೋಂಡಾ ಮನ್ಯಾಗ ಕರಕೋಳಾಕ ಒಪ್ಪಲಿಲ್ಲಾ. ರಾಜಪ್ಪಣ್ಣನ ಧೈರ್ಯಾದ ಮ್ಯಾಲಿಂದ, ನನ್ನ ಅವ್ವಾ-ಅಪ್ಪಾ ನನಗ ಆಸರಾದರು. ಬಸಗೋಂಡ ಕಂಯ್-ಕುಂಯಿ ಮಾಡಿದರ ಹೇಳರಿ. ನೆಲಾನs ಹಿಡಸ್ತೀನಿ ಅಂತ ರಾಜಪ್ಪಣ್ಣಾ ಧೈರ್ಯಾ ಕೊಟ್ಟಿದ್ದಾ. ದಾದಲ್ಯಾ, ಇವರ ಭಾನಗಡೀ, ಸೋನಕ್ಕ ಅವರ ಸುದ್ದೀ ನೀ ಹೇಳಿರ ದಿದ್ದರೂ ಒಂದ ದಿನಾ ರಾಜಪ್ಪಣ್ಣನs ಹೇಳತಿದ್ದಾ. ಅಂದ ನನಗ ಇದು ತಿಳೀ ತಿತ್ತು. ಇಂದ, ಈ ತಮ್ಮಗ ಮಾತ ಕೊಟ್ಟಾಂಗ, ಅಂದ ಆ ಅಣ್ಣಗ ಮಾತ ಕೊಡ ತಿದ್ದೆ. ಅವನ ಮಾತು ನಡಸ್ತಿದ್ದೆ. ರಾಜಪ್ಪಣ್ಣಗ ಹೇಳ ದಾದಲ್ಯಾ. ನಿನ್ನ ತಂಗಿ ಮಾತ ಕೊಟ್ಟಾಳಂತ. ವಾಡೇ ಮೆಟ್ಟಿಗಿ ಹಚ್ಚತೀನಿ ಅಂತ ಮಾತ ಕೊಟ್ಟಾಳಂತ."

ಬಸವಂತಿಯ ಆಶ್ವಾಸನದಿಂದ ನನಗೆ ಭಾರೀ ಸಮಾಧಾನವಾಯಿತು. ಬಸವಂತಿ ಸೋನಕ್ಕನನ್ನು ಬದುಕಿಸುತ್ತಾಳೆ. ವಾಡೇ ಬದುಕಿಸುತ್ತಾಳೆ. ತಾನೂ ಈ ಮನೆಯಲ್ಲಿ ಅಖಂಡ ನಂದಾದೀಪವಾಗಿ ಬೆಳಗುತ್ತಾಳೆಂಬ ಭರವಸೆ ಬಲವಾಯಿತು.

ಗಿರಿಜಾ ಬದುಕಿದ ರೀತಿ ಬೇರೆ. ಬಸವಂತಿ ಬದುಕುವ ರೀತಿ ಬೇರೆ. ಗಿರಿಜಾ, ತುಳಸಿಯ ಕಟ್ಟೆಯ ಮುಂದಿನ ಪ್ರಶಾಂತ-ಗಂಭೀರ-ನೀರಾಂಜನ; ಬಸವಂತಿ, ವಾಡೆಯ ಮುಂದೆ ಅಖಂಡ ರಾತ್ರಿ, ಝಗಝಗಿಸುವ ಹಿಲಾಲು.

ದಾದಲ್ಯಾ ಸಮಾಧಾನ ಬಂದ, ಕಾರ್ಯ ಸಾಧಿಸಿದ ಸಿದ್ಧಿಯನ್ನು ಈಗಾಗಲೇ ಪಡೆದೆನೆಂಬ ಸಂತಸದ ಉಸಿರುಬಿಟ್ಟ.

ಬಸವಂತಿ ನನ್ನ ಹಾಸಿಗೆಯ ಮೇಲೇ ಕುಳಿತಿದ್ದಳು.

"ಬಸವಂತೀ, ನನ್ನ ಮಾತ ನಡಸಿದಿ. ನಿನ್ನ ತಮ್ಮಗ ಜೀವದಾನಾ ಮಾಡಿದಿ" ಎಂದು ಎದೆಯುಕ್ಕಿಬಂದು, ಬಸವಂತಿಯ–ತನ್ನ ಅಕ್ಕನ ತೊಡೆಯ ಮೇಲೆ–ತಲೆ ಯಿಟ್ಟು ಮುಖ ಮುಚ್ಚಿ ಮಡಗಿದ. ಬಸವಂತಿಯ ವಾತ್ಸಲ್ಯ-ಹಸ್ತ ಅವನ ಬೆನ್ನು, ತಲೆಯನ್ನು ಸವರುತ್ತಿತ್ತು. ತಿರುಗಿ ಎಚ್ಚರಾದಾಗ ಚುಮುಚುಮು ನಸುಕು, ಪಡಸಾಲೆಯ ಕಿಡಿಕಿ-ಮೇಲ್ಭಾವಣೆಯ ಬೆಳಕಿಂಡಿಯಿಂದ ಮುಖ ಚಾಚುತ್ತಿತ್ತು.

ಕಣ್ಣಿಗೆ ಕಣ್ಣು ಹಚ್ಚದೆ, ಒಂದಂಗುಲವೂ ಅತ್ತಿತ್ತ ಸರಿಯದೆ, ರಕ್ಷಾದೇವತೆಯಂತೆ ಬಸವಂತಿ, ತನ್ನ ತಮ್ಮನ – ದಾದಲ್ಯಾನ – ತಲೆಯನ್ನು ತೊಡೆಯ ದಿಂಬುಮಾಡಿ, ಕರಳು-ಕುಡಿಯಂತೆ ಮಲಗಿಸಿಕೊಂಡು ಕುಳಿತಿದ್ದಳು. ನಾನು ಕಣ್ಣು ಬಿಟ್ಟು ನೋಡಿದೆ. ಬಸವಂತಿ ಮುಗುಳುನಗೆಯರಳಿಸಿ —

"ದಾದಲ್ಯಾ, ಒಂದ ಜಂಪು ಮಲಗಿ ಏಳು. ನಾ ಮೈ-ಕೈ ಬಗೀಹರಿಸಿ, ಚಾ ಮಾಡಿ ಎಬ್ಬಸ್ತೀನಿ. ರಾತ್ರಿ ಭಾಳ ನಿದ್ದಿಗೆಟ್ಟೀ."
ಎಂದು ತಲೆಯನ್ನು ಲೋಡಿಗೆ ಆನಿಸಿ ಚಾದರವನ್ನು ಮೈತುಂಬ ಎಳೆದು, ಹಾಸಿದ್ದು ಹಾಸಿಟ್ಟಂತೆಯೇ ಇದ್ದ ತನ್ನ ಹಾಸಿಗೆಯನ್ನು ಸುತ್ತಿಕೊಂಡು ಒಳಗೆ ನಡೆದಳು.

ಪ್ರಶಾಂತ ಸುಪ್ರಭಾತದಲ್ಲಿ ಪಂತರ ಮನೆಯ ಲಕ್ಷ್ಮಿ, ಪಡಸಾಲೆಯಿಂದ ದೇವರಮನೆಗೆ ಬಿಜಯಿಸಿದ ಭಾಸವಾಯಿತು.

೦ ೦ ೦ ೦

ಮರುದಿನ ರಾಜಪ್ಪನಿಗೆ ಸಾದ್ಯಂತ ಹಕೀಕತ್ತನ್ನು ವಿವರಿಸಿದೆ. ಬಸವಂತಿಯನ್ನು ಒಡಕೊಂಡ ಸುದ್ದಿ ಹೇಳಿದೆ. ಶಾಂತಚಿತ್ತನಾಗಿ ಎಲ್ಲವನ್ನೂ ಕೇಳಿಕೊಂಡು ರಾಜಪ್ಪ ಹೇಳಿದ:

"ದಾದಲ್ಯಾ, ಊರಾನ ಮಂದಿ, ಬಸವಂತಿಗೆ ಓಡಿ ಬಂದ ಹೆಣ್ಣ ಅಂದರು. ನಾ ಅಲ್ಲಿಲ್ಲಾ. ಕೂಸ ಇದ್ದಾಗಿನಿಂದೂ ನಾ ಅಕಿನ್ನ ನೋಡಕೋತ ಬಂದೀನಿ. ಬಸಗೋಂಡನ ಮನೀಗೆ ಶ್ಯಾಮರಾಯಾ ಹರಕೀ ಹಾಕೂದು ಠೀಕಲ್ಲಂತ, ತಾನೇ ವಾಡೇದಾಗ ಬರೂ ಎದೀಮಾಡಿದಳು. ಆ ಧೈರ್ಯಾ, ನಾ ಜೀವಂತ ಇರೂ ಮಟಾ, ಬ್ಯಾರೇದವರಿಗೆ ಬರತಿದ್ದಿಲ್ಲಾ. ಅಕೀ ವಾಡೇ ಹೊಕ್ಕ ದಿನಾ ನಿಮ್ಮ ಅಪ್ಪಾ ಬಲೇ ಹಾರ್‍ಯಾಡಿದಾ. ಅಕೀ ಹೊರಬೀಳೂತನಕಾ, ಬಾಗಲದಾಗ ಧರಣೇ ಕೂಡತೀನಿ ಅಂದಾ. ನಾನs ಸಮಜಾಸಿ ಹೇಳಿದೆ. ಬಸವಂತಿ ಬರದಿದ್ದರ, ಊರಾಗಿನ ಯಾ ಕಸಬೇರ್‍ನರs ಶ್ಯಾಮರಾಯ ಹಿಡೀತಿದ್ದಾ. ಕಸಬ್ಯಾರ ಓಣೇನs ಅದಕ್ಕ ತಯಾರಾಗಿ ನಿಂತಿತ್ತು. ಗಣೇಶಚೌತ್ಯಾಗ, ರಾತ್ರೀ ಅವರ ನಾಚ ಇರತ್ತsದಲಾ ದಾದಲ್ಯಾ ಗುಡ್ಯಾಗ. ಅಂದ ಶ್ಯಾಮರಾಯನೂ ಬಂದಿದ್ದಾ ನಾಚಿಗೆ. ಪಾತರ ಪಾರೀ ತಮ್ಮಾ,

ಘನ ಲಗಟುಮಾಡಿ, ಶ್ಯಾಮರಾಯಗ ಆ ಓಣೀ ನಾತಾ ತೋರಿಸಿದಾ. ಆ ನಾತದ ಘುಂದೀ ಇನಾ ಇಳದಿರಲಿಕ್ಕಿಲ್ಲಾ. ಹಾಂಗs ಏನೋ ಕೆಲಸಕಂತ ಬಸಗೋಂಡನ ಮನೀಗೆ ಹೋಗಿದ್ದಾ. ಅಂದs ಅಂವನ ಕಣ್ಣಿಗೆ ಬಸವಂತಿ ಬಿದ್ದದ್ದು. ಆಗ ಹ್ಯಾಂಗ ಜಮಾಸಿತೋ ಏನೋ ಸೂತಾ, ಬಸವಂತಿ ಶ್ಯಾಮರಾಯನ ಮಾಲ ಆದಳು. ಶ್ಯಾಮರಾಯಾ, ವಾಡೇ ಕಸಬ್ಯಾರ ಖಾನೇ ಮಾಡಲಿಲ್ಲಂತ ಖರೇ ಸಮಾಧಾನನs ಅಸಿಸ್ತ್ಯಾ. ಹಾಂಗ ಕೇಳಿದರ ಧೂರದಿಂದ ಬಸವಂತಿ ನಮ್ಮ ಹತ್ತಗಡೀನs. ಅಕೀ ಘಡಣs ಬ್ಯಾರೇ ಅದs. ಶ್ಯಾಮರಾಯನ್ನ ಹಾದಿಗಿ ತಂದರ ಅಕಿನೇ ತರಬೇಕು. ಅಕೀ ಗುಣಾ ಗೊತ್ತಿತ್ತ ನನಗ. ದಾರೀನs ಕಾಯತಿದ್ದೆ. ಬಸವಂತಿ ವಾಡೇದಾಗ ಘಟ್ಟಿ ತಳಾ ಊರಲಿ. ವಾಡೇದ್ದು, ಶ್ಯಾಮರಾಯಂದು ತಾಬೇದಾರೀ ತಗೋಳಲಿ. ಅಲ್ಲೀ ನೀರಾ ಮೈ ಉಣ್ಣಲಿ ಅಂತ ಸುಮ್ಮನs ಇದ್ದೆ. ಇದ್ದ ಹಕೀಕತ್ತ ಅಕೀಗೆ ತಿಳಿಸಿ, ಶ್ಯಾಮರಾಯನ ಮುಳ್ಳ ಎಬ್ಬೊ ಡಾವ್ ನಡಸಿದ್ದೆ. ಅದನ್ನ ನೀನs ಸಾಧಿಸಿದಿ. ಠೀಕ ಆತ ದಾದಲ್ಯಾ. ಇನ್ನ ಗಡಿಬಿಡಿ ಮಾಡೂದು ಬ್ಯಾಡಾ. ಶ್ಯಾಮರಾಯಾ ಪೂರಾ ಬಸವಂತೀ ತಾಬೇದಾಗ ಬಂದಾಗ ಸುರಂಗ ಹಚ್ಚೂಣು. ಈಗ ಇನಾ ಬೆಸಿಗಿ ಬೆಸೀಲಿಕ್ಕೆ ಹತ್ತೇದ. ಶ್ಯಾಮರಾಯಾ ಇನಾ ದಂಡ್ಯಾಗ ಇದ್ದಾನ. ನಡನೀರಾಗ ಹೋದನಂದರ ಕೊಳ್ಳಿಗೆ ಅಡರಂತ ಬಸವಂತಿಗೆ ಹೇಳೂಣು. ಮುಣಗೂ ಅಂಜೀ ಕೇಲ್ಯರs ನಮ್ಮನ್ನ ಕರೀಬೇಕಾಗತದ. ನಮ್ಮ ಡಾವ್ ಸಾಧಸ್ತದ. ಬಸವಂತಿ ಅಸನರಿ ಜಾತ್ಯಲ್ಲಾ. ಅದರದು ಉಡದ ಹಿಡತಾ. ಅಕೀ ಅಂದದ್ದೂ ಖರೇ ದಾದಲ್ಯಾ, ಬಿಟ್ಟ ಬಾಣಾ, ಕೊಟ್ಟ ಮಾತಾ ಹುಸೀ ಹೋಗೂದಿಲ್ಲ ಅಂತ. ತಿಳೀತ ತೇನು? ನೀ ಭಟ್ಟನ ಮಗಾ. ಆರ ತಾಸ ಹೇಳೂ ಮಂತ್ರಾ ಅರ್ಧಾ ತಾಸಿನ್ಯಾಗ ಮುಗಸೂ ಗಡಿಬಿಡಿಯಂವಾ. ಮಂತ್ರಪುಷ್ಪದ ಮಂತ್ರಾ ಅಂತಿರತೀರಿ ನೋಡು ಹಾಂಗ ಒಂದಿಷ್ಟು ಗಾಡೀ ನಿಧಾನ ಬಿಡು.”

ರಾಜಪ್ಪ ನಿಧಾನ ಹೆಜ್ಜೆ ಇಡುವದನ್ನು ತಿಳಿಸಿದ್ದು ನನಗಷ್ಟು ರುಚಿಸಲಿಲ್ಲ. ಇದೇ ಕಾವಿನಲ್ಲಿಯೇ ಸುರಂಗ ಹಚ್ಚುವ ಹುಚ್ಚು ಹವ್ಯಾಸ ನನಗೆ ತೊಡಗಿತ್ತು. ರಾಜಪ್ಪನಷ್ಟು ಇನ್ನೂ ನನ್ನ ಕೂದಲು ನೆರೆತಿರಲಿಲ್ಲ.

ಶ್ಯಾಮರಾಯ, ರಾವಜೀಕಾಕಾನ ಕಿತ್ತೇ ವಳಣದಾರ ಅಕ್ಷರದಲ್ಲಿ ತೀಡಿದ ಬಗ್ಗೆ ದಾದಲ್ಯಾ ಚಕಿತನಾದ.

ಅವನು ಸೋನಕ್ಕನನ್ನು ತ್ಯಜಿಸಿ ನಾಕು-ನಾಕೂವರೆ ವರುಷದ ಸನಿಯಕ್ಕೆ

ಬಂದಿತ್ತು. ಧುಳೆಯನ್ನು ಬಿಟ್ಟು ಅವನು ಊರಿಗೆ ಬಂದು ಸ್ಥಾಯಿಯಾದನಂತರ ಅವನಿಗೆ ಅನ್ಯ ಲಿಗಾಡಿಗೆ ವೇಳೆ ಸಾಲುತ್ತಿರಲಿಲ್ಲ. ಹತ್ತೆಂಟು ಕಾಮಗಿರಿ ಕೈಯ ಲ್ಲಿದ್ದವು. ತಲೆತುಂಬ ವಿಚಾರ, ಮೈತುಂಬ ಕೆಲಸವಿತ್ತು. ಕೆಲಸವಿದ್ದರೂ ಆರ್ಥಿಕ ಅಡಚಣೆಯಿಂದ ಹೈರಾಣಾಗುವ ಅನೇಕ ಕಂತ್ರಾಟದಾರರನ್ನು ನಾನು ನೋಡಿದ್ದೆ. ಅವರಿಗೆ ಹೊರಗೆ ಈ ಆರ್ಥಿಕ ಬ್ಯಾದ. ಮನೆಯಲ್ಲಿ ಮಡದಿ-ಮಕ್ಕಳ ಸಂಸಾರ ಬ್ಯಾದ. ಜೀವ ಕಸಿವಿಸಿಗಿಡದೆ ಹೋದರೆ ಆಣೆ. ಆದರೆ ಶ್ಯಾಮರಾಯನಿಗೆ ಈ ಎರಡೂ ಬ್ಯಾದದ ತೊಂದರೆ ಇರಲಿಲ್ಲ. ತೆಳಗೆ ಮೇಲೆ ನೀರಿನಂತೆ ಹಣದ ಹೊಳೆ ಹರಿಯುತ್ತಿತ್ತು. ಹಿಂಡಿಕೊಳ್ಳುವ ಮನಸ್ಸುಮಾಡಿ ಹತ್ತಿರ ಸಾರುವದೇ ತಡ, ಭೋಳಾಶಂಕರನಂತಹ ಸಾಹೇಬರು, ಬಿಲ್ಲು ಚುಕ್ತಾಮಾಡಿ, ಕಾಮಗಿರಿಯ ಪ್ರತಿ ಫಲವನ್ನು ಕಾಮಧೇನುವಿನಂತೆ ಧಾರೆಯಾಗಿ ಕರೆಯುತ್ತಿದ್ದರು. ವಾಸ್ತವ್ಯಕ್ಕೆ ಹರ್ಮ್ಯಸಮಾನ ವಾಡೇ ಇತ್ತು. ವಿಹಾರಕ್ಕೆ ಹಳೆಯದಾದರೂ, ಸಾದು ಆದ ಕರೇ ಫೋರ್ಡು-ಗಾಡಿ ಇತ್ತು. ತುಪ್ಪದಲ್ಲಿ ನಿತ್ಯ ಕೈತೊಳೆದುಕೊಂಡರೂ ಮಿಗು-ವಷ್ಟು ಶ್ರೀಮಂತಿಕೆ ಇತ್ತು. 'ಹೆಂಡತೀ ನೀ ಪ್ರಾಣ ಹಿಂಡುತೀ' ಪಲ್ಲವಿಯ ನೆನಪು ತಪ್ಪಿ ಕೂಡ ಸುಳಿಯದ ಆರಾಮುಶೀರ ಏಕಾಕಿಜೀವನವಿತ್ತು. ಇಲ್ಲದ ಲಚಾಂಡ, ಸಲ್ಲದ ತ್ರಾಸು ಯಾವೂ ಶ್ಯಾಮರಾಯನ ತಲೆಯನ್ನು ತಿನ್ನುವಂತಿರಲಿಲ್ಲ. ಆ ರೀತಿ ನೋಡಿದರೆ ಶ್ಯಾಮರಾಯ ನಿಶ್ಚಿಂತ ಪುರುಷನಾಗಿದ್ದ. ಸಂಸಾರ, ಬಳಗ ಎಲ್ಲಾ ಇದ್ದೂ, ನಿಸ್ಸಂಗ ಬಾವಾ-ಬೈರಾಗಿಯಾಗಿದ್ದ. ಹೀಗಿದ್ದೂ ಐವತ್ತರ ಮನೆ ಮುಟ್ಟಿದ ಶ್ಯಾಮರಾಯನಿಗೆ, ಏಕದಮ್ ಹರೆಯು ಗಿಮಿದಿರುಗಿ ಜೀವನದಲ್ಲಿ ರಸಿಕತೆ ಯನ್ನು ಕಾಣುವ ಹವ್ಯಾಸ ಮೂಡಿಸಿದ್ದು ಒಂದಿಷ್ಟು ಅಚ್ಚರಿಯ ಮಾತೇ ಆಗಿತ್ತು.

ಆದರೆ ಮನುಷ್ಯಪ್ರಾಣಿಗೆ ಏನೋ ಒಂದು ಇಲ್ಲದಿದ್ದಾಗ ಅದು ಬೇಕು ಎನಿಸುವದು, ಅದನ್ನು ಪಡೆದೇ ತೀರುವದು ಒಂದು ಸಹಜಪ್ರವೃತ್ತಿ. ಎಲ್ಲವೂ ಇದ್ದ ಶ್ಯಾಮರಾಯನಿಗೆ ಹೆಣ್ಣುಸಹವಾಸದ ಆ ಸುಖ ಮಾತ್ರ ಇರಲಿಲ್ಲ. ಅವನೂ ಒಂದೆರಡು ವರುಷ ತಾಳಿ ತಡೆದುಕೊಂಡು ಬಂದಿರಬೇಕು. ಇನ್ನು ಅದನ್ನು ಮುಂದೆ ತಳ್ಳುವದು ತನಗೇ ಅಶಕ್ಯವೆನಿಸಿದಾಗ, ಆ ತೀಟಿ ತೀರಿಸಿಕೊಳ್ಳುವ ಅಭಿ ಲಾಷೆಯಿಂದ ಅವನು ಪಾತರ ಪಾರಿಯನ್ನು ಸಂಧಿಸಬಹುದಾಗಿತ್ತು. ಗಣೇಶ ಚತುರ್ಥಿಯ ಹೊತ್ತಿಗೆ ಅವನು ಆ ಓಣಿಯ ನಾತ ಕುಡಿದನೆಂದು ರಾಚಪ್ಪ ಹೇಳಿದ್ದ. ಆದರೆ ಅದಕ್ಕೂ ಪೂರ್ವದಲ್ಲಿ ಅವನು ಈ ನಾತವನ್ನು ಮೂಸಿ ನೋಡಿರಬಹುದು.

ಗಣೇಶಚವತಿಯಲ್ಲಿ ಆ ಪ್ರಚ್ಛನ್ನ ಸತ್ಯ ಸಾರ್ವಜನಿಕವಾಯಿತು. ಅಷ್ಟೇ!

ಕುಲಕರ್ಣಿ ಬಂಡ್ಯಾ ಅಜೂಕ ಹೇರಕ. ಅವನನ್ನು ಗಾಠಾಯಿಸಿ ಕೇಳಿದೆ. ಅವನು ವಸ್ತುಸ್ಥಿತಿ ಹೀಗೆ ಹೀಗೆ ಎಂದು ಹೇಳಿದ. ಅವನ ಮಾತಿನಲ್ಲಿ ಸತ್ಯಾಂಶವಿದೆ ಯೆಂದು ತೋರುತ್ತದೆ.

ಪಾತರ ಪಾರಿ ಹೇಳೀ ಕೇಳೀ ಸಾರ್ವಜನಿಕ ಮಾಲು. ತನ್ನ ಜವ್ವನಿಕೆಯ ಕಾಲ ದಲ್ಲಿ ಉಳ್ಳವರ ಒಕ್ಕಲಾಗಿದ್ದಳೆಂದು ಪ್ಯೈ-ಕೈ ಬಣ್ಣದ ನಿಗಾ ಇನ್ನೂ ಉಳಿಸಿಕೊಂಡಿ ದ್ದಾಳೆ. ಈಗಲೂ ಕಣ್ಣು-ಮೂಗಿನಿಂದ ನೀಟು-ನೀಟಾಗಿದ್ದರೂ, ಹರೆಯದ ಹಸಿರಿ ನಲ್ಲಿ ಪಾಡಿನ ಗೀರು-ಗೆರೆ ಮೂಡಿದೆ. ಮುರಕದಲ್ಲಿ ಒಗರು, ಹುಳಿ, ಖಾರ ಉಳಿದಿಲ್ಲ. ತಾನೇ ಲಗಟುಮಾಡುವದಕ್ಕಿಂತ ಲಗಟಿಗೆ ಯೋಗ್ಯ ಗಿರಾಕಿಗಳನ್ನು ಗಾಠಾಯಿಸಿ ಕೊಡುವ, ಬಟ್ಟಾ ಉಪಧಂದೇಯನ್ನು ಅವಳೀಗ ನಡೆಸಿದ್ದಾಳೆ. ಈಗ ಬಹಳ ವಾದರೆ ಅವಳಲ್ಲಿ ತಾಸರ್ಧತಾಸು ಕುಳಿತು 'ಸಂಗೀತ-ನಾಟ್ಯಮವಧಾರಯ' ಮಾಡಬಹುದು. ಪಾನ-ತಮಾಖೂ-ಪ್ರಕರಣ ಮುಗಿಸಬಹುದು. ಹೆಜ್ಜೆ ಹೆಚ್ಚು, ಅಡಿ ಕಡಿಮೆ ಲೆಕ್ಕದಿಂದ, ಅಷ್ಟೇ ಪ್ಯೈ-ಕೈ ಲಗಟಮಾಡಬಹುದು. ಉಳಿದ ಬಾಬತ್ತಿ ನಲ್ಲಿ ಅದು ಖಟರಾ-ಗಾಡಿ.

ಶ್ಯಾಮರಾಯನ ಹರೆಯೂ ಪಾಡಿಗೆ ತಿರುಗುವ ಬೇತಿನಲ್ಲಿದ್ದರೂ ಉತ್ಸಾಹ ರಸರಸಿತವಾಗಿತ್ತು. ರೊಕ್ಕದ ಗಮಜಿತ್ತು. ಹರೆಯದ ಹೆಣ್ಣನ್ನು ಚಾಂದೀ-ಡಬಾಸಿ ನಿಂದ ಮುಡಿಸುವಷ್ಟು ವೈಭವವಿತ್ತು. ಅವನು ಯಾಕೆ ಈ ಖಟರಾ-ಗಾಡಿಗೆ ಜೋಲು ತ್ತಾನೆ? ಕೆಲವು ದಿನ ಆಕೆಯ ಕೂಡ ಇದ್ದರೂ ಮಜಾ ಲುಟಾಯಿಸಿರಲಿಕ್ಕಿಲ್ಲ. ಊರಲ್ಲಿಯ ಅನ್ಯ 'ಸೆಕಂಡ್-ಹ್ಯಾಂಡ್' ಮಾಲಿಗಿಂತ, ಇದು ಒಂದಿಷ್ಟು ಊಚು ಎಂದು ಅವಳಿಗೆ ತನ್ನ ಶ್ರೀಮಂತಿಗೆಯ ದರ್ಪವಾಸವನ್ನು ತೋರಿಸಿರಬೇಕು. ಇವನಿಗೆ ವ್ಯಾಪಾರಮಾಡಿದ ಆಥ್ಯ. ಅವಳಿಗೆ ಯಾಪಾರವಾದ ಖುಷಿ. ಇಬ್ಬರಿಗೂ ವೃದ್ಧಿ-ಸೂತಕದ ಹತ್ತುಗಡೆಯಿಲ್ಲ.

ಶ್ಯಾಮರಾಯ ಹಸಿದ ನಾಯಿಯಾಗಿದ್ದರೂ ಹಳಸಿದ ಅನ್ನಕ್ಕೆ ಬಾಯಿ ಹಾಕು ವವನಲ್ಲ. ಹಳಸಿದ ವಾಸ ಅವನ ಮೂಗಿಗೆ ಬಡೆದಿರಬೇಕು. ಅಂತೇ ಅವನು ಅಂದು ಪಾತರದವರ ಓಣಿಯಿಂದ ಕಾಲು ತೆಗೆದಿರಬೇಕು. ಕಾಲು ಕಿತ್ತಿಕೊಂಡು ಅಲ್ಲಿಂದ ಹೊರಬಿದ್ದಿದ್ದರೂ ಅಲ್ಲಿಯ ವಿಲಾಸದ, ಷೋಕಿಯ ನಂಜು ಅವನ ಜೀವನದಲ್ಲಿ ರಸ ಒಸರದೆ ಬಿಟ್ಟಿರಲಿಕ್ಕಿಲ್ಲ. ಪಾರಿಯ ಕೈಯಿಂದ ಪಾರಾಗುವಾಗ. ಅವಳು ತನಗೆ

ದೊರಕದ ಶ್ಯಾಮರಾಯನ ಭಾಗ್ಯ. ತನ್ನಂಥ ತಳಿಗಾದರೂ ದಕ್ಕಲಿ ಎಂದು ಬಿಡುವ ಕೈಗೆ ಅಂಗುಲಿದಂಶ ಮಾಡಿಸಿದಳೆಂದು ಕಾಣುತ್ತದೆ. ಆ ಸಂಜು ನಟ್ಟಲ್ಲಿ ಮುರುಟಿದೆ, ಶ್ಯಾಮರಾಯನ ಸರ್ವಾಂಗವನ್ನೇ ವ್ಯಾಪಿಸಿರಬೇಕು. ಶ್ಯಾಮರಾಯನ ಕಣ್ಣಿಗೆ ಕಾಮನ ಧುಂದಿ ಏರಿರಬೇಕು.

ಪಾರಿಯಲ್ಲಿ ಅಪೂರ್ತವಾಗಿ ಉಳಿದ ವಾಸನೆಯನ್ನು ಮನಸೋಕ್ತವಾಗಿ ಭೋಗಿಸಲು ಶ್ಯಾಮರಾಯ ಗಿರಾಕಿಯ ತನಿಖೆ ನಡೆಸಿದ. 'ಸಾಹಸೇ ಶ್ರೀವಸತಿ' ಎಂಬಂತೆ, ಅವನ ಸಾಹಸಕ್ಕೆ ಬಸವಂತಿಯ ಹೊನ್ನ ಕಳಸವೇರಿತು.

ಊರೆಂದ ಮೇಲೆ ಹೊಲಗೇರಿ ಇರದೆ ಹೇಗೆ? ಹಣಮಪ್ಪನ ಗುಡಿಯಂತೂ 'ಕಾಮನ್ ಫ್ಯಾಕ್ಟರ್'. ಬಸವಣ್ಣನ ಗುಡಿ, ಈಶ್ವರನ ಗುಡಿ, ನೀರು ತುಂಬುವ ಭಾವಿ, ಕೆರೆ ಇರದಿದ್ದರೆ ಅದಕ್ಕೆ ಊರೆಂದರೂ ಯಾತಕ್ಕೆ ಅನ್ನಬೇಕು? ಈ ಹಳೆಯ ಜರಾಜೀರ್ಣ 'ಇರಬೇಕಾದ ವಸ್ತುಗಳ' ಸದರಿಸಲ್ಲಿ ಇನ್ನೂ ಒಂದು ಸಂಸ್ಥೆ, ರೂಢಿಯಂತೆ, ಪದ್ಧತಿಯಂತೆ, ಊರು ಬೆಳೆದು ಬಲಿಯುತ್ತಿರುವಾಗಲೇ, ಅದರ ಕೂಡ ತನ್ನ ಸಂಸಾರವನ್ನು ಥಾಟಾಯಿಸುತ್ತ ರೆಂಬೆ-ಕೊಂಬೆಯಲ್ಲಿ ತನ್ನ ಸಂತಾನ-ಶ್ರೀಯನ್ನು ಬೆಳೆಸುತ್ತ ಬಂದಿದೆ. ಅದೆಂದರೆ ಈ ವೇಶ್ಯಾಸಂಸ್ಥೆ. ಅದರ ಹುಟ್ಟು, ಬೆಳವಣಿಗೆ, ಅವಶ್ಯಕತೆಯನ್ನ ಕುರಿತು ನಾನು ಪ್ರವಚನಮಾಡುವ ಭಾನಗಡಿಯಲ್ಲಿ ಬೀಳುವದಿಲ್ಲ. ಅದು ನನ್ನ ಗಂಟಲಿನ ತುತ್ತೂ ಅಲ್ಲ. ನಮ್ಮ ನಾಡಿನ ಹಿರಿಯ ಹಳ್ಳಿಗಳಲ್ಲಿ ಅದು ಬೆಳೆದಂತೆ ನಮ್ಮೂರಲ್ಲೂ ಬೆಳೆದಿತ್ತು. ತನ್ನ ಸ್ಥಾನಮಾನದ ಯೋಗ್ಯತೆಯನ್ನು ಅರಿತು ವಿಜೃಂಭಿಸಿಯೂ ಇತ್ತು. ಸೂಳೆ ಎನ್ನುವ ನಿಕೃಷ್ಟ ನಾಮ, ತುಚ್ಛಭಾವನೆ, ಬರಗೊಡದೆ ವಸಂತಸೇನೆಯ ಪುಣ್ಯ ತಳಿಗೆ ಕೀರ್ತಿ ಬರುವ ರೀತಿಯಲ್ಲಿ ಬಾಳಿತ್ತು. ಇನ್ನೂ ಬಾಳಿದೆ.

ಹೀಗೆ ಬಾಳಿದ ನಾಕಾರು ಕುಟುಂಬಗಳಲ್ಲಿಯ ಯಾವ ವಸಂತಸೇನೆಯೂ ನಮ್ಮ ಚಾರುದತ್ತ ಶ್ಯಾಮರಾಯನಿಗೆ ಮೀಸಲಾಗಲು ಖಾಲೀ ಇರಲಿಲ್ಲ. ಅವರೆಲ್ಲ ಒಬ್ಬರಲ್ಲ ಒಬ್ಬ ಭಾರೀ ಯಜಮಾನರ ಛತ್ರದಲ್ಲಿ ನಿವಾಂತರಾಗಿದ್ದರು. ಜವಳೀ ಅಂಗಡಿಯ ಭೋರೀಶೇಟ, ಪತ್ತೆಂಟು ಗಾಣವಾಡುತ್ತಿದ್ದ 'ಓಯಿಲ್‌ಕಿಂಗ್' ಪರಸ್ಯಾನ ಅಪ್ಪ, ದಾದೋಜೀ, ಹತ್ತಿಯ-ಅರಳೆಯ ಸಟ್ಟಾವ್ಯಾಪಾರಮಾಡುತ್ತ ಬೆಳಗಾಂವಿಯಲ್ಲಿ, ನಮ್ಮೂರಲ್ಲಿ ಪೇಢಿ ನಡಿಸುತ್ತಿದ್ದ ಗಂಗಾಪ್ರಸಾದ ತಿವಾರಿ, ಕುಲಕರ್ಣಿ ಬಂಡ್ಯಾನ ತಂದೆ – ರಂಗಣ್ಣ, ಇವರೇ ಈ ವಾಸಂತಿಕಾ-ಛತ್ರಕ್ಕೆ ಮಹಾ

ಪಾಲರಾಗಿದ್ದರು. ರಾವಜೀಕಾಕಾ – ಗಿರಿಜಾನಂತೆ, ಶೀರ "ಘರೋಬಾ" ಸಂಬಂಧ ಬಂದ ಗಿರಾಕಿಗಳೂ ಊರಲ್ಲಿ ಕಡಿಮೆ ಇರಲಿಲ್ಲ. ಬಸವಂತಿ ಅತ್ತೆಯ ಮನೆಯಿಂದ ಪರಾಂಗದಾ ಆಗಿ, ಅತ್ತಿಗೆಯ ಕೈಯಲ್ಲಿ ಕಾಲುಕಸವಾಗಿರದಿದ್ದರೆ ಶ್ಯಾಮರಾಯನ ಕಾಯಿ ಮುಲ್ಲಿಯೇ ಆಗುವಂತಿತ್ತು. 'ರಿಜರ್ವೇಶನ್' ಸಲುವಾಗಿ ಅವನು ಕ್ಯೂದಲ್ಲಿ ನಿಲ್ಲುವ ಪ್ರಸಂಗ ಬರಬಹುದಾಗಿತ್ತು.

ಶ್ಯಾಮರಾಯ 'ರಿಜರ್ವೇಶನ್'ದ ಸಲುವಾಗಿ ಕ್ಯೂದಲ್ಲಿ ನಿಲ್ಲದೆ, ಬಸವಂತಿಯ ಬೇಟೆಗೆ ಕೆಲ ದಿನ ಟಪಕಾಸಿಕೊಂಡು ಕೂಡಬೇಕಾಯಿತು. ಬೇಟೆ, ನಾಲಿಗೆ ಚಪ್ಪರಿಸುವ ಅಳವಿನಲ್ಲಿ ಬರುವದಷ್ಟೇ ಪುರಸೊತ್ತು, ಚಟ್ಟನೇ ಜಿವ್ಹಾಗ್ರ ಚಾಚಿ ಈಪ್ಸಿತ ಗಿರಾಕಿಯನ್ನು ಕಬಳಿಸಿ ಕೃತಕೃತ್ಯನಾಗಿದ್ದ.

੦ ੦ ੦ ੦

ಶ್ಯಾಮರಾಯ ಬೆಳಗಾಂವಿಗೆ, ಪುಣೆಗೆ ಹೋಗುತ್ತೇನೆಂದು ತಿಳಿಸಿ, ಪತ್ತೆಂಟು ದಿನಗಳ ಹಿಂದೆ ಊರು ಬಿಟ್ಟವ, ಪುಣೆಗೆ ಹೋಗಿದ್ದನೋ ಇಲ್ಲವೋ – ಊರಿಗೆ ಒಂದೆರಡು ದಿನ ಅಗಾವಾಗೇ ಬಂದ. ಬರುವಾಗ ದುಃಖದ ವಾರ್ತೆಯನ್ನು ಹೊತ್ತು ತಂದ. ತಿಂಗಳಿಂದ, ವಾರ್ಧಕ್ಯದ ಮೂಲಕ ಹಾಸಿಗೆಗೆ ಅಂಟಿದ ನಿವೃತ್ತ ಡಿ.ಡಿ.ಸಿ ರಾ. ಸಾ. ಠೋಮರೇಮಾಮಾ, ಈಗ ಆಗ ಎನ್ನುತ್ತಿದ್ದಾರೆ – ಆಶೆ ಬಿಟ್ಟಂತೆಯೇ ಎಂದು ಹೇಳಿದ. ಆ ಕಾರಣದಿಂದ ತನಗೆ ಪುಣೆಗೆ ಹೋಗುವದಾಗಲಿಲ್ಲವೆಂದೂ ತಿಳಿಸಿದ. ರಾ. ಸಾ. ಠೋಮರೇಮಾಮಾನ ಅಂತ್ಯದರ್ಶನ ಘಟಿಸುವಂತಿದ್ದರೆ ಘಟಿಸಲಿ ಎಂದು ನಾನು ಅಂದೇ ಸಂಜೆಯ ಮೋಟಾರಿನಿಂದ ಬೆಳಗಾಂವಿಗೆ ಪ್ರಯಾಣಿಸಿದೆ.

ನಾನು ಸಾಹೇಬರ ಬಂಗಲೆ ಮುಟ್ಟಿದಾಗ, ರಾ. ಸಾ. ಠೋಮರೇಮಾಮಾ ಇರಲಿಲ್ಲ. ಇರಲಿಲ್ಲವೆಂದರೆ ಸತ್ತಿರಲಿಲ್ಲ. ಅಶಕ್ತತನದ ಮೂಲಕ ಹೆಚ್ಚು ಅಡ್ಡಾಡುವದು ಶಕ್ಯವಾಗುವದಿಲ್ಲವೆಂದು, ಕು. ಚಿ. ಶಕೂನನ್ನು ಕರೆದುಕೊಂಡು ಕಿಲ್ಲೆಯ ವಿಶಾಲ ಪ್ರಾಂಗಣದಲ್ಲಿಯೇ ವಾಯುವಿಹಾರಿಯಾಗಲು ಹೋಗಿದ್ದರು. ರಾ. ಸಾ. ಠೋಮರೆಮಾಮಾ, ಸಾಯಲಿಕ್ಕೆ ಹುಟ್ಟಿದ ಜೀವವೇ ಅಲ್ಲವಲ್ಲ!

# ಎಂಟು

ಹಾಗೆ ನೋಡಿದರೆ ನಾತಾಳ ಸೂಟಿ ಕೇವಲ ಎರಡೇ ಎರಡು ದಿನವಿತ್ತು. ಆದರೂ ವಿಶ್ವಾಸ, ಈ ಸಲ, ನಾಕು ದಿನ ನಿಂತುಹೋಗುವ ಬೇತಿನಿಂದ ಬಂದಿದ್ದ.

ಮುಂಬೈ-ಪುಣೆ, ಅಡುಗೆಯಮನೆ-ನಡುಮನೆ ಇದ್ದಂತೆ. ಒಂದು ಗಾಡಿಗೆ ಬಂದು ಇನ್ನೊಂದು ಗಾಡಿಗೆ ತಿರುಗಿ ಹೋಗಲು ಅನುಕೂಲ. ಆದರೂ ಅಭ್ಯಾಸ, 'ಹಾಸ್ಪಿಟಲ್' ಡ್ಯೂಟಿಯಲ್ಲಿ ವ್ಯತ್ಯಯ ಬರದಂತೆ ವ್ಯವಸ್ಥೆ ಮಾಡಿಕೊಂಡು, ವಿಶ್ವಾಸ ಎರಡೇ ದಿನಗಳ ಬಿಡುವಿದ್ದರೂ ಪುಣೆಗೆ ಬಂದು ಕಾಕಾ, ಸೋನಕ್ಕ, ತಮ್ಮಂದಿರನ್ನು ನೋಡಿಕೊಂಡು ಹೋಗುತ್ತಿದ್ದ. ಈಗ ಸುರೇಶ ಕೈಗೆ ಬಂದಿದ್ದ. ಬಿ.ಈ. ಪರೀಕ್ಷೆಯಲ್ಲಿ ಪ್ರಥಮವರ್ಗದಲ್ಲಿ ಪಾಸಾಗಿದ್ದ. ವಿಶ್ವಾಸನ ಆಶೆ-ಆಕಾಂಕ್ಷೆಗಳನ್ನು ಪೂರ್ಣಗೊಳಿಸಿದ್ದ. ಕಾಕಾ ತಮ್ಮ ಶ್ರೇಯಸ್ಸನ್ನು ಶ್ರೀಹರಿಗೆ ಅರ್ಪಿಸಿ,

"ಶ್ರೀಹರೀದ ಕೃಪಾ. ಪಂತರನ ಅಂವಾ ಎಂದೂ ಅಲಕ್ಷ್ಯ ಮಾಡಿಲ್ಲಾ. ಮಾಡೂದೂ ಇಲ್ಲಾ"

ಎಂದರು.

ವಿಶ್ವಾಸ ಮುಂಬೈಯಿಂದ ಬಂದ ದಿನವೇ ಕಾಕಾ ಸೋನಕ್ಕನನ್ನು ಕರೆದು ಹೇಳಿದರು:

"ಸೋನಾ, ಆ ವಿಶ್ಯಾನ ಅರಿವೀ ನೋಡಿದಿಲ್ಲೋ? ಹಳೀ ಚಿಂದ್ಯಾಗಿ ಜೋತಬೀಳಲಿಕ್ಕೆ ಹತ್ತ್ಯಾವ. ಹೋದ ವರ್ಷ ಹೊಲಿಸಿದ್ದೂ ಆ ಶರ್ಟಾ, ಆ ಪಾಟಲೋಣಾ. ಖೋಡಿ, ಬಲೇ ಜಿಬಟ ಹುಡಗಾ. ಇಕಾ, ನೀನs ಅವನ ಜೋಡೀ ಬಾಜಾರಕ ಹೋಗಿ, ಬಕ್ಕಳ ನಾಕೆಂಟು ಅರಿವೀ ಹೊಲಿಸಿಬಿಡೂ. ಛಲೋ ನಾಕ ಉಣ್ಣೀ ಅರಿವೀ ತಗೋ. ಪತ್ತಾರ ಕಿಂವೀ ಚುಚ್ಚಿದರs ಕೇಳಾಂವ ಅಂವಾ. ನಾಳೆ ದೊಡ್ಡ ಡಾಕ್ಟರ ಆಗಾಂವಾ. ಹಾಕೋಳಿ ಮಸ್ತ ಅರಿವೀ. ಚಿಂಚಲೀ ಸ್ಟೇಶನ್ ಮಾಸ್ತರಂಥಾ ಆ ಚಣ್ಣಾ ಬಿಡೂ ಅನ್ನು. ಗಿರಿಜಾನ ತಾಬೇಕ್ಕ ಕೊಟ್ಟಬಿಡೂ ಆ ಅರಿಬೀ, ಭಾಂಡೀಗಾರ ಹತೀಲೇ ಪಾತೇಲೀನರ ಖರೀದಿ ಮಾಡತಾಳ.

ಸೋನಾ, ಏನಾತಂದಿ, ವಿಶ್ಯಾ ಇಂಗ್ರೇಜೀ ತಿಸರೀ ಏನರs ಪಾಸ ಆಗಿರ

ಬೇಕು. ಬ್ಯಾಸಿಗೀ ಸೂಟೀಗ್ಯಂತ ಊರಿಗೆ ಬಂದಿದ್ದಾ. ಸೂಟೀ ಮುಗಿಸಿ ತಿರಿಗಿ ಸಾಂಗ್ಲೀಗೆ ಹೊಂಟಿದ್ದಾ. ಅಂವನ ಕಾಕೂ ಖುಷೀಲೇ, ತನ್ನ ವಿಶ್ಯಾಗ ಕೋಟು ಪಾಟಲೋಣ ಹೊಲಿಸಿಗೋ ಅಂತs. ನಾಕೆಂಟು ವಾರಾ ಎಂಥಾ ಉಣ್ಣೀ ಅರಿವೀ ಕೊಟ್ಟರ, ಈ ಮಗಾ, ಸಾಂಗ್ಲೀಯಿಂದ ನನಗ ಪತ್ರಾ ಬರದಾ: ಕಾಕಾ, ನಿಮ್ಮ ಕೋಟಿನ ಅಳತಿ ಕಳಸರಿ, ಕಾಕೂ ಕೊಟ್ಟ ಅರಿವ್ಯಾಗ ನಿಮಗೊಂದು ಝಕಾಸ ಕೋಟ ಹೊಲಿಸಿ ಕಳಸ್ತೀನ್ಯಂತ. ಸೋನಾ, ನನ್ನ ವಿಶ್ಯಾ ಇಂಥಾವಾ. ಅಂವಗ ತಾ ಕಾಣಸೂದೇ ಇಲ್ಲಾ. ನಾನು. ನೀನು. ಹುಡುಗೂರು ಅದೇ ಧ್ಯಾಸಾ. ಅವರದೇ ಚಿಂತಿ. ಅವರದೇ ಕಲ್ಯಾಣಾ. ನಿನ್ನ ಕಾಕೂ ಹೋದ್ಲು, ಸೋನಾ, ಇಲ್ಲದಿದ್ದರ ಏನ ಸುಖಾ ಹಚಿಗೊಂಬಾಕಿ. ವಿಶ್ಯಾ ಇಂಥಾ ದೊಡ್ಡ ಜೀವನ ಆದದ್ದು ಅಕೀ ಕಣ್ಣ ಕಾಣಲಿಲ್ಲಾ ಅಂತ ಕೆಟ್ಟ ಅನಸ್ತದ. ಸೋನಾ, ವಿಶ್ಯಾನ್ನ ಮುಂದ ಹಾಕ್ಕೊಂಡು ಹೋಗು. ಇಲ್ಲದಿದ್ದರ ಬೆಂಡಲಾ, ನೆವಾ ಹೇಳಿ ಮೋತೀ ತಪ್ಪಿಸಿಬಿಟ್ಟಾನು. ಇಕಾ, ತಿಜೋರೀ ಕೀಲಿಕೈ. ದೀಡಸೇ, ದೋನಸೇ ಎಷ್ಟ ಬೇಕು ನೋಡಿ ತಗೋ. ಅರಿವೀ ಹೊಲೀಲಿಕ್ಕೆ ಹಾಕೇ ಬಂದಬಿಡು. ಕರಾರಮಾಡು, ಮೂರ ದಿನದಾಗ ಹೊಲದ ತಯಾರ ಆಗಿರಬೇಕಂತ. ಹೊಲಿಗೂಲೀ ಹೆಚ್ಚ ತಗೊಂಡ್ರೂ ಅಡ್ಡೀ ಇಲ್ಲಾ."
ಎಂದು ಹೇಳಿ ತಿಜೋರಿಯ ಕೀಲಿಕೈಯನ್ನು ಸೋನಕ್ಕನ ಕಡೆಗೆ ಸರಿಸಿದರು.

"ಕಿಶೋರ. ಆ ಕೇಸರೀ ವಿಶೇಷಾಂಕ ಬಂದದಲ್ಲs. ತಾರಪಾ ಇಷ್ಟು. ಇಕಾ ನೀನs ತಗೊಂಡ ಬಾ. ಓದಿ ತೋರಸೀಯಂತs. ನೀ ಖಣಖಣೀತ ಧಸೀತ್ ಓದಿದರ ಏನರs ಅಷ್ಟು ತಲ್ಯಾಗ ಹೋಗತದ."
ಎಂದು ಕಿಶೋರನನ್ನು ಕರೆದರು. ಹನ್ನೆರಡು-ಹದಿಮೂರು ವರುಷದ ಕಿಶೋರ ದಪ್ಪ ಕಟ್ಟಿನ ಜಾಳೀಸು ಸರಿಮಾಡಿಕೊಳ್ಳುತ್ತ, ಕಾಕಾ ಅವರು ಆತುಕೊಂಡು ಕುಳಿತ ಲೋಡಿನ ಒಂದು ಬದಿಗೆ ತಾನೂ ಆತು ಕುಳಿತು ಓದತೊಡಗಿದ.

ಕಿಶ್ಯಾ – ಕಿಶೋರ, ಕಾಕಾನ ಅಚ್ಚಿಯ ಕೂಸಾಗಿದ್ದ. ಮೊನ್ನೆಮೊನ್ನೆಯ ವರೆಗೂ ಅವನು ಕಾಕಾ ಅವರ ಮಗ್ಗುಲಲ್ಲಿ ಮಲಗುತ್ತಿದ್ದ. ಅವರ ತೊಡೆಯ ಮೇಲೆ ತಲೆಯಿಟ್ಟು. ಕಾಕಾ ಸಣ್ಣವರಿದ್ದಾಗ ಬತ್ತಲೆ-ಕುದುರೆ ಹತ್ತಿದ – ಲಕ್ಷ್ಮಣ ರಾವಜೀ ಅವರಿಂದ ಹೊಡೆತ ತಿನ್ನುವದನ್ನು ತಪ್ಪಿಸಿಕೊಳ್ಳಲು, ಗಣಪತಿಯ ಭಾಂವಿಯಲ್ಲಿ ಅಖಂಡ ಒಂದು ದಿನ ಅಡಗಿ ಕುಳಿತ – ಗೌಡರ ಭಾಂವಿಯಲ್ಲಿಯ ಮುತ್ತೈದೆಯ ಕೋಣೆ ಹೊಕ್ಕು ಪಾರಿವಾಳ ಹಿಡಿದ. ಕಟ್ಟಕಡೆಗೆ ವಿಶ್ಯಾ.ಕಾಕಾನಿಂದ

ಚಾಬೂಕ ಏಟು ತಿಂದ, ಜುಲುಪೆಯನ್ನು ಕತ್ತರಿಸಿಕೊಂಡು ಪುಣೆಯಿಂದ ಪರಾಗಂದಾ ಆಗಿ ಬಂದ ಕಥೆಗಳನ್ನು ಕೇಳುತ್ತಿದ್ದ. ಜುಲುಪೆಯ ಕಥೆ ಮುಗಿದಾಗ —

"ಕಾಕಾ, ದಾದಾ ಎಲ್ಲಿದ್ದಾರ್ರೀ? ನಮ್ಮ ಮನೀಗೆ ಯಾಕ ಬರೂದಿಲ್ಲ ಅವರು?"

ಎಂದು ತಪ್ಪದೆ ಪ್ರಶ್ನೆಮಾಡುತ್ತಿದ್ದ. ನಡುಮನೆಯಲ್ಲಿಯೇ ಕುಳಿತ ಗಿರಿಜಾ —

"ಕಿಶಿಪಿಶಿ ಹಚ್ಚಬ್ಯಾಡಾ ಕಿಶ್ಯಾ. ಹೊತ್ತಾತು, ಬಾ ಇನ್ನ ಮಲಗಲಿಕ್ಕೆ. ದಿನಾs ಏನ ಕೇಳಿದ್ದೆ ಕಥೀ ಕೇಳತೀದಿ. ನಾ ಮುಗಲ ಮ್ಯಾಲಕ್ಹೋದ ಕಥೀ ಹೇಳತೀನಿ ಬಾ. ಕೇಳಕೋತ ಮಲಕೊಂಬಾಕ್ಯಂತ."

ಎಂದು ಕರೆಯುತ್ತಿದ್ದಳು.

"ಆಃ! ಗೊಳ್ಳ ಆ ಮುಗಲ ಕಥೀ ಹೌದಲ್ಲೋ? ಮುಗಲಾ ಅಗದೀ ಅಂದರ ಅಗದೀ ತೆಳಗ ಇತ್ತು. ಕೈಗೆ ನಿಲಕೂ ಹಾಂಗ ಇತ್ತು. ಒಬ್ಬ ಗಿರಿಜಾನಂಥಾ ಮುದಿಕಿ ಬಗ್ಗಿ ಕಸಾ ಉಡಗತಿದ್ಲು. ಮುಗಲಾ, ಪಟಾ ಪಟಾ ಬೆನ್ನಿಗೆ ಬಡೀತಿತ್ತು. ನಿನ ಸುಡ್ಲೀ ಅಂತ, ಸಿಟ್ಟಿಲೇ ಮುದಿಕಿ, ಭಾರಗೀಲೇ ಹೊಡದಳು. ಮುಗಲ ಹೋತ ಮ್ಯಾಲಕ. ಇದs ನಿನ್ನ ಕಥೀ. ನೀಯರs ಏನ ಹೊಸಾದ ಹೇಳತೀ? ಮುಗಲ ಮ್ಯಾಲಕ ಹೋದರೂ, ಗಿರಿಜಾ. ನಿನ್ನ ಮುದಿಕಿ ಸೊಟ್ಟs ಉಳದ್ಲಲ್ಲಾ. ಕಾಕಾ ನೋಡು, ಹ್ಯಾಂಗs, ಮಸ್ತ ರಿಕಾಬು-ಲಗಾಮು ಇಲ್ಲದ ಕುದರೀ ಹತ್ತಿದ ಕಥೀ ಹೇಳತಾರs. ನಿಮ್ಮ ರಾಜಾ ಕುದರಿ, ಜೀವಂತ ಇದ್ದರ, ನಾನೂ ಹತ್ತತಿದ್ದೆ ನೋಡರಿ ಕಾಕಾ; ಅನಮಾನs ಮಾಡತಿದ್ದಿಲ್ಲಾ. ವಿಶ್ಯಾಗ ಇನ್ನ ಹೊಡಿಯೂದಿಲ್ಲಂತ ಚಾಬೂಕ ಒಗದೇ ಅಂತ ಹೇಳಿದ್ರ್ಯಲಾ. ನನಗೂ ಹೊಡೀತಿದ್ದಿಲ್ಲ ಹಂಗಾರ. ಆ ಚಾಬೂಕ ಎಲ್ಲೆ ಅದರೀ ಕಾಕಾ ಈಗs? ಊರಾಗ ಇರಬೇಕಲ್ಲರೀ? ಬರಾಗ ತಗೊಂಡ ಬಾ ಅಂತs. ರಾಜಪ್ಪಗ ಪತ್ರಾ ಹಾಕರಿ. ಪಡಸಾಲ್ಯಾಗಿನ ಘೂಟಕ್ಕ ಶಿಸ್ತ ಆಗಿ ಇಡೂಣು. ವಿಶ್ಯಾ ಬರೂತ್ಲೇ ತೋರಸೂಣು. ಹ್ಯಾಂಗಿತ್ತ ವಿಶ್ಯಾ ಇದರ ಕಡಬಾ ಅಂತ ಕೇಳೂಣು."

"ಏನ್ ಮುದ್ದ ಮುದ್ದ ಮಾತಾಡ್ತೀ ನನ್ನ ಕೂಸs. ದೃಷ್ಟಿ-ಗಿಷ್ಟಿ ಆದೀತು ನಿಮ್ಮ ಕಾಕಾಂದs. ದೃಷ್ಟೀ ನಿವಾಳಸ್ತೀನಿ ಬಾ ಇನ್ನs."

ಎಂದು ಗಿರಿಜಾ ಕಿಶೋರನನ್ನು ಅಪ್ಪಿ ಮುದ್ದಾಡುತ್ತ ಮಲಗಿಸಲಿಕ್ಕೆ ಕರೆದುಕೊಂಡು

ಹೋಗಬೇಕು. ಹನ್ನೆರಡು ತುಂಬಿದ ಮೇಲೆ, ಸೋನಕ್ಕ ಅವನು ಕಾಕಾನ ತೊಡೆಯ ಮೇಲೆ ಮಲಗುವದನ್ನು ಬಿಡಿಸಿದರು.

"ನೀನs ಬಿಡಿಸಿದಿ ಸೋನಾ, ಅಂವಾ ಮಲಗೂದು. ಇಲ್ಲದಿದ್ದರ, ನನಗ ಮರಿಮಕ್ಕಳು ಆಗೂ ತನಕಾ ಅಂವೇನ ಬಿಡತಿದ್ದಿಲ್ಲಾ."
ಎಂದು ಬದಿಯಲ್ಲಿ ಕುಳಿತ ಕಿಶೋರನನ್ನು ಇನ್ನೂ ಹತ್ತಿರ ಎಳೆದುಕೊಂಡು ವಾತ್ಸಲ್ಯದಿಂದ ಮೈದಡವುತ್ತ ರಾವಜೀಕಾಕಾ ಹೇಳುತ್ತಿದ್ದರು.

ವಿಶ್ವಾಸ – ಸೋನಕ್ಕ ಪೇಟೆಗೆ ಹೊರಟರು. ವಿಶ್ವಾಸ, ಪಠಾಣೀ-ಶೂ ಕಾಲಲ್ಲಿ ತೊಡರಿಸುತ್ತಿದ್ದವ, ಕಿಶೋರನ ವಾಚನ-ವೈಖರಿ ಕೇಳಿ —

"ಕಾಕಾ, ಕಿಶ್ಯಾ ಓದೂದು, ದಾದಲ್ಯಾ ಮಂತ್ರಾ ಅನ್ನೂದು ಒಂದs ನೋಡರಿ. ಕೇಳವರಿಗೆ ಅನಿಸಿರಬೇಕು, ಏನ ಅರ್ಥಾ ತಿಳಕೊಂಡು ಗಾಡೀ ಹೊಡೀ ತಾರಂತ. ಕಿಶ್ಯಾ, ಧಾರಾತೀರ್ಥ ಅಂದರೇನು? ನೀ ಓದೂದರಾಗ ನಾಕ ಸಾರೇ ಬಂತ ಆsಂ, ಆ ಶಬ್ದಾ. ಕೇಸರೀಕಾರಾ ಪುಣೇ ಬಿಟ್ಟು ಹೊರಗ ಹಣಿಕಿ ಹಾಕಿಲ್ಲಾ. ಕುರುಕ್ಷೇತ್ರದಾಗ ನಿಂತವರ ಗತೀಲೇನs, ಧಾರಾತೀರ್ಥದ್ವಶಿಂದ ಬರೀತಾನ. ಹೂಂ, ಕಿಶ್ಯಾ, ಹೇಳ ಅರ್ಥಾ ಲಗೂನs."
ವಿಶ್ವಾಸ ನಗೆಯಾಡಿದ.

"Don't disturb please while reading. ಧಾರಾತೀರ್ಥ means battle-field. It is so simple. Don't you understand?"
ಕಿಶ್ಯಾನಲ್ಲಿ ಕಾನ್ವೆಂಟ ಇಂಗ್ಲೀಷಿನ ರಕ್ತವಾಡುತ್ತಿತ್ತು.

"ವಾಃ ವಾಃ ವಾಃ, ಪಂತರ ಮರೀ. ದಾದಲ್ಯಾ ಖರೇನs ಕೈ ಇಟ್ಟಾನ ತಲೀ ಮ್ಯಾಲ. ತಾಯೀ, ಕಿಶ್ಯಾನ್ನ ತೊಟ್ಟಿಲದಾಗ ಹಾಕೂ ಮುಂದ, ದಾದಲ್ಯಾ ಏನರs ಕಿಂವ್ಯಾಗ ಕುರ್ರಕರ್ರ ಅಂದಿದ್ನೇನು? ಮಾತಿನ್ಯಾಗ ಡುಬೇಹೂಬ ಹೋತಾನ ನೋಡು, ದಾದಲ್ಯಾನ್ನ."
ವಿಶ್ವಾಸ ತಮ್ಮನ ಶಿಫಾರಸುಮಾಡಿದ.

"ಅಂದ್ಹಾಂಗ ವಿಶ್ಯಾ, ದಾದಲ್ಯಾಗ ಒಂದ ಪತ್ರಾ ಬರೀ ಇಂದs. ವಸೂನ್ನ ಮುಂದ ಹಾಕೊಂಡು ಪುಣೇಕ್ಕ ಬಾ ಅಂತs. ದಾದಲ್ಯಾ ಬಂದರ ಮನೀ ಗೋಕಲ ಆಘಾಂಗ. ಮೊನ್ನೆ ಪಂತಮಾಮಾ ಬಂದಾಗ ಹೇಳತಿದ್ದರು, ಒಂದ ಮಜಾ. ದಾದಲ್ಯಾ ಪೈಲಾವರ್ಗದಾಗ ಬಂದಾಗ, ಊರಾಗಿನ ಮಂದಿ ಬಂದು ಕೇಳವರಂತ: ಯಾರ

ಇಂವಾ ಅಂತs? ಎಲ್ಲಾರಿಗೂ ದಾದಲ್ಯಾಂದು ಒಂದs ಉತ್ತರಾ: ನಾ ಪಂತರ ಪುರೋಹಿತಾ ಅಂತs. ಯಾ ಪಂತರೋ ದಾದಲ್ಯಾ ಅಂತs. ಮುದ್ದಾಂ ಪಂತ ಮಾಮಾ ಕೇಳಿದರ, ಒಬ್ಬರು ಅನ್ನದಾತಾ ಸಖಾರಾಮಪಂತರು – ಇನ್ನೊಬ್ಬರು ಜೀವದಾತಾ ರಾವಜೀಕಾಕಾಪಂತರು ಅಂತ ಹೇಳಿದನಂತ. ದಾದಲ್ಯಾ, ಭಾಳ ಇಮಾನೀ ಹುಡಗಾ. ಹಚಿಗೋಳಲಿಕ್ಕೂ ಹಂಗೇ, ದುಡೀಲಿಕ್ಕೂ ಹಂಗೇ. ಸಿಟ್ಟಾ, ಸೆಡವಾ, ಅಭಿಮಾನಾ ಏನೂ ಕೇಳಬ್ಯಾಡಾ. ಹೋದಲ್ಲೆ ಅಟ್ಟಸ್ಥಾನ. ಬೆಳಗಾಂವ್ಯಾಗ ಎರಡ ತಿಂಗಳ ನಿಂತರ, ನೂರ ರೂಪಾಯಿ, ತನ್ನ ಅಪ್ಪಗ ಮೈತುಂಬೇ ಅರಿವೀ ಘಳಿಸಿದಾ."

"ಸೋನಾ – ವಿಶ್ಯಾನ್ನ, ಬಾಜಾರಕೇನರs ಹೋಗಿಗೊಡತೀರೋ, ಏನ ಇಲ್ಲೇ ನಿಮ್ಮ ಪುರಾಣ ಕೇಳಕೋತ ಕೂಡಂತೀರೋ? ಒಂದು ಸುದ್ದಿ ಸುರೂ ಆತಂದ್ರ ತೀರಿತು, ದಾದಲ್ಯಾನ ಆಪ್ಪಾ ಗೋವಿಂದಭಟ್ಟನs ಮೈಯಾಗ ಬಂಥಾಂಗ ಆಗತದ. ವಿಶ್ಯಾ, ನೀವ್ ಹಿಡೀರಿ ಹಾದೀ, ಮುಕಾಟ್ಲೇ. ನಾನೂ-ರಮಾಕಕ್ಕೀ ಕೂಡತೇವು ಇವರ ಹರಟೀ ಕೇಳಲಿಕ್ಕೆ."

16726

ರಾವಜೀಕಾಕಾ ಅವರ ದಾದಲ್ಯಾನ ಸ್ತುತಿ-ಹಾರವನ್ನು ನಡುವೇ ತುಂಡರಿಸುತ್ತ ಗಿರಿಜಾ ಹೇಳಿದಳು.

"ಅಚ್ಛಾ ಕಿಶೋರಭಾಯ್. ಚಲೇದೋ ಆಪಕಾ ವಾಚನ. Excuse ಅಂ, for disturbing."

ಎಂದು ನಗುನಗುತ್ತ ಹೇಳಿ. ವಿಶ್ವಾಸ ಹೊರಗೆ ದಾರಿಕಾಯುತ್ತ ನಿಂತ ಸೋನಕ್ಕ ನನ್ನು ಕೂಡಿದ.

ದೊಡ್ಡ ರಸ್ತೆಗೆ ಬಂದ ನಂತರ ವಿಶ್ವಾಸ:

"ತಾಯೀ, ಟಾಂಗಾ ಮಾಡೂಣು. ಎಷ್ಟ ಧೂರ ನಡ್ಯಾಕೀ."

ಎಂದು ಹೇಳಿದ.

"ಬ್ಯಾಡೇಳ ವಿಶ್ಯಾ. ಸಂಜೀವ್ಯಾಳ್ಯಾ. ಅರಾಮದ. ಸಾವಕಾಶ ಹೋಗೂಣು ಮಾತಾಡಿಕೋತ. ಬರಾಗ ಬೇಕಾರ ಟಾಂಗಾ ಮಾಡಿದರ ಬಂದೀತು. ಮನ್ಯಾಗರs ಏನ್ ಅಂಥಾ ಕೆಲಸದ ಅವಸರಾ. ನಿಧಾನಾಗಿ ಬರೂಣು. ರಮಾಕಕ್ಕಿ ಎಲ್ಲಾ ನೋಡಕೋತಾರ. ಮ್ಯಾಲ ಪಾಂಡೂ. ಗಿರಿಜಾ ಇಬ್ಬರಿದ್ದಾರ."

"ರಮಾಕಕ್ಕಿ ಬಂದದ್ದು ಠೀಕ ಆತ ನೋಡ ತಾಯೀ. ನಿನ್ನ ಧಾವತೀ ಕಡಿಮಿ

ಆತು. ಅಷ್ಟs ವಿಶ್ರಾಂತೀ ಸಿಕ್ಕಾಂಗ ಆತು. ನಾ ಕಳಿಸಿದ ಟಾನಿಕ್ ತಗೋತೀಯಲ್ಲ ತಾಯೀ? ಸುಧಾರಣಾ ಏನೂ ಕಾಣಸೊಲ್ಲದು."

"ತಗೋತೀನ್ಯಲಾ ವಿಶ್ಯಾ. ಅಗದೀ ನೇಮದಲೇ ತಗೋತೀನಿ. ತಿಂಗಳೆರಡ ತಿಂಗಳದಾಗ ಸುಧಾರಣಾ ಹ್ಯಾಂಗ ಕಾಣಸಬೇಕು? ದಿನಸಾಧನೀಲೇ ಕಾಣಸೂದು."

"ತಾಯೀ, ನಾಳೆ ಭಡಕಮ್‌ಕರರ ಕಡೇ ಹೋಗಿಬರೂಣು. ತಪಾಸಮಾಡಿ, ಮತ್ತೇನರs ಬದಲೀ ಔಷಧ, ಟಾನಿಕ್ ಹೇಳತಾರೇನು ಕೇಳೂಣು?"

"ಮೊನ್ನೇ ತೋರಿಸಿ ಬಂದೀನಿ ವಿಶ್ಯಾ. ಇಂಜಕ್ಷನ್ ಅಷ್ಟು ಬದಲ ಮಾಡೂಣ ಅಂದಾರ. ಔಷೂಧ ಏನು 'ಚೇಂಜ್' ಮಾಡೂದು ಬ್ಯಾಡಂದರು. ನೀ ಬರೂತ್ಲೇ ಕಳಸಂದಾರ ಭೆಟ್ಟಿಗೆ. ಒಬ್ಬ ಹುಡಗಾ ಬೀ.ಈ.ಗೆ ಫರ್ಸ್ಟ್‌ಕ್ಲಾಸ ಬಂದಾ. ನಿಮ್ಮ ವಿಶ್ವಾಸ, ಎಂ.ಬಿ..ಬಿ.ಎಸ್.ಕ್ಕ 'ಫರ್ಸ್ಟ್' ಬರಬೇಕು ಸೋನೂತಾಯೀ, ಅಂದರು. ವಿಶ್ಯಾ, ನನ್ನ ತಾತ್ಯಾನ ಸಮಾನ ಹಿರೇ ಮನಸ್ಯಾರು. ದೇಶಕs ಧೊಡ್ಡ ಡಾಕ್ಟರು. ನಿನ್ನ ದಳಿಂದ, ಸುರ್ಯಾನ ದಳಿಂದ ಹೀಂಗ ಅಭಿಮಾನ ಹಚಿಗೊಂಡು ಮಾತಾಡಿ ದರು. ನನ್ನ ಕಣ್ಣಾಗಿನ ನೀರೇನು ಕಡೀಲಿಲ್ಲಾ. ವಿಶ್ಯಾ, ಅಷ್ಟ ಹಿಗ್ಗ ಆತು. ಅಷ್ಟ ಆನಂದ ಅನಿಸಿತು. ಕಾಕಾಗ ಈ ಸುದ್ದೀ ಹೇಳಿದೆ. ಕೂಸಿನ್ಹಾಂಗ ಅತ್ತಬಿಟ್ಟರು ವಿಶ್ಯಾ. ಕಾಕೂ ನೋಡಲಿಲ್ಲಾ, ಆಕೀ ಕಣ್ಣ ಕಾಣಲಿಲ್ಲಾ ಅಂದರು. ಹಡದ ತಂದಿಗೆ ಈ ಸುಖಾ ನೋಡೂದು, ಅನಭೋಗಸೂದು ಅವಕಾಶ ದೇವರು ಕೊಡಲಿಲ್ಲಾ ಅಂತ ಭಾಳ ಕರಳ ಕಿವಿಚಿ ಅಂದರು. ರಮಾಕಕ್ಕಿ ಸಮಾಧಾನಮಾಡಿದರು.

ವಿಶ್ಯಾ. ನನಗ ನಿನ್ನ ದಳಿಂದ, ಸುರ್ಯಾ-ಸತೀಶ-ಕಿಶೋರರ ದಳಿಂದ ಕರಳ ಮಿಡಿಯೂ ಹಾಂಗ.ಕಾಕಾಗೂ,ತಮ್ಮ ಒಬ್ಬನೇ ಮಗನ ದಳಿಂದ ಮಿಡೀತಿರಬೇಕು. ಆಡಿತೋರಸೂದಿಲ್ಲ ಅವರು. ತಪ್ಪಿ ಸುದ್ದೇ ಅವರ ಹೆಸರು ತಗೀಯೂದಿಲ್ಲಾ. ನನಗೇ ಇದನ್ನ ನೋಡಿ, ಕಾಕಾನ ದಳಿಂದ ಸಂಕಟಾಗತದ. ನನ್ನ ದಳಿಂದ ಇಷ್ಟ ಆತು. ತಂದೀ-ಮಗ್ಗs ಫಾರೀ-ಕತಿಬಿ ಆತೂ ಅಂತ ಅನಿಸಿ ತಳಮಳ ಆಗತದ. ದೇವರು ಲಗೂನs ಕಣ್ಣಮುಚ್ಚಲಿ ಅಂತ ಅನಸ್ತದ. ವಿಶ್ಯಾ, ನನಗೇನೂ ಆಶಾ ಉಳದಿಲ್ಲಾ. ಕಿಶ್ಯಾ ಎಳೀ ಕೂಸ ಇದ್ದಾ. ಕಡೀಹುಟ್ಟ ಮಗಾ. ಅಂವಾ ಇಷ್ಟು ಧೊಡ್ಡಾಂವಾಗಲೀ ಅಂತ ನಿಂತೆ. ಅಂವಾ, ಕಾಕಾನ್ನ, ಗಿರಿಜಾನ್ನ ನಂಬಿಕೊಂಡೇ ಬೆಳದಾ. ಕಾಕಾನೇ ಕಿಶಾನ್ನ ಬೆಳಿಸಿದರು. ಅಂವಂದೂ ಝುಲ್ ಬಿಟ್ಟಿತು. ಸುರ್ಯಾಂದ ಸತೀ.ಕಾಳಜೀ ಇಲ್ಲ ನನಗ. ಏನರs ಚೂರ-ಚಾರ ಆಶಾದ್ಲೇ ಬದಕಿದ್ದರ ಅದು ನಿನ್ನ

ದಶಿಂದ ವಿಶ್ಯಾ. ವಿಶ್ಯಾ. ನೀ ಕಲೀತಿ, ಧೊಡ್ಡಾಂವ ಆಗತೀ, ಹೆಸರ ತರತೀ, ಎಲ್ಲಾ ಖರೇ; ಆದರ ವಿಶ್ಯಾ, ನನ್ನ ದಶಿಂದ ನೀ ಸುಖೀ ಮಾತ್ರ ಆಗೂದಿಲ್ಲಾ. ನಿನ್ನ ತಾಯೀ, ವನವಾಸ ಅನಭೋಗಸ್ತಾಳಂತ, ನೀನು ಛಲೋ ನಾಕ ಅರಿವೀ ಸುದ್ದೇ ತೊಡಾಂಗಿಲ್ಲಾ. ನಿನ್ನ ನೋಡಿದರs ಗೊತ್ತ ಆಗತದ. ನೀ ಧೂರ ಇದ್ದೀ. ಅಲ್ಲೇನು ಉಣತೀ, ಏನ ತಿಂತೀ ಆದರ ಪತ್ತೇನs ಆಗೂದಿಲ್ಲಾ. ನಿನ್ನ ಥಾಕು ವಿಶ್ಯಾ, ಯಾರಿಗೂ ಹತ್ತಾಂಗಿಲ್ಲಾ. ಹಡದ ಕರಳಂತ ನನಗ ಅಷ್ಟs ತಿಳೀತದ. ನೀ ನವೀಲಿಕ್ಕೆ ಹತ್ತೀ ವಿಶ್ಯಾ ನನ್ನ ದಶಿಂದ. ನೀ ಸಣ್ಣ ಆಗಲಿಕ್ಕೆ ಹತ್ತೀ.

ನನಗ ಕೇಳತೀ: ತಾಯೀ, ನಿನ್ನ ತಬೇತ ಠೀಕಿಲ್ಲಾ. ಸುಧಾರಣಾ ಏನೂ ಕಾಣಸೊಲ್ಲದಂತ. ನಿಂದು ಎಕಡೆ ಛಲೋ ಅದs? ವಿಶ್ಯಾ, ನಿನ್ನ ಕುತ್ತಿಗೀ ಎಲವು ಎದ್ದ ನಿಂತಾವ. ಕಣ್ಣು ಗುಳಿ ಬಿದ್ದಾವ. ಇಲ್ಲೆ ಬಂದಾಗ, ನಾಕ ದಿನಾ ನಕ್ಕೋತ, ಕೆಲಕೋತ ಇರತೀಯಂತ ಯಾರಿಗೂ ಆದರ ಪತ್ತೇ ಹತ್ತೂದಿಲ್ಲಾ. ಇಂದ ನಿನ್ನ ನೋಡಿದರ ನಾ ಧುಳೇದಿಂದ ಬಂದಾಗ ನೋಡಿದ ವಿಶ್ಯಾ ಇವನೇ ಏನು ಅನ್ನೂ ವಿಶ್ವಾಸ ಸುದ್ದೇ ಕೂಡೂದಿಲ್ಲಾ. ಅಷ್ಟ ಸೊರಗೀ, ಅಷ್ಟ ಸಣ್ಣ ಆಗೀ."

ಭಾಳ ವಿಚಾರಮಾಡಿದೆ ವಿಶ್ಯಾ. ಹೀಂಗs ಬಿಟ್ಟರ ನನ್ನ ವಿಶ್ಯಾ ಸುಖಾ ಕಾಣೂದಿಲ್ಲಾ, ಬೆಳಿಯೂದಿಲ್ಲಾ. ನವಕೋತನs ನಡೀತಾನಂತ ಅನಿಸ್ತು. ವಿಶ್ಯಾ, ಅಂಗಾಲಿಗೆ ಹೇಸಿಕಿಲ್ಲಾ, ಕರಳಿಗೆ ನಾಚಿಕಿಲ್ಲಾ ಅಂತಾರs. ನನ್ನ ಕರಳಿನ ದಶಿಂದ, ನನ್ನ ವಿಶ್ಯಾನ ದಶಿಂದ, ನಾಚಿಗೀ ಬಿಟ್ಟು, ಅಭಿಮಾನ ಬಿಟ್ಟು. ಅಂವಾ ಸುಖೀ ಆಗೂ ಹಾದೀ ನಾನೇ ಹಿಡೀಲೇನು ಅಂತ ಧೇನಿಸಿದೆ. ಅವರ ಜೋಡೀ ಹರದ ಎಳೀ ಜೋಡಸಲೇನು ಅಂತ ಅನಸ್ತದ. ಅವರು ನನ್ನ ಬಿಟ್ಟಾಗ ಕೊಟ್ಟ ದುಃಖಾ, ಕೂಡಿದಾಗ ಕೊಡೂ ಸುಖಾ, ಇನ್ನ, ನನಗ ಎರಡೂ ಅಷ್ಟs. ಸಣ್ಣಾಗಿ, ನಾ ನವದು ಕಣ್ಣ ಮುಚ್ಚತೀನಿ ಅನ್ನೂದು ಘಟ್ಟಿ. ಆದರ ವಿಶ್ಯಾ ಸುಖೀ ಆದದ್ದ ನೋಡಿ, ನನ್ನ ಕಣ್ಣ ಮುಚ್ಚಲೀ ಅಂತೀನಿ. ನನಗ ಬ್ಯಾರೇ ಏನೂ ಆಶಾ, ಇಚ್ಛಾ ಇಲ್ಲ ವಿಶ್ಯಾ. ನೀ ಸುಖೀ ಆಗಿ ಇರೋದನ್ನ ನೋಡೂ ಆಶ್ಯಾ ಅಷ್ಟs ಉಳದsದ. ನಾ ಸತ್ತರೂ, ವಿಶ್ಯಾ, ಈ ವಾಸನಾ ಪೂರ್ಣ ಆಗದs ನನಗ ಮುಕ್ತೀ ಸಿಗೂದಿಲ್ಲಾ. ಹೇಳ ವಿಶ್ಯಾ, ನಾ ಸುಖೀ ಆಗತೀನಿ ಅಂತ ಹೇಳು. ಅಂದರ ನಿನ್ನ ದಶಿಂದ ನಾಯಾರ ಕಾಲೂ ಹಿಡಕೋತೀನಿ. ನಾಚಿಕಿ, ಅಭಿಮಾನಾ ಬಿಟ್ಟು ಕಾಲ ಹಿಡಕೋತೀನಿ. ನಾ ನಾಚಿಕೀ ಬಿಟ್ಟು, ಅಭಿಮಾನ ಬಿಟ್ಟು, ಅವರ್ನ ಕೂಡಿದರ, ಕಾಕಾ ಸುಖೀ ಆಗತಾರ.

ನೀ ಸುಖೀ ಆಗತೀದಿ. ಪಂತರ ಮನೆತಾನಕ್ಕ ಬಂದ ಸೂತಕ ಬಿಡತ್ವದ. ಹೀಂಗ ಕಣ್ಣ ಮುಚ್ಚೊ ಜೀವಾ, ಹಾಂಗ ಕಣ್ಣ ಮುಚ್ಚತ್ವದ. ಹೀಂಗ ಕಣ್ಣ ಮುಚ್ಚೊ ವರಾಗ ಅಭಿಮಾನ ಅದ್ವ. ಮುರದೇನು ಬಾಗಲಿಕ್ಕಿಲ್ಲಾ ಅನೂ ಧಾಡಸೀತನಾ, ಧೈರ್ಯಾ ಅದ್ವ. ನಾ ಹೀಂಗ ಕಣ್ಣ ಮುಚ್ಚಿದರ, ವಿಶ್ಯಾ, ನಿನ್ನ ತಾಯೀಯಲ್ಲೆ ಸೀತಾ-ಸತ್ವ ಇತ್ತು ಅನ್ನೂ ಮಾತು ನಿಂದರತದ. ಸೋನಾ, ವಿಶ್ಯಾನ ತಾಯೀ ಅನೂ ಅಭಿಮಾನಾ, ನಾ ಸತ್ತರೂ ತಾ ಬದಕತದ. ಇಲ್ಲ್ವ......"

"ತಾಯೀ ನಿನ್ನ ವಿಶ್ಯಾಗ ಅಖಂಡ ದುಃಖ ಇರಲಿ; ಅಖಂಡ ಅಶಾಂತೀ ಇರಲಿ. ಅದನ್ನ ತಡಕೊಂಬೂ ತ್ರಾಣಾ, ನನ್ನ ತಾಯೀಯಿಂದ ನನಗ ಬಂದ್ವದ. ನನ್ನ ತಾಯೀ, ನಾಚಿಕೀ ಬಿಟ್ಟು, ಅಭಿಮಾನ ಬಿಟ್ಟು ನನ್ನ ಸುಖೀ ಮಾಡೂದು ಬ್ಯಾಡಾ. ತಾಯೀ, ನೀ ಸುಖಾನ್ವ ಬೇಡಿ ಬಂದಿಲ್ಲಾ. ನನ್ನ ಸುಖದ್ದಶಿಂದ, ನೀ ಮಾಡೂ ತ್ಯಾಗದಿಂದ, ನನಗ ಸುಖಾ ಆದೀತು ಅನೂದು ಬರೇ ಭ್ರಮಾ. ಇದರ ದಶಿಂದ, ನಾನು ದಾದಲ್ಯಾ ಭಾಳ ಚರ್ಚಾ ಮಾಡೇವು. ನೀ ದಾದಾನ್ನ ಕೂಡೂ ವಿಚಾರನ್ವ ದಾದಲ್ಯಾ ಆಡಿತೋರಿಸಿದ್ದಾ. ಸೋನಕ್ಕನ ಮಹಾ ಬಲಿಯಿಂದ ಪಂತ ಕುಟುಂಬ ಬದಕತದ. ಆದರ ಆ ಜೀವಾ ತಂತಾನ್ವ ಸುಟಗೊಂಡು, ತಳಮಳಿಸಿ ಬಲೀ ಕೊಡಬೇಕಾಗತದ ಅಂದಿದ್ದಾ. ಆ ಮಾತು ಇಂದ ನೀನ್ವ ಆಡಿತೋರಿಸಿದಿ. ಆದರ ತಾಯೀ. ಅದರಾಗ ನಿನಗ ಸುಖ ಇಲ್ಲಾ. ಸಮಾಧಾನ ಇಲ್ಲಾ. ನೀ ದಾದಾನ್ನ ಕೂಡಿದರ ನಂದೂ.ಕಾಕಾಂದೂ ಮಾರೀ ಸುದ್ದೇ ನೀ ನೋಡೂದಿಲ್ಲಾ ಅನ್ನೂ ತಾಂವಿಕ್ಯದ ನಮಗ. ನಿನಗ ಇಲ್ಲದ ಸುಖಾ ನನಗೂ ಬ್ಯಾಡಾ. ತಾಯೀ, ಹಿಂದಕನ್ವ ನೀ ಹೇಳೀದಿ: ವಿಶ್ಯಾ, ನಮ್ಮ ವನವಾಸಾ ಇಂದ ಸುರೂ ಆತಂತ. ಈ ವನವಾಸನಾಗ ನೀ ಸೋತರ ನಾನು, ನಾ ಸೋತರ ನೀನು, ಇಷ್ಟ್ವರ ಆಧಾರ ಅದ್ವ. ಈ ಆಧಾರೇ ಸಾಕ ನನಗ. ಸುಖಾ ಕಲ್ಪಸಬೇಕಂತ ಮಾಡಿ, ನನ್ನ ಅನಾಥನ್ನ, ನಿರಾಧಾರ್ನ ಮಾಡಬ್ಯಾಡ ತಾಯೀ. ನಮ್ಮ ದುಃಖಕ್ಕ ಅಂತನ್ವ ಇಲ್ಲ ಅನ್ನೂದು ನಮಗ ಖಾತ್ರೀ ಆಗೇದ. ಸುಳ್ಳ ಸುಖದ ಆಶಾಕ್ಕ ಮತ್ತ ಯಾಕ ಕೈಚಾಚೂಣು? ಕಾಕಾನ್ನ. ಹುಡುಗೂರನ ನೋಡಿ, ಅವರ ದಶಿಂದ ನಮ್ಮ ದುಃಖ ಮರಿಯೂಣು. ನಮ್ಮ ಸುಖದ ಆಶಾ ಬಿಡೂಣು."

"ದಾದಾಗ. ನಿನ್ನ ಬಿಟ್ಟ ನಾಟಕಾ ಭಾಳ ದಿವಸ ದಕ್ಕಿಸಿಗೊಂಬೂದು ಶಕ್ಯ ಇಲ್ಲಾ. ಸುರ್ಯಾನ ದಶಿಂದ ಸಾಹೇಬರ ತಗಾದೀ ನಡದಿರಬೇಕು. ತಿಂಗಳೆರಡ

ತಿಂಗಳಾ ಇನ್ನ ಮುಂದ ಹಾಕ್ಯಾನು. ಅವರು ಇವನ ಉಸಾಬರೀನs ಬಿಟ್ಟು, ನಮ್ಮ ಕಡೇ ಬಂದರ, ಆಗ ಈ ಮಾತು ಮುಚ್ಚಿ ಇಡೂದು ಸಾಧ್ಯನs ಇಲ್ಲಾ. ಅಂವನ ಬಣ್ಣಾ, ಆಗ ತಾನs ಹೊರಬೀಳತದ. ಒಂದು: ತಾನಾಗೇ ಬಂದು, ಕ್ಷಮಾ ಬೇಡಿಕೋಬೇಕು. ಇಲ್ಲs ಎಲ್ಲಾರ ಸಂಬಂಧನೂ ಕಾಯಿಂತರೀಕ ಕಡಕೋಬೇಕು. ತನ್ನ ಘಳಿಕೀ ದಶಿಂದ, 'ಕಾಂಟ್ರ್ಯಾಕ್ಟ' ಕೆಲಸದ್ದಶಿಂದ, ಸಾಹೇಬರ ಜೋಡೀ ದ್ವೇಷ ಕಟಿಗೊಂಬೂದು ಅಸಾಧ್ಯ ಅದ. ಅದಕ್ಕ ಝುಕ್ಕಸ್ತ ತಾನs ಹಾದಿಗೆ ಬರತಾನ. ಇಲ್ಲದಿದ್ದರ, ಅಭಿಮಾನಕ್ಕ ಬಿದ್ದು, ಎಲ್ಲಾರದೂ ಪರಲಪರಕೊಂಡೀನೀ ಅಂದರ, ಈಗ ಘಳಿಸಿದ್ದರ ಮ್ಯಾಲ, ಜೀವಮಾನ ಇರೂತನಕಾ, ಒಬ್ಬೊಂಟಿಗ್ಯಾ ಆಗಿ ಎಲ್ಲ್ಯರs ಬದಕತಾನ."

ಮಾತನಾಡುತ್ತ ಕಡಿದ ದಾರಿಯ ಪರಿವೆ ಇಲ್ಲದೆ ಸಾಗಿದ ತಾಯಿ-ಮಗ. ಈಗ ಲಕ್ಷ್ಮೀರೋಡಿನಲ್ಲಿಯ ಜನದಟ್ಟಣೆಯ ಭಾಗಕ್ಕೆ ಬಂದಿದ್ದರು. ಅವರ ಖಾಸಗೀ ಮಾತು ನಿಂತವು. ಸಂಜೆಯ ವೇಳೆಯಾಗಿದ್ದರಿಂದ, ತೆರೆಯ ಮೇಲೆ ತೆರೆ ಯೆದ್ದು ಬರುವಂತೆ, ರಹದಾರಿ ನಿಬಿಡವಾಗತೊಡಗಿತು. ರಸ್ತೆಯ ತೀರ ಅಂಚಿನಲ್ಲಿ ನಡೆದು ಇಬ್ಬರೂ ಚರಖಾಸಂಘದ ಖಾದೀವಸ್ತ್ರಾಲಯಕ್ಕೆ ಬಂದರು. ವಿಶ್ವಾ ಮಿಜಿಮಿಜಿ ಮಾಡಿ, ಎರಡು ಉಣ್ಣೆಯ ಪ್ಯಾಂಟು, ಎರಡು ಬಿಳಿಯ ಪ್ಯಾಂಟು, ನಾಕು ಶರ್ಟು, ಒಂದೆರಡು ಪಾಯಜಾಮೆಯ ಅರಿವೆಯ ಖರೀದಿಗೆ ಒಪ್ಪಿದ. ತಮ್ಮ ಠರಾವಿಕ ಸಿಂಪಿಗನಲ್ಲಿ ಅರಿವೆ ಹೊಲಿಯಲಿಕ್ಕೆ ಹಾಕಿದರು. ಸೋನಕ್ಕ ಒತ್ತಾಯಪಡಿಸಿದರೆಂದು, ಜುಕ್ಕಜುಲಮೆಯಿಂದ ಇಷ್ಟು ಅರಿವೆ ಹೊಲಿಸಿಕೊಳ್ಳ ಲಿಕ್ಕೆ ವಿಶ್ವಾಸ ಕಬೂಲಾಗಿದ್ದ. ಸಿಂಪಿಗರ ಅಂಗಡಿಯಿಂದ ಕೆಳಗಿಳಿದು ಬಂದು, ಇನ್ನು ಎಲ್ಲಿಗೆ ಹೋಗುವದು. ಏನು ಖರೀದಿ ಮಾಡುವದು ಎಂದು ಸೋನಕ್ಕ ವಿಶ್ವಾಸ ಚರ್ಚೆಯಲ್ಲಿದ್ದರು. ಇಬ್ಬರಿಗೂ ಸ್ವಂತದ ಖರೀದಿ ಏನೂ ಇರಲಿಲ್ಲ. ಸುರೇಶ, ಸತೀಶ, ಕಿಶೋರರಿಗೆ ಭರಪೂರ ಅರಿವೆ-ಅಂಚಡಿ ಇದ್ದವು. ಅಷ್ಟು ಹಣ್ಣು-ಹಂಪಲ, ಕಾಯಿಪಲ್ಯ ತೆಗೆದುಕೊಂಡು ಮನೆಯ ದಾರಿಹಿಡಿದರಾಯಿತೆಂದು ಮಾತಾಡಿ ಕೊಳ್ಳುತ್ತಿರುವಾಗ, ಅವರ ಕಿವಿಗೆ ಸಾಯಕಲ್-ಗಂಟೆಯ ಕಿಣಿಕಿಣಿ ನಿನಾದ ಬಿತ್ತು. ತನಗೆ 'ಲೈನ್ ಕ್ಲೀಯರ್' ಕೊಡಲು ಯಾವನೋ ಸಾಯಕಲ್-ಸ್ವಾರ ಗಂಟೆ ಬಾರಿಸುತ್ತಿರಬೇಕೆಂದು, ಸೋನಕ್ಕ, ವಿಶ್ವಾಸ ಹಿಂದಿರುಗಿ ನೋಡಿದರು.

ನೋಡಿದರೆ......

ಸೋನಕ್ಕ-ವಿಶ್ವಾಸರ ತೀರ ಬದಿಗೆ ಬಂದು ಒಂದು ಸಾಯಕಲ್-ಹಸ್ತ-ವ್ಯಕ್ತಿ – ಆ ವ್ಯಕ್ತಿ ಯಾರೂ ಅಲ್ಲ – ಯಾರಿಗೂ ಅಪರಿಚಿತವಲ್ಲ – ವಿಶ್ವಾಸನಷ್ಟೇ ಎತ್ತರ, ಅವನಷ್ಟೇ ಬಿಚ್ಚುಬೀಸು, ಅವನದೇ ಆಕಾರ-ಪ್ರತಿಯಾಕಾರದಂತಿದ್ದ ಸುರ್ಯಾ–ಸುರೇಶ. ಒಂದು ಕೈಯಿಂದ ಅಣ್ಣನ ಹೆಗಲು ಅದುಮುತ್ತ, ಮುಗುಳುನಗೆಯನ್ನು ಮಿಂಚಿಸುತ್ತ —

"ಏನೋ ಭಾರೀ ನಡದದ, ಅವ್ವಾ ಮಗನ 'ಓಪನ್ ಸಿಕ್ರೆಟ್ ಪ್ಲಾಟ್'ಊ? ತಪ್ಪಿಸಿ ಬಾಜಾರಕ ಬಂದರೂ ಈ ಶನೀ ಬೆನ್ನ ಬಿಡಲಿಲ್ಲ ಅಂದ್ರೇನು? ತಾಯೀ, ಇಂದ 'ಕಾಳ' ಪೇಪರದಾಗ ಒಂದ ಜಾಹೀರಾತ ಬಂದ್ವದ. ನೀ ನೋಡೀ ಏನು? ನಮ್ಮ ವಿಶ್ಯಾನ ವಾಸಾಂಸಿ-ಜೀರ್ಣಾನೀದು ನಾಳೆ 'ಪಬ್ಲಿಕ್ ಆ:ಕ್ಶನ್' ಅದ್ವ ಅಂತ್ವ. ಸರಕಾರೀ ಸವಾಲ ಏನಪಾ್ವ ಅಂದರ..."

ಸುರೇಶನ ಮಾತು ಇನ್ನೂ ಮುಗಿದಿರಲಿಲ್ಲ. ವಿಶ್ವಾಸ ನಡುವೆಯೇ ಬಾಯಿ ಹಾಕಿದ :

"ಕೈ ತಾ ಸುರ್ಯಾ, ಜಮಾಸ್ತ್ಯಾ. ಮಗನ್ವ ನಿನ್ನ ಮನಸಿನಾಗಿಂದು, ಸರಕಾರೀ ಸವಾಲ್ – ಏಕ ವಾರ್, ದೋ ವಾರ್, ತೀನ ವಾರ್ – ಏನ ಹೇಳಲೇನು? 'ಬೆಟ್' ಅಪಾ. ನಾ ಗೆದ್ದರ ತಾಯೀಗೆ ಎರಡು ಪತ್ತಲಾ. ನೀ ಸೋತರ – ಅಲ್ಲಾ – ಗೆದ್ದರ, ತಾಯೀಗೆ ಎರಡು ರೇಶಿಮಿ-ಕಾಠ ಶೀರೀ; ಕಬೂಲ್ವ? ಹೇಳಲ್ಯಾ ಸುರ್ಯಾ? ಎಣ್ಣೆಗೆ ಒಂದು ಸಣ್ಣ ಗಿಳಲ ಆದರ ನೆಟ್ಟಗಾಗತಿತ್ತ ನೋಡ ಸೋನಾ, ಅಂತ್ವ ದಿನಾ ಅಂತಿರತಾಳ ರಮಾಕಕ್ಕಿ. ಆ ಗಿಳಲ ಮಾತ್ರ, ತೀನ ವಾರ್ – 'ಹಾಯೆಸ್ಟ್ ಬಿಡ್'ದಾಗ ದಕ್ಕತದ ನೋಡ ಸುರ್ಯಾ!"

"'ಪರ್‌ಫೆಕ್ಟ್‌ಲೀ ರೈಟ್' ಓ! ಏನ ಅಚೂಕ ಹೇರ ಅಂದಿ, ವಿಶ್ಯಾ ನಿಂದೂ. ನಡೀ ವಿಶ್ಯಾ ನೀ ಗೆದ್ದೀ, ಎರಡ ಪತ್ತಲಾ. ನಾನು ಸೋತ ಗೆದ್ದೀನಿ – ಎರಡ ಶೀರಿ! ಎರಡ ತಿಂಗಳ ಬಕ್ಕಳ ಟೀ.ಏ. ಬಿಲ್ಲು, ಒಮ್ಮೆಲಿಗೇ ಇಂದೇ ಕೈಗೆ ಬಂದ್ವದ. ಮೂರು ಕೋರಾ ಕರಕರೀತ ಹಸರ ನೋಟ ಅವ್ವ ವಿಶ್ಯಾ, ಕಿಶೇದಾಗ. ಫುಕ್ಕಟ ಅಲ್ಲಾ. 'ಹಾರ್ಡ್-ಅರ್ನ್ಡ್-ಮನೀ' ಚಲೋ ಭಾಯ್."

"ಇಬ್ಬರೂ ಘನ ಅವೇಕರಿದ್ದೀರಿ ನೋಡು. ನಡ-ರಸ್ತೇದಾಗ್ವ ನಿಂತು, ನಾಟಕಾ ನಡಸೀರಿ. ಪತ್ತಲಾ-ಶೀರಿ ನಾಕ ಪೆಟಿಗಿ ತುಂಬ್ಯಾವ. ಏನ ಮಾಡೂದು ಮತ್ತ ಹೊಸಾಂವ ತಗೊಂಡು. ಮುಕಾಟ್ಲೇ ಮನೀಗೆ ಹೋಗೂಣು ನಡೀರಿ."

"ತಾಯೀ, ಹೀಂಗ ಅಣ್ಣಾ-ತಮ್ಮನ ಕೈಯಾಗ ಎಂದ ಸಿಕ್ಕಿದ್ದಿ? ವಿಶ್ಯಾ ಸುರ್ಯಾ ಅಂದರ, ರಾಮ-ಲಕ್ಷ್ಮಣರಿದ್ಧಾಂಗಂತ ಅಸರಂತಾ ಹಾಡತಿರತೀ. ಪುರಾಣ ದಾಗಿನ ರಾಮ-ಲಕ್ಷ್ಮಣರು ಪ್ಯಾಲಿಗೋಳಿದ್ದೂ. ಹೀಂಗ ಮಾತಾಡೂ ತಾಕತ್ತ ಇತ್ತೇನ ಅವಕs?... ಪತ್ತಲಾ-ಶೀರೀ ಬ್ಯಾಡಂತ, ಕೌಸಲ್ಯಾ, ಸುಮಿತ್ರಾ ಭಿಡೇಕ್ಕ ಹೇಳಿದ್ದೂ, ಮಾತೃವಾಕ್ಯಂದರ ಬ್ರಹ್ಮವಾಕ್ಯ ಅಂತs ಪಾಲಿಸ್ತಿದ್ದೂ. 'ರೈಟ್ ಅಬೌಟ್ ಟರ್ನ್'. ನಡೀ ವಿಶ್ಯಾ ಅಂಗಡಿಗೆ. ರಾವಜೀಕಾಕಾನ ಪುರಾಣ ನಡದ್ವದ ಅಂತ ತಿಳದೇನು ನನ್ನ ಮಾತಂದರs? ಕೇಳಿಕೋತ ನಿಂತಾ ಮಿಕಿ ಮಿಕಿ ಮಾರೀ ನೋಡಕೋತ. ಜೊಬ್ಚಿಲಾ. ಮಬ್ಬ ಅಂತಾರ ನೋಡ ತಾಯೀ. ನಿಮ್ಮ ವಿಶ್ಯಾನೂ ಒಂದಿಷ್ಟು......ಆಂ...... ಹಾಂಗ ಹುಷಾರಿದ್ದಾನ ಆಂs."

"ತಾಯೀ, ನಿಂದ್ರು ಯಾಕ ತಕರಾರಾ? ಘಳಸೂ ಮಗಾ ಝಣಾ ಝಣಾ ರೊಕ್ಕಾ ಬಾರಿಸಿ, ಶೀರೀ ತಗೋತೀನೀ ಅಂತಾನ. ಖರೀದಿ ಅಂತೂ ಮಾಡು. ಮನಸಿಗೆ ಬಂತs ಉಟಗೋ! ಇಲ್ಲs ಹಂಗೇ ಇಡೂ. ನಾಳೆ ಸೊಸೀ ಬಂದರ... ಅಂದರ ನಂಬರ 'Two' ಸೊಸೀ ಬಂದರ – ಅಕೀಗೆ ಒಪ್ಪಿಸಿ ಕಡೀಕ್ಯಾಗು."

"ಶ್ರೀಹರೀ..ಶ್ರೀಹರೀ..ಶ್ರೀಹರೀ..ಇತಿ ರಾವಜೀಕಾಕಾ ವ್ಹಣೀ ಆsಂ? ವಿಶ್ಯಾ, ದಾದಲ್ಯಾ ಭಾಂಡ ತಂದಾಗ, ಅವರವ್ವನೂ ನಿನ್ನ ಹಾಂಗೇ ಅಂದಿದ್ದಿಲ್ಲs. ನಿದಾನ ಆಕೀ, ದಾದಲ್ಯಾನ ಲಗ್ಗಂದಾಗ, ತಾನs ಘಳಿಗಿ ಮುರಿತೀನ್ಯರ್s ಅಂದಿದ್ಲು. ನೀ ಅಕೀಕಿಂತಾ ಅಚೀಕಡೇ ಆದಿ – ಸೊಸೀ ನಂ ೨. ಘಳಿಗೀ ಮುರೀಲೀ ಅಂತ ಹೇಳಿ."

"ನಾ ಒಲ್ಲೆ ಮಾರಾಯರs ನಿಮ್ಮ ಸೋಬತೀ. ಹೋಗಿ ಬರೂ ಮಂದಿ ಮಿಕಿ ಮಿಕಿ ಮಾರೀ ನೋಡಲಿಕ್ಕೆ ಹತ್ತ್ಯಾರ, ತಾಸ ಆತು, ಇವರೇನು ನಡಸ್ಯಾರಂತ. ಸುರ್ಯಾ, ನಿನಗ ಬೇಕಾದಂಥಾ ಶೀರೀ ಖರೀದಿ ಮಾಡೀಯಂತ ನಡೀ. ಒಮ್ಮೆ ಇಲ್ಲೀದ, ಪಾರಖೆಡವರಿ ನಮ್ಮಪ್ಪಾ ನನ್ನs."

"ಈಗ ರಾಸ್ತ ಮಾತಾಡಿದಿ ನೋಡ ತಾಯೀ. ಇದ್ನೋಡು, 'ಸಿಲೆಕ್ಶನ್' ಅಂದರs, ನೀ ಎಲ್ಲ್ಯರs ಚೌಕಡೀ ತಗೊಂಡೇ, ಇಚಲಕರಂಜೀ, ಟಿಕೇಕರವಾಡೀ, ಹಳೀ ಕೃಷ್ಣಾಂಜನಧಾಂಗ ಹಟಾ ಹಟಾ ಬಣ್ಣ ಹಾರಿದ್ದ ತಗೊಂಡೆ ಹೀಂಗ ಮಾತ್ರ ಮಾಡಬ್ಯಾಡಾ. ಬಣ್ಣಾ, ಟಿಕಾವು 'ಡಿಜೈನ್'ದ 'ಸಿಲೆಕ್ಶನ್' ನಿಂದು. 'ಪೇಮೆಂಟ್' ಜವಾಬ್ದಾರೀ ನಂದು."

"On ತಾಯೀಸ್ behalf agreed ಸುರ್‍ಯಾ."
ವಿಶ್ವಾಸ ಹೇಳಿದ.

ಭಾರೀ ಬೆಲೆಯ ಎರಡು ಸೀರೆ, ಎರಡು ಪತ್ತಲಗಳನ್ನು, ಸುರೇಶ ಖರೀದಿ ಮಾಡಿಸಿಯೇಬಿಟ್ಟ. ಅಂಗಡಿಕಾರ ವ್ಯವಸ್ಥಿತವಾಗಿ ಕಟ್ಟಿಕೊಟ್ಟ ಅರಿವೆಯ ಗಂಟನ್ನು ಸಾಯಕಲ್ಲಿಗೆ ತೊಡರಿಸುತ್ತ, ಸುರೇಶ —

"ವಿಶ್ಯಾ, ಇನ್ನ ಮಾತ್ರ ಚಹಾ ಬೇಕಪಾ. ನಿನ್ನ ಜೋಡೀ ಹಾಕ್ಯಾಡಿ ಗಂಟಲ ಒಣಗಿತು. ಏನಂತೀ ?"
ಕೇಳಿದ.

"ಚಹಾಕ್ಕೆಂದರ ನಮ್ಮಿಂದ ನಕಾರ ಬಂದಿತ್ತೇನ ಸೂರ್‍ಯಾ ? ಆದರ ನೋಡು, ಅಲ್ಲೆ ಮಾತ್ರ, ತಾಸಗಟ್ಟಲೇ ವ್ಯಾಳ್ಯಾ ಹಾಕಬ್ಯಾಡಾ. ಚಹಾ ಬಗೀಹರಿಸಿ, ಮನೀಗೆ ಹೋಗತ್ತs ನಿಂದೇನು ಲೀಲಾ ಆಗೂದದ ಆಗಲಿ."

"ಓ.ಕೆ. ಕಬೂಲ್."

"ವಿಶ್ರಾಂತಿ"ಯಲ್ಲಿ ಚಹ ಮುಗಿಸಿ, ತಾಯಿ-ಮಕ್ಕಳು ಮನೆಯ ದಾರಿ ಹಿಡಿದರು. ವಿಶ್ವಾಸ ಆಗ್ರಹಪಡಿಸಿದರೂ ಸೋನಕ್ಕ ಟಾಂಗಾ ಬೇಡವೆಂದರು.

"ಸುರ್‍ಯಾನ ಮಾತಿನ್ಯಾಗ ಈಗ ತೇಲಿಕೋತ ಹೋಗತೀನಿ ಮನೀಗೆ, ಟಾಂಗಾ ಯಾಕ? ವಿಶ್ಯಾ, ನೀ ಬ್ಯಾರೇ ಕೂಡೀ. ಮನೀ ಮುಟ್ಟೂತನಕಾ ಅವನ ವಟವಟಾ ಸಿಂತರ ಕೇಳು. ಗೋಠಾ ಕುಡದವರ್‍ಹಾಂಗ ಮಾಡತಾನ ಇನ್ನs. ಕಾಕಾನ್ನ ಹೀಂಗs ಕಾಡಸ್ತಾನ ಸುರ್‍ಯಾ, ಹೇಳೂ ಸೋವೀನs ಇಲ್ಲಾ. ಸಂಜಿ ಆನೂದರಾಗ ಅವರು ತೋಬಾ ಹೈರಾಣ ಆಗತಾರ. ಅವರಿಗೂ ಅಷ್ಟ ಹರಟಿ ಬೇಕು. ಸುರ್‍ಯಾ, ಮುನ್ಯಾಗ ಇದ್ದಾಗ, ಏನ್ ಇಬ್ಬರದೂ ನಡದೀರತ್ತದ ಅಂದೀ ಮಾತಿನ ಮೋಜ ವಾಸಿ? ಆ ಕಿಶ್ಯಾ ಇಷ್ಟ ಇದ್ದಾನ ಇನಾ. ಪೇಪರ ಓದಿಕೋತ ಓದಿಕೋತ, ಸಾವರ ಕರರ ರಾಷ್ಟ್ರೀಯತ್ವಾ ಸಂಕುಚಿತತನದ್ದರಿ ಕಾಕಾ ಅಂತಾನ. ಅಂವಗ ಏನ ತಿಳೀತಿರ ಬೇಕ ಹೇಳು: ಸಾವರಕರರೂ – ರಾಷ್ಟ್ರೀಯತ್ವಾ ! ಕೇಸರೀಮ್ಯಾಲಿನ ಸಿಂಹದ ಚಿತ್ರಾ ತೋರಿಸಿ, ಕಾಕಾ, ಇವು ಸಿಂಹ ಅಲ್ಲರೀ, ಒಂದ ಥರದ್ದು ಗಂಡ ಬಾವಗಾ. "ಗಜಾಲಿ ಪ್ರೇಷ್ಮಾ ಯಾಸಿಬಿಡಿತ್ತರ ಕಾಂತ್ತರ ಜಠರೀ" ಅಂತs ಸುಮ್ಮನs ಬರಕೊಂಡಾರ'ಂತ. ಅವರ್‍ನ ಚಿರಡಿಗೆ ತರಸ್ತಾನ. ಅಂವಗ ಇದನ್ನೆಲ್ಲಾ ಕಲಸಾಂವಾ ಸುರ್‍ಯಾ. ಕಾಕಾನ ಕೇಸರೀ ಅಂದರ ಮುಗದs ಹೋತು. ಅದರಾಗಿನ ಜಾಹೀರಾತ ಸುದ್ದೇ ಖರೇ ಅಂತ

ಅವರು ನಂಬತಾರ. ಅದು ಇವರಿಗೆ ಗೊತ್ತು. ಅಂತs ಅವರ್ನ ಚಿರಡಿಗೆ ತರಿಸಿ ಮಜಾ ನೋಡತಾರ. ಸತೀಶ ಒಬ್ಬಾ ಇವರ ಉಸಾಬರೀಗೆ ಬರೂದಿಲ್ಲಾ. ತಾ ಆತು. ತನ್ನ ಅಭ್ಯಾಸ ಆತು. ಇವರಿಗೆಲ್ಲೆ ಖಪ್ಪಸ್ತದ ಅದು. ಸತೀಶನ ಮಾತು ತುಟ್ಟಿ. ಬೇಕಾರ ಲೆಕ್ಕಾ ಇಟ್ಟು ತೋರಸ್ತೇವಂತ ಒಂದು ತಕ್ತಾ ಮಾಡ್ಯಾರ. ಧರ್ಮಾದಾವಾ ಡಬ್ಬಿ ಇರತ್ಯದ ನೋಡು, ಅಂಥಾದೊಂದು ಡಬ್ಬೀ ಮಾಡ್ಯಾರ. ಆ ಡಬ್ಯಾಗ, ಸತೀಶ ಮಾತಾಡೂತ್ಲೇ ಒಂದ ದುಡ್ಡ ಹಾಕತಾರ. ಸಂಜೀತನಕಾ, ಅಂವಾ ಮಾತಾಡಿದಾಗ, ಒಂದು ದುಡ್ಡು ಹಾಕವರು. ರಾತ್ರೀ ಹತ್ತಕ್ಕ ಆ ಡಬ್ಬ್ಯಾಗ ಕೂಡಿದ ದುಡ್ಡಿಂದು ಕಾಕಾಗ, ಲೆಕ್ಕಾಮಾಡಿ ತೋರಿಸಿ, ಒಂದ ರುಪಾಯೇನು ಭರತೀ ಆಗ ಲಿಲ್ಲರೀ ಕಾಕಾ. ಈಗ ಭಂಗಾರ ಸುದ್ದೇ ಐಂಸೀ ಧಾರಣೀ ಅದs. ಅದಕಿಂತಾ ತುಟ್ಟಿ ಆತ ನೋಡಿರಿ, ನಿಮ್ಮ ಸತೀಶನ ಮಾತಿನ ಭಾವಾ ಅಂತಾರ. ಇಬ್ಬರೇ ಇದ್ದಾಗs ಇಂಥಾ ಮಂಗ್ಯಾತನಾ. ಇನ್ನ ದಾದಲ್ಯಾ – ವಸೂನ್ನ ಕರಸು ಸೂಟಿಗೆ, ಅಂದರು ಕಾಕಾ. ಮನೀ ನಂದಗೋಕುಲ ಆಗತದಂದರು. ಗೋಕುಲ ಅಲ್ಲಾ, ಥೇಟ ಯರವಡಾದ ಆಸ್ಪತ್ರೀನs ಆಗದಿದ್ರ ನೋಡು."

"ವಿಶ್ಯಾ, ತಾಯೀ ಇಂದ ಖರೇ ಖುಷ್ಯಾಗಿದ್ದಾಳ ಆಂs. ಇಲ್ಲದಿದ್ದರ ಥೇಟ ಸತೀಶನ ಅವತಾರಾ. ಆಕೀ ಖುಷೀ ಕಾರಣಾ ಹೇಳಲೇನ ವಿಶ್ಯಾ? ನೀ ಊರಿಂದ ಬಂದೀ ಅನ್ನೂದು ಮೊದಲನೇ ಕಾರಣಾ. ಅದೇನು ಸಹಜೀಕ ಅದs. ಎರಡನೇದ್ದು ಅಗದೀ ಊಚ ಕಾರಣಂದರ, ವಿಶ್ವಾಸರಾವ್ ದಾತಾರ, ತಮ್ಮನ್ನ, ಆ 'ವಾಸಾಂಸಿ ಜೀರ್ಣಾನೀ'ಯಿಂದ ಮುಕ್ತ ಮಾಡಿ, 'ನವಾನಿ ಗೃಹ್ಣಾತಿ ನರೋಪರಾಣಿ' ಅವತಾರ ದಾಗ – ಮಸ್ತ ಸೂಟಿನ್ಯಾಗ ಕಣ್ತುಂಬೇ ನೋಡತಾಳಲಾ ಅದು ನೋಡು. ಅಲ್ಲೋ ವಿಶ್ಯಾ, ಮುಂಬೈಯಾಗ ಇದ್ದೀ. ಹ್ಯಾಂಗ ಝುಕಾಸ ಇರಬೇಕಂದೀ? ಜಿನ್ನಾ ಮಗಾ, ಪ್ಯಾರಿಸ್‌ದಿಂದ ಇಸ್ತ್ರೀಮಾಡಿ ತರಸ್ತಾನಂತ ತನ್ನ ಅರಿವೀ. ಪ್ಯಾರಿಸ್ ಹೋಗಲಿ. ಧೋಬೀ-ತಲಾವ್ ಪರೀಟನೂ ನಿನಗ ಸಿಗಲಿಲ್ಲs? ಪಂತ ಮಾಮಾ ಘಳಿಸಿದ್ದೆಲ್ಯರs ಕರಗೀತಂತ ಅಂಜಿಕೇನು? ಪುಣ್ಯಾಕ್ಕ ಭಡಜೀ ಕಾಲೇಜದ ನೆಳ್ಳ ಬೀಳಲಿಲ್ಲಾ ಬಾ. ಬಿದ್ದಿದ್ರ ಎಂ.ಬಿ.,ಬಿ.ಎಸ್.ಕ್ಕ ಹೋಗೂದರ ಬದಲೀ, 'ಚರಕಸಂಹಿತಾ' ಹಿಡಕೊಂಡು. ಯಾ ಕುಂಟ ವೈದ್ಯನಲ್ಲ್ಯರೇ ಖಲಬತ್-ಸಾಧನಾ ಮಾಡಕೋತ ಎಲ್ಲೆ ಕೂಡತಿದ್ಯೋ ಅಂತ ಅನಸ್ತದ. ದಾತಾರ ಶ್ವಾಸಹಾರೀ ಗುಳಿಗಿ, ಪಿತ್ತವಿಕಾರಮಾತ್ರಾ ಮಾರಿಕೋತ, ಸಾಂಗ್ಲೀ ಊರಾಗ ಒಂದ ಸಣ್ಣ

ಅಂಗಡೀ ತಗೀತಿದ್ದಿ. ಎಂ.ಎಸ್.ಎಫ್.ಆರ್.ಸಿ.ಎಸ್. ಆಗೂ ಬಿಡೂ. ಅದೇನು ದೊಡ್ಡ ಮಾತ ಅಲ್ಲಾ. ಪಂತರ ಮನ್ಯಾಗ ಯಾ ಮಗಾ ಪರೀಕ್ಷಾ ಪಾಸ ಆಗಿಲ್ಲಾ? 'ಫಸ್ಟ್‌ಕ್ಲಾಸ್' ಬಂದಿಲ್ಲಾ? ನಿನಗಂತೂ ಅದು ಜಾಗೀರೀನೇ ಅದs. ಅದನ್ನೆಲ್ಲಾ ವಿಶ್ಯಾ ನಾ ಹೇಳೂದು. ಅಷ್ಟ ಟಾಪ-ಟೀಪ ಇರೂ. ಒಂದ ಅಲ್ಲಾ ಹತ್ತ ಸೂಟ ಹೊಲಸು. 'ಟ್ರಿಮ್' ಆಗಿ ಒಮ್ಮೆ ಪುಣೇಕ್ಕ ಬಾ. ಇಲ್ಲೆ ಮುಂಬೈ ಪ್ರಾಂತದಾಗಿನ, ಎಲ್ಲಾ ಸಂಸ್ಥಾನೀ ಪಾಗಾ ಜಮಾಸೇದ. ವರಗೋಳಿಗೆ ಜಪ್ಪಿಸಿ ಕೊಂಡು ಕೂತ 'ಪ್ರಾಸ್ಪೆಕ್ಟಿವ್' ಶ್ವಶುರ-ದಂಡs ಅದs. ನಿನಗ ಕನ್ಯಾ ಆಗೂತನಕಾ, ಕನ್ಯಾ ಕೊಡತೀನಿ ಅಂತ ಮನಧರಣೀ ಮಾಡಕೋತ ಇರತಾರ. ವಿಶ್ಯಾ, ನಾ ಈಗs, ಆಫೀಸಿನ್ಯಾಗ, ದಿನಾ ಹತ್ತ ಕಾಗದಾ 'ಡಿಸ್ಪೋಜ್ ಆ:ಫ್' ಮಾಡಿದರ, ಇಪ್ಪತ್ತು ಕನ್ಯಾ ಪಿತಾಜೀಗೋಳನ 'returned with regreats' ಅಂತs ಹಾದಿಗೆ ಹಚ್ಚತೀನಿ. ಆಫೀಸ ಮುಂದs. ಕಂತ್ರಾಟದಾರರ ಖಟರಾ-ಗಾಡೀ ಬಿಟ್ಟರ ಇನ್ನೊಂದು ಗಾಡೀ ನಿಂತಿರತಿದ್ದಿಲ್ಲಂತ ಮುಂಚೆ. ಈಗ 'ಬಾಂಬೆ ಗ್ಯಾರೇಜ'ದ ಶೋ ರೂಮನs ಆಗೇದs ಆಫೀಸಿನ ಮುಂದಿನ ಪಟಾಂಗಣಾ. ನಾ ಒಂದs ಮಂತ್ರಾ ಊದಲಿಕ್ಕೆ ಹತ್ತೀನಿ. ನಮ್ಮ ಜ್ಯೇಷ್ಠ ಬಂಧುರಾಜರಿದ್ದಾರ. ಅವರು 'ಲೈನ್ ಕ್ಲೀಯರ್' ಕೊಡದs ನಮ್ಮ ಪ್ಯಾಸೆಂಜರ್ ಗಾಡೀ ಮುಂದ ಹೋಗೂದಿಲ್ಲಂತ."

"ಕೇಳಿದಿಲ್ಲ ವಿಶ್ಯಾ, ನಿನ್ನ ಸುರ್‍ಯಾನ ಮಾತಾ? ಚೋವಿಸ ತಾಸು ಇದೇ ಧತ್ಯಾಗ ಮಾತಾಡತಾನ. ನಾ ಬೀ.ಈ. ಆದೆ. ಆಫೀಸರ ಆದೆ. ಇನ್ನರs ಪೋಕ್ತ ಆಗಬೇಕು ಅನೂ ಖಬರೇ ಇಲ್ಲಾ. ತಾಯೀ, ನೀ ಪೋಕ್ತ ಆಗು ಅಂದೀ ಅಂದರ ನಾ ಅಟ್ಟಸ್ತೀನಿ ನೋಡು ಅಂತಾನ. ವಿಶ್ಯಾ, ಸಣ್ಣಾವ ಇದ್ದಾಗ, ನೀನೂ ಹೀಂಗೇ ಅಂತಿದ್ದ್ಯಲ್ಲ ನಮಗ? ಶಿಸ್ತಿನ ಶಿಪಾಯರಂತಿದ್ದಿ. ನೆನಪ ಅದs ಇಲ್ಲೋ?"

"ತಾಯೀ, ವಿಶ್ಯಾ 'ಫಸ್ಟ್‌ಕ್ಲಾಸ್' ಬರೂ ಕಿತ್ತೇ ಅಷ್ಟs ತೀಡಿಸಿಲ್ಲ ನಮಗ. ಸರ್ವಗುಣಸಂಪನ್ನ – ಅವಗುಣಪರಿಪೂರ್ಣ – ಅಗದೀ ತನ್ನಹಾಂಗs ನಮ್ಮನ್ನೂ ತಿದ್ದ್ಯಾನ. ನಮ್ಮ ಸ್ವಂತದ 'ಸ್ಪೆಶಿಯಾಲಿಟಿ' ಏನ ಇಲ್ಲ ಇದರಾಗ. 'ಕ್ರೆಡಿಟ್-ಡಿಸ್ಕ್ರೆಡಿಟ್' ಏನರs ಇದ್ದರ ಅದು ವಿಶ್ಯಾಂದs. ಅದು ಉಣಾ ಆತಂದ್ರ ತೀರಿತು. ನಾವು ಖಲಾಸ್. ಥೇಟ ನಿನ್ನ ಸತೀಶನ್ಹಾಂಗ. 'ಜಾನೇದೋ ಹಮಾರೇ ಬಾತ.' ನಿನ್ನ 'ಹೆಲ್ಥ್-ರಿಪೋರ್ಟ್' ಮಾಡೀ ಇಲ್ಲೋ ವಿಶ್ಯಾಗ. ಹಣ್ಣು-ಹಾಲು ಹೆಚ್ಚ ತಗೋರೀ ಅಂತ ಹೇಳಿದ್ದರು ಡಾಕ್ಟರು. ಅದನ್ನ ಅಜೀಬಾತ ವರ್ಜ್ಯಮಾಡೀ.

ಟಾನಿಕ್ ಸುದ್ದೇ ಊಟ ಆದ ಮ್ಯಾಲ ನಾವೇ ಇವರಿಗೆ ನಿಂತು ಜೋರಾಪರೀಲೇ ತಗೋಳಿಕ್ಕೆ ಹಚ್ಚಬೇಕು. ಅಂದರೇನರ್ರ ತಗೋತಿ. 'ಎಕ್ಸ್‌ರೇ' ತಗಸೂಣು ಅಂದಿದ್ರು ಡಾಕ್ಟರು. ಅದಕೂ ನೀ ಕಬೂಲ ಇಲ್ಲಾ. ಇದನ್ನೆಲಾ 'ರಿಪೋರ್ಟ್' ಮಾಡೀ ಇಲ್ಲೋ?"

"ವಿಶ್ಯಾ ನಾಕ ದಿನಾ ಇರಾಂವ ಇದ್ದಾನ. ಈಗ ಎಲ್ಲಾ ಮಾಡಸೂಣು. ಮೊನ್ನೀ ಡಾಕ್ಟರು ಹೇಳಿದ್ದರು. ನಿಂತ ಕಾಲಮ್ಯಾಲs ಎಲ್ಲೆ ಮಾಡಸೂದು. ಏನ ಅವಸರದ. ನಿಧಾನಾಗಿ ಆಗಲಿ. ನಾ ಏನು ಅಗದೀ ಹಾಸಿಗೀನೇ ಹಿಡದಿಲ್ಲಾ. ಈಗ ಠೀಕ ಇದ್ದೀನಲಾ. 'ಎಕ್ಸ್‌ರೇ-ಪಿಕ್ಸರೇ' ಅಂದರ ಕಾಕಾಗ ಇಲ್ಲದ ಘಾಬರಿ. ಮತ್ತ ತಲೀ ಹಿಡಕೊಂಡೇ ಕೂತಬಿಡತಾರ. ಈಗ ಇರೂ ಕಾಳಜೀನೇ ಅವರ್ನ ರಗsಡ ಹಣ್ಣಮಾಡೇದ. ಹೊಸಾ ಚಿಂತಿ ಬ್ಯಾಡ ಅವರ ಜೀವಕ್ಕ. ವಿಶ್ಯಾ ಮೇ ತಿಂಗಳ ಸೂಟಿಗೆ ಬರೂದರಾಗ, ನಾವೇ ಒಮ್ಮೆ ಮುಂಬೈಗೆ ಹೋಗಿ ತಪಾಸ ಮಾಡಿಸಿ ಕೊಂಡು ಬರೂಣು. ಕೂಪರ ಡಾಕ್ಟರಿಗೆ ಬರೀತೀನೀ ಅಂದಾರ ಭಪಕಮ್‌ಕರು. ವಿಶ್ಯಾನೂ ಇರತಾನ. ಝಟ್ಟನs ಬಗೀಹರೀತದ. ಮುಂಬೈ ಡಾಕ್ಟರ ಮ್ಯಾಲ ಕಾಕಾಗ ಭಾರೀ ವಿಶ್ವಾಸಾ. ಅವರು ಏನ ಆಗಿಲ್ಲಂತ ಹೇಳಿದರೂ ಅಂದರ, ಕಾಕಾಗ ಸಮಾಧಾನ ಅನಸ್ತದ. ಆಸತ್ತ-ಬ್ಯಾಸತ್ತ ನಾಕ ದಿನಾ ವಿಶ್ಯಾ ಬಂದಾನ. ಎಲ್ಲಾರೂ ಕೂಡಿ ಅರಾಮ ಇರ್ರಿ. ತಪಾಸು 'ಎಕ್ಸ್‌ರೇ'ದ ಧಾವತೀ ಯಾಕ ಮಾಡಕೋತೀರಿ. ನೀವೆಲ್ಲಾ ನಾಕ ದಿನಾ ಮಜಾದಾಗ ಇದ್ದರ, ನನಗೂ ಸಮಾಧಾನ ಇರತದ."

ಮನೆಯ ಮುಂದಿನ ಗೇಟಿನಲ್ಲಿ ಕಾಕಾ, ಇವರ ದಾರಿಕಾಯುತ್ತ ನಿಂತಿರುವದು ಕಂಡಿತು. ಸೋನಕ್ಕ ಅದನ್ನು ತನಖಿಸಿ —

"ನಮಗ ತಡಾ ಆತಂತ ಕಾಕಾ ಹಾದೀ ನೋಡಲಿಕ್ಕೆ ಹತ್ತ್ಯಾರ. ಸುರ್‍ಯಾ, ನೀನs ತಡಾಮಾಡಿಸಿರಬೇಕು ಅನ್ನೂದು ಅವರಿಗೆ ತಿಳೀತದ. ನಾನು – ವಿಶ್ಯಾ ಪಾರಬಿದ್ದೇವು."

ಎಂದು ಹೇಳಿದರು.

"ನಿನಗ ಶೀರಿ-ಪತ್ತಲಾ ತಂದದ್ದು, ವಿಶ್ಯಾಗ ಎರಡರ ಬದಲೀ ನಾಕ ಸೂಟ ಹೊಲಿಸಿದ್ದು, ಕಥೀಮಾಡಿ ಹೇಳಿದರಾತು. ಕಾಕಾ ಬಗಲಿಗೆ ಬಿದ್ದರs ಅಂತ ತಿಳೀ. ನಮಗ ಶಿಕಾರೀ ವಿದ್ಯಾ ಅವಗತ ಅವs. ಕಾಕಾ ತಾಂವs ಪಟಾಯಿತ ಶಿಕಾರೀ ಇದ್ದೇವಂತಿದ್ದರು. ಮೊಮ್ಮಕ್ಕಳೂ ಸವಾಯಿ ಶಿಕಾರೀ ಇದ್ದಾರನೂದು ಅವರಿಗೆ

ಗೊತ್ತಿಲ್ಲಾ. ನೋಡತಿರು ಆಂs ವಿಶ್ಯಾ. ಈಗ ಹ್ಯಾಂಗ ಮಾಡತೀನಿ. ಕಾಕಾನ್ನ ಸಪಸೇಲ ಚಿತ್-ಪಟ್ ಮಾಡತೀನೋ ಇಲ್ಲೋ ನೋಡತಿರು. ನೀನು. ತಾಯೀ ಅಷ್ಟು ಒಳಗ ಜಾರಿಕೊಂಡಬಿಡಿರಿ. ಅದs, ನನಗs ಕಾಕಾಗ ಗಂಟು. ಕಾಕಾ, ಹಾದ್ಯಾಗ ಆ ನಿಮ್ಮ ತಾತ್ಯಾಸಾಹೇಬರ ಸ್ವಾರೀ ಭೆಟ್ಟಿ ಆಗಿತ್ತು. ಅಲಭ್ಯದರ್ಶನs ಅನ್ನರಿ. ನಾ 'ಫಸ್ಟ್‌ಕ್ಲಾಸ್' ಬಂದದ್ದಕ್ಕ 'ಕಾಂಗ್ರ್ಯಾಟ್ಸ್' ಅಂತೂ ಕೊಟ್ಟರು. ಕಾಕಾ ಏನಂತಾರ? ಅಲೀಕಡೇ ದರ್ಶನs ಅಲಭ್ಯ ಆಗೇದ. ತಬ್ಬೇತ ಠೀಕ ಅದs ಇಲ್ಲೋ? ಕೇಸರೀ ವ್ಯವಸ್ಥಸೀರ ಮುಟ್ಟತದೋ ಇಲ್ಲೋ? ಅಂತ ಕೇಳಿದರು. ವಿಶ್ಯಾ, ತಾಯೀ ಅವರಿಗೆ ಯಾರೋ ಗುರುತಿನವರು ಭೆಟ್ಟಿ ಆದರಂತ, ಅವರ ಜೋಡೀ ಇವರು ಧೂರ ನಿಂತರು ಮಾತಾಡಿಕೋತ. ಇಲ್ಲದಿದ್ದರ, ತಾತಾಸಾಹೇಬರು ಇವರ ವಿಚಾರ ಪೂಸ ಮಾಡದs ಮುಂದ ಬಿಡತಿದ್ದಿಲ್ಲಾ. ವಿಶ್ಯಾ, ಎಂಥಾ 'ಓಪರ್ಚುನಿಟಿ' ಕಳಕೊಂಡನಂದರೀ."

ಸುರೇಶ ಸರಳ ಬುರುಡೆಯನ್ನು ಉರುಳಿಸಿದ. ತಾತ್ಯಾಸಾಹೇಬರು ಅವನಿಗೆ ಮೇಲಿಂದ ಮೇಲೆ ಭೆಟ್ಟಿಯಾಗುತ್ತಿದ್ದದ್ದು ನಿಜ. ಒಂದೆರಡು ಸಲ 'ಕಾಂಗ್ರ್ಯಾಚುಲೇಶನ್ಸ್' ಕೊಟ್ಟದ್ದೂ ನಿಜ. ಕಾಕಾ ಅವರ ತಬ್ಬೇತದ ಬಗ್ಗೆ ವಿಚಾರಿಸಿದ್ದೂ ನಿಜ. ಆದರೆ ಕೇಸರೀ-ಪತ್ರಿಕೆ ವ್ಯವಸ್ಥಿತವಾಗಿ ಬರುವ ಬಗ್ಗೆ ತಪಾಸು ಮಾಡಿದ್ದು ಸಪಸೇಲ್ ಖೋಟಾ-ಬನಾವಟ್ ನಾಣ್ಯವಾಗಿತ್ತು. ಈ ಎರಡು ತಿಂಗಳ ಅವಧಿಯಲ್ಲಿ, ಸುರೇಶ ಇದೇ ಮಾತನ್ನು ಮೂರು ಸಾರೆ ಹೇಳಿದ್ದ. ಇದು ನಾಲ್ಕನೇ ಸಾರೆ —

"ವಿಶ್ಯಾ, ತಾತ್ಯಾಸಾಹೇಬ ಅಂದರs, ಮೂರ್ತಿಮಂತ ನಿರಹಂಕಾರೀ ಜೀವನಾ. ನಾನು ಲೋಕಮಾನ್ಯರ ವಿಶ್ವಾಸಿಕಾ, ಅವರ ಶಿಷ್ಯಾ ಅನ್ನೂದು, – ನೀವು. ಪಂತಘರಾಣೇದ ಹುಡುಗೂರು, ಒಬ್ಬರಕಿಂತಾ ಒಬ್ಬರು ಮ್ಯಾಲ ಅನ್ನೂದು ಎಲ್ಲಾ ಠಾಂವಿಕ್ಯದ ಅವರಿಗೆ. ಉಭೇ ಮಹಾರಾಷ್ಟ್ರದಾಗ. ಅಷ್ಟ ಪೈಲೂ ಬುದ್ಧೀ ವ್ಯಕ್ತೀ ಯಾರರs ಇದ್ದರ, ಅದು ತಾತ್ಯಾಸಾಹೇಬ ಒಬ್ಬರs. ಅವರು ಲೋಕಮಾನ್ಯರ ವಾರಸಾ ಯಾಕs, ಅವರಕಿಂತಾ ಒಂದ ಗುಂಜಿ ತೂಕ ಮ್ಯಾಲ ಅನಸ್ತದ ನನಗ. ನಂದು, ನನ್ನ ಹುಡುಗೂರದು ಎಲ್ಲಾರದೂ ಕ್ಷೇಮ ಚಿಂತನಾ ಅವರಿಗೆ. ಹತ್ತ ವರ್ಷ ಭೆಟ್ಟಿ ಆಗದs ಇರ್ರಿ. ಪಟ್ಟನs ಒಮ್ಮೆ ಅವರ ಇವರಿಗೆ ಅಚಾನಕ ಹೋಗಿ ನಿಂತರ, ಚಾ-ಚೂ ಮಾಡದೇ ಲಟ್ಟನs ಹೇಳತಾರ. ನೀವು ರಾವಜೀಕಾಕಾ ಪಂತ, ಗಣಪತ, ಲಕ್ಷ್ಮಣರಾವಜೀ ಅಂತs. ಅಚೂಕ ಹೇರಾ."

ಕಾಕಾ ಇನ್ನೂ ತಾತ್ಯಾಸಾಹೇಬರ ತಂದ್ರಿಯಲ್ಲೇ ಇದ್ದರು.

"ವಿಶ್ಯಾ, ಇದು ನಾಕನೇ ಸಾರೇನಾಂs ಸುರ್ಯಾ ಸುಳ್ಳ ಹೇಳೂದು. ಒಮ್ಮೆ ಸಪಸೇಲ ಸಿಗತಾನ ಕಾಕಾನ ಕೈಯಾಗ. ಅಂವನ ಅವೇಕತನಕ ಸೀಮಾನs ಉಳ ದಿಲ್ಲಾ. ಅಲ್ಲೆ ನೋಡ ಅಂವನ್ನs, ಕಾಕಾನ ಮುಂದ ನಿಂತೇ ಮುಗಳನಗೀ ನಗತಾನ, ಕಾಕಾನ್ನ ಹ್ಯಾಂಗ ಫಸಗೀ ಹಾಕಿದೇ ಅಂತs. ಅಗದೀ ಹರಾಹುರೀಗೆ ಬಿದ್ದಾನ ನೋಡು. ಯಾತ್ಯಾತರದೂ ಅಂಜಿಕಿ ಇಲ್ಲಧಾಂಗ ಆಗೇದ ಅಂವಗ. ಇನ್ನ ಪತ್ತಲಾ ಶೀರೀ ತಂದ ಸುದ್ದೀ ತಗದರ, ಕಾಕಾ ಬಾರಾ ಆದರೂ ಊಟಕ್ಕೇಳೂದಿಲ್ಲಾ. ಈಗೇ ಹೊತ್ತ ಆಗೇದ. ಕಾಕಾ ಹಸದಿರಬೇಕು; ನೀನೇ ಅಷ್ಟು ಗಡಿಬಿಡಿ ಮಾಡು. ಊಟಾ ಮುಗಿಸಿ ಕೂಡೀರ್ಯಂತ ಬೇಕಾರ ಬೆಳತನಕಾ. ಕಾಕಾ, ನನಗ ಹಸಿವಿ ಆಗೇದ, ಲಗೂನ ಬರ್ರ್ಯನ್ನು. ತಾಂವs ಬರತಾರ ಗಡಬಡಿಸಿ."
ಸೋನಕ್ಕ ಸೂಚಿಸಿದರು.

ಕಾಕಾ – ಮೊಮ್ಮಕ್ಕಳ ಊಟ ಎಂಟೂವರೆಗೆ ಸುರುವಾದದ್ದು ಒಂಭತ್ತೂವರೆಗೆ ಮುಗಿಯಿತು. ಪತ್ತಲ ಶೀರೆ ತಂದ ಸುದ್ದಿಯನ್ನು ಗಿರಿಜಾ ಊಟಕ್ಕೆ ಕೂತಾಗಲೇ ಜಾಹೀರುಮಾಡಿದಳು. ರಮಾಕಕ್ಕಿ ಸುರ್ಯಾನ ವಾತ್ಸಲ್ಯ, ಸಮಜೂತದಾರಪಣದ ಬಗ್ಗೆ – ಖಮಂಗ ಒಗ್ಗರಣೆ ಹಾಕಿದರು. ಕಾಕಾ ಮಾತಾಡಲಿಲ್ಲ. ದೇವರ ಮಂಟಪದ ಕಡೆಗೆ ನೋಡಿದರು. ಧೋತರದ ಚುಂಗಿನಿಂದ ಡಬಡಬಿಸುವ ಕಣ್ಣೊರಸಿಕೊಂಡರು. ಅವರು ಪಟ್ಟ ಸುಖ ಹೊಟ್ಟೆಯಲ್ಲಿ ನಿಲ್ಲದೆ ಗಂಟಲಿಗೆ ಬಂದಾಗ, ಬಿಕ್ಕಳಿಸಿ ಒಂದು ಥಾಲಿ ನೀರು ಕುಡಿದರು. ಕಾಕಾ ಅವರ ಆನಂದ-ತುಂದಿಲ-ತಂದ್ರಿಯನ್ನು ಮಾತನಾಡಿ ಯಾರೂ ಭಂಗಪಡಿಸಲಿಲ್ಲ.

ಊಟ ಮುಗಿಸಿ ಹಿತ್ತಲುಮನೆಯ ಫರಸಿಯಲ್ಲಿದ್ದ ನಳದ ಮೇಲೆ ಕೈತೊಳೆದುಕೊಳ್ಳಲು ಹೋದಾಗ, ಸುರೇಶ ಮೆಲ್ಲನೆ ವಿಶ್ವಾಸನ ಕಿವಿಯಲ್ಲಿ —

"ವಿಶ್ಯಾ, ಊಟ ಜಡಾ ಆತಪಾ! ಅರ್ಧಾ ಪಾಕೀಟ ಹಾರದs, ರಮಾಕಕ್ಕೀ ಖಿಚಡಿ ಒಂದು ಇಂಚೇನು ತೆಳಗ ಇಳಿಯೂದಿಲ್ಲ ನೋಡು. ಕಾಕಾನ ತಂಬಾಕದ ಬಾರ್ ಮುಗಿಯೂದರಾಗ ಇಲ್ಲೀದs ನಿಸಟಿರಬೇಕ ನೋಡು. ನೀ ಬಗೀಚ್ಯಾದಾಗ ಶತಪಥ ಮಾಡತಿರು, ನಾ ಬಂದೆ ಬೆನ್ನೀಗೇ. 'ಸೊಸೈಟಿ' ರಸ್ತೇ ಹಿಡಿಯೂಣು."

ವಿಶ್ವಾಸ – ಸುರೇಶರ ಹಿಂದೇ ಇದ್ದ ಸತೀಶ —

" 'ಸಮಾನಶೀಲೋ ವ್ಯಸನೇಷು ಸಖ್ಯಮ್' ಬಿಡರಿ ಗಾಡೀ ಲಗೂನs.

ಕಾಕಾ ಕೆಂಪ ನಿಶಾನೀ ತೋರಿಸಿದರ ನಿಮ್ಮ ಡಾವ್ ಓಂಫಸ್ ಆದೀತು."
ನಗುತ್ತ ಅಣ್ಣಂದಿರಿಗೆ ಹೇಳಿದ.

"ದೀಡ ರುಪಾಯದ ಮಾತು ಒಮ್ಮಲಿಗೇ ಆಡಿದಿ ಮಗನs. ಇಂದ 'ಡೆಫ್‌ಸೀಟ್ ಮೇಕಪ್' ಮಾಡಕೊಂಡಿ. ನೀ ಇಷ್ಟ ಮಾತಾಡದೀ ಅಂತ ನಿನ್ನ ಹೆಸರಲೇ ಮೂರ 'ಗೋಲ್ಡ್‌ಫ್ಲೇಕ್' ಹಾರಸ್ತೀನಿ. ವಿಶ್ಯಾ, ನೀ ಹೊಡೀ ಗಾಡೀ ಮುಂದs. ನಾ ಅಷ್ಟು ಅಡಕೀ ತಗೊಂಡ ಬರತೀನಿ."

ಪತ್ತೆ ಇಲ್ಲದೆ ಇಬ್ಬರೂ ಮನೆಯಿಂದ ಹೊರಬಿದ್ದರು.

ಸಾಂದ್ರಚಂದ್ರಿಕೆಯಲ್ಲಿ ಡೆಕ್ಕನ್-ಜಮಖಾನಾದಲ್ಲಿಯ ಟುಮದಾರ ಬಂಗಲಿಗಳು ಹಿಮಾಚ್ಛಾದಿತ ಗಿರಿಸಾನುವಿನಂತೆ ಕಾಣುತ್ತಿದ್ದವು. ದುಮ್ಮಜಲೀ ಮನೆಯ ಕಿಟಕಿಗಳಿಂದ ಶುಭ್ರ-ನೀಲ-ಪ್ರಕಾಶ-ಕಿರಣ ತೂರಿಬರುತ್ತಿದ್ದವು. ಮನೆಮನೆಯಿಂದ ಆಕಾಶವಾಣಿಯ ಮಂದ-ಮಧುರ-ಗಾನಲಹರಿ ತೇಲಿಬರುತ್ತಿತ್ತು. ಮುಂಬೈ ಕೇಂದ್ರದ ಆಕಾಶವಾಣಿಯಲ್ಲಿ ಯಾರೋ ಸುಶೀಲ ರಾಧಿಕಾ:

"ನಕೋರೇ ಕೃಷ್ಣಾs. ರಂಗ ಫೇಕೂ ಚುನಾಡಿ ಭೀಜ್ಜsತೇ ।
ಮಧ್ಯರಾತ್ರಿ ಚಾಂದಣ್ಯಾತ ಥಂಡಿ ವಾಜತೇ ।
ಥಂಡಿವಾಜತೇ – ಥಂಡಿವಾಜತೇ...ಥಂಡಿವಾಜತೇ......"

ಆಳವಿಸಿ ಆಳವಿಸಿ ಹಾಡುತ್ತಿದ್ದ ಭಾವಗೀತ, ಈ ಸಾಂದ್ರಚಂದ್ರಿಕೆ, ಹಿತಮಿತವಾದ ಥಂಡಿ ಜೀವಚೇತೋಹಾರಿಯಾಗಿದ್ದವು. ಪಾನಪಟ್ಟಿಯ ಪಿಚಕಾರಿಯನ್ನು ಹೊಡೆದು. ಸಿಗರೇಟಿನ ಒಂದು ಝುರುಕಿಯನ್ನು ಎಳೆದು. ಹೊಗೆ ಬಿಟ್ಟು ಸುರೇಶ,

"ವಿಶ್ಯಾ, ಈ ರಾಧಾನ ಕೃಷ್ಣಾ ಒಂದಿಷ್ಟು ಔರs ಕಾಣಸ್ತಾನ. ಅಪರಾತ್ರ್ಯಾಗ ಯಾಕ ಬಣ್ಣದ ಪಿಚಕಾರೀ ತಗೊಂಡು ರಾಧಾನ ಬೆನ್ನ ಹತ್ಯಾನ ಬಣ್ಣಾ ಹಾಕಲಿಕ್ಕ? ಗೋಕುಲದಾಗಿನ ಗೌಳಿಗ್ಯಾರು ರಾತ್ರೀ ಬಣ್ಣಾ ಆಡತಿದ್ದರೇನು?"
ಹಾಡಿನ ಮೇಲೆ ಟೀಕೆಮಾಡುತ್ತ ಕೇಳಿದ.

"ಸುರ್‍ಯಾ, ನೀ ಇಂಜನೀಯರ್ ಆದಿ. ನಾ 'ವುಡ್-ಬಿ-ಡಾಕ್ಟರ್'. ನಮ್ಮ ಕವಿತಾಜ್ಞಾನ ಅಂದರ 'ಶಿರಶಿ ಮಾ ಲಿಖ' ಸದರಿನ್ಯಾಗ ಬರೂದು. ಇಬ್ಬರಿಗೂ ಆ ಚೀಜ ಪಸಂಬೂದರ ಜ್ಞಾನಾ ಲೇದು. ಗದಿಗೆಯ್ಯನವರ ಕೈತಾ ಮಾತ್ರ

ತಿಳೀತಿತ್ತು. ದಾದಲ್ಯಾ ಬರಲಿ ಅವನ್ನs ಕೇಳೂಣು. ಅಂವಾ ಬಾಣನಿಂದ ಭಟ್ಟನ ತನಕಾ ಸಂಸ್ಕೃತ ಕಾವ್ಯ ಅರದ ಕುಡದಾನ. ಇಲ್ಲs ವಸೂನೂ ಈಗ ಕವಿತಾದ ಓಟ್ಟಿನ ಗಿರಣೀ ಇಟ್ಟಾಳ. ಅಕಿನ್ನರ ಕೇಳಿ ನಿನ್ನ ಸಮಸ್ಯಾಪರಿಹಾರ ಮಾಡಿ ಕೊಂಬೂಣು. ಸುರ್ಯಾ, ಅಲೀಕಡೇ ದಾದಲ್ಯಾಂದೇನರs ಪತ್ರ-ಗಿತ್ರ ಬಂದಿತ್ತೇನು?" ವಿಶ್ವಾಸ ಕೇಳಿದ.

"ಹದನೈದ ದಿನದ ಹಿಂದ ಬಂದಿತ್ತಪಾ ಒಂದ ಲಾಂಬಲಚಕ ಕಾಗದಾ. ಅಪರ ಒಟ್ಟ 'ಸಪ್ ಏಂಡ್ ಸಬ್‌ಸ್ಟನ್ಸ್' ಏನಂದರ, ಸುರ್ಯಾ, ಮಗನs, ಬೀ.ಈ. ಆದೀ. ಆಫೀಸರ ಆದಿ. ಝಕಾಸ ನೌಕರೀ ಹೊಡದಿ. ತತಃ ಕಿಂ? ಲಗ್ನಾ ಮಜಾ, ಏನ ಮಾಡೂದಿಲ್ಲೇನು? ನಿನ್ನ ಟಿಪ್ಪಣಿ–ಒಂದ ಹುಡಗೀ ಟಿಪ್ಪಣೀ ಜೋಡೀ ಜವಾಸ್ತದೋ ಏನೋ ಕೂಡಿಸಿ ನೋಡಲಿಕ್ಕೆ ಹತ್ತೇನಿ. ನಾ ನಿನ್ನ ಪುರೋಹಿತಾ ಅಪಾ. ನನಗ ಇದೆಲ್ಲಾ ಬಿಡದ ಕರ್ಮಾ. ಅಂತ ಬರದಿದ್ದಾ. ನಾನೂ ಗೀಚಿದೆ. ದಾದಲ್ಯಾ ಮಗನs, ನೀ ಗಜಮ್ ನಿಂತರೂ, ನನ್ನ ಕುಂಡಲ್ಯಾಗ ಕೂತ ಅಮಂಗಳ ಮಂಗಳಾ. ಮಿಸಿಕ್ಯಾಡಲಿಕ್ಕಿಲ್ಲಾ. ಸುಳ್ಳೇ ಧಾವತೀ ಮಾಡಕೋಬ್ಯಾಡಾ. ಮಂಗಳ ಲೋಕದ ಕನ್ಯಾ ಏನರs ನಿನ್ನ ಹಸಿಬ್ಯಾಗಿದ್ದರ ತಿಳಸು. ಜಮಾಸೀತು. ಅಲೀಕಡೇ ಇದೇ ಕಾರಣದಿಂದ, ನಮ್ಮ ಕಾಯಿ ಮುಲ್ಲಿ ಆಕ್ರೋಶ ನಡದsದ. ಅವನ ಕಡಿಂದ ಇನಾ ಉತ್ತರೇನು ಬಂದಿಲ್ಲಾ. ವಿಶ್ಯಾ, ದಾದಾ ಬಂದಿದ್ರು ಮೊನ್ನೆ..."

"ಆಂs! ಏನಂದೀ? ಯಾರು ದಾದಾ ಬಂದಿದ್ರುs? ಎಂದ? ಎಲ್ಲೆ?"

"ನಾಕೈದ ದಿನಾ ಆತು. ಆ ಮಾತಿಗೆ; ಈ ಸುದ್ದೀ ಇನ್ನಾ ನಾ ಯಾರಿಗೂ ಹೇಳಿಲ್ಲಾ. ನೀ ಹ್ಯಾಂಗೂ ಬರಾಂವ ಇದ್ದಿ. ನಿನ್ನ 'ಕಾಂಟ್ಯಾಕ್ಟ್' ಮಾಡೇ ಏನಂಬೂದನ್ನ ಠರಾಸೂದಂತ ಸುಮ್ಮ ಇದ್ದೆ."

ಶ್ಯಾಮರಾಯ ಸುರೇಶನನ್ನು ಆಫೀಸಿನಲ್ಲಿ ಗಾಠಾಸಿದ್ದ. ಬೆಳಗಾಂವಿಯಲ್ಲಿಯ ತನ್ನ ಕಾಂಟ್ರ್ಯಾಕ್ಟ್ ಧಂದೇ, ಅದರಲ್ಲಿನ ಲಾಭಾಲಾಭ, ಇಷ್ಟಾನಿಷ್ಟಗಳನ್ನು ಕುರಿತು ಪ್ರವಚನ ಮಾಡಿದ್ದ. ತಾನು ಒಬ್ಬನೇ ಆಗಿದ್ದರಿಂದ, ಹತ್ತು ಕಡೆಗೆ ನಡೆದ ಕಾಮಗಿರಿಯ ದೇಖರಖಿಯನ್ನು ಮಾಡುವದು ಪಂಚೀತಿಗಿಟ್ಟಿದೆಯೆಂದು ಪ್ರಸ್ತಾಪ ಹಾಕಿ, ಪುಣೆಯ ಮಂಡಳಿಯ, ವಿಶ್ವಾಸನ ಮುಂಬೈ ವೆಚ್ಚದ, ಅವನ ಹಾಗೂ ವಸೂನ ಸಂಬಂಧೀ ಏನಾದರೂ ಜಮಾಸಿತೆ ಹೇಗೆ? ಎಂಬುವದರ ಕಿಲಾಪು ಮಾಡಿದ. ಅಲ್ಲದೆ ಸುರೇಶನಿಗೆ, ಸಾಧ್ಯಮಾಡಿಕೊಂಡು, ಬೆಳಗಾಂವಿಯ ಡಿವ್ಹಿಜನ್ನಿಗೆ ಅಥವಾ

'ಸವರ್ನ್ ಸರ್ಕಲ್'ಗೆ ಬದಲೀ ಮಾಡಿಸಿಕೊಳ್ಳಲು ಸೂಚಿಸಿದ್ದ. ಚೀಫ್ ಇಂಜಿನಿಯು ರರ ವರೆಗೆ ತನ್ನ ವಶೀಲಿಯು ಕೈಜಾಚುವ ಭರವಸೆ ಇದ್ದ ಕಾರಣ – ತಾನು ಖುದ್ದಾಗಿ ನಿಂತು, ಈ ಬದಲಿಯುನ್ನು ಮಾಡಿಸುತ್ತೇನೆ ಎಂದು ಹೇಳಿದ್ದ. ಒಂದೆಂಟು ದಿನದ ರಜೆಯುನ್ನು ಪಡೆದು ಬೆಳಗಾಂವಿಗೆ ಬಂದು ಹೋಗಲು ಗಂಟುಬಿದ್ದಿದ್ದ.

ಮಾತಿನಲ್ಲಿ ಎಂಥವರನ್ನೂ ಚಿತ್‌ಪಟ್ ಮಾಡುವ ತಾಕತ್ತು ಇದ್ದ ಸುರೇಶ, ತನ್ನ ದಾದಾ. ಅಚಾನಕವಾಗಿ ಬಂದು, ಎದುರು ಮಂಡಿಸಿ, ತನ್ನನ್ನು ರಂಬಿಸು ತ್ತಿರುವದನ್ನು ನೋಡಿ ಅವಾಕ್ಕಾಗಿದ್ದ. ಮೂಕನಂತಾಗಿದ್ದ. ಅವನು ಚಕಾರ ಶಬ್ದ ಉತ್ತರಿಸದಿದ್ದುದನ್ನು ನೋಡಿ. ಶಾಮರಾಯು – 'ಮೌನಂ ಸಮ್ಮತಿ ಲಕ್ಷಣಂ' ಎಂದು ನಿಷ್ಕರ್ಷ ತೆಗೆದು —,

"ಅಂದರ ನೀ ಬರೂದು ಠರಾವಾಧಾಂಗ ಹೌದಲ್ಲೋ, ಸುರ್‍ಯಾ ?" ಎಂದು ಕೇಳಿದ್ದ. ಸುರ್‍ಯಾ ಭೋಳಾಶಂಕರನಂತೆ ಈ ಬಗ್ಗೆ, ಕಾಕಾ – ಸೋನಕ್ಕ ಅವರನ್ನ ಕೇಳಿ ಏನೆಂಬುದನ್ನು ತಿಳಿಸುತ್ತೇನೆಂದು ಹೇಳುವದಷ್ಟೇ ಪುರಸೊತ್ತು, ಶ್ಯಾಮರಾಯ ಕುದಿದೆದ್ದ. ಆದರೂ ಅದನ್ನು ಭುಗಿಲೆನ್ನಗೊಡದೆ —

"ಸುರ್‍ಯಾ. ನಿನ್ನ ಹಿತದ್ದಶಿಂದ, ನಿನ್ನ ಕಲ್ಯಾಣದ್ದಶಿಂದ, ನಾಕ ಮಾತ ಹೇಳ ಬೇಕೆಂತ ಇಲ್ಲೀತನಕಾ ಬಂದೆ. ನಾ, ನಿನ್ನ ತಂದೀ ಅನೂ ಅಧಿಕಾರದಿಂದೂ ನಿನ್ನ ಕಾಳಜೀ – ಕಲ್ಯಾಣ ನೋಡಬೇಕಾಗತದ. ನನ್ನ ಮಾತು ಕೇಳಂತ ಹುಕಮುನೂ ಮಾಡಬೇಕಾಗತದ: "As father I command you to respect my words."

ಶ್ಯಾಮರಾಯನ 'ಕಮಾಂಡ್' 'ಯಾಜ್ ಫಾದರ್' ಶಬ್ದಗಳು ಸುರೇಶನನ್ನು ಕೆದಕಿದವು. ಅದರ ನೆನಪು ಇಂದೇ ಅವನಿಗೆ ಮರುಕಳಿಸಬೇಕಾದರೆ ಅವನು ಯಾವುದೋ ಡಾವಿನ ಜಾಲವನ್ನು ಬೀಸಲೆಂದೇ ಬಂದಿದ್ದಾನೆಂದು—

"ತಂದೀ-ಮುಗಾ ಸಂಬಂಧಾ ಇಂದs ಹ್ಯಾಂಗ ನಿಮ್ಮ ನೆನಪಿಗೆ ಬಂತು ? ನಿಮ್ಮ ಮಾತ ನಡಸೂದು ನನಗ ಅಶಕ್ಯನs ಅದs."

ಎಂದು ಹೇಳಿದ್ದ. ಆದರಿಂದ ತೀರಾ ನರಮಾಗಿ ಶ್ಯಾಮರಾಯ ಮತ್ತೆ ಪುರಾಣ ಪ್ರವಚನರತನಾಗಿದ್ದ. ವಿಶ್ವಾಸನನ್ನು ದತ್ತಕ ಕೊಟ್ಟು, ಅವನ ಕಲ್ಯಾಣ ಸಾಧಿಸಿದ ಮೇಲೆ, ತನ್ನ ಸರ್ವ ಭಿಸ್ತು. ಸುರೇಶನ ಮೇಲೇ ಇತ್ತು. ಅವನನ್ನು ಬೀ.ಈ.ಗೆ ಕಳಿಸಬೇಕು. ತನ್ನ ಕೈಯಲ್ಲಿ ತಯಾರುಮಾಡಿ ವಜನದಾನ ಕಂತ್ರಾಟದಾರ 'ಫರ್ಮ್'

ನಡಿಸಬೇಕು, ಎಂದು ಕಲ್ಪನೆ ಕಟ್ಟಿಕೊಂಡಿದ್ದನ್ನು ಹೇಳಿ —

"ಸುರ್ಯಾ, ಎಲ್ಲಾರೂ ನನ್ನ ಕೈಬಿಟ್ಟರು. ಹಚ್ಯಾ-ಹುಚ್ಯಾ ಮಾಡಿದರು. ನೀನೂ ಹಾಂಗs ಮಾಡಬ್ಯಾಡಾ. ನೀನು ಅಷ್ಟಿಷ್ಟು ಆಗಾಗ ನನ್ನ ಕಡೇ ಬಂದ ಹೋಗತಿದ್ರ್ಯೆಂದರ ನನ್ನ ಜೀವಕೂ ಸಮಾಧಾನ ಇರತದ. 'ಕಮಾಂಡ್' ಅಂತ ನಾ ಅನ್ನೊ ಮುಂದ, ಅದರಾಗ ತಂದೀ ಅಂತ ಅನ್ನೊ ಅಧಿಕಾರದಕಿಂತಾ ತಂದೀ ಪ್ರೇಮಾ ಅನ್ನೊ ಅಧಿಕಾರನs ಇತ್ತು. ಅನ್ಯ ಭಾವನಾ ಇರಲಿಲ್ಲಾ."

ಇಷ್ಟೆಲ್ಲವನ್ನೂ ಪೀಠಿಕೆಯಾಗಿ ಹಾಕಿ, ಶ್ಯಾಮರಾಯ, ಸುರೇಶನನ್ನು ಬೆಳಗಾಂವಿಗೆ ಬರುವ ಬಗ್ಗೆ ತಾರೀಖು, ತಿಥಿ, ವಾರ, ತಿಂಗಳು ಗಟ್ಟಿಮಾಡಿ ತನಗೆ ತಿಳಿಸೆಂದು ಗಂಟೇಬಿದ್ದ. ಈ ಪೀಡಾ ಜಾಗ ಬಿಟ್ಟರೆ ಸಾಕೆಂದು ಸುರೇಶ 'I shall let you know leisurely — probably January first week' ಎಂದು ಹೇಳಿ ಅಟ್ಟಿಹಾಕಿದ್ದ. ವಿಶ್ವಾಸನಿಗೆ ಇದರ ಸಾದ್ಯಂತ ವಿವರ ಒಪ್ಪಿಸಿ —

"ದಾದಾ ಯಾಕ ಜೋರಮಾಡಲಿಕ್ಕೆ ಹತ್ಯಾನ ಅನೂದು ತಿಳೀಲಿಲ್ಲಾ. ನಾನರs ಯಾಕ ತಲೀ ಕೆಡಿಸಿಗೋಳಲಿ. ಬೆಳಗಾಂವಿಗೆ ಬರತೀನಿ ಅಂತ ಹೇಳಿದಾ ಕ್ಷಣಕ್ಕ ಏನು ಹೊಂಟೇ ನಿಂದ್ರೂ ಹಾಂಗ ಇಲ್ಲಾ. 'Promise is not fulfill-ment' ಮುಂದ ಅಂವಗ ತಿಳಸೂ ಹಾಂಗನೂ ಇಲ್ಲಾ. ಹೋಗೂ ಹಾಂಗನೂ ಇಲ್ಲಾ. ಸುಮ್ಮ ಇದ್ದಬಿಟ್ಟರಾತು! ನಿನಗೇನ ಅನಸ್ತದ ವಿಶ್ಯಾ ದಾದಾನ ಮಾತಿನ ಧೋರಣಾದ್ದು ?"

ಎಂದು ಕೇಳಿದ. ಕಿಸೆಯಿಂದ ಸಿಗರೇಟ್ ಪಾಕೀಟನ್ನು ತೆಗೆದು ವಿಶ್ವಾಸನ ಮುಂದೆ ಚಾಚಿದ. ಇಬ್ಬರೂ ಸಿಗರೇಟು ಹಚ್ಚಿಕೊಂಡು, ರಸ್ತೆಯ ಬದಿಗಿದ್ದ ಪೂಲಿನ ಮೇಲೆ ಹೋಗಿ ಕುಳಿತರು.

ಶ್ಯಾಮರಾಯ – ಸಾಹೇಬರ ಸಂಬಂಧ, ಅವರ ಶಕೂ ಬೆಳೆದು ನಿಂತ, ಉಪವರ ಕನ್ಯೆಯಾದ ವಿಷಯ, ಅವಳ ಬಗ್ಗೆ ಸಾಹೇಬರು ಶ್ಯಾಮರಾಯನಿಗೆ ಗಂಟುಬಿದ್ದ ಮಾಹಿತಿ, ಎಲ್ಲವನ್ನೂ ವಿಶ್ವಾಸ ಸುರೇಶನಿಗೆ ವಿವರಿಸಿ —

"ಸುರ್ಯಾ, ಈಗ ನಿನ್ನ ಪರೀಕ್ಷಾ ಮುಗೀತು. ನೌಕರೀನೂ ಸಿಕ್ಕಿತು. ಸಾಹೇಬರು ಟಪಾಸಿಕೊಂಡು ಕೂತಿದ್ದರು. ಲಗೂನ ಏನರs ನಿಕಾಲೇ ಮಾಡರೀ ಅಂತs ದಾದಾಗ ಒತ್ತಾಯಮಾಡಲಿಕ್ಕೆ ಹತ್ತಿರಬೇಕು. ಅದಕ ದಾದಾ ನಿನ್ನ ಒಮ್ಮೆ ಬೆಳಗಾಂವಿಗೆ ಕರಕೊಂಡು ಹೋಗಾಂವಾ. ಅವರ ದೃಷ್ಟಿಗೆ ನಿನ್ನ ಹಾಕಿ, ನೋಡರಿ

ಸುರೇಶ ಬಂದಾ. ಅಂವಾ ಶಕೂನ ಒಪಗೊಂಡರ ಸಂದೇನು ಅಡ್ಡೀ ಇಲ್ಲಾ ಅಂತ ಅಂದು ತಾ ಕಡೀಕಾಗಾಂವಾ. 'ಯಸ್ ಔರ್ ನೋ' ಅಲ್ಲಿಕ್ಕೆ ಅಧಿಕಾರ ನಿನಗ ಅದs. ನೀ 'ನೋ' ಅಂದೀ ಅಂದರ ಅವನ ಜವಾಬ್ದಾರೀನs ಹಾರಿತು. ಇಂಥಾ ವಿಷಯ ದಾಗ 'ಪ್ರೆಶ್ಶರ್' ತರೂದು ಕ್ಷೇಮ ಅಲ್ಲಾ ಅಂತs ಸಾಹೇಬರಿಗೂ ತಿಳೀತದ. ನಿರುಪಾಯಾ ಅಂತ ಥಂಣಗಾಗತಾರ. 'ಯಸ್' ಅನ್ನೂ ಲಕ್ಷಣ ಕಾಣಿಸ್ತ್ಯs, ಅವರ್ನ ಹ್ಯಾಂಗ ಬೇಕದ್ಹಾಂಗ ಸುಲೀಲಿಕ್ಕೆ ದಾದಾ ಏನು ಹಿಂದ ಮುಂದ ನೋಡೂದಿಲ್ಲಾ. ಅವರಿಗೂ ಒಬ್ಬಾಕೀನೇ ಮಗಳು. ಅವರು ಘಳಿಸಿದ್ದೆಲ್ಲಾ ಮಗಳು-ಅಳ್ಯಾನ ಪಾಲ ಆಗೂದು ಅನ್ನೂದು ಅವರಿಗೂ ಗೊತ್ತ ಅದs. ದಾದಾನ್ನು ಯಾವಾಗಲೂ 'ಡಬಲ್ ಎಜ್ಡ್ ಸ್ವೋರ್ಡ್'ನ ಹೊಡತಾ. ಈಗ, ನಿನಾಗೇ ಬೆಳಗಾಂವಿಗೆ ಹೋಗ ದಿದ್ದರೂ, ಸಾಹೇಬರು ಒಂದ ವ್ಯಾಳ್ಯಾ, ಪುಣೇಕ್ಕ ಬರೂ ಸಂಭವ ಅದs; ಕಾಕಾನ್ನ, ತಾಯೀನ್ನ ಕೇಳೂ ಸಂಭವ ಅದs. ಆಗ, ಕಾಕಾ – ತಾಯೀ ಇಬ್ಬರೂ ದಾದಾನ ಭಾನಗಡೀ 'ಎಕ್ಸ್‌ಪೋಜ್' ಮಾಡತಾರ. ದಾದಾಗ ಅನ್ಯಾಯ ಆಗಬೇಕಂತ ಅವರು ಅದನ್ನ 'ಎಕ್ಸ್‌ಪೋಜ್' ಮಾಡೂದಿಲ್ಲಾ; ಅವರ ಕ್ಷೇಮದ್ದಶಿಂದ ಇದರ ಉಲಗಡಾ ಮಾಡಬೇಕಾಗತದ. ಸಾಹೇಬರು ದಾದಾನ ಅಪವಾದಕ್ಕ ಕಿಂಮತ ಕೊಡದೇ, ನಿನಗ ಕನ್ಯಾ ಕೊಡಲಿಕ್ಕೆ ಒಪ್ಪಿದರ, ದಾದಾಗ ಎಲ್ಲ್ಯೂ ಮಾರೀನs ಉಳಿಯೂದಿಲ್ಲಾ. ಅಂವಾ. ಈ ನಾಲಾಯಖೀ, ಅಪಮಾನಾ, ಮುಕಾಟ್ಲೇ ಸಹನಮಾಡಿಕೊಂಡಾನಂತ ನನಗೇನು ಅನಸೂದಿಲ್ಲಾ. ದಾದಾನಲ್ಲೆ ಶಕುನೀ ನೀಚ ತನಾ, ಕೌರವನ ಈರ್ಷಾ ದುರಭಿಮಾನಾ, ತುಂಬಿ ತುಳಕತಾವ. ಪಾಂಡವರು ಐದs ಊರ ಬೇಡಿದ್ದರೂ, ಅವರಿಗೆ ಅಷ್ಟೂ ಉಳೀದಿರಲಿ ಅಂತ ಅನ್ನೂ ಈ ಈರ್ಷಾದಿಂದ, ಇಡೀ ಭಾರತನ ಬಲೀ ಕೊಡೂ ತಾಮಸೀವೃತ್ತೀ ಕೌರವನಲ್ಲೆ ಹ್ಯಾಂಗ ಇತ್ತು, ಹಾಂಗs ದಾದಾನಲ್ಲ್ಯೂ ಅದs. ಅವನ ಪಾಪ ಅವನ್ನ ಮುಣ ಗಸಲಿಕ್ಕೆ ಹತ್ತೇದ. ಆದರ, ನಾ ಅಷ್ಟs ಯಾಕ ಮುಣಗಲೀ, ನನ್ನ ಜೋಡೀ, ಪಂತ ಕುಟುಂಬನೂ ಮುಳಗಲೀ ಅನ್ನೂ ದುರ್ಬುದ್ಧೀ ಅದs ಅವನಲ್ಲೆ.

ಕದಾಚಿತ್ ಸಾಹೇಬರು ಬಂದು ಕಾಕಾಗ ಗಂಟಬಿದ್ದರು. ನೀನೂ ಹುಡಗಿನ್ನ 'ಅಪ್ರೂವ್ಡ್' ಮಾಡಿದೀ ಅಂದರ, ಈ ಎಲ್ಲಾ 'ಪ್ರಾಬ್ಲೆಮ್' ಬರತಾವ. 'ಪ್ರಾಬ್ಲೆಮ್' ಬರಬಾರದಂತ, ನೀ ವ್ಯರ್ಥ ಹುಡಗಿನ್ನ ಮಾತ್ರ 'ರಿಫ್ಯೂಜ್' ಮಾಡಬ್ಯಾಡಾ. ಪಸಂತ ಬಿದ್ದರ ಸರ್‍ಳ 'ಯಸ್' ಅನ್ನು. ದಾದಾನ ಭಾನಗಡೀ

ಸಂಬಂಧೀ ಅವರ ಜೋಡೀ ನೀ ಏನು ಮಾತಾಡಲಿಕ್ಕೆ ಹೋಗಬ್ಯಾಡಾ. ಕಾಕಾ-ತಾಯೀ ಆವಕ್ಕಿದ್ದಾರ. ಬೆಳಗಾಂವಿಗೆ ನೀ ಹೋಗೂ ಪ್ರಸಂಗ ಬಂದರ ಕಾಕಾ-ತಾಯೀ ಅವಕ್ಕ ಕಬೂಲ ಆಗತಾರೋ ಇಲ್ಲೋ ಆ ಮಾತ ಬ್ಯಾರೇ. ನೀ ಬೆಳಗಾಂವಿಗೆ ಹೋಗೂದನ್ನs ಠರಾಸಿದರ, ದಾದಾನ ಮಾತಿನ ಪ್ರಕಾರ ಅಲ್ಲಿಗೆ ಹೋಗತೀನಿ ಅನ್ನೂ ಮಾತು ಯಾರಿಗೂ ಒಡೀಬ್ಯಾಡಾ. ಆಫೀಸಿನ ಕೆಲಸದ್ವಲಿಂದ ಜರೂರ ಹೋಗಬೇಕಾಗೇದ ಅಂತನs ಹೇಳು. ಅಂದರ ಸಂಶಯಕ ಆಸ್ಪದನs ಉಳಿಯೂದಿಲ್ಲಾ. ದಾದಾ ಭೆಟ್ಟಿ ಆದ ಸಂಬಂಧೀ ಚಕಾರ ಶಬ್ದ ಎತ್ತಬ್ಯಾಡಾ. ಬೆಳಗಾಂವ್ಯಾಗ ಸಾಹೇಬರು, ಅವರ ಮನೀಯವರು. ಅವರ ಜೊಡೀ ಇರೂ ಸಂಧೀ ನಿನಗ ದಾದಾ ಎಂದೂ ಕೊಡಿಸಿಗೊಡೂದಿಲ್ಲಾ. ನಿನ್ನ ಬೆನ್ನೀ ಕಾಯ್ತಾನ. ತನ್ನ ಘಾನಗಡೀ 'ಎಕ್ಸ್‌ಪ್ರೋಜ್' ಆಗಬಾರದು ಅನ್ನೂ ಕಾಳಜೀ. ನಿನಕಿಂತಾ ಅಂವಗ ಜಾಸ್ತ ಅದs. ಎರಡ ದಿನಾ ಅವರ ಜೋಡೀ ಇದ್ಹಾಂಗ ನೂಡಿಸಿ. ಸುರೇಶನ ಅಭಿಪ್ರಾಯ 'ಪ್ರೈವ್ಹೇಟ್' ಆಗಿ ತಿಳಕೋತಿನ್ಯಂತ ಅವರಿಗೆ ಘುಲತಾಪೀ ಹೊಡದು ನಿನ್ನ ಊರಿಗೆ ಕರಕೊಂಡು ಹೋಗತಾನ. ಈಗ ಬಂದ ಸಾಪ ತಪ್ಪಿಸಿಗೋಳಲಿಕ್ಕೆ. ದಾದಾ ಇಷ್ಟ ಮಾಡತಾನ ನೋಡು, ಸುರ್ಯಾ."

"ಇಷ್ಟೇ ಯಾಕ ವಿಶ್ಯಾ, ದಾದಾ, ಈ ಹುಡಗಿನ್ನ 'ಅಪ್ರೂವ್ಹ್' ಮಾಡಿಸಿಗೊಡೂದಿಲ್ಲಾ. ನಾ 'ಅಪ್ರೂವ್ಹ್'ನs ಮಾಡಿದರ. ಮಾತ-ಕಥೀ ಸುರೂ ಆಗತಾವ. ಲಗ್ನ ಠರಾಸ್ತದ. ಇಂವಾ ಏನು ಅಡಕೀ ಬೆಟ್ಟಾ ಇಟಗೊಂಡು ಕೂಡಾವ್ನs ಪುಣೋಚನಕ್ಕ? ಏನ ತಾನೇ ಆ ಹುಡಿಗೀ ಜೋಡೀ ಸುರಗ್ಯಾಗ ಕೂಡತಾನs? ಇಲ್ಲೆ ಅವರು ಬಂದು, ಕಾಕಾನ ಜೋಡೀ ಮಾತಕಥೀ ಆಡ್ಯಾರು ಅನ್ನೂ ಅಂಜಿಕಿ ಅಂವಗs. ಅವನ್ನ ಬಂದಮಾಡಲಿಕ್ಕೆ ನನ್ನ ಬೆಳಗಾಂವಿಗೆ ಕರಕೊಂಡು ಹೋಗಾಂವಾ. ಆದಷ್ಟು ಮಾಡಿ ನನ್ನ ಕಡಿಂದ ನಕಾರ ಹೇಳಸಾಂವಾ. ಜವಾಬ್ದಾರೀ ಅನಾಯಾಸಾ ಹಾರಿತಂದರ ಗೆದ್ದಾ. ವಿಶ್ಯಾ, ಇಂವನ್ನ ಮಣಸಬೇಕಾದರ ಒಂದ ಡಾವ್ ಮಾಡಬೇಕು. ಮನಸಿನ್ಯಾಗ ಇರಲೀ ಬಿಡಲೀ ದಾದಾಗ ಸರ್ವsಳ ಹೇಳಬೇಕು. ಹುಡಿಗಿ 'ಸೆಂಟ್‌ಪರ್ಸೆಂಟ್' ಪಾಸ ಬಿತ್ತಂತ. ಪಾರ ಖಿಡವಂತ, ನನ್ನ ಕಾಲ ಹಿಡೀಲಿಕ್ಕೆ ಬರತಾನ. ತಾಯೀ–ಕಾಕಾನ ಕಾಲು ಮೊದಲ ಹಿಡಕೋ ಅಂತ ಕರಾರ ಹಾಕೂಣು. ಝುಕ್ಕಸ್ತ ದಿಂಡರಕಿ ಹಾಕ್ಕೋತ ಬರತಾನ. ಮೂಗು ಘಟ್ಟ್ಯಾಗಿ ಹಿಡಿಯೂ ತ್ರಾಣ ಬೇಕು. ಬಾಯಿ ತಾನs ತಗೀತದ. ಈ ಹುಡಿಗೀ ಸುದ್ದೀ ಅಂವಾ ಮೊನ್ನೇ

ತಗವಿದ್ದರ. ಆಗೇ ಹೇಳಿಬಿಡತಿದ್ದೆ. ನೋಡದೇನೂ ಹುಡುಗಿನ್ನ 'ಅಪ್ರೂವ್' ಮಾಡೀನಿ. 'ಪ್ರೊವ್ಹಾಯ್‌ಡೆಡ್' ನೀ ಈಗಿಂದೀಗ ಮನೀಗೆ ಬಂದು, ಕಾಕಾ-ತಾಯೀ ಅವರ ಕಾಲ ಹಿಡಕೋಬೇಕು. ತಪ್ಪಾತಂತ ಅಡ್ಡ ಬೀಳಬೇಕು. ಅಂವಾ ಅಷ್ಟು 'ಅರ್ನೆಸ್ಟ್'ನs ಇದ್ದರ ಕನ್ಯಾದ ವಿಷಯ ತಗೀತಿದ್ದಾ. 'ಅರ್ನೆಸ್ಟ್' ಇಲ್ಲಾ ಅನ್ನೂದು ಉಘಡನs ಅದ."

ಸುರೇಶನ ಮಾತಿನಲ್ಲಿ ತಥ್ಯವಿತ್ತು. ಶ್ಯಾಮರಾಯನನ್ನು ಮಣಿಸುವ ಹವಣು ಇತ್ತು. ಸೋನಕ್ಕ, ಕುಟುಂಬ-ಕ್ಷೇಮದ ದೃಷ್ಟಿಯಿಂದ, ಕಾಕಾ-ವಿಶ್ವಾಸ ಅವರ ಸುಖದ ದೃಷ್ಟಿಯಿಂದ, ನಾಚಿಕೆ-ಲಜ್ಜೆ ತೊರೆದು ತಾವಾಗಿಯೇ ಶ್ಯಾಮರಾಯನ ಎಳೆ ಜೋಡಿಸಿಕೊಂಡರೆ ಹೇಗೆ ಎಂಬ ವಿಚಾರ ಸೂಚಿಸಿದ್ದರು. ಈಗ ಸುರೇಶನ ಸೂಚನೆ ಕಾರ್ಯಗತವಾದರೆ, ಶ್ಯಾಮರಾಯ ತಾನಾಗಿಯೇ ಸೆರಗೊಡ್ಡಿ ಕ್ಷಮಾಭಿಕ್ಷೆಗೆ ಬರುವ ಸಂಭವನೀಯತೆ ಇತ್ತು. ಸಮಸ್ಯೆ ಬಿಡಬಹುದಾದ ಆಶೆ ಇತ್ತು. ವಿಶ್ವಾಸನಿಗೆ ಸುರೇಶನ ವಿಚಾರ ಪಟಾಯಿಸತೊಡಗಿತು. ಆದರೆ —

ಈ 'ಆದರೆ' ಯಾವಾಗಲೂ ಘೋಟಾಳೆ ಮಾಡುತ್ತದೆ.

ಸುರೇಶನ ಮಾತಿನಲ್ಲಿಯ ಸತ್ಯಾಂಶವನ್ನು ವಿಶ್ವಾಸ ತನಿಖಿಸಿ ನೋಡಿದ. ಅದನ್ನು ಒಪ್ಪಲಿಕ್ಕೆ – ಸಾಧ್ಯವಾದರೆ ಕಾರ್ಯಗತ ಮಾಡಲಿಕ್ಕೆ ಅಡ್ಡಿ-ಆತಂಕ ಏಕೆ ಬರಬೇಕು ? ಬರಲಿಕ್ಕಿಲ್ಲವೆಂದ. ಕಾಕಾ ಒಪ್ಪಬಹುದು. ಸೋನಕ್ಕ... ? ಸೋನಕ್ಕನೂ ಒಪ್ಪಬಹುದು. ಅವರಿಬ್ಬರೂ ಒಪ್ಪಿದರೆ, ಪಂತರ ಮನೆಗೆ ಅಡರಿದ ಅವಕಳೆ ಅಳಿಯಬಹುದು. ಮುತ್ತಿದ ಮೋಡ ಚದರಿ, ಹಿಂಜಿ ಹೋಗಿ ಸಾಂದ್ರಚಂದ್ರಿಕೆ ಚೆಲ್ಲಬಹುದು. ವಾಡೆಯಲ್ಲಿ ಕಾಕಾ ಮತ್ತೆ ವಿರಾಜಮಾನರಾಗಬಹುದು. ದಾದಾ, ಸೋನಕ್ಕನ ತುಂಡರಿಸಿದ ಸಂಸಾರ-ಬಂಧ ಜೋಡಿಸಬಹುದು. ಪಂತರ ವಾಡೇ ನಂದಗೋಕುಲವಾಗಬಹುದು. ಪಂತಕುಟುಂಬದ ಮೂಲಪುರುಷ – ಶಿವರಾಮ ಪಂತರ ತಳಮಳಿಸುತ್ತಿದ್ದ ಅಶಾಂತ ಆತ್ಮ ಶಾಂತವಾಗಬಹುದು.

ಆದರೆ......

ಶಕೂ ಸುರೇಶನ ಮನಸ್ಸಿಗೆ ಒಪ್ಪಿಗೆಯಾಗದಿದ್ದರೆ ...

ಸೋನಕ್ಕನ – ತನ್ನ ತಾಯಿಯ ಕಷ್ಟಪರಂಪರೆ ಒಮ್ಮೆ ಕೊನೆಗಾಣಲೆಂದು, ಅವಳು ಚಿರಸುಖಿಯಾಗಲೆಂದು. ಸುರೇಶ ಮೂಕಸಮ್ಮತಿ ಕೊಡಬಹುದು. ಶಕೂ ಬೇಡವಾಗಿದ್ದರೂ ಒಪ್ಪಬಹುದು. ಸುರೇಶ, ಅಮಿತ ಧೈರ್ಯ ತೋರಿಸಿ,

ಸೋನಕ್ಕನ ಕಂಠಸ್ಥವಾದ ಹಾಲಾಹಲ-ವಿಷವನ್ನು, ಸರ್ವರ ಕ್ಷೇಮಕಾರಣನಾಗಿ, ತಾನು ಧರಿಸಬಹುದು. ಅವನ ವಿಷಧಾರಣದಿಂದ ದುಃಖ ಸಮೂಲ ನಾಶವಾಗುವದಿಲ್ಲ; ಕಷ್ಟಪರಂಪರೆ ಕೊನೆಗಾಣುವದಿಲ್ಲ. ಅದು ಕೈ, ಗಂಟಲು ಮಾತ್ರ ಬದಲಿಸೀತು. ಅಷ್ಟೇ!

ಸುರೇಶ ಸುಖಿಯಾಗಬೇಕು. ಅವನಿಗೆ ಈ ವ್ಯಾಧಿ – ಈ ವ್ರಣದ ಕಲೆ ಅದರಬಾರದು. ಚಿಗಿತು ಪಲ್ಲವಿಸಲಿರುವ ಆ ಜೀವ, ಇದರ ಝಳ, ಕಿಚ್ಚು ತಾಕಿ ಹುರಪಳಿಸಬಾರದು. ಅದರ ಬೆಳವಣಿಗೆ ಚಿಗಿತದಲ್ಲಿಯೇ ಕಮರಿ ಕರಕಾಗಬಾರದು. ಹಾಗಿದ್ದರೆ, ಯಾರು ಆ ವಿಷವನ್ನು ನಗುನಗುತ್ತ. ತುಟಿಗೆ ಒಯ್ದು, ಒಂದೇ ಗುಟಕಿನಲ್ಲಿ ಹೀರಬೇಕು?

ವಿಶ್ಯಾ...... ವಿಶ್ವಾಸ......

ನೀನೇ ಅದನ್ನು ಕಂಠಸ್ಥಮಾಡಿಕೊಂಡರೆ...?

ನೀನು ಅಗ್ನಿಗರ್ಭರತ್ನಾಕರನಂತೆ ತೋರಬಹುದು. ಜಗತ್ತು, ನಿನ್ನ ತ್ಯಾಗವನ್ನ, ನಿನ್ನ ನಿಃಸ್ವಾರ್ಥವನ್ನ, ನಿನ್ನ ಮನೋಧೈರ್ಯವನ್ನ ಮೆಚ್ಚಬಹುದು. ಸೋನಕ್ಕ – ನಿನ್ನ ತಾಯೀ, ಸುಖಿಯಾದಾರು; ವಿಶ್ಯಾನೂ ಸುಖಿಯಾದಾನು. ಶಾಪವಿಮುಕ್ತರಾಗಿ, ನವಜೀವನ ಪಡೆದಾರು. ನವಚೈತನ್ಯ ಪಡೆದಾರು. ಅವರ ಜೀವ-ಕೊರಡು, ನಿನ್ನ ತ್ಯಾಗದ ಅಮೃತಸಿಂಚನದಿಂದ, ಸಂಜೀವಿನೀಸ್ಪರ್ಶದಿಂದ ಚಿಗಿತು ಮಲಮಲಿಸೀತು.

ಆದರೆ......

ವಿಶ್ಯಾ, ನೀನು ಗರ್ಭಧಾರಣೆ ಮಾಡಿದ ನಿಗಿನಿಗಿ ಕೆಂಡದಲ್ಲಿ – ಅಗ್ನಿಕುಂಡದಲ್ಲಿ, ನಿನ್ನ ವಸೂ...ನಿನ್ನ ವಸೂ, ಕತಕತ ಕುದಿಯುವ ಆತ್ಮಸಂಕಟ ಪಡಬಹುದು. ಆ ಅಗ್ನಿಮಥನದಲ್ಲಿ ಸಿಕ್ಕು ವಿಲಿವಿಲಿ ಒದ್ದಾಡಬಹುದು. ಅನಂತ ವಿರಹ, ಚಿರಂತನ ನಿರಾಶೆ, ಆ ಸುಮ-ಕೋಮಲ ಜೀವನವನ್ನು ಅಗ್ನಿಶಿಖೆಯ ಮೇಲೆ ಹಿಡಿದು ಲೀಲೆಯಾಡಬಹುದು. ಅದನ್ನು ಒಂದೇ ಗುಟುಕಿನಲ್ಲಿ ಗಿಳಂಕರಿಸದೆ. ನಿಧಾನವಾಗಿ – ನಿವಾಂತವಾಗಿ ಹುರಪಳಿಸುವ ಕಮರಿಸುವ ವಿಕಟಲೀಲೆಯಾಡಬಹುದು. ನೀನು... ನೀನು ವಿಶ್ಯಾ, ಈ ತ್ಯಾಗದ ಸುಖದಲ್ಲಿರುವೆನೆಂದು ನಟಿಸುವ ನೀತಿ, ಸೋನಕ್ಕನ ಅಚೂಕ-ದೃಷ್ಟಿಗೆ ಗೋಚರವಾಗದಿರದು. ನಿನ್ನ ಅಂಜನದಿಂದ ಅವರ ದೃಷ್ಟಿ, ಹೇರಕ ಶಕ್ತಿ ಮಸಕಾಗದು. ಕುರುಡಾಗದು. ತಮಗಾಗಿ ತಮ್ಮ ವಿಶ್ಯಾ, ಈ ತ್ಯಾಗ ಮಾಡಿದ

ನಂಬ ಅಸಂತ ಸತ್ಯ ಅವರಿಗೆ ಅವಗತವಾಗದಿರದು. ಸೋನಕ್ಕನ ಕೊರೆತ – ಕ್ಷಯ ವೃತ್ತಿ ಇದರಿಂದ ಮಾಯದು, ಈ ಕೊರೆತ ಈ ಕ್ಷಯ ಅವರನ್ನು ಸಣ್ಣಾಗಿಸಿ, ಕ್ಷೀಣಿಸ ದಿರುವದಿಲ್ಲ. ಮೃತ್ಯುವಿನ ಮಹಾಯಾನದಲ್ಲಿ ಎಳೆಯದಿರುವದಿಲ್ಲ. ವಿಶ್ಯಾ, ಇಂದು ಬಂದು, ಆ ಎಂದು ಬಾಯ್ದೆರೆದು ಎದುರು ನಿಂತ ಸಾವಿನ ದವಡೆಯಿಂದ ನೀನು ಕ್ಷಣೈಕ ನುಸುಳಬಹುದು – ಅನ್ಯರನ್ನೂ ನುಸುಳಿಸಬಹುದು. ಆದರೆ ನಿನ್ನ ವಂಚನೆ, ಕರಾಳ ಮೃತ್ಯುವಿಗೆ, ವಿನಾಶಿ ವಿಧಿಗೆ ಹೊಳೆಯಲು ಅವಕಾಶ ಹಿಡಿಯದು. ಇಂದು ನಿಮ್ಮನ್ನು ನುಂಗದೆ – ಬಾಡಿಸಿಕೊಳ್ಳದೆ ಬಿಟ್ಟ ಮೃತ್ಯು, ನಾಳೆ, ಗೂಳಿ ಗಬಗಬನೆ ತಿಂದ ಹುಲ್ಲನ್ನು ಗಿಡದ ನೆರಳಿನಲ್ಲಿ ನಿವಾಂತವಾಗಿ ಮಲಗಿ ಮೆಲಕಾಡುವಂತೆ, ನಿನ್ನನ್ನು. ವಸೂನನ್ನು, ಸೋನಕ್ಕನನ್ನು, ಕಾಕಾನನ್ನು ಮೆಲುಕಾಡಿಸಿ ರಸಹೀರಿ ಬಲಿಕೊಳ್ಳದಿರಲಾರದು. ಸಾವು-ವಿನಾಶ ಬರುವದಾದರೆ ಬರಲಿ. ಅದರ ತೃಷಾರ್ತ ದಾಹ, ಒಂದೇ ಉಸುರಿನಲ್ಲಿ – ಒಂದೇ ಗುಟುಕಿನಲ್ಲಿ, ಆಪೋಷಣೆ ತೆಗೆದುಕೊಂಡು ತನ್ನ ದಾಹ, ಹಸಿವು ಹಿಂಗಿಸಿಕೊಳ್ಳಲಿ. ಈ ಅನಂತ ನರಕದ ಮೆಲುಕಾಟ ಬೇಡ. ನೀನು ಶಕೂನನ್ನು ಸ್ವೀಕರಿಸಿದರೆ ಅದರಲ್ಲಿ ತ್ಯಾಗವಿದೆ. ಸುಖವಿದೆ ಎಂಬ ಕಲ್ಪನೆ ಕೇವಲ ಭ್ರಮೆ. ಅಂಜನ ಸಿಂಚನ. ವಿಶ್ಯಾ, ಈ ದಾರಿ ನಿನಗೆ ಹೊರತು. ಅನ್ಯ ಕವಲು ದಾರಿ ಇದ್ದರೆ ನೋಡು...ತನಿಖಿಸು ...

ಶಕೂ ಸುರೇಶನಿಗೆ ಒಪ್ಪಿದಳು.

ಅಂದರೆ ಅರ್ಧ ದಾರಿ ಸುಗಮವಾಯಿತು. ಸಾಹೇಬರಿಗೆ, ರಂಗಕ್ಕನಿಗೆ ದಾದಾನ ಭಾನಗಡೀ ವಿಷಯ ವಿದಿತವಾಗಬೇಕು. ಅದು ತಿಳಿಯದೆ, ಅದನ್ನು ತಿಳಿಸದೆ ಉಳಿದರ್ಧ ದಾರಿಯ ಉಪಕ್ರಮ ಅಶಕ್ಯ. ಅವರು ಈ ಹೀನ ಅಪವಾದ ವನ್ನು ಅಲಕ್ಷಿಸಿ, ಸುರೇಶನಿಗೆ ಶಕೂನನ್ನು ಕೊಡಲು ಒಪ್ಪಿದರೆ ...

ಅವರು ಒಪ್ಪಿದರೆ ನಮ್ಮ – ಅವರ ಋಣಾನುಬಂಧ ಹೆಣೆಯುತ್ತದೆ. ಅವರ – ದಾದಾನ ಸಂಬಂಧ ಕಡಿಯುತ್ತದೆ, ಎಂದಿಗೂ ಹೊಂದದಂತೆ ಕಡಿಯು ತ್ತದೆ. ದಾದಾನ ಆಶೆ-ಆಕಾಂಕ್ಷೆ, ಅವನು ಕಲ್ಪಿಸಿಕೊಂಡ ಮನೋಮಂದಿರ ಧೂಳಿ ಧೂಸರಿತವಾಗುತ್ತವೆ. ಅವನು ಈ ಧೂಳಿ-ಧೂಸರಿತ ಮಂದಿರದ ಅಡಿಪಾಯ ದಲ್ಲಿ, ನಿರ್ವಿಣ್ಣನಾಗಿ, ನಿಃಷ್ಪ್ರಭನಾಗಿ ಬಿದ್ದು ಅಸಹಾಯನಾಗುತ್ತಾನೆ. ಅವನು ಹಾಗಾದರೆ ಆಗಬೇಕಾದ ಹಾನಿ ಏನೂ ಇಲ್ಲ. ಒಂದು ರೀತಿಯಿಂದ – ಕುಟುಂಬ ಕ್ಷೇಮದ ದೃಷ್ಟಿಯಿಂದ ಅದು ಒಳ್ಳೆಯದೇ ಎನ್ನಬಹುದು. ಆದರೆ......

ಆದರೆ ಅದು ಹಾಗೆ ಬೀಳುವ – ಬೀಳಲಿಕ್ಕೆ ಹುಟ್ಟಿ ಬಂದ ಜೀವವೇ ಅಲ್ಲ. ಫ್ರಾಂಯಕಿನ್‌ಸ್ಟನ್, ಅರೆಮತಿ, ವಿಭ್ರಮಮತಿ, ವಿರೂಪಿ, ವಿನಾಶಿ ನರಪಶುವಿನಂತೆ ಅವನು ಎದ್ದೇ ಏಳುತ್ತಾನೆ. ಸಿಕ್ಕಲ್ಲಿ ನೀಳ ತೋಳು ಚಾಚುತ್ತಾನೆ. ಕಂಡಲ್ಲಿ ಶಿಲಾ ಪಾದವಿಟ್ಟು ಮೆಟ್ಟಬಯಸುತ್ತಾನೆ. ಯಾರದೋ ಬಲಿಯಾದಾಗ – ಯಾರನ್ನೋ ಬಲಿಕೊಂಡಾಗ ವಿಕಟಾಟ್ಟಹಾಸಮಾಡಿ ವಿಜೃಂಭಿಸಬಯಸುತ್ತಾನೆ. ಅವನಲ್ಲಿಯ ನರಪಶು ಭೂಪತಿತವಾಗಬೇಕು. ಅದರ ವಿಕಟಾಟ್ಟಹಾಸ ನಿಲ್ಲಬೇಕು. ಅದರ ತುಳಿತ-ಪದಪತಿಯ ಸದ್ದಡಗಬೇಕು. ಅಂದರೆ... ಅಂದರೆ... ರಾಮಜೀಕಾಕಾನ ಜೋಡು-ನಳಿಯ ಬಂದೂಕಿನಿಂದ ಅಗ್ನಿಕಿಡಿ ಸಿಡಿಯಬೇಕು...ವಿಸ್ಫುಲಿಂಗ ಮಿಂಚ ಬೇಕು. ಆ ಸಿಡಿತಕ್ಕೆ ನರಪಶು ಬಲಿಯಾಗಬೇಕು... ಬೀಳಬೇಕು. ಅಂದರೆ......

ಗುಡುಗು-ಮಿಂಚಿನ ಪ್ರಳಯಗರ್ಭದಿಂದ ಸಿಡಿಲೆರಗಿತಂದರೆ, ಆ ಅಂಥ ಮೃತ್ಯುಶಕ್ತಿ ಏನನ್ನೋ ಯಾರನ್ನೋ ಬಲಿಕೊಂಡು ನಿಃಪಾತವಾಗುತ್ತದೆ. ನಂತರ ಒಂದು ಬಗೆಯ ಸ್ತಬ್ಧತೆ, ಸ್ಮಶಾನಸ್ತಬ್ಧತೆ, ಶಾಂತತೆ ವಾತಾವರಣವನ್ನು ಆವರಿಸಿ ದಂತಾಗುತ್ತದೆ. ಅಂಥ ಸ್ತಬ್ಧತೆ, ಅಂಥ ಸ್ಮಶಾನಶಾಂತಿ, ನರಪಶು ಭೂಪತಿತ ವಾದಾಗಲೂ ಮೂಡುತ್ತದೆ. ಆದರೆ...

ಆ ಸ್ತಬ್ಧತೆ ಸ್ತಬ್ಧತೆಯಲ್ಲ; ಆ ಶಾಂತಿ ಶಾಂತಿಯಲ್ಲ. ಅದು ಲಯ, ವಿನಾಶ, ಪ್ರಳಯದ ನಂತರ ಬಂದ ಸ್ಮಶಾನಶಾಂತಿ.

ಕವಲುದಾರಿಯಲ್ಲಿ ನಡೆದು ಬಂದು, ಅನ್ಯ ದಾರಿಯಲ್ಲಿ ಉಪಕ್ರಮಿಸಿ, ವಿಶ್ವಾ, ನೀನು ಕಾಣುವದು, ನಿನ್ನ ಕಣ್ಣಿಗೆ ಗೋಚರಿಸುವದು ಇಂಥ ಸ್ತಬ್ಧಮೌನ, ಇಂಥ ಸ್ಮಶಾನಶಾಂತಿ!

ಕಾಕಾ ಒಮ್ಮೆ ಹೇಳಿದ್ದರು: ವಿಶ್ವಾ, ಬರೇ ರುದ್ರ-ಸೃಷ್ಟಿಯೇ ಸರ್ವತ್ರ ಇಲ್ಲ. ಬ್ರಹ್ಮ-ಸೃಷ್ಟಿಯೂ ಇದೆ. ವಿನಾಶದ ಕೂಡ ವಿಕಾಸವೂ ಇದೆ. ಒಂದರ ಅಂತ್ಯ ಇನ್ನೊಂದಕ್ಕೆ ಆದಿ. ಗಣಪತಿದೇವಸ್ಥಾನ, ನಮ್ಮ ವಾಡೇ, ಅದರ ಸುತ್ತು ಹೆಣೆದ ಊರು ಇತ್ತೀಚೆ ಆದದ್ದು. ಮುಂಚೆ ಅಲ್ಲಿ ಸ್ಮಶಾನವಿತ್ತಂತೆ. ಈಗ ಇದ್ದ ದಹನ, ದಫನಭೂಮಿಯಲ್ಲಿ ಮುಂಚಿನ ಊರಿತ್ತಂತೆ. ವಿನಾಶವನ್ನು ಅಡಿಪಾಯ ಮಾಡಿ ಕೊಂಡು ಸೃಷ್ಟಿ ವಿಕಾಸಗೊಂಡಿತು, ರೂಪ ತಾಳಿತು. ಒಂದು ವಿಕಸಿತ ಸೃಷ್ಟಿ ಧೂಳಿ ಧೂಸರಿತವಾಯಿತು. ಮತ್ತೊಂದು ನವ್ಯಸೃಷ್ಟಿ ನಿರ್ಮಾಣವಾಗಿ ವಿಕಸಿತವಾಯಿತು. ಸೃಷ್ಟಿ, ಯಾರದೋ ಅಚಿಂತ್ಯನ ನಿರ್ಮಿತಿ. ಮಾನವನೂ ಯಾವನೋ ಅಗಮ್ಯನ

ಕೂಸು. ವಿನಾಶ-ವಿಕಾಸದ ನಿಯಮ, ಸೃಷ್ಟಿಯಂತೆ ಮಾನವನಿಗೂ ಅನ್ವಯಿಸಿದೆ. ದಾದಾನ ವಿನಾಶದಿಂದ – ಅವನ ಪತನದಿಂದ – ಹೊಸ ಸೃಷ್ಟಿ ಮೂಡಬಹುದೇ? ವಿಕಸಿತವಾಗಬಹುದೇ? ಬಹುಮ-ಗಿಮದಿನ ಶಂಕೆ ಬೇಡ. ಆಗೇ ಆಗುತ್ತದೆ. ಆಗಲೇಬೇಕು. ಅದು ಸೃಷ್ಟಿ-ನಿಯಮ. ಬರೇ ದಾದಾ ಒಬ್ಬನೇ ಏಕೆ? ವಿಶ್ಯಾ, ನೀನು. ಕಾಕಾ, ಸೊನಕ್ಕ ಎಲ್ಲರೂ ಬೀಳಬೇಕು. ನಿಮ್ಮ ಲಯದ ಮಣ್ಣಿನಿಂದ ನವಸೃಷ್ಟಿ ಏಳಬೇಕು —

"ಸುರ್ಯಾ, ನೀ ಬೆಳಗಾಂವಿಗೆ ಹೋಗಿ ಬಾ. ಶಕೂನ್ನ ನೋಡಿ ಬಾ. ನಿನಗ 'ಅಪ್ರೂವ್' ಆಗೂ ಹಾಂಗ ಇದ್ದರ ನನಗ ತಿಳಸು. ಈಗ ಮಾತ್ರ, ನೀ ದಾದಾನ ಜೋಡೀ ಮಾತಾಡಿದ್ದನ್ನ, ಅಂವಾ ನಿನ್ನ ಬೆಳಗಾಂವಿಗೆ ಕರದದ್ದನ್ನ, ತಾಯೀಗೆ, ಕಾಕಾಗ ತಿಳಿಸಬ್ಯಾಡಾ. ಸುರ್ಯಾ, ಹೀಂಗ್ಯಾಕ ಮಾಡಿದೀ ಅಂತ, ನಾಳೆ ಏನರ ಅವರು ಕೇಳಿದರ, ವಿಶ್ಯಾ, ಹಾಂಗ ಮಾಡಲಿಕ್ಕೆ ತಿಳಿಸಿದ್ದಾ ಅಂತ ಹೇಳು. ಉಳದದ್ದು ನನಗ ಹತ್ತಿತು."

ವಿಶ್ವಾಸ ಏನೋ ಠರಾಸಿಗೊಂಡು ನಿಶ್ಚಿತ ಧೋರಣಕ್ಕೆ ಬಂದಂತಾಗಿ ಹೇಳಿದ.

"ವಿಶ್ಯಾ, ನೀ ಭಾಳ ಹೊತ್ತಿನ ತನಕಾ ಸುಮ್ಮs ಕೂತಿ. ಕಣ್ಣ ಮುಚ್ಚಿ ಗಪ್ಪನs ಇದ್ದಿ. ಏನೋ ನಡದ್ವದ. ಏನೋ ಭಯಂಕರ ನಡದ್ವದ. ಬೆಂಕಿ ಕಡೀಲಿಕ್ಕೆ ಹತ್ತೇದ ಅಂತ ಮಾತ್ರ ಅನಿಸಿತು. ವಿಶ್ಯಾ, ನಿನ್ನ ಮೌನದಿಂದ ಭಾಳ ಘಾತ ಆಗತಿರ ತದ. ಹಿಂದಕ ನಾವು, ಕಾಕಾ, ರಾಚಪ್ಪಾ ಪಂಢರಿಗೆ ಹೋದಾಗ, ದಾದಾಂದು, ನಿಂದು ಚಕಮಕಿ ಆಗಿತ್ತು. ಕಿಡಿ ಹಾರಿತ್ತು. ನಾವು ಊರಿಂದ ಬಂದು ಎರಡ ದಿನಾ ಆದರೂ ನೀನು, ಈಗ ಇದ್ದ್ಹೈಲಾ ಹೀಂಗ ಮೌನ ಆಗಿದ್ದಿ. ಕಾಕಾನ ಮುಂದs ನಿನ್ನ ಗೌಪ್ಯ ಸ್ಫೋಟಮಾಡಿದಿ. ನಿನ್ನ ಸ್ವರೂಪ ತಿಳೀತು. ನೀ ಸ್ತಬ್ಧ ಭಸ್ಮಧಾಂಗ ಇರತೀ. ಆದರ ನಿನ್ನ ಹೊಟ್ಟೀಯೊಳಗ, ಕೆಂಡ ನಿಗಿನಿಗಿ ಅಂತಿರತದ. ವಿಶ್ಯಾ, ಕಾಕಾ ಅಂದರ ವಾಡೇದ ಮುಂದಿನ ಹಿಲಾಲಾ. ಉರದರೂ ಬೆಳಕನರs ಕೊಡತದ. ನೀ ಅಂದರ, ನಮ್ಮ ಊರಾಗಿನ ರೇಣುಕಾನ ಗುಡೀ ಮುಂದಿನ ಕಿಚ್ಚಿನ ಕಾವಲಾ. ವಿಶ್ಯಾ, ನೀ ಮಾತಾಡಿಕೋತ ಇದ್ದೀ, ನಕ್ಕೋತ ಇದ್ದೀ ಅಂದರ ನಮಗ ಸಮಾಧಾನ ಇರತದ. ಮೂಕ ಆದಿ, ಮೌನ ಧರಿಸಿದಿ ಅಂದರ, ರಾಚಪ್ಪನ ಮೈಯಾಗ ವೀರಭದ್ರ ಬರಾಗ, ಅಂವಾ ಹ್ಯಾಂಗ ನಿಶ್ಚೇಷ್ಟೆ ಬೀಳತಾನಂತಾರ, ಹಾಂಗ ಅನಸ್ತದ. ನನಗ ಬೆಳಗಾಂವಿಗೆ ಹೋಗಲಿಕ್ಕೆ ಹೇಳಿದ್ರಾಗೂ ಇಂಥಾದೇ ಏನೋ ಡಾವ್ ಅದs. ವಿಶ್ಯಾ, ಖರೇ

ಹೇಳಬೇಕಂದರ ನಿನ್ನ ತ್ರಾಣಾ ನನ್ನಲ್ಲಿಲ್ಲಾ. ಬೆಂಕೀ ತಿಂದು ಧಕ್ಕಿಸಿಗೊಂಬೂ ತಾಕತ್ತಿಲ್ಲಾ. ನಾ ಅಂಜಬುರಕ ಇಲ್ಲಾ. ಹೇಡಿ ಇಲ್ಲಾ. ಆದರ ನಿನ್ಹಾಂಗ 'ಸೀರಿಯಸ್'ನೂ ಇಲ್ಲಾ. ಎಂದೂ ಆಗಲಿಕ್ಕೂ ಇಲ್ಲಾ. ನನಗ ನಿನ್ನೂ ಎಲ್ಲಾ ಗುಣಾನೂ ಬಂದವು. ಆದರ ನಿನ್ನ ಘಡಣ ಬರಲಿಲ್ಲಾ. ದಾದಾಂದೂ ಬರಲಿಲ್ಲಾ. ತಾಯೀದೂ ಬರಲಿಲ್ಲಾ. ಇದೀ ಮನ್ಯಾಗನs ನಾ ಒಂದ ಮಿಕಾ ಬ್ಯಾರೇ ಹೊಂಟೆ.

ದಾದಲ್ಯಾ ಬರದಿದ್ದಾ: ಶಕೂ ಮಸ್ತ-ಹುಡಿಗಿ ಇದ್ದಾಳ. ನೀ ಸೇರ ಆದರ ಅಕೀ ಸವ್ವಾಸೇರು. ಸುರ್ಯಾ ಮಗನs, ಬಿಡಬ್ಯಾಡ ಈ ಬ್ಯಾಟೀ ಅಂತs. ಈ ಬ್ಯಾಟೀ ವಿಚಾರಮಾಡೂ ಪ್ರಸಂಗ ಬಂತು. ಆರ ತಿಂಗಳ ಹಿಂದ ಇನಾ ಕಲೀತಿದ್ದೆ. ಪುಸ್ತಕಾ, ಅಭ್ಯಾಸದ ಸೋಬತೀ ಇತ್ತು. ನವಕರೀ ಸಿಕ್ಕಿದ್ದಿಲ್ಲಂದರ ಹುಡೀಕ್ಕೋತ ವರಾವರಾ ತಿರಗೂ ಧಾವತಿ ಇರತಿತ್ತು. ಈಗ ಅಂಥಾದ್ದೇನೂ ಇಲ್ಲಾ. ಅದು ಇಲ್ಲಂತ ಇನ್ನೊಂದೇನರs ಬೇಕಾಗತದ. ನನಗ, ವಿಶ್ಯಾ, ಮಜಾ-ಚೈನೀ ಧುಮ್-ಧಡಾಕೀ ಹಾರಸೂ ಹುಕೀ ಬಂದದ. ಯಾಕ ಬರಬಾರದು ಹೇಳು? 'ಫಸ್ಟ್ ಕ್ಲಾಸ್' ಬಂದೆ. ನೌಕರೀ ತಾನ ಬಂತು. ರೊಕ್ಕ ಕುಣೀತದ. ಮೈಯಾಗ ಹರೇ ಥಕಥಕಾ ಕುಣಿತದ. ನಿನ್ನ ಹರೇ, ನಿನ್ನ ವಿಚಾರಾ, ನಿನ್ನ ಕುಣತಾ ವಿಶ್ಯಾ ಥೇಟ ಭೈರವನಾಟ್ಯಾ. ನಂದು ರಾಸಲೀಲಾ.

ಲಕಡೀ ಪೂಲ ಮ್ಯಾಲ, ಕಾಲೇಜ ರೋಡಿನ್ಯಾಗ, ಸಂಜೀಮುಂದ, ತಿರುಗಾಡ ಲಿಕ್ಕೆ ಹೊಂಟ 'ಪೇರ್' ನೋಡಿ, ವಿಶ್ಯಾ, ಯಾಕೋ ಗುದಗುಲಿಕಿ ಆಗತದ. ಕೈ ನೋಡಕೋತೀನಿ. ಕುಂಡಲ್ಯಾಗ ಒಬ್ಬ ಅಮಂಗಳ ಮಂಗಳ ಕೂತಿದ್ದಿಲ್ಲಂದರ. ಒಂಟಿ ಹೆರಳಿನ್ಯಾಗ. ಒಂದೇ ಒಂದು ಅರಳಿದ ಹೂ – ಕೂತದೋ ಇಲ್ಲೋ ಅನೂ ಹಾಂಗ ಇಟಗೊಂಡು, ಮಸ್ತ ಪಾಚವಾರೀ ಒಂದ ಕನ್ಯಾ, ನಕ್ಕೋತ, ಕೆಲಕೋತ, ಬಾಜೂದಾಗs, ಕೈಗೆ ಕೈ, ಮೈಗೆ ಮೈ ತರಿಸಿಗೋತ, ನನ್ನ ಜೋಡೀನೂ ನಡದಿರ ತಿತ್ತಲ್ಲಾ ಅಂತs ಹಳಹಳೀ ಆಗತದ. ಮಾಡೂದೇನು? ಬಾಯಿ ಬಿಟ್ಟು – ಅಗದೀ ನಾಚಿಗಿ ಬಿಟ್ಟು, ನಿನ್ನ ಮುಂದ ಹೇಳತೀನಿ. "I am dying for a life long companion-mate." ಕಡದಾಗ ತುರಿಸಿಗೊಂಬೂ ಇಚ್ಛಾ ಇಲ್ಲ ನನಗ. ಪುಣೇದಾಗ, ವರಕ್ಕ ಹೆಣ್ಣಿನ ಕ್ಯೂನs ಹತ್ತೇದ. ಕನ್ಯಾಗೋಳಿಗೆ ಬರಾ ಇಲ್ಲಾ. ಒಂದ ಚಮಕದಾರ ಇಸಮು ಹಿಡಿಯೂದೇನು ಅಸಾಧ್ಯ ಇಲ್ಲಾ. ಆದರ ನನಗ ಬೇಕಾದ್ದು ಸವ್ವಾಸೇರ ಕನ್ಯಾ. ಮಾತಿನ್ಯಾಗ, ಹರಟ್ಯಾಗ, ತಲೀ ಅನ್ನೂ ಚೀಜ

ದಾಗನನಕಿಂತಾ ಹೆಚ್ಚ ಇದ್ದ ಕನ್ಯಾ. ದಾದಲ್ಯಾ ತಿಳಿಸಿದ ಹುಡಿಗಿ ಮಸ್ತ ಇದ್ದರ ಯಾಕ ನೋಡಬಾರದು? ಹೂಂ ಅಂತ ಯಾಕ ಅನಬಾರದು? "I care a straw for Dada" ಅಂಪಗ ಏನs ಆಗಲಿ. ಅಂವಾ 'ಎಕ್ಸ್‌ಪೋಜ್' ಆಗಲಿ ಬಿಡಲಿ. ನಾ ಯಾಕ ಆದರ ದಶಿಂದ ಕಾಳಜೀ ಮಾಡಲೀ? ನಾ ಅಲ್ಲೆ 'ಯಸ್' ಅಂದು ಬಂದರ ಉಳದದ್ದು ನಿನಗ ಹತ್ತ್ಯು. ನೀನೂ ಮೀನಾ-ಮೇಷಾ ನಡೆಸಿದೀ ಅಂದರ, "I shall decide one way or other on my own responsibility." ವಿಶ್ಯಾ, ನನಗ ನಿನಗ ಏನ ಫರಕ ಅದs ಅಂದೀ. ನಾ 'ಫಸ್ಟ್‌ಕ್ಲಾಸ್' ಬರೂತ್ಲೇ 'ಗ್ಯಾರಂಟೀಡ್ ಪೋಸ್ಟ್' ಹ್ಯಾಂಗ ಘಟ್ಟಿ ಇತ್ತು, ಹಾಂಗ ನಿನಗ ವಸೂಂದು ಗ್ಯಾರಂಟೀ ಅದs. ನೀ ಸಿರ್ಧಾಸ್ತ ಇದ್ದೀ. ನಾ ಎಲ್ಲೂ್ಲ್ಯ ಜಮಾಸಿಗೋಳಲಿಲ್ಲಾ. ಆಗ ಕಣ್ಣ ಮುಚ್ಚಿದೆ. ಈಗ ಕಣ್ಣ ಪಿಳಕಸಲ್ದೇ, ಬಿಟ್ಟ ಕಣ್ಣ ಬಿಟಗೊಂಡು ತಿರಗಲಿಕ್ಕೆ ಹತ್ತೀನಿ. ನಾ 'ಸೀರಿಯಸ್' ಇಲ್ಲಂದೆ. ಆದರ, ಈ ಬಾಬತ್ಯಾಗ — "I am particularly serious about this mate business"

ಸುರೇಶ ತನ್ನ ಹೃದಯ ಬರಿದುಮಾಡಿದ. ಯಾವಾಗಲೋ ಖಚಿತ ನಿರ್ಣಯಕ್ಕೆ ಬಂದ ವಿಶ್ವಾಸ —

"ನನ್ನ ಆಶೀರ್ವಾದ ಅದs ಸುರ್ಯಾ ನಿನ್ನ 'ಮೇಟ್ ಬಿಜಿನೆಸ್'ಕ್ಕ. ಶುಭ-ಲಾಭ ಬರಕೋ ಮಗನs ಪಣೇಮ್ಯಾಲ. ಬೆಳಗಾಂವೀ ಪ್ರಣಯ-ಯಾತ್ರಾ 'ಲೀಜರ್ಲೀ' ಮಾಡಬ್ಯಾಡಾ. ನಾಳಿಂದ ನಾಳೇ, ಎಂಟ ದಿನದ ರಜಕ ಅರ್ಜೀ ಒಗೀ. ನಿನಗ ಶಕೂ ಏನ ಹರಕತ್ತ ಇಲ್ಲ ಅನಸೂ ಹಾಂಗ ಇದ್ದರ – ಸವ್ವಾಸೇರ ನಿನ್ನ 'ಸ್ಟ್ಯಾಂಡರ್ಡ'ಕ್ಕ ಬರತಿದ್ದರ, ನನಗ ಫೋನ್ ಮಾಡು. 'ಸುಮೂರ್ತೇ ಸಾವಧಾನ' ಫೋನನ್ಯಾಗಿಂದೇ ಹೇಳತೀನಿ. ನನ್ನ ಸುರ್ಯಾಗ 'ಲೈನ್ ಕ್ಲಿಯರ್'ದ ಹಸರ ನಿಶಾಸೀ. ನಾನs ಮೊದಲ ತೋರಸ್ತೀನಿ."

"ವಿಶ್ಯಾ, ನಿನ್ನ ಆಶೀರ್ವಾದದ್ದು –'ಲೈನ್ ಕ್ಲಿಯರ್'ದ್ದು Repercusions ಏನಾದಾವಂಬೂದರ ಅಖಂಡ ಕಲ್ಪನಾ ಅದ ನನಗ; ಆದರ "I can't help"

"ಸುರ್ಯಾ, ನಡೀ ಮಗನs. ಬಾರಾ ಆತು. ನಿನ್ನ 'ಪೆಟ್' ಹಾಡಾ ಹಾಡಕೋತ ನಡೀ "ನಕೋರೆ ಕೃಷ್ಣಾ ರಂಗ ಫೇಕೂ" ಅಂತs. ನಡ-ರಾತ್ರ್ಯಾಗ ಘನ ರಂಗ ಬರತದ ಈ ಹಾಡಿಗೆ: repercusions ದ ವಿಚಾರ ಮಾಡಲಿಕ್ಕೆ ನಿನ್ನ ವಿಶ್ಯಾಗ

ರಗsಡ ವ್ಯಾಳ್ಯಾ ಶಿಲ್ಲಕ ಅದs. ಅಂವೇನು ನಿನ್ನ ಹಾಂಗs ರಾಧಾನ್ನ ಹುಡಿಕ್ಕೊಳ್ಳ್ಳೀತ ಅಡ್ಡಾಡ್ಯಡಬೇಕಾಗಿಲ್ಲಾ."

"ವಿಶ್ಯಾ ದತ್ತಕ್ಕ ಹೋದರ, ದುಡ್ಡು-ಕನ್ಯಾ ಎರಡೂ ದಕ್ಕತಾವನ್ನೂದು ಮೊದಲs ತಿಳದಿದ್ದರ, ನಾನೂ ಯಾರರ ಒಬ್ಬ ಪಂತಮಾಮಾನ್ನ ಹಿಡೀತಿದ್ದೆ. ನಿಶ್ಚಿಂತೀಯಿಂದ ಇರತಿದ್ದೆ. ಈಗ ಹ್ಯಾಂಗ ಆಗೇದಂದೀ – ಗಂಡಾ-ಹೆಣತೀ ನ್ಯಾಯ ದಾಗ ಕೂಸ ಹಲಾಕ ಆತಂತ ಅಂತಾರಲ್ಲಾ ಹಾಂಗ ಆಗೇದ."

ಸುರೇಶ ತಪ್ಪಿ ಮಾತು ಮಿಂಚಿಸಿದ. ಆ ರೀತಿ ಮಾತು ಮಿಂಚಿಸುವದರಲ್ಲಿ ಅವನಿಗೆ ಅನ್ಯ ಭಾವನೆ ಇರಲಿಲ್ಲ. ಸಹಜವಾಗಿ ಆಡಿದ್ದ. ಆದರೆ ಗಂಡ-ಹೆಂಡತಿಯ ನ್ಯಾಯದಲ್ಲಿ ಕೂಸು ಹಲಾಕಾದ ಮಾತು ವಿಶ್ವಾಸನ ಕರುಳಿಗೆ ನಿಗಿನಿಗಿ ಕಾದ ಸಳಿ ಯಿಂದ ಬರೆ ಎಳೆದಂತಾಯಿತು. ಶ್ಯಾಮರಾಯ-ಸೋನಕ್ಕನ ನ್ಯಾಯದಲ್ಲಿ ಬರೀ ಒಬ್ಬ ಸುರೇಶನಗೇ ಅಲ್ಲ – ಎಲ್ಲರ ಹಲಾಕೂ ನಡೆದಿತ್ತು. ಈ ಪ್ರಚ್ಛನ್ನ ಸತ್ಯವನ್ನು ಕಡೆಗಣಿಸುವದು. ಮರೆಮಾಡುವದು ಶಕ್ಯವಿರಲಿಲ್ಲ.

ವಿಶ್ವಾಸನಿಗೆ ಪಂತಮಾಮಾ-ಬಸೂಮಾಮಿ ದತ್ತಕ ತಂದೆ-ತಾಯಿ ಇದ್ದರು. ಅವರ ಅಪಾರ ಆಸ್ತಿಗೆ ವಿಶ್ವಾಸ ಏಕಮೇವ ಉಪಭೋಗ ಅಧಿಕಾರಿಯಾಗಿದ್ದ. ಅವನಿಗೆ ವಸೂನ ಸಹವಾಸದ ಸಖ್ಯವಿತ್ತು. ಅವಳು ತನ್ನವಳಾಗುವ ಖಾತ್ರೀ ಇತ್ತು. ಅವನು ಅಷ್ಟರ ಮಟ್ಟಿಗೆ ನಿಶ್ಚಿಂತನಾಗಿದ್ದ. ಗಂಡ-ಹೆಂಡಿರ ನ್ಯಾಯವನ್ನು ಕಡೆಗಣಿಸಿದ್ದರೆ ಹಲಾಕಾಗುವ ಸಂಭವ, ಶಕ್ಯತೆ ಇರಲಿಲ್ಲ.

ವಿಶ್ವಾಸನ ಸುಖ-ಸೌಕರ್ಯದ ಮಾನದಿಂದ ಸುರೇಶನಿಗೆ ಏನಿತ್ತು? ಕಾಕಾ ಗಳಿಸಿದ ಆಸ್ತಿಗೆ ಮೂವರು ಪಾಲುಗಾರರಿದ್ದರು. ಕಾಕಾ-ಸೋನಕ್ಕನ ಆಜೀವ ರಕ್ಷಣೆಯ ಭಾರವಿತ್ತು. ಶ್ಯಾಮರಾಯ ಇದ್ದೂ ಇಲ್ಲದಂತಿದ್ದ ತಂದೆಯಾಗಿದ್ದ. ಸೋನಕ್ಕ ಕ್ಷಮಿಸುತ್ತಿದ್ದರು. ಅವರು ದುಃಖಭಾರದಿಂದ ಬಾಗಿದ್ದರು. ಸುರೇಶನಿಗೆ ಅವರೆದುರು ಎದೆಯನ್ನು ಬರಿದುಮಾಡಿ, ಅವರ ಸಂಕಟವನ್ನು ಕೆದಕುವದು ಬೇಡವಾಗಿತ್ತು. ಸುರೇಶ ಯಾರನ್ನು ತನ್ನವರೆಂದು, ಆತ್ಮೀಯರೆಂದು ಅವಲಂಬಿಸ ಬೇಕು? ಅವರಲ್ಲಿ ತನ್ನ ಸುಖ-ದುಃಖ ತೋಡಿಕೊಳ್ಳಬೇಕು? ಅವನಿಗೆ ವಸೂನಂಥ ಒಬ್ಬ ಜೀವಸಖಿಯ ಸಹವಾಸವೂ ಇರಲಿಲ್ಲ. ಅವನು ಹಲಾಕಾಗುತ್ತಿದ್ದ ಮಾತಿನಲ್ಲಿ ತಥ್ಯವಿತ್ತು; ಸತ್ಯವಿತ್ತು.

ಈ ಹಲಾಕು ನೀಗಲಿ: ಎದೆಯನ್ನು ಬರಿದುಮಾಡುವಾಗ ಅವನ್ನು ಬೊಗಸೆ

ಯಲ್ಲಿ – ಹೃದಯದಲ್ಲಿ ಧರಿಸಬಲ್ಲ 'ಕಂಪ್ಯಾನಿಯನ್-ಮೇಟ್' ತನಗೆ ಸಿಗಲಿ ಎಂದು ಸುರೇಶ ಅಪೇಕ್ಷಿಸಿದ್ದರಲ್ಲಿ ಯಾವ ಅನ್ಯಾಯವೂ ಇರಲಿಲ್ಲ; ಯಾವ ಅಸಮಂಜಸತೆಯೂ ಇರಲಿಲ್ಲ. ಸುರೇಶ ನಿರ್ಭಿಡೆಯಿಂದ ತನ್ನ ಮನೋಗತವನ್ನು ತಿಳಿಸಿದ್ದಕ್ಕಾಗಿ, ತನ್ನ ನೆರವು ಕೋರಿದ್ದಕ್ಕಾಗಿ ವಿಶ್ವಾಸನಿಗೆ ಸಮಾಧಾನವಾಯಿತು. ತಾನೂ ನಿಶ್ಚಿತವೆಂದು ದೃಢೀಕರಿಸಿಕೊಂಡ ಗುರಿಯ ಕಡೆಗೆ ಝಪಝಪ ಕಾಲುಹಾಕಲು ಅಡ್ಡಿ ಇಲ್ಲವೆಂದಾಯಿತು.

"ಸುರ್ಯಾ. ವಿಶ್ಯಾ ಜೀವಂತ ಇರೂತನಕಾ ಅವನ ತಮ್ಮಂದಿರು ಪಲಾಕ ಆಗೂದಿಲ್ಲಾ. ವಿಶ್ಯಾ ಅವರನ್ನ ಪಲಾಕಮಾಡಿಗೊಡೂದಿಲ್ಲಾ. ಕಾಕಾನ ಸಾಕ್ಷೀ ಆಗಿ. ತಾಯೀಸಾಕ್ಷೀ ಆಗಿ, ಕಾಕೂನ ಸ್ಮರಣಾ ಮಾಡಿ. ಹಿಂದಕs ಹೇಳ್ಯಾನ ಅಂವಾ. ತನ್ನ ತಮ್ಮಂದಿರ ಭಾರಾ ಹೊತ್ತೇ ಅಂತs. ಆ ಮಾತು, ಆ ವಚನಾ ತ್ರಿಕಾಲ ಸತ್ಯ ಅದs. ಅದರ ಅನುಭವ ನಿನಗ ಲಗೂನ ಬರತದ. ವಿಶ್ಯಾ ಏಕವಚನೀ ಅನ್ನೂದರ ಪ್ರತ್ಯಯ ನಿನಗ ಲಗೂನ ಬರತದ."

"ವಿಶ್ಯಾ, ಒಂದ ಹೊಡೀಲಿಕ್ಕೆ ಬಂತಲ್ಲಾ; ಎಲ್ಲೆ ಹೋಗಿದ್ರಿ ತಿರಿಕ್ಕೋತ? ಶೋಕ್ಕ ಏನರs ಹೋಗಿದ್ದ್ರೇನು?"
ಇವರು ಬರುವ ಸುಳಿಯನ್ನು ದನಿಯ ಮೇಲಿಂದ ಗುರುತಿಸಿ, ದಾರಿ ಕಾಯುತ್ತ ಕುಳಿತ ಸೋನಕ್ಕ. ಬಾಗಿಲು ತೆರೆಯುತ್ತ ಕೇಳಿದರು.

"ತಾಯೀ, ನಿನ್ನ ವಿಶ್ಯಾ, ಇಂದ ಬಿನ್-ತಿಕೇಟಿಲೇ, ಒಂದ ಸಿನೇಮಾ ತೋರಿಸಿದಾ. ಇಡೀ ಸಿನೇಮಾದಾಗ ಒಂದೇ ಒಂದ ಹಾಡಾ...ಕಾಕಾ ಮಲಗ್ಯಾರಿಲ್ಲ ಮತ್ತs ...?

"ಮಧ್ಯರಾತ್ರಿ ಜಾಂದಣ್ಯಾತ ಥಂಡಿ ವಾಜತೇ"...

ಅಸೂದು. ವಿಶ್ಯಾ, ಹೊರಗ ಒಂದಿಷ್ಟೂ ಥಂಡಿ ಹತ್ತಲಿಲ್ಲಾ. ಒಳಗ ಬರೂತ್ಲೇ ಕಟಕಟ ನಡಗs ಹತ್ತಲಿಕ್ಕೆ ಸುರೂ ಆತು. ಅಡಿಗೀ ಮನೀಗೇ ನಡೀ. ಮಸ್ತ ಮೂರ ಕಪ್ಪ ಕಾಫೀ ಇಳಸೂಣು. 'ಹೀಟರ್' ಅದs. ಐದ ಮಿನಿಟಿನ್ಯಾಗ ಆಗತದ. ಅಲ್ಲಿಂದ ಮತ್ತ ಕೂಡೂಣಂತ ಹರಟಿಗೆ – ಅವ್ವಾ. ಇಬ್ಬರು ಸುಪುತ್ರರು."

"ನಾ ಒಲ್ಲೆ ಮಾರಾಯಾ ನಿನ್ನ ಕಾಫೀ, ನಾ ಎಲ್ಲೆ ನಿದ್ದಗೆಡಲಿ? ಬೇಕಾರ ನೀವs ಮಾಡಿಕೊಂಡು ಕುಡೀರಿ. ಅಪರಾತ್ರ್ಯಾಗ ಎಬ್ಬಿಸಿ, ಒಂದ ಕಪ್ಪ ಬಾಯಿಗ ಹಿಡದರ, ಕುಡದು ಮತ್ತ ಮಲಗಿಕೋತೀ ನೀ ಸುರ್ಯಾ. ಎಲ್ಲಾರೂ ನಿನ್ಹಾಂಗ

ಇರತಾರೇನು? ಇನಾ ಕೂಡೂ 'ಪ್ರೋಗ್ರ್ಯಾಮ್' ಏನ ಇಟ್ಟೀ."

"ತಾಯೀ ನಿದ್ದಿಗೆಡೂದಿಲ್ಲಾ ಅಂತಾಳಲಾ ವಿಶ್ಯಾ. ನಮ್ಮನ್ನ ಮಲಗಿ ಗೊಟ್ಟರ ಕೇಳು. ಈಗಂತೂ ನೀ ಅಚ್ಚಾದ ಕೂಸ ಬ್ಯಾರೇ ಬಂದೀ. ಏನೇನಾತು ಅಣ್ಣ-ತಮ್ಮರ ಏಕಾಂತಾ ಅಂತs ನಿನ್ನ ರಂಬಸ್ತಾಳಿಲ್ಲೋ ನೋಡು. ಬಾಗಲಾ ಇಷ್ಟು ಮುಂದಕ ಮಾಡ ಮಾರಾಯಾ. ಈಗ ಆ ಗಿರಿಜಾ ಎದ್ದಿತಂದರ ಫೋಟಾ ಳೀನs ಮಾಡತದ. ನೀ ಇಡೀ ದಿನಾ ಸಿಕ್ಕಿಲ್ಲಾ ಅದರ ಕೈಯಾಗ. ಅಕಾ ವಿಶ್ಯಾ, ಎದ್ದ ಬಂತ ನೋಡಪಾ, ಏಳ ಮಕ್ಕಳ ತಾಯೀ ಹಾಂಗs. ಶ್ರೀಹರೀ, ಶ್ರೀಹರೀ, ನೀನೇನಪಾ ಇನ್ನs!

## ಒಂಬತ್ತು

ನಮಗೆ ನಿಮಗೆ ಎಪ್ರಿಲ್ ಮೂರನೇ ತಾರೀಖು ಎಂದರೆ ಎಪ್ರಿಲ್ ಮೂರನೇ ತಾರೀಖೇ! ಆದರೆ ಒಂದು ಅಜಬ ಸರಕಾರೀ ಖಾತೆ ಇದೆ. ಅದಕ್ಕೆ ಎಪ್ರಿಲ್ ಒಂದು, ಎರಡು, ಮೂರು ದಿನಗಳು ದಾಟಿದ ದಾದೂ ಇರುವದಿಲ್ಲ. ಇನ್ನೂ ಅದು ಮಾರ್ಚ್ ತಿಂಗಳ ೩೦-೩೧ರ ನಡುವೇ ನೇತಾಡುತ್ತಿರುತ್ತದೆ. ಅದೆಂದರೆ ಪಿ.ಡಬ್ಲ್ಯು.ಡಿ. ಖಾತೇ. ಆ ಖಾತೆಯ 'ಕ್ಯಾಶ್-ಬುಕ್' 'ಚೆಕ್-ಬುಕ್ಕ'ಗೆ ಇನ್ನೂ ಮೂವತ್ತೊಂದನೇ ಮಾರ್ಚದ ಸಂಜೆ ಕೂಡ ಸಮೀಪವರ್ತಿಯಾಗಿರುವ ದಿಲ್ಲ. ಎಪ್ರಿಲ್ ಬಂದು ಮೂರು ದಿನ ಉರುಳಿದ್ದರೂ, ಇನ್ನೂ ಮಾರ್ಚ ತಿಂಗಳಿನ ಕ್ಯಾಲೆಂಡರ ಪಾನು ಹರಿಯದೆ ಮಜಬೂತ ಆಗಿರುತ್ತದೆ.

ಕೆಲವು ಕಾರಕೂನ, ಓವ್ಹರಸೀಯರ ಮಹೋದಯರಂತೂ ಎಂಟು ದಿನ ವಾಗಿತ್ತು, ಮನೆಯ ಮಡದಿ-ಮಕ್ಕಳ ಮುಖವನ್ನೂ ಕೂಡ ನೋಡಿರಲಿಲ್ಲ. ಇವರು ಮುಖ ತೋರಿಸುವ ಸಾಹಸ ಮಾಡಿದ್ದೇ ಆಗಿದ್ದರೆ, ಟೊಮ್ಯಾಟೋದಂತೆ,

ಕೆಂಪಾಗಿ ರಾವು ಹೊಡೆಯುವ ಕಣ್ಣು, ಒಂದು-ಒಂದೂವರೆ ಇಂಚು ಬೆಳೆದ ದಾಡೀ ನೋಡಿ, ಇವರ ಸಂತಾನಶ್ರೀಯೇ, ತಮ್ಮ ಅಪ್ಪಂದಿರ ಅವತಾರಕ್ಕೆ ಅಂಜಿ ಚಿಟ ಚಿಟನೆ ಚೀರಬಹುದಾಗಿತ್ತು. ಮನೆಯ ಮಂಡಳಿ, ತೆರೆದ ಬಾಗಿಲು ಮುಚ್ಚಿ. ಡಬ್ಬಿ ಬದಲಾಗಿದೆ ಎಂದು ಹೇಳಿ. ಖಾಸ್ ಮನೆಯ ಯಜಮಾನರನ್ನೇ ಮುಂದಿನ ಡಬ್ಬಿಗೆ ದಬ್ಬಬಹುದಾಗಿತ್ತು. ಮಂಜೂರಾದ ಹಣ, ಖರ್ಚಾಗದೆ ಶಿಲ್ಲಕ ಉಳಿಯ ಬಾರದೆಂದು, ಸರಕಾರದ ಒಂದು ಪೈ-ಪಾವು ಆಣೆ ಬಚಾವಾಗಬಾರದೆಂದು, ದಕ್ಷತೆ ವಹಿಸಿ. ಈ ಹೋತಾರ-ಋತ್ವಿಜರು, ನೆತ್ತರನ್ನು ನೀರು ಮಾಡಿ, ಕಾಯ-ಕಷ್ಟವನ್ನು ಅನುಭವಿಸುವದನ್ನು ನಾವು ಲಘುವಾಗಿ ಭಾವಿಸಬಾರದು!

ಡಿವ್ಹಿಜನ್ ಆಫೀಸಿನ ಈ 'ಪಾಗಾ' ದೇಖರಖಿಗೆ, ಪೈ-ಪಾವು ಆಣೆ ಬಚಾ ವಾಗದೆ, ಖರ್ಚೇಬಿದ್ದು ಏನೂ ಪೋಲಾಗದಂತೆ, ಮೈಯನ್ನು ಕಣ್ಣು ಮಾಡಿ, ನಿಲಿಂಪರಂತೆ ಬಿಟ್ಟ ಕಣ್ಣು ಬಿಟ್ಟು, ಅಖಂಡ ಜಾಗರದ ಜಾಗೀರೀ ಸನದನ್ನು ಪಡೆ ದವರಂತೆ, ಏ.ಜಿ.ಯ ಅಧಿಕೃತ ಪ್ರತಿನಿಧಿಯಾಗಿ, ನಿಯಮಿತರಾದ ಅಕೌಂಟಂಟ್ ಸಾಬರು, 'ಸಯ್ಯಾಜಿರಾವ್' ಸದರಿನಲ್ಲಿ ನಿಂತು, ಈ ಕಾರಕೂನ, ಓವ್ಹರಸೀಯರರ ವೃಂದಕ್ಕೆ ನಿರ್ದೇಶಕರಾಗಿದ್ದರು. ಅಕೌಂಟಂಟ್-ಜನರಲ್ಲರ ಅಧಿಕೃತ ಪ್ರತಿನಿಧಿಯಾದ ಬಾಬತ್ತು, ಅವರಿಗೆ ಬರಬೇಕಾದ ಸಂಬಳ ಒಂದನೇ ತಾರೀಖಿನ ಸಂಜೆಗೇ ಚುಕ್ತಾ ಆಗಿತ್ತು. ಅದು ಮಹತ್ವದ್ದಲ್ಲ. ಶ್ರೀಕೃಷ್ಣಭಗವಾನರು. ಜಯದ್ರಥ-ಹತ್ಯಾ-ಕಾಂಡ ಸಮಯದಲ್ಲಿ ಚಂಡ-ಪ್ರಚಂಡ ಸಪ್ತಾಶ್ವ-ರಥಿಕನಿಗೆ, ತಮ್ಮ ಜಾದೂ-ಚಕ್ರವನ್ನು, ಅವನ ಉಗ್ರ ಮುಖಕ್ಕೆ ಹಾಳತಾಗಿ ಆನಿಸಿ, ಅಕಾಲದಲ್ಲಿಯೇ ಕುರುಕ್ಷೇತ್ರವನ್ನು ಅಂಧಃತಮಸ್ಸಿನಲ್ಲಿ ದೂಡಿದಂತೆ. ಮೂರನೇ ಎಪ್ರಿಲ್ ಮುಖಕ್ಕೆ. ಮೂವ ತ್ತೊಂದನೇ ಮಾರ್ಚಿನ ಖಬಣಂಚು ಹಿಡಿದ ದಿವ್ಯ ಪ್ರಯುಕ್ತವಾಗಿ, ಅವರಿಗೆ ಸುವರ್ಣಪುಷ್ಪ-ದಕ್ಷಿಣೆಯ ಪರದಾನವಾಗಬೇಕಾಗಿತ್ತು. ಅದು ಇನ್ನೂ ಶಿಲ್ಲಕ ಇತ್ತು. ಚೆಕ್ಕು ಹರಿಹರಿದಂತೆ ಚುಕ್ತಾ ಆಗುತ್ತ ನಡೆದಿತ್ತು. ಈ ಚುಕ್ತಾ ವ್ಯವಹಾರ ನಡೆದಾಗ ಅವರು ಆರಿವೆ-ಡ್ರೆಸ್ಸು ಬದಲಿಸಲು ಎರಡು-ಮೂರು ಸಲ ಮನೆಗೆ ಹರಕಿ ಹಾಕಿ ಬಂದಿದ್ದರು. ಅಷ್ಟೇ! ಬಹುತೇಕ ಅವರ ಕ್ಯಾಂಪೂ ಆಫೀಸಿನಲ್ಲೇ ಬಿಡಾರ ಬಿಟ್ಟಿತ್ತು.

ಅಖಂಡ ಹದಿನೈದು-ಹದಿನಾರು ದಿನ ಶರಪಂಜರದಲ್ಲಿ ಕೂಳು-ನೀರಿಲ್ಲದೆ. ಕೇವಲ ಪೊಮ್ಮಗನ ಶರಾಘಾತದಿಂದಲೇ ನೆಲಗಂಗೆ ಚಿಮ್ಮಿ ತಮ್ಮ ತೃಷೆ ಹಿಂಗ

ಲೆಂದು ಹಟ ಹಿಡಿದು ಮಲಗಿದ ವೃದ್ಧ ಪಿತಾಮಹ ಭೀಷ್ಮರಂತೆ. ಮೃತ್ಯು ಸಮನಿಸಿದರೆ, ಆಫೀಸಿನ ಟೇಬಲ್ಲ ಮೇಲೇ ಕಾಯ ಒರಗಲಿ ಎಂಬ ನಿರ್ಧಾರದಿಂದ ಕುರ್ಚಿಗಂಟಿ ಕುಳಿತು ಕಚೇರೀ ಕೆಲಸದಲ್ಲಿ ನಿಮಗ್ನರಾಗುತ್ತಿದ್ದ (ಕೇವಲ ಮಾರ್ಚ ತಿಂಗಳಲ್ಲಿ ಮಾತ್ರ) ತಮ್ಮ ಪೂರ್ವಜರ ಅಖಂಡ ನಾಮಸಂಕೀರ್ತನೆಯನ್ನು. ನಮ್ಮ ಅಕೌಂಟಂಟ್-ಸಾಹೇಬರು. ತಮ್ಮ ಘನ ಕಂತ್ರಾಟದಾರ-ಗಿರಾಕಿ ಶ್ಯಾಮರಾಯನನ್ನು ಮುಂದೆ ಕೂಡಿಸಿಕೊಂಡು, ಅವನೇ ತರಿಸಿಕೊಟ್ಟ 'ಪಾಸಿಂಗ್‌ಶೋ' ಇಲ್ಲ, 'ನೇವೀಕಟ್ ಛಾಪ' ಸಿಗರೇಟು ಸೇದುತ್ತ. ಏಪ್ರಿಲ್ ಒಂದನೇ, ಎರಡನೇ, ಮೂರನೇ ತಾರೀಖಿನ ದಿನ ನಡೆಸುತ್ತಿದ್ದರು.

"ನಿಮಗ ತಾಂಪಿಕಿರಬೇಕು ಶ್ಯಾಮರಾವ್? ನಮ್ಮ 'ಬಿ. ಆ್ಯಂಡ್ ಆರ್. ಸಬ್‌ಡಿವ್ಹಿಜನ್'ದಾಗ ಇದ್ದರಲಾ ಆ ನಮ್ಮ ಬಸವಣ್ಣೆಪ್ಪಾ, ಖುದಾಭಕ್ಷ; ಮತ್ತs ಇದs ಡಿವ್ಹಿಜನ್ ಆಫೀಸಿನ್ಯಾಗಿನ ಡಂಬಳ ಆಚಾರೂ. ಆಗ ಎಸ್.ಏಸೀ. ಏನರೀ ಅವರು. ಏನ ಮೂರೂ ಮಂದೀದು ಸಂಚ ಕೂಡಿತ್ತಂದಿರಿ? ಮಾರ್ಚ ಪೈಲಾಕ ಮುಸೀ ಸಿರೋಪ ತಗೊಂಡರಂದರ ಆತು. ಹಿಂದಕ ನಮ್ಮ ಹಿರ್‍ಯಾರು ಕಾಶೀ-ರಾಮೇಶ್ವರದ ಯಾತ್ರಾ ಸಿರೋಪ ತಗೊಂಡ ಹಾಂಗ. ಬದಿಕಿ ತಿರಗಿ ಬಂದರ ಭಂಗಾರ ಆಗತಿತ್ತು. ಇವರದೂ ಹಾಂಗೇ ಏನರಿ? ದಿನಾ ನಾಕ ಚೆರಿಗಿ ಹಾಲಾ. ಎರಡ ಮೂರ ಪರ್ಝುನ್ ಬಾಳೀಹಣ್ಣಾ. ಅಷ್ಟ ತಿಂದು ಕೂತಬಿಡಾವ್ರು. ಮಾರ್ಚ ಪೈಲಾಕ ಆದ ಸೂರ್ಯೋದಯಾ. ಏಪ್ರಿಲ್ ತೀನ, ಚಾರಕ ಏನರs ಅಸ್ತ ಆಗಬೇಕು! ಅಂಥಾ ರಾಕ್ಷಸ ದುಡತಾ. ಏ.ಈ., ಎಸ್.ಡಿ.ಓ.ಗೋಳೂ ಹಾಂಗs. ಮಾರ್ಚ ಭಾನಗಡೀ ಬಗೀಹರಿತಂದರ. ಎಸ್.ಡಿ.ಸಿ.ಗೆ ಕಮೀತಕಮೀ ಹತ್ತ ತೊಲಿ ಭಂಗಾರಾ. ಸಿಪಾಯಿಗೆ ಸುದ್ದೇ ಎರಡ ಅಡೀಚ ತೊಲಿ ಇಲ್ಲದೆ ಇರತಿದ್ದಿಲ್ಲಾ. ಪಗಾರದಿಂದ ಏನ ಆಗತಿತ್ತು? ಬಸವಣ್ಣೆಪ್ಪಗ ಪೆನಶನ್ ಆದಾಗ. ಶಂಭರ ದೀಡಸೇ ತೊಲಿ ಭಂಗಾರ ಜಮಾಸಿತ್ತು ಅವರ ಕಡೇ. ಅವರs ಭೆಟ್ಟಿ ಆದರ ಕೇಳರಿ. ಹ್ಯಾಂಗ ಕಥೀ ಮಾಡಿ ಹೇಳತಾರ. ತಮ್ಮ ಮಾರ್ಚೀ ಭಾನಗಡೀದು.

ಈಗೆಲ್ಲಾ ಹೊಸಾ ಜಮಾನಾ. ತಲೀ ಮ್ಯಾಲಿನ ಮಾಸ ಹಾರದ ಹುಡುಗೂರದು ಭರತೀ ನಡದದ. ಚೊಣ್ಣದ ಕಿಶೇದಾಗ ಕೈಹಾಕೊಂಡು. ಸಿಳ್ಳ ಹೊಡಕೋತ, ಕೀಲೀಕೈ ಚೇನ್ ತಿರಗಿಸಿಗೋತ. ಸಾಡೇ ಅಕರಾಕ ಆಫೀಸಿಗೆ ಬರತಾರ. ಮಸ್ಟರ ರೋಲು. ಇವರ ಟೇಬಲ್ಲಿಗೇ ಹೋಗಬೇಕು ಸೈಗೆ. ಬಾರಾ ಒಂದಕ್ಕ ಹಿಂಗ ಪ್ಯಾಡ್

ಬಿಚ್ಚಿ. ಕಾಗದ ಕರೀ ಅದsನೋ ಬಳೀ ಅದsನೋ ನೋಡೂದರಾಗ ಹೊತ್ತ ಹೊಡಮಳ್ಳತದ. ಏನು ನಿಮಗ ಧಾಂವಿಕಿಲ್ಲ ಅನೂದದನs? ಖಾತೇ ಕಚರಾ ಆದದ್ದು ನೀವೂ ನೋಡೀರಿ. ಇದರ ಪರ್ಲ ಹರಕೊಂಡರಿ ಲಗೂನ. ಠೀಕ ಮಾಡಿದ್ರ್ಯಾಪಾ. ನಿಮ್ಮ ಬಿಲ್ಲು ಇಷ್ಟು ಇಂದs ಮುಗೀತಂದರ ಮುಗೀತ್ರ್ಯಾಪಾ; ಮಾರ್ಚ ಪಾರ ಖೆಡವಿತು. ಜೆಳಗ ಹರಿಯೂದರಾಗ ಮತ್ತ ಅಕೌಂಟದ ಗಡಿಬಿಡಿ ಸುರೂನs. ಈ ಸಾರೇ ಮೂರರs ಸಪ್ಲಿಮೆಂಟ ಹೋಗತಾವ. ನೋಡ್ರೀ. 'ಮೇಜರ್-ಮೈನರ್-ವರ್ಕ್ಸ' ಕೂಡಿ ದೋನ ಅಡೀಚಸೇದ ಸನೇಕ ಬಂದಾವ್ರಿ. ಈ ಸಾರೇ 'ಶೆಡ್ಯೂಲ್' ಮಾಡೂದ್ರ್ಯಾಗ ಬಾಯಿಗೆ ಬುರಗs ಬರತದ. ಶ್ಯಾಮ ರಾವ್. ನಿಮ್ಮ ಬಿಲ್ಲಾ, ಚೆಕ್ಕಾ ಕೂಡೇ ಕಳಸೂಣು ಬಂಗ್ಲೇಕ. ಸಾಹೇಬರಿಗೆ ಅಷ್ಟ ಸೂಚನಾ ಕೊಟ್ಟ ಇಟ್ಟಿರ್ರಿ. ರಾತ್ರೀ, ಹತ್ತ-ಹತ್ತೂವರೀ ಒಳಗ ಕಳಸ್ತೀನ್ಯಂತ ತಿಳಸರಿ. ಅಪರಾತ್ರ್ಯಾಗ ಅವರಿಗೆ ಇಲ್ಲದ ಧಾವತೀ. ಉಪಾಯನs ಇಲ್ಲಾ. ಮಾಡೂದೇನು?"

ಅಕೌಂಟಂಟರ ತೋಬರಿಯನ್ನು ಶ್ಯಾಮರಾಯ ಈಗಾಗಲೇ ತುಂಬಿದ್ದ. ಈ ನೀಲಾಷ್ಟಕ್ಕೆ ಚಾಂದೀ-ಖುರಾಕಿನ ಘರ್ಜರೀ ಮೇಜವಾನೀ ಹೊಡೆಸಿದ್ದ.

ಶ್ಯಾಮರಾಯನ ಹೆಸರಿನಲ್ಲಿ ಮಂಜೂರಾದ ಹತ್ತೆಂಟು ಕೆಲಸಗಳ ಒಟ್ಟು ಬಿಲ್ಲಿನ ಮೊತ್ತ ಎರಡು-ಎರಡೂವರೆ ಲಕ್ಷದ ಮನೆಯಲ್ಲಿತ್ತು. ಎಲ್ಲಾ ಕೆಲಸಗಳು ತನ್ನ ಹೆಸರಿನಲ್ಲಿದ್ದರೆ, 'ಇನ್‌ಕಮ್‌ಟ್ಯಾಕ್ಸ' ಖಾತೆಯ ಕಣ್ಣಲ್ಲಿ ಧೂಳೆರಚಲು ಬರುವದಿಲ್ಲವೆಂದು, ಅದರಲ್ಲಿ ಕೆಲವನ್ನು ತ್ಯಾಪೀ ಬಸಗೋಂಡ, ನಬೀಸಾಬ ಬಾಗವಾನನ ಹೆಸರಿನಲ್ಲಿ ಮಾಡಿಸಿದ್ದ. ಅವರು ನಾಮಕೇವಾಸ್ತೇ ಕಂತ್ರಾಟದಾರರು. 'ಮೆಜರ್‌ಮೆಂಟ್ ಬುಕ್'ನಲ್ಲಿ, ಬಿಲ್ಲಿನಲ್ಲಿ, ಚೆಕ್ಕಿನ ಮೇಲೆ ಸಹಿಯ ಮಟ್ಟಿಗೆ ಅವರು ಅಧಿಕೃತ ಕಂತ್ರಾಟದಾರರು. ಬಂದ ರೊಖ ಹಣ ಶ್ಯಾಮರಾಯನ ಖಾತೆಗೆ ಭರತೀ ಘಾಳುತ್ತಿತ್ತು. "ಏನು ಗರೀಬ ಮಂದಿ. ಅಷ್ಟ ನೋಡಿ ಬಗೀಹರಸರಿ" ಎಂದು ಖುರಾಕು ಸ್ವೀಕಾರದ ಬಗ್ಗೆ ಶ್ಯಾಮರಾಯ ಅಕೌಂಟಂಟರಿಗೆ ವಿನವಿಸುತ್ತಿದ್ದ. ಬಿಲ್ಲು ಪಾಸಾಗಿ, ಚಕ್ಕು ಕೈಗೆ ಬರಲು ಅಷ್ಟು ಕಸಿವಿಸಿಯಾಗುತ್ತಿರಲಿಲ್ಲ. ಪಹಾಟನು ಗಟ್ಟಲೇ, ಅಕೌಂಟಂಟರ ಮನೆಗೆ, ನಬೀಸಾಬ, ಬಾಗವಾನನಾದ ಪ್ರಯುಕ್ತ "ಕಾಂದಾ, ಬಟಾಟಾ, ಭಾಜೀಪಾಲಾ" ಪೂರೈಸುತ್ತಿದ್ದ. ಬಸಗೋಂಡ, ಅವರ ಸ್ವಜಾತಿ-ಬಾಂಧವ ಬಣಜಿಗನಾದ್ದರಿಂದ, ಶಾಂವಿಗೆ-ಫೇಣೀ, ಲಸೂಣ-ಖಾರ

ಮನೆಯಲ್ಲಿ ಹೈನವಿದ್ದ ಕಾರಣ. ವಾರಕ್ಕೊಮ್ಮೆ ಖಮಂಗ ಪಂಥೇರು ಬೆಣ್ಣೆ ಮುಟ್ಟಿಸುವ ಮಕ್ತೇದಾರೀ ಹೊತ್ತಿದ್ದ. ಹೀಗಾಗಿ, ಇವರ ಹೆಸರಿನಲ್ಲಿದ್ದ ಬಿಲ್ಲು ಗಳು ಪಾಸಾಗುವಾಗ, ಕಾಲು, ತಲೆ ಕಡಿದು ಚಾಂದೀ-ಖುರಾಕಿನಲ್ಲಿ ಬಚಾವು ಮಾಡಿ ಕೊಳ್ಳಲು ಬರುತ್ತಿತ್ತು. ಆ ಬಚಾವು ಇವರ ಪಾಲಿಗಲ್ಲ; ಶ್ಯಾಮರಾಯನಿಗೆ. ಅದರ ಗಮ್ಯ ಸರ್ವರಿಗೂ ಅವಿದಿತವಾಗಿತ್ತು. ಶ್ಯಾಮರಾಯ ಸಾಹೇಬರನ್ನೇ ಬಗಲಬಚ್ಚಾ ಮಾಡಿಕೊಂಡದ್ದರಿಂದ, ಅನ್ಯ ಉಪದೇವತೆಗಳನ್ನು ಅಷ್ಟು ದಾದು ಮಾಡುತ್ತಿದ್ದಿಲ್ಲ. ಇರಲಿ, ನಾಳೆ ಸಾಹೇಬರು ಒಮ್ಮೆಲೆ ಬದಲಿಯಾಗಿ ಹೋದರೂ, ಅಕೌಂಟಂಟರ ಮರ್ಜೀ ಮಜಬೂತಾಗಿ ಇರುವದು ಕ್ಷೇಮವೆಂದು ಆ ಗಿರಾಕಿ ಯನ್ನು ಅಷ್ಟು ಸಂಬಾಳಿಸುತ್ತಿದ್ದ. ಶ್ಯಾಮರಾಯ ಸಾಹೇಬರ ಸಂಬಂಧ ಘನ ವಶೀಲಿಯ ಪರಿಚಯವಿದ್ದ ಅಕೌಂಟಂಟರೂ, ಶ್ಯಾಮರಾಯನನ್ನು, ಖುರಾಕಿ ಗಾಗಿ ಅಷ್ಟು ಹಿಂಡುತ್ತಿದ್ದಿಲ್ಲ. ಅವರು ಉದಾರರಾಗಿ ಬಿಟ್ಟ ಖುರಾಕಿನ ಪ್ರತಿಫಲ ವನ್ನು ಅನ್ಯ ರೀತಿಯಲ್ಲಿ ಉಗಾಸಿಕೊಳ್ಳುತ್ತಿದ್ದರು.

ಶ್ಯಾಮರಾಯನ ಮಧ್ಯಸ್ಥಿಕೆಯಿಂದ ತಮ್ಮ ವಾರ್ಷಿಕ 'ಕಾನ್‌ಫಿಡೆನ್ಸಿಯಲ್ ರಿಪೋರ್ಟ್' ಸಾಹೇಬರ ಮಸಿಯ ಕಲೆಯ ಡಾಗು ಇಲ್ಲದೆ ಮೇಲೆ ಹೋಗುವಂತೆ ದಕ್ಷತೆ ವಹಿಸುತ್ತಿದ್ದರು. ಅದಕ್ಕಾಗಿ ಶ್ಯಾಮರಾಯನ ಮರ್ಜೀ ಸಂಪಾದಿಸುತ್ತಿದ್ದರು.

ಸಾಹೇಬರು ತಮ್ಮ ಪಿ.ಡಬ್ಲ್ಯು.ಡಿ. ಇಂಗ್ರೇಜಿಯಲ್ಲಿ ಭರ್ಜರಿಯಾಗಿ ಅಕೌಂಟಂಟರ ಯೋಗ್ಯತೆಯನ್ನು ವಿಮರ್ಶಿಸಿ, ನನಗೆ ಟಂಕ-ಲೇಖನ-ಕಾರ್ಯ ಒಪ್ಪಿಸಿ ದಾಗ (ಹೃಸ್ವ ಹಸ್ತದಲ್ಲಲ್ಲ – ದೀರ್ಘ ಹಸ್ತದಲ್ಲಿ – 'ಶಾ:ರ್ಟ್‌ಹ್ಯಾಂಡ್ ಲಾ:ಂಗ್ ಹ್ಯಾಂಡ್'ಗಳ ಸ್ವರಚಿತ ಅನುವಾದ) ಅವರನ್ನು ಖುಷ್ ಮಾಡಬೇಕೆಂದು, ನಾನು ಅಕೌಂಟಂಟರ ಯೋಗ್ಯತೆಯನ್ನು 'ಮ್ಯಾನ್ ಆಫ್ ಎವ್ವರೇಜ್ ಕ್ಯಾಲಿಬರ್' ಎಂದು ಬರೆದೆ. ಸಾಹೇಬರು ಇಂಥ ಅಮೂಲ್ಯ ಅಸ್ತ್ರವನ್ನು ಬತ್ತಳಿಕೆಯಲ್ಲಿ ಹುಡಿಕಿ ಬಸವಳಿದಿದ್ದರು. ಏಕದಮ್ ಖುಷ್ ಆಗಿ —

"Right O. K., ದಾದಲ್ಯಾ, it is perfectly apt."
ಎಂದರು.

ಅಲ್ಲೇ ಕುಳಿತ ಶ್ಯಾಮರಾಯ ನನ್ನನ್ನು ದುರುಗುಟ್ಟಿ ನೋಡುತ್ತ. ಕೈ ಕೈ ಮಸೆಯುತ್ತ, ದೇಶಾವರೀ ಭಾಷೆಯಲ್ಲಿ ಸಾಹೇಬರ ಅನುನಯ ಸುರುವು ಮಾಡಿದ. ಭಿಡೇಖಾತರ ಸಾಹೇಬರು 'ಮ್ಯಾನ್ ಆಫ್ ಎವ್ವರೇಜ್ ಕ್ಯಾಲಿಬರ್'ಕ್ಕೆ ನೀರು

ಪಟ್ಟಿ. 'ಅಬವ್ಹ್ ಎವ್ಹರೇಜ್ ಸ್ಟ್ಯಾಂಡರ್ಡ್' ಎಂದು ನಿರ್ವಾಹವಿಲ್ಲದೆ ಬರೆದರು.

ನಾವು ಸಾಕ್ಷಾತ್ ಹಜರಿದ್ದ ಪ್ರಯುಕ್ತ ಈ ಎಲ್ಲ ಭಾನಗಡೀ ವಿದಿತವಾಯಿತು. ನವಕರಿಯಲ್ಲಿಯ ಗಿರಾಕಿಗಳು ಸಾವಿಲ್ಲದೆ ಪೆನಶನ್ ಘಾಜೆಗಟ್ಟಿಯನ್ನು ಹೇಗೆ ಮುಟ್ಟುತ್ತವೆ ಎಂಬುದು ತಿಳಿಯಿತು.

ನಾವು ಬೀ.ಏ. ಆನರ್ಸ ಆಗಿ, ಶಿಕ್ಷಣದ ಒಂದು ತುತ್ತತುದಿಯಿಂದ ಮಾರು ದೂರದಲ್ಲಿ ಬಂದು ನಿಂತಂತಾಗಿತ್ತು. ಎಮ್.ಏ.ಗೆ ಟರ್ಮ್ ಅಂತೂ ತುಂಬ ತೊಡಗಿದ್ದೆವು. ಮುಂಬೈ ಪ್ರಾಂತದಲ್ಲಿ ನಮಗೆ ನವಕರಿಯ ದದಾತಿ ಇರಲಿಲ್ಲ. ಆದರೆ ಸಾಂಗಲಿಯ ಋಣ ಇನ್ನೂ ಮುಗಿಯುವ ಲಕ್ಷಣವಿರಲಿಲ್ಲ. ಒಂದು ದೊಡ್ಡ ಶಿಕೋಣೀ ಕೊರಳಿಗೆ ಬಿತ್ತು; ಅದರ ಕೂಡ, ಸಾಂಗಲಿಯ ಶಾಲೆಯಲ್ಲಿ ಶಾ.ಮಾ.ನ ನವಕರಿಯೂ ದಕ್ಕಿತು. ಶಿಕ್ಷಣ-ಸಾಧನ, ಜ್ಞಾನ-ದಾನ ಮಾಡುತ್ತ ನಾವು ಎಂ.ಏ.ದ ಸಾಧನೆಯನ್ನೂ ನಡಿಸಿದ್ದೆವು. ಎಂ.ಏ.ದ ಈ ತುರ್ತ–ಹಂಗಾಮೀ ಜೀತದ ದರಜು ನಮಗಿರಲಿಲ್ಲ. ಕಾರಣ, ಸಾಹೇಬರು ತಮ್ಮ ಡಿಪಾರ್ಟಮೆಂಟಿನಲ್ಲಿ ಕಾಯಂ ನವಕರಿಯ ಗ್ಯಾರಂಟೀ ಕೊಟ್ಟೇ ಇದ್ದರು. ಅದರ ಬಗ್ಗೆ ಪತ್ರಗಳನ್ನೂ ಬರೆದಿದ್ದರು.

ಅವರು ಒತ್ತಾಯಪಡಿಸಿ ಕರೆಸಿಕೊಂಡರೆಂದು ನಾವು ಸಾಂಗಲಿಯಿಂದ ಬೆಳಗಾಂವಿಗೆ ಬಂದೆವು. ಬಂದ ಮರುದಿನವೇ ಸಾಹೇಬರು ಒತ್ತಾಯಪಡಿಸಿದರೆಂದು ಒಂದು ಅರ್ಜಿಯನ್ನೂ ಒಗೆದೆವು.

ಇಂಗ್ಲೀಷ್-ಸಾಹೇಬರಾದ ಎಸ್. ಈ. ಅವರೇ, ಖುದ್ದಾಗಿ ನಮ್ಮ 'ಇಂಟರ್‌ವ್ಯೂ' ತೆಗೆದುಕೊಂಡು ರುಖಕಾಸ್ ಶರಾ ಬರೆದರು. ಎಸ್.ಈ. ಅವರ ಕರಿಯ ಕ್ರಿಶ್ಚನ್ ಹೆಡ್‌ಕ್ಲಾರ್ಕ, ನಮ್ಮ ಅರ್ಜೀ, ಅದರ ಮೇಲಿನ ಶರಾ ನೋಡಿ, ಔಡಲೆಣ್ಣೆ ಕುಡಿದವರಂತೆ ಮುಖ ಕಿಂವಿಚಿ, ಅರ್ಜಿಯನ್ನು ಅಕ್ಕಸತನದಿಂದ ಟೇಬಲ್ಲಿನ ಡ್ರಾಅರಿನಲ್ಲಿ ತುರುಕಿದ.

"ಥ್ಯಾಂಕ್ಸ್."

ಎಂದು ಹೇಳಿ ನಾವು ನಗುತ್ತ ಅವನ ನಿರೋಪ ತೆಗೆದುಕೊಂಡೆವು. ನಾವು ಇನ್ನೂ ಅವನ ಖಾಸಾ ಕೋಣೆಯ ಬಾಗಿಲು ದಾಟಿರಲಿಲ್ಲ:

"Bloody-fools, these young chaps. ಆಂs. all back-door businessವಾಲಾಸ್"

ಎಂದು, ತನ್ನ ಕೋಣೆಯ 'ಫ್ರಂಟ್ ಡೋರ್'ನಿಂದ, ನನ್ನ ಅರ್ಜಿ ಹೋಗದ ಬಗ್ಗೆ, ತನ್ನ ಪರ್ಶಲೀ ಖರ್ಚಾಗದೆ, ತನ್ನ ನೈವೇದ್ಯಕ್ಕೆ ಚಕ್ರ ಬಂದ ಬಗ್ಗೆ ದುಸುಮುಸುಗೊಂಡು ಹೇಳಿದ್ದ. ಇರಲಿ.

ಸಾಹೇಬರು ನಮ್ಮನ್ನು ಕರೆಯಿಸಿಕೊಳ್ಳುವ ಬೇತಿನಿಂದ ಪತ್ರ ಬರೆದ ಹೊತ್ತಿಗೇ ವಿಶ್ವಾಸನಿಂದೂ ನಮಗೆ ಕಾಗದ ಬಂತು. ಜಾನೇವಾರಿಯಲ್ಲಿಯೇ ಬರಬೇಕಾದ – ಕು. ಚಿ. ಶಕೂನನ್ನು ನೋಡಿ, ತನ್ನನ್ನು, ಸಾಹೇಬ-ರಂಗಕ್ಕರಿಗೆ ತೋರಿಸಿಕೊಳ್ಳಬೇಕಾದ ಸುರೇಶ-ಮಹೋದಯ ಏಪ್ರಿಲ್ ಕೊನೆಯ ವಾರದಲ್ಲಿ ಬರುವವನಿದ್ದಾನೆಂದೂ, ಅವನ ಏ.ಡಿ.ಸಿ. ಆಗಿ ನಾನು ಬೆಳಗಾಂವಿಗೆ ಪ್ರಯಾಣಿಸುವದು ಕ್ಷೇಮಕರವೆಂದೂ ವಿಶ್ವಾಸ ಬರೆದಿದ್ದ. ವಿದೂಷಕನಿಲ್ಲದೆ ರಾಜಾಧಿರಾಜನ ಸವಾರಿ ಹೇಗೆ ಪ್ರವಾಸರತವಾಗಬೇಕು?

ನವಕರಿ ಮಾಡುತ್ತಿದ್ದ ಶಾಲೆಗೆ ಶರಣು ಹೇಳಿ, ಏಕೋಣೆಗೆ ಬೇಸಿಗೆಯ ಸೂಟಿಯ ನಿಮಿತ್ತ ಬಿಡುವು ದಯಪಾಲಿಸಿ. ಪಸೂ-ದಸ್ತಗೀರ್‍ರ್ಯಾರ ನಿರೋಪ ತೆಗೆದುಕೊಂಡು ನಾವು ಬೆಳಗಾಂವಿಗೆ ಬಂದೆವು. 'ಸಾಹೇಬ-ರಂಗಕ್ಕ ಆ್ಯಂಡ್ ಕೋ.'ಗೆ ಅಮಿತಾನಂದವಾಯಿತು. ಊರಿಂದ ಬಂದ ದಿನವೇ, ನಾವು, ರಾ. ಸಾ. ಠೋಮರೇ ಮಾಮಾನ 'ಪರ್ಸನಲ್ ಫೈಲ್' ಸರಿಯಾಗಿ ಜೋಡಿಸಿ 'ಕ್ರಾಸ್ ರೆಫರೆನ್ಸ್' ಹಾಕಿದೆವು. ದೇವರಿಗೆ ಮಂಗಳಾರತಿ ಅರ್ಪಿಸಿ, ನಾಳೆಯಿಂದ ಮತ್ತೆ ನಮ್ಮ ಮಾಲಿಶ್ ಸುರುವಾಯಿತೆಂದು ಆಗಾವು ಸೂಚನೆ ಕೊಟ್ಟಿಟ್ಟೆವು. ಕು. ಚಿ. ಶಕೂನ ಅಭ್ಯಾಸದ ಗತಿ-ಪ್ರಗತಿಯ ಚಾಚಣೀ ತೆಗೆದುಕೊಂಡೆವು. ರಂಗಕ್ಕ-ಸಾಹೇಬರ ಪ್ರಕೃತಿ ಮಜಬೂತ ಇದ್ದರೂ ಸೊರಗಿರುವರೆಂಬ ಸುಳ್ಳು ಸಾಂತ್ವನವನ್ನು ಕೂತರೆ ನಿಂತರೆ ಗಾಯತ್ರಿ ಮಾಡಿಕೊಂಡೆವು.

ಶ್ಯಾಮರಾಯ ಬಿಲ್ಲು ಮಾಡಿಸಿಕೊಂಡು ಊರಿಗೆ ಹೊರಟ. ಹೋಗುವಾಗ, ತಾನಷ್ಟು ಹತ್ತೆಂಟು ದಿನ ಪುಣೆಯ ಕಡೆಗೆ ಹೋಗಿಬರುವದಾಗಿ ತಿಳಿಸಿದ. ತಿರುಗಿ ಬರುವಾಗ ಸುರೇಶ ಆ್ಯಂಡ್ ಮಂಡಳಿಯನ್ನು ಕರೆದುಕೊಂಡು ಬರುವೆನೆಂದೂ ಅಭಿವಚನವಿತ್ತ. ಪುಣೆಯಿಂದ ಏನನ್ನಾದರೂ ತರುವದಿದ್ದರೆ ತಿಳಿಸಬೇಕಾಗಿ ರಂಗಕ್ಕನವರಿಗೆ ವಿನಮ್ರವಾಗಿ ಕೇಳಿಕೊಂಡ.

"ಸೋನಕ್ಕಾ, ಹುಡುಗೂರ್‍ನ ಎಂಟ ದಿನಾನರೇ ಯಾಕ ಆಗವಲ್ದೂ ಅಷ್ಟ ಕರಕೊಂಡ ಬರ್‍ರಿ – ಸಾಕು."

ಎಂದು ರಂಗಕ್ಕ ಉಳಿದ ಉಸಾಬರಿಯನ್ನು ಬಿಟ್ಟು, ಒಣ ದಂಟು ಮುರಿದ ಧರ್ತಿಯಲ್ಲಿ ಸೂಚಿಸಿದರು. ಅದು ವಿನಂತಿ ಪಜಾ ಆಜ್ಞೆಯೇ ಆಗಿತ್ತು.

ಅವನು ಸಿರೋಪ ತೆಗೆದುಕೊಂಡು ಹೋದ ಮರುದಿನ, ಊಟಕ್ಕೆ ಕುಳಿತಾಗ. ಸರ್ವರ ಆಶ್ಚರ್ಯಕ್ಕೆ, ಸರ್ವರ ಆನಂದಕ್ಕೆ ಪಾರವಿಲ್ಲದಂಥ, ಕು. ಚಿ. ಶಕೂನ ಲಜ್ಜೆಗೆ ಪಾಸ್ಯಾಳದ ಹೂವಿನ ಕೆಂಪೇರುವಂತೆ. ಜೋರದಾರ ಧಕ್ಕಾ ಕೊಟ್ಟೆವು.

ಮರುದಿನ ಮುಂಜಾನೆಯ ಮೇಲಿನಿಂದ ಸುರೇಶ ಅವತರಿಸುವ ಬಾತಮೀಯನ್ನು ಜಾಹೀರುಮಾಡಿದೆವು.

ಬಂಗಲೆಯಲ್ಲಿ ಭೂಕಂಪದ ಗಡಿಬಿಡಿಗೆ ಮೊದಲಾಯಿತು.

ಮಾರ್ಚತಿಂಗಳಲ್ಲಿ ಹತ್ತೂರು ಅಲೆದು, ಇಪ್ಪತ್ತು ದಾರಿ ಕಡಿದು ಹೈರಾಣಾದ ಸಾಹೇಬರ ಗಾಡಿ ಮಂಗಲಸ್ನಾನರತವಾಯಿತು. ಬಾಗಿಲು-ಕಿಡಿಕಿಗೆ, ಕೋರಾ ಕರಕರೀತ ಝೂಲರಿಯ ಪಡದೆ ಇಳಿದವು. ಆಸರೆ ಸಿಕ್ಕಲ್ಲಿ ಹೂ-ಪಾತ್ರಗಳು ವಿರಾಜಿಸಿದವು. ಇನಸ್ಪೆಕ್ಟರ್ನ್ ಬಂಗಲೆಯಲ್ಲಿಯ ಜಾದಾ ಕ್ರೋಕರಿ, ಟೀ ಸೆಟ್ಟು, 'ಎಮರ್ಜನ್ಸೀ'ಗೆ ಇದ್ದರೆ ಇರಲಿ ಎಂದು ಬಂದಿತು. ನಡುಮನೆಯಲ್ಲಿಯ ನಿಲುವುಗನ್ನಡಿಯ ಮುಂದೆ. ಸಾವಿರ ಸಲ ಹಾದು. ಕು. ಚಿ. ಶಕೂ. ಅನ್ಯರಿಗೆ ತಿಳಿಯದಂತೆ, ತನಗಷ್ಟೇ ಹೊಳೆಯುವಂತೆ ಏಕವೇಣೀ-ಪಾಚವಾರೀ-ಪೋಜಿನಲ್ಲಿ 'ಫ್ಯಾಶನ್ ಪರೇಡ್' ಮಾಡಿದಳು. ಕು. ಚಿ. ಶಕೂನ ಅಭ್ಯಾಸಿಕೆಯ ಬದಿಯ ಕೋಣೆಯಿಂದ, ರಾ. ಸಾ. ಠೋಮರೇಮಾಮಾ, ಸೂಕ್ಷ್ಮ. ಪ್ರೋಕ್ತ ವಿಚಾರಮಾಡಿ. ತಮ್ಮಂತೇ ಪೆನ್ಶನ್-ಘಾಜೆಗಟ್ಟಿಯನ್ನು ಎಂದೋ ದಾಟಿ, ಥಕಾಸಿದ. ತಮ್ಮ ಸಾಮಾನು-ಸರಂಜಾಮು ಅಲ್ಲ ಕಡೆಗೆ ಸಾಗಿಸಿದರು. 'ಗ್ಯಾಜಟೆಡ್ ಪೋಸ್ಟ'ದ ಅಸಿಸ್ಟಂಟ್ ಇಂಜಿನಿಯರ್‌ಸಾಹೇಬರ. ಭಾವೀ ಜಾಮಾತೃಗಳ, ಇತಮಾಮಿಗೆ, ಇಜ್ಜತ್ತಿಗೆ ಒಪ್ಪುವ ರೀತಿಯಲ್ಲಿ. ಅವರ ಖಾಸ್ ವಾಸ್ತವ್ಯದ ಕೋಣೆ ಅಲಂಕೃತವಾಯಿತು. ರಾ. ಸಾ. ಠೋಮರೇಮಾಮಾ ಹಾಗೂ ಕು. ಚಿ. ಶಕೂನ ಕೋಣೆಯ ನಡುವಿದ್ದ ಅರುಪಾರು ಖಿಡಕಿಯಲ್ಲಿ. ಕು. ಚಿ. ಶಕೂ ಬೇಕಂತಲೇ ಪುಸ್ತಕ-ರ್ಯಾಕ್ ಇಟ್ಟು ಗ್ರಂಥದ ಚಿರೇಬಂದೀ ಮಾಡಿದ್ದಳು. ಕಾರಣ, ರಾ. ಸಾ. ಠೋಮರೇಮಾಮಾ, ಬೆಳಗಿನ ನಾಲ್ಕು ಗಂಟೆಗೇ ಎದ್ದು, ಸಾರುವ ಅಯ್ಯನವರ ಧರ್ತಿಯಲ್ಲಿ ಅಥವಾ ಪಾಲಕ್ಕಿಯಂತೆ ಕಣಿ ಸಾರುವ ಬುಡುಬುಡುಕಿಗಳ ಅಪಸ್ವರದಲ್ಲಿ —

"ಮನಾ ಪಾಹತಾ ಸತ್ಯ ಹೇ ಮೃತ್ಯುಭೂಮೀ ।
ಜಿತಾ ಬೋಲತೀ ಸರ್ವಹೀ ಜೀವ ಮೀ ಮೀ ॥
ಚಿರಂಜೀವ ಹೇ ಸರ್ವಹೀ ಮಾನಿತಾತೀ ।
ಅಕಸ್ಮಾತ್ ಸಾಂಡೂನಿಯಾಃ ಸರ್ವ ಜಾತೀ ॥

ಎಲ್ಲವನ್ನೂ ತ್ಯಜಿಸಿ, ಟಕ್ ಎನ್ನುವ ಗಳಿಗೆಯನ್ನು ಎಣಿಸುವ ಅವರಿಗೆ, ಈ ರಾಮದಾಸೋಕ್ತಿ ಪಟಾಸಿರಬಹುದು. ಆದರೆ ಇನ್ನೂ ಇಪ್ಪತ್ತರ ಮನೆಯಲ್ಲಿದ್ದ, ಅಖಂಡ ವೈಭವದ ರಾಜವೀಥಿಯಲ್ಲಿ ದಿಮಾಕಿನಿಂದ ನಡೆಯಲಿದ್ದ ಕು. ಚಿ. ಶಕೂನಿಗೆ ಈ ಅಪಲಾಪ, ಸಕ್ಕರೆ-ನಿದ್ದೆಯ ಸವಿಗನಸು ಕಾಣುವ ಸಮಯದಲ್ಲಿ, ಒಕ್ಕಲಗಿತ್ತಿ ಕರಕಾದ ಖಬಣಂಚನ್ನು ಚೀಪುಗಲ್ಲಿನಿಂದ ತಿಕ್ಕುವಾಗ ಕೇಳಿಬರುವ ಕರ್ಕಶ ಸದ್ದಿನಂತೆ ಭಾಸವಾಗುತ್ತಿತ್ತು. ಮಟಮಟ ಮಧ್ಯಾಹ್ನದಲ್ಲಿ ಉಂಡು, ವಾಮಕುಕ್ಷಿಯಾದಾಗ, ಕರಕರವೆಂದು ಕೀಸರಿಡುತ್ತ ಬರುವ ದುರುಗು-ಮುರುಗಿಯ ವಾದ್ಯವಾದನದಂತೆ ತಲೆ ಚಿಟ್ಟುಹಿಡಿಸುತ್ತಿತ್ತು. ಅಂತೇ ಕು. ಚಿ. ಶಕೂ ಗ್ರಂಥಗಳ ಗೋಡೆ ಏರಿಸಿ ಖಿಡಕಿಯನ್ನು ಬಂದುಮಾಡಿದ್ದಳು. ಈಗ ಗ್ರಂಥಗಳನ್ನು ಹೊತ್ತು ನಿಂತ 'ಬುಕ್-ರ್‍ಯಾಕ್' ಅನಾಮತ್ತಾಗಿ ಸಾಗಿ ಹೋಗಿ 'ಲಂಬರ್-ರೂಮಿ'ನಲ್ಲಿ ಬಿದ್ದಿತು. ಖಿಡಕಿಯು ಮುಚ್ಚಿದ ಮುಖ ತೆರೆದು ಇಲ್ಲಿಯ ಗಾಳಿ ಅಲ್ಲಿ, ಅಲ್ಲಿಯ ಹವಾ ಇಲ್ಲಿ, ನಿರಾತಂಕವಾಗಿ ಆಡುವಂತಾಯಿತು. ಕಾಚಿದ್ದ ಖಿಡಕಿಯ ಭಾಗಕ್ಕೆ ನೆಪ ಮಾತ್ರ 'ಟ್ರಾನ್ಸ್‌ಪರಂಟ್' ಪಡದೆಯ ನಿಯೋಜನೆಯಾಯಿತು.

"ದಾದಲ್ಯಾ. ಸುರೇಶನ ವ್ಯವಸ್ಥಾ ನಿನಗ ಹತ್ತಿತಪಾ."

ಎಂದು ಸಾಹೇಬರು ರಂಗಕ್ಕ, ನಮಗೆ ಸುರೇಶನ ವ್ಯವಸ್ಥೆಯ ಪೊಸ ಧಂದೇ ಹಚ್ಚಿದರು. ಈ ನಮ್ಮ ಪ್ರಥಮೋಪಕ್ರಮದಲ್ಲಿ ಸಾಧಿಸಿದ ಘನ ಉಪಕ್ರಮವೆಂದರೆ, ಖಿಡಕಿಯಲ್ಲಿಯ ಗ್ರಂಥರಾಜರನ್ನು ಉತ್ಥಾಪನೆ ಮಾಡಿ ಪದಚ್ಯುತಿಗೊಳಿಸಿದ್ದು. ಇಲ್ಲಿಯವರೆಗೂ ಈ ಗ್ರಂಥ-ತಳಿ ನಮ್ಮನ್ನು ಬಹಳ ಹೈರಾಣು, ಹಣ್ಣುಗಾಯಿ-ನೀರುಗಾಯಿ ಮಾಡಿತ್ತು. ಈಗ ಪರೀಕ್ಷೆ ಮುಗಿಸಿ ಅವಕ್ಕೆ ಕಾಯಂ ನಿರೋಪ ಕೊಟ್ಟಿದ್ದರಿಂದ, ನಮಗೆ ಈಗ ಅವನ್ನು ಕಂಡರೆ ಏಳು ಜನ್ಮದ ವೈರ ಘನಿಸಿದಂತಾಗುತ್ತಿತ್ತು. ಎಂ.ಎ. ಮುಗಿಸುವ ಭರೋಸು ನಮಗೇ ಅಭರೋಸು ಆಗಿತ್ತು. ಕದಾಚಿತ್ ಪುಸ್ತಕ ಬರೆದೇನು. ಆದರೆ ಎಂದೂ ಪುಸ್ತಕ – ನಾನು ಬರೆದದ್ದನ್ನು

ಕೂಪ – ಓದುವದಿಲ್ಲವೆಂದು, ವಸೂನ ಟೇಬಲ್ಲಿನ ಮೇಲೆ ಬಿದ್ದ 'ಕ್ವಿಲರ್‌ಕೂಚ'ನ, 'On the art of reading' ಪುಸ್ತಕವನ್ನು ಮುಟ್ಟಿ ಪಣ ಪುಕಾರಿಸಿ ಬಂದಿದ್ದೆ. ಸಾಂಗಲಿಯಿಂದ ಬೆಳಗಾಂವಿಗೆ ಬರುವಾಗ ಗಾಡಿಯಲ್ಲಿ, ನನ್ನ ಬಾಜೂ ಕುಳಿತ, ಆಸಾಮಿ, ಪ್ರಜಾಮತದಲ್ಲಿಯ ವ್ಯಾಪಣಕರನ ಭವಿಷ್ಯವನ್ನಾದರೂ ನೋಡಿರಿ. ಹೇಗೆ ಝಕಾಸ್ ಆಗಿ ಬರೆದಿದ್ದಾನೆಂದು, ಸಿಗರೇಟು ಕೊಟ್ಟು ಓದಲು ಅನುನಯಿಸಿದರೂ. ನಾವು ಅದರಲ್ಲಿ ಹಣಿಕಿಹಾಕಿರಲಿಲ್ಲ. ನಮ್ಮದು ಪಣವೆಂದರೆ ಪಣ. ಈಗ ಆಗಮಿಸಲಿರುವ ಆಸಾಮಿಯೂ ನಮ್ಮಂಥಹದೇ. ವಿಶ್ವಾಸ-ವಸೂನಂತೆ ಗ್ರಂಥ-ಕೀಟವಲ್ಲ. ಆದರೆ ಕು. ಚಿ. ಶಕೂನಿಗೆ ಖಾಸಗೀಯಾಗಿ ಹೇಳಿ ಮ. ರಾ. ರಾ. ಬಾಬೂರಾವ್ ಪಟೇಲರ 'ಫಿಲ್ಮ ಇಂಡಿಯಾ' ತರಿಸಿಡುವ ದಕ್ಷತೆಯನ್ನು ಮಾತ್ರ ತಪ್ಪದೆ ತೆಗೆದುಕೊಂಡೆವು.

ಒಳಗೂ ಜಯ್ಯತ್ ತಯಾರಿ ನಡೆದಿತ್ತು. ರತ್ನಾಗಿರೀ ಆಪೂಸ್ ಬಂದಿದ್ದವು. ಸಂತ್ರೀ, ಮುಸುಂಬೀ, ಹಲಸು ಜಾತ್ರೆ ನೆರೆಸಿದ್ದವು. 'ಐಸ್‌ಕ್ರೀಮ್-ಪಾಟ್' ಮನೇಗೇ ಬಂದಿತ್ತು. ಆಯಿಸ್‌ಕ್ರಿಮಿನಲ್ಲಿ ಪಿಸ್ತೇ ಹಾಕಿದರೆ ಫಸ್ಟ್‌ಕ್ಲಾಸ್ ಎಂದು ನಾವು ಸೂಚಿಸಿದಾಗ, ರಾ.ಸಾ. ಠೋಮರೇಮಾಮಾ ನಮ್ಮ 'ಹೈಕ್ಲಾಸ್ ಟೇಸ್ಟ್'ದ ವಾಹವ್ವಾ ಮಾಡಿದರು. ದಾದಲ್ಯಾ 'ಆ:ಲ್‌ರೌಂಡ್' ಇದ್ದ ಬಗ್ಗೆ ಅಪ್ರಾರ್ಥಿತ ಸರ್ಟಿಫಿಕೇಟ ದಯಪಾಲಿಸಿದರು.

ಸುರೇಶನನ್ನು ಸ್ಟೇಶನ್ನಿನಲ್ಲಿ ಎದುರುಗೊಂಡು ಕರೆದು ತರಲು, ಸಾಹೇಬರು ನಾನು, ಹೋಗುವದೆಂದು ಠರಾವು ಪಾಸಾಗುವಾಗ ನಾವು ಒಂದು ಸಣ್ಣ ತಿದ್ದುಪಡಿಯನ್ನು ಮುಂಡಿಸಿದೆವು. ಮಂಗಲಕಾರ್ಯಕ್ಕೆ ಸುವಾಸಿನಿಯರಾದ ಸೌ. ರಂಗಕ್ಕನೂ ಇರುವದು ಸೂಕ್ತವೆಂಬುದು ನಮ್ಮ ತಿದ್ದುಪಡಿಯ ಆಶಯವಾಗಿತ್ತು. ರಾ. ಸಾ. ಠೋಮರೇಮಾಮಾ, ಸೌ. ರಂಗಕ್ಕ ನಮ್ಮ ಸಮಜೂತದಾರತನವನ್ನು ಮೆಚ್ಚಿಕೊಂಡರು.

"ದಾದಲ್ಯಾಗ ತಿಳೀತು......"

ಎಂದು, ಸೌ. ರಂಗಕ್ಕ, ಸ್ಟೇಶನ್ನಿಗೆ ಬರುವ ಚಾನ್ಸ ಹೊಡೆದ ಖುಷಿಯಲ್ಲಿ, ದಾದಲ್ಯಾ ನಷ್ಟು "ಅದು" ನಿಮಗಿಲ್ಲವೆಂದು ಯಜಮಾನರಿಗೆ ಪರ್ಯಾಯವಾಗಿ ಮನವರಿಕೆ ಮಾಡಿಕೊಟ್ಟರು.

"ಸುರೇಶ ಹ್ಯಾಂಗಪಾ ದಾದಲ್ಯಾ, ಮಾತ-ಕಥೀಗೆ? ಬಿಚ್ಚ-ಬೀಸ ಇದ್ದಾನ

ಇಲ್ಲೋ? ಅಂವೇನು ಹೊರಗಿನವಾ ಅಲ್ಲನ್ನು"
ಎಂದು ಸಾಹೇಬರು, ಸುರೇಶ ಈಗಾಗಲೇ ಒಳಗಿನವನಾದ ಆವಿರ್ಭಾವ ತಂದು ಪೃಚ್ಛಿಸಿದರು.

"ಸುರೇಶ ಇದ್ದಲ್ಲೆ ಗೋಕುಲ ಇಳಧಾಂಗs. ನಾಳೆ ನಿಮಗs ಇದರ ಅನುಭವ ಬರತ್ಯದ. ಅಲ್ಲಿಂದ ನೀವs ಅಂತೀರಿಲ್ಲೋ ನೋಡರಿ. ದಾದಲ್ಯಾನ ಮಾತು ಶಂಭರ್ ಟಕ್ಕೆ ಸತ್ಯ ಅಂತs. 'ಗ್ಯಾಜಟೆಡ್ ಆಫೀಸರ್' ಅಂತs ಘಮೇಂಡೀ, ಒಣಾ ದಿಮಾಕಾ ಕೇಳಬ್ಯಾಡ್ರೀ. ಅಗದೀ 'ಈಜಿ ಗೋಯಿಂಗ್' ಆಸಾಮೀ."

ನಮ್ಮ ತಾರೀಫಿನಿಂದ ಸಾಹೇಬರ ಝುಲ್ಲು ಬಿಟ್ಟಿತು.

ನಮ್ಮ ಸಾಹೇಬರೆಂದರೆ ಥೇಟ ಭೃಗು. ಅವರ ಹೆಗಲಿಗೆ ಭಾರವಾಗಿ ಅಂಟಿದ ಕಲಗಡಿಗೆಯಂತಹ ತಲೆಯಲ್ಲಿ ಚೀಜ ವಸ್ತುವೆಂಬುದೇ ಇಲ್ಲ. ಅಖಂಡ ಖೋಕಾ. ಪೀಡಾ, ರಾ. ಸಾ. ಠೋಮರೇಮಾಮಾ, ಈ ಜನ್ಮದಲ್ಲಿ ಸಾಹೇಬರಿಗೆ ಹೆಣ್ಣು ಕೊಟ್ಟು ಮಾವನಾಗಿದ್ದಾನೆ. ಹೋದ ಜನ್ಮದಲ್ಲಿ ನಮ್ಮ ಸಾಹೇಬರ ಖಾಸ್ ಪಿತಾಜಿಯೇ ಇರಬೇಕು. ಈ ಜನ್ಮದಲ್ಲಿ ಮಾವನೆಂಬ ನಾತೆಯ ದೇಹವನ್ನು ಅಷ್ಟೇ ಧಾರಣಮಾಡಿಕೊಂಡು ಬಂದಿದ್ದರೂ, ಗತಜನ್ಮದ ಪಿತಾಜಿಯ ತಲೆಯನ್ನು ಮಾತ್ರ ಶಾಬೂತಾಗಿ ತರಲಿಕ್ಕೆ ಮರೆತಿಲ್ಲ. ಈ ಬಾಬತ್ತಿನಲ್ಲಿ ಸಾಹೇಬರು, ರಾ. ಸಾ. ಠೋಮರೇಮಾಮಾನ – ರಾ.ಸಾ. ಠೋಮರೇಮಾಮಾ, ಸಾಹೇಬರ – ಕೃತಿ-ಪ್ರತಿ ಕೃತಿ, ರೂಪ-ಪ್ರತಿರೂಪದಂತಿದ್ದಾರೆ. ಇಬ್ಬರೂ ಘನ 'ಢ' ಗಿರಾಕಿಗಳು. ಇವರು ನವಕರಿಗೆ ಹತ್ತಿದ್ದು, ಅದನ್ನು ಸಹಿಸಲಾಮತ್ತ ಸಂಬಾಳಿಸಿಕೊಂಡು ಬಂದದ್ದು, ಜಗತ್ತಿನ ಮಹದಾಶ್ಚರ್ಯ ಬಾಬಿನಲ್ಲೇ ಗುಣಿತವಾಗುವಂತಿದೆ.

"ಯಾಕ ದಾದಲ್ಯಾ, ಭಾಳ ಖವಳಾಸೀ ಇಬ್ಬರ ಮ್ಯಾಲೂ?"
ಎಂದು ನೀವೇ ಕೇಳಬಹುದು. ಏನು ಮಾಡಲಿ ಹೇಳಿರಿ? ಇವರ ಕನ್ಯಾಮಣಿ ಯನ್ನು ನೋಡುವ ಲವಲವಿಕೆಯಿಂದ ಎಂಟು ದಿನದ ರಜೆಯನ್ನು ಪಡೆದು ಕೊಂಡು ಸುರೇಶ ಬಂದಿದ್ದಾನೆ. ಜಮಾಸಿದರೆ ಹೂಂ ಎಂದೂ ಅಂದಾನು. ಹುಡಿಗಿ ಯನ್ನು ತೋರಿಸುವ, ಅಳಿಯನನ್ನು ಜಮಾಸಿಕೊಳ್ಳುವ ಖಬರು ಇಬ್ಬರಿಗೂ ಇಲ್ಲದಾಗಿದೆ. ಪಾಪ, ಕು. ಚಿ. ಶಕೂ, ಇನ್ನೂ ಸುರೇಶ ಬಂದು, ಒಂದು ತಾಸಾಗಿಲ್ಲ. 'ಫ್ಯಾಶನ್ ಪರೇಡ್'ದ ಎರಡು-ಮೂರು ವಿವಿಧ ಪಾಂಗಿನಲ್ಲಿ ಕಾಣಿಸಿಕೊಳ್ಳುವ ಓಮಾಜಲಾರೋಹಣ ಸಾಹಸ-ಮಾಡಿದಳು. ನಾವು ಕುಳಿತ ಹಾಲಿಗೆ ಎದುರಾಗಿದ್ದ

ನಡುಮನೆಯಲ್ಲಿ ಅತ್ತಿಂದಿತ್ತ. ಇತ್ತಿಂದತ್ತ ಗಾಳಿಯಂತೆ ತೇಲಿದಳು. ಜೋಕಾಲಿಯಂತೆ ಜೀಕಿದಳು. ತಾನು ತೇಲುವ. ಜೀಕುವ ಸೂಕ್ಷ್ಮಭಾಸ ನಮ್ಮ ಕಣ್ಣಿಗೆ ಕಾಣಿಸಿರಲಿಕ್ಕಿಲ್ಲವೆಂದು ಖಾತ್ರೀ ಆಗಿ. ಮಂದಾಕ್ರಾಂತದಲ್ಲಿ 'ಕ್ಯಾಽಽಬಿಸ್‌ಬಿಸ್…ಕ್ಯಾಽಽಬಿಸ್ ಬಿಸ್…', ಎಂದು, ರಾ. ಸಾ. ಠೋಮರೇಮಾಮಾನ ಏಕಮೇವ ಪ್ರೀತಿವಾತ್ಸಲ್ಯದ ಕರಿನೆರೆ-ಬಣ್ಣದ ಬೆಕ್ಕನ್ನು ಸುಮ್ಮಸುಮ್ಮನೇ ಕರೆಯುವ ನಟನೆ ಮಾಡಿದಳು. ಆದರೆ ಎರಡೂ ಖೋಕಾ – ಒಂದು ತನ್ನ ನವಕರಿಯಲ್ಲಿಯ ಗತೇತಿಹಾಸದಲ್ಲಿಯ, ಅಳಸಿ ಮಸಕಾದ ಅಕ್ಷರಗಳನ್ನು ಗುರುತಿಸುವ ಸಾಮರ್ಥ್ಯವಿಲ್ಲದೆ ಕ…ಮ… ಕ…ಮ ಎಂದು ಓದಿದರೂ, ಅದನ್ನೇ ಪಾಂಚಜನ್ಯದ ಪುಂಗಿಯಂತೆ ಬಾರಿಸುತ್ತಿತ್ತು. ಇನ್ನೊಂದು ವರ್ತಮಾನದಲ್ಲಿ ನಿಂತು, ಭೂಮಿಗತ ಭೂತವನ್ನು ಅಗೆದಗೆದು. ತನಗೆ ಅಗಮ್ಯವಾದ, ಅತೀತವಾದ ಭವಿಷ್ಯನ್ನು ವ್ಯಾಪಣಕರನ ಸ್ಥೈರ್ಯದಿಂದ ಸಾರುತ್ತಿತ್ತು. ಸ್ಕೇಲು. ಸಿನಿಯಾರಿಟಿ, ಡೀ.ಏ., ಟೀ.ಏ., ಪೀ.ಟೀ.ಏ. ಮೈಲೇಜ್ ಭತ್ತೇ – ಪಿ.ಡಬ್ಲ್ಯು.ಡಿ. ಅಧಿಕಾರಿಗಳ ಏಕಮೇವ ಗಾಯತ್ರಿಯಾದ, ಜರಾಜರ್ಜಿತವಾದ, ಪುರಾತನವಾದ, ಸನಾತನವಾದ. ಆದರೂ ಅವರಿಗೇ ಪ್ರತಿಭಾ ನವನವೋನ್ಮೇಷಶಾಲಿನಿಯಂತೆ ಚಿರವಿನೂತನವಾದ ವಿಷಯವನ್ನು ಕುರಿತು ತಲೆ ಚಿಟ್ಟುಹಿಡಿಸತೊಡಗಿತು.

ರಸ್ತೆಯ ಬದಿಗೆ, ಸಂತೆಯ ದಿನ, ಸೂರಾರು ಬೇರು – ನೂರಾರು ಜಾತಿಗಳ ಜಾತ್ರೆ ನೆರೆಸಿಕೊಂಡು – ದವಾವಾಲಾರು:




"ಏ ಕ್ಯಾ ಹೈ?"
"ವೋ ದವಾ ಹೈ."
"ಇಸ್ಮೇ ಕ್ಯಾ ಚೀಜ ಹೈ?"
"ಇದರಲ್ಲಿ ಯಾವ ಚೀಜ ಅದೆ?"

ಎಂದು ಅಂದದ್ದನ್ನೇ ಅಂದು. ಆಡಿದ್ದನ್ನೇ ಆಡಿ ಹಳ್ಳಿಯ ಗಾಂಪರನ್ನು ಮರುಳುಗೊಳಿಸುವಂತೆ. ಮಾವ-ಅಳಿಯ ಏಕಪ್ರಕಾರವಾಗಿ, ಈ ದವಾಸವಾಲು ನಡೆಸಿ, ಕು. ಚಿ. ಶಕೂನ ಸವಾಲ ವಿಷಯವನ್ನೇ ಮರೆತರು. ಕ್ಯಾಬಿಸ್ ಮಂದಾಕ್ರಾಂತ ನಿತ್ರಾಣವಾಯಿತು. ಫ್ಯಾಶನ್-ಪರೇಡ್ ಇನ್ನೊಮ್ಮೆ ಝಳಕಿಸಲಿಲ್ಲ. ಆದರೂ ನಮ್ಮ ಊರಿನ ಮೋಟಾರ-ಸ್ಟ್ಯಾಂಡ ಮೇಲಿದ್ದ ಗುರುಬಸವಾರ್ಯನ "ಚಾ-ಕಾಫಿ-ಫರಾಳ"ದ ದುಕಾನದಿಂದ, ಇಪ್ಪತ್ತು-ನಾಲ್ಕೂ ತಾಸು, ಎದೆ ಎದೆ ಬಡಕೊಂಡು.

ಮರ್ರ್ಯೋ ಬೇಡವೆಂದು ಮೈಲು ದೂರ ಓಡಿದರೂ ಬೆನ್ನುಹತ್ತಿ ಕರ್ಣರಂಧ್ರಕ್ಕೆ ಆರು-ಪಾರು ಭೋಕು ಕೆಡಹುವ —

"ನಾ ಪೇಳುವೇ ನಿನಗೊಂದುಪಾಯಾ..."

ಹಾಡಿನಂತೆ ಅಖಂಡ ಖಟಖಟ ನಡೆಸಿದ, ಮಾವ-ಅಳಿಯರ ಸಿನಿಯಾರಿಟೀ, ಮೈಲೇಜ ಗಾಯತ್ರೀ ನಿಲ್ಲಲಿಲ್ಲ. ಅದೇ ನಿದ್ರೆಯಿಂದೆದ್ದ ಏದು, ಮೈ ಆಲಸ್ಯವನ್ನು ಕಳೆಯಲು ಕಾಲು ಸೆಟಿಸಿ, ಮೈಯನ್ನು ಬಿಲ್ಲಿನಂತೆ ಬಾಗಿಸಿ, ಅಖಂಡ ಅಂಗವನ್ನು ಛಟಛಟ ಝಾಡಿಸಿದಂತೆ ಮಾಡಿದಾಗ, ಅದರ ಮೈ-ಮುಳ್ಳು ಬಹಳ ದೂರದ ವರೆಗೆ ಅಂಬಿನಂತೆ ಸಿಡಿಯುತ್ತವಂತೆ. ಅದರ ನೆನಪು ಬಂದು, ನಾನೂ ಮೈ ಮಣಿಸಿ, ಎರಡೂ ಕೈ ಎತ್ತಿ, ಅಡ್ಡ ಉದ್ದ ಚಾಚಿ, ತಮ್ಮಾಜಿಯಂತೆ ಅಷ್ಟಾವಕ್ರ ಆಕಾರ ಧಾರಣ ಮಾಡಿ, ದಾಕ್ಷಿಣಾತ್ಯ ಗಾಯಕರಂತೆ ಮುಖದಲ್ಲಿ ಅಮಂಗಳ ಆಕಾರ ಮೂಡಿಸಿ "ಆ್ಯಂ" ಎಂದು ಕತವಾಸಿದ ನಿಟ್ಟುಸಿರಿನ ತಿದಿ ಊದಿದೆ. ನನ್ನ 'ಆ್ಯಂ' ಶಂಖನಾದಕ್ಕಿಂತ ಕಿಂಚಿತ್ ಘನವಾಗಿತ್ತು. ಪಾಂಚಜನ್ಯಕ್ಕಿಂತ ಗುಂಜಿ ತೂಕ ಖಣಖಣಿತವಾಗಿತ್ತು. ಎರಡೂ ಖೋಕಾದಲ್ಲಿ 'ಆ್ಯಂ' ಧ್ವನಿ ಪ್ರತಿಧ್ವನಿಸಿತು. ಅವು ಬೆಚ್ಚಿದವು.

"ನೌಕರದಾರರಂದರ ಮ್ಯಾಗ್ನೆಟ್ ಇದ್ಧಾಂಗ ಸುರೇಶ. ಏನ್ 'ಅಟ್ರ್ಯಾಕ್ಶನ್' ಇರತ್ಯದೋ ಏನೋ ತಿಳಿಯೂ ಹಾಂಗs ಇಲ್ಲಾ. ಆ್ಯಂ? ಆಫೀಸಿನ ಮಾತ ಬಿಟ್ಟು ಬ್ಯಾರೇ ವಿಚಾರ ಬಂದರ ಕೇಳು? ಒಂದ ನೀ ಬಂದ ಕೂಡಲೇ ಚಹಾ ತಗೊಂಡು ಕೂತೇವು. ಆಕರಾ ಆದರೂ ಬಗೀಹರೀಯೊಲ್ಲದು. ಏಳಪಾ ಏಳು. ಸ್ನಾನಾ-ಪೀನಾ ಬಗೀಹರಸು. ರಾತ್ರೀ ನಿದ್ದಿಗೆಟ್ಟಿರಬೇಕು. ಫರಾಳ-ಗಿರಾಳ ಮುಗಿಸಿ ಕೂಡೂಣಂತ ನಿಧಾನಾಗಿ ಮಾತಾಡಿಕೋತ ದಾದಲ್ಯಾ. "ಈಜ್ ಆ್ಯಟ್ ಯುವರ್ ಡಿಸ್ಪೋಜಲ್". ಅಂವಾ ನಿನ್ನ ಏ.ಡಿ.ಸಿ. ಅಂತ 'ಅಪಾಯಿಂಟ್‌ಮೆಂಟ್'ನs ಆಗೇದ. ಏನ ದಾದಲ್ಯಾ?"

"ಆ್ಯಂs"

ಏ.ಡಿ.ಸಿ. ದಾದಲ್ಯಾ, ಎದ್ದು, ಸುರೇಶನ ಹಿಂದೆ ನಿಂತು, ಮತ್ತೊಮ್ಮೆ ಅಷ್ಟಾವಕ್ರರೂಪ ಧರಿಸಿ ತನ್ನ 'ಆ್ಯಂ' ಪ್ರಭಾವ ತೋರಿಸಿದ.

"ಬ್ಯಾಸತ್ತಾನ ದಾದಲ್ಯಾ."

ದಾದಲ್ಯಾನ ಬ್ಯಾಸರಕಿ ಚಮತ್ಕಾರ ಮಾಡಿತು. ಅವನಿಗೆ ಖೋಕಾದಲ್ಲಿ

ಹವಾ ತುಂಬತೊಡಗಿದ ಭಾಸವಾಯಿತು.

"ಸುರೇಶ, ದಾಡೀ ಆಗಬೇಕು ಅಂತಿದ್ಯಲ್ಲs? ಖೋಲಿಗೇ ನಡೀ. ನಾ ಈಗ ಬಿಸಿನೀರ ತಂದೆ. ನೀವು ಸ್ನಾನಾ ಮುಗಸರಿ ಮುಂಚೆ. ಸುರೇಶ ನಿಧಾನಾಗಿ ಮಾಡಲಿ" ಎಂದು ನಮ್ಮ ಸಾಹೇಬ ಬ್ರ್ರುಪರನ್ನು ಮೀಯಲಿಕ್ಕೆ ಬಚ್ಚಲುಮನೆಗೆ ಅಟ್ಟಿದೆ.

ನಾನು-ನೀವು, – ನೀವು ಅಂದರೆ ವಾಚಕಮಹೋದಯರಾದ ತಾವು – ಬಹುತೇಕ ಸ್ನಾನಪಂಥೀಯರು. ಸಾಹೇಬರದು ಹಾಗಲ್ಲ. ಅವರು ಎಲ್ಲ ಬಾಬತ್ತಿನಲ್ಲೂ ಔರ್ ವ್ಯಕ್ತಿ! ಆರು ಫೂಟು ಉದ್ದ, ಎರಡೂವರೆ ಫೂಟ ಅಗಲ, ತತ್ತಿಯಾಕಾರದ – ಕೇವಲ ಅವರ ಉಪಯೋಗಕ್ಕೆಂದೇ ತಯಾರಾದ, ಟಬ್ಬಿನಲ್ಲಿ ನಿತ್ಯ ಒಂದು ತಾಸು ಜಲಕೇಳೀವಿಲಾಸರತರಾಗುತ್ತಾರೆ. ಸಂಧಿವಾತವನ್ನು ಸಡಿಲು ಮಾಡಿಕೊಳ್ಳುವ ಉಪಾಯವಂತೆ ಇದು. ಅದಕ್ಕೇ ಅವರನ್ನು ಮೀಯಲಿಕ್ಕೆ ಕಳಿಸಿದೆನೆಂದು ಹೇಳಿದೆ. ಅವರು ಬೇಗ ಬರುವ ಭರವಸೆ ಇಲ್ಲದಿರುವದರಿಂದ, ಸುರೇಶನ ಖಾಸ್ ಕೋಣೆಯಲ್ಲಿ ಗಟ್ಟಿಯಾಗಿ ಬಾಗಿಲಿಕ್ಕಿಕೊಂಡು, ಅವನಿಗೊಂದು ಸಿಗರೇಟು ಸೇದಿಸಿ, ನಾನೂ ಅರೆ-ಅರ್ಧ ಝುರುಕಿ ಎಳೆದು, ಚುಟುಚುಟು ಎನ್ನುತ್ತಿದ್ದ ಚಟವನ್ನು ಹಿಂಗಿಸಿಕೊಳ್ಳಲು ಅವಕಾಶ ಸಿಕ್ಕಿತು. ಸುರೇಶನ ರಿಝರ್ವ ಕೋಣೆಗೆ ಆಗಮಿಸಿ, ನಾನು ಗಟ್ಟಿಯಾಗಿ ಬಾಗಿಲಿಕ್ಕಿದೆ. ಸುರ್‍ಯಾ ಒಂದೇ ನೆಗೆತದಲ್ಲಿ ಹಾರಿ, ಪಲ್ಲಂಗಿನ ಮೇಲೆ ಪವಡಿಸಿ —

"ದಾದಲ್ಯಾ, ಬೆಳಗಾಂವ್ಯಾಗ 'ಆಕ್ಸಿಜೆನ್ ಗ್ಯಾಸ್' ತುಂಬೂ 'ಆರೇಂಜ್ ಮೆಂಟ್' ಅದs ಇಲ್ಲೋ? ಇಲ್ಲದಿದ್ದರ, ಸಂಜೀ ಮೇಲಿಗೆ ಪುಣೇದ್ದು ಒಂದು ಬರ್ಥನರ್‍s ರಿಜರ್ವ್ಹ್ ಮಾಡಸು. ಸಿನಿಯಾರಿಟಿ, ಮ್ಯೆಲೇಜದ್ದು ಕಮುರ-ಢೇರಿ ಬರಲಿಕ್ಕೆ ಹತ್ತಿತು."

ಎಂದ.

ಅಬ್ದುಲ್ಲಾ ಸಿಗರೇಟಿನ ಕೇಸನ್ನು ಸುರೇಶನ ಮುಂದೆ ಚಾಚುತ್ತ —

"ಸುರ್‍ಯಾs, ಮಗನs, 'ಆಕ್ಸಿಜನ್ ಗ್ಯಾಸ್'ಲೇ ಏನಾಗತದ? ಬಜರಂಗ ಬಲೀ ಥೇಟ ಓಮಾಲಯಕ್ಕ ಇನ್ನೊಮ್ಮೆ ಉಡ್ಡಾಣ ಮಾಡಬೇಕು. ಅಲ್ಲಿಂದ ಸಂಜೀವಿನೀನs ತರಬೇಕು. ಎರಡೂ ಖೋಕಾ ಹೀಂಗ ಅವs ಹೇಳೂ ಸೋವೀನs ಇಲ್ಲಾ. ಅಲ್ಲೆ ಕತವಾಸಿತಂದರ ಈ ಖೋಲಿಗೆ ಬಂದ ಬಿಡು. ಮೂರ ಫೂಟು ಉದ್ದಾ, ಎರಡು ಫೂಟು ಅಗಲಾ, ಈ ಗವಾಕ್ಷಾ, ಕೇವಲ ನಿನ್ನದಶಿಂದ, ಸದಾ

"ಸುಸ್ವಾಗತಮ್" ಅಂತ ತೋಳ ಚಾಚಿ ತಗದಿರತದ......ಏಳ ಸುರ್ರ್ಯಾ. ಮಗಸ್ಸ, ಏನ್ ಮಲಗತೀ. ಉತ್ತಿಷ್ಠತ...ಜಾಗೃತ...ಪ್ರಾಪ್ಯ ವರಾನ್... ನ್ನಿಭೋದತ" ಖಿಡಕೀ ಇಕಡೆ ಸುರ್ರ್ಯಾ, ಖಿಡಕೀ ಅಚೀ ಕಡೇ – ಬೆಳಗಾಂವೀ ಕಾರ್ರ್ಯಾರ್ಥೀ ಆಗಿ ಬಂದ ಸುರ್ರ್ಯಾನ ಕಾರಣಾ. ನಾ ನಿನ್ನ ಎ. ಡಿ. ಸಿ. ಆಗಿ. ಹೊರಗ ಆ ಮೋಕಾ ಸಂಬಾಳಸ್ತೀನಿ."

ಸುರೇಶ ಎದ್ದು ನನ್ನ ಬದಿಗೆ ನಿಂತು ಕಿಟಕಿಯಲ್ಲಿ ನೋಡಿದ. 'ಈಪ್ಸಿತಂ ತೇ ಸಂಪ್ರಾಪ್ತಮಸ್ತು' ಸಾಕಾರವಾಗಿ, ಕುರ್ಚಿಯ ಮೇಲೆ ಕುಳಿತು, ಇನ್ನೊಂದು ಕುರ್ಚಿಯನ್ನು ಕಾಲಿಗೆ ಆನಿಕೆ ಮಾಡಿಕೊಂಡು, ಹಳೆಯ ಫಿಲ್ಮ-ಇಂಡಿಯಾದಲ್ಲಿಯ, ಪೂರ್ಣ ಪುಟ ಆವರಿಸಿ ಕುಳಿತ ಸವಿತಾದೇವಿಯ ಚಿತ್ರ-ವೀಕ್ಷಣರತವಾದ, ಈಪ್ಸಿತ ಗಿರಾಕಿಯನ್ನು ನೋಡಿದ. ನನ್ನನ್ನೂ ನೋಡಿದ. ನಮ್ಮ ಕಣ್ಣು ಹಿರಿ-ಕಿರಿದಾಗಿ "ಹ್ಯಾಂಗ?" ಎಂದು ಮೂಕ ಪ್ರಶ್ನೆ ಮಾಡಿದವು. ಸುರ್ರ್ಯಾ, ಅಬ್ದುಲ್ಲಾ-ಸಿಗರೇಟಿನ ಖಮಂಗ-ವಾಸನೆಯನ್ನು ನಮ್ಮ ಮುಖದ ಮೇಲೆ ಬಿಟ್ಟ.

ಕು. ಚಿ. ಶಕೂನ ಪ್ರಥಮ ದರ್ಶನ ಚಾರ ಆಣೇ 'ಇಂಪ್ರೆಶನ್' ಹಾಕಿತು. ದಾದಲ್ಯಾ, ಇನ್ನುಳಿದ ಬಾರಾ ಆಣೆಯ ಭಾಸಗಡಿಗೆ ತೊಡಗಿದ.

ಮಲಗಿದವರನ್ನು ಸಹಜಾಸಹಜೀ ಎಬ್ಬಿಸಬಹುದು. ಆದರೆ ಟಕ್ಕು ಒಡಿದು ಮಲಗಿದವರ ಸೋಂಗನ್ನು ಮಾಡುವ ಠಕ್ಕರನ್ನು ಜಾಗರಿಸಲಿಕ್ಕೆ ಘನ ಪ್ರಯಾಸಮಾಡಬೇಕಾಗುತ್ತದೆ. ನಮ್ಮ ಶಿಷ್ಯಮಣಿ ಕು. ಚಿ. ಶಕೂ, ಈಗ ಸವಿತಾ ದೇವಿಯನ್ನು ಹಿಂದೆ ಸರಿಸಿ. ಮ. ರಾ. ರಾ. ಶ್ರೀ. ಬಾಬೂರಾವ್ ಪಟೇಲರು, ತಮ್ಮ ವಾಚಕರ ಸವಾಲಿಗೆ, ಗುಂಡಿನೇಟಿನಂತಹ ಮರುಸವಾಲು ಕೊಡುವ "ನಿಮ್ಮ ಪ್ರಶ್ನೆಗೆ ನನ್ನ ಉತ್ತರ" ವಿಭಾಗದಲ್ಲಿ ವಾಚನಗರ್ಕಳಾಗಿದ್ದಳು.

ಕಿರಿಬೆರಳು. ನಡುಬೆರಳು, ಹಿರಿಬೆರಳುಗಳನ್ನು ರಾಗಪೆಟ್ಟಿಗೆಯ ಮೇಲೆ ಸರಾಗವಾಗಿ ಎಳೆದು, ಸಾರಿಗ-ರಿಗಮ-ಗಮಪ ಕುಣಿಸಿ ಮಣಿಸುವಂತೆ, ಖಿಡಕಿಯ ಕಬ್ಬಿಣ ಸಲಾಕೆಯನ್ನು ಮೃದುಮಂದವಾಗಿ ಬಾರಿಸಿದೆವು. ಆಃ ಹಾಃ! ಏನು ಪೋಜಿನಲ್ಲಿ. ತನ್ನ ನವಿಲುಗೋಣನ್ನು ಈಷದ್ ವಾಲಿಸಿದಂತೆ ಮಾಡಿ, ಕಣ್ಣಿಗೆ ೧/೧೦೦ ಭಾಗದಲ್ಲಿ, ವೀಕ್ಷಣದ ಸರ್ವಸತ್ವವನ್ನೂ ಕೇಂದ್ರೀಕರಿಸಿ, ನಮ್ಮ ಶಕೂ ನೋಡಿದಿಳೆಂದಿರಿ! ನಾವು ಬೇಭಾನರಾಗಿ, ಕಣ್‌ರೆಪ್ಪೆ ಹೊಡೆಯುವಷ್ಟರ ಅವಕಾಶ ದಲ್ಲಿ ಮತ್ತೆ, ಮ. ರಾ. ರಾ. ಶ್ರೀ. ಬಾಬೂರಾವ್ ಪಟೇಲರ ಸವಾಲು-ಮರು

ಸವಾಲು ವಾಚನರತವಾದದ್ದು ಕಂಡಿತು. ಖುಷ್ ಆದ ಸುರ್ಯಾ. 'ಓವ್ಹಲ್‌ಶೇಪ್' ಕನ್ನಡಿಯ ಮುಂದೆ ನಿಂತು ಬ್ರಶ್-ಹಸ್ತನಾಗಿ, ಮುಖದ ತುಂಬ, ಸಾಬಾಣದ ಬುರುಗು ಹಚ್ಚಿಕೊಳ್ಳುತ್ತ —

"ಕಾಜಳ ಘಾಲೂ ಕಶಾಲಾ. ಸುವೇಗs ಕಾಜಳ ಘಾಲೂ ಕಶಾಲಾ"

ಎಂದು ಬಾಯಿಸಿಳ್ಳಿನಲ್ಲಿ ಮುರಲಿ-ವಾದನರತನಾಗಿದ್ದ.

ಇದೇ ಹಾಡನ್ನೇ ದಾದಲ್ಯಾ, 'ಗೋಗ್ರಾಸಂತು ಮಯಾ ದತ್ತಂ' ಧರ್ತಿಯಲ್ಲಿ. ಕಂಚಿನ ಕಂಠದಲ್ಲಿ ಜಾಗಟಿಸಿದ್ದರೆ. ಬರೇ ಆಕಳೇ ಏಕೆ. ಬರಡು ಮಹಿಷ ಕೂಡ ಮುಖಿಪತ್ತಿ ನೋಡುತ್ತಿರಲಿಲ್ಲ. ಮುರಲೀಧರ ಮಂತ್ರಮುಗ್ಧತೆಯ ಶಕ್ತಿ ಸರ್ವಸ್ವವನ್ನೂ ನಿರಾಯಾಸವಾಗಿ ತೇಲಿಬಿಟ್ಟಿದ್ದ. ಕಿಟಕಿಯ ಆಚೆಯ ರಾಧಿಕಾ. ಮೈಯನ್ನು ಕಿವಿ ಮಾಡಿ ಕೇಳುತ್ತಿದ್ದಳು. ಮುಖ, ಭಾವವಿಲಾಸರಂಗವಾಗಿತ್ತು. ಅಂತರಂಗದ ಗುದುಗುಲಿಕೆಯ ಸ್ಫುಟವಿಲಾಸ ಮುಖರಂಗದಲ್ಲಿ ವಿಹಾರಿಯಾಗಿತ್ತು. ನಮ್ಮ ಸರಿಗ-ರಿಗಮ-ಗಮಪದಲ್ಲಿ 'ಝಾರ್ಝ್'ವಾದನದ ಜೋರು ಬರತೊಡಗಿತು. ಟಕ್ಕು ಹಿಡಿದ ಠಕ್ಕ, ಈಗ ಅನಾಮತ್ತಾಗಿ, ಕಿಟಕಿಯ ಕಡೆಗೆ ಮುಖ ಮಾಡಿ. ಅದುಮಿ ಹಿಡಿಯಬೇಕೆಂದಿದ್ದರೂ ಕೈಮೀರಿ, ತುಟಿ ಮೀರಿ, ಮಿಂಚಿದ ಉಲುಕೋಚಿ ಹಾಸ-ವಿಲಾಸವನ್ನು ಮಿನುಗಿಸಿ —

"ದಾದಲ್ಯಾ, ಘಾಜಲಾs"

ಎಂದು ನುಡಿದು ಕಿಟಕಿಯ ಬಳಿ ಸಾರಿದಳು.

ನಾಕು ಆಣೆಯ 'ಇಂಪ್ರೆಶನ್' ಎಂಟು ಆಣೆಗೆ ಏರಿತು. ಇನ್ನುಳಿದ ಎಂಟು ಆಣೆಯ 'ಮೇಕ್-ಅಪ್' ಮಾಡುವ ಭಾರ ನಮ್ಮ ಮೇಲಿರಲಿಲ್ಲ. ಅದನ್ನು 'ಮೇಕ್-ಅಪ್' ಮಾಡುವ ಭಾರವನ್ನು, ಈಚೆಗಿದ್ದ ಈ ಗಂಡು, ಆಚೆಗಿದ್ದ ಆ ಹೆಣ್ಣು ನಮ್ಮ ಮೇಲೆ ಹೊರಸಲೂ ಇಲ್ಲ.

ಸಂಜೆಯ ಮುಂದೆ ಅವು ನಗುನಗುತ್ತ. ಬಂಗಲೆಯ ಗೇಟು ದಾಟಿ ವಾಯು ವಿಹಾರದ ಒಂದು ರೌಂಡ್ ಹೊಡೆದುಕೊಂಡು ಬರಲು ಹೊರಟಾಗಲೇ ನಮಗೆ ಅನಿಸಿತು: ನಮ್ಮ ರೂಪಾಯಿಯ 'ಟಾರ್ಜೆಟ್' ಮುಟ್ಟಿತೆಂದು.

ಕ್ರೌಂಚ-ಮಿಥುನ ಬಂಗಲೆಯ ಗೂಡನ್ನು ಬಿಟ್ಟು ಪಕ್ಕ ಫಡಫಡಿಸಿ ಹಾರುವ ಹಾದಿಯನ್ನೇ ಕಾಯುತ್ತ, ಉತಾವಿಳರಾಗಿ ಕುಳಿತ – ಜಾಂಬವಂತ ರಾ. ಸಾ. ಕೋಮರೇಮಾಮಾ, ಹನೂಮಂತ ಸಾಹೇಬರು ತಟ್ಟನೆ ಹಾಲಿನಲ್ಲಿ ಅವತರಿಸಿ

ಪರು. ತಮಗೆಲ್ಲಿ ತಡವಾಯಿತೋ ಎಂದು ಉಟ್ಟ ಸೀರೆಯ ಸೆರಗಿಗೇ ಕೈ ಒರಿಸಿ ಕೊಳ್ಳುತ್ತ. ಅಡಕಿಯ ಪುಡಿಯನ್ನು ಗಡಿಬಿಡಿಯಿಂದ ಮುಕ್ಕಿದ ಪ್ರಯುಕ್ತ, ಅದರ ಪುಡಿ ಇನ್ನೂ ತುಟಿಗೆ ಅಡರಿದ ಸೌ. ರಂಗಕ್ಕ ನಡುಮನೆಯಿಂದ ಧಾವಿಸಿ ಹೊರಗಿನ ಈ ದ್ವಿವೇಣೀ ಪ್ರವಾಹದಲ್ಲಿ ಸಂಗಮಿಸಿದರು.

"ಮಾಮಾ, ಪೇಪರ ಉಪರಾಟಿ ಹಿಡದೂ ಓದೂ ಸಂಪ್ರಯ ಮಾಡಿ ಕೊಂಡೀರಿ ಕಾಣಸ್ತದ?"
ರಾ.ಸಾ. ಠೋಮರೇಮಾಮಾ, 'ಕಾಳ' ಪತ್ರಿಕೆಯನ್ನು ಉಪರಾಟಿ ಹಿಡಿದು ಅವಸರ ದಿಂದ ಬಂದಿದ್ದರಲ್ಲ – ಅದಕ್ಕೇ ಶಿವಿದು ಕೇಳಿದೆ.

'ಕಾಳಾಯ ತಸ್ಮೈ ನಮಃ'. ದಾದಲ್ಯಾ ಸಪ್ರಯ ಮಾಡಿಕೋಳದ ಗತೀ ಇಲ್ಲಪ್ಪಾ, ಗತೀ ಇಲ್ಲಾ. ನಮ್ಮ ರಂಗೂ ಊಟಾ ಮಾಡಾಗ ಬಟ್ಟ ಚೀಪತಿದ್ದಳು. ಈಗ ಚಮಚಾ, ಕಾಚಾ, ಚೂರಿ ಕರತಲಾಮಲಕ ಮಾಡಿಕೊಂಡಾಳ. ಬಟ್ಟಿಗೆ, ನಾಲಿಗ್ಗೆ ಭೆಟ್ಟಿ ಆಗದs ಬಾರಾ ವರ್ಷ ಆತು. ನಮ್ಮ ರಂಗೂನ ಲಗ್ನ ಆದಮ್ಯಾಲ, ನಾಕ ವರ್ಷ ಅಳೇದೇವರು ದಾರೀ ಕಾಯಬೇಕಾತು; ಕಾಲ ಬದ್ಲಾತು. ಶಕೂ-ಸುರೇಶ ನಾಕ ತಾಸಿನ್ಯಾಗ ದೋಸ್ತೀ ಜಮಾಸಿಗೊಂಡರು. ಏನೋ ಅಂತಾರಲಾ, 'ಹನಿ'ಯೋ 'ಘನಿ'ಯೋ ಆ 'ಮೂನ'ಕ್ಕ ಹೊಂಟಬಿಟ್ಟರು. ಭಾಳ ಶಿಸ್ತ ನೋಡ ದಾದಲ್ಯಾ ಇದು. ಇದರಗೊಂಬೂದು, ಬಾಜಾ-ಬಜಂತ್ರೀ, ನಾಕ ರುಖ್ಪೋತಾ, ಎಂಟ ಉಟ್ನೀ – ಆsಂ, ಏನ ಲಿಗಾಡನs ಇಲ್ಲಾ. ಒಂದ ಉಣ್ಣೀ ಚೊಣ್ಣಾ, ಬಿಳೀ ಶರ್ಟಾ ಅಂವಾ, ಪಾಚವಾರೀ, ಇಷ್ಟ ಪಾವಡರಾ, ಅಷ್ಟ ಕಾಜ್ಯಳ ಇಕೀ, ಕೈಯಾಗ ಕೈ ಹಾಕ್ಕೊಂಡು ಹೊಂಟರ ಬಗೀಹರೀತು. ವರದಕ್ಷಿಣೆ ಉಗಾಸ್ತ್ಯಂತs ತಿಳೀಬೇಕು. ಅದಕೇನಪಾ 'ಕಾಳಾಯ ತಸ್ಮೈನ್ನಮಃ' ಅಂದದ್ದು. ದಾದಲ್ಯಾ, ಎಲ್ಲಾ ಠೀಕ ಜಮಾಸಿಧಾಂಗ ಕಾಣಸ್ತದ. ಹೋಳಿಗಿ ಏಳೂ ಭರೋಸ ಅದs ಅನಸ್ತದ?"
ರಾ. ಸಾ. ಠೋಮರೇಮಾಮಾ ಖುಷಿಯಲ್ಲಿ ಬಂದು ಕೇಳಿದರು.

"ಮಾಮಾ ನಿಮ್ಮ ಹೋಳಿಗೀ ಧ್ಯಾಸಾ ಹೋದ ವರ್ಷದಿಂದ ಸುರೂ ಆಗೇದ. ನಿಮ್ಮ ಹೋಳಿಗಿ ತುಪ್ಪದಾಗ ಬೀಳೂ ಲಕ್ಷಣ ಅವs."
ಸೌ. ರಂಗಕ್ಕ ಸಾಥ ಮಾಡಿದರು.

"ಲಕ್ಷಣೇನು? ಬಿದ್ಧಾಂಗಂತs ತಿಳೀರಿ."

ಹೋಳಿಗೆಯ ಮುಟಿಗೆಯನ್ನು ತುಪ್ಪದ ದೊನ್ನಿಯಲ್ಲಿ ಬುಡಮುಟ್ಟ ಅದ್ದಿ. ಗಂಟಲ ಕೆಳಗೆ ಸರಾಗವಾಗಿ ದೂಡಿದ ಹುಕಿಯಿಂದ ಸಾಹೇಬರು ಹೇಳಿದರು.

"ಇಂಥಾ ವಿಷಯದಾಗ ಧಾವತೀ, ಅವಸರಾ ಠೀಕ ಅಲ್ಲಾ. ಯಾತರದೂ 'ಓವ್ಹರ್ ಎಸ್ಟಿಮೇಟ್' ಮಾಡಬಾರದು. ಸುರೇಶ ಇನಾ, ನಾಕಾರ ದಿನಾ ಇರಾಂವ ಇದ್ದಾನ. ನಿಧಾನವಾಗಿ ಶಕೂ-ಅಂವಾ ಮಾತಕಥೀ ಆಡಲಿ. ಒಬ್ಬರ ಮನಸು ಒಬ್ಬರು ತಿಳಕೋಳಲಿ. ಅಳ್ಳಿ ಹಿಂಜಿ ಹಿಂಜಿ ಸ್ವಚ್ಛ ಆತಂದ್ರ, ನೂಲ ಎಳೀ ತಾನs ಹೊರಡಲಿಕ್ಕೆ ಹತ್ತುತ್ತದ. ಹರೀತು – ಕತ್ತರಿಸಿತು ಅನ್ನೂ ಅಂಜಿಕಿರೂದಿಲ್ಲಾ. ನಾ ಎಲ್ಲಾ ಬೇತಲೇನs ಬಾತಮೀ ತಗೀತೀನಿ. ಬರೇ ಹೋಳಿಗೀನೇ ಯಾಕs? ಜಿಲೇಬೀನs ಮುಣಗಸೂಣು ಅಖಂಡ ತುಪ್ಪದ ದೊನ್ನ್ಯಾಗ."
ನಾವು ಅಗದೀ ಪ್ರೋಕ್ತ ಆಗಿ ಮಾತಾಡಿದೆವು.

"ದಾದಲ್ಯಾ, ಅಗದೀ ರಾಸ್ತ ಮಾತ ಹೇಳಿದಾ. ಬರೋಬರೀ ದಾದಲ್ಯಾ ನಿನ್ನ ಮಾತು. I entirely agree with you."
ಸಾಹೇಬರು ಖುಷಿಯಲ್ಲಿದ್ದಾಗ ಇಂಗ್ರೇಜೀ ಪಲ್ಟೀ ಹೊಡೆಯುತ್ತಾರೆ. ಈಗ ಅದರ ಮಾಸಲೇ ತೋರಿಸಿದರು.

"ಸುರೇಶ-ಶಕೂ ಇಬ್ಬರs ಕೂಡಿ ಇರಬೇಕು. ಮಾತ-ಕಥೀ ಆಡಲಿಕ್ಕೆ ಅವರಿಗೆ ಬಕ್ಕಳ ವ್ಯಾಳ್ಯಾ ಸಿಕ್ಕಿರಿಬೇಕು. ಹಾಂಗ ಮಾಡೂದು ಠೀಕಾ. ನಾವು ಅಗದೀ 'ಅಲೂಫ್' ಇದ್ಧಾಂಗ ಇದ್ದಬಿಡೂಣು......"

"ನಾಳೆ ಬೇಕಾರ ನಾ ಟೂರ್ ಮ್ಯಾಲ ಹೋಗತೀನಿ"
ನನ್ನ ಮಾತನ್ನು ಅರ್ಧದಲ್ಲಿ ತುಂಡರಿಸಿ. ಬಹಳೇ ನಿರ್ಲಿಪ್ತರಾಗಿರುವ ಆಶ್ವಾಸನ ಕೊಡುತ್ತ ಸಾಹೇಬರು ಹೇಳಿದರು.

"ಅದೂ ಠೀಕ ಅಲ್ಲಾ. ಸುರೇಶಗ ಅನಿಸಿರಬೇಕು: ನೋಡಪಾ, ನಾ ಬಂದೆ – ತಾಂವು ಹೊಂಟಬಿಟ್ಟರು ಅಂತs. ಅಕಡೆ ಇಕಡೆ ಜೂರ ಚಾರು ತಲೀ ಎಬ್ಬಿಸಧಾಂಗ ಆಫೀಸಿನ ಮಾತ-ಕಥೀ ನೀವು ಆಡಿಕೋತ ಇದ್ದರ್‍ಯಂದರ ಅಂವಗೂ ಅಷ್ಟs 'ಚೇಂಜ್' ಅನಸ್ತದ."

"You are perfectly right ದಾದಲ್ಯಾ"
ಸಾಹೇಬರ ದ್ವಿತೀಯ ಪಲ್ಟೀ.

ಎರಡೂ ಖೋಕಾಗಳನ್ನು ಲಂಬರ್ ರೂಮಿನಲ್ಲಿ ಒಗೆದೇನೆಂಬ ಧೈರ್ಯ ಬಂದಿತು.

"ರಂಗಕ್ಕಾ, ನೀವ್ ಮಾತ್ರ ಒಂದಿಷ್ಟು ಲಕ್ಷ ಇಡಬೇಕು. ಹೆಣ್ಮಕ್ಕಳ ದೃಷ್ಟೀ ಅಂದರ ಅಚೂಕ ಹೇರ ತಗೀತಿರತದ. ಪಾತಾಳಗಡ್ಡೀ ಇದ್ಧಾಂಗ. ಸುರೇಶ ನಾಳೆ ನಿಮ್ಮ ಅಳ್ಯಾ ಆಗಾಂವಾ. ಅವಾ. ರೀತಿ-ರಿವಾಜು, ಪ್ರೋಕ್ತ-ಪಣಾ ಹ್ಯಾಂಗ ಅನೂದರ ತಾಂಪಿಕಿರೂದು ಠೀಕಾ. ಬರೇ ನಾ ಹೇಳಿದೆ ಅನ್ನೂ ಭಿಸ್ತ ಬ್ಯಾಡಾ. 'ಚಕ್ಷುರ್ವೈ ಸತ್ಯಂ' ನೋಡಿ. ಖಾತ್ರೀ ಮಾಡಕೋಬೇಕು. ಶಕೂ. ನಿಮ್ಮ ಮುಂದ ತನ್ನ ಮನಸ್ಸ ಬಿಚ್ಚೂಹಾಂಗ. ನಮ್ಮ ಮುಂದ ಮಾತಾಡೂದು ಶಕ್ಯ ಇಲ್ಲಾ. ಹಾಲ್-ಚಾಲೀ. ಮಾತಿನ ರೀತೀ ಮ್ಯಾಲs, ನೀವು ತಾಣಸ್ತೀರಿ. ನಿಮಗ ನಮ್ಮ ಹಾಂಗ ವ್ಯಾಳ್ಯಾ ಹಿಡಿಯೂದಿಲ್ಲಾ. ಇಲ್ಲೆ ಎಲ್ಲಾ ಜಮಾಸೇದ ಅನೂ ಖಾತ್ರೀ ಆದ ಮ್ಯಾಲ. ಸಹ್ಯಜ ಬೇಕಾರ ಶ್ಯಾಮರಾಯರಿಗೆ ತಿಳಿಸೂಣು. ಅವರೂ ಬಂದ ಹೋಗಲಿ. ಹುಡಗಾ, ಹುಡಗಿನ್ನ ಒಪ್ಪ್ಯಾನಂದರ ಬಗೀನs ಹರೀತು. ಅವರು ಮಮ ಅನ್ನೂದು ಸುದ್ದೇ ಜರೂರ ಇಲ್ಲಾ. ಸುರೇಶನ ಬೆನ್ನಿಗೇ ಪ್ರಣೇಕ್ಕ ಹೊಂಟ ಬಿಡೂಣು. ಕಾಕಾ-ಸೋನಕ್ಕಾ ಅವರಿಗೆ ಶಕೂನ್ನ ತೋರಸೂಣು. ಅವರದೂ ನಕಾರ ಬರಲಿಕ್ಕಿಲ್ಲಾ. ಸುರೇಶಗ ಒಪ್ಪಿಗಿದ್ದರ ನಮ್ಮದೇನೂ 'ನಾ' ಇಲ್ಲಂತ ಅವರೂ ಹೇಳತಾರ. ಲಗ್ನ-ಮಾಸೇನು ಹುಸೀ ಹೋಗೂದಿಲ್ಲಾ."

"ಅಗದೀ ವಾಜಮಿ ವಿಚಾರ ನಿಂದು ದಾದಲ್ಯಾ. ಕರ್ಣಾ-ಅರ್ಜುನ ಸುದ್ದೇ ನಿನ್ನ ಹಾಂಗ ಬಾಣ ಬಿಡಲಿಲ್ಲಾ. ಅಚೂಕ ನಿನ್ನ ಗುರೀ"
ರಾ. ಸಾ. ತೋಮರೇಮಾಮಾ ಅವರ ಸರ್ಟಿಫಿಕೇಟು.

ಎರಡು ದಿನ ಲೀಲಾಜಾಲವಾಗಿ ಕಳೆದವು.

ಸುರೇಶ ಬಂದ ಮೂರನೇ ದಿನ ರಾತ್ರಿಯ ಊಟವಾದ ಮೇಲೆ, ರಾ. ಸಾ. ತೋಮರೇಮಾಮಾ, ಸಾಹೇಬರು, ರಂಗಕ್ಕ ಯಾವುದೋ ಮರಾಠೀ ನಾಟಕ ಮಂಡಳಿಯ "ಆಗ್ರ್ಯಾಹೂನ ಸುಟಕಾ" ನಾಟಕ ನೋಡಲು ಹೋದರು. ಬಂಗಲೆಯಲ್ಲಿ ನಾವು ಮೂವರೇ ಆದೆವು. ಕೈದೋಟದಲ್ಲಿ ಕುರ್ಚಿ ಹಾಕಿಸಿಕೊಂಡು, ಗುಂಡು ಟೇಬಲ್ ಸುತ್ತುವರಿಸಿ, ಪಾನ ತಮಾಖೂ ಸೇವನರತರಾದೆವು.

"ಸುರ್ಯಾ. ಸಾಂಗಲೀ ನೆನಪ ಬರತದ ನೋಡು. ಅಲ್ಲೂ ಹೀಂಗs. ನಾನು, ವಸೂ, ವಿಶ್ಯಾ. ದಸ್ತಗೀರ್ಯಾ ಜಮಾಸೂದು. ಬಾರಾ ಒಂದಕ್ಕೇ ಏಳೂದು." ನಾನು.

"ದಾದಲ್ಯಾ. ಡಿಸೆಂಬರದಾಗ ವಿಶ್ಯಾ ಬಂದಿದ್ದಾ. ಒಂದ ದಿನಾ ನಾನು, ಅಂವಾ,

ತಾಯೀ ಏಳ ಮಕ್ಕಳ ತಾಯಿ ಹರಟಿಗೆ ಕೂತರ, ಬೆಳಗಮುಂಜಾನೆ ಐದಕ್ಕ. ಕಾಕಾನ ಖೋಲ್ಯಾಗಿಂದ "ಪ್ರಭಾತೇ ಮನೀ ರಾಮ ಚಿಂತೀತ ಜಾವಾ" ಕೇಳಿ ಬಂದಾಗs ಗೊತ್ತು, ಬೆಳಗ ಆತಂತs."

"ಕಾಕಾ ರಾಮನ್ನ ಚಿಂತಿಸಿಗೋತ ಎದ್ದರು. ನೀವಿಬ್ಬರೂ ರಾಮಧ್ಯಾನ ಮಾಡಕೋತ ಬಾರಾತ್ತನಕಾ ಮಲಗಿದಿರಿ. ನನಗ ಗೊತ್ತದ ಸುರ್‍ಯಾ."

"ಸುರೇಶ. ದಾದಲ್ಯಾ. ಮಾಮಾ ಅವರ್‍ನ ಲಂಬರ ರೂಮದ ಕಡೇ ಹೊತ್ತ ಹಾಕ್ಯಾನ. ಇಲ್ಲದಿದ್ದರ, ಇನಾ ನಾಕ ಆಗಿರೂದಿಲ್ಲಾ "ಮನಾ ಪಾಹತಾ ಸತ್ಯ ಹೇ ಮೃತ್ಯುಭೂಮೀ" ನಿನ್ನ ಖೋಲ್ಯಾಗ 'ರಿಸೌಂಡ್' ಆಗತಿತ್ತು. ಈಗೇನು ಅವರ ಅಂಜಿಕಿಲ್ಲಾ. ನಾಳೆ ಮುಂಜಾನೆ ಅವರೆಲ್ಲಾ ಏಳೂದರಾಗs ಇಲ್ಲೀದ ಜಾರಿ ಬಿಡೂಣು. ದಹಾ ಅನ್ನೂದರಾಗ ಆಂಬೋಲೀ ಘಾಟದಾಗ ಇರತೇವು. ಒಂದ ದಿನಾನರೇ ಮಾಮಾ-ಅಳ್ಯಾನ ಕಿಟಿಕಿಟಿ ತಪ್ಪತದ. ದಾದಲ್ಯಾ ಇದ್ದಿದ್ದಿಲ್ಲಾ ಅಂದರ. ಅವರು ತಮ್ಮಷ್ಟಕ್ಕ ತಾವು ಇರತಾರ. ಇಂವಾ ಬಂದಾ ಅಂದರs ಮುಗೀತು. ಇಬ್ಬರದೂ ಸ್ಕೇಲ, ಸಿನಿಯಾರಿಟೀದು ಖಡಾ ಜಂಗೀ ಸುರೂ ಆಗತದ. ದಾದಲ್ಯಾ ಮಲ್ಲಿಕ. ನನಗೇನಂತಾಸಂದೀ – ಶಕೂ, ನಾಳೆ ನಿಂದೇನರs ಲಗ್ನ-ಗಿಗ್ನ ಠರಾಸಿ. ಯಾದೀ ಮಾಡೂ ಪ್ರಸಂಗ ಬಂದರ. ಅಳ್ಯಾಗ ಸೂಚನಾ ಮಾಡತೀನಿ: ಮಾರಾಯಾ, ಹುಂಡಾ ಬಿಟ್ಟರೂ ಬಿಡು. ನೀನು ಈ ಮನ್ಯಾಗ ಇರೂತನಕಾ ಇವರಿಬ್ಬರು ಬ್ರ ಅಂತ ಬಾಯಿ ಬಿಡಬಾರದು ಅನ್ನೂ ಕರಾರ ಹಾಕಂತ. ಮೊನ್ನೆ ಮುಂಜಾನೆ ನೀವು ಮಾತಾಡಿಕೋತ ಕೂತಿದ್ರ್ಯಲಾ. ಆಗ ಬ್ಯಾಸತ್ತು ದಾದಲ್ಯಾ ಆ್ಯಂs ಅಂದಾ. ತಿಳೀತಿಲ್ಲೋ? ಅದು ದಾದಲ್ಯಾನ 'ಕಾ:ಶನ್ನ'ದ 'ರೆಡ್-ಸಿಗ್ನಲ್' ಇದ್ಧಾಂಗ ಅವರಿಬ್ಬರಿಗೂ."

"ಸುರ್‍ಯಾ. ಶಕೂನಲ್ಲೆ ವಸೂನ ಅಂಶ ಅದs ಅಂ"

ನಾನು.

"ಏನ್ ಮಗನs. ಇಂದs ಠಾಂವಿಕಿ ಆದಾವ್ರಗತೀಲೇನs ಮಾತಾಡ್ತೀ? ನಿನ್ನ ಟ್ರೇನಿಂಗ್ ಆಗೇದ ಆಕೀಗೆ. ಬರೇ ನಿನ್ನ ಫಾಳಿ ತಾಕಿದರ ಸಾಕು ದಾದಲ್ಯಾ. ಆಗನೀ ಮುಂದಿನ ಜೋರ್ನಲ್ ಸುದ್ದೀ ಅವಲ್ಯಾ ಎದ್ದ್ಹಾಂಗ ಏಳತದ. ಕೈಬಾಯಿ ಗುಣಾನs ಅಂಥಾ ಊಜ ಅದs ನಿಂದು. ದಾದಲ್ಯಾ. ಕಾಕಾ ನಿನ್ನ ಭಾರೀ ನೆನಸ್ತಾರ. ನಿನ್ನs. ವಸೂನ್ನs ಕರಸಂತs, ವಿಶ್ಯಾಗ ಅಗಾವ ನೋಟೀಸs ಕೊಟ್ಟಾರ."

ಸುರೇಶ.

"ಇನ್ನೊಂದು ಇಸವು ಭರತೀ ಆತ ಸುರ್‍ಯಾ. ಅಷ್ಟೊತ್ತಿಗೆ ಮನೀ ತುಂಬಿಸಿಗೊಂಬೂ ಪ್ರಸಂಗ ಬಂದರಂತೂ, ತುಪ್ಪದಾಗ ನಮ್ಮ ಹೋಳಿಗೀ ಮುಟಿಗೀನೇ ಬಿದ್ಧಾಂಗ"

"ಮಗನs, ನೀ ನಮ್ಮ ಮನೀ ಪುರೋಹಿತಾ. ಅಕ್ಷತಾದ ಬಟ್ಟಲಾ ನಿನ್ನ ಕೈಯಾಗs."

ಸುರೇಶ.

"ನಿಂದರಾ ಭಡಜೀ. ಇನಾ ನಮ್ಮ ರಂಗಕ್ಕಗ ಪೀತಾಂಬರ ಉಟಗೊಂಡು ಪುಣೋಚನಕ್ಕ ಕೂಡೂ ಹೌಸ ಅದs. ಈಗೇ ಗಡಿಬಿಡಿ ಮಾಡಿ ಅಕ್ಷತಾ ಹಾಕಿದ್ಯಂದ್ರ. ಅಕೀ ನಿನ್ನ ಲಗ್ಗಂದಾಗs ಉಟಗೋಬೇಕಾದೀತು ಪೀತಾಂಬರಾ."

ಶಕೂ.

"ಸುರ್‍ಯಾ 'ಲೆವಲ್' ಏರಲಿಕ್ಕೆ ಹತ್ತಿತು. Point naught five ಅಷ್ಟs ಅಂತರಾ. ವಸೂನ ಸನಸನೇ 'ಸ್ಟ್ಯಾಂಡರ್ಡ್'ಕ್ಕ ಬರತ್ವದ ಇಲ್ಲ ಹೇಳು ಇಸವಾ. ದಾದಲ್ಯಾನ 'ಸಿಲೆಕ್ಶನ್' ಅಂದರ 'ಪಬ್ಲಿಕ್ ಸರ್ವಿಸ್ ಕಮೀಶನ್'ದ 'ಚೇರ್‌ಮನ್' ಸುದ್ದೇ ಬಾಯಾಗ ಬಟ್ಟ ಇಟ್ಟಿರಬೇಕು."

ನಾನು.

"ಯಾರ ಬಾಯಾಗ ಯಾರು ದಾದಲ್ಯಾ? ನಿನ್ನ ಬಾಯಾಗೋ ತನ್ನ ಬಾಯಾಗೋ?"

ಸುರೇಶ-ಶಕೂರ ಏಕಕಂಠದಿಂದ ಕೇಳಿಕೆ ಬಂತು.

"ಆಹಾ. ಏನ ಯುತೀ ಅಂದೀ. ಬರೇ ಹೊರಗೇ ಜವಾಸಿಲ್ಲ ನಿಮ್ಮದು. ಒಳಗೂ ಘನ ತಳಕ ಬಿದ್ದsದಂತ ಹೀಂಗ ಒಂದೇ ಧನಿ ಹೊರಡತದ. ರಂಗಕ್ಕಗ ಪೀತಾಂಬರ ಉಟಗೋಳಿಕ್ಕೆ ವ್ಯಾಳ್ಯಾ ಹಿಡಿಯೂದಿಲ್ಲಾ. ಸಾಹೇಬರಿಗೇ ರುಮಾಲ ಸುತಿಗೊಂಬೂದು ಒಂದಿಷ್ಟು ಎಡಚ ಹೋದೀತು. ನಾಳಿನಿಂದ ಅಷ್ಟ 'ಪ್ರಾಕ್ಟಿಸ್' ಸುರೂ ಮಾಡರೀ ಅಂತ ಹೇಳಿ ಇಡತೀನಿ. ಅಷ್ಟೂ ಮೀರೀ ಜವಾಸಲಿಲ್ಲಂದರ ಶೋಮರೇಮಾವಾಗ ಹೇಳಿದರಾತು. ನೀವs ಸುತಿಗೊಂಡು ಸಾಹೇಬರ ತಲೀ ಮ್ಯಾಲ ಇಡರ್‍ಯಂತ. ಲಾರ್ಡ ಕರ್ಜನ್‌ನ ಕಾಲಕ್ಕ ಡೀ.ಡೀ.ಸಿ. ಮಾಡಿದ ತಲೀ ಅದ ಅದು. ಒಳಗ ಖೋಕಾ ಇರವಲ್ಲದ್ಯಾಕ. ಮ್ಯಾಲ, ಮಂಡಿಗಿ ಏಳೂವಷ್ಟು ಘಟ್ಟಿ

ಅದs. ಅಂತೂ ನಾಳೆ 'ಡೇಲಿ ಪ್ರೊಗ್ರೆಸ್ ರಿಪೋರ್ಟ್' ಒಪ್ಪಸಾಗ, 'ಕುಛ್ ಪರಗೀಜ ನಹೀ' ಅಂತ ಬರೀ ಅಂತೀರಿಲ್ಲೋ?"

"ಯಾತರ ದಶಿಂದ?"

ಗೊತ್ತಿದ್ದೂ ವ್ಯರ್ಥ ಸುರೇಶನ ಕಿತಿಬಿ.

"ಬೆಳತನಕಾ ಕೇಳಿದ್ಯಲ್ಲೋ ಮಾಹರಾಯಾ, ರಾಮಾಯಣಾ. ನೀ ಏನ ಪೃಚ್ಛಾ ಮಾಡಿದರೂ ಸೀತಾ, ರಾಮುಗೇನು ತಂಗಿ ಆಗೂದಿಲ್ಲಾ. ಕುಂಕುಮ ಕಾಂಕ್ಷಿಣೀ ಶಕೂ ಸುರ್ಯಾಗ ಬಿಡದ ಕರ್ಮನ್s ಆಗಾಕಿ."

ನಾನು.

"ಹೇಃ ಅಳವಳ್ಳಾ."

ಶಕೂ.

"ಹೇಃ ಅಂದರ ಹೂಂ ಮಾರಾಯಳs. ಸೋಳಾ ಆಣೇ ಪೀಕ ಬರತsದೋ ಇಲ್ಲಂತ, ಸುರ್ಯಾ ಬಂದಾಗಿನಿಂದೂ ಧೇನಸ್ತಿದ್ದೆ. ಸೋಳಾ ಆಣೇ ಸತ್ರಾ ಪೈ ಬಂತೂ. ಚಲೋ ದಿಲ್ಲೀ ಪುಕಾರಕೇ. ಇನ್ನೇನು ಧಾಸ್ತೀ ಇಲ್ಲಾ. ನಿನ್ನ ಆರನೇ ಎತ್ತೆ ಪಾಸ ಮಾಡಿಸಿದಾಗ, ನೂರ ರೂಪಾಯಿ, ಎರಡ ಭಾಂಡ ಹೊಡದಿದ್ದೆ. ಇನ್ನಂತೂ ಕೇಳೂದೇನು? ಎರಕೊಂಬೂ ಅವರ ಬುಡಕ ಬಗ್ಗ್ಯರs ಕಾಕ-ಸ್ನಾನಾ ಬಗೀಹರಸವರ್ಗ್ಹಾಂಗ ನಮ್ಮದೂ ಅಷ್ಟು ಎಲ್ಲ್ಯರ ಜಮಾಸಿದರ ನೋಡೇಬಿಡ ತೇವು. ಅನಾಯಾಸಾ ರಂಗಕ್ಕಾ ಪೀತಾಂಬರ ಉಟಗೊಂಡೇ ಇರತಾರ"

ನಾನು.

"ಶಕೂ, ಹ್ಯಾಂಗ ಘಮಘಮಾಡಸ್ತದ ನೋಡು ಮಲ್ಲಿಗಿ!"

ಸುರೇಶ.

"ಒಂದ ಕಡೇ ಕಸ್ತೂರಿ, ಇನ್ನೊಂದು ಕಡೆ ಕೇಶರಾ ಆಗದೀ ಎದರಿಗೇನs ಇದ್ದಾಗ ಘಮಘಮಾಡಿಸದs ಏನ ಮಾಡೀತಪಾ? ತಗೀ ಸುರ್ಯಾ ಅಬ್ದುಲ್ಲಾ. ಹಚ್ಚು ಇನ್ನೊಂದು. ಈಗ ಆಗ್ರಾದಿಂದ ಸುಟಕಾ ಆಗಿ ಮಂಡಳೀ ಬಂದಿತಂದರ ಸಿಗರೇಟಕ್ಕ ರಾಮ್‌ರಾಮ್ ಶೋಕಾಸೂದs. ನಿಧಾನ, ನೀ ಶಕೂಂದು, ಶಕೂ ನಿಂದು ವಿಚಾರಮಾಡಿಕೋತರ ಮಲಗತೀರಿ. "ಅವಿದಿತಗತಯಾಮಾ ರಾತ್ರಿರೇವ ವ್ಯರುಸೀತ" ಆಗತದ ನಿಮುಗ. "ಮನಾ ಪಾಹತಾ ಸತ್ಯ ಹೇ ಮೃತ್ಯುಭೂಮೀ" ದರ್ಶನ ಮಾಡಿಸಿಗೋತ ಶೋಮುರೇಮಾಮಾ ನಮುಗ ಕಣ್ಣಿಗೆ ಕಣ್ಣ ಹಚ್ಚಿಗೊಡೂ

ದಿಲ್ಲಾ. ಸುರ್ಯಾ, ನಾಳೆ ಹೀಂಗ ಮಾಡರಿ: ಅಂಬೋಲಿಗೆ ನೀವಿಬ್ಬರs ಹೋಗರಿ. ಅಲ್ಲೆ ಎಲ್ಲಾ ವ್ಯವಸ್ಥಾ ಇದ್ದರೂ ಸಾಹೇಬರು ಜಾದಾ ಕಾಳಜೀ ಅಂತ ನಿಮ್ಮ ಜೋಡೀನೇ ಬರವರು. ನಾ ಅನರ್ಸ್ನ ಇಲ್ಲೇ ಅಟಕಾಸಿ ಇಡತೀನಿ. ಇಲ್ಲದಿದ್ದರ ಘಾಟದ ಹಾದ್ಯಾಗs ರಸ್ತೇಮ್ಯಾಲಿನ ಖಡೀ ತೋರಿಸಿ, ಇದು ನಮ್ಮ ಬೀಟದಾಗಿಂದು; ಈ ಪೂಲ ನಾ ಕಟ್ಟಿಸಿದ್ದು ಅಂತ ಅವರು ಹೇಳೂದನ್ನ ಕೇಳಿಕೋತ ನಿಂತ್ಯಂದ್ರ. ಶಕೂ ಅಶೋಕ-ವನದಾಗ ಸೀತಾ ಕೂಥಾಂಗ ಮೋಟರದಾಗs ವಸ್ತೀ ಮಾಡಬೇಕಾಗತದ. ನೀನು ಮಾರುತೀ ಹಾಂಗ ಖಡೀ ಮ್ಯಾಲ ನಿಂದರಬೇಕಾಗತದ. ಬರೋಬ್ಬರಿ ನಾಕ-ನಾಕೂವರೀಗೆ, ಜಹಾ ಮಾಡಿಸಿ ಎಬ್ಬಸ್ತೀನಿ. ಜಹಾ ಕುಡದವರs ಸಪ್ಪಳಾಗಧಾಂಗ ಹೊರಬೀಳರಿ. ಬಂದ ಮ್ಯಾಲ ಸಾದ್ಯಂತ ಹಕೀಕತ್ ಒಪ್ಪಸರಿ. ಆವರದೇನು ಜರೂರಿ ಇಲ್ಲನ್ನು. ತಾನs ತಿಳೀತದ. 'ಜರಾ ಅಜ್ಜೀ ತರೇಸೀ ಸವಾಲಕೂ ಜಾವ್' ಅಂದರಾತು."

16726

"ಹಃ ಫಾಜಲಾ !"

ಶಕೂ.

ಸುರೇಶ-ಶಕೂರ ಕೂಡ ನಾನು ಅಂಬೋಲಿಗೆ ಹೋಗದಿದ್ದುದು ಒಳ್ಳೆಯದೇ ಆಯಿತು. ನಾನು ಹೋಗಿದ್ದರೆ ಅವರಿಗೆ ಅಡೆ-ತಡೆ ಆಗುತ್ತಿರಲಿಲ್ಲ. ಅವರು ತಾವು ತಾವೇ ಮಾತಾಡಿ – ಏಕಾಂತವಾಗಿ ಸುಖ-ದುಃಖ ಹೇಳಿ ಕೇಳಿಕೊಳ್ಳುವದು, ಒಂದು ಖಚಿತ ನಿರ್ಣಯಕ್ಕೆ ಬರುವದು ಅಗತ್ಯವಿತ್ತು. ಸಾಧಾರಣವಾಗಿ ಅವರು ನಿರ್ಣಯಕ್ಕೆ ಬಂದೂ ಆದಂತಿತ್ತು. ನಿನ್ನೆ ರಾತ್ರಿ ಮಲಗುವಾಗಲೇ ಸುರೇಶನಿಗೆ ಕೇಳಿದ್ದ —

"ಸುರ್ಯಾ, 'ಯಸ್' ಹೌದಲ್ಲೋ ?"

ಎಂದು. ಅದಕ್ಕ ನೇರವಾಗಿ ಉತ್ತರಿಸದೆ —

"ಮಗನs 'ಕನ್‌ಫರ್ಮೇಶನ್' ಬಾಯಿಂದ ಹೊರಡಸೂ ಹಟಾ ಯಾಕs" ಎಂದು ಸುರೇಶ ಉತ್ತರಿಸಿ 'ಕನ್‌ಫರ್ಮೇಶನ್'ದ ಶಿಕ್ಕಾ-ಮೊರ್ತಬ್ಬ ಮಾಡಿದ್ದ. ಕು. ಚಿ. ಶಕೂ "ಹೇ ಅಳವಳ್ಳಾ" ಅಂದಿದ್ದಳು. ಪ್ರಶ್ನೆಯೇ ಮುಗಿದಿತ್ತು. ಮನೆಯಲ್ಲಿಯ ಎರಡು ಖೋಕಾ ಹಾಗೂ ರಂಗಕ್ಕನಿಗೆ ವರದಿ ಒಪ್ಪಿಸಿದೆ.

"ಶ್ಯಾಮರಾಯರನ್ನ ಕರಸಲಿಕ್ಕೆ ಅಡ್ಡೀ ಇಲ್ಲ ಅಂಥಾಗಾತು. ಅವರ ಕಿಂವಿ ಮ್ಯಾಲ ಇಡೂದು ಉತ್ತಮಾ. ಅಪಾ. ನಮ್ಮ ಪರೋಕ್ಷದಾಗ ಮುಡುಗನ್ನ ಒಡ

ಕೊಂಡರು ಅಂದಿರಬಾರದು. ಏನಂತೀರಿ ಮಾಮಾಸಾಹೇಬ?"

ಸಾಹೇಬರು ಏಕದಮ್ ಪ್ರೋಕ್ತರಾಗಿ ಮಾತಾಡಿದರು:

"ನಾನೂ ಅದನ್ನs ಹೇಳಾಂವ ಇದ್ದೇ"

ರಾ. ಸಾ. ತೋಮರೇಮಾಮಾ ದನಿಗೂಡಿಸಿದರು.

ಈಗ ನಮಗೆ ನಿಜವಾಗಿಯೂ ಹೊಟ್ಟೆಕಡಿತ ಸುರುವಾಯಿತು. ಶ್ಯಾಮರಾಯ ಬಂದು ಏನು ಮಾಡುತ್ತಿದ್ದ? ಸಾಹೇಬರಿಗೆ 'ಯಸ್-ನೋ' ಎರಡೂ ಹೇಳುತ್ತಿರಲಿಲ್ಲ. ಆ ಅಧಿಕಾರ ಅವನಿಗೆ ಇರಲೇ ಇಲ್ಲ. ಸುರೇಶ ಅಟಕೇಪಾರ ಆಗಿದ್ದ. ಅವನೇನೂ ಕಿದ್ದಿ ತೀಡಿದರೆ ಶ್ಯಾಮರಾಯನ ಬಲವಂತಕ್ಕೆ ಅವನ ಬಂಪುಕೆಯ ಸೂತ್ರದ ಗೊಂಬೆಯಾಗುವಂತಿರಲಿಲ್ಲ. ಶಕೂನ ಸಹವಾಸ ಬಿಡಿಸಿ ಊರಿಗೆ ಕರೆದುಕೊಂಡು ಹೋಗಿದ್ದರೆ. ಸುರೇಶ ಒಂದೆರಡು ದಿನ ಅವನ ಕೂಡ ಹೋಗಬಹುದಾಗಿತ್ತು. ಈಗ ಅದೂ ಅವನಿಗೆ ಅಸಾಧ್ಯವಾಗಿತ್ತು. ವಾಡೆಯಲ್ಲಿ ಬಸವಂತಿ ಇದ್ದಳು. ಅವಳ ದರ್ಶನ ಸುರೇಶನಿಗೆ ಅಕಾಲದಲ್ಲಿ ಘಟಿಸುತಿತ್ತು. ಸುರೇಶ ಬೆಳಗಾಂವಿಗೆ ಬಂದ ಕಾರಣ ಅವಳಿಗೆ ವಿದಿತವಾಗುತ್ತಿತ್ತು. ಅವಳು ತಾನಾಗಿಯೇ ಮಧ್ಯಸ್ಥಿಕೆ ವಹಿಸಿ, ಸುರೇಶ-ಶಕೂರ ಕಲ್ಯಾಣದ ಶ್ರೀಕಾರವನ್ನು ಬರೆಯುತ್ತಿದ್ದಳು. ಶ್ಯಾಮರಾಯ ಪ್ಯಾಲಿಸಾಗುತ್ತಿದ್ದ. ಅವನಿಗೆ ಈ ವಿಷಯದಲ್ಲಿ ಒಪ್ಪಿಗೆ ಕೊಡದೆ ಅನ್ಯ ದಾರಿ ಉಳಿಯುತ್ತಿದ್ದಿಲ್ಲ. ಅವನು ಹೂಂ ಎಂದಿದ್ದರೆ – ತಂದೆಯೆಂಬ ನಾತೆಯಿಂದ ಮುಂದಿನ ವ್ಯವಸ್ಥೆಗೆ ಹತ್ತಬೇಕಾಗುತ್ತಿತ್ತು. ಇಲ್ಲ – ವ್ಯವಸ್ಥೆಯ ಚಿಟಿಪಿಟಿ ನಡಿಸಿರುವೆನೆಂಬ ನಟನೆಯನ್ನಾದರೂ ಮಾಡಬೇಕಾಗುತ್ತಿತ್ತು. ಅದು ಬಹಳ ದಿನ ನಡೆಯುತ್ತಿರಲಿಲ್ಲ.

ಅಲ್ಲಿ ಬಸವಂತಿ ಅವನನ್ನು ಈ ಬಗ್ಗೆ ಕಾಡುತ್ತಿದ್ದಳು. ಇಲ್ಲಿ ರಂಗಕ್ಕ-ಸಾಹೇಬರು ತಗಾದೆ ಹಚ್ಚುತ್ತಿದ್ದರು. ತಾವೇ ಪುಣೆಗೆ ಪ್ರಯಾಣಿಸಿ. ಕಾಕಾ-ಸೋನಕ್ಕರನ್ನು ಕಂಡುಬರುವ ಉತಾವಿಳತನವನ್ನು ತೋರಿಸುತ್ತಿದ್ದರು. ಅವರು ಪುಣೆಗೆ ಹೋದರೆ, ಶ್ಯಾಮರಾಯನ ಭಾನಗಡೀ ಹೊರಬೀಳುತ್ತಿತ್ತು. ಅಘಟಿತ ಘಟನೆ ನಡೆಯುತ್ತಿದ್ದವು. ವಾತಾವರಣ ತಂಗವಾಗುತ್ತಿತ್ತು. ಎಲ್ಲರೂ ಕಠಿಣ ಸಮಸ್ಯೆಯನ್ನು ಎದುರಿಸುವ ಕ್ಷಣ ಸನ್ನಿಹಿತವಾಗುತ್ತಿತ್ತು. ಯಕ್ಷಪ್ರಶ್ನೆ. ಸಾಹೇಬರ. ರಂಗಕ್ಕನ ಎದುರು ನಿಂತು ಖಚಿತ ಉತ್ತರ ಹೇಳಿ ಬದುಕಿರಿ – ಇಲ್ಲ, ಮೃತ್ಯು ಸಿದ್ಧವೆಂಬ, ಖಚಿತವೆಂಬ ಕಟು-ಸತ್ಯ ಸಾರುತ್ತಿತ್ತು. ನನಗೂ ಒಂದಿಷ್ಟು ಅಧೀರತೆಯೇ

ಆಯಿತು. ಯಕ್ಷನ ಕಣ್ಣು ತಪ್ಪಿಸುವ ದಾರಿ ಹುಡುಕತೊಡಗಿದೆ.

ಶ್ಯಾಮರಾಯನ ಜುಟ್ಟು ಕೈಯಲ್ಲಿದ್ದವು. ಬಸವಂತಿಯನ್ನು ಒಡೆದುಕೊಂಡ ಪ್ರಯುಕ್ತ ಒಂದು ಬಾಜೂ ಮಜಬೂತಾಗಿತ್ತು. ಶ್ಯಾಮರಾಯ ಕಂಯ್-ಕುಂಯಿ ಮಾಡಿದ್ದರೆ, ಅವನ ಸೀರೆಯ ಖರೀದೀ ಪ್ರಕರಣದಿಂದ ಸೂತೋವಾಚ ಮಾಡಿ, ಬಸವಂತಿಯನ್ನು ವಾಡೆಯಲ್ಲಿ ತಂದಿಟ್ಟ ಸರ್ವ ಇತಿಹಾಸವನ್ನೂ ಸಾಹೇಬ-ರಂಗಕ್ಕ ನವರಿಗೆ ತಿಳಿಸುವ ಸೂಚನೆ ಕೊಟ್ಟಿದ್ದರೂ ಅವನು ಒಂದಿಷ್ಟು ತಣ್ಣಗಾಗುವ ಸಂಭವ ಇತ್ತು. ಅವನು ನಮತೇ-ಧೋರಣ ಸ್ವೀಕರಿಸಿದ್ದರೆ, ಪುಣೆಗೆ ಕರೆದುಕೊಂಡು ಹೋಗಿ, ಕಾಕಾ ಅವರ ಕಾಲ ಮೇಲೆ ಕೆಡವಲು ಅನುವಿತ್ತು. ಸುರೇಶ ಬಂದಿದ್ದಾನೆ, ಬಂದು ಹೋಗಬೇಕೆಂದು ತಿಳಿಸಿದ್ದರೆ, ಅವನು ಬರುತ್ತಿದ್ದ. ಸುರೇಶನ ಸರ್ವಭಾರ ತನ್ನ ಮೇಲಿದ್ದವರಂತೆ ಮಾತಾಡುವ ನಾಟಕ ಮಾಡುತ್ತಿದ್ದ. ನನ್ನ-ಸುರೇಶನ ಅಪರೋಕ್ಷ ದಲ್ಲಿ ತಾನೇ ಪುಣೆಗೆ ಹೋಗಿ ಕಾಕಾ-ಸೋನಕ್ಕ ಅವರನ್ನು ಕಂಡು, ಏನೆಂಬುದನ್ನು ಠರಾಯಿಸಿ ತಿಳಿಸುತ್ತೇನೆಂದು ಥಂಪ ಹೊಡೆಯುತ್ತಿದ್ದ. ದಿವಸ ಜಾರುತ್ತಿದ್ದವು. ಶ್ಯಾಮರಾಯ, ಸುಳ್ಳಿನ ಜಾಲ ಹೆಣೆದು ದಿನ ಹಾಕುತ್ತಿದ್ದ. ಇಷ್ಟೇ, ಇಂದಿನ ಸಾವು ನಾಳೆಗೆ ಬೀಳುತ್ತಿತ್ತು.

ಸಾಹೇಬರು ಶ್ಯಾಮರಾಯನಿಗೆ ಖುದ್ದ ತಾವೇ ಕಾಗದ ಬರೆದರು. ನಮಗೆ ತೋರಿಸಿ ಹರಕತ್ ಇಲ್ಲವೆಂದು ಒಪ್ಪಿಗೆ ಪಡೆದರು: ಚಿ. ಸುರೇಶ ಬಂದಿದ್ದಾನೆ. ನಾಲ್ಕಾರು ದಿನವಾಯಿತು. ಕು. ಚಿ. ಶಕೂನನ್ನು ಒಪ್ಪಿದ್ದಾನೆ. ನೀವು ಜರೂರ. ಪುಣೆಗೆ ಹೊರಡುವ ತಯಾರಿಯಿಂದಲೇ ಬರಬೇಕು. ತೀ. ಸ್ವ. ಕಾಕಾ, ಸೌ. ಸೋನಕ್ಕ ಅವರಿಗೂ ಕು. ಚಿ. ಶಕೂನನ್ನು ತೋರಿಸಿದಂತಾಗುತ್ತದೆ. ಮುಂದಿನ ಮಾತು-ಕತೆಗೆ ಅನುಕೂಲವಾಗುತ್ತದೆ. ಸಂಜೆಯ ಮುಕ್ಕಾಮಿಗೆ ಇಲ್ಲಿಗೇ ಬರಬೇಕು. ದಾರಿ ನೋಡುತ್ತೇವೆ – ಎಂದು ತಿಳಿಸಿದರು.

ಇನ್ನೂ ಟಪಾಲಿನ ವೇಳೆ ಇತ್ತು. ನಾವು ಬರೆದು ಹಾಕಿದ ಕಾಗದ ಶ್ಯಾಮ ರಾಯನಿಗೆ ಮುಟ್ಟುವ ಈರ್ಷೆಯಿಂದಲೇ ಹೋಗಿರಬೇಕು. ಅಂದು ಸಂಜೆಯ ಏಳ ರೊಳಗಾಗಿ ಪೋಸ್ಟಮನ್ ಪಾಂಡೂನಿಂದ ಬಟವಡೆಯಾಗಿ, ವಾಡೆಯಲ್ಲಿ ವಿರಾಜ ಮಾನನಾದ ಶ್ಯಾಮರಾಯನ ಕೈಗೆ ಬಿದ್ದಿರಬೇಕು. ಕಾರಣ, ಟಪಾಲ ಮೋಟಾರಿನಲ್ಲಿ ಖುದ್ದ ತಾನೇ ಕಾಗದ ಹಾಕಿದೆನೆಂದು ಸಾಹೇಬರ ಕ್ಯಾಂಪ್-ಕ್ಲಾರ್ಕ ವರದಿ ಮಾಡಿದ್ದ.

ಶ್ಯಾಮರಾಯನ ಉತ್ತರದ ಪ್ರತೀಕ್ಷೆಯಲ್ಲಿ ದಾದಲ್ಯಾ ದಂಗಾಗಿದ್ದ.

ಶ್ಯಾಮರಾಯ ಖಚಿತ ಬರಬಾರದು. ಅವನು ಬರಲಿಕ್ಕಿಲ್ಲವೆಂಬ ಖಾತ್ರೀ ಇದ್ದೇ ದಾದಲ್ಯಾ ಅವನಿಗೆ ಆಗ್ರಹದ ಆಮಂತ್ರಣ ಕೊಡಿಸಿದ್ದ. ಕು. ಚಿ. ಶಕೂ, ಸುರೇಶನಿಗೆ ಒಪ್ಪಿಗೆಯಾದ ಸಂಗತಿಯನ್ನು ಮುದ್ದಾಂ ನಮೂದಿಸುವಂತೆ ಸಾಹೇಬರಿಗೆ ಹೇಳಿದ್ದ.

"ಶ್ಯಾಮರಾಯರ ಹಾಸಿಗೀ ಎಲ್ಲೆ ಹಾಕಸೂಣು? ನನ್ನ ಖೋಲ್ಯಾಗs ಇನ್ನೊಂದು ಪಲ್ಲಂಗ ಹಾಕಸ್ತೀನಿ. ಅಲ್ಲೇ ಠೀಕ ಅದs. ಮಾತಾಡಲಿಕ್ಕೂ ನೆಟ್ಟಗ." ಶ್ಯಾಮರಾಯ ಊರಿಂದ ಬಂದೇ ಇಳಿದ ಆವಿರ್ಭಾವದಿಂದ, ಸಾಹೇಬರು, ಅವನ ವಾಸ್ತವ್ಯದ ತಯಾರೀ ನಡೆಸಿದ್ದರು.

ನನ್ನ ಹೊಟ್ಟೆಕಡಿತವನ್ನು, ಸಾಹೇಬರ ಖರ್ಚಿನಿಂದ, ಟಪಾಲ ಮೂಲಕ ಶ್ಯಾಮರಾಯನಿಗೆ ರವಾನಿಸಿ ನಾನು ನಿರಂಬಳನಾಗಿದ್ದೆ. ಶ್ಯಾಮರಾಯನ ಪಾಲಿನ ಅಡಿಗೆಯನ್ನು ನಾನೇ ಸಮೀಚೀನವಾಗಿ ಹೊಡೆದು ನಿದ್ರಾಸುಖ ಭೋಗಿಸುವ ಗುಂಗಿನಲ್ಲಿ ದಂಗಾಗಿದ್ದೆ.

ಸಂಜೆಯ ಆರು-ಆರೂವರೆಯ ಹೊತ್ತಿಗೆ ಆಂಬೋಲಿಗೆ ಹೋದ ಯುತಿ ತಿರುಗಿ ಬಂದಿತು. ಹರಿದ್ರಾಲೇಪನ ಮಾಡಿಕೊಂಡೇ ಬಂದಿತು. ಇನ್ನೂ ಚಹ ಮುಗಿದಿರಲಿಲ್ಲ. ಸುರೇಶ ಗಡಿಬಿಡಿ ಸುರುವುಮಾಡಿದ.

"ದಾದಲ್ಯಾ 'ಕ್ವಿಕ್ ಮಾರ್ಚ್'. ವಿಶ್ಯಾಗ ಫೋನ ಮಾಡೂದದ. ಪೋಸ್ಟ ಆಫೀಸಿಗೇ ನಡೀ. ಗಾಡೀ ಹೊರಗ ನಿಂದರಿಸೇ ಬಂದೀವಿ, ನಿನ್ನೂ ತುರಕಿಕೊಂಡು ಹೋಗೂದಕ್ಕ."

ನಾನು, ಸುರೇಶ, ಶಕೂ ಮತ್ತೆ ಸಾಹೇಬರ ಫೋರ್ಡ ರಥವೇರಿ ಹೊರಟೆವು. ಒಂದು ತಾಸಿನಲ್ಲಿ 'ಕನೆಕ್ಶನ್' ಸಿಕ್ಕಿತು. ನನ್ನ ವಿಶ್ಯಾನ ಜೀವಂತ ವಾಣಿ ಆ ತುದಿಯಿಂದ ಮಿಡಿಯುತ್ತಿತ್ತು.

"ವಿಶ್ಯಾ, ಬೆಳಗಾವ್ 'ಎರಂಡ್' 'ಗ್ರ್ಯಾಂಡ್ ಸಕ್ಸೆಸ್' ಅಪಾ. ಆಂs... ಏನಂದೀ... ಸುಮೂರ್ತೇನs... ಇಕಾ ಇಲ್ಲೇ ಇದ್ದಾನ ನಿನ್ನ ಪುರೋಹಿತಾ. ಅಕ್ಷತಾ ಹಿಡಕೊಂಡs ನಿಂತಾನ. ಹಾಂ... ಅಗದೀ ಕನ್ಯಾನೂ ಸೋಬತೀಲೇನs ಅದs. ಹೂಂ ಏನು? ಆಕೀನೇ ಮಾತಾಡಬೇಕs? ಠೀಕ. ಕೇಳಲಾ!"

· ಸುರ್ಯಾ 'ರಿಸೀವ್ಹರ್' ಶಕೂನ ಕೈಗೆ ಕೊಟ್ಟ. ಕಲ್ಪನಾತೀತ ಧೈರ್ಯದಿಂದ ಅಷ್ಟೇ ನಿರ್ಭಿಡೆಯಿಂದ ಶಕೂ —

"ಹಲೋ!... ಪಂ. ನಾ... ಶಕೂ... ನಮಸ್ಕಾರ ಭಾವಜೀ" ಎಂದಳು.

ಆಚೆಯ ತುದಿಯಿಂದ ವಿಶ್ಯಾ ಆಶೀರ್ವಾದ ಹೇಳಿರಬೇಕು.

"Many many thanks for the blessings"

ಶಕೂನ ಕೈಯಿಂದ ರಿಸೀವ್ಹರ್ ನನ್ನ ಕೈಗೆ ಬಂದಿತು.

"ವಿಶ್ಯಾ... ವಿಶ್ಯಾ...ನಿನ್ನ ಅಪಗೊಂಬೂ ಹಾಂಗ ಆಗೇದ, ಮಗನs, ಏನ ಮಾಡಲಿ? ನಾಕೇ ದಿನದಾಗ ಮುಂಬೈಗೆ ಬಂದು 'ರಿಪ್ರೋರ್ಟ' ಮಾಡತೀನಿ. ಅರ್ಜುನ-ಸುಭದ್ರಾ ಪ್ರಕರಣದ್ದಶಿಂದ ಇಂದೇ ನಿನಗ ಗಡದ್ದ ಆರ ಪಾನಿನ ಪತ್ರಾ ಬರದೀನಿ. ನಾಳೆ ನೋಡು. ಅದರಾಗ ಹ್ಯಾಂಗ ಖಮಂಗ ವಾಸನಿ ಅದs ಅನೂದು. ಆಂ... ನಿನ್ನ 'ಲವ್ಹ್ಲೀ ಲಾರ್ಕ್' ವಸೂಂದೇನರs ಪತ್ರಾ? ಧನೀನs ಹೇಳತದ ಮಗನs ಖುಷ್ಯಾಗಿದ್ದೀಯಂತs... Right ಓ...ಬಾಯ್ ಬಾಯ್......"

'ಲೈನ್ ಕಟ್' ಆಯಿತು.

"ಸುರ್ಯಾ, ಶಕೂ ಕಮಾಲ ಮಾಡಿದಳಾಂ. ಭಾವಜೀ ಅಂದಳು. ವಿಶ್ಯಾ ಚಿತ್-ಪಟ್ ಆಗಿರಬೇಕು! ನನಗ ಸುದ್ದೇ ಅಕೀ ಹೀಂಗ 'ಓವ್ಹರ್ ಬೌಂಡರಿ' ಹೊಡದಾಳಂತ ಅನಿಸಿದ್ದಿಲ್ಲಾ"

ಮೋಟಾರಿನಲ್ಲಿ ಕೂಡುತ್ತ ಹೇಳಿದೆ.

"ಶಿಷ್ಯಾದಿಚ್ಛೇತ್ ಪರಾಜಯಮ್ – ಸೋತರೂ ಗೆದ್ದ ಮಗಾ ನೀನು" ಸುರೇಶ ಹೇಳಿದ.

"ಸುರ್ಯಾ, ನಿಮ್ಮ ಅಕ್ಷತಾ ಬೀಳೂ ತನಕಾ, ಸಿನೀಯಾರಿಟೀ, ಸ್ಕೇಲ, ಮ್ಯಲೇಜ ಕಿಟಿಕಿಟಿ ತಪ್ಪಿತಪಾ. ಖರೇ ನನ್ನ ವಿಜಯ ಅದರಾಗ ಅದs ನೋಡು. ಎರಡ ಖೋಕಾದಾಗ ಥ್ವಾಡೇ ದಿನಾನರೇ ಪೊಸಾ ಗಾಳಿ ಆಡತದ." ನಾನು.

ನನ್ನ ಅಂದಾಜು ಹುಸಿಹೋಗಲಿಲ್ಲ. ಶ್ಯಾಮರಾಯ ಊರಲ್ಲಿಲ್ಲ. ತೀ. ಸ್ವ. ಕಾಕಾ ಅವರಿಂದ ಜರೂರಿಯ ಕಾಗದ ಬಂದ ನಿಮಿತ್ತ ಪುಣೆಗೆ ನಿನ್ನೇ ಹೋದರು. ತಿರುಗಿ ಬರಲಿಕ್ಕೆ ಐದಾರು ದಿನವಾಗಬಹುದು. ಬಂದನಂತರ ತಮ್ಮ ಪತ್ರವನ್ನು ಅವರಿಗೆ ತೋರಿಸಲಾಗುವದು, ದಸ್ತೂರ ಖುದ್ದ–ತಮ್ಮಾಜೀ ಚಿಮಣಾಜೀ ಪಂತ.

"ದಾದಲ್ಯಾ ಗೆದ್ದಿ ಮಗನs" ಎಂದು ಮನಸ್ಸು ಖುಷಿಯಾಗಿಯೇ ಹೇಳಿತು.

ಶ್ಯಾಮರಾಯ ತಮ್ಮಾಜಿಯ ಕಡೆಯಿಂದ ಸುಳ್ಳು ಪತ್ರ ಬರೆಸಿದ್ದನೆಂಬುದು ಹಗಲಿನಷ್ಟು ಪ್ರಕಾಶಮಾನವಾಗಿತ್ತು. ದಾದಲ್ಯಾನಿಗೆ ಬೇಕಾದದ್ದೂ ಅದೇ!

ಸುರೇಶ ಇಲ್ಲಿಯ ವರೆಗೂ ಬಂದು ಊರಿಗೆ ಹೋಗಿ ಬರುವದು ಸೂಕ್ತವಾಗಿತ್ತು. ಕಾಕಾ ಅವರ ಮಿತ್ರಪರಿವಾರವನ್ನು ಕಂಡು ಅವರ ಆಶೀರ್ವಾದ ಪಡೆಯುವದು ಅಗತ್ಯದ್ದಿತ್ತು. ವಕ್ರತುಂಡಮಹಾಕಾಯನ ದರ್ಶನ ಪಡೆದು ಅವನ ತೀರ್ಥ-ಪ್ರಸಾದವನ್ನು ಕಾಕಾ ಅವರಿಗೆ ಮುಟ್ಟಿಸುವದು ನನ್ನ ಕರ್ತವ್ಯವಾಗಿತ್ತು. ಸಾಹೇಬರಿಗೆ ಇದನ್ನು ಸೂಚಿಸಿ, ಅವರ ಗಾಡಿಯನ್ನು ತೆಗೆಸಿದೆ. ಸಂಜೆಯೊಳಗಾಗಿ ತಿರುಗಿ ಬರುವೆವೆಂದು ಹೇಳಿ ಊರಿಗೆ ಹೋದೆ. ಕು. ಚಿ. ಶಕೂ ಅಂದೇ ಹೊರಗೆ ಕುಳಿತಿದ್ದರಿಂದ ನಮ್ಮ ಕೂಡ ಬರಲಿಲ್ಲ.

ತಮ್ಮಾಜಿಯಿಂದ ಪತ್ರ ಬರೆಸಿದ ದಿನವೇ ಶ್ಯಾಮರಾಯ, ಊರು ಬಿಟ್ಟು, ನಾಕೆಂಟು ದಿನ ತಲೆಮರೆಸಿಕೊಂಡು ಊರೂರು ಅಲೆದು ಹೈರಾಣಾಗಿ ಬರುತ್ತಾನೆಂಬ ಖಾತ್ರೀ ನನಗಿತ್ತು. ಈ ಸುಳ್ಳಿನ ಕತೆಯನ್ನು ಬಸವಂತಿಗೆ ತಿಳಿಸಿ, ಅವಳನ್ನು ಕೆರಳಿಸುವ ಡಾವು ಸಾಧಿಸುತ್ತಿತ್ತು.

ಆದರೆ ಶ್ಯಾಮರಾಯ ನನಗಿಂತಲೂ ಮುಂಚೆ ಹುಟ್ಟಿದವ. ಬಸವಂತಿಯನ್ನು ಕರಕೊಂಡೇ ಜಾರಿದ್ದ. ತಾನು ಬರಲಿಲ್ಲವೆಂದು ಉತಾವಿಳರಾದ ಸಾಹೇಬರು ಸುರೇಶಸಹಿತರಾಗಿ, ವಾಡೆಯಲ್ಲಿ ಅವತರಿಸಿದರೆ ತನ್ನ-ಬಸವಂತಿಯ ಸಂಬಂಧ ಹೊರಬಿದ್ದಿರಬಾರದು, ತನ್ನ ಅನುಪಸ್ಥಿತಿಯಲ್ಲಿ ಅವರು ಬಂದಿದ್ದರೆ, ಬಸವಂತಿಯ ದರ್ಶನ ಘಟಿಸಿ ಹೂರಣ ಹೊರಬೀಳದೆ ಇರುವದಿಲ್ಲ – ಬಸವಂತಿಸಹಿತವಾಗಿ ಜಾರಿದರೆ ಏನೂ ಅಂಜಿಕೆ ಇಲ್ಲವೆಂದು ಅವನು ಹಾಕಿದ ಹಂಚಿಕೆ ಖಚಿತವಾಗಿ ಅಮೂಲ್ಯವಾಗಿತ್ತು. ಪಂತಮನೆತನದ ಯಾವ ಯಕ್ಷ-ರಾಕ್ಷಸನ ತಲೆಯೂ ಬೋಕಾ ಅಲ್ಲ. ಶಿವರಾಮಪಂತರ ತೈಲಚಿತ್ರ ನೋಡಿದರೇ ಸಾಕು. ಆ ಘಾರೆಗಣ್ಣು, ತೀಕ್ಷ್ಣನೋಟ, ಭವಿಷ್ಯವನ್ನು ಕಥಿಸುವ – ಆಕಲನ ಮಾಡುವ ಅಮಾಪ ಶಕ್ತಿಯನ್ನು ಪಡೆದಿವೆ ಎನ್ನುವದಕ್ಕೆ, ಅದನ್ನು ಬರುವ ಹತ್ತು ತಲೆಮಾರಿಗೂ ಮುಕ್ತಮಾನಸವಾಗಿ ದಾನ ಮಾಡಿದ ಎನ್ನುವದಕ್ಕೆ ಪ್ರತ್ಯಕ್ಷ ಸಾಕ್ಷಿಯಂತಿವೆ. ಶ್ಯಾಮರಾಯ ಅಪ್ಪಾಡಿಯಾದರೂ ಆ ತಳಿಯವನೇ ಎಂಬುದೇನೂ ಸುಳ್ಳಲ್ಲ. ಶ್ಯಾಮರಾಯ ಪರಾಗಂದಾ ಆದ ಬಗ್ಗೆ ದಾದಲ್ಯಾನಿಗೆ ಅಷ್ಟು ಕೆಡುಕೆನಿಸದಿದ್ದರೂ ಸಮಾಧಾನ ಮಾತ್ರ ಆಗಲಿಲ್ಲ.

ತೀರ ಸಣ್ಣ ಹುಡುಗನಿದ್ದಾಗ ಸುರೇಶನನ್ನು ನೋಡಿದ ಕಾಕಾನ ಬಳಗ – ಗೌಡರು, ಅಪನವರು, ದರ್ಗಾದ ಪೀರ, ಹಿರಿಯು ಕಮತಿಗ, ಖಾದರ, ಗುಡಿಯಲ್ಲಿಯ ತೈನಾತೀ ಮಂಡಳಿ ಹರ್ಷಪುಲಕಿತರಾದರು. ಗೌಡರು, ಗೌಡತಿಯಿಂದ ಶಾಂವಿಗಿ ಬಸಿಸಿ ಭರ್ಜರೀ ಔತಣ ಮಾಡಿಸದೆ ಬಿಡಲಿಲ್ಲ. ಕುಲಕರ್ಣೀ ಬಂಡ್ಯಾ ಚಾ-ಫಳಾರ ಮಾಡಿಸಿದ.

ಸುರೇಶನ ಲಗ್ನವನ್ನು ಇದೇ ವಾಡೆಯಲ್ಲಿಯೇ ಮಾಡಿ ತೋರಿಸುವೆನೆಂದು ಯಜ್ಞೋಪವೀತ ಮುಟ್ಟಿ, ಗೋವಿಂದಭಟ್ಟ ಪಣ ಪುಕಾರಿಸುತ್ತಿದ್ದ – ಆದರೆ ಅವನ ಸ್ವಾರೀ ನಾಯಕ ವಕೀಲರ ಕೂಡ ಯಾತ್ರಾರ್ಥಿಯಾಗಿ ಹೋಗಿತ್ತು. ಪಣ ತೊಡುವ ಪ್ರಸಂಗ ಹುಸಿಹೋಯಿತು.

"ಶ್ಯಾಮರಾಯನ್ನ ಹಣ್ಣಿಗೆ ತರೂ ವ್ಯಾಳ್ಯಾ ಬಂತ ದಾದಲ್ಯಾ"
ಎಂದು ರಾಚಪ್ಪ, ನನ್ನಿಂದ ಎಲ್ಲ ವೃತ್ತಾಂತವನ್ನು ಕೇಳಿಕೊಂಡು ಹೇಳಿದ.

ಸುರೇಶ-ಬಸವಂತಿಯುರ ಭೆಟ್ಟಿಯಾಗಲಿಲ್ಲವೆಂಬ ಕಳವಳ-ಹಳಹಳಿಕೆ ಮಾತ್ರ ನನ್ನನ್ನು ಕಚ್ಚತೊಡಗಿತು.

ಶ್ಯಾಮರಾಯ ನಾಕಾರು ದಿನಗಳಲ್ಲಿ ಹಿಂದುರಿಗಿ ಬರುವೆನೆಂದು ಹೇಳಿ ಹೋದವ ಹತ್ತು-ಹನ್ನೆರಡು ದಿನಗಳಾದರೂ ಊರ ಕಡೆಗೆ ಸುಳಿಯಲೇ ಇಲ್ಲ. ತಮ್ಮಾಜಿಗೂ ಏನೂ ಬಾತಮೀ ಇರಲಿಲ್ಲ. ಶ್ಯಾಮರಾಯ ಒಬ್ಬನೇ ಗಡಪ್ ಆಗಿ, ಬಸವಂತಿಯಾದರೂ ಊರಲ್ಲಿದ್ದರೆ ನಮಗೆ ಅನ್ಯ ಕ್ಲೃಪ್ತಿಗೆ ದಾರಿಯಾಗುತ್ತಿತ್ತು. ಈಗ ಅದೂ ಇಲ್ಲದಂತಾಗಿತ್ತು.

ಸುರೇಶನನ್ನು ಪುಣೆಗೆ ಕಳಿಸಿದ ಮರುದಿನವೇ ನಾನು ಊರಿಗೆ ಹಿಂದಿರುಗಿ ಬಂದಿದ್ದೆ. ನಾಕೆಂಟು ದಿನಗಳ ಅವಧಿಯಲ್ಲಿ ಶ್ಯಾಮರಾಯ ಊರಿಗೆ ಬಂದರೆ ಅವನನ್ನು ಕರೆದುಕೊಂಡೇ ಬೆಳಗಾಂವಿಗೆ ಬರುವೆನೆಂದು ಸಾಹೇಬರಿಗೆ ತಿಳಿಸಿದ್ದೆ. ಶ್ಯಾಮರಾಯನನ್ನು ಹಿಡಕೊಂಡು ಪುಣೆಗೆ ಹೋಗುವದರಿಂದ, ಅಲ್ಲಿಯ ಕೆಲಸ ನಿರಾಯಾಸವಾಗಿ ಪಾರುಬೀಳುವದೆಂದು ಹೇಳಿದ್ದರಿಂದ ಸಾಹೇಬರೂ ಅದಕ್ಕೆ ಒಪ್ಪಿ ನಿರ್ಧಾಸ್ತರಾಗಿದ್ದರು.

ಶ್ಯಾಮರಾಯ ಎಲ್ಲಿ ಹೋಗಿರಬೇಕೆಂಬ ಗುಂಭ, ನನ್ನ ರಾಚಪ್ಪನ ತಲೆಯನ್ನು ತಿನ್ನತೊಡಗಿತು. ಒಂದು ದಿನ ರಾತ್ರಿಯ ಮಂಗಳಾರತಿ ಮುಗಿದ ನಂತರ, ನಾನು-ಅವನು ಇಬ್ಬರೇ ಗುಡಿಯ ಚೌಸೊಪ್ಪದ ಕಟ್ಟೆಯ ಮೇಲೆ ಕುಳಿತಿದ್ದೆವು.

ಗೋವಿಂದಭಟ್ಟ ಯಾತ್ರೆಯಿಂದ ಮರಳಿ ಬಂದ ದಿನವೇ ನಾನು ಪುಣೆ-ಮುಂಬೈಗೆ ಪ್ರಯಾಣಿಸಿ, ವಿಶ್ವಾಸ, ಕಾಕಾ ಅವರಿಗೆ ಬೆಳಗಾಂವಿಯ ಸುದ್ದಿಯನ್ನು ವರದಿ ಮಾಡುವದಾಗಿ ಹೇಳಿದೆ. ಅದನ್ನು ಕೇಳಿ ರಾಜಪ್ಪ —

"ದಾದಲ್ಯಾ, ಕಾಕಾ ಅವರ ಅಪರೋಕ್ಷದಾಗ ಭಾಳ ಭಾನಗಡೀ ನಡದಾಂವ. ಇನಾ ಅವರಿಗೆ ಬಸವಂತಿ-ಶ್ಯಾಮರಾಯನ ಭಾನಗಡೀ ತಿಳಧಾಂಗ ಇಲ್ಲಾ. ನಾಳೆ ಗೊತ್ತ ಆದರೂ ಅವರೇನು ಮಾಡೂ ಹಾಂಗಿಲ್ಲಾ; ಆ ಮಾತು ಬ್ಯಾರೇ. ಆದರ ರಾಜೋಟೀ, ನೀನರ ಈ ಸುದ್ದೀ ನನ್ನ ಕಿಂವೀ ವ್ಯಾಲ ಯಾಕ ಹಾಕಲಿಲ್ಲಾ, ಅಂತs ಕಾಕಾ ಅವರು ಅನೂ ಸಂಭವ ಅದs. ಅವರು ಹಾಂಗ ಅಂದರ ನಾ ಸತ್ಥಾಂಗನs. ಅವನವರು ಜವಾಬ್ದಾರೀ ತಗೊಂಡಿದ್ದರೂ ನನಗೇನು ಅಷ್ಟ ಸಮಾಧಾನ ಇಲ್ಲಾ. ನಾಳೆ ಹತ್ತೀ ಪೀಕ ಕಡೀಕಾಗಲಿ. ಶ್ಯಾಮರಾಯಾ ಗೌಡರಿಗೆ ಹೊಲದ ತಗಾದೀ ಸುರೂ ಮಾಡತಾನ. ವೀಸ ಪಂಚವೀಸ ಹಜಾರದ ಮಾಲ ಹೊಂಟದ ಈ ಸಾರೇ ಗಣಪತೀ ಗುಡೀ ಜಮೀನದಾಗ. ಅದೆಲ್ಲಾ ಗುಡಿ ಆಸ್ತೀ ಅನೂದು ಖರೇ ಇದ್ದರೂ, ಕಾಕಾ ಹ್ಯಾಂಗ, ಅದರಾಗಿಂದು ಒಂದ ಕುಡ್ತ ಕವಡೀ ಹಿಡೀತಿದ್ದಿಲ್ಲಾ, ಹಾಂಗ ಶ್ಯಾಮ ರಾಯ ಏನು ಬಿಡಾಂವಲ್ಲಾ. ಥ್ವಾಡೇ ತುಸೂನರs ನುಂಗಿದರೂ ನಾಕೈದ ಸಾವಿರ ಕೇನು ಸಾವ ಇಲ್ಲಾ. ಗೌಡರ ಗಳೇ ಏನು ಈ ಸಾರೆ ಆ ಜಮೀನದಾಗ ಹೋದಾವು ಅನೂ ಭರೋಸ ಇಲ್ಲ ನನಗ. ಹೊಲಾ ಬಿಡಬ್ಯಾಡರೀ ಅಂತ, ಗೌಡರಿಗೆ ಕಾಕಾ ತಿಳಸ್ಯಾರ. ಅವರೂ ಬಿಡಾಂಗಿಲ್ಲಾ. ಶ್ಯಾಮರಾಯನೂ ಕೇಳಾಂಗಿಲ್ಲಾ. ಕಾಕಾ ಪುಣೇದಾಗ, ನಾವು ಇಲ್ಲೆ. ಏನರs ಧಾವತೀ ಮಾಡಿದೇವs ಒಂದ ಹೋಗಿ ಒಂದ ಅಗೂದು. ಇಲೀಗೆ ಬೀಳೂ ಪೆಟ್ಟಾ ಗಣಪತಿಗೆ ಬೀಳೂದು. ನಾನs ಒಮ್ಮೆ ಪುಣೇಕ್ಕ ಹೋಗಿ, ಕಾಕಾ ಅವರಿಗೆ ಎಲ್ಲಾ ಸಮಾಜಿಸಿ ಹೇಳಿ ಬರಬೇಕಂತ ಮಾಡೀನಿ. ಟಪಾಲದಲೇ ಏನೂ ಖುಲಾಸೇ ಆಗೂದಿಲ್ಲಾ. ಸಮುಕ್ಷಮ ಭೆಟ್ಟೀನs ಠೀಕಾ. ವಿಶ್ವಾಸನ ಅಕ್ಕೀಕಾಳಾ ವಾಡೇದಾಗs ಹಾಕರಿ ಕಾಕಾ ಅಂದಿದ್ದೆ. ಅದೂ ಅಂತೂ ಅಂವನ ದತ್ತಕದಿಂದ ತಪ್ಪಿತು. ಈಗ ಸುರೇಶನ ಅಕ್ಕೀಕಾಳರs ವಾಡೇದಾಗ ಬೀಳಲಿ."

"ಸುರೇಶನ ಲಗ್ನ ಜಮಾಸಬೇಕಾದರ, ಶ್ಯಾಮರಾಯನ ಭಾನಗಡೀ ಕನ್ಯಾ ಪಕ್ಷದವರಿಗೆ ತಿಳೀಬೇಕಾಗತದ. ತಿಳೀದ ಗತೀನs ಇಲ್ಲಾ. ಅದು ತಿಳದ ವ್ಯಾಲೂ ಅವರು ಸಂಬಂಧಕ್ಕ ಒಪ್ಪಿದರ ಭಂಗಾರನs ಆಗತದ. ಶ್ಯಾಮರಾಯನ ಭಾನಗಡೀ

ಈ ಎಲ್ಲಾ ಮಾತಿಗೆ 'ಬಾಟಲೀಕಾ ಬೂಚ್' ಆಗೇದ. ಅದಕೇ ನಾನು ಬಸವಂತಿನ್ನ ಘೂ ಬಿಡೂಣಂತ ಮಾಡಿದ್ದೆ. ಅಕೀ ಒಂದಿಷ್ಟರs ಶ್ಯಾಮರಾಯನ್ನ ಮೆತ್ತಗ ಮಾಡತಿದ್ದಳು."

"ಶ್ಯಾಮರಾಯಾ ಸಹಜಾಸಹಜೀ ಮೆತ್ತಗಾಗು ಗಿರಾಕಿ ಅಲ್ಲಾ ದಾದಲ್ಯಾ. ಸಮಗಾರ ದೇವರ ಅಂವಾ. ಅಟ್ಟಿ ಘಟ್ಟಿ ಇದ್ದರೇನs ಹಾದಿಗೆ ಬರಾಂವಾ. ಹೋದ ವರ್ಷನs ಅಂವಾ, ಬಸಗೋಂಡನ ಒಂದ ಹೊಲಾ ಖರೀದಿಗೆ ಓಡಿದಿದ್ದಾ. ಆ ಹೊಲಾ ನನ್ನ ಹೊಲಾ ಹತ್ತಿ ಅವs. ಬಾಂದಿನ ಕಲ್ಲ ದಾಟಿ ಬಸಗೋಂಡಾ, ಒತ್ತಿ ನನ್ನ ಹೊಲದಾಗ ಬಿತ್ತತಿದ್ವಾ. ಇಪ್ಪತ್ತ ವರ್ಷದಿಂದ ತಂಟೇ ನಡದs ಇತ್ತು. ಆ ಹೊಲಾ ಈಗ ಶ್ಯಾಮರಾಯ ಓಡದಾನ. ಶ್ಯಾಮರಾಯಾ ತನ್ನ ಹೊಲದಾಗಿನ ನೀರೆಲ್ಲಾ ನನ್ನ ಹೊಲಕ ತಿರಗಿಸ್ಯಾನ! ದೊಡ್ಡ ಖ್ವಾರೀನs ಬೀಳಲಿಕ್ಕೆ ಹತ್ತೇದ. ಹೀಂಗs ಬಿಟ್ಟರ ದೊಡ್ಡ ಹಳ್ಳನs ಹರೀತದ. ಅದರ ದಶಿಂದ ತಕರಾರ ಮಾಡಿದರ, ಕೋರ್ಟಿಗೆ ಹೋಗನ್ನು ಮಗ್ಗ, ಅಂತs ಹೇಳಿಕಳಿಸಿದಾ! ನಮ್ಮ ಶಿವ್ಯಾನೂ ತಲಿತಿರಕ ಹುಡಗಾ. ಒಂದ ಕೈ ನಿನ್ನ ನೋಡೇ ಕಚೇರಿ ಕಟ್ಟೇ ಏರತೀನಿ ಅಂತs ಶ್ಯಾಮರಾಯನ ಎದರಾನs ಹೇಳಿದನಂತ. ನನಗ ಬಲೇ ಜೀವದ ಸುತ್ತ ಬಂದ್ವದ. ಶ್ಯಾಮರಾಯಾ ಕಾಕಾ ಅವರ ಮಗಾ. ಒಂದ ರೀತಿಯಿಂದ ಮಾಲಕಾ. ಶಿವ್ಯಾ ಹೊಟ್ಟೀ ಮಗಾ. ಇಬ್ಬರಿಗೂ ಹೇಳಿ ನೋಡಿದೆ. ಇಬ್ಬರೂ ಹಣೇಧಾಂಗ ಆಗ್ಯಾರ. ಪಂಚೇತಿಗಿಟ್ಟದ ನನಗ."

"ರಾಚಪ್ಪಾ, ನೀನೂ ಗೌಡರೂ ಕೂಡೇ ಪುಣೇಕ್ಕ ಹೋಗೂದು ಠೀಕಲ್ಲs? ನಿನಗ ತಟ್ಟಿಸಿದಲ್ಲೆ ಗೌಡರ ಮಾತು ನಡೀತದ. ಬಸವಂತೀ ಸುದ್ದೀ ನೀವ್ ಹೇಳಿದರ, ಅವರ್ನ ಸಮಾಧಾನ ಮಾಡಿದರ, ಕಾಕಾ, ಕದಾಚಿತ್ ಇಲ್ಲೀ ಭಾನಗಡೀ ಬಗೀ ಹರೀಲಿ ಅಂತs ವಾಡೇದಾಗ ಬಂದ ನಿಂದರೂ ಸಂಭವನೂ ಅದs."

"ನಾನೂ ಅದೇ ವಿಚಾರನs ನಡಿಸೀನಿ ದಾದಲ್ಯಾ. ನಿಮ್ಮ ಅಪ್ಪ ಬರೂತ್ಲೇ ಮೂರೂ ಮಂದೀನೂ ಹೊಂಡತೇವು. ನೀನೂ ಬರತಿದ್ದರ ನೋಡು. ಭಟ್ಟನಕಿಂತಾ ನಿಂದs ಜರೂರೀ ಜಾಸ್ತಿ. ಎಲ್ಲಾ ಠಾಂವಿಕೀನೂ ಅದs. ಗೋವಿಂದಭಟ್ಟಾ ಯಾತ್ರಾಕ್ಕ ಹೊಂಡಾಗs ಹೇಳಿ ಹೋಗ್ಯಾನ. ತಾನs ಪುಣೇಕ್ಕ ಹೋಗಿ ಕಾಕಾ ಅವರಿಗೆ ವರದೀ ಮಾಡತೀನಿ ಅಂತs. ಅಂವೇನು ಅಸನರೀ ಜಾತಿ ಅಲ್ಲಾ. ಹೊಂಟೇ ಬಿಡತಾನ. ಕಾಕಾ ಅವರ್ನ ಸಮಜಾಸುದಂತೂ ಧೂರನs ಉಳೀತು.

ಅವರ್ನ ಘನ ರೌಸಿಗೆ ಎಬ್ಬಿಸಿಬಿಡತಾನ. ನಾವೂ ಜೋಡೀ ಇದ್ದರ ಅಂವನ್ನ ಸಂಬಾಳಸಲಿಕ್ಕೆ ಆಗತದ."

"ಗೋವಿಂದಭಟ್ಟನ ನಾಲಗೀ ಚಲಾಕಾ ಕೈಯಾಗ ಇಳದಿಲ್ಲಾ. ಒಂದ ಕಾರ್ಡು ಗೀಚೂದರಾಗ ಅಂವಗ ಕುರೀಕ್ವಾಣ ಬೀಳತದ. ಇಲದಿದ್ದರ ಅಂವಾ ಏನು ಕಾಕಾ ಅವರಿಗೆ ಪತ್ರಾ ಬರೀದನಽ ಇರತಿದ್ದನೇನು? ಅಂವಾ ಊರಾಗ ಇದ್ದಿದ್ದಿಲ್ಲಂತ ಬಸವಂತಿನ್ನ ಒಡಕೊಂಬೂದು ಸಾಧ್ಯ ಆತು. ಅಂವೇನು ವಾಡೇದಾಗ ನನಗ ಕಾಲ ಹಾಕಿಸಿಗೊಡತಿದ್ದಿಲ್ಲಾ. ನಾಳೆ ನೀವು, ದಾದಲ್ಯಾನ್ನೂ ಕರಕೊಂಡು ಹೋಗೂಣು ಪುಣೇಕ್ಕ ಅಂತ ಅನ್ನರಿ. ಚೋಟ ಇದ್ದಾನ, ಅವನ್ನ ತಗೊಂಡು ಏನ ಮಾಡತೀರಿ. ಅವನ ಅಪ್ಪಾ ನಾ ಇರಾಗ ದಾದಲ್ಯಾಂದೇನ ಅಗತ್ಯ ಇಲ್ಲಾ ಅಂತಽ ಅಂತಾನಿಲ್ಲೋ ಬೇಕಾರ ನೋಡಿರಿ."

ಗೋವಿಂದಭಟ್ಟ, ನನ್ನ ಪುಣೆಯ ಪ್ರವಾಸಕ್ಕೆ ಖೋ-ಹಾಕುತ್ತಾನೆಂಬ ಖಾತ್ರೀ ಇದ್ದ ಕಾರಣ, ಅವನು ಯಾತ್ರೆಯಿಂದ ಮರಳಿ ಬಂದ ಎರಡನೇ ದಿನವೇ ನಾನು ಮುಂಬೈಗೆ ಹೊರಟುಬಿಟ್ಟೆ.

ನಾನು ಹೊರಡುವ ಗಳಿಗೆಯ ವರೆಗೂ ಬಸವಂತಿ-ಶ್ಯಾಮರಾಯರ ಸ್ವಾರೀ ಆಗಮಿಸಲಿಲ್ಲ. ಅವರ ಈ ದೀರ್ಘ ಅನುಪಸ್ಥಿತಿ, ವಾಡೆಯಲ್ಲಿಯ ಗೈರಹಾಜರೀ ಊರಲ್ಲಿಯ ರಿಕಾಮುಚೋಟರಿಗೆ ಅನ್ನವಾಯಿತು.

"ಸಂಯುಕ್ತಾಪಹರಣ ಆತೇನಪಾ ದಾದಲ್ಯಾ?"

ಎಂದು ಸುಶಿಕ್ಷಿತ, ಗೋವಿಂದಭಟ್ಟನ ಪುರಾಣಶ್ರೋತಾವೃಂದ ಕೇಳಿದರೆ —

"ನಿನ್ನ ನದರ ಬಿತ್ತಲೇ ದಾದಲ್ಯಾ ಬಸವಂತೀ ಮ್ಯಾಲ. ಬಚಾವ ಮಾಡಬೇಕಂತ, ಶ್ಯಾಮರಾಯಾ ಜಾಗಾನಽ ಬಿಡಿಸಿದ ಕಾಣಸ್ತದ. ಚೋಟ ಇದ್ದಾಗಽ ಕಣ್ಣ ಹೊಡೀತಿದ್ದಿ ಅಕೀಗಿ."

ಎಂದು ಅಶಿಕ್ಷಿತ ಪೋಕೀ-ಲುಟಾರು-ಟೋಳೀ ಚಿಕಿತ್ಸೆ ಮಾಡತೊಡಗಿತು.

ಶ್ಯಾಮರಾಯನ ವಿಶ್ವಾಸಿಕ, ಸಾಹೇಬರ ಬಂಗಲೆಯಲ್ಲಿ ಘನ ಪ್ರಸ್ಥವಿದ್ದವ ಎಂಬ ನಂಬಿಗೆಯಿಂದಲೋ ಏನೋ, ಬಸಗೋಂಡ ಕೂಡ ನನ್ನನ್ನೇ ಕೇಳಿದ:

"ಶ್ಯಾಮರಾಯರದು ಏನರಽ ಪತ್ತೇ ದಾದಲ್ಯಾ?"

"ನಾಪತ್ತೇ ಆದ ಪತ್ತೇನಽ ಆಗೇದಲಾ. ನನಗೇನ ಠಾಂವಿಕ್ಕೋ ಮಾರಾಯಾ ನಿನ್ನ ಬೀಗಂದೂ."

ಎಂದು ಮುಖದ ಮೇಲೆ ಹೊಡೆಯುವಂತೆ ಹೇಳಿದ್ದರಿಂದ ಖಜೀಲಾದ ಬಸಗೋಂಡ ನನ್ನ ದಾರಿ ಬಿಟ್ಟು ತನ್ನ ದಾರಿ ಹಿಡಿದ.

ಗೋವಿಂದಭಟ್ಟ ಯಾತ್ರೆಯಿಂದ ಬಂದ ದಿನವೇ ಅವನಿಗೆ ಗಂಟುಬಿದ್ದು 'ದೇವರಿಗೆ ಮಾಡಿಸುವ' ಸಮಾರಂಭ ಮುಗಿಸಿ, ರಾಯರ-ವೆಂಕಪ್ಪನ ಪ್ರಸಾದ ಸ್ವೀಕರಿಸಿ ನಾನು ಮುಂಬೈಮುಖನಾದೆ.

ನಾನು ಈಗಾಗಲೇ ವಿಶ್ವಾಸನಿಗೆ ಸುದೀರ್ಘ ಪತ್ರ ಬರೆದು ಇಲ್ಲಿಯ ಇತ್ಥಂಭೂತ ಬಾತಮೀ ಎಲ್ಲಾ ತಿಳಿಸಿದ್ದೆ. ಬಸವಂತಿ ವಾಡೆಗೆ ಬಂದ, ನಾನು ಅವಳನ್ನು ಒಲಿಸಿಕೊಂಡ ವಿಷಯವನ್ನೂ ತಿಳಿಸಿದ್ದೆ. ತಿಳಿಸುವ ವಿಷಯ ಅಷ್ಟೇನೂ ಉಳಿದಿರಲಿಲ್ಲ. ಆದರೆ ಮುಂದಿನ ಹಂಚಿಕೆಯ ಡಾವು ಮಾಡುವದಿತ್ತು. ಕಾಕಾ ಅವರನ್ನು ಸಾಧ್ಯವಾದರೆ ಊರಿಗೆ ಕರೆತರುವ ಬಗ್ಗೆ ವಿಚಾರಿಸುವದಿತ್ತು. ರಂಗಕ್ಕ, ಸಾಹೇಬರು ತೀರ ಉತಾವಿಳರಾಗಿ ಪುಣೆಗೆ ಬಂದು, ಶಕೂನ ವಿಷಯವನ್ನು ಪ್ರಸ್ತಾಪಿಸುವ ಸಂಭವವಿತ್ತು. ಅದನ್ನೂ ಎದುರಿಸುವ ಸಮಸ್ಯೆ ನಮ್ಮನ್ನು ನಿತ್ಯ ಕಾಡುತ್ತಿತ್ತು. ಅದಕ್ಕೆ ದಾರಿ ಹುಡುಕುವ ಅಗತ್ಯವಿತ್ತು.

ವಿಶ್ವಾಸನಿಗೆ ಈ ವರುಷ 'ಹಾಸ್ಪಿಟಲ್ ಡ್ಯೂಟಿ, ಪ್ರಾಕ್ಟಿಕಲ್ಸ್' ಹೆಚ್ಚಾಗಿರದ್ದರಿಂದ – ಅವನಿಗೆ ಒಂದಿಷ್ಟು ಬಿಡುವಿರುವ ಸಂಭವವಿತ್ತು. ಅವನ ಕೂಡ ನಿವಾಂತವಾಗಿ ಚರ್ಚೆಮಾಡಿ ಖಚಿತ ನಿರ್ಣಯಕ್ಕೆ ಬರಲು ಅನುವಿತ್ತೆಂದು ನಾನು ಮುಂಬೈಗೆ ಧಾವಿಸಿ ಬಂದಿದ್ದೆ.

ರಾಚಪ್ಪ, ಗೌಡರು, ಗೋವಿಂದಭಟ್ಟ ಆ್ಯಂಡ್ ಮಂಡಳಿ ಪುಣೆಗೆ ಬಂದು ಕಾಕಾ ಅವರಿಗೆ ಊರಲ್ಲಿಯ ಸಾದ್ಯಂತ ಹಕೀಕತ್ತು ವರದಿಮಾಡಿದ್ದರೆ, ಶ್ಯಾಮರಾಯ-ಬಸವಂತಿಯರ ಪ್ರಕರಣದಿಂದ ಅವರಿಗೆ ಆಘಾತವೇ ಆಗಬಹುದಾಗಿತ್ತು.

ಘನ ವಿಷಮ ಗಳಿಗೆ ಸನ್ನಿಹಿತವಾಗುವದರಲ್ಲಿತ್ತು. ಮೃತ್ಯು ವಾಡೆಯ ಇಡೀ ಮುಂಬಾಗಿಲಿಗೇ ಬಂದು ಥಡಕಾಯಿಸಿತ್ತು. ಯಕ್ಷಪ್ರಶ್ನೆಗಳನ್ನು ಒಗೆಯುತ್ತಲಿತ್ತು. ಯಾರೋ ಸಾವಿತ್ರಿ, ಯಾರೋ ನಚಿಕೇತ, ಯಾರೋ ಧರ್ಮರಾಜರ ಅಗಣಿತ ಪ್ರಕಾಶ-ಪುಂಜ ಆ ಪ್ರಶ್ನರತ ಮೃತ್ಯುವನ್ನು ಕಣ್‌ಕುಕ್ಕಿಸಿ, ಬಾಯಿ ಕಟ್ಟಿಸಿ ತಡೆದು ಹಿಡಿದಿತ್ತು. ಅದರ ಗತಿ-ಪ್ರಗತಿಯನ್ನು ಕ್ಷಣೈಕ ಕುಂಠಿತವಾಗಿಸಿತ್ತು.

ನಾನು ಮುಂಬೈಗೆ ಬಂದು ವಿಶ್ವಾಸನಿಗೆ ಮತ್ತೊಮ್ಮೆ ಊರಲ್ಲಿಯ ಸಾದ್ಯಂತ ಹಕೀಕತ್ತನ್ನ ವಿವರಿಸಿದ್ದೆ. ವಿಶ್ವಾಸ ಎಲ್ಲವನ್ನೂ ಕೇಳಿಕೊಂಡಿದ್ದ. ಅಖಂಡ

ತಾಸಿನ ವರೆಗೆ ತನ್ನ ಹೃದಯುವನ್ನು ಬರಿದುಮಾಡಿದ. ವಿಶ್ವಾಸನ ದಿವ್ಯ ಮಾನಸ ಗೊಮ್ಮಟ ಕಣ್ಣೆದುರು ಭವ್ಯವಾಗಿ ಎದ್ದು ನಿಂತಿತು.

ಅವನಿಗೆ ತನ್ನ ಎಂ.ಬಿ..ಬಿ.ಎಸ್. ಕೋರ್ಸ ಮುಗಿದೀತೆನ್ನುವವರಲ್ಲಿಯೇ ನಂಬಿಗೆ ಇರಲಿಲ್ಲ. ಅವನ ಎಂ.ಬಿ.ಬಿ.ಎಸ್.ದ ಬೃಹದಾಶೆಗಳನ್ನು ಶ್ಯಾಮರಾಯ ಕೈಯಾರೆ ಛಟಾಯಿಸಿದಂತಾಗಿತ್ತು. ಮನುಷ್ಯ ಕಳವು ಮಾಡಿ ಬದುಕುತ್ತಾನೆ; ರಾಂಡ ಬಾಜತನ ಮಾಡಿಯೂ ಮೆರೆಯುತ್ತಾನೆ. 'ಕ್ರಿಮಿನಲ್' ಆಗಿಯೂ ಸಾಯದೆ ಬದುಕುತ್ತಾನೆ. ಆದರೆ ಆದರ್ಶವಾದಿಯಾಗಿ ಇದ್ದೂ ಸತ್ತಂತಾಗುತ್ತಾನೆ. ಅವನು ಎಂಥ ಆದರ್ಶಗಳನ್ನು ಇಟ್ಟುಕೊಂಡಿದ್ದ? ಎಂ. ಎಸ್. ಎಫ್. ಆರ್. ಸಿ. ಎಸ್. ಆಗಬೇಕು. ತಮ್ಮ ವಾಡೆಯನ್ನು ಮೀರಿಸುವ ದೊಡ್ಡ 'ಹಾಸ್ಪಿಟಲ್' ನಡಿಸಬೇಕು. ಗಣಪತಿದೇವಸ್ಥಾನದ ಅಮಾಪ ಸಂಪತ್ತು ಬ್ಯಾಂಕಿನಲ್ಲಿ ಕೊಳೆಯುತ್ತ ಬಿದ್ದಿತ್ತು. ಅದನ್ನು ದವಾಖಾನೆಗೆ, ತನ್ನ ಊರಲ್ಲಿ, ತನ್ನ ಊರವರಿಗಾಗಿ ನಡೆಸಿದ ದವಾಖಾನೆಗೆ ವಿನಿಯೋಗಿಸಬೇಕು. ಮಿರ್ಜಿಯ ಮಿಶನರೀ 'ಹಾಸ್ಪಿಟಲ್' ನಡೆಸುವ ಜನರಲ್ಲಿಯ ಆಸಕ್ತಿ, ಅಭಿಮಾನ ಇಲ್ಲಿಯೂ ಇದೇ ಎಂದು ತೋರಿಸಬೇಕು. ಅದೇ ಈರ್ಷೆಯಿಂದ, ಅದೇ ಆಶೆಯಿಂದ, ಅದೇ ನಿಶ್ಚಯದಿಂದ ಅವನು ವೈದ್ಯಕೀಯ ಶಿಕ್ಷಣಕ್ಕೆ ತನ್ನನ್ನು ನಿಯೋಗಿಸಿಕೊಂಡಿದ್ದ. ಶಿವರಾಮಪಂತರ, ರಾಮಜೀ ಕಾಕಾನ, ರಾಧಾಕಾಕೂನ ಹೆಸರು ದವಾಖಾನೆಯ ಕೋಣೆ ಕೋಣೆಯಲ್ಲಿ ನಿನದಿಸುವಂತೆ ಮಾಡಬೇಕೆಂಬ ಹೆಬ್ಬಯಕೆ ಅವನದಾಗಿತ್ತು. ಈ ದಾರಿಯನ್ನು ತಾನು ಬಿಟ್ಟು ಒಂದು ಬೀ.ಎ. ಆಗಿದ್ದರೆ ಐ.ಸಿ.ಎಸ್.ಗೆ ಹೋಗುತ್ತಿದ್ದ. ಯಾವುದೋ ಜಿಲ್ಹೆಯಲ್ಲಿ ಒಂದು ಕಲೆಕ್ಟರ, ಒಂದು ಜಡ್ಜಿ ಖಾತ್ರೀಯಾಗಿ ಆಗುತ್ತಿದ್ದ. ಅದರಿಂದ ಊರಿಗೆ ಏನು ಕೀರ್ತಿ ಬಂದಂತಾಗುತ್ತಿತ್ತು? ಈ ಊರು. ಈ ವಾಡೇ. ಇಲ್ಲಿಯ ಜನ. ಅಲ್ಲಿಯ ನೀರು. ಅದರ ಮಣ್ಣು. ಅದರದೇ ಅವನಿಗೆ ಅಂತಿಮ ಆಶೆಯಾಗಿತ್ತು. ಅದನ್ನು 'ಹೆರಿಟೇಜ್' ಎಂದು ನೆಚ್ಚಿದ್ದ.

ಸಾಂಗಲಿಗೆ ಕಲಮಾಗಿ ಹೋಗಿದ್ದ. ಅಲ್ಲಿಯೂ ಅವನಿಗೆ ಮನೆ ಇತ್ತು. ಬ್ಯಾಂಕಿನಲ್ಲಿ ಹಣವಿತ್ತು. ಅವನ ವಸೂ ಇದ್ದಳು. ಪಂತಮಾಮಾ. ಬನೂಮಾಮೀ ಅವರ ಅಕ್ಷಯ ಅಂತಃಕರಣ. ಕರಳು ಎಲ್ಲಾ ಇತ್ತು. ಆದರೆ ತನ್ನ ಊರಿನ ಮಣ್ಣು. ನೀರು ಅವನಿಗೆ ಮೃತ್ತಿಕಾ-ತೀರ್ಥವೆನಿಸಿದಂತೆ ಅಲ್ಲಿಯದು ಅನಿಸಿರಲಿಲ್ಲ.

ಸುರೇಶ. ಸತೀಶ. ಕಿಶೋರರ ಪಿಂಡ ನಾಗರೀಯ ಪುಣೇಯದು. ಅವರಿಗೆ

ಊರಿನ ಗಂಧವತೀ ಪೃಥವಿಯ ಸುಗಂಧ ಅರ್ಥವಾಗದು. ವಿಶ್ವಾಸ, ಊರಲ್ಲಿ ಹುಟ್ಟಿದ, ಅಲ್ಲಿಯೇ ಬೆಳೆದ. ಆ ತಾಯಿಯ ತೊಡೆಯ ಮೇಲೆ ಒರಗಿ ಲೀಲಾವಿಲೋಲನಾದ. ಸೂಟಿಯಲ್ಲಿ ಊರಿಗೆ ಬರದಿದ್ದರೆ ಅವನ ಕರಳು ಕಿಂವಿಚುತ್ತಿತ್ತು. ಸಂಕಟವಾಗುತ್ತಿತ್ತು. ಊರಿನ ನೆಲದ ಮೇಲೆ, ಅದರ ಮಣ್ಣಿನ ಮೇಲೆ, ಕೈ-ಕಾಲು ಬೀಸಿ ಹೊರಳಾಡದೆ ಅವನ ಸಂಕಟ ಹಿಂಗುತ್ತಿದ್ದಿಲ್ಲ. ಅವನ ದಾಹ ಹಿಂಗುತ್ತಿರಲಿಲ್ಲ. ಪಂತರು ಆ ನೆಲದ ಮೇಲೆ ಒಂದು ಗುಡಿಯನ್ನು ನಿಲ್ಲಿಸಿದಂತೆ, ವಾಡೆಯನ್ನು ಏರಿಸಿದಂತೆ, ಆ ಮೃತ್ತಿಕಾ-ತೀರ್ಥದಿಂದ ಜೀವನವನ್ನೂ ತಿದ್ದಿ ತೀಡಿಕೊಂಡಿದ್ದರು. ಗೋವಿಂದಭಟ್ಟನಿಗೆ ವೃಂದಾವನದಲ್ಲಿಯ ಮಣ್ಣು ಅಷ್ಟೇ ಮೃತ್ತಿಕಾಸ್ವರೂಪವಾಗಿ ಕಾಣುತ್ತದೆ. ಆದರೆ ಕಾಕಾ-ರಾವಜೀಕಾಕಾ, ಊರು ಬಿಡುವ ಮುನ್ನ, ಒಂದು ಬೆಳ್ಳಿಯ ದೊಡ್ಡ ಡಬ್ಬಿಯಲ್ಲಿ ತಮ್ಮ ಹೊಲದಲ್ಲಿಯ ಮೃತ್ತಿಕೆಯನ್ನು ತುಂಬಿಕೊಂಡು ಪುಣೆಗೆ ಒಯ್ದರು. ಅದನ್ನು ಶಿರೋಧಾರಣೆ ಮಾಡದೆ ಅವರ ಬೆಳಗಿನ ಇತರ ಕೆಲಸ ಮೊದಲಾಗುವದಿಲ್ಲ. ಪಂತರಿಗೆ ಈ ನೆಲದ್ದು, ಈ ನೀರಿನದು ಘನ ಹವ್ಯಾಸ, ಧ್ಯಾಸ. ಇದೇ ಧ್ಯಾಸದಿಂದಲೇ ವಿಶ್ವಾಸ ಡಾಕ್ಟರನಾಗಿ ಊರಿಗೆ ಬರಬೇಕೆಂದಿದ್ದ. ವ್ಯಕ್ತಿಯಾಗಿ ಎದ್ದರೆ ಅದೇ ನೆಲದ ಆಸರೆಯನ್ನು ಮಾಡಿಕೊಂಡು ಏಳಬೇಕೆಂದಿದ್ದ. ಬಿದ್ದರೆ, ಆ ಮಣ್ಣಿನಲ್ಲಿಯೇ ದೇಹ ಅಂಗಾತವಾಗಿಸಬೇಕೆಂದಿದ್ದ.

ಎಲ್ಲ ಸುಸೂತ್ರವಾಗಿ ಸಾಗಿದ್ದರೆ, ಅವನ ಆಶೆ ಪೂರ್ಣವಾಗುತ್ತಿತ್ತು. ಅವನ ಹವ್ಯಾಸಕ್ಕೆ ಬಯಸಿದ ಫಲ ದೊರಕುತ್ತಿತ್ತು. ಆದರೆ... ಈಗ ಅಂಥ ಯೋಗವೇ ತನ್ನ ಕುಂಡಲಿಯಲ್ಲಿ ಇಲ್ಲವೆಂದು ವಿಶ್ವಾಸ ಭಾವಿಸಿದಂತಿತ್ತು. ಅವನ ಭಾವನೆ, ಕಲ್ಪನೆ ಕವಿಕಲ್ಪನೆಯಾಗಿರಲಿಲ್ಲ. ಅದರಲ್ಲಿ ವ್ಯಾವಹಾರಿಕ ಸತ್ಯ ಓತಪ್ರೋತವಾಗಿ ತುಂಬಿತ್ತು.

ಶ್ಯಾಮರಾಯ ಡಾವು ಸಾಧಿಸಲಿದ್ದ. ಪಂತರದಲ್ಲದ ಈ ದುರ್ಬೀಜವನ್ನು ನಿರ್ನಾಮಮಾಡುವ ಪಣ ಪುಕಾರಿಸಿದ್ದ. ಅದನ್ನು ನಿರ್ನಾಮ ಮಾಡುವ ಸಾಮರ್ಥ್ಯ, ಶಕ್ತಿ ಅವನಲ್ಲಿ ಇರಲಿಲ್ಲ. ಅದಕ್ಕೇ ಅವನು ಕೀಟರೂಪ ಧಾರಣಮಾಡಿ, ಪಂತ ಕುಟುಂಬದ ಈ ಅಗಿಯನ್ನು, ಚಿಗಿತು ಮುಲಮುಲಿಸಲಿರುವ ಶ್ರೀಗಂಧಗಿಡವನ್ನು ಒಳಗಿಂದೊಳಗೇ ಕೊರೆಯತೊಡಗಿದ್ದ. ವಿಶ್ವಾಸ ಅಸುಖಿಯಾದರೆ, ಸೋನಕ್ಕ ಕೊರಗುತ್ತಾರೆ. ವಿಲಿವಿಲಿ ಒದ್ದಾಡುತ್ತಾರೆ. ಅವರು ಹಾಗೆ ಒದ್ದಾಡಿ ಕಣ್‌ಮುಚ್ಚಿದರೆ ಅದರ ರಖಳ ವಿಶ್ವಾಸನಿಗೆ ಬಡಿಯದೆ ಹೋಗುವದಿಲ್ಲ. ಧೈರ್ಯ-ಮೇರುವಾಗಿ

ಆ ಋಣವನ್ನು ವಿಶ್ವಾಸ ಸಹಿಸಿದ್ದ. ಅದನ್ನು ಹೃದಯಸ್ಥವಾಗಿ ಮಾಡಿಕೊಂಡು, ಅಭ್ಯಾಸ-ರೀತಿ-ನೀತಿಯಲ್ಲಿ ವ್ಯತ್ಯಯವಾಗದಂತೆ ಸಾಧನೆ ನಡೆಸಿದ್ದ. ವಸೂನ ಆಶೆಗೂ ತರ್ಪಣ ಒಪ್ಪಿಸಲಿದ್ದ. ಅವಳು ಎಲ್ಲಿಯಾದರೂ ಸುಖಿಯಾಗಿ ಬಾಳಲಿ, ಬದುಕಲಿ ಎಂದು ಅವಳಿಗೆ ತಿಳಿಸಿದ್ದ. ಆ ಸಂಕಟ ಎಂಥದಿರಬೇಕು? ಆ ಕಿಚ್ಚು ಎಂಥ ದಾಹಕವಾಗಿರಬೇಕು?

ಈಗ... ಈಗ... ಸೋನಕ್ಕ-ಶ್ಯಾಮರಾಯನ ಸಂಬಂಧ ಬಿಘಡಾಯಿಸಿದ ವಿಷಯ ಸಾಹೇಬರ ಮುಂದೆ ಸ್ಫೋಟವಾಗುವ ಕಾಲ ಸನ್ನಿಹಿತವಾಗಿದೆ. ಸುರೇಶ, ಶಕೂನ ಸಂಬಂಧವೂ ತನ್ನ-ವಸೂನ ಸಂಬಂಧದಂತೆ ಆದರೆ......

ಬಸವಂತಿ-ಶ್ಯಾಮರಾಯನ ಸಂಬಂಧ ತಿಳಿದು ಬಂದು. ಅದನ್ನು ತಡೆದು ಕೊಳ್ಳುವ ತ್ರಾಣವಿಲ್ಲದೆ ಸೋನಕ್ಕ ನೆಲ ಹಿಡಿದರೆ......

ರಾವಜೀಕಾಕಾ ಉನ್ಮಾದಿಯಾಗುತ್ತಾರೆ. ತಮ್ಮ ಅಂತಃಕರಣದ ಕೂಸು ಸೋನಾ ನೆಲ ಹಿಡಿದಳೆಂದು ಉನ್ಮಾದಿಯಾಗಿ, ಭ್ರಮಿಷ್ಠರಾಗಿ, ಬಂದೂಕು ಎತ್ತಿ' ಶ್ಯಾಮರಾಯನ ಬಲಿಗೆ ಆಸುರಿಸಿದರೆ......

ನಾನು ಊರಲ್ಲಿದ್ದಾಗ, ರಾಚಪ್ಪ ಹೇಳಿದ್ದ: ತಾನು, ಗೌಡರು. ಗೋವಿಂದ ಭಟ್ಟ ಕೂಡಿಕೊಂಡು ಪುಣೆಗೆ ಬರುತ್ತೇವೆ. ಕಾಕಾ ಅವರನ್ನು ಕಂಡು ಎಲ್ಲ ವಿಷಯ ವನ್ನು ವಿವರಿಸುತ್ತೇವೆ. ನಿನ್ನ ಅಗತ್ಯವೂ ಅಲ್ಲಿ ಇದೆ – ದಾದಲ್ಯಾ ನೀನೂ ಬಂದರೆ ಉತ್ತಮವೆಂದು. ಈಗ ಅವರು ಬರುವ ವಿಷಯವನ್ನು ಕುರಿತು ನಾನು, ವಿಶ್ವಾಸ ಚರ್ಚಿಸಿದ್ದೆವು. ಆ ಚರ್ಚೆಯ ನಿಷ್ಪನ್ನವಾಗಿ – ಪಂತ-ಕುಟುಂಬ ಮೂರಾಬಟ್ಟೆಯ ದಾರಿಯಲ್ಲಿ ಬಹು ದೂರ ನಡೆದುಬಂದಿದೆಯೆಂಬುದು ಇಬ್ಬರಿಗೂ ಅನಿಸಿತು.

ರಾಚಪ್ಪ, ಗೌಡರು, ಗೋವಿಂದಭಟ್ಟರು ಈಗ ಬರಬಾರದಂತೆ ಮಾಡ ಬೇಕು. ಅವರ ಬದಲು ನಾವೇ ಪುಣೆಗೆ ಪ್ರಯಾಣಿಸಿ, ಕಾಕಾ ಅವರನ್ನು ಪರಭಾರೆ ಕಂಡು. ಸೋನಕ್ಕನ ಅಪರೋಕ್ಷದಲ್ಲಿ, ಕಾಕಾ ಅವರಿಗೆ ಸಾದ್ಯಂತ ಹಕೀಕತ್ತು ವಿವರಿಸಬೇಕು. ಬಂದ ವಿಪತ್ತನ್ನು ಅವರೇ ವಜ್ರಹೃದಯಿಯಾಗಿ ಎದುರಿಸಿ. ಸೋನಕ್ಕನಿಗೆ ಸಮಜೂತಿಯನ್ನು ಹಾಕಲು ಯತ್ನಿಸಬೇಕೆಂದು ಬಿನ್ನವಿಸಿದರೆ...?

"ವಿಶ್ಯಾ, ಸೋನಕ್ಕಗ ದಾದಾನ ಆಶಾ ಉಳದಿಲ್ಲಾ. ಅಂವಾ ಯಾರ್ನ ಕಟ ಗೊಂಡು ಇದ್ದರೂ ಅದರ ಸುಖಾ-ದುಃಖಾ ಅವರಿಗೆ ಅಷ್ಟರಾಗೇ ಅದ. ತಮ್ಮ ಮ್ಯಾಲ ಬಂದ ಅಪವಾದ ಅಳೀಬೇಕು. ನೀ ಸುಖೀ ಆಗಬೇಕು ಅನೂದಷ್ಟ ಅವರ

ಖರೇ ಆಶಾ ಅದs. ಬಸವಂತಿ ಹೀಂಗ ಇದ್ದಾಳ: ಆಕೀ ದಾದಾನ ವಸ್ತೂ ಅನ್ನೂದ ಕಿಂತಾ. ವಾಡೇದ್ದು, ಸೋನಕ್ಕಂದು ಕ್ಷೇಮದ್ದಶಿಂದ ನಿನ್ನ ಜೀವಾ ನಿವಾಳಿಸಿ ಒಗೀ ಅಂದರೂ ಒಗೀಲಿಕ್ಕೆ ತಯಾರ ಇದ್ದಾಳ ಅನ್ನೂದನ್ನ ಪಟಾಸೂ ಹಾಂಗ ಹೇಳಿದರ ಕಾಕಾ-ಸೋನಕ್ಕಾ ಅದನ್ನ ನಂಬೂ ಸಂಭವ ಅದs. ಅವರಿಗೆ ನಿನ್ನ ಮಾತಿನ್ಯಾಗ ವಿಶ್ವಾಸ ಅದs. ನನ್ನ ಮ್ಯಾಲ ನಂಬಿಗಿ ಅದs. ಈಗ ನಾವು ಅಟಾಪಿಸಬೇಕಾದದ್ದು ಸಾಹೇಬರ್ನ. ನಾನು ಈ ಕೆಲಸದ್ದಶಿಂದ ಊರಾಗರ – ಇಲ್ಲs ಬೆಳಗಾಂವೀ ಒಳಗರs ಬೈಠಕ ಹಾಕತೀನಿ. ಬಸವಂತೀ ಮಾರ್ಫತ್ ದಾದಾನ್ನ ಹಣ್ಣಿಗೆ ತರತೀನಿ. ಸಮಯ ಸಾಧಿಸಿ, ಸಾಹೇಬರ ಮುಂದ ಈ ಭಾನಗಡೀ ಉಲಗಡಾ ಮಾಡತೀನಿ. ಸಾಹೇಬರ ಮನಸ್ಸೂ ಸ್ವಚ್ಛ ಆಗತದ. ದಾದಾ ಕೊಟ್ಟ ಅಪವಾದಾ ನಿರರ್ಥಕ ಅದs ಅನ್ನೂದು ಅವರಿಗೂ ತಿಳೀತದ. ಅದರಿಂದ ಸುರ್ಯಾನ 'ಪ್ರಾಬ್ಲೆಮ್'ನೂ ಬಿಡತದ. ನಿಂದೂ ಕೋರ್ಸು ಮುಗೀತದ. ನಿಂದೇನ ಅಂಬೋಣ ವಿಶ್ಯಾ ಈ ವಿಚಾರಕ್ಕ?" ನಾನು ಕೇಳಿದೆ.

"ದಾದಲ್ಯಾ. ನಿನ್ನ ವಿಚಾರೇನೋ ಠೀಕನs ಅದs. ಆದರ ಇದೆಲ್ಲಾ ಆಗೂ ತನಕಾ ದಾದಾನ ಮ್ಯಾಲ ಪಾಳತೀ ಇಟಗೊಂಡು ನೀ ಇರಬೇಕಾಗತದ. ನಿನ್ನ 'ಕರಿಯರ್' ಕೆಡಿಸಿಗೋಬೇಕಾಗತದ. ನನ್ನ ಆಶಾ ಎಲ್ಲಾರೂ ಹ್ಯಾಂಗ ಹಿಡದಾರ, ಹಾಂಗs. ಗೋವಿಂದಭಟ್ಟಾ. ಗೋದಕ್ಕಾ ನಿನ್ನ ಆಶಾ ಹಿಡದಾರ. ಅವರ ಭಿಸ್ತು ನಿನ್ನ ಮ್ಯಾಲs ಅದ. ನಾಳೆ ನೀ ಎಂ.ಏ. ಮುಗಿಸಿ. ಖಾತ್ರೀಲೇನs 'ಆಫೀಸರ್' ಆದೀ ಅನ್ನೂ ಭರೋಸು ನನಗೂ ಅದs. ತನ್ನ ಮಗಾ ಮಾಮಲೇದಾರ ಆದಾ, ಡಿ. ಡಿ. ಸಿ. ಆದಾ. ಅಂದರ ಗೋವಿಂದಭಟ್ಟಗ ಏಸ ಆನಂದ ಆಗಬಾರದು ಹೇಳು? ಬಿ.ಏ. ಕ್ಲಾಸ್ ಬಂದಿ. ಎಂ.ಏ.ದಾಗೂ ಕ್ಲಾಸ್ ಬರತೀ. ನಪಕರೀ ಗ್ಯಾರಂಟೀ ಅದs. ಬ್ಯಾಡ, ದಾದಲ್ಯಾ, ನಮ್ಮ ದಶಿಂದ ನಿನ್ನ 'ಕರಿಯರ್' ಹಾಳ ಮಾಡಿಕೋಬ್ಯಾಡಾ. ಅಲ್ಲೆ ಊರಾಗ ರಾಜಪ್ಪ ಇದ್ದಾನ. ದಾದಾನ ಹಾಲ್‌ಚಾಲೀ ಮ್ಯಾಲ ಕಣ್ಣ ಇಟ್ಟಿರತಾನ. ಬಸವಂತಿ ಅಂವಗ ಸಾಮೀಲ ಇರತಾಳ. ನಿಮ್ಮ ಸಾಹೇಬರಿಗೆ ಮಾತ್ರ ಒಂದು ಸುದ್ದೀ ತಿಳಸೂಣು. ಏನಂದರ, ಸುರೇಶಗ ಸದ್ಯಕ್ಕ ಲಗ್ನಬಲಾ ಇಲ್ಲಾ. ಒಂದ ವರ್ಷ ಅದರ ದಶಿಂದ ಮಾತ-ಕಥೀ ಆಡೂದು ಶಕ್ಯ ಇಲ್ಲಂತ. ಮುಂದ ಆದರೂ ಶಕೂನ ಜವಾಬ್ದಾರೀ ನಮಗ ಕೂಡಿತಂತ. ಸುರ್ಯಾ ಬೆಳಗಾಂವಿಗೆ ಹೋಗಿ ಬಂದು. ಇರವಲ್ಲನ್ಯಾಕ. ನಾವು ಬ್ಯಾಡಂದರೂ ಅಂವೇನು

ಕೇಳಾಂವಲ್ಲಾ. ತಾಯೀ-ಕಾಕಾಗ ಮಾತ್ರ ಈ ಸುದ್ದೀ ಚೂರ-ಚಾರ ಬಿಡದೇ ತಿಳಿಸಿ ಇಡಲಿಕ್ಕೆಬೇಕು.

ಸಾಹೇಬರನ, ರಂಗಕ್ಕನ್ನ 'ಕನ್‌ವ್ಹಿನ್ಸ್' ಮಾಡಲಿಕ್ಕೆ ದಾದಾ ಬರೇ ಸುಳ್ಳ ಹೇಳಿಕೋತ ಬಂದಾನನ್ನೂದನ್ನ ಪಟಾಸಿಕೊಡಲಿಕ್ಕೆ ಬಸವಂತೀನs ಜೀವಂತ ಸಾಕ್ಷೀ ಆಗತಾಳ. ದಾದಾ ಬಸವಂತೀ ಕೈ ಬಿಟ್ಟರ ಆಕೀ ಏನು ಕಾಳಜೀ ಮಾಡೂ ಕಾರಣ ಇಲ್ಲಾ. ತಾಯೀ. ಆಕಿನ್ನ ತಂಗೀ ಹಾಂಗ ನೋಡಕೋತಾಳ. ಕಾಕಾ ಬಸವಂತಿನ್ನ ಮಗಳ್ಹಾಂಗ ನೋಡಕೋತಾರ. ನಾವು ಧೊಡ್ಡ ಕುತ್ತನs ದಾಟೇವನೂ ಧೈರ್‍ಯಾ ಅದs ದಾದಲ್ಯಾ ನನಗ."

ವಾಡೆಯು ಹೆಬ್ಬಾಗಿಲಲ್ಲಿ ನಿಂತ ಮೃತ್ಯು. ನಮ್ಮ ಈ ಯೋಜನೆಯಿಂದ ಹಿಂದೆ ಸರಿಯುವ ಲಕ್ಷಣ ಕಂಡಿತು. ವಾಡೇ – ಪಂತ-ಕುಟುಂಬ ಬದುಕಿ ಬಾಳುವ ಸುಚಿಹ್ನ ಗೋಚರಿಸಿದಂತಾಯಿತು. ನಾನು-ವಿಶ್ವಾಸ ಕೂಡಿಯೇ ರಾಜಪ್ಪನ ಹೆಸರಿಗೆ ವಿವರವಾದ ಪತ್ರ ಬರೆದು ಸದ್ಯಕ್ಕೆ ಪುಣೆಗೆ ಬರಬೇಡಿರಿ. ದಾದಲ್ಯಾ ಮುಂಬೈಯಿಂದ ಬಂದು ಸಾದ್ಯಂತ ಹಕೀಕತ್ತು ತಿಳಿಸುವ ತನಕ ಸ್ವಸ್ಥವಿದ್ದು ಬಿಡಿರಿ ಎಂದು ತಿಳಿಸಿದೆವು. ರಾಜಪ್ಪ ಬಹಳ ಧೇನಿಸಿ, ಬಹಳ ತನಿಖಿಸಿ ಹೆಜ್ಜೆ ಇಡುವ ನಿರ್ಣಯಕ್ಕೆ ಬರುವ ಸಮಂಜಸ ಬುದ್ಧಿಯು ಮನುಷ್ಯನೆಂಬ ಖಾತ್ರೀ ಇಬ್ಬರಿಗೂ ಇತ್ತು. ಅವನಿಗೆ ಈ ಪತ್ರ ಹಾಕಿದ ಬಗ್ಗೆ ನಮಗೆ ಸಮಾಧಾನವೆನಿಸಿತು.

ವಿಶ್ವಾಸ ಡೀನರನ್ನು ಕಂಡು, ಅಗತ್ಯದ ಕೆಲಸವಿದೆಯೆಂದು ಹೇಳಿ ನಾಕು ದಿನಗಳ ರಜೆ ತೆಗೆದುಕೊಂಡ. ಮರುದಿನ ಬೆಳಗಿನ ಗಾಡಿಗೇ ನಾವು ಮುಂಬೈ ಬಿಟ್ಟೆವು.

ನಾನು ಮುಂಬೈಗೆ ಬಂದು ನಾಕು ದಿನ ಅಲ್ಲಿದ್ದರೂ ನನಗೆ ಅದರ ವಿರಾಟ್ ವೈಭವವನ್ನು ನೋಡುವದಾಗಲಿಲ್ಲ; ವಿಶ್ವಾಸನಿಗೆ ಅದನ್ನು ತೋರಿಸುವದಾಗಲಿಲ್ಲ. ಅದರಿಂದ ವಿಶ್ವಾಸನಿಗೆ ಕೆಡುಕೆನಿಸಿತ್ತು. ಅವನು —

"ದಾದಲ್ಯಾ. ಹ್ಯಾಂಗೂ ಎಂ.ಏ.ದ ಪರೀಕ್ಷಾಕ್ಕ ಬಂದೇ ಬರತೀಯಲಾ. ಒಂದ ತಿಂಗಳು ಅಗಾವನೇ ಬಂದಬಿಡು. ವಸೂನೂ ಬರತಾಳ. ನಿಮ್ಮ ತೈನಾತಿಗೆ ದಸ್ತಗೀರ್‍ಯಾ, ಸುರ್‍ಯಾನ್ನ ಕರಸತೀನಿ. ಪರೀಕ್ಷಾ ಮುಗದ ಮ್ಯಾಲ ಮುಂಬೈ ಮಜಾ ಲುಟಾಸೀರ್‍ಯಂತs"

ಹೇಳಿದ.

“ವಿಶ್ಯಾ, ಜಿವಾಚೀ ಮುಂಬೈ ನಡದೇ ಅದs! ಇನ್ ಬ್ಯಾರೇ ಮಜಾ ಮಾಡೂದೂ ಏನ ಉಳದsದ! ನೀ ಜೋರ ಮಾಡತೀ ಅಂತ ನಾ ಎಂ.ಏ.ಕ್ಕ ಕೂತರೂ ಕೂತೇನು. ಖರೇ ವಿಶ್ಯಾ, ನನಗ ಎಂ.ಏ.ದ ಆಶಾ ಉಳದಿಲ್ಲಾ. ನೀ ಊರಾಗ ನಿಂತು ದವಾಖಾನೀ ತಗದೀ ಅಂದರ, ನನಗ ಕಂಪಾವುಂಡರ ಆಗೂ ಬೇತ ಅದs ನೋಡು. ರಿಟಾಯರ್ಡ ಡಿ.ಡಿ.ಸಿ. ರೋಮರೇಮಾಮಾ – ಸುರ್ಯಾನ ಭಾವೀ ಮಾವಾ –‘ಎಕ್ಸ್-ಎಂಜಿನೀರ್ ಕ್ಲಾಸ್ ಒನ್ ಆಫೀಸರ್’ ಎಂಥಾ ಖೋಕಾ ಅಪs ಅನ್ನೂದನ್ನ ಪ್ರತ್ಯಕ್ಷ ನೋಡೀನಿ, ಇನ್ ಮತ್ತ್ಯಾಕ ಆ ಸಾಹೇಬಕೀ ಷೋಕ್ ಸೂಳೀಮಗನ್ದು. ರೊಕ್ಕಾ ಕೊಟ್ಟು ಸಾಲೀ ಕಲ್ತಾವ್ರು, ಅದನ್ನ ಉಗಾಸ ಲಿಕ್ಕೆ ನವಕರೀ ಮಾಡತಾರ. ಬಡ್ಡೀದರಸಲೆ ವಸೂಲ ಮಾಡಲಿಕ್ಕೆ ವರದಕ್ಷಿಣೀ ರೇಟ್ ಏರಸ್ತಾರ. ನನ್ನ ಶಿಕ್ಷಣಂತೂ ಬಿನ್-ಭಾಂಡವಲದಲೇನs ಆಗೇದ. ಉಗಾಸೂ ಉಸಾಬರೀನs ಇಲ್ಲಾ. ಶಿಸ್ತ ನಿನ್ನ ಕೈಯಾಗ ಕಂಪಾವುಂಡರ ಆದೇ ಅಂದರ, ಯಾತರ ದದಾತೀನೂ ಇಲ್ಲಾ. ಗಣಪತಿಗುಡಿ ಪೂಜಿಯಂತೂ ‘ಹ್ಯಾಂಡ್ಲಿಂಗ್’ ಬಾಬು. ಜನ್ಮ ಸೋಬತಿ. ದಿನಾ ಪಂಚಪಕ್ವಾನ್ನದ ನೈವೇದ್ಯ ಅಗತದ. ನೀ ಬಿಟ್ರ್ಯೂ, ಪ್ಯಾಂಟ-ಶರ್ಟನಿಂದ ಅಂಗವಿನ್ಯಾಸ ಆಗತದ. ಸಂಜಿ ಆತಂದರ, ವಸೂ-ನಾನು-ನೀನು ಮೂರ ಮಿಕಾ ಕೂಡಿ, ಕಾವ್ಯಶಾಸ್ತ್ರವಿನೋದಾ-ಚಂಪೀ-ಮಾಡಿಕೋತ ಇರೂದರ ಮುಂದ ನವಕರೀ – ಮಾಮುಲೇ, ಡಿ.ಡಿ.ಸಿ. ನಿವಾಳಿಸಿ ಒಗೀಬೇಕು! ಧಡಪಡ ಯಾಕ ನಡದsದ ಮನಸ್ಯಾಂದು? ಸುಖದ್ದಶಿಂದ! ಆ ಸುಖಾ, ನಾನು, ನನ್ನ ಕಣ್ಣಲೇನs ಕಾಣಬೇಕು. ಗೋವಿಂದಭಟ್ಟನ ರಂಗೀತ ಚಷ್ಮಾದಾಗಿಂದ ನೋಡಿದರ ಏನ ಬಂತು ಸುಖಾ? ವಿಶ್ಯಾ, ‘ಯತ್ರ ಪಾರ್ಥೋ ಧನುರ್ಧರಃ’... ಗೊತ್ತ ಅದs ಇಲ್ಲೋ? ವಿಶ್ಯಾ ಇದ್ದಲ್ಲೆ ದಾದಲ್ಯಾ. ಅವನ ನೆಳ್ಳಾಗಿ, ಅವನ ದೆವ್ವ ಆಗಿ, ಅವನ ಬೆನ್ನಿಗೇನs ಇರಾಂವಾ. ವಿಶ್ಯಾ, ನಾ ಸೂರ್ಯಪಾನದ ಹೂವಿ ನ್ಹಾಂಗ. ನೀ ಎದ್ದು – ಏರಿಕೋತ ನಡಧಾಂಗ, ನಾನೂ ಅರಳಿ ಮಾರೀ ತಿರಗಸೂ ಅಂವಾ. ನೀ ಅಸ್ತ ಆದರ, ನಾನೂ ಕಣ್ಣ ಮುಚ್ಚಾವಾ.

ವಿಶ್ಯಾ, ನನ್ನ ‘ಕರಿಯರ್’ ಹಾಳ ಮಾಡಕೋಬ್ಯಾಡಾ ಅಂದೀ. ನನ್ನ ‘ಕರಿಯರ್’ ಯಾತರದು? ಯಾರಿಂದ ಆತ ವಿಶ್ಯಾ ನನ್ನ ‘ಕರಿಯರ್’ಉ? ನಾಯಕ ವಕೀಲರ ಮಕ್ಕಳು ಬಿಟ್ಟ ಚಣ್ಣಾ-ಅಂಗಿಗೆ ತ್ಯಾಪೀ ಹಚಿಗೊಂಡು ಮ್ಯಾಟ್ರಿಕ್ ಆತು. ಸಾಂಗಲಿಗೆ ಹೋಂಟಾಗ, ನಿನ್ನೂ ಹಳೀ ಅರಿವಿ ಇದ್ದೂ. ಅವನ್ನ ಕೊಟ್ಟಿದ್ದರೂ

ಆಗತಿತ್ತು. ಆದರ ರಾವಜೀಕಾಕಾಗ. ದಾದಲ್ಯಾನಲ್ಲೆ ವಿಶ್ಯಾ ಕಾಣಿಸಿದಾ. ಸುರೇಶ, ಸತೀಶ, ಕಿಶೋರರು ಕಾಣಿಸಿದರು. ಅಂದೇ ಹೊಸಾ ಅರಿವೀ ಖರೀದಿ ಮಾಡಿಸಿ, ನಾಕ ಚಣ್ಣಾ, ನಾಕ ಶರ್ಟ ಹೊಲಿಸಿ ಕೊಟ್ಟರು. ಯಾರದೋ ಹೆಣದ ಮ್ಯಾಲಿನ ಅಲ್ಪಾಕಿನ ಕೋಟು. ಗೋವಿಂದಭಟ್ಟಗ ದುರ್ದಾನ ಆಗಿ ಬಂದಿತ್ತು. ಅಂಥಾ ಕೋಟs ಹಾಕೊಂಬೂಅಂವಾ ಇದ್ದೆ. ಕಾಕಾ ಬಂದ್-ಪಾಕೀಟಿನ್ಯಾಗ ರೂಪಾಯಿ ಹಾಕಿ ಕೊಟ್ಟರು. ದಾದಲ್ಯಾ ಕೋಟ ಹೊಲಿಸಿಗೋ, ಚಪ್ಪಲೀ ತಗೋ ಅಂತ ಹೇಳಿ ದರು. ವಿಶ್ಯಾ, ಪಂತರ ಋಣಾ, ಬರೇ ಅನ್ನದ ಋಣಾನೇ ಇಲ್ಲ ನಮಗ. ಅದು ಜೀವದಾಗ ಮುರಡೇದ. ·ಮಾನ-ಮರ್ಯಾದಿ ಕಾದ್ಯದ. ಪಂತರು, ಕಾಕಾ, ಹೊಲದ ಉತ್ಪನ್ನ ಬಿಟ್ಟಾರ ಗೋವಿಂದಭಟ್ಟನ ವಂಶಕ್ಕ. ಚಿತ್ರಾಹುತಿ ಇಡೂ ಮುಂದ. ನಮಗ ಯಾವ ದೇವತಾದ್ದೂ ನೆನಪ ಆಗೂದಿಲ್ಲಾ. ಶಿವರಾಮಪಂತ ರಿಂದ. ಕಾಕಾನ ತನಕಾ ಪಂತ-ಕುಟುಂಬದ ಅಖಂಡ ಪ್ರತಿಮಾದರ್ಶನ ಆಗತದ. ನಿನಗ ಊರಿನ ನೆಲಾ-ನೀರು, ಮೃತ್ತಿಕಾ-ತೀರ್ಥ ಅನಿಸಿತು. ನನಗ, ಆ ನೆಲಕ್ಕ, ಆ ನೀರಿಗೆ, ಮೃತ್ತಿಕಾದ ಗಂಧಾ, ತೀರ್ಥದ ಪಾವಿತ್ರ್ಯ ತಂದ ಪಂತರ ಧ್ಯಾಸ ಹಿಡದ್ಯದ. ಅನ್ನದಾತಾ ಜೀವದಾತಾ ಅವರೇ ನಮಗ. ಅವರ ಧ್ಯಾಸಾ, ಅವರ ದಶಿಂದ ತ್ಯಾಗ ಮಾಡೂದರಾಗ, ಬರೇ ಒಂದ 'ಕರಿಯರ್'ನs. ಯಾಕs, ದಾದಲ್ಯಾನ ದೇಹ ಅಂಗಾತ ಆದರೂ ಅಡ್ಡಿ ಇಲ್ಲಾ. ಕಾಕೂನ ಬಳೀ ದಶಿಂದ ಗೋವಿಂದ ಭಟ್ಟಾ. ವಾಡೇದ ಬಾಗಲದಾಗ ಧರಣೀ ಕೂತು ಅಂಗಾತ ಆಗಿದ್ದಾ. ಆ ತಾಯೀ ಪುಣ್ಯಾ ಅಂವನ್ನ ಬದಕಿಸ್ತೂ. ಆ ಪುಣ್ಯಾದ ಸ್ಮರಣಾ ಮಾಡೇ ನಾ ಒಂದು ನಿರ್ಧಾರಕ ಬಂದೀನಿ. ಒಂದ ವರ್ಷ 'ಡ್ರಾಪ್' ತಗೊಂಬೂದಂತs ಠರಾಸೀನಿ. ಸಾಹೇಬರ ಆಫೀಸಿನ್ಯಾಗ 'ಟೆಂಪ್ರರಿ' ಜಾಗಾಕ್ಕೇನು ದದಾತಿ ಇಲ್ಲಾ. 'ಇಂಟರ್‌ವ್ಯೂ' ಕೂಡ ಆಗೇದ. ಖಾತ್ರೀಲೇ 'ಅಪಾಯಿಂಟ್‌ಮೆಂಟ್'ನೂ ಆಗತದ. ಸಾಹೇಬರಿಗೆ ಪ್ಯಾಂಗೂ ಒಂದ ವರ್ಷದ ಮುದ್ದತನs ಕೊಟ್ಟಿರತೇವು. ಲಗ್ನದ ಗ್ಯಾರಂಟೀನೂ ಇರತದ. ಅವರಿಗೆ ನನ್ನ ಸಂಬಾಳಸಬೇಕಾಗತದ. ನಾ ಅವರ್‍ನ ಅಟಾಪಿಸಬೇಕಾಗತದ. ಪಿ.ಡಬ್ಲ್ಯೂ.ಡಿ.ಯೊಳಗ 'ಫಸ್ಟ್‌ಕ್ಲಾಸ್ ಗ್ರ್ಯಾಜುಯೇಟ್ ಕ್ಲಾರ್ಕ್ಸ್' ಯಾ ಮಗಾ ಇದ್ದಾನ. ನಾ ಅಲ್ಲೆ ಇರೂದು ಎಸ್.ಈ.ಗೇ ಅಭಿಮಾನನs ಅದs. ಟರಕ ದೇಶೀ ಎಸ್.ಈ. ಇದ್ದರ ಆ ಮಾತ ಬ್ಯಾರೇ. ಇನಾ ಸಾಹೇಬರ ರಾಜ್ಯ ಅದs. ಜೀಜ ಇದ್ದವರು ಬದಕೂ ಆಶಾ ಅದs.

ಈಗ ನಾವು ಮಾಡೂ ಮುಖ್ಯ ಮಸಲತ್ತ ಅಂದರ, ಸಾಹೇಬರು, ರಂಗಕ್ಕಾ ಪುಣೇಕ್ಕ ಬರಧಾಂಗ ಮಾಡೂದು. ದಾದಾ-ಬಸವಂತೀ ವಿಷಯಾ ಕಾಕಾ-ಸೋನಕ್ಕ ಅವರಿಗೆ ತಿಳಿಸಿ ಅವರ್ನ 'ಕನ್‌ವ್ಹಿನ್ಸ್' ಮಾಡೂದು.

ಸುರ್ಯಾ-ಶಕೂನ ಸಂಬಂಧ ಜೋಡಿಸಿದ ವಿಷಯಾ, ಕಾಕಾ-ಸೋನಕ್ಕ ಅವರಿಗೆ ತಿಳದರ ಅವರು ಒಂದಿಷ್ಟು ಚಲವಿಚಲ ಆಗೂದು ಸಾಹಜೀಕ ಅದ. ದಾದಾ ಕೊಟ್ಟ ಅಪವಾದಕ್ಕ ಸಾಹೇಬರನ ಬಲೀ ಮಾಡೂದು ಅನ್ಯಾಯ ಅನೂದನ್ನ 'ಸ್ಟ್ರೆಸ್' ಕೊಟ್ಟು ಹೇಳಬೇಕು. ಕಾಕಾ ಅವರಿಗೆ ಅದರಾಗಿನ ತಥ್ಯ ತಿಳೀತ್ವದ. ಅವರು ನಕಾರಾ-ರುಕಾರಾ ಎರಡೂ ಹೇಳದೇ ಸುಮ್ಮ ಇದ್ದಾರು. ಆದರ ಒಂದು ಅಸ್ತ್ರ ಅದ ಅದಕ್ಕ. ವಿಶ್ಯಾ, ಸುರ್ಯಾಗ ಮಂಗಳಿದ್ದ ವಿಷಯಾ ನಿನಗೂ ಗೊತ್ತ ಅದ. ಅದರಿಂದೇ ಅಂವನ ಕಾಯಿ, ಪರ್ಷ ಆತು – ಮುಲ್ಲಿ ಆಕ್ಷೋತ ನಡದ್ವದ. ನಾ ನಾ ಅನ್ನೂ ಅಂಥಾ ಕನ್ಯಾ ಬಂದು ಕೈ ಬೀಸಿಗೋತ ಹೋದೂ. ಅವರದೂ ಕಾಕಾ-ಸೋನಕ್ಕವರಿಗೆ ಚಿಂತಿ ಆಗೇದ. ಈಗ ಏನ ಸಂಚ ಕೂಡೇದಂದೀ? ಶಕೂಗೂ ಮಂಗಳ ಬಾಧಾ ಅದ. ಜೋಯ್ಸಿರ ನಾರಪ್ಪಗ ಪಂತ-ಕುಟುಂಬದ ಕುಂಡಲೀ ಬಾಯಿಪಾಠ ಅವ. ಅಂವಗ ಎರಡೂ ಕುಂಡಲಿ ಹಾಕಿ ತೋರಿಸಿದೆ. ಸಟ್ಟನೇ ಸುರೇಶನ ಕುಂಡಲೀ ಮ್ಯಾಲ ಬಟ್ಟ ಇಟ್ಟು —

"ದಾದಲ್ಯಾ, ಇದು ಸುರೇಶನ ಕುಂಡಲೀ. ನಾನೇ ಬರದಾಂವಾ. ಸನ್ನ ಫಸಾಸ್ತೇನ ಮಗನ? ಕನ್ಯಾ ಎಲ್ಲೀದು? ಈ ಕುಂಡಲೀ ಅಪ್ರತಿಮ ಕೂಡತಾಂವ ನೋಡು."

ಅಂತ ಹೇಳಿದಾ. ಕಾಕಾ ಅವರಿಗೆ, ಭಾಸ್ಕರಾಚಾರಿ – ಚಿರೋನ್ನ ಎದರಿಗೆ ತಂದು ನಿಂದರಿಸಿದರೂ ಅವರ ಮ್ಯಾಲ ವಿಶ್ವಾಸ ಕೂಡೂದಿಲ್ಲಾ. ನಾರಪ್ಪನ ಕುಂಡಲೀ ಕಥನ ಅಂದರ ಬ್ರಹ್ಮವಾಕ್ಯ ಅವರಿಗೆ. ಈ ಬಾಣಾ ಹುಸೀ ಹೋಗೂದಿಲ್ಲಾ. 'ಎಮರ್ಜನ್ಸೀ'ಗೆ ತಗೀತೀನಿ."

ಮುಂಬೈ ಬಿಟ್ಟವರು, ಲೋಣಾವಳ, ಕರ್ಜತದಲ್ಲಿ, ಚಹ ಕುಡಿಯಲಿಕ್ಕೆ ಸಿಗರೇಟು ಖರೀದಿಗೆ ಅಷ್ಟೇ ಇಳಿದಿದ್ದೆವು. ಒಂದೇ ಸವನೇ ನಡೆದ ನಮ್ಮ ಗುಜು ಗುಜು, ಅಖಂಡ ಮಾತಿನಿಂದ 'ಇಂಟರ್ ಕ್ಲಾಸಿ'ನಲ್ಲಿಯ ಅಂಬಟ-ಷೋಕೀ ಸಹ ಪ್ರವಾಸಿಗರೂ ಚಲ-ವಿಚಲಿತರಾಗಿದ್ದರು. ಪುಣೇ ಸಮೀಪಿಸಿದಂತೆ, ನಮ್ಮ ಎದುರಿಗೆ ಬಾಕಿನ ಮೇಲೆ, ಒಂದು ಮೂಲೆ ಹಿಡಿದು ಕುಳಿತ ಒಬ್ಬ ಮುದುಕ —

"ಏನ್ರೈಪಾ. ಪುಣೇಕ್ಕs ಇಳಿಯೂವವರೋ. ಏನ ಮುಂದ ಗಾಡೀ ಹೊಡೀತೀರ್ಯೋ? ಹಾಂಗಿದ್ದರ ಈಗs ಹೇಳರಿ? ಡಬ್ಬೀ ಬದ್ಲ ಮಾಡತೀನಿ. ಏನ ವಟವಟಾ ಹಚ್ಚೀರಿ. ಮಹಾರಾಯರs ಒಂದ ಗಾಡ್ಯಾಗ ಬಂದ ಕೂತಾಗಿ ನಿಂದs? ಜಯಕರ-ಸಪ್ರೂ ಎರಡ ಸಾರೇ 'ರೌಂಡ್-ಟೇಬಲ್ ಕಾನ್ಫರನ್ಸ್'ಗೆ ಹೋಗಿ ಬಂದರು. ಆದರೂ ನಿಮ್ಮಷ್ಟೇನು ಮಾತಾಡಿರಲಿಕ್ಕಿಲ್ಲಾ ಹಾದ್ಯಾಗ. ಏನೋ ಲಗ್ನ-ಪಿಗ್ಗನ ಭಾನಗಡೀ ಒಳಗ ಇದ್ಧಾಂಗ ಕಾಣಸ್ತೀರಿ? ಆಂs?" ಎಂದು ಖುಷಿಯಲ್ಲಿ ಬಂದು ಕೇಳಿದ.

"ಅಜೋಬಾ, ನಿಮ್ಮ 'ಸ್ವಾರೀನೂ ಈಗ ವರಾರ್ಥೀ ಆಗೇ ಹೊಂಟ ಲಕ್ಷಣ ಕಾಣಸ್ತದ. ಈ ಗಾಡೀ ಪುಣೇ ಬಿಟ್ಟು ಮುಂದ ಹಲಾಸೂದಿಲ್ಲಾ. ಆದರೂ ಡಬ್ಬೀ ಬದ್ಲ ಮಾಡತೀನಿ ಅಂತೀರಿ. ಅಶ್ವಮೇಧದ ಪಾಟೀನs ಹಚ್ಚಿಬಿಟ್ಟೀರಿ ಕಾಣಸ್ತದ ಇಂಜನ್ನಿಕ್ಕ. ನಾ ವೈದಿಕಬ್ರಾಹ್ಮಣಾ. ದೇಶಾವರೀ ಗತ್ತಾ ಎಲ್ಲಾನೂ ಅವಗತ ಅಪs ನಮಗ. ನಿಮ್ಮನ್ನ ನೋಡಿದರ, ಮೊಮ್ಮಗಳ ಕಲ್ಯಾಣದ ಕಂತ್ರಾಟದಾಗ ಇರೂ ಹಾಂಗ ಕಾಣಸ್ತದ? ಟಿಪ್ಪಣೀ ಕೊಟ್ಟ ಇಡರಿ. ಇವರು ನಮ್ಮ ಯಜಮಾನರು. ಎಂ.ಬಿ.,ಬಿ.ಎಸ್.ಕ್ಕ ಇದ್ದಾರ. ಇವರಿಗೆ ಎರಡು ಅಡ್ಡ ಹೆಸರಾ. ಒಂದು ಖಾಸಾ, ಇನ್ನೊಂದು ದತ್ತಕದ್ದು. ದತ್ತಕಂದ ಮ್ಯಾಲ ಮುಗೀತು. ಲಕ್ಷ್ಮೀ ಇವರ ಕೈ ಹಿಡದೇ ಜಗ್ಗ್ಯಾಳಂತ ಅದರ ಅರ್ಥಾ. ನಗಲಿಕ್ಕೆ ಏನಾತು? ನಾ ಏನು ಸುಳ್ಳ ಮಾತಾಡತೀನಿ, ನಗಚಾರಿಕೀ ಮಾಡತೀನಿ ಅಂತ ತಿಳದಿರೇನು? ಲಗ್ನ-ಮುಂಜಿವೀ ನಿಶಿಂದ ಮಾತಾಡೂ ವಯಸ್ಸರೈಪಾ ನಮ್ಮದು. ನೂರ ಕಂತ್ರಾಟ ಮಾಡಿ ಒಂದ ಕಲ್ಯಾಣ ಕಟ್ಟಬೇಕಂತಾರ. ಏನ ಬಗೀಹರಸೂದು ಈಗೇನs! ಥ್ವಾಡೇ ದಿನಾ ಹೋದರ, ನಮಗ ಕನ್ಯಾ ಬರೂದು ಥೂರs ಉಳೀತದ, ಬ್ಯಾರೇ ಉಪವರ ಕನ್ಯಾಗ ವರಾ ನೋಡಲಿಕ್ಕೆ ನಿಮ್ಹಾಂಗ ಹೊರಡೂ ಪ್ರಸಂಗ ಬರತದ."

"ದಾದಲ್ಯಾ, ಪಾಪ ಅಜೋಬಾ ಸಹ್ಯಜ ಅಂದರು. ತೀರಾ ಅವರ ಭುರಕೀ ಒರೀಲಿಕ್ಕೇ ಸುರೂಮಾಡಿದ್ಯೆಲಾ? ನಿಂದಿಷ್ಟು ಟಿಪ್ಪಣೀ ಕೊಟ್ಟ ಇಡೂ ಅವರಿಗೆ. ಬಿ.ಪಿ. ಫರ್ಸ್ಟ್‌ಕ್ಲಾಸ್ ಬಂದ ವರಾ. ವರಾವರಾ ಅಲದರೂ ಸಿಗೂಹಾಂಗಿಲ್ಲಾ. ಅಂಥಾ ಮಾಲಮುಸಾಲೇದಾರ ಚೀಜ ಇದ್ದೀ. ನಿನ್ನ ಪತ್ತೇ-ಗಿತ್ತೇ ಕೊಟ್ಟ ಇಡಲೇನು ದಾದಲ್ಯಾ?"

"ದಾದಲ್ಯಾ. ದಾದಲ್ಯಾ! ಏನ ಹೆಸರೋ ಇದು? ಬಾಯ್ಲೇನರ್‍s ವೈದಿಕ

ಬ್ರಾಹ್ಮಣ ಅಂತೀ. ಹೆಸರ ನೋಡಿತ್ಯ ಲವಾಣ್ಯಾಕ್ಯಾರಂಥಾದು. ನಿನ್ನ ಲಗ್ಗನ ಕಂತ್ರಾಟ ಸುರೂ ಆದರ ಹೆಸರಿನಿಂದs ಸುರೂ ಆಗತದಲಾ ?"

ಅಪರಿಚಿತ ಅಜೋಬಾ.

"ಅಜೋಬಾ, 'ಡಿಸ್ಟ್ರಿಕ್ಟ ವೈಸ್ ಗ್ಯಾಜಿಟೀರ್' ನೀವs ಸಂಪಾದನ ಮಾಡಿದ್ದಿರಿ ಕಾಣಸ್ತದ? ಯಾ ಟಾಪೂದಾಗ ಎಂಥಾ ಜಾತೀ – ಎಂಥಾ ಹೆಸರಾ ಇರತಾವ ಅನೂದು ಘನ ಠಾಂವಿಕ್ಯದ. ನಮ್ಮ ಹೆಸರಿನ ವ್ಯುತ್ಪತ್ತಿ ಹೇಳತಿದ್ದೆ. ಏನ ಮಾಡೂದು? ಗಾಡೀ ಪುಣೇಕ್ಕs ಖಾಲೀ ಆಗತದ. ಇಲ್ಲದಿದ್ದರ ಡಬ್ಬೀ ಬದಲಿಸಿ ನಿಮ್ಮ ಡಬ್ಬಿಗೇನs ಬರತಿದ್ದೆ. ನಿಮ್ಮ ಪ್ರವಾಸದಾಗ ಒಮ್ಮೆ ಸಾಂಗಲೀ ಕಡೇ ಹಾಯಿರಿ. ಸತ್ಯನಾರಾಯಣದ ದಾವಲ್ಯಾ ಯಾಂವಂತ ಕೇಳರಿ? ಬೇಕಾದವರು ನಮ್ಮ ಠಾಂವ-ಠಿಕಾಣ ಹೇಳತಾರ. ಕಲ್ಯಾಣ-ಕರ್ಜತ್‌ದಾಗs ನಮ್ಮನ್ನ ತಡವ ಬೇಕಾಗಿತ್ತು. ಆರ ತಾಸ ರಾತ್ರೀ ಅದs ಅನೂ ಹಾಂಗ ಅಲ್ಲೇ ಮಲಕೊಂಡಿರಿ. ಪುಣೇ ಬರೂತಲೇ ಒಮ್ಮೆಲೆ ಎಚ್ಚರಾದಿರಿ; ನಮ್ಮ ವಟವಟಾ ನಿಮಗ ಕೇಳಿಸಿ ದಾಗ ಹೌದಲ್ಲೋ?

"ಖರೇ ಅದs ಹುಡಗಾ ನಿನ್ನ ಮಾತು. ನಾಕ ವರ್ಷ ಆತು. ಹೀಂಗs ವರಾ ಹುಡುಕಲಿಕ್ಕೆ ಹತ್ತೀ. ವರಾ ಕೈಗೆ ಬಂದsದ ಅನೂದರಾಗ, ಕಣ್ಣಿಗೆ ಜಂಪ ಬರತದ. ಜಂಪ ಹಾರಿ, ಅಕಡೆ ಇಕಡೆ ನೋಡೂದರಾಗ ವರಾ ಕೆಯಾಗಿಂದ ನಿಸಟಿರತದ..."

ಪೂ...ಣಾ ಪೂ...ಣಾ ...ಹಮಾಲ್ ರಾವಸಾಬ್... ಹಮಾಲ್...

ಪ್ಲಾಟ್-ಫಾರ್ಮಿನ ಮೇಲೆ ಗಾಡಿ ಇನ್ನೂ ನಿಲ್ಲುವ ಬೇತಿನಲ್ಲಿದ್ದಾಗಲೇ, ಸಾಮಾನು ಸಡಿ ಇಲ್ಲದ ಎರಡೂ ವರ ಅಪರಿಚಿತ ಅಜ್ಜನನ್ನು ವರ-ಕನ್ಯಾ ತಂದ್ರಿ ಯಲ್ಲಿ ಬಿಟ್ಟು ಸಹಿ-ಸಲಾಮತ್ ಜಾರಿದ್ದವು.

ಟಾಂಗಾ ಲಕ್ಷ್ಮೀರೋಡಿನಲ್ಲಿ ಭರದಿಂದ ಸಾಗಿತ್ತು.

ನಮ್ಮ ಟಾಂಗಾ ಸೇವಾಸದನದ ಗರ್ಲ್ಸ್ ಹಾಯಸ್ಕೂಲಿನ ಸಮೀಪಕ್ಕೆ ಬಂದಾಗ ನಾನು —

"ವಿಶ್ಯಾ, ವಿಶ್ಯಾ, ಟಾಂಗಾ ನಿಂದರಸನ್ನು. ಅದ್ನೋಡ ವಿಶ್ಯಾ, ದಾದಾನ ಮೋಟಾರಾ ! ಬಸವಂತಿ ಕೂತಾಳ ನೋಡು !"

ಎಂದು ಒದರಿದೆ.

ಟಾಂಗಾ ನಿಂತಿತು. ಒಂದೇ ಜಿಗಿತದಲ್ಲಿ ಹಾರಿ, ಹತ್ತು ಮಾರು ಧಾವಿಸಿ,

ಒಂದು ಅಂಗಡಿಯ ಮುಂದೆ ನಿಂತ ಶ್ಯಾಮರಾಯನ ಕಾರಿನ ಬಳಿಗೆ ಬಂದೆ. ನನ್ನನ್ನು ನೋಡಿ ಬಸವಂತಿ —

"ದಾದಲ್ಯಾ! ಇಲ್ಲಿ ಹ್ಯಾಂಗ ಬಂದಿ? ಯಾವಾಗ ಬಂದಿ?"
ಎಂದು ಕೇಳಿದಳು.

ಮೋಟರಿನಲ್ಲಿ ಶ್ಯಾಮರಾಯನಿರಲಿಲ್ಲ. ಖಾದರ್ ಮೋಟರಿನ ಹಿಂಬದಿಗೆ ಅನತಿ ದೂರದಲ್ಲಿದ್ದ ಬೀಡೀ ಅಂಗಡಿಯ ಮುಂದೆ ನಿಂತು ಯಥಾಪ್ರಕಾರ ಬೀಡೀ ಸೇವನರತನಾಗಿದ್ದ.

"ಬಸವಂತೀ, ನೀ ಇಲ್ಲೆ ಬಂದೀ ಅನೂದರ ಕಲ್ಪನಾ ಇರಲಿಲ್ಲಾ. ಶ್ಯಾಮರಾಯರೆಲ್ಲೆ? ಎಲ್ಲೆ ಇಳದೀರಿ? ಬಸವಂತೀ, ಹೀಂಗ ಭೆಟ್ಟಿ ಆದೀತಂತ ಅನಿಸಿದ್ದಿಲ್ಲಾ. ಅದ್ನೋಡು, ಟಾಂಗಾದಾಗ. ವಿಶ್ವಾಸಾ – ಶ್ಯಾಮರಾಯನ ಹಿರೇ ಮಗಾ. ನಾವು ಇದೇ ಮುಂಬೈಯಿಂದ ಬಂದೇವು. ಬಸವಂತೀ ನಿನಗ ಜರೂರ ಭೆಟ್ಟಿ ಆಗಬೇಕಾಗೇದ. ಹ್ಯಾಂಗ ಆಗೂದು? ಎಲ್ಲೆ ಆಗೂದು?"

ಒಂದೇ ಉಸುರಿನಲ್ಲಿ ಎಲ್ಲಾ ಪ್ರಶ್ನೆ ಒಟ್ಟು ಕೇಳಿದೆ. ಬಸವಂತಿ ನಗುನಗುತ್ತ –

"ದಾದಲ್ಯಾ ಏಳರಾಗs ಹುಟ್ಟೀ ನೋಡು. ಬಲೇ ಅಂವಸರಾ ನಿಂದು. ಇವರ ಬಂಗಲೇ ಐತ್ಯಲಾ, ಅಲ್ಲೇ ಅದೀವಿ. ಇವರು ಇಂದs ಊರಿಗೆ ಹೋಗತಾರ. ನಾ ಇರಾಕಿ ಇದ್ದೀನಿ ಇಲ್ಲೇ. ಬೇಕಾದಾಗ ಬಂಗಲೇದ ಕಡೇ ಬಾ. ವಿಶ್ವಾಸನ್ನೂ ಕರಕೊಂಡ ಬಾ. ನನಗೂ ಮಾತಾಡೂದೈತಿ. ನಾಳೆ ಹರ್‍ಯಾಗ ತಪ್ಪದs ಬಾ. ದಾರೀ ಕಾಯ್ತಿರತೀನಿ. ಅವರು ಒಬ್ಬರs ಹೋಗತಾರ ಊರಿಗಿ. ಖಾದರ್ ಇರತಾನ ಇಲ್ಲೇ. ದಾದಲ್ಯಾ, ಭಾಳ ಮಾತಾಡೂದೈತಿ. ಬರಾಕ ತಪ್ಪಸಬ್ಯಾಡಾ. ನಾಳೆ ಊಟಕ್ಕನs ಬಾ."
ಎಂದು ಆಗ್ರಹಪಡಿಸಿದಳು.

"ತಪ್ಪದs ಬರತೀನಿ ಬಸವಂತೀ. ವಿಶ್ವಾಸನನ್ನೂ ಜಮೂಸಿದರ ಕರಕೊಂಡ ಬರತೀನಿ. ಬಸವಂತೀ, ನಿನ್ನ ತಮ್ಮಾ ಸ್ವಾಪರಳ್ಯಾನ್ನ ಕರಕೊಂಡು ಬರತಾನನೂದು ನೆನಪ ಇರಲಿ ಮತ್ತs."

"ನಿನ್ನ ಬಾಯಿ-ಹರಕಿ ಖರೇ ಆಗಲಿ ದಾದಲ್ಯಾ"
ಬಸವಂತಿಯ ಬಟ್ಟಗಣ್ಣಲ್ಲಿ ನೀರಾಡತೊಡಗಿತು.

ನಾನು ತಿರುಗಿ ಬಂದು ಟಾಂಗಾ ಹತ್ತಿದೆ.

"ದಾದಲ್ಯಾ, ಏನ ತೇಜ ಅದsನೋ ಬಸವಂತೀಯಲ್ಲೇ! ನಮ್ಮ ದಾದಾನ ನಶೀಬಾ!"
ವಿಶ್ವಾಸ ಹೇಳಿದ.

"ವಿಶ್ಯಾ, ನಾಳೆ ಮುಂಜಾನೆ ನಿನ್ನ ಕರಕೊಂಡ ಬರತೀನ್ಯಂತ ಹೇಳೀನಿ ಬಸವಂತಿಗೆ. ದಾದಾ ಇಂದೇ ಊರಿಗೆ ಹೋಗತಾನಂತ. ನಾ ಒಬ್ಬನೇ ಬರೂದಿಲ್ಲಾ, ನನ್ನ ಸ್ವಾದರಳ್ಯಾನ್ನೂ ಕರಕೊಂಡ ಬರತೀನ್ಯಂತ ಹೇಳೀನಿ. ನಾ ಈ ಶಬ್ದಾ ಅನೂತ್ಲೇ ಬಸವಂತೀ ಎದೀ ತುಂಬಿ ಬಂತ ನೋಡು. ಕಣ್ಣು ಡಬಡಬಾಸಲಿಕ್ಕೆ ಹತ್ತಿದೂ. ವಿಶ್ಯಾ, ಬಸವಂತಿ ಭಾಳ ಮಾತಾಡೂದದ ಅಂದಳು. ಬಸವಂತಿ ಸುರಂಗ ಹೊಡದಾಳ ಕಾಣಸ್ತದ. ಏನೋ ವಿಶೇಷ ಇದ್ಧಾಂಗ ಅದ್s. ಬಲಗಣ್ಣಾ 'ಸ್ಪೀಡಿಲೇ' ಹಾರಲಿಕ್ಕೆ ಹತ್ತೇದ. ಗಾಡ್ಯಾಗ ಭೆಟ್ಟಿ ಆದ ಮುದಕಾ ಸರೀ ಮಾರೀಯಂವಾ ಅಂತ ಮಾಡಿದ್ದೆ. ಖರೇನs ಅಂವಾ ಮುಂಗಲೀ ಚರ್‍ಯಾದಂವಾ ನೋಡು. ಬಸವಂತಿನ್ನ ನೋಡಿದ್ಯೋ ಇಲ್ಲೋ? ಹ್ಯಾಂಗ ಇದ್ದಾಳ? ದಾದಾನ ನಶೀಬ ತಗೊಂಡು ಏನ ಸುಡತೀ? ನಮ್ಮ ನಶೀಬ ನೋಡು. ಹ್ಯಾಂಗ ಭರದಾಸ್ತ ಅದs. ನಾಳೆ ಮುಂಜಾನೆ ಬಸವಂತೀದು ಪ್ರತ್ಯಕ್ಷ ಭೆಟ್ಟಿ ಆಗಲಿ. ಈಗ ತೇಜದಲೆ ಬರೇ ನಿನ್ನ ಕಣ್ಣs ಕುಕ್ಕೇದ. ನಾಳೆ ಅಕೀ ಮಾತ ಕೇಳಿದರ – ನಗೀ ನೋಡಿದರ, ಕಾಲೇ ಹಿಡಕೋತಿ. ಗಿರಿಜಾನ ಅವತಾರಾ ಬಸವಂತಿ ಅಂದರ."

"ದಾದಾ ಊರ ಬಿಟ್ಟಾಂವಾ ಇಲ್ಲೇ ಮುಕ್ಕಾಮು ಹಾಕಿಧಾಂಗ ಕಾಣಸ್ತದ. ಅವನ ಬಂಗಲೇ ಖಾಲೀ ಮಾತ್ರ ಇತ್ತು. ಬಾಡಗೀಗೆ ಕೊಡೂದಿಲ್ಲಂತ ಹೇಳಿದ್ನಂತ. ಸ್ವಂತಕ್ಕ ಬೇಕಾಗೇದಂತ ಅಂತಿದ್ನಂತ. ಇಲ್ಲೇನರs ಮನೀ ಮಾಡೂ ಬೇತ ಇಟ್ಟಾನೇನ ಮತ್ತs? ಗುಂಭ ಅದs ದಾದಲ್ಯಾ. ದಾದಾ, ಇಂದ ತಾನು ಒಬ್ಬನs ಹೋಗಿ, ಬಸವಂತಿನ್ನ ಇಲ್ಲೇ ಬಿಡೂದಂದರ ಏನೋ ಡಾವ ಅದs?"

"ವಿಶ್ಯಾ, ಸೂತ್ರ ನಮ್ಮ ಕೈಯಾಗದ. ಗಾಳೀಪಟಾ ಮಗಂದು, ಎಷ್ಟ ಘೂರ ಹಾರಿದರೂ ಏನಾತು? ಮನೀಗೆ ಹೋದ ಕೂಡಲೇ ಏನ ಹೇಳೂದು ಹೇಳು? ಇಬ್ಬರೂ ಕೂಡಿ ಹ್ಯಾಂಗ ಬಂದರೀ ಅಂತs ಕಾಕಾ ಕೇಳಿದರ ಏನ ಉತ್ತರಾ ಕೊಡೂದು?"

"ಅದರ ಕಾಳಜೀ ಬಿಡೂ. ನಾನೇ ಹೇಳತೀನಿ. ದಾದಲ್ಯಾ 'ಇನ್‌ಕಮ್ ಟ್ಯಾಕ್ಸ್ ಆಫೀಸಿ'ಗೆ ಅರ್ಜೀ ಹಾಕಿದ್ದಾ. 'ಇಂಟರ್‌ವ್ಯೂ'ಕ್ಕ ಬಂದಿತ್ತು. ಶಿಸ್ತ ಜಾಗಾ,

ಬಿಡಬ್ಯಾಡ ದಾದಲ್ಯಾ ಅಂತs ನಾನೇ ಕರಿಸಿಗೊಂಡಿದ್ದೆ. ಅನಾಯಾಸಾ ನಾನೂ ಬಂದೀನಿ. ಒಂದು ದಿನಾ ಇದ್ದ ಬರಾಕ್ಯಂತ ನಡೀ ಅಂತ ಜೋರ ಮಾಡಿ ನನ್ನ ಎಳ ಕೊಂಡ ಬಂದಾ ಅಂತs. ಸುಳ್ಳ ಪ್ರಸ್ತಾವನಾ ಹಾಕೂಣು. ಖರೇನೂ ಕಾಣಸ್ತದ. ಸುಳ್ಳೂ ಖಪ್ಪಸ್ತದ. ನಾಳೆ ಬಸವಂತೀ ಭೆಟ್ಟಿ ಮುಗದ ಮ್ಯಾಲ, ಅನಾಯಾಸಾ ನಮ್ಮ ಸಮಸ್ಯಾ ಕಾಕಾನ ಮುಂದ ಇಡಲಿಕ್ಕೆ ಅನಕೂಲನೂ ಆಗತದ. ನೀ ಮನೀಗೆ ಹೋಗೂತ್ಲೇ ಕಾಕಾಗ ಉದ್ದಂಡ ಅಡ್ಡ ಬೀಳು. ನಿಮ್ಮ ಆಲಾ-ಬಾಲಾ ಮುಗಿ ಯೂದರಾಗ. ನಾನು ನಿನ್ನ ಆಗಮನದ ಕಾರಣಾ ಹೇಳಿ ಪಾರ ಖೆಡವತೀನಿ."

"'ಇನ್‌ಕಮ್ ಟ್ಯಾಕ್ಸ್ ಆಫೀಸಿನ್ಯಾಗ ಯಾ ಜಾಗಾ? ಪಗಾರೇಸು? ಅಂತ ಕಾಕಾ ಕೇಳಿದರ ಏನ ಗತೀ?"

"ಮಗನs, ಸರ್ರಳ ಹೊಡೀ ಭಂಪಾ. 'ಇನ್ಸ್ಪೆಕ್ಟರ್' ಜಾಗಾ. ದೋನಸೇ,-ವೀಸ-ಬಾರ್-ದೋನ-ತೀನಸೇ-ಬಾರ್-ಪಂಚವೀಸ ಅಂತs. ಕಾಕಾ ಏನು ನಿಮ್ಮ ಠೋಮರೇಮಾಮಾ ಅಲ್ಲಾ ಸ್ಕೇಲೂ-ಗ್ರೇಡಿನ ನಾಡೀ ಹಿಡೀಲಿಕ್ಕೆ. ನಾಕ ವರ್ಷ ಅನೂದರಾಗ 'ಇನ್‌ಕಮ್ ಟ್ಯಾಕ್ಸ್ ಆಫೀಸರ್' ಆಗತೀನಿ ಕಾಕಾ – ಎಲ್ಲಾ ನಿಮ್ಮ ಆಶೀರ್ವಾದಾ ಅನ್ನು. ಮತ್ತs, ಆ ಬೈಗಣ-ಭಾಪ ಚಣ್ಣಾ. ಚಪ್ಪಲೀ ಕಥೀ ಬಿಚ್ಚು, ಗೆದ್ದಿ! ಸುರ್‍ಯಾನ್ನ ಸಂಬಾಳಸು. ಅಂವಾ 'ಕ್ರಾಸ್' ಮಾಡಿದರ ನೀ ಖಲಾಸನs ಆಗತೀ. ಅಂವಗ ಸೂಚನಾ ಕೊಟ್ಟs ಇಡೂಣು. ಇಂದ ಆದಿತ್ವಾರಾ. ಗಿರಾಕಿ ಮನ್ಯಾಗನs ಇರತ್ಯದ."

ದಾದಲ್ಯಾ ಯಾಕೆ ಬಂದ? ಹೇಗೆ ಬಂದ? ಎನ್ನುವ ಚಿಕಿತ್ಸೆಗಿಂತ ದಾದಲ್ಯಾ ಬಂದನಲ್ಲ ಎಂಬ ಆನಂದ ಕಾಕಾ ಅವರನ್ನು ಭಾರೀ ಖುಷಿಯಾಗಿಸಿತು. ದಾದಲ್ಯಾ ಕ್ಲಾಸ್ ಬಂದ ವಿಷಯ ಕಾಕಾ ಅವರಿಗೆ ಪತ್ರಮುಖೇನ ವಿದಿತವಾಗಿತ್ತು. ಆದರೆ ಆಲಾ-ಬಾಲಾ ಆಗಿರಲಿಲ್ಲ. ಅವರು ತಮ್ಮನ್ನೂ ಮರೆತು, ನಿಮ್ಮನ್ನೂ ಮರೆಸಿ ಸುಖತಂದ್ರಿಯಲ್ಲಿ ತೇಲುತ್ತ ನಡೆಯುವದನ್ನು ಪ್ರತ್ಯಕ್ಷ ನೋಡುವದಾಗಿರಲಿಲ್ಲ. ಕಾಕಾ ನಡುಮನೆಯಲ್ಲಿ ಚಪಕಾಳಿ ಹಾಕಿಕೊಂಡು ಕುಳಿತು, ರಮಾಕಕ್ಕಿ, ಗಿರಿಜಾ. ಸೋನಕ್ಕ ಅವರನ್ನು ನೆನಿಸಿಕೊಂಡು ತಮ್ಮ ಧನ್ಯತೆಯನ್ನು ಶ್ರೀಹರಿಗೆ ಅರ್ಪಿಸುವ ದನ್ನು ಇನ್ನೂ ಕಣ್ಣು ಕಾಣಬೇಕಾಗಿತ್ತು. ಹೊಟ್ಟೆಯಲ್ಲಿ ಸಾವಿರ ಸಂಕಟ. ಅಖಂಡ ತಳಮಳ ಹೊತ್ತಿರುವ. ತೀರ ಹಣ್ಣಿಗೆ ತಿರುಗಿದ ಆ ಜೀವ ಅನ್ಯರ ಸುಖ-ದುಃಖ ವನ್ನು ತನ್ನದಾಗಿಸಿಕೊಂಡು ಅನುಭವಿಸುವ ಸುಖ-ಸಂಕಟವನ್ನು ಇನ್ನೂ ನಾನು

ನೋಡಬೇಕಾಗಿತ್ತು.

ಕಾಕಾ ಅವರಿಗೆ ಉದ್ದಂಡ ಪ್ರಣಾಮ ಹಾಕಿ ಎದ್ದಾಗ, ನೆತ್ತಿಯನ್ನು ನೇವರಿಸಿ, ಬೆನ್ನ ಮೇಲೆ ಅಖಂಡ ರಕ್ಷೆಯ, ಆಶೀರ್ವಾದದ ವರದ-ಹಸ್ತವಾಡಿಸಿ, ಡಬಡಬಿಸುವ ಕಣ್ಣಲ್ಲಿ ಅಂತಃಕರಣದ ನಂದಾದೀಪ ಬೆಳಗಿಸಿ —

"ದಾದಲ್ಯಾ ಉದ್ದಂಡ ಆಯುಷ್ಯವಂತ ಆಗು !"

ಎನ್ನುವಷ್ಟರಲ್ಲಿಯೇ ಕಂಠ ತುಂಬಿ ಬಂದು ಉಪರಣೆಯ ಚುಂಗು ಕಣ್ಣಿಗೆ ಹೋಗು ವದನ್ನು ಕಾಣುವ ಮಹಾಭಾಗ್ಯವಿತ್ತು.

ದಾದಲ್ಯಾ ಇಂದು ಅದನ್ನು ಮತ್ತೆ ಕಂಡ. ಧನ್ಯನಾದ.

ಕಾಕಾ, ಶ್ಯಾಮರಾಯನ ವಿಷಯ ಒಂದನ್ನು ಬಿಟ್ಟು, ಉಳಿದ ಸಾದ್ಯಂತ ಪಕೀಕತ್ತು ವಿಚಾರಿಸಿದರು. ಗೋವಿಂದಭಟ್ಟನ ಯಾತ್ರೆ, ಆಪನವರ-ಗೌಡರ ತಬ್ಬೇತ, ತಪ್ಮಾಜಿಯ ಉದ್ಯೋಗ, ನಮ್ಮ ಅಜ್ಜಿಯ ಸಾವಿಗೆ ಖೋ ಕೊಟ್ಟು ಬಚಾವಾಗುತ್ತಿದ್ದ ವಿಷಯ, ಕಮತಿಗನ ವೃದ್ಧಿಂಗತ ಸಂಸಾರದ ಬೋಜಾ, ರಾಜಾ-ಪಾಚ್ಛಾ ಎತ್ತಿಗೆ ಬಿನ್-ಕಾಮೀ ಫುಲ್-ಪಗಾರೀ ವ್ಯವಸ್ಥೆ ಇಡಲಿಕ್ಕೆ ತಿಳಿಸಿದಂತೆ ನಡೆಯುತ್ತಿರುವದರ ಬಗ್ಗೆ ಚಿಕಿತ್ಸೆ — ಎಲ್ಲಾ ಕೇಳಿಕೊಂಡರು.

"ವಾಡೇದ ವ್ಯವಸ್ಥಾ ದಾದಲ್ಯಾ ?"

ಎಂದಾಗ —

"ಆಗದೀ ಮಸ್ತ ಅದ ಕಾಕಾ."

ಎಂದು ನಾನು ಉತ್ತರಿಸಿದ್ದೆ. ವಿಶ್ಯಾ, ಈಗಲೇ ಪ್ರಸಂಗ ಕೈ ನಿಸಟಬಾರದೆಂದು ಚಟ್ಟನೇ —

"ದಾದಲ್ಯಾ, ಲಗೂ ಸ್ನಾನಾ ಬಗೀಹರಸು. ಇಂದ ಪೂಜೇನೂ ನೀನs ಬಗೀಹರಸಂತಾಳ ನೋಡು, ರಮಾಕಕ್ಕಿ. ಅನಾಯಾಸಾ ಪುರೋಹಿತ ಬಂದಾನಂತs, ಮಡೀ ಪಂಜಾ ಸುದ್ದೇ ಹಾಕ್ಯಾಳ. ಏಳು, ತಡಾ ಯಾಕಿನ್ನs. ?"

ಸೂಚನೆ ಕೊಟ್ಟು ಜಾಗರಿಸಿದ.

ಸೂಚನೆಯ ಅರ್ಥ ನನಗಾಯಿತು. ಥೇಟ ಬಚ್ಚಲುಮನೆಗೇ ನಾನು ಧಾವಿಸಿ ಬಾಗಿಲು ಹಾಕಿಕೊಂಡೆ. ನಳದ ತಣ್ಣೀರಿನಲ್ಲಿ ಮೈ ತೊಯ್ಯುತ್ತಿದ್ದಂತೆಯೆ ಬಾಯಿ ಅಖಂಡವಾಗಿ —

"ಸಮೃದ್ಧಂ ಸೌಭಾಗ್ಯಂ ಸಕಲ ವಸುಧಾಯಾಃ......"

ಪರಿಸುತ್ತಿತ್ತು.

ಸಂಜೆಯ ಮುಂದೆ ವಿಶ್ವಾಸ, ಸುರೇಶ, ನಾನು ಸೋಸಾಯಿಟಿ-ರೋಡಿನಲ್ಲಿ ಬಹಳ ದೂರ ತಿರುಗಾಡಲಿಕ್ಕೆಂದು ಹೋದೆವು. ನಮ್ಮ ಆಕಸ್ಮಿಕ ಆಗಮನದ ಕಾರಣವನ್ನು ಸುರೇಶನಿಗೆ ಈಗಾಗಲೇ ತಿಳಿಸಿ ಆಗಿತ್ತು. ಮರುದಿನ ಮುಂಜಾನೆ ಬಸವಂತಿಯನ್ನು ನಾವು ಕಂಡು ಬಂದ ನಂತರ ಮುಂದಿನ ಹಂಚಿಕೆಯನ್ನು ಹಾಕುವದೆಂದು ಮೂವರೂ ಠರಾಸಿಗೊಂಡಿದ್ದೆವು.

ಕು. ಚಿ. ಶಕೂನಿಂದ ಅಂದೇ ತನಗೆ ಪತ್ರ ಬಂದ ವಿಷಯವನ್ನು ಸುರೇಶ ತಿಳಿಸಿದ.

"ದಾದಲ್ಯಾ, ಶಕೂಗ ಭಾವಜೀ ಅನ್ನಂತ ನೀನs ಹೇಳಿರಬೇಕು ?"
ವಿಶ್ವಾಸ ಕಿಲಾಪಿಸಿದ.

"ಛೇ ಛೇ. "it was quite unexpected". ನನಗೂ ಅಂಥಾ ಕಲ್ಪನಾ ಬಂದಿರಲಿಲ್ಲ ಬಿಡೂ. ಶಕೂನ ಸಿಕ್ಸರ ಅದು. ಯಾಕ ಸುರ್‍ಯಾ ?"
ನಾನು.

"ನಿನ್ನ ವಿಶೇಷಣದ ಮುಂದ ನಮ್ಮೂ ಫಿಕ್ಕಾ ಬೀಳತಾವ ದಾದಲ್ಯಾ. ಬೆಳಗಾಂವೀಯಿಂದನs ಆರ ಪಾನಿನ ಪತ್ರಾ ಬರದೀದಿ. ಪ್ಯಾಲs, ನಾಕ ದಿನಾ ಮುಂಬೈಯಾಗ ನಿಂತು ಎಲ್ಲಾ ವರ್ಣನಾಸೂ ಮಾಡೀದಿ. ವಿಶ್ಯಾ ಖುಷ್ ಆಗಿರಬೇಕು ನಿನ್ನ ರಿಪೋರ್ಟ ಕೇಳಿ."
ಸುರೇಶ.

"ಖುಷೀ ತಡೀಲಿಲ್ಲಂತ ಬಂದೇವು ಮಗನs ಧಾವಿಸಿ. ನೀ ಅಗದೀ ಕುದರೀನs ಏರಿ ನಿಂತೀಯಂತ ದಾದಲ್ಯಾ ಹೇಳಿದಾ. ಬಾಜಾ-ಬಜಂತ್ರೀ ಇಲ್ಲದs ವರಾತ ಹೊಂಟರ ಏನ ಮಾಡೂಬಂತ ಓಡಿ ಬಂದೇವು."
ವಿಶ್ಯಾ.

"ವಿಶ್ಯಾ, ತಾಸೇ-ಬಜಂತ್ರೀ ಏನ ಮಾಡತೀ ತಗೊಂಡು ? ಮೊನ್ನೆ ದಾದಾ ರಣಹಲಗೀನs ಬಾರಿಸಿ ಹೋದಾ. ವಿಶ್ಯಾ, ನಿನ್ನ ಹೆಸರಲೆ ಘನ ಶಂಖಾ ಹೊಡದಾ"
ಸುರೇಶ.

"ಸುರ್‍ಯಾ. ನಿಂದೂ ದಾದಾಂದೂ ಮತ್ತ ಭೆಟ್ಟಿ ಆಗಿತ್ತು ಹಂಗಾರ. ಎಲ್ಲೆ? ಮನ್ಯಾಗೋ ಆಫೀಸಿನ್ಯಾಗೋ ?"

ವಿಶ್ವಾಸ.

ಸುರೇಶ ಬೆಳಗಾಂವಿಯಿಂದ ಮರಳಿ ಬರುವದರ ಮೇಲೆಯೇ ಪಾಳತಿಯನ್ನು ಇಟ್ಟುಕೊಂಡು ಜಪ್ಪಿಸಿದ ಶ್ಯಾಮರಾಯ, ಅವನು ಬಂದ ಕೂಡಲೇ ಆಫೀಸಿನಲ್ಲೇ ಗಾತಾಸಿದ್ದ. ತನಗೆ ಅಗಾವು ತಿಳಿಸದೆ, ಶಕೂನನ್ನು ನೋಡಿ, ಒಪ್ಪಿಗೆ ತಿಳಿಸಿದ ಬಗ್ಗೆ ತನ್ನ ಅಸಮ್ಮತಿಯನ್ನು ವ್ಯಕ್ತಪಡಿಸಿದ್ದ. ಶಕೂನಲ್ಲಿ ರೀತಿ-ರಿವಾಜು ಇಲ್ಲ, ಗೃಹಸ್ಥಿಕೆಯ ಲಕ್ಷಣಗಳಿಲ್ಲ; ಅವಳನ್ನು ಸುರೇಶ ಮದುವೆಯಾದದ್ದೇ ಆದರೆ, ಹೆಂಡತಿಯ ಚೋಮುಡ್ಯಾ ಆಗಿ – ಮಾವನ ಮನೆಯಲ್ಲಿ "ಘರ್‌ಜಾವಯೀ"ಯ ನಾಯಿಪಾಡನ್ನು ಅನುಭೋಗಿಸಬೇಕಾದೀತೆಂಬ ಎಚ್ಚರಿಕೆ ಕೊಟ್ಟಿದ್ದ. ತಾನು ನಿಧಾನವಾಗಿ ವಿಚಾರಮಾಡಿ, ಈ ಸಂಬಂಧದ ಸವ್ಯಾಪಸವ್ಯವನ್ನು ಕುರಿತು ತನಖಿಸುತ್ತಿರುವಾಗ ಅದಕ್ಕೆ ಅನುವು ದೊರೆತಿರಬಾರದು – ಸಾಹೇಬರ ಮುಂದೆ ಮುದ್ದಾಂ ತನ್ನ ನಾಲಸ್ತೀ ಆಗಿರಬೇಕು ಎಂಬ ದುರುದ್ದೇಶದಿಂದ, ವಿಶ್ಯಾ ಡಾವು ಮಾಡಿ, ಅವಸರದಿಂದ ಸುರೇಶನನ್ನು ಬೆಳಗಾಂವಿಗೆ ಕಳಿಸಿದ್ದು ಖಚಿತವೆಂದು ಕಾಯಾಸಕಟ್ಟಿದ್ದ. ಸುರೇಶ, ಶಕೂನನ್ನು ಒಪ್ಪಿಕೊಂಡು, ಆ ಬಗ್ಗೆ ನಿರ್ಣಾಯಕ ಸಮ್ಮತಿಯನ್ನು ಕೊಟ್ಟಿದ್ದನ್ನು ಕೇಳಿಯಂತೂ ಅವನ ಪಿತ್ತ ನೆತ್ತಿಗೇರಿತ್ತು. ತನ್ನ ಠರಾವಿಕ ಡರಕಾಯಿಸುವ ಧರ್ತಿಯಲ್ಲಿ 'ಫಾದರ್ ಅ್ಯಜ್ ಸಚ್' ತಾನು, ಇನ್ನೂ ಹಯಾತನಿರುವಾಗ, ಸುರೇಶ ಈ ರೀತಿಯಾಗಿ ನಿರ್ಣಯ ತೆಗೆದುಕೊಂಡದ್ದು, ಕುಲಕ್ಕೆ ಬಟ್ಟಾ ತರುವ ವಿಷಯವಾಯಿತೆಂದು ಆಕ್ರೋಶ ಮಾಡಿ ಶಾಟಿ ಅಪ್ಪಳಿಸಿದ್ದ.

ಸುರೇಶ ಈಗ, ಶ್ಯಾಮರಾಯನನ್ನು ಎರಡನೇ ಸಲ ಸಂಧಿಸುವ ಪ್ರಸಂಗ ಬಂದಿತ್ತು. ಅವನಿಗೆ ಶ್ಯಾಮರಾಯನ ಬಣ್ಣ ಸಂಪೂರ್ಣವಾಗಿ ಅವಗತವಾಗಿತ್ತು. ಸುರೇಶ ಭಾರೀ ಉತಾವಿಳನಾಗಿ, ಅಷ್ಟೇ ರುಷ್ಟನಾಗಿ ಶ್ಯಾಮರಾಯನ ಕಾಳಿಜಕ್ಕೆ ಭಾಲಾಪ್ರಯೋಗ ಮಾಡಿದ್ದ.

ಸೋನಕ್ಕ-ವಿಶ್ವಾಸನಿಗೆ ಸುಳ್ಳು ಅಪವಾದವನ್ನು ಕೊಟ್ಟು ಅವರನ್ನು ಬಿಡುವ ಮುಂದೆ ಅವನಿಗೆ ಕುಲದ, ಕುಟುಂಬದ ಹಿರಿಮೆಯ ಅರಿವಾಗದಿದ್ದ ಬಗ್ಗೆ ಕೇಳಿದ್ದ: "ತಾಯೀನ್ನ ಬಿಟ್ಟು ಇನ್ನೊಂದು ಹೆಣ್ಣ ಕಟಗೊಂಡು ಮಜಾ ಮಾಡೂ ಮುಂದ ನಿಮಗ ಕುಲದ್ದು, ಶೀಲದ್ದು ನೆನಪ ಆಗಲಿಲ್ಲ ಕಾಣಸ್ತದ? ಹೇಣತೀ ವ್ಯಾಲ ಹೆಣ್ಣ ತರೂದು ಪಂತರ ಮನೀಗೇನು ಹೊಸಾದಲ್ಲಾ. ನೀವ್ಯಾಕ ಧೈರ್ಯಾ

ದಿಂದ ಈ ಕೆಲಸಾ ಮಾಡಲಿಲ್ಲಾ ? ನಾ ಬೆಳಗಾಂವಿಗೆ ಬಂದೇನಿ. ನೀವೂ ಬರಬೇಕಂತ ತಿಳಿಸಿದವರ ಮೂರ್ತೀ ತಪ್ಪಿಸಿ ಪುಣೇಕ್ಕ ಯಾಕ ಓಡಿ ಬಂದಿರಿ? ಆದರ ಶಕೂನ್ನs ಲಗ್ನ ಆಗತೀನಿ ಅಂತs, ಕಾಕಾಗ ಸುದ್ದೇ ಹೇಳೂ ಎದೀ ಅದs ನನಗ. ಪಂತರ ಹುಡುಗರಿಗೆ ಕುಲದ್ದು, ಕುಟುಂಬದ್ದು ಖರೇ ಅಭಿಮಾನ ಅದs ಅಂತ ಅದು ಬದಕೇದ. ನಿಮ್ಹಾಂಗ ಹುಳಾ ಆಗಿ ಒಳಗೊಳಗs ಕೊರೆಯೂ ಕೀಟದ ಕಲ್ಪನಾ, ಯೋಗ್ಯತಾ ಅವರಿಗೆ ಗೊತ್ತ ಅದs"

ಸುರೇಶನ ಈ ಮಾತು ಕೇಳಿ ಶ್ಯಾಮರಾಯನ ಸಂತಾಪ ಅತಿರೇಕಕ್ಕೆ ಹೋಗಿತ್ತು. ಈ ಮಾತು – ಇಂಥ ವಿಚಾರ ಸುರೇಶನದಲ್ಲ, ಅದು ವಿಶ್ವಾಸ, ಸೋನಕ್ಕ, ಕಾಕಾ ಅವರ ಕಲಿಕೆಯ ಪರಿಣಾಮವಿರಬೇಕೆಂದು ಅವನು ಭಾವಿಸಿ ಕೊಂಡಿರಬೇಕು. ಈ ಭಾವನೆಯ, ವಿಷವಾತಿನ ರಸ ಅವನ ಅಂಗಾಂಗದಲ್ಲಿ ಸಂಚರಿಸಿರಬೇಕು. ಅವನು ಭ್ರಮಿಷ್ಟನಂತೆ, ಮಹಾ ಉನ್ಮಾದಿಯಾಗಿ —

"ಸುರ್‍ಯಾ, ಇದೆಲ್ಲಾ ಆ ದುರ್ಬೀಜ ವಿಶ್ಯಾಂದು. ಆ...ಹು...ದೂ ಘುಲ ತಾಪೀ. ನನ್ನ ಮಾತ ನೀ ನಡಸದಿದ್ದರ, ನಿನ್ನ ಲಗ್ನ ಹ್ಯಾಂಗ ಆಗತದ ನೋಡತೀನಿ. ವಿಶ್ಯಾನ್ನ ಮುಲ್ಲೀ ಮಾಡಿ ಕೊಡಸ್ತೀನಿ. ಅಂವಾ ತಿಳದಿರಬೇಕು – ದತ್ತಕ್ಕ ಹೋಗಿ ಗೆದ್ದೇ ಅಂತs. ಹೋದಲ್ಲೆ. ಬಂದಲ್ಲೆ ಹರಲೀ ಮಾಡತೀನಿ. ಹಾದರಕ ಹುಟ್ಟಿದಂವಾ ಅಂತs ಡಂಗರಾ ಹೊಡೀತೀನಿ. ಸಾಹೇಬರರs ನಂದೇನು ಮಣಸಾಪರಿದ್ದಾರ. ಇಂವಾ ಇಲ್ಲಾ ಇನ್ನೊಬ್ಬಾ. ಪುಣೇದಾಗ ಮನೀ ಮಾಡಿ. ನಿಮ್ಮ ಅಪ್ಪಾ. ಕಾಕಾನ ಎದೀ ಮ್ಯಾಲ. ನಾ ಇಟಗೊಂಡ ಹೆಣ್ಣಿನ್ನ ಕಟಿಗೊಂಡು ಅಡ್ಡ್ಯಾಡತೀನಿ. ಛೀ-ಥೂ ಹೆಂಗಸಿಂದ ಆಗತದ. ಗಂಡಸಿಂದಲ್ಲಾ. ನಿಮ್ಮ ಅಪ್ಪಾ, ನಿಮ್ಮ ಕಾಕಾ. ಈ ಊರಾಗ ಮೋತೀ ಎತ್ತಿ ಅಡ್ಡ್ಯಾಡಿಧಾಂಗ ಮಾಡತೀನಿ. ಮಕ್ಕಳ್ಯಾ, ನಿಮ್ಮ ಜುಟ್ಟಾ ನನ್ನ ಕೈಯಾಗ ಅವs. ಕೋಳೀ ಒಗಧಾಂಗ ಗೋಣ ಮುರೀತೀನಿ ಒಬ್ಬೊಬ್ಬರದು."

"ಕಡಿಯೂದs ಇದ್ದರ. ಮುಕಾಟ್ಲೇ ಕಡೀ. ಬೊಗಳಿ ಯಾಕ ಗಂಟ್ಲಾ ಹರ ಕೋತೀ. ಕಾಕಾ ನಮಗ ಮಾತಾಡಲಿಕ್ಕೆ ಕಲಿಸಿಲ್ಲಾ. ನೇವು ಹ್ಯಾಂಗ ಸಾಧಿಸ ಬೇಕು ಅಷ್ಟs ಕಲಿಸ್ಯಾರ. ಒಂದ ಬಾರ ಹಾರಸೇ ನಾನೂ ಶಕೂನ ಜೋಡೀ ಸುರಗ್ಯಾಗ ಕೊಡತೀನಿ. ರಕ್ತದ ಬಟ್ಟು ಹಣೀಗೆ ಇಟಗೊಂಡು ಆಕೀಗೆ ಮಾಲೀ ಹಾಕತೀನಿ. ಪಂತರೆಲ್ಲಾ ರಕ್ತದಲೇನs ಜೀಕಳಿ ಆಡಿಕೋತ ಬಂದಾರ. ನೀ ಒಬ್ಬಾ

ೀರಾಗ ಜೀಕಳೀ ಬುಚಕಳಸಾಂವ ಹುಟ್ಟಿ ಬಂದೀ. ಇಂದೇ. ಇದೇ ನಂದೂ-ನಿಂದೂ ಕಡೀ ಭೆಟ್ಟಿ. ಇನ್ನ ನನಗ ಮೋತಿ ತೋರಸಬ್ಯಾಡಾ. ಆಫೀಸಿಗೆ ಬಂದರ ಹೊರಗ ಹಾಕಸೂ ಶೋಭಾ ಮಾಡಿಗೊಡಬ್ಯಾಡಾ."

ಸುರೇಶ ತನ್ನ, ಶಾಮರಾಯನ ನಡುವೆ ಆದ ಖಡಾ ಜಂಗಿಯ ವಿವರ ಒಪ್ಪಿಸಿದ. ಅವನ ವರದಿ ಬಹಳ ವಿಷಯದ ವಿಚಾರಕ್ಕೆ ಆಸ್ಪದ ಕೊಡುವಂತಾಯಿತು. ಬಸವಂತಿಯ ಪುಣೆಯ ವಾಸ್ತವ್ಯದ ಮೇಲೆ ಪ್ರಕಾಶ ಚೆಲ್ಲಿತು. ಬಸವಂತಿ, ಬಹಳ ಮಾತಾಡುವದಿದೆ ಎಂದಿದ್ದಳು. ಆಗ್ರಹಪಡಿಸಿ ಕರೆದಿದ್ದಳು. ಶ್ಯಾಮರಾಯನ ಯೋಜನೆಯ ವಾಸನೆ ಅವಳಿಗೆ ಬಡಿದಿರುವ ಸಂಭವವಿತ್ತು. ತಾನು-ಬಸವಂತಿ, ಪುಣೆಯಲ್ಲಿ ನಿಂತು, ಸೋನಕ್ಕ-ಕಾಕಾ ಅವರನ್ನು ತಿವಿದು, ಕೆರಳಿಸಿ ಸಂಕಟಪಡಿಸುವ ಹಂಚಿಕೆಯಿತ್ತು. ರೊಕ್ಕದ ಗಮಜಿದ್ದ ಕಾರಣ. ಸಾಹೇಬರನ್ನು, ತನ್ನ ಗಳಿಕೆಯನ್ನು ಒಪ್ಪು, ಈಗಾಗಲೇ ಗಳಿಸಿದ ಅಪಾಪ ಸಂಪತ್ತಿನ ಮೇಲೆ ಉರ್ವರಿತ ಜೀವನವನ್ನು ಪುಣೆಯಲ್ಲಿ ಕಳೆಯುತ್ತ ಹೆಂಡತಿ-ಮಕ್ಕಳಿಗೆ ರಾಹು-ಕೇತುವಿನಂತೆ ಆಡರುವ ಹೀನ ಮಾನಸವಿತ್ತು. ಸುರೇಶ ತನ್ನನ್ನು ಕಡೆಗಣಿಸಿ, ಅಲಕ್ಷಿಸಿ. ಶಕೂನನ್ನು ಒಪ್ಪಿದ್ದರಿಂದ, ತನ್ನ, ಬಸವಂತಿಯ ಸಂಬಂಧವನ್ನು ಕೆದಕಿ ಕೆರಳಿಸಿದ್ದರಿಂದ, ನೆತ್ತರಲ್ಲಿ ಬೆರಳೆದ್ದಿ ಹಣೆಗೆ ರುಧಿರ-ಕೌಂಕುಮ-ಚಿಹ್ನ ಧಾರಣೆ ಮಾಡುವೆನೆಂದದ್ದರಿಂದ, ಕಾಕಾ, ಅನ್ಯ ಬಾಪ್ಕಳತನ ಕಲಿಸದೆ ನೇಮಬಾಜೀ ಅಷ್ಟೇ ಕಲಿಸಿದ್ದಾರೆಂದು ಸಾರಿದ್ದರಿಂದ, ಅವನು ವಿಪರೀತವಾಗಿ ಕೆರಳಿದ್ದ. ಪುಣೆಯಲ್ಲಿಯೇ ಮನೆ ಮಾಡಿ ನಿಂತು, ಬಸವಂತಿಯನ್ನು ಕಟ್ಟಿಕೊಂಡು, ಸೋನಕ್ಕ-ಕಾಕಾ ಅವರ ಎದೆಯ ಮೇಲೆ ನಡೆದಾಡುವ, ಆ ಅಗತಿಕ ಜೀವನಗಳನ್ನು ಮೆಟ್ಟಿ ಮೆರೆದಾಡುವ ಪಣ ಪುಕಾರಿಸಿದ್ದ.

ನಾನು-ವಿಶ್ವಾಸ ಮುಂಬೈಯಿಂದ ಬಂದಾಗಿನಿಂದಲೂ ಸುರೇಶ ಅಷ್ಟು ಬಿಚ್ಚುಬೀಸಾಗಿರಲಿಲ್ಲ.

"ಎರಡು ದಿನಾ ಆತು; ಸುರ್‍ಯಾ ಯಾಕೋ ಬಹಳ ಮುಸುಮುಸು ನಡಸ್ಯಾನ. ಮಾತನೂ ಯಾಕೋ ಖಾರಖಾರನs ಇರತಾವs"

ಎಂದು ಸೋನಕ್ಕ ಹೇಳಿದ್ದರು. ಅವರಿಗೆ ಸುರೇಶನ ಮಾತಿನಲ್ಲಿಯ ಖಾರದ ಮೂಲ ಅಪರಿಚಿತವಾಗಿ ಉಳಿದಿತ್ತು. ಸುರೇಶ ಆ ಕುದಿಯನ್ನು ಅನಾಮತ್ತಾಗಿ ನುಂಗಿ ಅಗ್ನಿಗರ್ಭನಾಗಿದ್ದ. ನಮ್ಮ ಬರವಿನಿಂದ, ಶ್ಯಾಮರಾಯನ ಬಗ್ಗೆ ಮಾತು-ಕತೆ ಹೊರಟ ಕಾರಣದಿಂದ, ಅವನ ಸುಪ್ತ ಜ್ವಾಲೆ ಸಿಡಿಯಿತು. ಶ್ಯಾಮರಾಯ

ಸೋನಕ್ಕನಿಗೆ ಅವಾಚ್ಯ ಶಬ್ದವಾಡಿರದಿದ್ದರೆ, ವಿಶ್ವಾಸನನ್ನು ಕಾಯಿ ಮುಲ್ಲಿಯಾಗುವಂತೆ ಮಾಡುತ್ತೇನೆ – ಹರಲಿಯ ಡಂಗುರ ಸಾರುತ್ತ ಹೊರಡುತ್ತೇನೆ ಎಂದಿರದಿದ್ದರೆ. ಸುರೇಶ ಅಷ್ಟು ಪ್ರಕ್ಷುಬ್ಧನಾಗುತ್ತಿರಲಿಲ್ಲ. ತನ್ನ-ಶಕೂನ ಮದುವೆಯ ಮುರುಗಡೆಯನ್ನು ಮಾಡಲು. ಶ್ಯಾಮರಾಯ ಅಸಮರ್ಥನಿದ್ದ ಬಗ್ಗೆ ಅವನಿಗೆ ಖಾತ್ರೀ ಇತ್ತು. ಅದರಿಂದ ಅವನು ಅಷ್ಟು ವಿಚಲಿತನಾಗಿರಲಿಲ್ಲ. ತನ್ನ ಸುಖ ಸರ್ವಸ್ವದ ಮೇಲೂ ನೀರು ಬಿಟ್ಟು, ಸುರೇಶನ ಕಲ್ಯಾಣಕ್ಕೆ ಪಣ ತೊಟ್ಟ, ವಿಶ್ವಾಸನನ್ನು ದುರ್ಬೀಜನೆಂದುದಕ್ಕೆ, ತನ್ನ ಅಗತಿಕಳಾದ. ನವೆಯುತ್ತ ನಡೆದ, ಪ್ರೀತಿ-ವಾತ್ಸಲ್ಯ-ಸರ್ವಸ್ವಳಾದ ತಾಯಿಗೆ ಅಪಶಬ್ದ ಪ್ರಯೋಗಿಸಿದ್ದಕ್ಕೆ ಅವನು ಸಿಗಿಸಿಗಿ ಕೆಂಡವಾಗಿದ್ದ.

ಶ್ಯಾಮರಾಯನ ನಿರ್ನಾಮಕ್ಕೆ ಹೊಸ ಕತ್ತಿ ಮಸೆಯಿತು. ಒರೆಯ ಪರೆ ಬಿಟ್ಟು ಝಳಪಿಸಿತು.

ಶ್ಯಾಮರಾಯನ ಹೀನ ಮಾನಸವೃತ್ತಿಯಿಂದ ವಿಶ್ವಾಸನೂ ಸಂತಾಪಿಸಿದ. ಆದರೆ ತನ್ನ ಸಂತಾಪಕ್ಕೆ ಎಸರು ಬಂದರೆ, ಅದರ ಕುದಿತಕ್ಕೆ ತಾನು, ಸೋನಕ್ಕ, ಕಾಕಾ, ಶ್ಯಾಮರಾಯ ಎಲ್ಲರೂ ಬೆಂದುಹೋಗುವದರಲ್ಲಿ ಸಂಶಯವಿರಲಿಲ್ಲ. ತಮ್ಮ ಕೂಡ, ಸುರೇಶ, ಶಕೂ, ಅನ್ಯರೂ ಬೇಯಬಾರದು. ಅವರಿಗೆ ಈ ಧಗಿ ತಾಗಬಾರದು; ಉತಾವಿಳವಾಗುವದರಿಂದ ಕಾರ್ಯ ಸಾಧಿಸದು ಎಂದು ಶಾಂತನಾಗಿ, ಸಮಂಜಸನಾಗಿ —

"ಸುರ್‍ಯಾ, ಏಕದಮ್ ಅಷ್ಟ ರೌಸು ಠೀಕ ಅಲ್ಲಾ. ಆಗ ದಾದಾಗ ಸಿಟ್ಟಲೇ ಉತ್ತರಾ ಏನ ಕೊಟ್ಟ, ಅದು ಠೀಕ ಆತು. ಸಿಗಿಸಿಗಿ ಕುಲಿವ್ಯಾಗ ಅಸರಂತಾ ಕಟಿಗೀ ಹಾಕಿ ಕೆದಕೂದರಾಗ ಅರ್ಥ ಇಲ್ಲಾ. ಒಂದಿಷ್ಟು ಅದರ ಝಳಾ ಕಡಿಮಿ ಆಗಲಿ. ದಾದಾ ಕೊಟ್ಟ ಹೀನ ಅಪವಾದನ್ನs ಸಹಿಸಿಗೊಂಡೇವು. ವಿಷಾ ನುಂಗಿದವರಿಗೆ ಬೇವಿನ ರಸಾ ಅಷ್ಟೇನು ಕಹೀ ಅನಸೂದಿಲ್ಲಾ. ಅವನ ಅಪವಾದದಾಗs ತಥ್ಯ ಇಲ್ಲದಾಗ, ಅವನ ಬೈಗೊಳಿಗ್ಯರs ಯಾಕ ಕಿಂಮತ ಕೊಡಬೇಕು? ನೀ ಹ್ಯಾಂಗೂ ಅಂವಗ ಅಂದೀ: ಬೊಗಳೂ ನಾಯಿ ಕಚ್ಚೂದಿಲ್ಲಂತ. ಅದು ಬರೇ ಬೊಗಳೂ ಸಾದಾ ನಾಯೀನೂ ಅಲ್ಲಾ. ಹುಚ್ಚ ನಾಯಿ ಇದ್ಹಾಂಗ ಅದs. ಯಾರರs ಅದನ್ನ ಹೊಡದು ಮುಗಸ್ತಾರ. ಇನಾ ಅದು ನಮ್ಮ ಮನೀ ಅಂಗಳದಾಗೆ ನಿಂತು ಒದರಲಿಕ್ಕೆ ಹತ್ತೇದ. ನಾಳೇ ಓಣಿಗೇ ಹೋತಂದ್ರ, ತಮ್ಮ ಜೀವದ

ಅಂಜಿಕೀಗ್ಯರಽ ಇದನ್ನ ಹೊಡೀತಾರ. ನನಗ ನಿನಗ ಅಷ್ಟು ಶ್ರಮಾ ತಗೊಂಬೂ ಜರೂರೀನೂ ಬೀಳೂದಿಲ್ಲಾ.

ನಾಳೆ ಬಸವಂತಿಗೆ ಭೆಟ್ಟಿ ಆಗತೇವು. ದಾದಾನ ಡಾವು ಏನ ಅವಽ ಅನೂದು ಆಕೀಯಿಂದ ತಿಳದೀತು. ನಮ್ಮ ಪ್ಲಾನೂ ಅವಽ. ಪಟ್ಟಾ ಹಾಸೇ ಕೂತೇವು. ಗಡಿಬಿಡಿ ಮಾಡಿ ಕಾಯಿ ಬಿಟ್ಟರ, ನಮ್ಮ ಅಲಗರ್ಜಿತನದಿಂದ ನಮ್ಮ ಕಾಯೀನೇ ಸಾಯುತಾವ. ನಿಧಾನಾಗಿ ವಿಚಾರಮಾಡಿ ಕಾಯೀ ಸರಸೂಣು. ನಾಕೂ ಕಡಿಂದ ಸುತ್ತುವಾಕಿ ದಾದಾನ್ನ ಅಳಿವಿನ್ಯಾಗ ತರೂಣು. ಹಣ್ಣ-ಗಾಯಿ ಸಾಯಲಿಕ್ಕೇ ಬಂದಿರತಾವ. ವ್ಯಾಳ್ಯಾ ಸಾಧಿಸಿ ಹೊಡಿಯೂಣು. ಹ್ಯಾಂಗೂ ಬಸವಂತಿ ನಮಗ ಸಾಮೀಲಿ ಇರೂದರಿಂದ ಅರ್ಧಾದ ಮ್ಯಾಲ ನಮ್ಮ ಕೆಲಸ ಆಧಾಂಗ ಆಗೇದ. ದಾದಲ್ಯಾ, ರಾಜಪ್ಪಾ ಬಾಕೀದರ್ಧಾ ಬಗೀಹರಸತಾರ."

"ವಿಶ್ಯಾ, ನಿನ್ನ ಖಾದೀ ಅರಿವೀ 'ವರ್ಧಾ ಡಾಕ್ಟ್ರಿನ್ನೂ' ನಿನ್ನ ಲಕ್ಷ್ಯ ಮಾಡಲಿಕ್ಕೆ ಹತ್ತ್ಯಾವ. ನೀನು ಆಸ್ತೇ ಆಸ್ತೇ ಹೆಜ್ಜೀ ಇಡೂದರಾಗ, ಎಲ್ಲಾರದೂ ಅಸ್ತ ಆಗತದ. ಇಲೀ-ಕಪ್ಪಿ ನುಂಗಿದ ಹಾಂವು ತಾನೂ ಮುಬ್ಬ ಆಗೂದು. ಅವನ್ನೂ ನಿಧಾನಾಗಿ ಕೊಲ್ಲೂದು. ಹೀಂಗ ಅದಽ ನಿನ್ನ ಧೋರಣಾ. ನಮ್ಮ ವಿನಾಶನಽ ಖಚಿತ ಅನ್ನೂ ಖಾತ್ರೀ ಆಗೇದ. ಅದಕ್ಕಽ ಸತ್ತರ ಸ್ವರ್ಗಾ. ಇದ್ದರ ಸುಖಾ ಅನೂ ಬೇಫಾಮ್‌ತನದಿಂದ ದಾದಾನ್ನ ಎದರಸೂಣು. ವಿಶ್ಯಾ, ನಿನ್ನ ಸೂತಕೀ ವಿಚಾರಾ ನನಗ ಜಮಾಸೂದಿಲ್ಲಾ."

"ನಿನ್ನ ಸಾವರಕರೀ ಆವೇಶದಿಂದ, ಶನಿವಾರ-ವಾಡಾದ ಮುಂದಿನ ಪೆನ್‌ಶನರ ಸಭಾ ಖುಷ್ ಆದೀತು ಸುರ್ಯಾ. ನನ್ನ ಸೂತಕೀ ವಿಚಾರ ಬಿಡೂ. ನಿಂದಽ 'ಹಿರೊಯಿಕ್' ವಿಚಾರ ತಗೋ: ನೀ ಯಾರ ಮ್ಯಾಲ ಕತ್ತೀ ಬೀಸಾಂವಾ? ದಾದಾನ ಮ್ಯಾಲ ಅಲ್ಲೇನು? ಅದಕಿಂತಾ ತಾಯೀಗೆ ಗುರೀ ಇಟ್ಟು ಹೊಡದ ಬಿಡೂ. ಆಕೀಗೆ ದಾದಾನ ಸೌಭಾಗ್ಯ ಏನೂ ಇಲ್ಲ ಖರೇ. ಆದರ ಈ ಸೌಭಾಗ್ಯ ಇಲ್ಲಂತಽ, ಆಕೀ ದಾದಾನ ಸಾವು ಕಣ್ಣಲೇ ನೋಡೂದು ಸಾಧ್ಯ ಆದೀತೇನು? ನಮಕಿಂತ ಇಪ್ಪತ್ತು-ಇಪ್ಪತ್ತೈದು ವರ್ಷದ ಹಿಂದ ಆಕೀ ಹುಟ್ಟ್ಯಾಳ. ಒಂದ ಸಂಸ್ಕೃತಿ, ಒಂದ ಸಂಸ್ಕಾರಾ ಮೈಗೂಡಿಸಿಕೊಂಡು ಬೆಳದಾಳ. ತನ್ನ ಕೈಲೇ ತಾ ಕೂಕಮಾ ಅಳಿಸಿಗೋಬೂ ಮಾತ ಆಡಿದ್ದೇ ಆಕೀ ಘನ ದಿವ್ಯ ಮಾಡಿದ್ದಳು. ಅಪವಾದದ ಸಂಕಟಾ ಅದನ್ನ ಮಾಡಸಿತ್ತು. ದಾದಾನ ಅವತಾರ ಮುಗಿಯೂದ

ರಿಂದ. ಸಮಾಧಾನ ಪಡಿಗೊಂಬೂ ಈರ್ಷ್ಯಾ, ಅಂಥಾ ಸೂಡ-ಬುದ್ಧೀ, ಆಕೀ ಸಂಸ್ಕಾರಕ್ಕ ಹೊರಗಿಂದು. ನಾ ಸತ್ತರ. ಸುರ್‍ಯಾ ನೀ ಇದ್ದೀ. ನೀನೂ ಸತ್ತರ. ಸತೀಶ. ಕಿಶೋರ ಇದ್ದಾರ. ಅವರೂ ನಮ್ಮ ಹಾದೀನೇ ಓಡದರ, ತಾಯಿಗೇ ಮಕ್ಕಳಿಲ್ಲಾ ಅನ್ನೂ ಸಂಕಟಾ. ತಳಮಳಾ ಅಖಂಡ ಉಳದೀತು. ಆದರ ಕೂಕವಾ ತಾಳೀ ಇನ್ನೂ ಘಟ್ಟಿ ಅದ. ಮುತ್ತೈದಿತನಾ ಉಳದsದ ಅನ್ನೂ ಒಂದ ಆಶಾ. ಆಕೀ ಕಡೀ ಉಸರಿನ ಜೋಡೀನs ಥಣ್ಣಗಾದೀತು.

ದಾದಾ ಕೊಟ್ಟ ಅಪವಾದಾ, ಆಕೀಗೆ ವಾಳಧಾಂಗ ಅಂಟೇದ. ಆಕಿನ್ನ ಆ ವಾಳಾ 'ಡಿಸ್‌ಫಿಗರ್' ಮಾಡೇದ. ನಾ ಕೊಯ್ಯುತೀನೀ ಅಂದ್ಯಂದ್ರ. ವಾಳದ ಜೋಡೀ ತಾಯೀನೂ ಸಾಯತಾಳ. ನಿನ್ನ 'ಹಿರೊಯಿಕ್' ಹೊಡತಾ ತಾಯೀಗೆ ಕೂಡತsದ. ನಮಗೂ ಈ ವಾಳದ ಕಾಳಜೀ ಅದs. ಅದು ಮಾಯು ಆಗಬೇಕು ಅನೂ ವಿಚಾರನs ಅದs. ಆದರ ಅದನ್ನ ಕೊಯ್ಯದs, ನಿಧಾನಾಗಿ ಕರಗಸೂ ವಿಚಾರ ಅದs ನಂದು. ಅಂಥಾ ಹಾದೀ ಹುಡುಕಲಿಕ್ಕೆ ಹತ್ತೇನಿ. ಅಪವಾದ ಬಂದಷ್ಟು ನನಗ. ತಾಯೀಗೆ. ಅದನ್ನು ಅಳಸೂ ಜವಾಬ್ದಾರೀ. ಕರ್ತವ್ಯಾ ನಂದು. ಸುರ್‍ಯಾ. ನಿನಗ ಅದರ ಲೇಪನs ಇಲ್ಲಾ. ನೀ ದಾದಾಗ ಕೊಟ್ಟ ಧಮಕೀಯಿಂದ ಪುಷ್ಕಳ ಫಾಯದೇ ಆಗೇದ. ನಿನ್ನ ಮ್ಯಾಲs ಅಂವಗ ಭಾರೀ ಭಿಸ್ತ ಇತ್ತು. ನೀನೂ ಕೈ ಬಿಟ್ಟಿ ಅನ್ನೂ ಖಾತ್ರೀ ಆತು. ಬಸವಂತೀನೂ ಕೈ ಬಿಟ್ಟಾಳು. ದಾದಾಗ ನೆಲಾ-ಜಲಾ ಎಷ್ಟು ಬಡೀಲಿಕ್ಕೆ ಹತ್ತಿತಂದರ, ಅವನ ಪಾಪನs ಅವನ್ನ ತಿಂದು ಹಣ್ಣ ಮಾಡತದ. ತಾನೇ ಹಾದಿಗೆ ಬರತಾನ. ಬಸವಂತೀ ವಿಚಾರ ತಿಳಕೊಂಡು ನಾವು ಮುಂದಿನ ಹಾದೀ ಹಿಡಿಯೂಣು. ನೀ ಅಷ್ಟು ಎಲ್ಲಾ ಮರತು. ಖುಷೀಲೇ ಇರೂ. ಅಂದರ ತಾಯೀಗೆ ಸಮಾಧಾನ ಇರತದ. ನಾ ಇಲ್ಲದಾಗ ಸುರ್‍ಯಾ. ನೀನೇ ಆಕೀಗೆ ಆಧಾರಾ. ನೀನೂ ಮುಸುಮುಸು ಮಾಡಿ. ನಿಷ್ಠುರ ಮಾತನಾಡಿ. ಆಕೀಗೆ ಹೊಸಾ ಚಿಂತಿಗೆ ಆಸ್ಪದ ಮಾಡಿಕೊಡಬ್ಯಾಡಾ. ವಿಶ್ಯಾ-ಸುರ್‍ಯಾ. ರಾಮ-ಲಕ್ಷ್ಮಣ ರಂತ ನಮ್ಮನ್ನೂ ಕಣ್ಣ ಗೊಂಬೀ ಮಾಡಿಕೊಂಡಾಳ. ನೀ 'ಫಸ್ಟ್‌ಕ್ಲಾಸ್' ಬಂದಾಗ. ಭಜಕವರ್‌ಕರರೂ ಆಕೀಗೆ ಧನ್ಯವಾದ ಕೊಟ್ಟರು. ಏನ ಅತ್ತಳು. ಎಷ್ಟ ಆನಂದ ಪಡಿಗೊಂಡಳು. ನನ್ನ ಸುರ್‍ಯಾ. ನನ್ನ ಹೆಸರು. ಮನೀ ಹೆಸರು ಮುಂದ ತಂದಾ ಅಂದಳು. ಸುರ್‍ಯಾ. ನಿನ್ನ ದಸಿಂದ ತಾಯೀ ಅಂತಃಕರಣನs ಕರಗಿ ಕಣ್ಣಾಗ ಧಾರೀ ಹಿಡದಿತ್ತು. ಸುರ್‍ಯಾ. ಅಂದ ನೀನು ಶೇರೀ-ಪತ್ತಲಾ ಕೊಂಡ ತಂದಿ. ನನಗ ಅಂದಳು:

ವಿಶ್ಯಾ. ನನ್ನ ಸುರ್ಯಾ ಗಡಿಗಿ-ನೀರ ಮಾಡಿದಾ ನನಗ – ತನ್ನ ಮದಿವೀದು ಅಗಾವ ಶೀರೀ ಉಡಸಿದ ನನಗ ಅಂತs ಅತ್ತಬಿಟ್ಟಳು. ಸುರ್ಯಾ, ತಾಯೀ ಥೇಟ, ಹೂವ ಇದ್ಧಾಂಗ ಇದ್ದಾಳ. ನೀ ಬಾಯಲೇ ಬಿಸೀ ಉಸಲ ಬಿಟ್ಟರೂ ಸಾಕು ಆಕಿ ಬಾಡತಾಳ. ಸುರ್ಯಾ, ಅಕಿನ್ನ ಬಾಡಿಸಿಗೊಡಬ್ಯಾಡಾ. ನನ್ನ ಕಿತ್ತೇ ತೀಡೀನ್ಯಂತ ಅಭಿಮಾನದಿಂದ ಹೇಳತೀ. ತಾಯೀ ಬಾಬತ್ಯಾಗ ನನಕಿಂತಾ ವಳಣದಾರ ಅಕ್ಷರ ತಗೀ. ತಾಯೀ ಅಂದಿರಬೇಕು: ನೋಡ ವಿಶ್ಯಾ, ನನ್ನ ಸುರ್ಯಾನ್ನ, ನಿನ್ನೂ ಮೀರಿ ಸಿದಾ ಅಂತs. ತೀಡತೀ ಇಲ್ಲೋ ಸುರ್ಯಾ ?"

"ವಿಶ್ಯಾ, ನೀ ಕಪಾಳಿಗೆ ಹೊಡದು ಹೇಳಿದ್ದರ, ಯಾಕಂತ ಕೇಳತಿದ್ದೆ. ವಿಶ್ಯಾ ನೀ ಘನ ದುಷ್ಟ ಇದ್ದೀ. ತಲೀ ಸವರತಿ. ಬೆನ್ನ ಸವರತೀ. ಅಂತಃಕರಣದಿಂದ ಎದೀಗೆ ತಲೀ ಆನಿಸಿಗೊಂಡು ಕೂಸಿನ್ಹಾಂಗ ಜುಕ್ಕು ಬಡೀತಿ. ಬಾಯಿ ಕಟ್ಟತದ ವಿಶ್ಯಾ, ಉಲಟ ಮಾತ ಆಡಪರದು. ನಿನ್ನ ಪ್ರೀತಿ. ನಿನ್ನ ಅಂತಃಕರಣದಿಂದ ಜೀವ ಮೂಕ ಆಗತದ. ಈ ಮೋಹಿನೀಗೆ ನಾ ಎಂದೋ ಸಾಷ್ಟಾಂಗ ಹಾಕೀನಿ. ವಿಶ್ಯಾ ನೀಮಾತೀತ ದುಷ್ಟ ಆಗಿಕೋತ ಹೊಗಲೀ ಅಂತ ಧೇನಸೀನಿ."

ಅಣ್ಣ-ತಮ್ಮಂದಿರ ಪ್ರೀತಿ-ಸಂಗಮದ ಅದ್ಭುತ-ರಮ್ಯ ಚಿತ್ರವನ್ನು ನೋಡುತ್ತ ಕುಳಿತ ನನ್ನ ಕಣ್ಣಿನಿಂದ ಟಪಟಪನೆ ನೀರು ಸುರಿದವು. ಸೋಸಕ್ಕ ಕಲ್ಪಿಸಿದ ರಾಮ-ಲಕ್ಷ್ಮಣರ ಸಾಮ್ಯದಲ್ಲಿಯ ವಿರಾಟ್-ವೈಭವದ ಅಖಂಡ ದರ್ಶನವಾದಂತಾಯಿತು. ದಾದಲ್ಯಾ ಮೂಕಪ್ರೇಕ್ಷಕನಂತೆ ಈ ವೈಭವವಿಲಾಸ ದರ್ಶನದಲ್ಲಿ ದಂಗಾಗಿದ್ದ. ಗುಂಗಾಗಿದ್ದ. ಭಾನರಹಿತ ಶಿಲಾಪ್ರತಿಮಯಾಗಿದ್ದ.

"ದಾದಲ್ಯಾ, ನೀನು ಜೀವಂತ ಇದ್ದೀಯೋ, ಏನ ಪ್ರಯಾಣ ಬೆಳಿಸಿದ್ಯೋ ಮ್ಯಾಲಕೆಲ್ಲ್ಯರs ?

ವಿಶ್ವಾಸ ಭುಜ ತಟ್ಟಿ ಕೇಳಿದ.

"ತುಕ್ಯಾ-ವಾಣೀ ಮಗಾ, ಒಬ್ಬನೇ ಸದೇಹ ಸ್ವರ್ಗದ 'ಟ್ರಿಪ್' ಮಾಡಿದೇ ಅಂತs ಗಮುಜಿನ್ಯಾಗ ಇದ್ದಾ. ಸದೇಹ ಮ್ಯಾಲ ಹೋಗೂ ವಿದ್ಯಾ ಅಷ್ಟs ಅವಗತ ಇತ್ತು ಅಂಪಗ. ದಾದಲ್ಯಾನ್ನ ಸದೇಹ ಮ್ಯಾಲ ಕಳಿಸಿ, ತೆಳಗ ತರಸೂ ವಿದ್ಯಾ. ವಿಶ್ಯಾಗ ಅವಗತ ಅದs ಅನೂದನ್ನ ತುಕಾರಾಮ್ ಬುವಾಗ ತಿಳಿಸಿ ಬಂದೆ. ಸುರ್ಯಾ, ವಿಶ್ಯಾ ಇಲ್ಲೀ ಜೀವನs ಅಲ್ಲಾ. ಅಷ್ಟದರಿದ್ರ ಸುದಾಮಗ ಕೃಷ್ಣನ ಮೈತ್ರೀ ವೈಭವ ಇತ್ತು. ವಿಶ್ಯಾನ ಗೆಳೆತನಾ ನೆನಿಸಿಗೊಂಡಾಗ ಇದs ಕಲ್ಪನಾನs ಬರತದ.

ಜೀವಕ ಏನ ಧನ್ಯತಾ ಅನಸ್ತದ. ಸುರ್ಯಾ, ಏನ ಸಮಾಧಾನ ಬರತದ. ಈ ತೃಪ್ತೀ ತುಳಕದಿರಲಿ ಅನಸ್ತದ.

ಮೂರೂ ಜೀವ ಏಕ ಮೊನಲಾಗಿ ಮನೆಯ ದಾರಿ ಹಿಡಿದವು.

ಮನೆಗೆ ಬಂದಾಗ ರಾತ್ರಿ ಒಂಭತ್ತು ಬಾರಿಸಿ ಹೋಗಿತ್ತು.

## ಹತ್ತು

ನಾವು ಶ್ಯಾಮರಾಯನ ಬಂಗಲೆಯ ಗೇಟಿನಲ್ಲಿದ್ದೆವು – ಅಷ್ಟರಲ್ಲಿ ಒಳಗಿನಿಂದ ಖಾದರ್ ಓಡುತ್ತ ಬಂದ. ಅವನು ಮೋಟರಿನ 'ಓವರ್ ಹ್ಯಾಂಡ್ಲಿಂಗ್' ನಡೆಸಿರ ಬೇಕು. ಗಿಡ್ಡ ಜಣ್ಣ. ಎಣ್ಣೆಗಮಟಿ ಗಂಜೀಫ್ರಾಕ್ಕಿನಲ್ಲಿದ್ದ. ಕೈ-ಮೈ ಗ್ರೀಸ್ ಎಣ್ಣೆ ಯಿಂದ ಮಲಿನವಾಗಿದ್ದವು. ಗಾಡಿಯ ಬುಡದಲ್ಲಿ ಅಂಗಾತನಾಗಿದ್ದ ಕಾರಣ ಮೈಗೆ ಮಣ್ಣಡರಿತ್ತು. ಖಾದರನಿಗೆ ತನ್ನ ವಸ್ತ್ರ, ವೇಷ, ಆಕಾರದ ಭಾನವೇ ಇರಲಿಲ್ಲ. ಧಾವಿಸಿ ಬಂದವನೇ "ವಿಶ್ವಾಸ...... ವಿಶ್ವಾಸ" ಎಂದು ಎರಡೇ ಎರಡು ಸಲ ವಿಶ್ವಾಸನ ನಾಮೋಚ್ಚಾರಣೆಯನ್ನು ಮಾಡಿ ವಿಶ್ವಾಸನ – ತನ್ನ ಛೋಟಾ ಧಣಿಯ – ಕೊರಳಿಗೆ ತೆಕ್ಕೆ ಬಿದ್ದ. ಗಟ್ಟಿಯಾಗಿ ಆಲಾ-ಬಾಲಾ ತೆಗೆದುಕೊಂಡು —

"ಕ್ಯಾ ಮರ್ದ ಜವಾನ ಹುವಾ ವಿಶ್ವಾಸ್ – ತುಮ್ ಕ್ಯಾ ಮರ್ದ ಜವಾನ ಹುವಾ. ಮೇರಾ ನನ್ಹೆ-ಮೊನ್ಹೇ ವಿಶ್ವಾಸ ದಾಕ್ತರ ಬನಗಯಾ. ಬಡಾ ಆದಮಿ ಬನಗಯಾ. ಗರೀಬ ಖಾದರಕಾ ಯಾದ ಆತೀ ಹೈ ವಿಶ್ವಾಸ್?"

ವಿಶ್ವಾಸನನ್ನು ಬಿಡದೆ ಗಟ್ಟಿಯಾಗಿ ಅಪ್ಪಿಕೊಂಡು ತನ್ನ ಮಣ್ಣಡರಿದ ಭುಜಕ್ಕೆ ಮುಖವನ್ನು – ಕಂಬನಿ ತುಂಬಿ ಮಿಡಿಯುವ ಕಣ್ಣುಗಳನ್ನು ಒರೆಸಿಕೊಳ್ಳುತ್ತ ಕೇಳಿದ.

"ವಿಶ್ವಾ ನಿನ್ನ ಹ್ಯಾಂಗ ಮರತಾನು ಖಾದರ್? ನಾ ಕೂಸ ಇದ್ದಾಗ ನನ್ನ ಎತ್ತಿ ಆಡಿಸಿದಿ. ನಾ ಹ್ಯಾಂಗ ತ್ರಾಸ ಕೊಡತಿದ್ದೆ – ನೆನಪ ಅದs ಇಲ್ಲೋ?

ಖಾದರ್? ನಿನ್ನ 'ಟೂಲ್-ಬೊಕ್ಸ್'ದಾಗಿನ ಸಾಮಾನು ಗಡಪ್ ಆಗಬೇಕು. ನನ್ನ ಪಿಶವ್ಯಾಗ ನೇಮಕೀ ಸಿಗಬೇಕು. ನನ್ನs. ನಿನ್ನ ನೂರನ್ನ ಬಗಲಾಗ ಎತಿಗೊಂಡು ಫೋಟೋ ತಗಿಸಿದ್ದಿ. ಇನಾ ಅದನ್ನ ಜ್ಯಾಕೀಲೇ ಇಟ್ಟೇನಿ ಖಾದರ್. ನೂರ ಎಲ್ಲಿದ್ದಾಳ? ಅಕೀಗೆ ಹುಡೂಗರೆಷ್ಟ ಆಗ್ಯಾವ? ಬೂಬೂ ಆರಾಮ ಇದ್ದಾಳಿಲ್ಲೋ?"

"ನೂರ ಈಗ ಕರಾಡದಾಗ ಇರತಾಳ ವಿಶ್ವಾಸ್. ಅಕೀ ಗಂಡಗ ಅಲ್ಲೇ ಕೆಲಸ ಅದs. ಎರಡ ಹುಡುಗೂರ ಆಗ್ಯಾವ. ವಿಶ್ವಾಸದಾದಾನ ಹೆಸರ ಇಡತೀನ್ಯಂತ, ತನ್ನ ಹಿರೇ ಹುಡಗ್ಗs ವಿಶ್ಯಾಭಾಯ್ ಅಂತನs ಕರೀತಾಳ. ಊರಾಗ ಯಾರದರ ಶ್ಯಾರೀ ನಡೀತಂದರ ಬೂಬೂ ಅಂತಾಳ: ವಿಶ್ವಾಸದಾದಾನ ಶ್ಯಾದೀಗೆ ಹೋಗೂಣು. ತಾಯೀ ಅವರ ಕಾಲವ್ಯಾಲ ಬೀಳೂಣು ಅಂತs. ಭಾಳ ನೆನಿಸಿಗೋತಾಳ ಅಕೀ ತಾಯೀ ಅವರ್ನ. ಬಡೇ ರಾವಸಾಬ ಏ ಸಬ್ ಕ್ಯಾ ಕರಕೂ ಬೈಠೇ ಅಲ್ಲಾ ಜಾನೇ. ಪೇಟ ಹೈ ವಿಶ್ವಾಸ. ನನ್ಹೇ-ಮುನ್ಹೇ ಬಚ್ಚೇ ಹೈ. ಕ್ಯಾಂ ಕರೂ? ಜಾನ ಬಚಾನೇವಾಲೇಂಕು ಇಮಾನ ರಖನಾ ಪಡತೀ ಹೈ. ಅಲ್ಲಾಕಿ ಕಸಮ್ ಹೈ"

ವಿಶ್ವಾಸ-ಖಾದರ್ ಮಾತಾಡುತ್ತಿದ್ದ ದನಿ ಕೇಳಿ ಬಂದಿರಬೇಕು ಬಸವಂತಿ; ತಲೆಬಾಗಿಲಲ್ಲಿ ನಿಂತು ಬಿಟ್ಟಗಣ್ಣು ಬಿಟ್ಟು, ತದೇಕ ದೃಷ್ಟಿಯಿಂದ ನೋಡುತ್ತಿದ್ದಳು. ಅಚ್ಚ ಬಿಳಿಯ ಪತ್ತಲದಲ್ಲಿದ್ದ ಬಸವಂತಿ ಸ್ಫಟಿಕದಲ್ಲಿ ಎರಕ ಹೊಯ್ದು ತಿದ್ದಿ-ತೀಡಿ ನಿರ್ಮಿಸಿದ ಓಮಾಂಗಿಯಂತೆ ಕಾಣುತ್ತಿದ್ದಳು. ನಾವು ಮಾತು ಕೊಟ್ಟಂತೆ ಬಂದೆವೆಂಬ ಸಮಾಧಾನ ಅವಳ ಮುಖದಲ್ಲಿ ವಿರಾಜಮಾನವಾಗಿತ್ತು. ಬಸವಂತಿ ನಗುತ್ತ —

"ಖಾದರ್, ಸಣ್ಣ ಧಣ್ಯಾರ್ನ ಒಳಗ ಬಿಡೂದಿಲ್ಲೇನು? ಯಾರನೂ ಒಳಗ ಬಿಡಬ್ಯಾಡಂತ ಹುಕುಂ ಆಗೈತೇನು. ನಿನ್ನೆ ಹೋಗಾಗ?"
ಕೇಳಿದಳು.

"ಧಣೀ ತನ್ನ ಮನೀಗೇ ಬಂದಾನ ತಂಗೀ. ಬಿಡೂದಿಲ್ಲ ಅಲ್ಲಿಕ್ಕೆ ನಾ ಯಾರು? ಚಲೋ ವಿಶ್ವಾಸಬಾಯ್. ಬಡೇ ಸಾಬ ಕಲ್ ರಾತ ಗಾಡೀಸೇ ಗಯೇ ಗೌಂವಕೂ. ದಾದಲ್ಯಾ ಭಡಜೀ, ತುಮ್ ಕಬ್ ಆಯೇ? ಬೀ.ಏ. ಪೈಲಾಲಂಬರ ಆಯೇ ಕರಕೂ ಸಮಝೋ. ಕುಚ್ ಫೇಢಾ-ಬೀಡಾ ನಹೀ ಕ್ಯಾ?"

"ಪೇಢೇ ಏನ ಮಾಡತೀ ಖಾದರ್? ದಾದಲ್ಯಾ ಲಗ್ನದ ಹೋಳಿಗೀನೇ

ಹಾಕಾಂವ ಇದ್ವಾನ. ಘಡಜೀ ಆ‌ಪ್ ಬೀಬೀಕೇ ತಲಾಶಮೇ ಹೈ!"
ವಿಶ್ವಾಸ ನಗೆಯಾಡಿದ.

"ವಿಶ್ವಾಸಪಾದಾ. ಪ್ಯ ದಾದಲ್ಯಾ ಬಹೂತ್ ಇರಸಾಲ ಆದಮೀ ಹೈ ದೇಖೋ: ಎಗ್ಜಿಕ್ಯೂಟಿವ್ಹ ಸಾಬಕೇ ಪಾಸ್ ಕ್ಯಾ ಇಂಪ್ರೆಶನ್ ಮಾರ್‍ಯಾ – ಸಾಬ್ ಬಹೂತ ಖುಷ್ ಹೈ."

ಹಾಲಿನಲ್ಲಿಯ ಖುರ್ಚಿ ಸರಿಯಾಗಿದ್ದರೂ ಅವನ್ನು ಅತ್ತಿತ್ತ ಸರಿಸಿದಂತೆ ಮಾಡುತ್ತ – ನಮಗೆ ಕೂಡಲಿಕ್ಕೆ ಅನುವು ಮಾಡಿಕೊಡುತ್ತ ಖಾದರ್ ಹೇಳಿದ:

"ಆರಾಮು ಕರೋ ಸಾಬ್. ಚಾ ಲಾಯಿಂಗೇ"
ಎಂದು ಚಹದ ವ್ಯವಸ್ಥೆಗೆ ಒಳಗೆ ನಡೆದ.

"ಬಸವಂತೀ, ದಾದಾ ಊರಿಗೆ ಹೋದರೇನು? ನನ್ನ ಸ್ವಾದರಳ್ಯಾನ್ನ ಕರಕೊಂಡ ಬರತೀನ್ಯಂತ ಹೇಳಿದ್ದೆ. ಮಾತನಡಿಸಿದೆ…"
ಮಾತು ಸುರುವು ಮಾಡುವ ಬೇತಿನಿಂದ ಪೀಠಿಕೆ ಹಾಕಿದೆ.

"ದಾದಲ್ಯಾ, ನೀ ನನ್ನ ವಿಶ್ವಾಸನ್ನ ಕರಕೊಂಡ ಬರದಿದ್ದರೂ, ನಾನs ನನ್ನ ಅಕ್ಕನ ಮನೀಗೆ ಹೋಗಾಕಿದ್ದೆ. ಇವರು ಊರ ಬಿಡೂ ದಾರೀನs ಕಾಯುತಿದ್ದೆ. ಆಳ್ಯಾನ್ನ ಕರಕೊಂಡ ಬಂದ ಗಮಜ ಹೇಳಬ್ಯಾಡಾ. ವಿಶ್ವಾಸ ತನ್ನ ಮನೀಗೇ ಬಂದಾನ. ನಮ್ಮ ಕುಲಕರ್ಣ್ಯಾರ ಮನೀಗೆ, ಒಮ್ಮೆ ನಿಮ್ಮ ಅಪನವರು ಬಂದಿದ್ದರು. ಅವರು ಬರಾಗ, ಶಿಶ್ಯಾರು, ಮೆಲ್ಲಕ್…ಮೆಲ್ಲಕ್ ಅಂತ ಹೇಳತಿದ್ದರು. ನೀ ವಿಶ್ವಾಸಗ ಮೆಲ್ಲಕ್ ಮೆಲ್ಲಕ್ ಅಂತ ಹೇಳಿಕೋತ ಕರಕೊಂಡ ಬಂದೀದಿ. ಅದs ಖರೇ, ನಿಂದು ಬರೇ ಪ್ರಚಾರಕೀ. ಕೂಡ ವಿಶ್ವಾಸ. ನೀ ಅರೀದಂವಾ ಅಲ್ಲಾ. ನಾ ಹೊರಗಿನ್ಯಾಕಿ ಅಲ್ಲಾ. ನಿನಗೆಲ್ಲಾ ಠಾಂವಿಕ್ಯಾಗೇದ. ಮಾತಿಗೆ ಭಿಡೇ ಮಾಡಕೋಬ್ಯಾಡಾ. ನಾ ನಿನಗ ತಾಯೀ ಸಮಾನಾ. ದಾದಲ್ಯಾ ನನಗ ಅಕ್ಕರದಲೆ ಬಸವಂತೀ ಅಂತs ಅಂತಾನು. ನೀನೂ ಹಂಗs ಅನ್ನು. ಹ್ಯಾಂಗ ಮಾತಾಡಲೀ – ನನಗ ಏನ ಅಲ್ಲೀ ಅನೂ ಅನಮಾನದಾಗ ಅದೀ ಕಾಣತದ. ನಾಡೀ ಹೊಡತಾ, ನನಗ ಜರಾ. ಗಡಾನs ತೀಳೀತದ. ದಾದಲ್ಯಾಗ ಕೇಳ ಬೇಕಾದರ? ಯಾಕ ದಾದಲ್ಯಾ?"
ಬಸವಂತಿ ಕೇಳಿದಳು.

"ಬಸವಂತೀ, ವಿಶ್ವಾಸಗ ನೀ ತಾಯೀ ಸಮಾನಂತ ಹೇಳಿ, ಅಂವಾ ಮನಸ್ಸ ಬಿಚ್ಚಿ ಮಾತಾಡಲಿಕ್ಕೆ ಬಾಗಲಾನs ಖುಲ್ಲಾ ಮಾಡಿದಿ. ವಿಶ್ವಾಸ ಹೊರಗಿನವಾ

ಅಲ್ಲಾ ಅನೂದನ್ನೂ ನೀನೇ ಹೇಳೀ. ನೀನೂ ಎದೀ ಬಿಚ್ಚಿ ಮಾತಾಡಲಿಕ್ಕೆ ಮೋಕಳೀಕ ಆದಿ. ನಿನ್ನ-ವಿಶ್ವಾಸನ ನಡವ ಇದ್ದ ಅಡ್ಡ ಪರದೇ ಸರಿಸಿಬಿಟ್ಟಿ. ಠೀಕ ಮಾಡಿದಿ. ಮನಸ ಬೆರತೂ ಒಂದರಾಗ ಒಂದು. ಬಳ್ಳಿ ಗಿಡಕ ಸುತಿಗೊಂಡಿತು. ನನ್ನ ಕೆಲಸ ಆತು."

"ವಿಶ್ವಾಸನ್ನ ಗುರತ ಮಾಡಿ ಕೊಟ್ಟರ ಕೆಲಸ ಮುಗೀಲಿಲ್ಲ ದಾದಲ್ಯಾ. ಕೆಲಸ ಇನ್ನ ಸುರೂ ಆಗೂದೈತಿ; ಅವರು ಊರಿಗೆ ಹೋಗೂದಕ್ಕ, ನಿಮ್ಮ ಭೆಟ್ಟಿ ಆಗೂದಕ್ಕ ನಿವಳ ಗಂಟ ಬಿತ್ತು. ಚಾ-ಪಾಣೀ ಬಗೀಹರೀಲಿ. ಹೇಳತೀನಿ ಎಲ್ಲಾ ಬಾತಮೀ. ಊಟಕೂ ಇಲ್ಲೇ ನಿಂದರಬೇಕ ಮತ್ತs. ವಿಶ್ವಾಸಾ. ದಾದಲ್ಯಾ ಆಚಾರ್ಯಪ್ಪ ಅದಾನ. ಅಂವಾ ಬೇಕಾರ ಮನೀಗೆ ಹೋಗಿ ಉಂಡ ಬರಲಿ. ನನ್ನ ಕೈ ಅಡಗಿ ನಡ್ಯಾಂಗಿಲ್ಲ ಅಂವಗ."

"ಖಾದರನ ಅಡಿಗೀನೂ ನಡೀತದ ದಾದಾಲ್ಯಾಗ. ಅವನ ಮಡೀ-ಗಿಡೀ ಎಲ್ಲಾ ಬರೇ ಪ್ರಚಾರಕೀ. ಅಂವಾ ಊಟಕ್ಕ ಬರೂದಿಲ್ಲಂತs ಹೇಳಿ ಬಂದಾನ ಮನ್ಯಾಗ. ನಾವೂ ಹೊರಗ ಹಾಕಿದೇವೆಂದರ ಉಪಾಸ ಕೂಡಬೇಕಾದೀತು. ನಮ್ಮ ಪಾಲಿನ್ಯಾಗಿಂದು ಥ್ವಾಡೇ ಥ್ವಾಡೇ ಕೊಡೂಣು. ನಮಗ ಅರಹೊಟ್ಟಿ ಆದರೂ ನಡೀತದ. ದಾದಲ್ಯಾಗ ಒಂದ ತುತ್ತ ಕಡಿಮಿ ಬೀಳಬಾರದು."

ವಿಶ್ವಾಸ ಬಸವಂತಿಯನ್ನು ಏಕವಚನದಲ್ಲಿ ಸಂಬೋಧಿಸಿ ಮಾತಾಡಿದ್ದರಿಂದ, ಬಸವಂತಿ ಈಗಾಗಲೇ ತೀರ ಪರಿಚಿತಳೆಂಬ ಭಾವನೆ ಬರುವಂತೆ ಆತ್ಮೀಯತೆ ಯನ್ನು ತೋರಿದ್ದರಿಂದ, ಅವಳು ತೀರ ಖುಷಿಯಾದಳು. ಸುಳಿಗಾಳಿ ತೇಲಿ ಬಂದು, ಕಲಿಕೆಯನ್ನು ಪಕಳೆ-ಪಕಳೆಯಲ್ಲಿ ಅರಳಿಸಿದಂತೆ, ಅವ್ಯಾಜ ಮನೋಹರವಾಗಿ ಅರಳಿದಳು.

"ಬಸವಂತೀ, ವಿಶ್ವಾಸ ತನ್ನ ಮನೀಗೇ ಬಂದಾನಂದೀ! ನಾನು, ನನ್ನ ಅಕ್ಕನ ಮನೀಗೆ ಬಂದೀನಿ. ಇಬ್ಬರಿಗೂ ಭಿಡೇ-ಭಾರಾ ಮಾಡಿಕೊಂಬೂ ಗರಜ ಇಲ್ಲಾ. ಊಟಕ್ಕೆ ಆಗ್ರಹ ನೀನೂ ಮಾಡಬ್ಯಾಡಾ. ನಿಧಾನಾಗಿ ಇನ್ನೊಮ್ಮೆ ಬರತೇವಂತ. ಬಂದ ಕೆಲಸಾ ಮೊದಲ ಬಗೀಹರೀಲಿ. ನನಗ ಏಳರಾಗ ಹುಟ್ಟಿದ ಅವಸರ ಅಂದಿ. ಅದು ಅಗದೀ ಖರೇ ಅದs."

ಬಸವಂತಿ ನಿಧಾನವಾಗಿ, ವಿವರವಾಗಿ ಶಾಂತವಾಗಿ ಒಂದು ತಾಸಿನ ವರೆಗೆ ವರದಿ ಒಪ್ಪಿಸಿದಳು. ಓಂದೆ ನನ್ನ ಅವಳ ಭೆಟ್ಟಿಯಾಗಿ, ವಾಡೆಯ ಕ್ಷೇಮದ ದೃಷ್ಟಿ

ಯಿಂದ ತನಗೆ ಸಾಧ್ಯವಿರುವದೆಲ್ಲವನ್ನೂ ಮಾಡುತ್ತೇನೆಂದು ವಚನ ಕೊಟ್ಟ ದಿನ ದಿಂದ ಇಂದಿನ ವರೆಗಿನ ಎಲ್ಲ ಹಕೀಕತ್ತನ್ನು ವಿವರಿಸಿದಳು.

ಕಾಕಾ ಅವರು ಕಚೇರಿಯನ್ನು ವಾಡೆಗೆ ಸ್ಥಲಾಂತರಿಸುವ ಬಗ್ಗೆ, ವಾಡೆಯ ಗಣಪತಿದೇವಸ್ಥಾನದ ಆಸ್ತಿಯ ಮೇಲ್ವಿಚಾರಣೆಯ ಬಗ್ಗೆ, ತಮ್ಮ ಸ್ವಂತ ಮಿಳ ಕತ್ತಿನ ವಿಲ್ಹೇವಾಟದ ಬಗ್ಗೆ ರಾಜಪ್ಪನಿಗೆ ಬರೆದ ಕಾಗದದ ಬಾತಮೀ ಶ್ಯಾಮ ರಾಯನಿಗೆ ಯಾವ ಬಾಯಿಂದಲೋ ಹೊರಬಿದ್ದು ಬಂದು ಅವಗತವಾಗಿತ್ತು. ಅಂದು ರಾಜಪ್ಪ, ಕಾಕಾ ಅವರಿಂದ ಬಂದ ಕಾಗದವನ್ನು ಅಪನವರ ಸನ್ನಿಧಿಗೆ ಒಪ್ಪಿಸುವಾಗ, ನಮ್ಮ ಗೋವಿಂದಭಟ್ಟನೂ ಅಲ್ಲಿ ಉಪಸ್ಥಿತನಿದ್ದು ದ್ವಿತೀಯ ಶ್ರೋತಾ ಆಗಿದ್ದ. ಕದಾಚಿತ್ ಅವನೇ, ಈ ಸುದ್ದಿಯನ್ನು, ದೋಸ್ತೀಖಾತರ ಆಗಿ, ಪೋಸ್ಟ್‌ಮನ್ ಪಾಂಡೂನಿಗೆ ತಿಳಿಸಿರುವ ಸಂಭವವಿತ್ತು. ಕಾಕಾ ಮತ್ತೆ ವಾಡೆಯಲ್ಲಿ ವಿರಾಜಮಾನರಾಗಬಹುದೆಂಬ ನಿರ್ವ್ಯಾಜ ಪ್ರೇಮ-ಉತ್ಸಾಹದಿಂದಲೇ, ಪಾಂಡೂ ಅವನ್ನು ಪತ್ರ ಹಂಚುವ ಕೈಚಳಕದಿಂದಲೇ ನಾಲಿಗೆಯ ಚಲಾಕು ನಡೆಸಿ ಊರ ತುಂಬ ಹರಡಿರುವ ಸಂಭವವಿತ್ತು.

ಬಸವಂತಿಯನ್ನು ಕಾಯಂತರೀಕವಾಗಿ ಪಡೆಯುವಾಗ, ಶ್ಯಾಮರಾಯ ಬಸಗೊಂಡನಿಗೆ, ಹುಂಡಾರೂಪದಲ್ಲಿ ಕಾಕಾ ಅವರಿಂದ, ಅವನ ಹೊಲವನ್ನು ಬಿಡಿಸಿಕೊಟ್ಟಿದ್ದ. ಅದು ಅಂದು ತುಟ್ಟಿಯಾಯಿತೆಂದೇ ಎಲ್ಲರ ಅಭಿಪ್ರಾಯ ವಾಗಿತ್ತು. ಆದರೆ ಪಂತರ ಶ್ಯಾಮರಾಯ, ಇಲ್ಲಿ – ಈ ವ್ಯವಹಾರದಲ್ಲಿ ಏನೂ ಕಳೆದುಕೊಂಡಿರಲಿಲ್ಲ. ಅರ್ಧ ಬಡ್ಡಿಯನ್ನೂ ಬಿಡಿಸಿದ್ದ. ಅಲ್ಲದೆ, ತಾನು ಈ ಹೊಲ ವನ್ನು ಬಿಡಿಸಿ ಕೊಟ್ಟ ಬಗ್ಗೆ – ತನಗೆ, ಬಸಗೊಂಡ, ರಾಜಪ್ಪನ ಹೊಲಕ್ಕೆ ಹತ್ತಿದ ತನ್ನ ಹೊಲವನ್ನು ಖರೀದಿಗೆ ಕೊಡಬೇಕೆಂದು ಕರಾರು ಮಾಡಿಕೊಂಡಿದ್ದ. ಶ್ಯಾಮರಾಯ ನವಕರಿಯಲ್ಲಿದ್ದಾಗ ತಂದು ಒಪ್ಪಿಸಿದ ಗೋಪಾಳದಿಂದ, ರಾವಜೀ ಕಾಕಾ, ಶ್ಯಾಮರಾಯನ ಹೆಸರಿನಲ್ಲಿ ಅಲ್ಲದಿದ್ದರೂ – ಅವನ ಪರವಾಗಿ ತಮ್ಮ ಹೆಸರಿನಲ್ಲಿ ಸ್ಥಾವರ ಮಿಳಕತ್ತು ಮಾಡಿದ್ದರು. ನೂರು ಎಕರೆಯಷ್ಟು ಜಮೀನು ಮಾಡಿದ್ದರು. ಬಸಗೊಂಡನ ಈ ಹೊಲ, ಶ್ಯಾಮರಾಯನ ಹೊಲಕ್ಕೆ ಹತ್ತಿತ್ತು. ಅದು ಶ್ಯಾಮರಾಯನಿಗೆ ದಕ್ಕಿದರೆ – ಏಕ ಡಾಗ ನಾಲ್ವತ್ತು ಎಕರೆಯ ಒಂದು ದೊಡ್ಡ ಜಮೀನಾಗುತ್ತಿತ್ತು. ಬಸಗೊಂಡನ ಅಪ್ಪನೂ ನೇಟ ಕುಳವಾಗಿದ್ದರಿಂದ, ಅಂದು ಅವನು ಈ ಜಮೀನು ಮಾರಲಿಕ್ಕೆ ಒಪ್ಪಿರಲಿಲ್ಲ. ಆದರೆ ಬಸಗೊಂಡ,

ತಂದೆ ಥಕಾಯಿಸಿದ ಮೇಲೆ ಮಾಲ್ಕೀ ಅಧಿಕಾರಿಯಾದವ. ಲಕ್ಕೀಮುಷ್ಕೀ ವ್ಯಸನ ದಲ್ಲಿ, ಒಂದೊಂದೇ ಜಮೀನುಗಳಿಗೆ ನೀರು ಹಿಡಿಸುತ್ತ ಬಂದಿದ್ದ. ಕೆಲ ಜಮೀನು ಗಳನ್ನು ಕಾಕಾ ಅವರಿಗೆ ಒತ್ತಿ ಹಾಕಿದ್ದ. ಈ ಹೊಲ ಮಾತ್ರ ಅವನ ತಾಬೆಯಲ್ಲಿಯೇ ಇತ್ತು. ಅದು ರಾಜಪ್ಪನ ಹೊಲಕ್ಕೆ ಹತ್ತಿದ ಹೊಲವಾಗಿತ್ತು. ಬಾಂದಿನ ಬಗ್ಗೆ ಕಳೆದ ಅನೇಕ ವರ್ಷಗಳಿಂದ ಬಸಗೊಂಡ-ರಾಜಪ್ಪರಲ್ಲಿ ತಂಟೆ ನಡೆದಿತ್ತು. ಅದರ ತಲೆಶೂಲಿ ಇಬ್ಬರಿಗೂ ಇತ್ತು.

ಅದರೆ ಈಗ ಶ್ಯಾಮರಾಯ ಆ ಹೊಲವನ್ನು ದಕ್ಕಿಸಿಗೊಂಡು. ನಾಲ್ವತ್ತು ಎಕರೆಯ ಏಕ ಡಾಗನ್ನು ಮಾಡಿಕೊಂಡು, ಬದಿಗೆ ಹರಿಯುವ ಹಳ್ಳದ ನೀರು ತರುಬಿ, ಅದರ ಉಪಯೋಗ ಮಾಡಿಕೊಂಡು, ಈ ಏಕ ಡಾಗ ಜಮೀನಿನಲ್ಲಿ ಮುಸುಂಬಿಯ ಗಿಡಗಳನ್ನು ನಡುವ ಯೋಜನೆ ಮಾಡಿಕೊಂಡಿದ್ದ. ಹಿಂದೆ ತಾನು ಡಿ.ಐ.ಇ.ಯ ಎಲ್ಲ ಶಾಖೆ-ಉಪಶಾಖೆಗಳಲ್ಲಿ ದುಡಿದು ಅನುಭವ ಪಡೆದಿದ್ದ. ನೀರು-ಮಣ್ಣು ಬೇಕಾದ ಸಸ್ಯಸೃಷ್ಟಿಯನ್ನು ನಿರ್ಮಾಣಮಾಡಬಲ್ಲದೆಂಬ ಅನುಭವ ಪಡೆದಿದ್ದ. ಆ ಸೃಷ್ಟಿನಿರ್ಮಾಣಕ್ಕೆ ಬೇಕಾಗುವ ಅನುಕೂಲತೆ ಈ ನೆಲ-ಜಲದಲ್ಲಿತ್ತು. ಅದನ್ನು ಸಾಕಾರಿಸಿಕೊಳ್ಳುವ ಸ್ಥಾಪತ್ಯಜ್ಞಾನ ಶ್ಯಾಮರಾಯನಲ್ಲಿತ್ತು. ಹೀಗಾಗಿ ಶ್ಯಾಮರಾಯನ ಕಾಕದೃಷ್ಟಿ ಈ ಹೊಲದ ಮೇಲೆ ಬಿತ್ತು.

ಬಸಗೊಂಡನಲ್ಲಿ ತಂದೆಯ ಜಿಗಟು, ಖಂಬೀರತನವೂ ಇರಲಿಲ್ಲ. ಈ ಹತ್ತು ಎಕರೆಯ ಲಂಗೋಟಿಪಟ್ಟಿಯ ಆಸ್ಥೆಯೂ ಇರಲಿಲ್ಲ. ನಿತ್ಯ ಬೆಳಗಾದರೆ ಬಾಂದಿನ ಬಗ್ಗೆ ಬಡಿದಾಡುತ್ತ ಕೂಡುವ ತಾಕತ್ತೂ ಇರಲಿಲ್ಲ. ರಾಜಪ್ಪನ ಮಗ ಶಿವ್ಯಾ ಅವನಿಗೆ ಒಂದೆರಡು ಸಾರೆ ಕೈ ತೋರಿಸಿದ್ದ. ಈ ಕಂತ್ರಾಟದಿಂದ ಕತವಾಸಿದ ಬಸಗೊಂಡ, ಬಂದಷ್ಟಕ್ಕೆ ಒಗೆದರಾಯಿತೆಂದು ಒಪ್ಪಿ, ಈ ಹೊಲವನ್ನು ಶ್ಯಾಮ ರಾಯನಿಗೆ ಖರೀದೀ ಮಾಡಿಕೊಟ್ಟಿದ್ದ. ಹೊಲವನ್ನು ಖರೀದಿಗೆ ಕೊಡುವಾಗ, ತನ್ನ-ರಾಜಪ್ಪನಲ್ಲಿಯ ತಂಟೆಯನ್ನು ವಿನಾಮೂಲ್ಯ ಹಸ್ತಾಂತರಿಸಿದ್ದ.

ಈ ಹೊಲ ಶ್ಯಾಮರಾಯನಿಗೆ ದಕ್ಕ ಖರೀದಿಯಾದ ಮೇಲೆ ಬಾಂದಿನ ನಿರ್ಣಯವನ್ನು ತಾನೇ ನಿಂತು ಮಾಡಿ, ಶ್ಯಾಮರಾಯ, ರಾಜಪ್ಪನ ಹೊಲದಲ್ಲಿ ಸುಮಾರು ಮಾರು – ಒಂದೂವರೇ ಮಾರಿನಷ್ಟು ಜಾಗದಲ್ಲಿ ಕಾಲು ಚಾಚಿದ್ದ. ರಾಜಪ್ಪ, ಕಾಗದ-ಪತ್ರದ ಪುರಾವೆಯ ದಾಖಲ್ ತೋರಿಸಿದರೂ ಅದಕ್ಕೆ ಶ್ಯಾಮ ರಾಯ ಒಪ್ಪಲಿಲ್ಲ. ಕಾಯದೇಶೀರ ರೀತಿಯಿಂದ ಪಂಚರ ಮುಂದೆ ಈ ಪಂಚಾಯತಿ

ಒಯ್ಯುವದೂ, ಶ್ಯಾಮರಾಯನವರು ಕತ್ತಿಕಟ್ಟುವದೂ ಒಂದೇ ಎಂದು ರಾಚಪ್ಪ ನಿದಾನಿಸತೊಡಗಿದ್ದ. ಅನೌಪಚಾರಿಕವಾಗಿ ಪಂಚರು ರಾಚಪ್ಪನ ಪರವಾಗಿ ನಿರ್ಣಯ ವನ್ನು ಕೊಟ್ಟಿದ್ದರು. ಅದು ತನಗೆ ಬಂಧನಕಾರಿಯಲ್ಲವೆಂದು ಶ್ಯಾಮರಾಯ ಬೇಫಿಕೀರತನದಿಂದಲೇ ಇದ್ದ. ಆದರೆ ರಾಚಪ್ಪನ ಮಗ ಶಿವ್ಯಾ, ಪಂಚರ ಮುಂದೆ ಕಂತಶೋಷಣೆಯನ್ನೂ ಮಾಡಲಿಲ್ಲ – ಕತ್ತಿ ಒರಿಯುವ ಕಾಯಕವನ್ನೂ ಅವ ಲಂಬಿಸಲಿಲ್ಲ – ನೇರವಾಗಿ, ಶ್ಯಾಮರಾಯ ಹೇಗೆ ಅನಧಿಕೃತವಾಗಿ ಕಾಲು ಚಾಚಿ ದ್ದನೋ, ಅದೇ ರೀತಿ ತಾನೂ ಅವನ ಹೊಲದಲ್ಲಿ ಮೂರು ಮಾರು ಒಳಗೆ ಒತ್ತಿ ಹೋಗಿ ಬಿತ್ತಿ ಬಂದಿದ್ದ. "ಬತ್ತಲಿ ಕುಡಗೋಲ ಬೀಸಾಕ ಹೊತ್ತ ಓಡಿಯಾಂಗಿಲ್ಲಾ" ಎಂದು ಶಿವ್ಯಾ ಶ್ಯಾಮರಾಯನಿಗೆ ವಿನಾತಂತಿಯ ಸಂದೇಶ ಕಳಿಸಿದ್ದ. ಖವಳಿಸಿದ ಶ್ಯಾಮರಾಯ, ಖವಳಿಸಲಿರುವ ಶಿವ್ಯಾನ ನಡುವೆ, ರಾಚಪ್ಪ ದುರ್ಗಮ ಭಿತ್ತಿ ಯಾಗಿ ನಿಂತಿದ್ದರಿಂದ ತಾತ್ಕಾಲಿಕ ಹಗರಣ ತಪ್ಪಿತ್ತು. ಆದರೂ ಆಗ ಹೊತ್ತಿದ ಕೆಂಡ ಇನ್ನೂ ನಿಗಿನಿಗಿಸುತ್ತಿತ್ತು.

ಅಕಾರಣವಾಗಿ ರಾಚಪ್ಪನನ್ನು ನೀರಲ್ಲಿ ನೋಡುತ್ತಿದ್ದ ಶ್ಯಾಮರಾಯನಿಗೆ, ಈ ಹೊಲದ ತಂಟೆ ಉದ್ಭವಿಸಿದಾಗ, ಅವನನ್ನು ಮಣಿಸಲಿಕ್ಕೆ ಅನಾಯಾಸ ಸುಸಂಧಿ ದೊರಕಿತೆಂಬ ಸಮಾಧಾನ ಬಂದಿತು. ಶಿವ್ಯಾನಿಗೆ ಖಡೇ ಬೇಡಿ ಹಾಕಿಸುವ, ರಾಚಪ್ಪನನ್ನು ನರಮು ಮಾಡುವ ಸಂಧಿ ತಾನೇ ಕಣ್ಣು ತೆರೆದಿತೆಂದು ಶ್ಯಾಮ ರಾಯನಿಗೆ ನಿಶ್ಚಿಂತಿ ಬಂದಿತು.

ರಾಚಪ್ಪ ಗುಡಿಯಿಂದ ಕಚೇರಿಯನ್ನು ವಾಡೆಗೆ ಸ್ಥಳಾಂತರಿಸಲಿ ಅಂದೇ ಖಂಡೇ-ನವಮಿಯ ಆಯುಧ-ಪೂಜೆ ಮಾಡುವನೆಂದು ಶ್ಯಾಮರಾಯ ಪುಕಾರಿಸಿದ್ದ.

ಬಸವಂತಿ ಇದೆಲ್ಲವನ್ನೂ ನಿರ್ಲಿಪ್ತಳಂತೆಯೇ ಕೇಳಿಕೊಂಡು ಸುಮ್ಮನಿದ್ದಳು. ಕಚೇರಿ ವಾಡೆಗೆ ಬಂದ ದಿನ ಅಂಥದೇನಾದರೂ ಹಗರಣವಾದರೆ ತಾನು ಮಾಡ ಬಹುದಾದುದನ್ನು ಮಾಡಿದರಾಯಿತೆಂದು ಸುಮ್ಮನಿದ್ದಳು.

ರಾಚಪ್ಪನೂ ಮೌನವಾಗಿದ್ದ. ಆ ಕಾರಣದಿಂದ ಶ್ಯಾಮರಾಯನ ಅನ್ಯ ಹಾಲ್-ಚಾಲಿಗೆ ಆಯುಧ-ಪೂಜೆಯ ತಯಾರಿಗೆ ಸನ್ನದ್ಧವಾಗುವ ಅವಕಾಶ ದೊರೆತಿರಲಿಲ್ಲ.

ಆದರೆ ಸುರೇಶ ಬೆಳಗಾಂವಿಗೆ ಬಂದು, ಶಕೂನನ್ನು ಒಪ್ಪಿಕೊಂಡ ವಿಷಯ ತಿಳಿಸಿದ ಕಾಗದ ಬಂದ ದಿನ ಮಾತ್ರ ಶ್ಯಾಮರಾಯ ಖವಳಾಯಿಸಿದ. ಸಾಹೇಬ

ರಿಗೆ, ರಂಗಕ್ಕನಿಗೆ, ವಿಶ್ವಾಸ, ಸುರೇಶ, ಕಾಕಾ ಅವರಿಗೆ ಶಾಪಿಸಿದ್ದ. ಸೋನಕ್ಕನಿಗೆ 'ಆಕೆ-ಈಕೆ' ಕೂಡ ಎನ್ನದೆ ಕೇವಲ ಅವಾಚ್ಯ ವಿಶೇಷಣ ಹಚ್ಚಿ ತನ್ನ ದುಃಶ್ಯಾಸನ ಸಾಮರ್ಥ್ಯ ಪ್ರಕಟಿಸಿದ್ದ. ಹಾರೂರ ಜಮಾತಿ ಬೈಗಳ ಬಾಬತ್ತಿನಲ್ಲಿ ಹರಣಶಿಕಾರಿ ಯರನ್ನೂ ಹಿಂದೆ ಹಾಕುವ ತಾಕತ್ತು ಪಡೆದಿರುವ ಪ್ರತ್ಯಯವನ್ನು ಬಸವಂತಿಗೆ ತಂದುಕೊಟ್ಟ. ಎಲ್ಲವನ್ನೂ ಸಹನೆಮಾಡಿಕೊಂಡ ಬಸವಂತಿಯನ್ನು. ಶ್ಯಾಮರಾಯ ಸೋನಕ್ಕನಿಗೆ ಅರ್ಪಿಸಿದ ಅವಾಚ್ಯ-ಹೀನ ವಿಶೇಷಣ ಪ್ರಯೋಗ ಕೆರಳಿಸಿತ್ತು. ಸಾದಾ-ಸೀದಾ ರೀತಿಯಲ್ಲಿ ಮಾತಾಡುವಂತೆ ಅನುನಯಿಸಿತ್ತು. ಬಸವಂತಿಯ ಶಬ್ದದಲ್ಲಿ 'ಅಗಸೀ ಮುಂದಿನ ಬೋರ್‌ಗಲ್ಲಾ ಹಾಲು ಹಾಕಿದರೂ ಆಟs, ನಾಯಿ ಒಂಪಕ್ಕ ಮಾಡಿದರೂ ಆಟs'ದಂತೆ, ಅನುನಯಕ್ಕೆ ನರವಾಗದೆ ಬೆಂಕಿಯನ್ನು ಉಗುಳುತ್ತಲೇ ಸಾಗಿತ್ತು. ಆ ಕುದಿಗೆ ವಿಸರು ಬಂದು, ನೀರು ಹೊರಚಿಮ್ಮಿ ವಾಗ, ರಾಜಪ್ಪನ, ಕಾಕಾ ಅವರ, ವಿಶ್ವಾಸನ ಬಂದೋಬಸ್ತು ಮಾಡುವ, ಸೋನಕ್ಕ ನಾಕು ಜನರಲ್ಲಿ ನಾಲಸ್ತೀ ಆಗಿ, ಮುಖಿವೆತ್ತಿ ಅಡ್ಡಾಡದಂತೆ ಮಾಡುವ, ಶಕೂ-ಸುರೇಶನ ಸಂಬಂಧ ಎಂದಿಗೂ ಕೂಡದಂತೆ ಮಾಡುವ. ಎಲ್ಲ ವಿಚಾರಗಳೂ ಚಿಮ್ಮಿದ್ದವು.

ನನ್ನಿಂದ ಬಸವಂತಿಗೆ ಶ್ಯಾಮರಾಯನ ಭಾನಗಡಿ ವಿದಿತವಾಗಿತ್ತು. ಅವನು ಸೋನಕ್ಕನನ್ನು ಬಿಟ್ಟು, ಬಸವಂತಿಯನ್ನು ವಂಚಿಸಿದ ವಿಷಯವೂ ತಿಳಿದಿತ್ತು. ಅವಳು ಧೈರ್ಯವಾಗಿ —

"ಬೆಳಗಾಂವೀ ಸಾಬರಿಂದ ಮುಚ್ಚಿ ಇಡಾಕ ಹತ್ತೀರಿ. ಪುಣೇದ ಮಂದೀ ವಳಿಂದ ಕೇಳಿದರ, ನಮ್ಮ ಮನೀ ವರ್ದಿಷ್ಟನs ಅಂತೀರಿ. ವರ್ದಿಷ್ಟನs ಇದ್ದರ ಅಂಜಿಕ್ಯಾಕ? ಧೈರ್ಯಾದಲೇನs ಹೇಳಿಬಿಡರಿ. ನಿಮ್ಮ ತುಡಗ ವ್ಯಾರೇ ನೋಡಿ, ನನ್ನ ಜೀವಾ ಕಸಿವಿಸಿ ಆಗಾಕ ಹತ್ತೈತಿ. ಗಂಡಸನ್ನ ಕೈ ಹಿಡದ್ಹೆಂತ ಮಾಡಿದ್ನಿ. ನಿಮಗ ಧೈರ್ಯಾ ಇರದಿದ್ದರ ಹೇಳರಿ. ನಾನs ಹೋಕ್ಕೀನಿ ಪುಣೇಕ್ಕs. ಸೋನಕ್ಕಾ ಅವರಿಗೆ ಹೇಳಿಬಿಡತೀನಿ: "ಅಕ್ಕಾ, ಖರೇ ಗಂಡಸ ಆದಾಂವಾ ನಿಮಗ ವೆಸರ ಕೊಟ್ಟಿಲ್ಲಾ. ಯಲ್ಲಪ್ಪಗ ಹಿಜಡ್ಯಾ ಕೊಟ್ಟಾನಂತ. ನೀವು ಫಸಾಸೀರಿ – ನಾನೂ ಫಸಕೀ ಬಿದ್ದೀನಿ. ಗಂಡ ಆಗಿ ಆಳದಂವಾ ಮಿಂಡ ಆಗಿ ಏನ ಆಳತಾನ. ಕಾಳಜಾ ಕೊಟ್ಟ ಫಸಗೀ ಬಿದ್ದೀನಿ. ಉಡ್ಯಾಗ ಹಾಕ್ಕೋ ತಾಯೀ" ಅಂತ ಕಾಲ ಬೀಳತೀನಿ. ನಿಮ್ಮ ದರಜಾ, ದರಕಾರಾ ಇಲ್ಲ ನನಗ."

ಬಸವಂತಿ, ಶ್ಯಾಮರಾಯನ ಅವಾಚ್ಯ ವಿಶೇಷಣಗಳಿಂದ ಸೋನಕ್ಕನನ್ನು ರಕ್ಷಿಸುವ ಈರ್ಷೆಯಿಂದ ಕಿಡಿ ಸಿಡಿದಿದ್ದಳು. ಆ ಶಿವಿತ ಆರುಪಾರಾಯಿತು. ಬಸವಂತಿಗೆ ಈ ಗುಪಿತ ಅವಗತವಾದ ಪ್ರಜ್ಞೆ ಶ್ಯಾಮರಾಯನಲ್ಲಿ ಮೂಡಿತು. ಇಲ್ಲಿ ಯಾರೋ ತನಗೆ ಆಗದವರು ಸುರಂಗ ಹೊಡೆದು ಬಸವಂತಿಗೆ ಇದೆಲ್ಲವನ್ನೂ ವಿವರಿಸಿರಬೇಕೆಂಬ ಸಂಶಯ ಅವನಿಗೆ ಬಲವಾಯಿತು. ಅವರ ನಾಮನಿರ್ದೇಶಕ್ಕೆ ಬಸವಂತಿಯನ್ನು ಖಟ್ಟಿಗೆ ಹಚ್ಚಿದ. ಬಸವಂತಿ ಮಿಸುಕಲಿಲ್ಲ. ಒಂದು ತುಟಿ ಎರಡು ಮಾಡಲಿಲ್ಲ. ಗುಪಿತ ತಿಳಿಸಿದವರ ಹೆಸರನ್ನು ಹೃದಯದಲ್ಲಿ ಭದ್ರವಾಗಿ ಹಿಡಿದು ಕೊಂಡಳು. ತನಗೆ ತಿಳಿದ ವಿಷಯವನ್ನು ಒಪ್ಪುವಂತೆ ತನ್ನನ್ನು ವಂಚಿಸಿದ ಬಗ್ಗೆ ಜವಾಬು ಕೊಡುವಂತೆ ಶ್ಯಾಮರಾಯನನ್ನೇ ತಿವಿದು ಕೆರಳಿಸಿದಳು. ಕೆರಳಿದ ಶ್ಯಾಮರಾಯ ಉನ್ಮಾದಿಯಾಗಿದ್ದ. ಬೇಭಾನನಾಗಿದ್ದ. ಗುಪಿತ ಸ್ಫೋಟಕನನ್ನು ಅಡ್ಡ ಸೀಳುವ ಪ್ರಹಾರಕ್ಕೇ ಹೊಡೆದಿದ್ದ. ಆ ಸ್ಫೋಟಕನ ಹೆಸರನ್ನು ಹೇಳುವಂತೆ ಬಸವಂತಿಯನ್ನು ಹಿಂಸಿಸಿದ್ದ.

ತನ್ನನ್ನು ಹಿಂಸಿಸಿದ ಮಾತು ಬಂದಾಗ, ಬಸವಂತಿ —

"ಅದೇನ ಧೊಡ್ಡ ಮಾತಲ್ಲ ವಿಶ್ವಾಸಾ. ಇರಬಿ ಕಡದರ ತುರಿಸಿಗೊಂಡ್ಯಾಂಗ. ಅದೇನು ಹಾವಿನ ಹಲ್ಲ ಅಲ್ಲಾ, ವಿಷಾ ಬಿಡಾಕ"
ಎಂದಳು.

ಆದರೆ ಶ್ಯಾಮರಾಯನ ಹೀನಮಾನಸದ ಹಲ್ಲು ನಾಟಿ, ಅದರ ಬಚನಾಗ ನಂಜು, ಬಸವಂತಿಯ ಅಂಗಾಂಗವನ್ನೂ ವ್ಯಾಪಿಸಿದ ಪ್ರತ್ಯಯ ಅವಳ ನಂಜುಂಡ ಮಾತಿನಿಂದ ಬರತೊಡಗಿತ್ತು.

"ಸುರೇಶ ಬಂದಾನಂತ ಕಾಗದ ಬಂದ ದಿನಾ ಇವರು ಹೀಂಗs ಹಾರ್‍ಯಾಡಿದರು. ಊಟಾ-ಉಡಿಗೀ ಇಲ್ಲದ ಕ್ವಾಣ್ಯಾಗ ಹೋಗಿ ಮಲಕೊಂಡರು. ನಾನೂ ಒಂದ್ಯಾಪ್ಸ ಜ್ವಾರಿ ಹೇಳಿ ನೋಡಿದೆ. ಏಳಧಾಂಗ ಕಾಣೂತ್ತೇ. ಮಾಡಿದಡಿಗಿ ಮುಚ್ಚಿಟ್ಟು. ತೆಳಗ ಜ್ಯಾಪಿ ಒಕ್ಕೊಂಡು ಮಲಗಿಬಿಟ್ಟೆ. ಅವರ ಜೋಡೀ ಮಾತಾಡ ಲಾಕ ಸುದ್ದೇ ಮನಸ ಆಗಲಿಲ್ಲಾ. ಮೈ ಮುಡಚೆಟ್ಟ ಆಗೇದಂತ, ಅದನ್ನೇನು ಕಳಕ ನೀರಾಗ ಬುಚಕಳಸೂದೈತೇ? ಮನಸಾ ಸಿಗಾ ಉಳಿಸಿಕೊಂಡೆ – ಇವರ್‍ನ ಕೂಡಿ, ಮೈ ಮುಡಚೆಟ್ಟ ಆಗೂದನ್ನ ತೆಪ್ಪಿಸಿಕೊಂಡಿದ್ನೆಂತ ಬಲೇ ದಿಮಾಕ ಮಾಡಿ ಕೊಂಡಿದ್ದೆ. ದಿಮಾಕಿನ ಕೆಲಸನs ಮುರದ ಬಿತ್ತು. ಬಲೇ ಸಂಕಟಾತು. ಯಾಕಾಗ

ಹೇಳ್ಳೀ? ಏನ ಮಾಡಲೀ? ಅವ್ವಾ ಅವರಿಗೆ ಅಂದ ಮಾತ್ರ ನನಗೂ ಅಂದಿದ್ದರು. ಕೈ ಹಿಡದು, ಇಪ್ಪತ್ತ-ಇಪ್ಪತ್ತೈದ ವರ್ಸ ಸಂಸಾರ ಮಾಡಿದ ಗರತಿನ್ನ ಬಿಟ್ಟಾವ ರಿಗೆ, ನನ್ನ ಪರಿವಿ ಹ್ಯಾಂಗ ಇದ್ದೀತು? ನನ್ನೂ ಒಂದಿನಾ ಹೀಗs ಪಕಲಾಸಿದರ ಏನ ಮಾಡಲಿ? ಭಾಂವೀ-ಕೆರೀ ಮನಾರ ತುಂಬಿ ನಿಂತು, ಮಡಮಡಸಾಕ ಹತ್ಯಾವ. ಜೀಂವಾ ನೀಗಬೇಕೆಂದರ ಮುಕ್ಕ ನೀರ ಕುಡದರೂ ಸಾಕು, ತಮ್ಮ ಹೊಟ್ಟ್ಯಾಗ ಇಂಬ ಕೊಡತಿದ್ದೂ. ನಾ ಸತ್ತ ಶಕಾ ಇವರಿಗೆ ಬಡೀದ ಹೋಗ ತಿದ್ದಿಲ್ಲಾ. ತಾ ಸತ್ತರೂ ನನ್ನ ಜೀಂವಾ ಅರಿಯೂದನ್ನ ಬಿಡಲಿಲ್ಲಾ ಅಂತ ಇವರ ಬಾಯಲೇ ಬಂದಿರಬಾರದು. ಅಂಥಾ ಸಾವನs ಸಾಯುಬೇಕು – ಇಲ್ಲs ಬದಕಿ ಇವರ್ನ ದಾರಿಗರೇ ಎಳೀಬೇಕು ಅಂತ ಧೇನಿಸಿಗೊಂತ ಮಲಗಿದ್ನಿ. ಅವರೂ ಹಾಸಿಗ್ಯಾಗ ಹಾಗs ಹೊಳ್ಯಾಡತಿದ್ದರು. ನಡನಡವ ಬಡಬಡಸತಿದ್ದರು. ಸೋನಕ್ಕ ಅವರ್ನ, ಕಾಕಾ ಅವರ್ನ ಬೆಯ್ಯತಿದ್ದರು. ಅವರ ಮಾತ ಕೇಳಿದರ ಕಳಕ ನಾತ ಬಂಥಾಗ ಆಗತಿತ್ತು. ಕೇಳದs ಇರೂದೇ ಪಾಡಂತ ನಾ ಚಟ್ಟನ ಎದ್ದು ಹೊರಗ ಹೋಗಾಕೀ – ನಿದ್ದ್ಯಾಗೇ ಅವರು, ಬಸವಂತಿ ಉಲ್ಲೂ…ಉಲ್ಲೂ ಅನೂದೇನ ಸುಳ್ಳ ಅಲ್ಲಾ. ವಾಡೇದಾಗ ಭಂಗಾರ ಪಿಂಜರಾ ಮಾಡಿ ಇಟ್ಟಿದ್ದೆ. ಆಕಿನ್ನ ಗಿಳೀ ಹಾಂಗ ಸಾಕಿದ್ದೆ. ರಂಡಿ ದಗಾ ಕೊಟ್ಟಳು. ಜ್ಯಾತೀ ವ್ಯಾಲ ಹೋದಳು. ರಾಚ್ಯಾ… ರಾಚ್ಯಾ, ಅವನ್ನs ಏನರs ಕೂಡಿರಬೇಕು. ತೋರಸ್ತೀನಿ ಕೈ. ಪುಣೇದಾಗ ಬಂದೀ ಒಳಗ ಇಡತೀನಿ. ಯಾರಿಗೆ ಸಾಮೀಲಾಗಿ ನಂದೇನ ಮಣಸ್ತಾಳ ನೋಡತೀನಿ ಅಂದರು. ಇನಾ ಎಡ್ಡ ತಾಸ ರಾತ್ರಿ ಏನರs ಇರಬೇಕು, ಖಾದರನ ಎಬ್ಬಿಸಿ ಗಾಡೀ ತಗೀ ಅಂದರು. ನನ್ನ ಅರಿಬಿ-ಅಂಚಡಿ ತಾಂವs ಪೆಟಿಗ್ಯಾಗ ತುಂಬಿದರು. ನಡೀ, ಗಾಡ್ಯಾಗ ಕೂಡು ಅಂದರು. ದಾರ್‍ಯಾಗ ಒಂದ ಮಾತ ಇಲ್ಲಾ, ಒಂದ ಕಥೀ ಇಲ್ಲಾ. ಇಲ್ಲೆ ತಂದ ಒಗದರ ನನ್ನs. ಖಾದರಗ ಎಲ್ಲಾ ಠಾಂವಿಕೈತಿ ಅಂತs. ಅಂವಾ ಸಂಬಾಳಿಸಿಕೊಂಡ ನಡದಾನ. ಎಂದ ಬರಾವ್ರು, ಏನ ಮಾಡಾವ್ರು ಏನೂ ಹೇಳ ದೇನs ಹೋಗ್ಯಾರ. ನಾನೂ ಯಾಕ-ಎಂತ ಅಂತs ಕೇಳನೂ ಇಲ್ಲಾ. ದಿನಾ ಬೆಳ ಗಾದರ ಅವರ ಕಂತ್ರಾಟಾ ಕಣ್ಣಲೇ ನೋಡೂದಕಿಂತಾ, ಕಿಂವೀಲೆ ಕೇಳೂದಕಿಂತಾ, ಇಲ್ಲಿ ಬಂದೀ ಆದದ್ದs ಪಾಡ ಆತಂತ ಅನಸಾಕ ಹತ್ತೈತಿ.”

ಅವಳು ಇನ್ನೂ ಮಾತಾಡುವವಳಿದ್ದಳು. ಖಾದರ್ ಇನ್ನೊಂದು ಸಲ ಚಹ ತಂದ. ಟ್ರೇ ಟೇಬಲ್ಲಿನ ಮೇಲಿಟ್ಟು, ತಾನು ಪೇಟೆಗೆ ಹೋಗಿ ಬರುತ್ತೇನೆಂದು

ತಿಳಿಸಿ ಹೊರಟು ಹೋದ. ಬಸವಂತಿ ಚಟ್ಟನೆ ಎದ್ದು, ಟ್ರೇದಿಂದ ಕಿಟ್ಲಿಯನ್ನು ಎತ್ತಿ, ಕಪ್ಪಿಗೆ ಚಹ ಬಾಗಿಸಹತ್ತಿದಳು. ಒಂದಿಷ್ಟು ದೂರ ಕುಳಿತ ವಿಶ್ವಾಸನ ಮುಂದೆ ಕೈ ಚಾಚಿ. ಕಪ್ಪು ಕೊಡುವಾಗ ತಲೆಯ ಮೇಲಿನ ಸೆರಗು ವಾಲಿ, ಬಲ ದೋಳಿನ ಅಖಂಡ ದರ್ಶನವಾಯಿತು. ಬಸವಂತಿಯ ಬಲದೋಳು ಬಿಳೀ ಅರಿವೆಯ ಬ್ಯಾಂಡೇಜಿನಲ್ಲಿ ಬಂಧಿತವಾದದ್ದು ಕಂಡಿತು. ಬಸವಂತಿ ಚಟ್ಟನೇ ಸೆರಗೆಳೆದುಕೊಂಡು ಅದನ್ನು ಮರೆಮಾಡಲು ಯತ್ನಿಸಿದಳು.

"ಬಸವಂತೀ, ಪಟ್ಟಿ ಯಾತರದು ತೋಳಿಗೆ?"
ನಾನು ವಿಸ್ಮಿತನಾಗಿ ಕೇಳಿದೆ.

"ಕಾಗೀ ಕಣ್ಣ ದಾದಲ್ಯಾ ನಿನ್ನೂ. ಬರೇ ಮಂದೀ ಮೈ-ಕೈ ಕಡೇನs ನಿನ್ನ ನಜರಾ. ಜರಾ ನಜರಚೂಕ ಆಗ್ತಾಂಗಿಲ್ಲಾ. ತೋಳಬಂದೀ ಮಾಡಿಸಿದ್ದರು ಇವರು. ಜರಾ ಹತ್ತ್ಯಾಗಿ ತೋಳ ಕಚ್ಚಿತದು. ಅದಕ ಪಟ್ಟೀ ಕಟಗೊಂಡೀನಿ"
ವಿಷಾದಪೂರ್ಣ ನಗೆ ನಕ್ಕು ಹೇಳಿದಳು.

"ಬಸವಂತೀ, ನಂದೂ ವಿಶ್ಯಾಂದೂ ಆಣಿ ನಿನಗ. ಖರೇ ಹೇಳು ಏನಾಗೇದಂತ? ನಿನ್ನ ತೋಳಬಂದೀ ಕಥೀ ಸುಳ್ಳಾ. ಏನೋ ಆಗೇದ. ಮುಚ್ಚಿ ಇಡಲಿಕ್ಕೆ ಹತ್ತೀದಿ."
ನಾನು ಆಣೆ ಹಾಕಿ ಖಟ್ಟಿಗೆ ಹಚ್ಚಿ ಕೇಳಿದೆ.

"ದಾದಲ್ಯಾ ಹೆಣ್ಮಕ್ಕಳ ಹಾಂಗs ಆಣೀ-ಸೂರೀ ಏನ ಹಾಕತೀ? ಓಳತನ್ನು. ತೋಳಿಗೇನೂ ಆಗಿಲ್ಲಾ. ಜರಾ ಪೆಟ್ಟ ಹತ್ತ್ಯೈತಿ ಅಟs. ಚಾ ಕುಡೀರಿ ಮದಲs. ಆರಲಾಕ ಹತ್ತ್ಯೈತಿ."

ಬಸವಂತಿ ಪೆಟ್ಟಿನ ಕಾರಣವನ್ನು ಮುಚ್ಚಿಡುವ ಸಾಹಸ ಮಾಡತೊಡಗಿದಳು. ಚಹದ ಕಪ್ಪನ್ನು ಅವಳ ಕಡೆಗೆ ಸರಿಸುತ್ತ ನಾನು —

"ಬಸವಂತೀ. ಓಳತೂ ಅನೂದಿಲ್ಲಾ. ಚಹಾನೂ ಮುಟ್ಟೂದಿಲ್ಲಾ. ಖರೇ ಹಕೀಕತ್ತು ಹೇಳದ ಹೊರ್ತು ಇಂದ ಬಾಯಾಗ ನೀರ ಹಾಕದs ಹೀಂಗೇ ಇಲ್ಲೆ ಕೂತಬಿಡತೀನಿ. ನಂದು, ವಿಶ್ಯಾಂದು ಇಬ್ಬರ ಆಣೀದು ನಿನಗ ದರಜ ಇಲ್ಲಾ."
ಆರ್ಜವತೆಯಿಂದ ಹೇಳಿದೆ.

"ದರಜ ಯಾಕ ಇಲ್ಲ ದಾದಲ್ಯಾ? ನೀ ನನ್ನ ತಮ್ಮಾ. ವಿಶ್ವಾಸ ಮಗನ ಸರೀ. ನಿಮ್ಮ ದರಜ ಹ್ಯಾಂಗ ಇಲ್ಲ ನನಗ? ಇನ್ನ ನೀವs ನನಗ ಆಧಾರಾ. ಓಳತನ್ನ.

ದಾದಲ್ಯಾ. ಚಾ ಕುಡೀ. ಹೇಳತೇನಿ ಒಂದಾಗಡಿಸಿ. ಚಾ ಕುಡೀದs ನಾನೂ ಏನೂ ಹೇಳಾಂಗಿಲ್ಲಾ"
ಬಸವಂತಿ ಕರಾರು ಹಾಕಿದಳು.

ನಾನು, ವಿಶ್ವಾಸ ಒಂದೇ ಗುಟುಕಿನಲ್ಲಿ ಚಹವನ್ನು ಗಂಟಲ ಕೆಳಗೆ ಇಳಿಸಿ ಉತಾವಿಳರಂತೆ ಬಸವಂತಿಯ ಮಾತಿನ ದಾರಿ ಕಾಯುತೊಡಗಿದೆವು.

ಬಸವಂತಿ ತನ್ನ ಸ್ನೇಹಮಯಿಯ ಅವ್ಯಾಜ ಮನೋಹರ ನಗೆಯರಳಿಸಿ —

"ದಾದಲ್ಯಾ. ಇರಬೀ ಕಡತಾ. ಕಡತ ಅಲ್ಲಾ ಅಂದ್ನೆಲಾ ನೆನಪ ಐತಿಲ್ಲೋ? ಅದು ಹಾವಿನ್ಹಾಂಗ ವಿಷಾ ಬಿಡೂದಿಲ್ಲಾ, ಆಟs ನೋಡು. ಸೋನಕ್ಕ ಅವರಿಗೆ ಬಾಯಿಗಿ ಬಂಧಾಂಗ ಅಡಬ್ಯಾಡರಿ. ಹೆಣ್ಣಮಕ್ಕಳಿಗೆ ಆಡಿದವರ ಬಾಯಾಗ ಹುಳಾ ಬೀಳತಾವಂದಿನಿ. ಭಾಳ ಖಿವಾಳಿಸಿದರು. ಮಾತಿಗೆ ಮಾತು ಬೆಳಕೊಂತ ಹೊದೂ. ನಾನೂ ಜರಾ ನಾಲಗೀ ಸೈಲ ಬಿಟ್ಟೆನಿ. ಊರಿಯೂ ಬೇಕ್ಯಾಗ ಒಣಗಿದ ಹುಲ್ಲ ಒಗಪನೀ. ನಾ ಅಲ್ಲೇ ಕುಬಸಾ ಹೊಲಕೊಂತ ಕುಂತಿದ್ನಿ. ಹಂತ್ಯಾಕನs ಕತ್ತರಿ ಬಿದ್ದಿತ್ತು. ಜರಾ ಗಂಡಸ್ತನಾ ತೋರಿಸಿದರು. ನನಗೂ ಹರೇದ ನೆತ್ತರಾ ಕುಣೀತಿತ್ತು. ಆಟ ಬಸವರ ಬಸದ ಹೋಗವಲ್ಲದ್ಯಾಕಂತ ಸುಮ್ನು ಕುಂತನಿ. ಸುಣ್ಣಾ-ಬೆಣ್ಣಿ ತೀದ ಒರಸಿದ್ನಿ. ಮಾಯಾಕ ಹತ್ತೈತಿ. ಯಾಷ್ಟ ದಿನಾ ಜರಾ ಹೊಡೀತು. ಉರೀನೂ ಬಂದೂ, ಈಗ ಗುಣಾ ಆಗೈತಿ."

ವಿಶ್ವಾಸ ಚಟ್ಟನೇ ಎದ್ದು ಬಸವಂತಿಯ ಕೈಯನ್ನು ಕೈಯಲ್ಲಿ ತೆಗೆದುಕೊಂಡ. ಸೆರಗು ಸರಿಸಿದ. ತೋಳು ಹೊರಳಿಸಿ ನೋಡಿದ. ಒಂದೂ ಮಾತಾಡದೆ, ಏನೂ ಹೇಳದೆ, ಸರಸರನೆ ಪಟ್ಟಿ ಬಿಚ್ಚಿದ. ಕತ್ತರಿಯ ಅಲಗು ನಾಟಿದ ಜಾಗದಲ್ಲಿ. ಬಸವಂತಿ ಸುಣ್ಣ-ಬೆಣ್ಣೆ ಒರಿಸಿದ್ದಳು. ಕತ್ತರಿಯ ತಿವಿತ, ನಟ್ಟ ಜಾಗದಲ್ಲಿ ಆಸು-ಪಾಸು, ನಂಜಿನ ವಿಷವನ್ನು ಬಿಟ್ಟಿತ್ತು. ಒಂದು ರೂಪಾಯಿಯಗಲದ ಜಾಗ ಹಸಿರುಗಟ್ಟಿತ್ತು. ಬಸವಂತಿಯ ತೋಳನ್ನು ಎತ್ತಿ ಹಿಡಿದು, ಹೊರಳಿಸಿ, ವಿಶ್ವಾಸ ತದೇಕ ದೃಷ್ಟಿಯಿಂದ ಬಸವಂತಿಯನ್ನು ನೋಡಿದ. ಬಾವನ್ನು ನೋಡಿದ.

"ದಾದಲ್ಯಾ. ಪಸ್ ಆಗೇದ. ಇಡೀ ತೋಳಿಗೇ ತಗೋತದ ಬಾವು. ಈಗಿಂದೀಗs ದವಾಖಾನಿಗೆ ಹೋಗಬೇಕು. ಟಾಂಗಾ ತಗೊಂಡ ಬಾ. ಹೋಗಿ ಬರೂಣು."
ಎಂದು ಹೇಳಿದ.

"ದವಾಖಾನೀ-ಪಿವಾಖಾನೀ ಏನೂ ಬ್ಯಾಡ ವಿಶ್ವಾಸ. ತಾನs ಮಾಯತದ ನಾಕ ದಿನದಾಗ. ಸುಣ್ಣಾ-ಬೆಣ್ಣಿ ಬ್ಯಾನೀನ ಹೀರತದ. ನೀ ಏನ ಕಾಳಜೀ ಮಾಡ ಬ್ಯಾಡಾ."

ಬಸವಂತಿಯು ನಕಾರದಿಂದ ವಿಚಲಿತನಾಗದೆ ವಿಶ್ವಾಸ —

"ದಾದಲ್ಯಾ, ಟಾಂಗಾ ತಗೊಂಡ ಬಾ ಹೋಗು"

ವಿಶ್ವಾಸನ ಆಜ್ಞೆಯಲ್ಲಿ ಬಸವಂತಿಯನ್ನು ಟಾಂಗಾದಲ್ಲಿ ದವಾಖಾನೆಗೆ ಕರೆದು ಕೊಂಡು ಹೋದೇನೆಂಬ ನಿರ್ಧಾರವೂ ಇತ್ತು.

"ಟಾಂಗಾ ಬ್ಯಾಡ ವಿಶ್ವಾಸ. ಬೇಕಾದರ ನಡಕೊಂತನs ಹೋಗೂಣು. ತಡಾ ಆದರ ಬರಾಗ ಬೇಕಾದರ ಟಾಂಗಾ ಮಾಡೂಣು. ಖಾದರನೂ ಮನ್ಯಾಗ ಇಲ್ಲಾ. ದಾದಲ್ಯಾನ್ನ ಮನ್ಯಾಗ ಕೂಡಿಸಿ ಹೋಗೂಣು."

ಬಸವಂತಿ ಒಪ್ಪಿದ್ದರಿಂದ ವಿಶ್ವಾಸನಿಗೆ ಸಮಾಧಾನವಾಯಿತು. ಕಿಶೆಯಲ್ಲಿಯ ಸಿಗರೇಟ ಪಾಕೀಟು, ಕಡ್ಡಿಪೆಟ್ಟಿಗೆಯನ್ನು ನನ್ನ ಮುಂದೆ ಒಗೆದು —

"ದಾದಲ್ಯಾ, ನಾವ್ ತಿರಿಗಿ ಬರೂತನಕಾ ಉದ್ಯೋಗ ಬೇಕಲಾ ನಿನಗ. ಈ ಪಾಕೀಟ ಖಲಾಸ್ ಮಾಡು"

ಎಂದು ಹೇಳಿದ.

"ದಾದಲ್ಯಾ, ಬಿಳೀ ಬತ್ತೀನೂ ಸೇದತೀಯಾ? ಎಲ್ಲಾ ಚಟಾ ಅದಾವಲಾ?" ನಗುತ್ತ ಬಸವಂತಿ ಕೇಳಿದಳು.

ಬಾಯಲ್ಲಿ ಹೊಗೆ ತುಂಬಿದ್ದರಿಂದ ನಮಗೆ ಉತ್ತರಿಸುವದಾಗಲಿಲ್ಲ.

ವಿಶ್ವಾಸ-ಬಸವಂತಿ, ಮನೆಯ ಗೇಟು ದಾಟಿ ಝಪ ಝಪ ಹೆಜ್ಜೆ ಹಾಕುತ್ತ ನಡೆದದ್ದನ್ನು ನೋಡುತ್ತ. ಹೊಗೆಯ ವಲಯ ರಚಿಸುತ್ತ. ನಾನು ಟೇಬಲ್ಲಿನ ಮೇಲೆ ಅನಾಮತ್ತಾಗಿ ಎರಡೂ ಕಾಲಿರಿಸಿಕೊಂಡು ಮನೆಯ ಕಾವಲು ನಡೆಸಿದೆ.

ಸಿಗರೇಟಿನ ಮೇಲೆ ಸಿಗರೇಟು ನಡೆದಿತ್ತು. ಆ ಧೂಮ್ರವಲಯದ ಬೆನ್ನು ಹತ್ತಿ. ಇದೇ ಹೋದ ಬಸವಂತಿಯ ವಿಚಾರ ನಡೆದಿತ್ತು:

ಶ್ಯಾಮರಾಯನನ್ನು ಮಣಿಸಲಿಕ್ಕೆ ಅತಿರಥ-ಮಹಾರಥರೇ ಸೆರೆದಿದ್ದರು. ರಾವಜೀಕಾಕಾ ಜೋಡು-ನಳಿಯ ಬಂದೂಕಿನ ವೀರಶ್ರೀ-ವೈಭವವನ್ನೇ ಹಾಡು ತ್ತಿದ್ದರು. ರಾಚಪ್ಪ ದೇವಸ್ಥಾನದಲ್ಲಿಯ ಕತ್ತಿ-ಖಡ್ಗಗಳ ಮೇಲೆ ಬೆರಳಾಡಿಸಿ ತಂಬೂರಿ ಮೀಟುತ್ತಿದ್ದ. ವಿಶ್ವಾಸ ಬರೇ 'ಬಲವಾ್ ದದ್ಯಾತ್ ಬಲವಾ್ ದದ್ಯಾತ್'

ಮಂತ್ರವನ್ನ ಮಟಮಟಿಸುತ್ತಿದ್ದ. ಸುರೇಶ ಸಾವರಕರೀ ಆವೇಶದಿಂದ ರುಧಿರ ತಿಲಕದ ಶಾಬ್ದಿಕ ಸರ್ಕಸ್ ನಡೆಸಿದ್ದ. ರಾಜಪ್ಪನ ಚಿರಂಜೀವ ಶಿವ್ಯಾ ಕುಡುಗೋಲಿನ ನಿಶಿತಧಾರೆಯನ್ನು ಹೊರಹೊರಳಿಸಿ ನೋಡುವದರಲ್ಲಿಯೇ ಇನ್ನೂ ಮಗ್ನನಾಗಿದ್ದ.

"ಕುತಸ್ತ್ವಾ ಕಶ್ಮಲಮಿದಂ ವಿಷಯೇ ಸಮುಪಸ್ಥಿತಾ"

ಎಂದು ಯಾರೋ ಕೇಳುತ್ತಿದ್ದರು. ಅತಿರಥ-ಮಹಾರಥರಲ್ಲಿ ಪಾರ್ಥನ ಪರಕಾಯ ಪ್ರವೇಶವಾಗಿಅವರು ಉತ್ತರಿಸದೆ ಮೂಕ-ವಿಸ್ಮಿತರಾಗಿ, ದನಿ ಕೇಳಿ ಬಂದ ದಿಕ್ಕನ್ನು ನೋಡುತ್ತ ನಿಂತಿದ್ದರು. ಶ್ಯಾಮರಾಯ ಗಹಗಹಿಸಿ ನಗುತ್ತ, ಅತಿರಥ-ಮಹಾರಥರ ಅಸಹಾಯಕತೆಯನ್ನು ಲಘುವಾಗಿ ಭಾವಿಸಿ ವಿಜೃಂಭಿಸುತ್ತಿದ್ದ. ಹಬ್ಬದ ದಿನ ಬಾಗಿ ಲಿಗೆ ಕಟ್ಟಿದ ತಳಿರು-ತೋರಣ, ಮರುದಿನ ಬಾಡಿ ಜೋಲು-ಮುಖ ಹಾಕಿದಂತೆ, ಈ ಯೋಧ-ತಳಿ ಅಧೋವದನವಾಗಿರುವಾಗ ಜಯದ್ರಥ-ಶಿರ ಸಾವಿರ ಯೋಜನ ಆಚೆಗೆ ನೆಗೆದು ಹಾರಿ ಬೀಳುವಂತೆ, ಶ್ಯಾಮರಾಯನ ಆ ವಿಕಟಾಟ್ಟಹಾಸ-ಮುಖ ವನ್ನು, ಶಿರವನ್ನು, ಧಂಡದಿಂದ ಬೇರ್ಪಡಿಸುವಂತೆ, ಬಸವಂತಿ ಚಕ್ರವೆಸೆದಳು. ತಾನು ನಂಬಿದ, ತನ್ನನ್ನು ನೆಚ್ಚಿದ ಶ್ಯಾಮರಾಯನನ್ನು ಬಸವಂತಿ ಒಂದೇ ಕೂರಲಗಿ ನಿಂದ ವಿಚ್ಛೇದಿಸಿದಳು. ಬಸವಂತಿ ಚಂಡಿಯಾಗಲಿಲ್ಲ – ಚಾಮುಂಡಿಯಾಗಲಿಲ್ಲ. ಏನೂ ಏನೂ ಆಗಲಿಲ್ಲ. ಕೇವಲ ಬಸವಂತಿಯಾಗಿ, ಕೇವಲ ಹೆಣ್ಣು ಹೃದಯ ಧಾರಣಮಾಡಿದ ಬಸವಂತಿಯಾಗಿ, ಈ ದಿವ್ಯ ಸಾಧಿಸಿದಳು.

ಹೀಗೆ ಮಾಡೆಂದು ರಾವಜೀಕಾಕಾ ಅವರು ಆವಳಿಗೆ ಹೇಳಲಿಲ್ಲ; ರಾಜಪ್ಪ ವಕೀಲಿ ಮಾಡಿರಲಿಲ್ಲ. ವಿಶ್ವಾಸ-ಸುರೇಶರು ಅನುನಯಿಸಿರಲಿಲ್ಲ. ಸೋನಕ್ಕಾ ಕಂಬನಿ ಮಿಡಿದು ವಿನವಿಸಿರಲಿಲ್ಲ. ಹೀಗೆ ಮಾಡೆಂದು ದಾದಲ್ಯಾ ಅವಳನ್ನು ಆಗ್ರಹಪಡಿ ಸಿರಲಿಲ್ಲ. ಶ್ಯಾಮರಾಯ ಸೋನಕ್ಕನಿಗೆ ನಿವೇದಿಸಿದ ಅವಾಚ್ಯ ವಿಶೇಷಣ ಅವಳ ಕಿಚ್ಚನ್ನು ಕೆದಕಿತ್ತು. ಹೆಣ್ಣ ಕಾರುಣ್ಯವನ್ನು ಕರಗಿಸಿತ್ತು. ಬಸವಂತಿ ಕಂಬನಿ ಮಿಡಿದು, ಕಾಲು ಹಿಡಿದು ಬೇಡಿಕೊಳ್ಳಲಿಲ್ಲ. ಶ್ಯಾಮರಾಯನ ಮಾತಿನ ಆಹೇರಿಯನ್ನು ನೆತ್ತರ ಬಸಿದು ನಿವಾಳಿಸಿ ಒಗೆದಿದ್ದಳು.

ಹತ್ತು ಜನ ಗಂಡಸರು ಮಾಡದ ದಿವ್ಯವನ್ನು ಒಬ್ಬ ಹೆಂಗಸು – ಬಸವಂತಿ ಮಾಡಿ ಗೆದ್ದಿದ್ದಳು.

ಶ್ಯಾಮರಾಯನ ತಿವಿತವನ್ನು ಇರಿವೆ ಕಡಿದಷ್ಟು ಲಘುವಾಗಿ ಭಾವಿಸಿದ್ದಳು. ನಂಜಡರಲಿಕ್ಕೆ ವಿಷವಲ್ಲವೆಂದು ನಗೆಯಾಡಿದ್ದಳು.

ದೈವಿಕತೆ ಇಲ್ಲದಲೆ ದಿವ್ಯ ಸಾಧಿಸದು. ಬಸವಂತಿಯಲ್ಲಿ ಆ ಅಂಶವಿರಬೇಕು. ದೈವಿಕ ಸಾಧನೆ ಇರಬೇಕು.

ಸಿಗರೇಟಿನ ಬೂದಿ, ಸೇದಿ ಟೇಬಲ್ಲಿಗೆ ಒರಿಸಿದ ತುಂಡು, ಟೇಬಲ್ಲಿನ ಆಸು-ಪಾಸು ರಂದಿ ಹರವಿದ್ದವು. ಅವನ್ನು ಕೂಡಿಸಿ ಹೊರಗೆ ಚೆಲ್ಲಬೇಕೆಂದು ಕಾಗದ ತುಣುಕಿನ ಶೋಧ ನಡೆಸಿದೆ. ಬಸವಂತಿ, ಖಾದರ್ ಇಲ್ಲದಾಗ ಇಡೀ ಮನೆಯೇ ನನ್ನ ತಾಬೇದಾರಿ ಇದ್ದಂತಿತ್ತು. ಆದರೂ ಒಳಹೊರಗೆ ಅಲೆದು ಕಾಗದ ಶೋಧಿಸುವದು ಸರಿಯೆಂದು ಕಾಣಲಿಲ್ಲ. ಇನ್ನು ಅನ್ಯ ಉಪಾಯವೇ ಇಲ್ಲವೆಂದು, ನಾನು ಮಾಡಿದ ರಾಡಿಯನ್ನು ನನ್ನ ಕೈಯಿಂದಲೇ ಎತ್ತಿ ಹೊರಗೆ ಚೆಲ್ಲುವದು ಸೂಕ್ತವೆಂದು ಧೇನಿಸಿ, ಕುರ್ಚಿಯನ್ನು ಸರಿಸಿ ಎದ್ದೆ. ಕೊನೆಯ ಸಿಗರೇಟು ಮುಗಿಸಿ, ಖಾಲೀ ಪಾಕೀಟನ್ನು ಅಲ್ಲೇ ಬಿಟ್ಟಿದ್ದರೆ ಅದನ್ನೇ 'ಆ್ಯಶ್-ಪಾಟ್, ಡಸ್ಟ್‌ಬಿನ್' ಮಾಡಲಿಕ್ಕೆ ಬರುತ್ತಿತ್ತು. ಬಸವಂತಿಯ ತಂದ್ರಿಯಲ್ಲಿ ಅದನ್ನು ಯಾವಾಗಲೋ ಕಿಡಿಕಿಯಾಚೆಗೆ ಬಿಸಾಡಿಬಿಟ್ಟಿದ್ದೆ. ಕುರ್ಚಿಯನ್ನು ಸರಿಸಿ ಎದ್ದಾಗ, ಟೇಬಲ್ಲಿಗೆ ಡ್ರಾಅರ್ ಇದ್ದದ್ದು ಕಾಣಿಸಿತು. ನನ್ನ ಸ್ವಂತದ ಅಲ್ಲದಿದ್ದರೂ, ಪಂತಮಾಮಾ ಅವರು ನನಗೆ ಬಿಟ್ಟು ಕೊಟ್ಟ, ಒಂದು ಹಳೆಯ ಮೇಜಿನ ಹತ್ತು ಡ್ರಾಅರ ಖಾನೆಗಳಲ್ಲಿ ನಾನು ಯಾವಾಗಲೂ ದಿನಪತ್ರಿಕೆ, ವಾರಪತ್ರಿಕೆ, ನನ್ನ ಅಭ್ಯಾಸದ ಪುಸ್ತಕ ತುರುಕಿ ಆ ಡ್ರಾಅರಿನ ಉಸಿರು ಕಟ್ಟಿಸುತ್ತಿದ್ದೆ. ಅದರ ನೆನಪಾಯಿತು. ಕದಾಚಿತ್ ಈ ಜಾಗದಲ್ಲಿ ನನಗೆ ಕಾಗದ ಸಿಕ್ಕರೆ ಸಿಗಬಹುದು, ಟೇಬಲ್ಲಿನ ಡ್ರಾಅರನ್ನು – ಬಸವಂತಿ-ಖಾದರರ ಅಪರೋಕ್ಷದಲ್ಲಿ ಸಹಜಾಸಹಜೀ ತೆಗೆಯುವದು ಮಹಾ ಪಾತಕವೇನೂ ಆಗಲಾರದೆಂದು – ಡ್ರಾಅರ್ ಜಗ್ಗಿದೆ. ಲೆಟರ್‌ಪ್ಯಾಡ್, ಖಾಲೀ ಪಾಕೀಟು – ಎಸ್ ಜಿ. ಪಂತ, ಬಿ.ಈ.,ಎ.ಎಂ.ಐ.ಈ. ಪಿ.ಡಬ್ಲ್ಯು.ಡಿ. ಕಾಂಟ್ರಾಕ್ಟರ್ ......ಇತ್ಯಾದಿ ವಿಳಾಸ ಹೊತ್ತ ಖಾಲೀ ಪಾಕೀಟಿನ ಒಂದು ಗಟ್ಟಿಯೂ ಇತ್ತು. ಹೊಸ ಪಾಕೀಟು ಕೆಡಿಸುವದಕ್ಕಿಂತ, ರದ್ದೀ ಪಾಕೀಟ ಆದರೆ ನಡೆದೀತೆಂದು ಅದರ ತಪಾಸಿ ನಡೆಸಿದೆ. ರದ್ದೀ ಸಂಶೋಧನೆಯಲ್ಲಿ, ಡ್ರಾಅರದಲ್ಲಿ ವ್ಯವಸ್ಥಿತವಾಗಿರಿಸಿದ, ಶ್ಯಾಮರಾಯರ ಪತ್ರವ್ಯವಹಾರ-ಸೃಷ್ಟಿ ಥಳಮಳಿಸಿತು. ಪಾಕೀಟು ಕಾರ್ಡಿನ ಮೇಲೆ ಅಂಗಾತ ಬಿದ್ದವು. ಕಾರ್ಡು ಪ್ಯಾಡ್ಡಿನಲ್ಲಿ ಮುಖ ಮುಚ್ಚಿಕೊಂಡವು. ರದ್ದೀ ಹೋಗಲಿ, ಇದ್ದದ್ದನ್ನು ಜೋಡಿಸಿಟ್ಟರೆ ಆಯಿತೆಂದು, ವಿಸ್ಖಲಿತ ಪತ್ರಸಾಹಿತ್ಯ ಸೃಷ್ಟಿಯ ಸಂಸಾರವನ್ನು ಜೋಡಿಸತೊಡಗಿದೆ.

ನನ್ನ ಜೋಡಣೆಯ ಕಾರ್ಯಕ್ರಮ ಸಿಧಾನವಾಗಿ ನಡೆದಾಗ, ಒಂದು ಪಾಕೀಟು – ಶ್ಯಾಮರಾಯನ ಹಸ್ತಾಕ್ಷರದಲ್ಲಿದ್ದದ್ದು – ಶೀಲಬಂದ ಆಗಿ (ಅಂದರೆ – ಬಂದ ಮಾಡಲಾದದ್ದು) ಬಿ.ಈ., ಎ.ಎಂ.ಐ.ಈ. ಅಂಡರ್ ಸೆಕ್ರೆಟರಿ ಟು ಗವ್ಹರ್ನಮೆಂಟ್ ಆಫ್ ಪಿ.ಡಬ್ಲ್ಯು.ಡಿ. ಡಿಪಾರ್ಟ್‌ಮೆಂಟ್ ಕುಸುಮವಾಟಿಕಾ......ದಾದರ... ಬಾಂಬೆ ಇತ್ಯಾದಿ ಲಿಖಿತ ವಿಳಾಸ ಹೊತ್ತ ಪಾಕೀಟು ಕಣ್ಣಿಗೆ ಬಿತ್ತು. ವಿಳಾಸವಿದೆ: ಮಜಬೂತವಾಗಿ ಬಂದು ಆಗಿದೆ. ಆದರೂ ಅಂಚೆಯ ಪೆಟ್ಟಿಗೆಯಲ್ಲಿ ಬೀಳದೆ ಯಾಕೆ ಉಳಿದಿದೆ? ಉಳಿದಿರಬೇಕು? ಪಾಕೀಟನ್ನು ಕೈಗೆ ತೆಗೆದುಕೊಂಡೆ. ತಿರು ತಿರುಗಿಸಿ ನೋಡಿದೆ. ಒಡೆದು ನೋಡಬೇಕೆಂಬ ನಿರುದ್ದೇಶ ಕುತೂಹಲ ಚುಟು ಚುಟಿಸತೊಡಗಿತು. ಓದಿ ಹರಿದೊಗೆದರಾಯಿತು. ಇದೇನು 'ಬ್ರೀಚ್ ಆಫ್ ಟ್ರಸ್ಟ್'ನೂ ಅಲ್ಲ. ಯಾರೂ ಯಾಕೆ ಓದಿದೆಯೆಂದು ಫಾಶೀ ಹಾಕುವದೂ ಇಲ್ಲ. ಅದರಲ್ಲಿ ಏನೂ ಮಹತ್ವದ ವಿಷಯವೇ ಇರದಿದ್ದರೆ – ಇನ್ನೊಂದು ಪಾಕೀಟಿನ ಮೇಲೆ ಇದೇ ವಿಳಾಸ ಬರೆದು ಪೋಸ್ಟ್ ಮಾಡಿದರಾಯಿತು. ಅದು ಮುಟ್ಟಿ ತನ್ನ ಕಾರ್ಯ ಮುಗಿಸುತ್ತದೆ. ಪೋಸ್ಟ್ ಮಾಡದೆ ಹರಿದು ಹಾಕಿದರೆ. ಜಗತ್ತೇ ಮುಣು ಗುವದಿಲ್ಲ. ಒಂದು ಸಣ್ಣ ಮಾತು – ಯಾರದೋ ಪತ್ರವನ್ನು ಒಡೆದು ಓದುವದಕ್ಕೆ ಇಷ್ಟು ಚಿಕಿತ್ಸೆ ಮಾಡುವದೇ ನಾಲಾಯಖಿತನವೆಂದು, ಪಾಕೀಟನ್ನು ಹರಿದೆ. ಪತ್ರ ಇಂಗ್ಲೀಷಿನಲ್ಲಿತ್ತು. ಶ್ಯಾಮರಾಯನ ಸ್ವ-ಹಸ್ತಾಕ್ಷರದಲ್ಲಿತ್ತು. ಇದು ಅದರ ಮಕ್ಕಿಕಾ ಮಕ್ಕೀ ಅನುವಾದ:

ಪ್ರಿಯ............

ನಿಮ್ಮ ಪತ್ರ. ಕೆಲಸದ ಗಡಿಬಿಡಿಯಲ್ಲಿ ಉತ್ತರವನ್ನು ಲಗೇಚ ಬರೆಯು ವದಾಗಲಿಲ್ಲ. ಕ್ಷಮಿಸಬೇಕು. ನಾನೇ ಮುಂಬೈಗೆ ಬಂದು ಸಮಕ್ಷಮ ಭೆಟ್ಟಿ ಯಾಗಬೇಕೆಂಪು ಯೋಚಿಸಿದ್ದೆ. ಆದರೆ ಅನ್ಯ ಅಗತ್ಯದ ಕೆಲಸಗಳ ಮೂಲಕ ಸಾಧ್ಯವಾಗುವಂತೆ ಕಾಣಲಿಲ್ಲ. ತಿರುಗಿ ಊರಿಗೆ ಹೊರಟಿದ್ದೇನೆ ನಿಮಗೆ ಬರೆಯುವದು ಜರೂರ ಎಂದು ಅನಿಸಿದ್ದರಿಂದ ಈಗ ಬರೆಯುತ್ತಿದ್ದೇನೆ.

ನನ್ನ ಚಿರಂಜೀವನ ಬಗ್ಗೆ ನೀವು ವಹಿಸಿದ ಆಸ್ಥೆಗೆ ನಾನು ಆಭಾರೀ. ತಮ್ಮ ಶ್ರೀಮತೀಯವರ ತಂಗಿಯ ಕೂಡ ನಮ್ಮ ಹುಡುಗನದು ಜಮಾ

ಸುವ ಯೋಗವಿದ್ದರೆ ಅದರಿಂದ ಇಬ್ಬರಿಗೂ ಸಮಾಧಾನ. ಅವನನ್ನು ಒಮ್ಮೆ ಮುಂಬೈಗೆ ಕರೆದುಕೊಂಡು ಬರುತ್ತೇನೆ. ಅವನೂ ಹುಡುಗಿಯನ್ನು ನೋಡಲಿ. ದೇವರ ದಯದಿಂದ ಒಪ್ಪಿಗೆಯಾದರೆ ಮುಂದಿನ ಭಾರ ನನ್ನದು. ಯಾವ ತೊಂದರೆ ನನ್ನ ಬಾಬತ್ತಿನಲ್ಲಿ ಬರಲಾರದು. ಹುಡುಗನ ಕಲ್ಯಾಣ ನಿಮಗೆ ಹತ್ತಿದಂತೆ ಅವನ ಬದಲಿಯ ಬಗ್ಗೆ ಬರಿದಿದ್ದೆ. ಈಗ ಆ ವಿಚಾರ ನಮ್ಮ-ನಿಮ್ಮ ಹಿತದ ದೃಷ್ಟಿಯಿಂದ ಬಿಡಬೇಕು. ಕಾರಣ, ಬೆಳಗಾಂವಿಯ ಆಸಾಮಿ ಹಗ್ಗ ಹಾಕಿ ಕೂತಿದೆ. ನನ್ನ ಮೇಲೆ ಭಾರೀ ಒತ್ತಾಯ ನಡೆದಿದೆ. ನನಗೂ ಸಂಕಟಕ್ಕೆ ಬಂದಿದೆ. ಇಲ್ಲವೆಂದು ನಕಾರ ಹೇಳಿದರೆ, ಅದರ ಪರಿಣಾಮ ನನ್ನ ಕಾಮಗಿರಿಯ ಮೇಲೆ ಖಾತ್ರೀಯಿಂದ ಆಗುತ್ತದೆ. ಹುಡಗಿ ನನ್ನ ಮನಸ್ಸಿಗೆ ಬಂದಿಲ್ಲ. ಆದರೆ ನಕಾರ ಹೇಳುವದೂ ಜೀವದ ಸುತ್ತು ಬಂದಿದೆ. ಅದಕ್ಕೇ ಇಸಮನ್ನು ಆದಷ್ಟು ತೀವ್ರ ಇಲ್ಲಿಂದ ಉತ್ಥಾಪಿಸಿದರೆ ನನಗೆ ಅನುಕೂಲ. ಕಾರವಾರ ರತ್ನಾಗಿರಿಗಳಿಗಿಂತ ಥೇಟ ಗುಜರಾತಕ್ಕೇ ಹೊರಬೇಕು. 'ಸೂನರ್ ದಿ ಬೆಟರ್'. ಬೆಳಗಾಂವಿಯಲ್ಲಿ ಗಿರಾಕಿ. ಮೈ-ಕೈ ಸಡಿಲು ಬಿಟ್ಟು ಮೆಯ್ಯಾಡುತ್ತಿದೆ. ಎಸ್.ಈ. ಮಬ್ಬು ಬಿದ್ದಿದ್ದಾರೆ. ಈ ಮಾರ್ಚ... ಛೇ, ಅಂಕಿಯನ್ನು ಒಡೆಯಬಾರದು. ಸಮಕ್ಷಮದಲ್ಲಿ ಹೇಳುವೆ.

ನಮ್ಮ ಟ್ರಕ್ಕು ಹತ್ತೆಂಟು ದಿನಗಳಲ್ಲಿ ಮುಂಬೈಗೆ ಬರುತ್ತದೆ. ನಿಮಗೆ ಯಾದೀ ಪ್ರಕಾರ ಯಚ್ಚಾವತ್ ಸಾಮಾನು ಕಳಿಸುತ್ತೇನೆ. ಹೆಚ್ಚಿಗೇನಾದರೂ ಬೇಕಾಗಿದ್ದರೆ ಜರೂರ ಬರೆಯಬೇಕು.

ಬಾಕೀ ಯಾವತ್ತೂ ಕ್ಷೇಮ. ಶ್ರೀಮತಿಯವರಿಗೆ ನಮಸ್ಕಾರಗಳನ್ನು ತಿಳಿಸಬೇಕು. ಹುಡುಗರಿಗೆ ಆಶೀರ್ವಾದ."

ಎಸ್. ಜಿ. ಪಂತ ಸ್ವದಸ್ತೂರ ಖುದ್ದ ಪತ್ರ ! ಶ್ಯಾಮರಾಯನ ಮೃತ್ಯುಪತ್ರ ಕೈವಶವಾಯಿತು. ತಾರೀಖು ನೋಡಿದೆ. ಎರಡು-ಮೂರು ದಿನಗಳ ಹಿಂದೆಯೇ ಬರೆದದ್ದು. ಶ್ಯಾಮರಾಯ ಯಾಕೋ ಏನೋ ಬರೆದರೂ ಅದನ್ನು ಅಂಚೆಗೆ ಹಾಕದೆ ಇಟ್ಟಿದ್ದ. ಅಥವಾ ಹಾಕಲೆಂದು ಖಾದರನಿಗೆ – ಖಾದರನಿಂದ ಹಾಕಿಸೆಂದು – ಬಸವಂತಿಗೆ ಹೇಳಿರುವ ಸಂಭವವೂ ಇತ್ತು. ಇಷ್ಟು ಅವಸರದಿಂದ ಬರೆದು, ಸಾಹೇಬರನ್ನು ಉತ್ಥಾಪನೆ ಮಾಡಿಸುವ – ಸುರೇಶನಿಗೆ, 'ಅಂಡರ್ ಸೇಕ್ರಟರಿ'ಯ

ಶ್ರೀಮತಿಯ ತಂಗಿಯನ್ನು ತೆಗೆದುಕೊಳ್ಳುವ ಯೋಚನೆ ಮಾಡಿದವ, ಬರೆದು ಎರಡು-ಮೂರು ದಿನವಾದರೂ ಅದನ್ನು ಕಾಯ್ದಿಟ್ಟಿರಬೇಕಾದರೆ – ಏನಾದರೂ ಡಾವು ಇರಬೇಕು. ಸುರೇಶನ ಕೂಡ ಆದ ಮಾತಿನಿಂದ, ಅವನ ಆಶೆಗೆ ನೀರು ಹೊಯ್ದಂತಾಗಿತ್ತು. ಸಾಹೇಬರ ಮೂಗಿಗೆ ತುಪ್ಪ ಸವರಿ ಕೂಡಿಸಿದಂತೆ – ಈ 'ಅಂಡರ್ ಸೇಕ್ರುಟರಿ' ಸಾಹೇಬರಿಗೂ ತುಪ್ಪ ಸವರುವ ಯೋಚನೆ ಮಾಡಿಕೊಂಡು, ಅಂಥ ಊಚ ತುಪ್ಪದ ತನಿಖೆಯಲ್ಲಿರಬಹುದೇ? ಅಥವಾ ಲೇಖೀ ಯಾಕೆ ಕೈ ಸಿಗಿಸಿಕೊಂಡು ಒದ್ದಾಡಬೇಕು – ಎಂದು, ಹಿಂದೆ ನವಕರಿ ಮಾಡಿದಾಗಿನ ಸರಕಾರೀ ನೌಕರವೃತ್ತಿಯ ಪ್ರಜ್ಞೆ ಜಾಗರವಾಗಿರಬಹುದೇ? ಖಾದರ್ ಅದನ್ನು ಹಾಗೇ ಇಡುವ ಇಸಮಲ್ಲ. ಅವನಿಗೆ ಇಂಥ ವಿಳಾಸ ಹೊತ್ತ ಪತ್ರಗಳ ಮಹತಿ ಚೆನ್ನಾಗಿ ಅವಗತವಿರುತ್ತಿದ್ದವು. ಶ್ಯಾಮರಾಯನಲ್ಲೇ ಚಾಕರಿಯ ರ...ಠ...ಈ...ಕ ತೀಡಿದ ಅವನಿಗೆ ಕಾಜಗದ ಮಹತ್ವ ಗೊತ್ತಾಗಿದೆ.

16726

ಪತ್ರ ಒಡೆಯುವಾಗ ಇದು 'ಕ್ರಿಮಿನಲ್ ಆ್ಯಕ್ಟ್' ಎಂಬ ಭಾವನೆ ಸುಳಿದಿತ್ತು. ಓದಿ ಮುಗಿಸಿದ ಮೇಲೆ ಒಬ್ಬ ಕ್ರಿಮಿನಲ್‌ನನ್ನೇ ಅನಾಮತ್ತಾಗಿ ಹಿಡಿದ ಮಹದಾನಂದವಾಯಿತು. ಸಾಹೇಬರಿಗೆ, ಶ್ಯಾಮರಾಯನ ಹೀನತನವನ್ನು ಲಿಖಿತ ಸಾಕ್ಷ್ಯ ಒಪ್ಪಿಸಿ, ಸಿದ್ಧ ಮಾಡುವ ಭಕ್ಕಂ ಪುರಾವೆ ದೊರಕಿತ್ತು. ಈ ಒಂದೇ ಕಾಗದದಿಂದ ಶ್ಯಾಮರಾಯನನ್ನು ನುಸಿಯಂತೆ ಒರೆಸಿ ಒಗೆಯಬಲ್ಲೆನೆಂಬ ಹಮಹಮಿಕೆ ಬಂದಿತು. ಸಾಹೇಬರ ಬೆನ್ನಹಿಂದೆ ಸಂಚು ನಡೆದ – ನಡೆದಿರುವ ವಿಷಯ ತಿಳಿಸಿ ಅವರನ್ನು ಸಕಾಲದಲ್ಲಿ ಎಚ್ಚರಿಸುವ ಅಗತ್ಯವಿತ್ತು. ನೂರು ರೂಪಾಯಿ, ಎರಡು ಥಾಂಡು, ಅಖಂಡ-ಪ್ರೀತಿ-ವಾತ್ಸಲ್ಯದ ಋಣವನ್ನು ನಾನು ಇಷ್ಟರಿಂದ ತೀರಿಸಲು ಶಕ್ಯನಲ್ಲ. ಅವರ ಋಣಪರಿಹಾರ ನನಗಿರಲಿಲ್ಲ. ಆದರೆ ಇಷ್ಟೇ ಬಾತಮಿ ಅವರಿಗೆ ಸೂಚ್ಯವಾಗಿ ತಿಳಿಸಿ ಅವರನ್ನು ಜಾಗರಿಸುವದು ನನ್ನ ಕರ್ತವ್ಯವಿತ್ತು. ಬಲಿಪೀಠದ ಮೇಲೆ ಶ್ಯಾಮರಾಯನ ಮುಂಡ ಬಾಗಿತ್ತು. ದಾದಲ್ಯಾ ಬೇಕಾದಾಗ, ಈ ಕಾಗದದ ಚಂದ್ರಾಯುಧವನ್ನು ಶ್ಯಾಮರಾಯನ ಆ ಬಾಗಿದ ಮುಂಡದ ಮೇಲೆ, ಅನುವು ನೋಡಿ ಇಳಿಸಲು, ಸರ್ವಸಮರ್ಥನಾದ. ಗಡಿಬಿಡಿಯ ಗರಜಿರಲಿಲ್ಲ.

ದಾದಲ್ಯಾ ಪಾಕೀಟನ್ನು ಜೋಕೆಯಾಗಿ ಕಿಸೆಯಲ್ಲಿ ಹಾಕಿಕೊಂಡ. ಶ್ಯಾಮರಾಯನ ಮೃತಕಾಯ ಮುಟಿಗೆಯಾಗಿ ದಾದಲ್ಯಾನ ಕಿಸೆಯಲ್ಲಿ ಬಿದ್ದಿತು. ದಾದಲ್ಯಾ ಇನ್ನು ಈ ಪ್ರೇತಭಾರವನ್ನು ಹೊತ್ತು ಅಲೆಯಬೇಕಾಗಿತ್ತು. ಅದಕ್ಕೆ ಅಗ್ನಿಸಂಸ್ಕಾರ

ಕ್ಷಣ ಸನ್ನಿಹಿತವಾಗುವ ವರೆಗೆ ಕಾಯಬೇಕಾಗಿತ್ತು.

ಲೆಟರ್‌ಪ್ಯಾಡ್ಡಿನಿಂದ ಕೋರಾ ಕರಕರೀತ ಕಾಗದ ಹರಿದು ಸಿಗರೇಟಿನ ಬೂದಿ, ತುಣುಕು ಒಟ್ಟುಗೂಡಿಸಿ, ಚೀಟಿ ಕಟ್ಟಿ ದೂರ ಬೀಸಿ ಒಗೆದೆ. ಕಿಸೆಯಲ್ಲಿ ಮಡಗಿದ ಶ್ಯಾಮರಾಯನ ಮೃತ-ದೇಹಕ್ಕೆ, ಅದು ಆಜನ್ಮ ನಡೆಸಿದ ಪಾಪಕೃತ್ಯಗಳ ಪುರೋಹಿಯನ್ನು ವಾಚಿಸಿ, ಕಿರಿಸ್ತಾನಸಾಬರು, 'ಕನ್‌ಫೆಶನ್' ಹೇಳುವ ಧರ್ತಿಯಲ್ಲಿ, ಸಿಳ್ಳು ಹಾಕುತ್ತ, ಹಾಲಿನಲ್ಲಿ ಶತಪಥ ಮಾಡತೊಡಗಿದೆ.

ಹೊರಗೆ ಟಾಂಗಾ ನಿಂತ ಸದ್ದಾಯಿತು. ಬಸವಂತಿ-ವಿಶ್ವಾಸ ನಗುನಗುತ್ತ ಗೇಟು ದಾಟಿ ಬರುವದು ಕಂಡಿತು.

ರಾವಜೀಕಾಕಾ ಸೋನಕ್ಕನ ಮೇಲೆ ಇನ್ನೊಬ್ಬ ಸೊಸೆಯನ್ನು ಮನೆತುಂಬಿಸಿಕೊಂಡರು. ಮಗನ ಸೌಭಾಗ್ಯ– ಅವನಲ್ಲಿ ಆಸ್ಥೆ ಅವರಿಗಿರಲಿಲ್ಲ. ಆದರೆ ಅವನ ಮಬ್ಬಿಗೆ ಬಿದ್ದು ವಂಚಿತೆಯಾದ, ಅವನಿಗೆ ದೇಹ ವಿಕ್ರಯಿಸಿ ಆಜನ್ಮ ಬಂಧಿತಳಾದ, ದೇವರ ಸಾಕ್ಷಿಯಾಗಿ ಮನದ ಮಡಿಯನ್ನು ಪಂತ-ಕುಟುಂಬದ ಕ್ಷೇಮಕ್ಕೆ ಮೀಸಲು ಮಾಡಿದ ಬಸವಂತಿಯನ್ನು ರಾವಜೀಕಾಕಾ, ಪ್ರೀತಿ-ವಾತ್ಸಲ್ಯದಿಂದ, ಅಭಯ ವಚನದಿಂದ ಸಂತೈಸಿ ಬರಮಾಡಿಕೊಂಡರು. ಬಸವಂತಿ ಇಲ್ಲಿ ಬಂದು ನಾಕು ತಾಸು ನಿಂತು, ಕಾಕಾ, ಸೋನಕ್ಕ, ಗಿರಿಜಾ, ರಮಾಕಕ್ಕಿಗೆ ತಾನು ಈ ಮನೆಗೆ ಸೊಸೆಯಾಗಿ ಬಂದ– ಬಳಗದಲ್ಲಿ ಬಂದು ಬಿದ್ದ, ಸಾಕ್ಷಿ ಸಾರಿ, ಅವರ ಆಶೀರ್ವಚನವನ್ನು ಶಿರೋಧಾರಣ ಮಾಡಿ, ತನ್ನ ಆ ಮನೆಗೆ ಹೊರಟಿದ್ದಳು. ರಾವಜೀಕಾಕಾ ಅವರ ಪಾದಕ್ಕೆ ತಲೆಯಿಟ್ಟು, ಅಂತಃಕರಣದ ಅರ್ಘ್ಯ-ಪಾದ್ಯ ಕೊಟ್ಟು ಅವರ ಅಡಿಯ ಹುಡಿಯನ್ನು ಕಣ್ಣಿಗೊತ್ತಿಕೊಂಡು, ಅವನತಮುಖಿಯಾಗಿ ಅವರೆದುರು ನಿಂತಾಗ, ಕಾಕಾ, ಉಪರಣೆಯ ಚುಂಗಿನಿಂದ ಕಣ್ಣೊರಸಿಕೊಂಡರು. ಕಾಕಾ ಹೇಳಿದರು:

"ಬಸವಂತೀ, ಸೋನಾಗ ಅವನ ಸುಖಾ ಸಿಗಲಿಲ್ಲಾ. ನಿನಗೂ ಸಿಗಲಿಲ್ಲಾ. ಯಾರಿಗೂ ಸುಖಾ ಕೊಡೂದಿಲ್ಲಂತ ಅಂವಾ ಆಣೀ ಮಾಡೇ ಹುಟ್ಟಿ ಬಂದಾನ. ನೀ ವ್ಯರ್ಥ ಶಿಕ್ಷಾ ಅನಭೋಗಿಸಿಗೋತ ಅಲ್ಲ್ಯಾರs ಯಾಕ ಇರತೀ? ಇಲ್ಲೇ ಬಂದು ಇದ್ದ ಬಿಡು."

"ಕಾಕಾ, ಈ ಮನೀ, ನೀವು, ಸೋನಕ್ಕಾ, ಇನ್ನೇನ ನನಗ ಹೊರಗಿನವರ ಅಲ್ಲಾ. ಯಾವಾಗ ಬಂದರೂ ಯಾಕ ಅಂತ ಕೇಳೂದಿಲ್ಲಾ. ಆ ಧೈರ್ಯಾ ಐತಿ. ಬದಕೂದು ಆ ಧೈರ್ಯಾದ ಮ್ಯಾಲs ಬದಕತೀನಿ. ಅವರ ಮನಸ ಘಾಳೀ ಹಾಂಗ.

ಹ್ಯಾಂಗ ಬೀಸೀತು ಅನೂದರ ನೇಮ ಹತ್ತಾಂಗಿಲ್ಲಾ. ಇಲ್ಲಿ ಕರಕೊಂಡ ಬರಾಗ ಯಾ ಕಾರಣಾನೂ ಹೇಳಲಿಲ್ಲಾ. ನಾಳೆ ಮನಸ ತಿರಗಿದರ ಮತ್ತ ಊರಾಗನ್ಸ ಒಯ್ದು ಒಗದಾರು. ಈ ಮನೀ ನಿಂದೇ ಬಸವಂತೀ ಅಂದರಿ. ಕಾಕಾ, ವಾಡೇದಾಗೂ ನನಗ ತಾಂವ ಐತಿ. ನೀವ್ ಬಂದು ವಾಡೇದಾಗ ನಿಂದರೂ ತನಕಾ ಅದರ ನಿಗಾ ಇಡೂ ಜರೂರಿ ಐತಿ. ನಿಮ್ಮ ಬಸವಂತಿ ಅದನ್ನ ಮಾಡತಾಳ ಕಾಕಾ. ಇವರು ತಮ್ಮ ಸುತ್ತ-ಮುತ್ತ ತಾಂವ್ಸ ಬೇಲೀ ಒಟಗೊಂಡಾರ. ಅದಕ ಕಿಚ್ಚನೂ ತಾಂವ್ಸ ಕೊಡತಾರ. ಕಾಕಾ, ಬಸವಂತಿಗಿ ಧಾವತೀ ಮಾಡಬೇಕಾಗತೈತಿ. ನಿಮ್ಮ ಮನೀ ದೀಪಕ್ಕ ಸೆರಗಿನಾಸರಾ ಮಾಡಬೇಕಾಗತೈತಿ. ಅವರು ಸೆರಗ್ಸ ಕತ್ತರಿಸಿ ಪರಲ ಹರಕೊಂಡರ, ನಾ ಬರತೀನಿ ಕಾಕಾ. ನಿಮ್ಮ ಪಾದಕ್ಕ ಬೀಳತೀನಿ. ಮಗಳ್ನ ಉಡ್ಯಾಗ ಹಾಕೋರ್‍ಯಂತ ಬೇಡಕೊಂತೀನಿ."

ಬಸವಂತಿ ಕಾಕಾ ಅವರ ಅಂತಃಕರಣ ಕಲಕಿದಳು. ಅಂತಃಕರಣ ಕಲಕಿದಾಗ ಕಾಕಾ, ವಾಚಾ-ಸಾಮರ್ಥ್ಯ ಕಳೆದುಕೊಳ್ಳುತ್ತಾರೆ. ಅವರ ಅಂತಃಕರಣ-ವಾತ್ಸಲ್ಯ, ಕೈಯಲ್ಲಿ, ಕಣ್ಣಲ್ಲಿ ಮಡವುಗಟ್ಟುತ್ತದೆ. ಕಾಕಾ ಮಾತಾಡದೆ, ಕಣ್ಣು ಮುಚ್ಚಿ, ಬಸವಂತಿಯ ತಲೆ ಬೆನ್ನು ಸವರತೊಡಗಿದರು. ವಾತ್ಸಲ್ಯದಿಂದ ಅವಳ ತಲೆಯನ್ನು ಎದೆಗಾನಿಸಿಕೊಂಡರು. ಮುಚ್ಚಿದ ಕಣ್ಣ ಬೊಗಸೆ ತುಳುಕಿ, ಕಾಕಾನ ಕಂಬನಿ – ತಟ ತಟನೆ ಬಸವಂತಿಯ ಮುಖದ ಮೇಲೆ, ಮುಂಗೈಯ ಮೇಲೆ ಉದುರಿದವು.

ಅಕ್ಷನಿಮೀಲನ ಮಾಡದೆ ಕಾಕಾನ ಬಳಗ – ಸೋನಕ್ಕ, ಗಿರಿಜಾ, ರಮಾಕಕ್ಕಿ, ವಿಶ್ವಾಸ, ನಾನು, ಅಡುಗೆಯ ಪಾಂಡೂ ಅಂತಃಕರಣ ಸಂಗಮದ ಅಖಂಡ ವೈಭವ ದರ್ಶನರತರಾಗಿದ್ದೆವು.

ವಿಶ್ವಾಸ-ನಾನು, ಬಸವಂತಿಯನ್ನು ಕಳಿಸಲಿಕ್ಕೆ ಹೊರಟೆವು. ಕಾಕಾ, ಗಿರಿಜಾ, ರಮಾಕಕ್ಕಿ, ಸೋನಕ್ಕ ಗೇಟಿನಲ್ಲಿ ನಿಂತು ನಿರೋಪ ಕೊಟ್ಟರು.

"ಬಸವಂತೀ..."

ಸೋನಕ್ಕ ಅಷ್ಟೇ ನುಡಿದರು.

"ಸೋನಕ್ಕಾ, ಹೋಗಿಬರತೀನಿ"

ಬಸವಂತಿ, ಕಂಠ ತುಂಬಿ ಬಂದು ಅಕ್ಕನಿಗೆ ಉತ್ತರಿಸಿದಳು.

ಸೋನಕ್ಕನ ಹೃದಯದ್ವಾರ, ತೋಳು ತೆರೆದಿತ್ತು. ಬಸವಂತಿಗೆ ಅಲ್ಲಿಯ ಆಸರೆಯ ಭರವಸೆಯಾಗಿತ್ತು.

ಕಾಕಾ-ಸೋನಕ್ಕ ಅವರನ್ನು ಏಕಾಂತದಲ್ಲಿ ಕಂಡು, ನಾನು-ವಿಶ್ವಾಸ ಅವರಿಗೆ ಬಸವಂತಿಯ ಬಗ್ಗೆ ಸಾದ್ಯಂತ ವಿವರ ತಿಳಿಸಿದ್ದೆವು. ಬಸವಂತಿ ನೆತ್ತರು ಬಸಿದ ಕಥೆಯನ್ನು ಹೇಳಿದ್ದೆವು.

ಕಾಕಾ ಅಖಂಡವಾಗಿ ಭಗವಂತನ ಲೀಲೆಯ ಪವಾಡವನ್ನು ಹಾಡಿದರು. ಕರಗಿದ ಕಾಕಾ, ಬಸವಂತಿಯನ್ನು ಕರೆದು ತರಲು ಸೂಚಿಸಿದ್ದರು.

"ಬಸವಂತಿಗೆ ಹೇಳ ದಾದಲ್ಯಾ, ಕಾಕಾ ಕರದಾರಂತ."

ವಾತ್ಸಲ್ಯಪುಲಕಿತರಾಗಿ ಕಾಕಾ ಹೇಳಿದ್ದರು. ಅವರ ಅಧಿಕಾರದ ಈ ಹೇಳಿಕೆಯಲ್ಲಿ ಅಂತಃಕರಣವಿತ್ತು.

"ವಿಶ್ಯಾ, ಒಂದs ಜೀವ ನವೀತಿತ್ತು. ಅಷ್ಟಕs ದೇವರಿಗೆ ತೃಪ್ತಿ ಆಗಲಿಲ್ಲ ಕಾಣಸ್ತದ. ಬಸವಂತಿನ್ನೂ ಬಲೀ ಕೇಳಿದಾ. ಈ ಮನೀ ಋಣಾ ಇರಬೇಕ ಆಕೀಗೆ. ತೀರಸಲಿಕ್ಕೆ ಬಂದಳು. ಬಸವಂತಿ ತನ್ನ ಮನೀಗೆ ಬರೂದಕ್ಕ, ಬರ್ಲೇನು ಅಂತ ಕೇಳೂ ಅಗತ್ಯ ಇಲ್ಲ ಅನ್ನು. ಪಂತರ ಮನೀ ಯಾರನೂ ಬರಗೈಲೆ ಕಳಸಿಲ್ಲಾ."

ಸೋನಕ್ಕ ಹೇಳಿದ್ದರು.

ಬಸವಂತಿ ಕಾಕಾ ಅವರ ಮನೆಗೆ ಬಂದು ಎಲ್ಲರ ದರ್ಶನ ಪಡೆದು, ಮಾತು-ಕತೆ ಮುಗಿಸಿದ ನಂತರ, ನಡುಮನೆಯಲ್ಲಿಯ ಸೋನಕ್ಕನ ಕೋಣೆಯಲ್ಲಿ. ಅವಳು ಹಾಗೂ ಸೋನಕ್ಕ ಬಹಳ ಹೊತ್ತು ಗುಜುಗುಜು ನಡಿಸಿದ್ದನ್ನು ನಾವೂ ದೂರದಿಂದಲೇ ನೋಡಿದ್ದೆವು. ಅವರಿಬ್ಬರಲ್ಲಿ ಏನು ತೋಡಿಕೊಳ್ಳುವದು ನಡೆದಿತ್ತೋ ಏನೋ? ನಾವು ಯಾರೂ ಕೋಣೆಯ ಬಳಿ ಸುಳಿದಿರಲಿಲ್ಲ.

ಗಿರಿಜಾ, ರಮಾಕಕ್ಕಿ, ನದೀಮೂಲ-ಋಷಿಮೂಲ ಶೋಧಿಸಿದ್ದರು. ಬಸವಂತಿಯಲ್ಲಿಯ ದೈವಿಕತೆಗೆ ಕಾರಣ ಹೇಳಿ ಸಮಾಧಾನ ಪಡ್ಕೊಂಡಿದ್ದರು:

"ಬಸವಂತೀ ಅಜ್ಜೀ ಅಂದರ, ಆಕೀ ಅವ್ವನವ್ವಾ, ಶಿವಶರಣೆ. ಬಲೇ ಖಡಕ ಹೆಣ್ಣುಮಗಳು. ಶಿವರಾತ್ರೀ ಇನಾ ತಿಂಗಳ ಅದ ಅನೂದಕ, ಆಕೀ ಉಪಾಸ ಸುರೂ ಮಾಡಾಕೀ. ಒಂದ ಮಿಳ್ಳಿ ಹಾಲಿನ ಪ್ಯಾಲ್ಯs ಇರಾಕಿ. ಬಸವಣ್ಣನ ಗುಡೀಗೆ ದಿನಾ ಸಾವಿರ ಪ್ರದಕ್ಷಿಣೀವ್ರತಾ ಆಕೀದು. ಉಂಡ ಊಟಾ, ಕುಡದ ನೀರಾ ಸಾಯೂ ತನಕಾನೂ ಪಾಲಿಸಿಗೋತ ಬಂದಳು. ಮೈಲಿಗಿ ಆತಂತ ದಿನಾ ಮೂರ ಸಾರೇನರs ಮೈ ತೊಳಕೊಂಬಾಕಿ. ಮಡೀ-ಮೈಲಿಗೀ ದಶಿಂದ ಬಲೇ ಹಟಮಾರಿ ಹೆಂಗಸಾ. ತನ್ನ ತಲೀಗೇ ಮುಗೀಬಾರದಂತ, ಬಸವಂತೀಗೂ ಅದನ್ನ ಕೊಟ್ಟ ಹೋದ್ಲು."

ಬಸವಂತಿಯಲ್ಲಿಯ ದೈವಿಕ ಗುಣ ಅವಳ ಅಜ್ಜಿಯ ವರಪ್ರಸಾದವೆಂದು ರಮಾಕಕ್ಕಿ ಸಾಧಿಸಿದಳು:

"ನಮ್ಮ ತಪಕೀರ ಗುರುಭಟ್ಟನ ಕಾಕಾ, ಶೀನಂಭಟ್ಟ ಇದ್ನಲಾ. ಅಂವಾ ಬಸವಂತೀ ಮನೀ ಬಾಜೂಕನ ಇರತಿದ್ದಾ. ಅವಂದೂ, ಬಸವಂತೀ ಅಪ್ಪಂದು ಜೀವದ ಗೆಳೆತಾನಾ. ಬಸವಂತೀ ವರ್ಷದ ಕೂಸ ಇದ್ದಾಗಿನಿಂದೂ, ಶೀನಂಭಟ್ಟನ ಮನ್ಯಾಗನs ಬೆಳದಳು. ಶೀನಂಭಟ್ಟನ ಹೇಣತೀ ಪದ್ದಕ್ಕಾ, ಬಸವಂತಿಗೆ ಹೆರಳ ಹಾಕಿ, ಮೈ ತೊಳಸಿದ ಮ್ಯಾಲs ತಾ ಮೈ ತೊಳಕೊಂಡು ಅಡಿಗ್ಗಿ ಕೂಡಬೇಕು. ಹತ್ತ-ಹನ್ನೆರಡ ವರ್ಷದಕೀ ಆಗೂ ತನಕಾ ಬಸವಂತೀ ಪದ್ದಕ್ಕನ ಮಗ್ಗಲದಾಗs ಮಲಗಬೇಕು. ನನಗೆಲ್ಲಾ ಮುಂಚಿನಿಂದೂ ಠಾಂವಿಕ್ಕದ. ಹಾಂಗ ನೋಡಿದರ, ಬಸವಂತಿ ಹುಟ್ಟಿದ್ದೂ ಗಣಪತಿ ಗುಡ್ಯಾಗನs. ನಿನಗೇನ ಠಾಂವಿಕಿಲ್ಲೇನ ರಮಾಕಕ್ಕೀ. ಖರೇ ಅಂದರ ಅಕೀ ಹುಟ್ಟಿದಾಗ, ಕಾಕೂನs ಎದರ ನಿಂತು ಬಾಣಂತ್ಯನಾ ಮಾಡಿದ್ದರು. ಅವರಗs ದೃಷ್ಟಿ ಬಿದ್ದsದ ಬಸವಂತೀ ಮ್ಯಾಲ."

ಗಿರಿಜಾ ತನ್ನ ಇತಿಹಾಸಜ್ಞಾನವೂ ಅಸನರಿ ಅಲ್ಲವೆಂದು ತೋರಿಸಿದಳು.

ಬಸವಂತಿ-ಶ್ಯಾಮರಾಯನ ಸಂಬಂಧ ತಿಳಿದು, ಸೋನಕ್ಕ ಗತಾವಸಾನರಾಗಬಹುದು, ಕಾಕಾ ಚಿಂತೆಯ ಕುಲುಮೆಯಾಗಬಹುದೆಂಬ ಭೀತಿ ನಮ್ಮನ್ನು ಬಾಧಿಸುತ್ತಿತ್ತು. ಬಸವಂತಿಯೇ ಆ ಕಂಟಕಮಯ ದಾರಿಯನ್ನು ಸುಗಮವಾಗಿಸಿದ್ದಳು. ಎಲ್ಲವನ್ನೂ ಸಂಕಟವಿಮುಕ್ತ ಮಾಡಿದಳು.

ಕಾಕಾ-ಸೋನಕ್ಕ ಅವರ ಕೂಡ ಇದ್ದ ನಾಕು ತಾಸಿನಲ್ಲಿ ಬಸವಂತಿ. ಅವರ ಹೃದಯವನ್ನು ಸೂರೆಗೊಂಡಿದ್ದಳು. ತನ್ನ ಎದೆಯನ್ನು ಬರಿದುಮಾಡಿದ್ದಳು. ಈ ಮನೆಯ, ಈ ಇವರ ಮಂಗಳದಲ್ಲಿಯ ತನ್ನ ಆಸ್ಥೆಯನ್ನು ತೋರಿಸಿದಂತೆ, ಶ್ಯಾಮರಾಯನ ಕೂದಲಿಗೆ ಧಕ್ಕೆ ತಗಲದಂತೆ ಕಾಯುವ ತನ್ನ ಮನೀಷೆಯನ್ನು ಪ್ರಕಟಿಸಿದ್ದಳು. ಈ ಮನೆ, ಬದುಕಿ ಬಾಳುವ ಘನತೆಯಲ್ಲಿ ಅವಳು ಕ್ಷುದ್ರಜೀವಿ ಶ್ಯಾಮರಾಯನನ್ನು ಲಘುವಾಗಿ ಕಾಣಲಿಲ್ಲ. ನುಂಗಳುಗುಳಲಿಕ್ಕೆ ಬರದ ಆ ನಂಜನ್ನು, ವಾಡೆಯ ಕ್ಷೇಮಕ್ಕಾಗಿ, ಪಂತಕುಟುಂಬದ ಕಲ್ಯಾಣಕ್ಕಾಗಿ ಕಂಠಸ್ಥ ಮಾಡಿಕೊಂಡಿದ್ದಳು. ತಾನು ಉಸಿರುಗಟ್ಟದೆ, ಅದರದೇ ಜೀವ ಕಸಿವಿಸಿಯಾಗುವಂತೆ ಮಾಡಿದ್ದಳು. ಶ್ಯಾಮರಾಯನ ಕಣ್ಣು ತೆರೆದರೆ – ಅವನು ಪಶ್ಚಾತ್ತಾಪದಗ್ಧನಾಗಿ ಪುನೀತನಾದರೆ, ಅದನ್ನು ಉಗುಳಿಬಿಡಬಹುದೆಂದು ಭಾವಿಸಿದ್ದಳು. ಶ್ಯಾಮರಾಯನಿಂದ ಅವಳು

ಯಾವ ಸುಖವನ್ನೂ ಅಪೇಕ್ಷಿಸುವ ದಾರಿಗೆ ರಟಗಳ್ಳಿ ಬಡಿದಂತಾಗಿತ್ತು. ಅದರ ಆಶೆಯ ಜುಂಗನ್ನು ಹಿಡಿದು ಬದುಕುವ ಆಮಿಷ ಅವಳಿಗುಳಿದಿರಲಿಲ್ಲ.

ಬಸವಂತಿಯ ಕಿವಿಯ ತನಕ, ತಾನು ಸೋನಕ್ಕನನ್ನು ಅಪವಾದ ಕೊಟ್ಟು ಬಿಟ್ಟ — ಬೆಳಗಾಂವಿಯ ಸಾಹೇಬರನ್ನು ವಂಚಿಸುತ್ತ ನಡೆದ ಸವಿಸ್ತೃತ ಬಾತಮೀ ಹೋದ ಪತ್ತೆ ಶ್ಯಾಮರಾಯನಿಗೆ ಆಗಿತ್ತು. ಈ ಗುಪಿತವನ್ನು ಯಾರು ಬಸವಂತಿಗೆ ತಿಳಿಸಿರಬೇಕೆಂಬ ಅವನ ಕುತೂಹಲ ಕೆರಳುತ್ತ ನಡೆದಿತ್ತು. ತನಿಖೆ ಜೋರಾಗಿತ್ತು. ಅಡಿಗೆಯ ಗುಂಡ್ಯಾ, ವಾಡೆಯಲ್ಲಿ ನಡೆದ ಲೀಲೆಯನ್ನು ತಾನು ಪಾಕರಸಪಾರಂಗತ ನಿರುವಂತೆ ಕಾವ್ಯರಸಲೀಲಾವಿಲೋಲನೂ ಆಗಿರುವೆನೆಂಬ ಆಢ್ಯತೆಯಿಂದ ಊರ ತುಂಬ ಹರಡಿದ್ದ. ಇದರ ಆಚೆಗಿನ ಸತ್ಯ ಅವನ ಅಳಿವಿನಾಚೆಗಿನದಾಗಿತ್ತು. ಅವನು ಈ ಗುಪಿತ ಸ್ಫೋಟ ಮಾಡಿರುವ ಶಕ್ಯತೆ ಇರಲಿಲ್ಲ. ಹಿರೇ ಕಮತಿಗ ವಾಡೆಯಲ್ಲಿ ನಿರಾಬಂಧವಾಗಿ ಹರಿದಾಡುವ ಸ್ವಾತಂತ್ರ್ಯ ಪಡೆದವನಿದ್ದ. ಸರ್ವ ವಿಷಯದ ಸಾದ್ಯಂತ ವಿವರ ಅವಗತವಿದ್ದವನಿದ್ದ. ಆದರೆ ವಾಡೆಯ ಇಜ್ಜತ್ತಿನ, ಕಾಕಾ ಅವರ ಪ್ರತಿಷ್ಠೆಯ ಪ್ರಶ್ನೆ·ಇದರಲ್ಲಿದ್ದ ಕಾರಣ, ತನ್ನ ಬಾಯಿಗೆ ಅಲೀಗಡದ ಕೀಲಿಯನ್ನು ಜಡಿದುಬಿಟ್ಟಿದ್ದ. ಅವನು ಅಲ್ಲಾಕೇ ಕಸಮ್ ಜಾತಿಯವ. ಕಿವಿ ಕೇಳಿದ್ದನ್ನು, ಕಣ್ಣು ಕಂಡದ್ದನ್ನು ಎದೆಯಲ್ಲಿ ಇಂಗಿಸಿಬಿಡುತ್ತಿದ್ದ. ಗೋವಿಂದಭಟ್ಟ, ಪೂಜೆಯ ನಿಮಿತ್ತ ವಾಗಿ ವಾಡೆಗೆ ಹರಕೆ ಹಾಕುವ ಇನ್ನೊಂದು ವ್ಯಕ್ತಿ. ಎಲ್ಲಾ ಸುದ್ದಿ ಅರಿತು ಬಲ್ಲವ. ಕಾಕಾನ ಕೈವಾರಿ. ಶ್ಯಾಮರಾಯನ ಕಟು ವೈರಿ. ಆದರೂ ಶ್ಯಾಮರಾಯನಿಗೆ ಅವನ ಮೇಲೆ ಸಂಶಯ ಬರಲಿಲ್ಲ. ಕಾರಣ, ಬಸವಂತಿಯನ್ನು ನೋಡಿದ ಕೂಡಲೇ, ಗೋವಿಂದಭಟ್ಟ ಬಾವುಗದಂತೆ ಮುಖ ಉಬ್ಬಿಸುತ್ತಿದ್ದ. ಬಾಲವಿರಲಿಲ್ಲ ಪುಣ್ಯಕ್ಕೆ – ಇಲ್ಲದಿದ್ದರೆ ಅದನ್ನು ಇಂಗ್ಲೀಷ್ S ಆಕಾರದಲ್ಲಿ ಎತ್ತಿ, ಕೂದಲು ನಿಮಿರಿಸಿ, ಗುರ್‌ಗುರಾಯತೆ ಮಾಡುತ್ತಿದ್ದ. ಈಗ ವಿನಾಬಾಲ ಗುರ್‌ಗುರಾಯತೆ ನಡೆಸು ತ್ತಿದ್ದ. ಆದರೆ ಬಸವಂತಿಯನ್ನು ಕಂಡರೆ ಅವನಿಗೆ ಅಷ್ಟು ಬೆಂಕಿ ಹಾಯುವದಿಲ್ಲವೆಂಬ ಖಾತ್ರೀ ಶ್ಯಾಮರಾಯನಿಗಿತ್ತು. ಅಲ್ಲದೆ ಬಸವಂತಿ ವಾಡೆಯ ಪ್ರವೇಶ ಮಾಡಿದ ನಂತರ, ಗೋವಿಂದಭಟ್ಟ ಪೂಜೆಗೆ ಬರುವದು ತೀರಾ ಕ್ವಚಿತ್ತಾಗಿತ್ತು. ನಿಂತೇ ಹೋಗಿತ್ತೆಂದರೂ ಅಡ್ಡಿಯಿಲ್ಲ. ಶ್ಯಾಮರಾಯನಿಗೆ ಇದು ಗೊತ್ತಿತ್ತು. ಅದರಿಂದಾಗಿ ಅವನ ಈ ಗುಪಿತ-ಸ್ಫೋಟದ ಬಾಬತ್ತಿನಲ್ಲಿ ಗೋವಿಂದಭಟ್ಟ ಸಂಶಯಾತೀತ ನಾಗಿದ್ದ.

ತನ್ನ ಅಪರೋಕ್ಷದಲ್ಲಿ ಯಾರು ಈ ಕೆಲಸ ಮಾಡಿ ಬಸವಂತಿಯ ಮನಸ್ಸನ್ನು ಕವಡಿಸಿರಬೇಕು? ಅವನ ಕಣ್ಣಿಗೆ ಯಾರೂ ಕಾಣದಾದರು. ತಮ್ಮಾಜಿ, ತಪಕೀರ ಗುರುಭಟ್ಟ ಥರ್ಡ್‌ರೇಟ್ 'ಥ' ಗಿರಾಕಿಗಳು. ಅಗದೀ ಖೋಕಾ ಜಾತಿ. ವಿಚಾರ ಸವರಿಸಲ್ಲಿ ಕೂಡ ತೆಗೆದುಕೊಳ್ಳಬರದಂತಹವು. ಉಳಿದರಾರು? ಗೌಡರು... ಆ ವಜನದಾರ ವ್ಯಕ್ತಿ. ಕಾಕಾ ವಾಡೇ ಬಿಟ್ಟಂದಿನಿಂದ ಇಲ್ಲಿ ಕಾಲಿರಿಸಿರಲಿಲ್ಲ. ವಾಲೀ ಕಾರರನ್ನು ಕಳಿಸಿ, ಶ್ಯಾಮರಾಯನನ್ನು ತಮ್ಮ ಮನೆಗೇ ಕರೆಯಿಸಿಕೊಳ್ಳುವ ವಜನ, ಇಭ್ರತಿ ಇದ್ದ ಹಿರಿಯರು. ಬಸವಂತಿಯನ್ನು ಹೆಡೆಮುರಿಗೆ ಬಿಗಿಸಿ ಹಿಡಿ ತರಿಸಿ ಕೇಳುವಷ್ಟು ಗೌಡಕೀ ಫೌಜದಾರೀ ಅಧಿಕಾರವಿದ್ದವರು. ಅವರೂ ಇದನ್ನ ಮಾಡಿರುವದು ಅಶಕ್ಯ. ಇನ್ನುಳಿದವ......

ರಾಚಪ್ಪ!

ತನ್ನ-ಬಸವಂತಿಯ ಸಂಬಂಧವನ್ನು ಕುರಿತು, ರಾಚಪ್ಪನೇ ಊರಲ್ಲಿ ಹರಲಿ ಮಾಡಿದವನೆಂಬ ಬೊಬ್ಬಾಟವನ್ನು ಶ್ಯಾಮರಾಯ ತಾನೇ ಮಾಡಿಸಿದ್ದ. ರಾಚಪ್ಪ ತಮ್ಮ ಸಂಬಂಧವನ್ನು ಕಣ್ಣಿನಿಂದ ನೋಡಿರಬಹುದು. ಕಿವಿಯಿಂದ ಕೇಳಿರಬಹುದು. ಆದರೆ ಅದಕ್ಕೆ ವಾಚ್ಯತೆ ಕೊಡುವ ಜಾತಿಯಲ್ಲ. ತಾನು ಪಂತರ ತಳಿ, ಕಾಕಾ ಅವರ ಚಿರಂಜೀವ, ತನ್ನ ನಾಲಸ್ತಿಯಾದರೆ, ಪಂತಕುಟುಂಬದ-ಕಾಕಾ ಅವರ ನಾಲಸ್ತಿ ಯಾದಂತೆ. ಆ ಕೆಲಸ ತನ್ನಿಂದ ಸರ್ವಥಾ ಘಟಿಸದಿರಲಿ ಎಂದು ರಾಚಪ್ಪ ಆ ಬಗ್ಗೆ ಚಕಾರ ಶಬ್ದವೆತ್ತುವವನಲ್ಲ. ಬಸವಂತಿ, ರಾಚಪ್ಪನಿಗೆ ದೂರದ ಸಂಬಂಧಿ. ತನ್ನ ಬಳಗದಲ್ಲಿಯ ಹೆಣ್ಣನ್ನು ಶ್ಯಾಮರಾಯ ಇಟ್ಟುಕೊಂಡ, ಆ ಹೆಣ್ಣು ಬಳಗಕ್ಕೆ ಬಟ್ಟಾ ತಂದಿತು. ಅದು-ಆ ಹೆಣ್ಣು. ಆ ಹೆಣ್ಣನ್ನು ಕೆಡಿಸಿದ ಶ್ಯಾಮರಾಯ ಇಬ್ಬರೂ ನಿರ್ನಾಮವಾಗಬೇಕು-ಬಳಗಕ್ಕೆ ಅಂಟಿದ ಕಲಂಕ ಅಳಿಸಬೇಕು ಎಂದೇ ನಾದರೂ ಡಾವು ಹಾಕಿದ್ದರೆ......

ರಾಚಪ್ಪನಿಗೆ ಇಂಥ ವಿಷಯದಲ್ಲಿ ಡಾವಿನ ಅಗತ್ಯ ಭಾಸವಾಗುವದಿಲ್ಲ. ಕತ್ತಿ ಹಿರಿದು ನೇರವಾಗಿ, ಎದುರು ಬಂದವರನ್ನು ಹೆಚ್ಚುವ, ಹೊಯ್ಯುವ ಧಾರ್ಷ್ಟ್ಯವಿದೆ. ಅದರಲ್ಲಿ ಅನುಮಾನವಿಲ್ಲ. ಈ ಹಿಂದೆ, ತಾನೇ ರಾಚಪ್ಪನನ್ನು ನಾಕಾಣೆಯ ಪಾತೀದಾರನನ್ನಾಗಿ ಮಾಡಿಕೊಂಡು ಕಂತ್ರಾಟದ ವ್ಯವಹಾರದಲ್ಲಿ ತೊಡಕಿಸಬೇಕೆಂದು ಯೋಚನೆ ಹಾಕಿದಾಗ, ತಾನೇ ಅವನ ಮನೆತನಕ ನಾಕೆಂಟು ಸಾರೆ ಎಡತಾಕಬೇಕಾಯಿತು. ಜಪ್ಪ ಎಂದರೂ ಅವನು ಒಪ್ಪಲಿಲ್ಲ. ಶ್ಯಾಮ

ರಾಯನ ಉಸಾಬರಿಗೇ ಬರಲಿಲ್ಲ. ವಾಡೆಯ ಹೆಸರಿಗೆ, ಪಂತಕುಟುಂಬಕ್ಕೆ ಅಪಕೀರ್ತಿ ಬರುವ ಯಾವ, ಎಂಥ ಸಣ್ಣ ಕಡ್ಡಿಯನ್ನೂ ರಾಜಪ್ಪ, ಗುಡ್ಡದಷ್ಟು ದೊಡ್ಡದನ್ನಾಗಿ ಮಾಡುವ ಜಾತಿಗೆ ತೀರ ಹೊರಗೆ ಎಂಬ ಖಾತ್ರೀ ಶ್ಯಾಮರಾಯನಿಗಿತ್ತು. ಶ್ಯಾಮ ರಾಯ ತನ್ನನ್ನು ತಾನೇ ನಂಬಲಿಕ್ಕಿಲ್ಲ. ಆದರೆ ರಾಜಪ್ಪನ ಧವಲ ಚಾರಿತ್ರ್ಯದ ಬಗ್ಗೆ ಅವನು ಅಪನಂಬಿಕೆ ತೋರಿಸುವ ಸಾಹಸ ಮಾಡದವನಾಗಿದ್ದ.

ಈ ವಿಷಯದಲ್ಲಿ ರಾಜಪ್ಪನೂ ಸಂಶಯಾತೀತ......

ಹಾಗಿದ್ದರೆ ಯಾರು ಈ ಸುದ್ದಿಗೆ ಸುರಂಗ ಹಾಕಿದರು?

ಶ್ಯಾಮರಾಯ ಅವಾಚ್ಯ-ಸುವಾಚ್ಯ ಶಬ್ದದಲ್ಲಿ, ತನ್ನ ಶಂಕಾ ನಿವಾರಣೆ ಮಾಡಲು ಬಸವಂತಿಗೆ ವಿನವಿಸಿ ನೋಡಿದ್ದ. ಝುಬರಿಸಿ ಕೇಳಿದ್ದ. ಧಮಕೀ ತೋರಿಸಿದ್ದ. ಬಸವಂತಿ ಆಸನರಿಯದಂತಾದಾಗ ಕತ್ತರಿ ತಿವಿದು ನೆತ್ತರು ಚಿಮ್ಮಿಸಿದ್ದ.

ಶ್ಯಾಮರಾಯನಿಗೂ ದಾದಲ್ಯಾನ ಸ್ಮರಣೆಯಾಗುವದು – ಅವನೇ ಈ ಗೌಪ್ಯ-ಸ್ಫೋಟನಕ್ಕೆ ಕಾರಣಕರ್ತೃವೆನ್ನುವದು ಅನುಮಾನಾತೀತವಾಗಿತ್ತು.

ಶ್ಯಾಮರಾಯನನ್ನು ಇನ್ನೂ ಲೀಲೆಯಾಡಿಸುವ ಕಾರ್ಯಭಾರ ದಾದಲ್ಯಾನ ಮೇಲಿತ್ತು. ಅಂತೇ ಅವನ ಹೆಸರು ಬಚಾವಾಗಿರಬೇಕು. ದಾದಲ್ಯಾನ ಸಂಶಯ ಬಂದು, ಅವನ ಮೇಲಿದ್ದ ಶ್ಯಾಮರಾಯನ ಅಷ್ಟಿಷ್ಟು ವಿಶ್ವಾಸ ಥಳಮಳಿಸಿದ್ದರೆ...

ಥಳಮಳಿಸಿದ್ದರೆ ದಾದಲ್ಯಾ ಬೆದರುತ್ತಿದ್ದಿಲ್ಲ. ಶ್ಯಾಮರಾಯನ ಮೃತ್ಯುಪತ್ರ ದಾದಲ್ಯಾನ ಕೈಯಲ್ಲಿತ್ತು.

ಈ ಪತ್ರದ ವಿಷಯವನ್ನು ಕುರಿತು ಮಾತ್ರ ನಾನು ಯಾರಲ್ಲಿಯೂ ಪ್ರಸ್ತಾಪ ಮಾಡಲಿಲ್ಲ. ಬೆಳಗಾಂವಿಯ ಸಾಹೇಬರನ್ನು ಬಚಾವು ಮಾಡುವ ಕಾಲ ಹಣ್ಣಾದ ಗಳಿಗೆಯಲ್ಲಿ ಅವರೆದುರು ಶ್ಯಾಮರಾಯನನ್ನು ನಾಲಾಯಖೀ ಮಾಡುವ, ಅವನ ನಾಲಾಯಖೀ ಪ್ರದರ್ಶನ ಕಾಕಾ-ಸೋನಕ್ಕನೆದುರು, ನತಶಿರನಾಗಿ ಕ್ಷಮಾ ಯಾಚನೆಗೆ ಶೆರಗೊಡ್ಡುವಂತೆ ಮಾಡುವ ವಿಚಾರದಿಂದ, ವಿಚಾರವನ್ನು ಕೃತಿಗೆ ಇಳಿಸುವ ಹುಮ್ಮಸ್ಸಿನಿಂದ, ದಾದಲ್ಯಾ ಪುಣೆಯನ್ನು ಬಿಡುವ ತಯಾರಿ ನಡೆಸಿದ.

ನಾನು ತುರ್ತ ಬೆಳಗಾಂವಿಯಲ್ಲಿ ಇರುತ್ತೇನೆ – ಶ್ಯಾಮರಾಯನ ಹಾಲ್-ಚಾಲಿಯ ಮೇಲೆ ನಜರು ಇಡುತ್ತೇನೆ. ಅವಶ್ಯವೆನಿಸಿದರೆ ಪುಣೆ-ಮುಂಬೈ ಯಾತ್ರೆ ಮಾಡುತ್ತೇನೆಂದು ಬಸವಂತಿ-ವಿಶ್ವಾಸರಿಗೆ ತಿಳಿಸಿದ.

"ದಾದಲ್ಯಾ, ಭಾಳ ಗಮಜ ಹೇಳಬ್ಯಾಡಾ. ಇದೇನಂಥಾ ಹಗರ ಮಾತಂತ

ತಿಳೀಬ್ಯಾಡಾ. ತಮ್ಮ ಕೆಲಸ ಸಾಧಸೂ ಮಟಾ ಅವರು ನಿನ್ನ ರಂಬಸವರು. ನೀ ಹೋದ ವರ್ಸ ಸೂಟೀಗಿ ಬರಾಕ ತಡಾ ಮಾಡಿದಿ. ಆಗ ನಾಕೈದ ಪೇಪೆ ಅಂದರು: ದಾದಲ್ಯಾನ ಕಡೇ ಕೆಲಸ ಇತ್ತು. ಅಂವಾ ಇನಾ ಯಾಕೋ ಬರಲಿಲ್ಲಂತ. ದಾದ ಲ್ಯಾನ ಜೋಡೀ ಏನ ನಿಮ್ಮ ಗಟ್ಟೀ ಜಮಾಸೈತಿ ಅಂತs ನಾ ಕೇಳಿದೆ. ಹೇಳಲೇನ ದಾದಲ್ಯಾ ಏನಂದರಂತs? ಹೇಳಿದರ ಅವರ ಮ್ಯಾಲ ರಕ್ತಾನs ಕಾರತೀ. ಯಾವದೋ ನಾಯೀ ಹೆಸರ ಹೇಳಿದರು. ಬ್ಯಾರೇ ದೇಶದಾಗ ಅದಾವಂತ. ತುಡಗ, ಕಳವ ಮಾಡಿದವರನ, ಖೂನೀ-ಪೀನೀ ಮಾಡಿದವರನ ತಲಾಶ ಮಾಡಾಕ ಬಿಡತಾರಂತ ಇಂಥಾ ನಾಯಿಗೋಳ್ನs. ಆ ನಾಯಿ, ಮೂಸಿ ನೋಡೇ ತುಡಗರ್ನ ಹಿಡೀತಾವಂತ. ಹಾಂಗ ದಾದಲ್ಯಾನ ಕುಣಿಕೀ ಉಚ್ಚಿಬಿಟ್ಟರಾತು. ಬೇಕಾದ ಬಾತಮೀ ತರತಾನು ಅಂದರು. ಮಂದೀ ಕಡೆ ಅವರ ಗರಜ ಇರೂದು ಇಷ್ಟಕs. ತಮ್ಮ ಕೆಲಸ ಬಗೀಹರೀತಂದರ, ನಿನ್ನೂ ಹಚ್ಯಾ ಅಂದಾರು. ಜರಾ ಜ್ವಾಕಿಲೀ ಇರೂ ಅವರ ಜೋಡೀ."

ಬಸವಂತಿ ಹೇಳಿದಳು.

"ಬಸವಂತೀ, ಶ್ಯಾಮರಾಯಾ ಮಸ್ತ ಉಪಮಾ ಕೊಟ್ಟಾನ. ನಾಯಿಗೆ ಹೋಲಿಸಿದ್ದೂ ಅಗದೀ ಠೀಕ ಮಾಡ್ಯಾನ. ವಾಡೇದಾಗ, ರಾವಜೀಕಾಕಾ ಅವರವು ಎರಡ ನಾಯಿ ಇದ್ದೂ, ಜ್ಯೋತ್ಯಾ ಮೋತ್ಯಾ ಅಂತs. ನೀನೂ ನೋಡಿರಬೇಕಲಾ? ಆ ನಾಯಿ, ಶ್ಯಾಮರಾಯನ್ನ ನೋಡಿದ ಕೂಡಲೇ ಗಂಟಲಕ ಅಡರತಿದ್ದೂ. ಶ್ಯಾಮರಾಯಾ ನನ್ನ ರಂಬರಂಬಸ್ತs ಇರಾಗ, ಗಪ್ಪನೆ ಕೊರಳಿಗೆ ಅಡರಿದೆನಂದರ ಯಾರಪ್ಪಗೂ ಬಿಡಾಂವಲ್ಲಾ. ನಿನಗೂ ಅಟಾಪಸಲಿಕ್ಕಿಲ್ಲಾ. ಬಸವಂತಿನ್ನ ಕೊಟ್ಟರ ಬಿಡಶೀನಿ ನೋಡು ಅಂತ ಹೇಳತೀನಿ. ದಾದಲ್ಯಾನ ಗಮಜಿನ್ಯಾಗ ಪುಷಾರಕೀ ಇರ್ಬ್ಯಾಂಗಿಲ್ಲಾ. ಒಂದ ತಿಂಗಳನೂದರಾಗ ನೋಡು. ನಿನ್ನ ಕೈ ಮ್ಯಾಲಿನ ಭಕ್ಕರಿ-ಎಣಿಗಾಯೀ ತಿಲ್ಲಿಕ್ಕೆ ಶ್ಯಾಮರಾಯನ ಪರವಾನಗೀಲೇ ಬರತೀನಿಲ್ಲೋ? ನಾ ಕೂಡಂದರ ಕೂತಿರಬೇಕು, ನಿಂದರಂದರ ನಿಂತಿರಬೇಕು. ಹಾಂಗ ಮಣಿಸ್ತೀನಿ ನಿನ್ನs. ಕತ್ತುರೀನೂ ತರತೀನಿ ಬರಾಗ, ತಿಂವೀಲಿಕ್ಕೆ ನೆಟ್ಟಗಾಗತದ. ಖುಷ್ಯಾಗ ಬಂದು ಶ್ಯಾಮರಾಯ ಅಂದಿರಬೇಕು: ದಾದಲ್ಯಾ, ಶಿಸ್ತ ನಿನ್ನ ನರಡೀ ನರಮ್ ಮಾಡಿದಾ ಅಂತs."

ನಾನು – ಶ್ಯಾಮರಾಯನ ಮೃತ್ಯು-ಲೇಖ-ಧಾರಕ – ಗಮಜಿನಿಂದ ಹೇಳಿದೆ.

"ವಿಶ್ವಾಸ, ದಾದಲ್ಯಾ ಭಾಳ ಹಾರ್‍ಯಾಡತಾನ. ಏನೋ ಡಾವ ಹಾಕಿಥಾಂಗ ಕಾಣತದ. ಚೋಟ ಅದಾನ. ಬರೇ ಕಂತ್ರಾಟ ನಡಸಿರತಾನ. ನನ್ನೂ ಹೀಂಗs ಒಗದಾ ಬಗಲಿಗೆ. ಬ್ಯಾಡರಂವಾ ಆಗ್ಯಾನ."

"ಲಾವಣ್ಯಾರವನs ಖುದ್ದ ತನ್ನ ಹೆಸರು ಬದಲೀ ಮಾಡ್ಯಾನ ದಾದಲ್ಯಾಗ. ಅವರ ಕಥೀ ನಿನಗ ಹೇಳಿರಬೇಕಲಾ ದಾದಲ್ಯಾ. ಊರಾಗs ದಾದಾ ಒಬ್ಬನs ಕಂತ್ರಾಟ ನಡಸಿದ್ದಾ. ಇನ್ನ ದಾದಲ್ಯಾ ಒಬ್ಬ ಕೂಡಿದನಂದರ ಮುಗದs ಹೋತು, ಊರು ಗುಳೇನs ಕಿತ್ತತದ. ಸಾಂಗಲಿಗೆ ಹೋಗು, ಅಭ್ಯಾಸ ಮಾಡು, ಪರೀಕ್ಷಾ ಕೊಡಂತ ನಾ ಹೇಳಲಿಕ್ಕೆ ಹತ್ತೀನಿ. ಅದನ್ನ ಬಿಟ್ಟು, ದಾದಾನ ಪರವಾನಗೀಲೇ ಪುಣೇಕ್ಕ ಬಂದು, ನಿನ್ನ ಮ್ಯಾಲ ದೇಖರಖೀ ನಡಸಬೇಕಂತ ಮಾಡ್ಯಾನ. ಹೇಳಲಿಕ್ಕೆ ಬರೂ ಹಾಂಗಿಲ್ಲಾ, ಬಂದರೂ ಬಂದನs!"
ವಿಶ್ವಾಸ.

"ಬಂದರೂ ಬಂದನs ಅಲ್ಲಾ. ಬಾ, ದಾದಲ್ಯಾ, ನನಗೂ ಅಷ್ಟ ಜೋಡೀ ಆಗತದಂತ ಬಸವಂತಿ ಅಲ್ಲೀ ನಮ್ಮ ಊಟಾ-ಉಡಿಗೀ ಜವಾಬ್ದಾರೀ ತಗೋಳ್ಳೀ. ಯಾಕಂದರ ನಮ್ಮ ಬಾಬತ್ಯಾಗ ಅದು ಮಹತ್ವದ್ದು. ನೋಡಾಕ್ಯಂತ, ತಿಂಗಳನೂದ ರಾಗ, ನಾ ಇಲ್ಲೆ ಹಜ್ಜರ ಆಗದಿದ್ದರ ಹೆಸರ ತಗೀಬ್ಯಾಡಾ"
ನಾನು.

"ನೀ ಬಾ ಇಲ್ಲೆ. ನಾ ಕಾಕಾ ಅವರ ಮನೀ ಹಾದೀ ಹಿಡೀದಿದ್ದರ ನನ್ನ ಹೆಸರೂ ತಗೀಬ್ಯಾಡಾ. ನಿನ್ನ ಯದ್ವಲಗಾಟಾ ಯಾರ ತಾಳ್ಯಾರು? ಬೆಳಗ ಹರದರೂ ನಿನ್ನ ಮಾತ ಮುಗ್ಯಾಂಗಿಲ್ಲಾ. ಒಮ್ಮೆ ಏನಾತಂದಿ ವಿಶ್ವಾಸ: ಊರಾಗ ಇದ್ದಾಗ ದಾದಲ್ಯಾ ಹೀಂಗs ಮಾತಾಡಿಕೊಂತ ಕುಂತಾ. ಛೆಂದ ಮಾತಾಡತಾನ ದಾದಲ್ಯಾ. ಎದೀ ನೀರs ಬಿಡತದ. ಬಸವಂತೀ, ಅಕ್ಕಾ – ಅಂದು ನನ್ನ ತೊಡೀ ಮ್ಯಾಗ ತಲೀ ಇಟಗೊಂಡು ಮಲಗಿದಂವಾ ಮೂಡಲ ಹರದರೂ ಏಳಲಿಲ್ಲಾ. ತಾ ಮಾತಾಡಿಕೊಂತನs ಮಲಗಿಬಿಟ್ಟಾ. ನನ್ನ ಕಣ್ಣಿಗೆ ಕಣ್ಣ ಹತ್ತಲಿಲ್ಲಾ. ಮುದಿ ಗೂಸಿನ್ನ ತೊಡೀ ಮ್ಯಾಲ ಹಾಕ್ಕೊಂಡು ನಾನೂ ಹಾಗs ಕೂತನಿ. ಹೊತ್ತ ಹೊಂಡೂದಕ ಹಗsರ ಮಲಗಿಸಿ ಎದ್ದನಿ. ದಾದಲ್ಯಾನ ಮಾತಿಗಿ ನಿದ್ದಿ-ನೀರಡಕಿ ಹಾರತಾವs. ದಾದಲ್ಯಾ ಇಲ್ಲಿ ಬಂದನಂದರ ನಿದ್ದಿಗಿ ಫಾರೀಕತಬೀ ಕೊಟ್ಟಹಂಗನs."

ನನಗೆ ಸಾಯುವವಕ್ಕೂ ಕೂಡ ಪುರಸತ್ತು ಇರದಷ್ಟು ಲಿಗಾಡು ಒಟ್ಟಿತ್ತು.

ಅಭ್ಯಾಸದ ತಗಾದೆ ಇತ್ತು. ಪರೀಕ್ಷೆಯ ಬವಣೆ ಇತ್ತು. ಪಂತಮಾಮಾ ಅವರ ಮನೆಯ ಮ್ಯಾನೇಜಮೆಂಟಿನ ಜವಾಬ್ದಾರೀ ಇತ್ತು. ಇದು ಯಾವಾಗಲೂ ಇದ್ದ ಜೋಖಿಮೀ. ಇದನ್ನ ಬಿಟ್ಟು, ಅನ್ಯ ಭಾರೀ ಲಿಗಾಡುಗಳಿದ್ದವು.

ಶ್ಯಾಮರಾಯ ಊರಿಗೆ ಹೋಗಿದ್ದ. ಮುಂಬೈಯ ತನ್ನ ಮಿತ್ರ – ಅಂಡರ್ ಸೇಕ್ರುಟರಿಯವರಿಗೆ, ಸಾಹೇಬರ ಬದಲಿಯ ಬಗ್ಗೆ ಬರೆದಿದ್ದ. ಸುರೇಶನ ಲಗ್ನವನ್ನು ಅವರ ಹೆಂಡತಿಯ ತಂಗಿಯ ಕೂಡ ಜಮಾಸಿದರೆ ಹೊಂದಿಸುವ ವಿಚಾರ ಸೂಚಿಸಿದ್ದ. ಶಕೂ-ಸುರೇಶರ ಸ್ನೇಹಸೂತ್ರ ಕತ್ತರಿಸುವ ಧಮಕೀ ತೋರಿಸಿದ್ದ. ವಿಶ್ವಾಸನು ಮರುಮಾತ ಕಾಣದೆ ಅವನ ಕಾಯಿ ಮುಲ್ಲಿಯಾಗುವಂತೆ ಮಾಡುವೆನೆಂದು ಪುಷಾರಕೀ ಹೊಡೆದಿದ್ದ. ಇದೆಲ್ಲವನ್ನೂ ಕೃತಿಗಿಳಿಸಲು ಅವನು ಧಡಪಡ ಮಾಡಲಿದ್ದ. ಕಂತ್ರಾಟ ರಚಿಸಲಿದ್ದ. ಅವನ ಧಡಪಡದ ಬಾಯಿಗೆ ಬೂಚಾಗಿ ನಾನು ಕೂಡುವ ಅಗತ್ಯವಿತ್ತು. ಅವನ ಕಂತ್ರಾಟದ ಸೂಲೆಳೆಯ ಜಾಲದಲ್ಲಿ. ಕಾಜಿನ ಪುಡಿಯಾಗಿ ಸೇರಿ, ಅದನ್ನು ಒಳಗಿಂದೊಳಗೇ ಕತ್ತರಿಸಬೇಕಾಗಿತ್ತು.

ಸಾಹೇಬರ ಬಚಾವಿನ ವಿಷಯ ಇದೆಲ್ಲಕ್ಕಿಂತಲೂ ಮುಖ್ಯವಾಗಿತ್ತು. ಶ್ಯಾಮರಾಯ ಅಸಸರಿ ಜಾತಿಯಲ್ಲ. ನಮ್ಮ ಸಾಹೇಬ ಬ್ರುವರು ಅವನ ಮುಂದೆ ಮೂರು ದಿನದ ಕೂಸು. ಶ್ಯಾಮರಾಯ ಅವರನ್ನು ರಂಬಿಸಿದಂತೆ ಮಾಡಿ – ವಿಶ್ವಾಸದವನಂತೆ ತೋರಿಸಿಕೊಂಡು, ಯಾವಾಗ ಎಂಥ ಆಪತ್ತಿನಲ್ಲಿ ಸಿಗಿಸಲೂ ಹಿಂದೆ-ಮುಂದೆ ನೋಡುವವನಲ್ಲ. ಅವನ-ಸಾಹೇಬರ ಚಾಂದೀ-ಖುರಾಕು ವ್ಯವಹಾರ ರಾಜರೋಷವಾಗಿತ್ತು. ಚಾಂದೀ ಕೊಡುವ ಆಮಿಷದಿಂದ ಇವನು ಕೈ ಚಾಚಿದಾಗ ತೆಗೆದುಕೊಳ್ಳುವ ಆಶೆಯಿಂದ ಅವರು ಕೈ ಮುಂದೆ ಮಾಡಿದಾಗ, ಏನೋ ಚಮತ್ಕಾರ ಘಟಿಸಿ, ಮುಂದೆ ಮಾಡಿದ ಕೈಯಲ್ಲಿ ಕಬ್ಬಿಣ ಬಳೆ ಬಿದ್ದರೆ? ... ಮಬ್ಬು ಸಾಹೆಬರು ನಿಂತಲ್ಲಿಯೇ ಗತಪ್ರಾಣರಾಗುತ್ತಿದ್ದರು. ರಂಗಕ್ಕನಿಗೆ ಬವಳಿ ಬರುತ್ತಿತ್ತು. ಶಕೂ ಅನಾಥಳಾಗುತ್ತಿದ್ದಳು. ಶ್ಯಾಮರಾಯ ಸಾಹೇಬರ ಮೇಲಿನ ತನ್ನ ಈರ್ಷೆಯನ್ನು ತೀರಿಸಿಕೊಂಡು ವಿಜೃಂಭಿಸುತ್ತಿದ್ದ. ಯಾರ ಸೂತಕವೂ ಅವನನ್ನು ತಟ್ಟುತ್ತಿರಲಿಲ್ಲ.

ಇದನ್ನ ತಪ್ಪಿಸಲಿಕ್ಕೆ ದಾದಲ್ಯಾ, ಅವರೆದುರು ಶ್ಯಾಮರಾಯನು ತಮ್ಮ ಮಿತ್ರರಿಗೆ ಬರೆದ ಕಾಗದವನ್ನು ಹಿಡಿಯಬಹುದಾಗಿತ್ತು. ಅದರಿಂದ ಅವರ ಕಣ್ಣು ತೆರೆಯುತ್ತಿತ್ತು. ಶ್ಯಾಮರಾಯ ಅವರಿಂದ ದೂರವಾಗುತ್ತಿದ್ದ. ಸಾಹೇಬರಿಗೆ

ಅವನನ್ನು ದೂರು ಮಾಡಿ ತಾವು ಬಚಾವಾದ ನಿಶ್ಚಿಂತಿ ಬರುತ್ತಿತ್ತು. ಆದರೆ ಶ್ಯಾಮರಾಯ ಅವರ ಬೆನ್ನ ಹಿಂದೆ ನಡೆಸಿದ ಕಂತ್ರಾಟದ – ಅವರ ಮೇಲೆ ತನ್ನ ಈರ್ಷೆಯನ್ನು ಸಾಧಿಸಲು ಯೋಚಿಸಿದ ಕಾರಣದ ಮೂಲವನ್ನು ಕಥಿಸಬೇಕಾಗುತ್ತಿತ್ತು. ಈ ಕಥೆಯು ದುರಂತ, ಕಣ್ಣು ಬಿಟ್ಟು ಬಚಾವಾದ ಸಾಹೇಬರನ್ನು ಕಾಯಂ ತರೀಕ ಕಣ್ಣುಮುಚ್ಚಿಸುವ ಸಂಭವವಿತ್ತು. ಸೋನಕ್ಕನ ಒಗೆತನ ಕೆಡಿಸಲು ತಾವು ಮೂಲವೆಂಬ ಕಾರಣ ತಿಳಿದು, ಅವರು ನೆಲ ಹಿಡಿಯಬಹುದಾಗಿತ್ತು. ಶ್ಯಾಮರಾಯನ ಪತ್ರ, ಅವರನ್ನು ಬದುಕಿಸಿದರೆ, ಅವನ ಕಂತ್ರಾಟ ಅವರನ್ನು ಕೊಲ್ಲುತ್ತಿತ್ತು! ಅವರಿಗೆ ಕಂತ್ರಾಟ ವಿದಿತವಾಗದೆ ಹೋದರೆ, ಪತ್ರದ ವಿಷಯ ಅನವಗತವಾಗಿ ಉಳಿದರೆ ಅವರ ಮರಣವಂತೂ ಖಚಿತವಿತ್ತು. ಆದರ ಕೂಡ ಒಂದಲ್ಲ ನೂರು ಕಂತ್ರಾಟ ಏಳುತ್ತಿದ್ದವು. ಏನೇ ಆದರೂ ಶ್ಯಾಮರಾಯನ ಕೂದಲು ಕೊಂಕುತ್ತಿರಲಿಲ್ಲ.

ಸಾಹೇಬರಿಗೆ ರಕ್ಷಾಮಣಿಯಾಗಬೇಕು, ಶ್ಯಾಮರಾಯನಿಗೆ ಗರುಡಗೆರೆಯಾಗಬೇಕು, ಅಂದರೆ... ದಾದಲ್ಯಾ ಬೆಳಗಾಂವಿಯಲ್ಲಿ ನಿಲ್ಲಲೇಬೇಕು. ಸಾಹೇಬರನ್ನು ಶ್ಯಾಮರಾಯನ ಉಡದ ಹಿಡಿತದಿಂದ ಬಿಡಿಸಬೇಕು. ಶ್ಯಾಮರಾಯನಿಗೆ ವಿಶ್ವಾಸದವನಂತೆ ತೋರಿಸಿಕೊಂಡು ಅವನನ್ನು ಅನಾಮತ್ತಾಗಿ ಬಗಲಿಗೆ ಹಾಕಿಕೊಳ್ಳಬೇಕು. ಸುರೇಶ-ಶಕೂನ ಮದುವೆಯ ದಾರಿಯನ್ನು ಸುಗಮ ಮಾಡಬೇಕು. ಹೀಗೆ ಮಾಡಬೇಕಾದರೆ–ಇವೆಲ್ಲವನ್ನೂ ಸಾಧಿಸಬೇಕಾದರೆ. ತನ್ನ ಪರೀಕ್ಷೆ. ತನ್ನ ಅಭ್ಯಾಸಕ್ಕೆ 'ಹಾಲ್ಟ್' ಹೇಳಬೇಕು. ಇಲ್ಲ – ಅದನ್ನು ಮಾಡುತ್ತಿರುವ ನಾಟಕವಾಡಬೇಕು.

ದಾದಲ್ಯಾನಿಗೆ ಯೋಜನೆ ಠರಾವಾದ ನಿಶ್ಚಿಂತಿ ಬಂದಿತು.

"ವಿಶ್ಯಾ, ನೀ ಮುಂಬೈಗೆ ನಿಶ್ಚಿಂತೀಯಿಂದ ಹೋಗು. ಜೇಮ್‌-ತೇಮ್‌ ದೀಡ-ಎರಡ ವರ್ಷ ನಿನ್ನ ಕೋರ್ಸ ಉಳದದ. ಅದನ್ನ ಬಗೀಹರಸೂ. ಸುರ್‍ಯಾಗೂ ಒಂದ ವರ್ಷ ಅವಸರಿಲ್ಲಾ. ಅದರ ದಶಿಂದ ಸಾಹೇಬರಿಗೆ ಹೇಳತೀನಿ. ಮಾತ-ಕಥೀ ಆಡೂ ವ್ಯಾಳ್ಯಾ. ಮೂರ್ತಾ ಠರಾಸಿಗೊಂಡು, ತಿಳಸ್ತೀನಿ ಅಂತ ಕಾಕಾ ಹೇಳ್ಯಾರ ಅಂತ ಹೇಳತೀನಿ. ಸುರ್‍ಯಾನ ಪತ್ರಾ ಹ್ಯಾಂಗೂ ಅವರಿಗೆ, ಶಕೂಗ. ಬರತಿರತಾವ. ಸಂಶಯಕ್ಕ ಆಸ್ಪದ ಇರೂದಿಲ್ಲಾ. 'ಟರ್ಮ್' ತುಂಬೂ ಪೂರ್ತೇ ಸಾಂಗಲೀ ಯಾತ್ರಾ ಮಾಡತೀನಿ. ನಂದು ಠರಾವಾತು ವಿಶ್ಯಾ. ನಾ ನಾಳಿಗೇನs ಬೆಳಗಾಂವಿಗೆ ಹೊರಡತೀನಿ. ಊರಿಗೂ ಹೋಗಬೇಕು. ರಾಜಪ್ಪಗ ಇಲ್ಲೇ ಸುದ್ದೀ ತಿಳಸೂ

ಆಗತ್ಯ ಆದs. ಅಂವಾ ಹಾದೀನೇ ಕಾಯತಿರಬೇಕು ನಂದು. ಬಸವಂತೀ, ನಾಳೆ ಭೆಟ್ಟಿ ಆಗೂದೇನು ಆಗಲಿಕ್ಕಿಲ್ಲಾ. ನೀ ಪುಣೇದಾಗ ಇರದs ಊರಾಗಿದ್ದ್ಯೆಂದರ ನಿಂದೂ ಕಾಳಜೀ ಮಾಡಬೇಕಾಗತಿತ್ತು. ಇಂದ ಬಳಗದಾಗ ಬಂದ ಬಿದ್ದೀ ಬಸವಂತೀ. ಒಂದ ರೀತಿಯಿಂದ ಧಗಧಗೀ ತಪ್ಪಿತು. ಮಾರಾಯಳ್ಳs ಇನ್ನರs ನಿನ್ನ ಆ ದಾಯೀಗೋಳಂಥಾ ಬಿಳೀ ಶೀರಿ, ಒಣಾ ಒಣಾ ಭಕ್ಕರೀ ಕೂಳಾ, ಅದನ್ನಿಷ್ಟು ಬಿಡು. ಪುಣೇದ ಹವಾ ಉಸರಾಡಸು. ಅಷ್ಟು ಟಾಪ-ಟೀಪ ಇರೂ. ಸುರ್ಯಾಗ ಹೇಳಿದರಾತು. ಸೋನಕ್ಕವರನ ಹ್ಯಾಂಗ ಕಬೂಲ ಮಾಡಿಸಿ ಶೀರೀ-ಪತ್ತಲಾ ತಂದಾ. ಹಾಂಗ ನಿನಗೂ ಹೊಸಾ ಶೀರೀ ಘಡೀ ಮುರಸದೇ ಬಿಡೂದಿಲ್ಲಾ."

"ದಾದಲ್ಯಾ, ನಿನ್ನ ಲಗ್ಗಂದಾಗ ಇಳಕಲ್ಲ ಶೀರೀ ಕೊಡಸು ನಿನ್ನ ಅಕ್ಕಗ. ಕಳಸಗಿತ್ತಿ ಆಗಿ ಘಡೀ ಮುರೀತೀನಿ. ಸುಮ್ನ ಯಾರರs ಟಾಪ-ಟೀಪ ಮಾಡತಿರತಾ ರೇನು? ಸೋನಕ್ಕನ್ನೂ ಮನಾರ ಹಳೀ ಶೀರಿ ಅದಾವ. ಸಾಯೂ ತನಕಾ ಉಟ್ಟು ಕೊಂಡರೂ ಸಾಲತಾಂವ. ಮನ್ನೆ ಹೋದಾಗ ಹೇಳಿ ಇಟ್ಟೇನಿ ಅವರಿಗಿ. ದಾದಲ್ಯಾ, ಚಾ ಮಾಡತೀನಿ. ಕುಡದs ಹೋಗರಿ. ನನಗೂ ಹಸವನs ಇಲ್ಲ ಇಂದ. ಮತ್ತ ನಿಮ್ಮ ಭೆಟ್ಟಿ ಎಂದನೋ ಏನೋ? ಮೂರೂ ಮಂದೀನೂ ಕೂಡಿ ಚಾ ಕುಡಿ ಯೂಣು. ಮಾತಾಡಿಕೋತ ಚಾ ಮಾಡತೀನಿ, ಅಡಿಗೀ ಮನೀಗೆ ನಡೀರಿ. ವಿಶ್ವಾಸ, ನೀ ಇದರಿಗಿದ್ದರ ಜೀಂವಕಷ್ಟು ವೈನ ಅನಸ್ತದ. ಊರಾಗ ಮಂದಿ ಬಸವಂತಿ ಬಂಜಿ ಅಂತ ಆಡಕೊಂಡರು. ನಾಕ ಮುತ್ತಿನಂಥಾ ಮಕ್ಕಳ ಕಲಮು ಆತ ಅಕೀ ಜೀವಂಕ. ಘಸಕೀ ಹಾಕಿ ಅವರು ಮಾತಾಡಿದ್ದರು. ಬಸವಂತೀ ಉಡ್ಯಾಗ ಹುಡಗರ್ನ ಹಾಕತೀನ್ಯಂತ. ದೇವರs ಅವರ ನಾಲಗೀ ಮ್ಯಾಲ ನಿಂತು ಮಾತಾಡಿದಾ. ನನ್ನ ಉಡೀ ತುಂಬಿಸಿದಾ. ವಿಶ್ವಾಸನ್ನ ನೋಡೂತ್ಲs ತಾಯೀ ಕಳ್ಳs ಕರಗಿ ಗಂಟಲಕ ಬರತೈತಿ. ಇಂಥಾ ಮಗನ ತಾಯಿ ಆಗೂದಕ ಬಸವಂತೀ. ದೇವರ ನಿನ್ನ ಬಂಜಿ ಮಾಡಿರಬೇಕು ಅನಸ್ತೈತಿ: ದಾದಲ್ಯಾ, ಹಿಂದಿನ ಜನಮದ ಪುಣ್ಯಾ ಬೇಕಾಗತದ. ನಾ ಭಾಳ ಪುಣ್ಯಾ ಮಾಡಿರಬೇಕ ನೋಡು, ನಾಕ ಮುತ್ತು ಒಮ್ಮಲಗೇ ನನಗ ಸಿಗಬೇಕಾದರ. ಈ ಮನೀ ಅನ್ನದಲೇ ಜೀಂವ ಬದಕಬೇಕಾದರ."

ಬಸವಂತಿಯ ಬಂಜೆ-ಜೀವನಕ್ಕೆ ಮುಗುಳೊಡೆದು, ನನೆ-ಕೊನೆ ಚಿಗುರಿ ಹಸಿರು ವಸನ ಮೈದುಂಬಿ, ವಸಂತಶ್ರೀ ಧರಿಸಿದ ಭಾಸವಾಯಿತು.



## ಹನ್ನೊಂದು

"ದಾದಲ್ಯಾ ನೋಡಿದರ ಜೋಟ ಹುಡಗಾ. ಬಿನ್-ಧಾಕಲೇ ಜವಾಬ್ದಾರೀ ತಗೋತಾನ ಪ್ಯೈವ್ಯಾಲs. ಹೀಂಗ ಮಾಡ ದಾದಲ್ಯಾ ಅಂತ ಹೇಳೂ ಜರೂರೀನs ಬೀಳೂದಿಲ್ಲಾ. ಈಗ ಸುರೇಶಗ ಲಗ್ನಬಲಾ ಇಲ್ಲಂತ ಥ್ವಾಡೇ ದಿನಾ ಮಾತ-ಕಥೀ ಆಡೂದು ಖಟ್ಟಿಸಿತು. ದಾದಲ್ಯಾ ವಚನ ತಗೊಂಡs ಬಂದಾನಲಾ. ಶಕೂನ ವಿಷಯದಾಗ ನಿರ್ಧಾಸ್ಥ ಇರ್‍ರ್‍ಯಂತ. ಖುದ್ದ ಸೋನಕ್ಕಾ-ಸುರೇಶನ ಅಜ್ಜಾ ಹೆಳ್ಯಾರಂದ ವ್ಯಾಲs ಮುಗದs ಹೋತು."

ರಂಗಕ್ಕ ಸಾಹೇಬರ ಬೋಕಾದಲ್ಲಿ ಗಾಳಿ ತುಂಬತೊಡಗಿದರು.

"ರಂಗಕ್ಕಾ, ನಾಳೆ ಅಷ್ಟು ಶಕೂಂದೊಂದು ಮಸ್ತ ಫೋಟೋ ತಗಿಸಿ ಪುಣೇಕ್ಕ ಕಳಿಸಿಬಿಡೂನು. ಪಂತರ ಸೊಸೀ ಸಾನಕಾಶ ಹೋಗಿ ಆ ಮನೀ ಒಳಗ ಕೂಡಲಿ. ಮೊದಲ ಅಕೀ ಫೋಟೊ ಹೋಗಲಿ. ಕಾಕಾ-ಸೋನಕ್ಕಾ ಜರೂರ ಫೋಟೋ ಕಳಸಲಿಕ್ಕೆ ತಿಳಿಸ್ಯಾರ. ಶಕೂನ್ನ ಎಂದ ಸಣ್ಣ ಹುಡಿಗಿ ಇದ್ದಾಗ ನೋಡಿರಬೇಕು ಸೋನಕ್ಕಾ. ಏನ ಮಾಡೂದರಿ, ಶಕೂ ಒಂದ ವರ್ಷ ಹೋಳಿಗೀ ಮುಂದ ಹಾಕಿ ಬಿಟ್ಟಳು. ಇಲ್ಲದಿದ್ದರ ಈ ಲಗ್ನಮಾಸೇನು ಹುಸೀ ಹೋಗತಿದ್ದಿಲ್ಲಾ. ಕಾಕಾ ಏನ ಹಳಹಳಸಿದರಂದರಿ ? ಹೇಳೂ ಸೋಯಿಲ್ಲಾ."

ನಾವೂ ರಂಗಕ್ಕನ ಬೋಕಾದಲ್ಲಿ ಹವಾ ಭರತೀ ನಡಿಸಿದ್ದೆವು.

"ಮೊನ್ನೇ ತಗಸೇದ ಅಕೀ ಫೋಟೋ : ಪುಣೇಕ್ಕ ಹೋಗೂದಾದರ ಇರ್ಲ್ಯಂತ. ಎಂಟ ದಿನಾ ಸುದ್ದೇ ಆಗಿಲ್ಲಾ. ಅದನ್ನ ತೋರಸರಿ ದಾದಲ್ಯಾಗ. ಅವನ ಮನಸ್ಸಿಗೆ ಬಂದರ ಅದನ್ನs ಕಳಸವಲ್ಲನ್ಯಾಕ. ದಾದಲ್ಯಾ, ನಿನ್ನ ಪತ್ರ ಬಂತು. ನಾನs ಜರೂರ ಬೆಳಗಾಂವಿಗೆ ಬರಾಂವ ಇದ್ದೀನಿ. ಎಲ್ಲಾ ಹಕೀಕತ್ತ ತಿಳಸ್ತೀನೀ ಅಂತs. ಇಲ್ಲದಿದ್ದರ ನಾವು ಹೊಂಟೇ ನಿಂತಿದ್ದೇವು."

ರಂಗಕ್ಕ.

"ಅಂತೂ ದಾದಲ್ಯಾ. ಶಕೂನ ಝುಲ್ಲ ಒಟ್ಟಿತಪಾ. ಇನ್ನ ಶ್ಯಾಮರಾಯರ ಕಿಂವೀ ವ್ಯಾಲಷ್ಟು ಈ ಸುದ್ದೀ ಹಾಕಿಬಿಡೂಣು. ಕರ್ತಾಪುರುಷ ಅವರು. ಅವರ

ಕಬೂಲೀದು ಜರೂರೀ ಅದs. ಸೋನಕ್ಕ ಒಪ್ಪ್ಯಾಳಂದ ಮ್ಯಾಲs ಶ್ಯಾಮ ರಾಯರದೂ ಒಪ್ಪಿಗಿ ಇದ್ದಾಂಗಸs. ಆದರೂ ರೀತಿ-ರಿವಾಜ ಅದs. ಗೃಹಸ್ಥ ಮಿಕೀ ಅದs"

ಸಾಹೇಬರು.

"ಯೋಗ್ಯ ಅದs ನಿಮ್ಮ ವಿಚಾರಾ. ಆದರ ಶ್ಯಾಮರಾಯರು ಕರ್ತಾ ಪುರುಷ ಅಂದರ್ಹೈಲಾ, ಆ ಬಾಬತ್ಯಾಗ ಮಾತ್ರ ನಮ್ಮ 'ವ್ಯೂಜ್ ಡಿಫರ್' ಆಗತಾವ ನೋಡರಿ. ನಾ ಪಂತರ ಪುರೋಹಿತಾ. ಆ ಮನೆತಾನದ ಪದ್ಧತೀ, ರೀತಿ-ರಿವಾಜು ನನಗ ಜಾಸ್ತ ಠಾಂವಿಕೀ. 'ಭೀಷಾಸ್ಮಾದ್ ವಾತಃ' ಅಂದರು ಹಿರ್‍ಯಾರು. ಖರೇ ದ್ರಷ್ಟಾರರು ಅಂದರ ಅವರೇ ಏನರೀ. **ಅವನ** ಅನುಜ್ಞಾ ಇಲ್ಲದ ಒಂದು ಕಡ್ಡಿ ಹ್ಯಾಂಗ ಅಗಳ್ಯಾಡೂದು ಶಕ್ಯ ಇಲ್ಲಾ – ಹಾಂಗs ರಾವಜೀಕಾಕಾಅವರದು ಮನೆತಾನದಾಗ ವಚಕಾ. ಎಲ್ಲಾರಿಗೂ ಅವರ ಅಂಗುಲಿ ನಿರ್ದೇಶದ ಕಡೇ ಅಷ್ಟೇ ಲಕ್ಷ್ಯ. ಯಾಕ – ಏನು ಅಂತ ಕೇಳೂ ಹಾಂಗನs ಇಲ್ಲಾ. ಕಾಕಾ ತಮ್ಮ ಅಕಲ್ಯಾಣ ಮಾಡತಾರ – ಮಾಡ್ಯಾರು ಅನ್ನೂ ಅಂಜಿಕಿದ್ದರಲಾ ಕೇಳೂದು. ಸುರೇಶ ಇದಕ ಏನಂತಾಸ ದಾದಲ್ಯಾ? ಹುಡಿಗಿನ್ನ ಒಪಿಗೊಂಡಾನs. ಬಗೀಹರೀತು. ನನ್ನ ಹುಡು ಗೂರು ತಮ್ಮ ಯೋಗ್ಯತಾ, ಮನೆತಾನದ ಇಮಾನೀಗೆ ಯೋಗ್ಯ ಕನ್ಯಾ ಆರಸ್ತಾರ ಅನೂ ಭರೋಸ ಅದs ನನಗ. ಇಕಾ ದಾದಲ್ಯಾ, ನಿಮ್ಮ ಸಾಹೇಬರಿಗೆ ಹೇಳು: ಕಾಕಾ, ಕೋರಾ ಕರಕರೀತ ಕಾಗದಾ ಕೊಟ್ಟರಂತ. ಹೀಂಗ ನೋಡರಿ, ನಮ್ಮ ರಾವಜೀಕಾಕಾ ನಿರ್ಣಯ ತಗೊಂಬೂದಂದರ."

ನಾನು.

"ದಾದಲ್ಯಾನ ಮಾತು ಅಗದೀ ರಾಸ್ತ ಅದs ರಂಗೂ. ನಮ್ಮ ಪೀಳಿ ಮುಂದೀದು ವಚಕನs ಹೀಂಗs. ಯಾರದರ ಅಕಲ್ಯಾಣ ಮಾಡತಿದ್ದರ ಕುಟುಂಬ ದಾಗಿನ ಮುಂದಿ ಬ್ರ ಅನಬೇಕಲಾ. ಕಾಲ ಬದ್ಲ ಆತ ಖರೇ. ಆದರ ಬದ್ಲ ಆದ ಕಾಲದ ಜೋಡೀ ಹ್ಯಾಂಗ ಹೊಂದಿಕೊಂಡು ಹೋಗಬೇಕೂ ಅನ್ನೂ ಸಮಜೂತ ಇದ್ದವರು ಹಾರ, ರಾವಜೀಕಾಕಾ. ತಮ್ಮ ಹುಡುಗಾ ಹುಡಗಿನ್ನ ಒಪಿಗೊಂಡ ವಿಷಯ ಕೇಳಿಕೊಂಡರು. ನಿಮಗ ಕೋರಾ ಕಾಗದಾ ಕೊಟ್ಟರು. ಅದs ಶ್ಯಾಮ ರಾಯನ್ನ ನೋಡರಿ? ಹ್ಯಾಂಗ ನಿಮ್ಮನ್ನ ಅತಂತ್ರದಾಗ ಇಟ್ಟಾನ. ಇನ್ನ ನೀವು. ಈ ಬಾಬತ್ಯಾಗ ಶ್ಯಾಮರಾಯನ ನಾದs ಬಿಡರಿ. ರೀತಿ-ರಿವಾಜ ಅಂಬರೂ, ನಾವು

ರಾಪಜೀಕಾಕಾ ಅವರ ಜೋಡೀ ವ್ಯವಹಾರಸೂದs ವಾಜಮೀ. ಖರೇ ಕರ್ತಾ ಪುರುಷ ಅವರು. ಅಂತಿಮ ನಿರ್ಣಯ ಅವರ್ನ ಕೂಡಿದ್ದು."
ರಾ. ಸಾ. ಠೋಮರೇಮಾಮಾ.

"ದಾವಲ್ಯಾ. ಮಾಮಾ ಬರೋಬರೀ ಹೇಳಿದರು. ನಾಳೆ ಶಕೂ, ಸೋನಕ್ಕನ ಕ್ರಿಯಾಗ ನಡೀಯೂವಾಕಿ. ಅವರ್ನ ಕೇಳೂದು – ಅವರಿಗೆ ಶಕೂ ಒಪ್ಪಿಗಾಗೂದು ಠೀಕಾ. ಅವರೂ ಒಪಿಗೊಂಡಾರಂದ ಮ್ಯಾಲs ಬಗೀಸs ಹರೀತು. ಶ್ಯಾಮ ರಾಯರದರs ಯಾಕ ಮನಧರಣೀ ಮಾಡಬೇಕು? ಮ್ಯೆಮ್ಯಾಲ ಬಿದ್ದು ಕೇಳ ಬೇಕು? ನಿಮಗ ಇಲ್ಲದ ರೀತಿ-ರಿವಾಜಾ ಗೃಹಸ್ಥಮಿಕೀ ನೆನಪ ಆಗತಾಂವ. ವರ್ಷದ ತನಕಾ ಏನ ಮಾತ-ಕಥೀ ಆಢಲಿಕ್ಕೆ ಬರೂ ಹಾಂಗಿಲ್ಲಾ. ಮುಂದ ಶ್ಯಾಮ ರಾಯರ್ನ ಕೇಳಲಿಕ್ಕೆ ಬಂದೀತು. ಈಗ ಸುಮ್ನ ಇದ್ದಬಿಡರಿ."
ರಂಗಕ್ಕ ಯಜಮಾನರಿಗೆ ಸಕ್ಕಮನಾಯಿ ಹುಕುಂ ಬಜಾಯಿಸಿದರು.

"ದಾದಲ್ಯಾ. ಒಂದಿಷ್ಟು ಆಫೀಸ-ರೂಮ ಕಡೇ ನಡೀಯಪಾ. ಒಂದೆರಡು ಅರ್ಜಂಟ ಕಾಗದವ. ಯು.ಓ.ಆರ್. ಎಸ್.ಈ. ಕಡಿಂದ ಬಂದಾವs. ಅಷ್ಟ ನಿಕಾಲ ದಾಗ ತಗೀಬೇಕಾಗೇದ. ತಾಸ ಅನೂದರಾಗ ಬಗೀಹರಿಸಿಬಿಡೂಣು."
ಸಾಹೇಬರು ಏಳುತ್ತ ಹೇಳಿದರು.

ಇಬ್ಬರೂ ಆಫೀಸ ರೂಮಿಗೆ ಬಂದೆವು. ಸಾಹೇಬರು ಟೇಬಲ್ಲಿನ ಡ್ರಾಅರಿ ನಲ್ಲಿಂದ ಮೂರು-ನಾಲ್ಕು ಪಾಕೀಟು ತೆಗೆದರು; ಅದರಲ್ಲಿ ಎರಡು-ಮೂರು ಕಾಗದ ಕಾಮಗಿರಿಗೆ ಸಂಬಂಧಿಸಿದವಿದ್ದು ತಾಂತ್ರಿಕ ಸ್ವರೂಪದ್ದಾಗಿದ್ದವು. ಸಾಹೇಬರ 'ಡಿಕ್ಟೇಶನ್' ತೆಗೆದುಕೊಂಡು. ಉತ್ತರದ ಸ್ಥಳ-ಪ್ರತಿ ಸಿದ್ಧಪಡಿಸಿದೆ. ಸಾಹೇಬರೇ ಸ್ವಹಸ್ತದಲ್ಲಿ ಪಿ.ಡಬ್ಲ್ಯು.ಸಿ.ಎಸ್. ಗೀಚಿದರು.

ಉಳಿದ ಇನ್ನೊಂದು ಪಾಕೀಟು. ಅದರೊಳಗಿಂದ ಒಂದಕ್ಕೊಂದು ತಳಕು ಹಾಕಿಕೊಂಡ. ಐದಾರು ಗಿರ್ಧ-ಅರ್ಧ ಶ್ವೇತ-ಪೀತವರ್ಣದ ಕಾಗದದ ಪುಡಿಕೆ ತೆಗೆದು ನನ್ನ ಮುಂದೆ ಸರಿಸುತ್ತ ಸಾಹೇಬರು ಹೇಳಿದರು:

"ದಾವಲ್ಯಾ, ಅದರಾಗ ಏನ ಅದs ಅನೂದನ್ನ ನೀನs ಓದಿ ನೋಡು"

ನಾನು ಪುಡಿಕೆಯನ್ನು ಬಿಡಿಸಿ, ಮಡಿಕೆ ಬಿದ್ದ ಕಾಗದಗಳನ್ನು ಸರಿ ಮಾಡಿ ಕೊಂಡು ಓದತೊಡಗಿದೆ:

Below anonymous application regarding allegations

against ದಿಂದ ಸುರುವಾಗಿ ....under secretary to the Govt. of Bombay P.W.D. ಸಹಿ ಧರಿಸಿದ ಕಾಗದಗಳ ಕಂತೆಯು ವೃತ್ತಾಂತ ಇಷ್ಟು:

ಕನ್ನಡದಲ್ಲಿ ಒಂದು ಮೂಕೀ ಅರ್ಜಿ. ಅದರ ಇಂಗ್ಲೀಷ ಭಾಷಾಂತರಿತ ಅವತರಣಿಕೆ, ಚೀಫ ಇಂಜಿನಿಯರ್ ಸಾಹೇಬರಿಗೆ ನೋಟು: ಅದನ್ನು ಸಂಬಂಧಿತ ಸರ್ಕಲ್ಲಿನ ಎಸ್.ಈ. ಅವರಿಗೆ ಅಭಿಪ್ರಾಯಾರ್ಥವಾಗಿ ಕಳಿಸಿರಿ ಎಂದು. ಚೀಫ ಇಂಜಿನಿಯರರ ಶರಾ: ಈ ಪ್ರಕಾರ, ತೀರ ಕೆಳಗಿನ ಪಾಯರಿಯಿಂದ, ಸರಕಾರದ ತುತ್ತ ತುದಿಯ ಪಾವಟಣಿಗೆ ಹತ್ತಿ, ಎಸ್.ಈ. ಸಾಹೇಬರ ಕಡೆಗೆ "For enquiry and early report" ಎಂದು ಬಂದ ಕಾಗದಗಳನ್ನು ಓದಿದೆ.

ಮೂಕೀ ಅರ್ಜಿಯಲ್ಲಿ ನಮ್ಮ ಸಾಹೇಬರ ಅಶ್ವಖಾದ್ಯ ತಾಕತ್ತನ್ನು ವರ್ಣಿಸಿ, ಅದರ ವಿವರಗಳನ್ನು ಕೊಟ್ಟು, ಸಾಹೇಬರು ತಮ್ಮ ಖಾತೆಯಲ್ಲಿ ಘನ ಅನ್ಯಾಯ ನಡೆಸಿದ್ದನ್ನು ಮೇಹರ್‌ಬಾನ್ ಹುಜೂರ ಸರಕಾರದ ಸನ್ನಿಧಿಗೆ ಅರಿಕೆ ಸಲ್ಲಿಸಿ, ಪರಿಹಾರ-ಯಾಚನೆಯ ಅಂಗಲಾಚನೆ ಇತ್ತು. ಅರ್ಜಿಯಲ್ಲಿ ಊರು-ಕೇರಿಯ ನಾಮ-ನಿರ್ದೇಶವಿರಲಿಲ್ಲ. ಅರ್ಜಿದಾರನ ಸಹಿಯಂತೂ – ಮೂಕೀ ಅರ್ಜೀ ಇದ್ದ ಕಾರಣ – ಇರುವದು ಶಕ್ಯವಿರಲಿಲ್ಲ.

ಎರಡನೇ ಅರ್ಜಿಯಲ್ಲಿ, ಸಾಹೇಬರು ಬರೇ ರೊಕ್ಕ ತಿನ್ನುವದಲ್ಲದೆ ಕಚ್ಚಿ ಹರಕ ಚಾಳಿಯವರಿದ್ದ ವರದಿಯೂ ನಮೂದಿತವಾಗಿತ್ತು. ಸಕಾಲದಲ್ಲಿ ಮೇ॥ ಸರಕಾರದವರು ಎಚ್ಚತ್ತು ಸಾಹೇಬರನ್ನು ಬೇರೆಡೆಗೆ ಬದಲೀ ಮಾಡಬೇಕು – ಇಲ್ಲದಿದ್ದರೆ ಗರೀಬ ಜನರ ಮೇಲೆ ಅನ್ಯಾಯಮಾಡಿದಂತಾಗುತ್ತದೆ – ಎಂದು ಸೋತವರಂತೆ ಬಿಟ್ಟ ನಿಟ್ಟುಸಿರಿದ್ದಿತು.

ಎಸ್.ಈ. ಸಾಹೇಬರು ಖಾಸಗೀ ಸ್ವರೂಪದಲ್ಲಿ ಈ ಅರ್ಜಿಗಳನ್ನು ನಮ್ಮ ಸಾಹೇಬರ ಮಾಹಿತಿಗೆ – ಸ್ಪಷ್ಟೀಕರಣಕ್ಕೆ ಕಳಿಸಿದ್ದರು.

ಎರಡೂ ಅರ್ಜಿಯಲ್ಲಿ ನಮೂದಿತವಾದ ಮುದ್ದೇ ನಂ. ೧: ಸಾಹೇಬರು ಭಾರೀ ಗೋಪಾಳ ತಿನ್ನುತ್ತಾರೆ.

ಅದಕ್ಕೆ ಉತ್ತರ:

ಪಿ.ಡಬ್ಲ್ಯು.ಡಿ.ಯಲ್ಲಿ ಎಲ್ಲರೂ ಗೋಪಾಳ-ಭಕ್ಷಕರಿರುತ್ತಾರೆ. ಅದನ್ನು ಸವಿಯದೆ – ಅದರ ರುಚಿ ನೋಡದೆ ಇದ್ದರೆ – ಆ ಪ್ರಾಣಿಗೆ ಖಚಿತ ರೌರವ ನರಕ ಕಟ್ಟಿಟ್ಟಂತೆಯೇ! ಆ ಕಾರಣವಾಗಿ ಗೋಪಾಳ-ಭಕ್ಷಣ-ವಿಧಿಗೆ ಸಾಹೇಬರು ಅಪ

ವಾದವಾಗುವದು ಅಕ್ಷಮ್ಯ. ಅರ್ಥಾತ್ ಗೋಪಾಳ-ಭಕ್ಷಣದಲ್ಲಿ ತಾರತಮ್ಯ ಭೇದ – ಅಧಿಕಾರದ – ಅಂದರೆ ಹುದ್ದೆಯ ಮಾನದಿಂದ ನಿರ್ಧರಿತವಾಗುತ್ತದೆ. ಸಾಹೇಬರೆಂದರೆ ಪಟ್ಟಾವಾಲಾ ಅಲ್ಲ, ನಾಕಾಣೆಯ ಖುಷಿ ತೆಗೆದುಕೊಂಡು ಕುರ್ನಿಸಾತು ಮಾಡಲಿಕ್ಕೆ. ಸಾಹೇಬರು ಗೋಪಾಳ ತಿನ್ನದಿದ್ದರೆ, ಚಾಂದೀ-ಖುರಾಕಿನ ತಳಿಗೆ, ಕುಲಕ್ಕೆ ಹೊರತಾಗುತ್ತಿದ್ದರು. ಲಂಚದ ಲಚಾಂಡವನ್ನು ಪಚ್ಚಿ ಕೊಳ್ಳದಿದ್ದರೆ, ಖುರಾಕಿನ ತೋಬರಿಯನ್ನು ಮುಂದೆ ಮಾಡುವ ಕಂತ್ರಾಟದಾರರೇ, ಸಾಹೇಬರನ್ನು 'ನಾಲಾಯಖ ಇಸಮಿ'ನ ಸದರಿನಲ್ಲಿ ಢಕಲಾಯಿಸುತ್ತಿದ್ದರು. ಸಾಹೇಬರಿಗೆ ತಮ್ಮ ಮಾನ-ಪಾನದ, ಕಂಠತ್ರಾಣದ ಅಂದಾಜಿದೆ. ಗುಂಜಿ ತೂಕ ಹೆಚ್ಚು, ಗುಂಜಿ ತೂಕ ಕಡಿಮೆ ಧರ್ತಿಯಲ್ಲಿ ಅವರು ಅಂದಾಜಿನ ಪ್ರಕಾರ ನಡೆಯುತ್ತಾರೆ.

ಈ ಮಾಹಿತಿಯ ಮಹತಿ ಎಸ್.ಈ.ಗೆ ಎಲ್ಲಾ ಅವಗತವಿದೆ. ಸ್ಪಷ್ಟೀಕರಣ ಮೇಹರ್‌ಬಾನ್ ಸರಕಾರಕ್ಕೆ ಮಾನ್ಯವಿದ್ದು ಸಮಾಧಾನಕಾರಕವಿದೆ.

ಆದರೆ ಇದರ ಮಹತಿಯನ್ನು, ಈ ಸ್ಪಷ್ಟೀಕರಣವನ್ನು ಕಾಕರ ಲಿಪಿಗೆ ಇಳಿಸಬರುವಂತಿಲ್ಲ. ಅದು 'ಪರಸ್ಪರಂ ಭಾವಯಂತಃ' ಧಂದೇ. 'ಆಫೀಸಿಯಲ್ ಸಿಕ್ರೆಟ್.'

ಸರಕಾರ ಅಪೇಕ್ಷಿಸುವ ಸಾದಾ-ಸೀದಾ ಸಮಾಧಾನಕಾರಕ ಉತ್ತರ:

"ವಿವೇಚನಾಂತ್ಯದಲ್ಲಿ, ಅರ್ಜಿಯಲ್ಲಿ ನಮೂದಿತವಾದ ಆಪಾದನೆ ನಂ. ೧. ತಥ್ಯರಹಿತವಾದದ್ದೆಂದು ಕಂಡುಬಂದ ಪ್ರಯುಕ್ತ, ಅರ್ಜೀ, ದಾಖಲಾ ಅಯೋಗ್ಯವಾಗಿದ್ದು, ರೆಕಾರ್ಡುಯೋಗ್ಯವಾಗಿದೆ."

ಇಂಗ್ಲಿಷ್-ಭಾಷಾ-ಕೋಶ-ಸಾಮ್ರಾಟ್ ಜಾನ್‌ಸನ್ ಸಾಹೇಬ, ಗಜವ್ ನಿಂತರೂ, ಇದರ ಅರ್ಥ-ಅನ್ವಯಾರ್ಥ-ಭಾವಾರ್ಥ-ಶಬ್ದಾರ್ಥದ ಅರ್ಥ ಹತ್ತದೆ, ಬರೀ ದಮ್ಮು ಹತ್ತಿ, ಬರ್ಕ ಸಾಹೇಬನ ಕಿವಿಯಲ್ಲಿ ಹೇಳುತ್ತಾನೆ: ಹಿಂದೂಸ್ತಾನ ಇಂದಿಲ್ಲ ನಾಳೆ ಕೈಬಿಡುವದು ಗ್ಯಾರಂಟೀ.ಹೋಗಲಿ ಮಾರಾಯಾ. ಇಂಗ್ಲೀಷ್ ಅಷ್ಟು ಸಹಿಸಲಾಮತ್ ನಮಗೆ ಉಳಿಯಲಿ. ಅದನ್ನು ಪಿ. ಎಂಡ್ ಓ. ಆಗಬೋಟಿನಿಂದ ರವಾನಿಸಿಬಿಡಲು ತಿಳಿಸು, ಜಾನ್‌ಸನ್‌ಸಾಬರಿಗೆ ಅರ್ಥವಾಗದ್ದು, ಪಿ.ಡಬ್ಲ್ಯು.ಡಿ. ಸೆಕ್ರೆಟೇರಿಯೇಟ್‌ದಲ್ಲಿಯ ಕಾರಕೂನಸಾಬರಿಗೆ ಅಚೂಕ ಅರ್ಥವಾಗುತ್ತದೆ. ಅವನು 'In view of the satisfactory explaination no action is deemed feasible in the matter — Record.' ಎಂದು ಕಾಗದ ಸತ್ತ ಸುವಾರ್ತೆಯನ್ನು

ಸಾರುತ್ತಾನೆ. ಉಪಕಾರ್ಯದರ್ಶಿ, ಕಾರ್ಯದರ್ಶಿ ಅದಕ್ಕೆ ರೆಕಾರ್ಡ ಶಿಕ್ಕಾ ಹಾಕುತ್ತಾರೆ, 'By the order of the Governer.' – ಎಂದಿರುತ್ತದೆ ಪುಣ್ಯಕ್ಕೆ. ಇಲ್ಲದಿದ್ದರೆ ಗವ್ಹರ್ನರನ ಸಾಬನೂ ಕೂಡ ನಮ್ಮ ಊರ ಪೋಸ್ಟಮನ್ ಪಾಂಡೂನಂತೆ ಶಿಕ್ಕಾ-ಮೋರ್ತಬ್ಬ ಮಾಡಲಿಕ್ಕೆ ಸಿದ್ಧನಾಗಿಯೇ ನಿಂತಿರುತ್ತಿದ್ದ.

ಅರ್ಜಿಯಲ್ಲಿಯ ಮುದ್ದೇ ನಂ. ೧: ಹೀಗೆ ಸಾಯುವದು ಖಾತ್ರೀ.

ಇನ್ನು ಮುದ್ದೇ ನಂ. ೨: ಸಾಹೇಬರ ಕಚ್ಚೆಯ ಬಗ್ಗೆ. ಇದು ಅವರ ಖಾಸಗೀ ವಿಷಯ. ಕಚ್ಚೆ ಬಿಗಿಯಾದರೆ ಸಡಲಿಸುವ – ಸಡಿಲಾದರೆ ಬಿಗಿಯುವ ಪ್ರಶ್ನೆ – ಅಧಿಕಾರ ಅವರದು. ಅವರ ಖಾಸಗೀ ಜೀವನಕ್ಕೆ ಸಂಬಂಧಿಸಿದ್ದು. ಅವರ ಧೋತರದ ಮಾಪನ್ನು ಮೊಳ ಹಾಕಿ ನೋಡಲಿಕ್ಕೆ ಅರ್ಜಿದಾರನಿಗೆ ಅಧಿಕಾರವಿಲ್ಲ. 'It's my personal affair — none of your business' – ಎಂದು ಸಾಹೇಬರು ರೋಖ-ಠೋಕ ಉತ್ತರವನ್ನು ಕೊಡಬಲ್ಲರು. ಇನ್ನೂ ಸ್ವರಾಜ್ಯ ಬಂದಿರದ ಕಾಲ. ಶೀಲ-ಸುಧಾರಣಾ ಖಾತೆಯ ನಿರ್ಮಿತಿ ಅಷ್ಟು ಅಗತ್ಯದ್ದು ಎನಿಸಿದ್ದಿಲ್ಲ. ಶುಕಮುನಿಯ 'ಕ್ವಾಲಿಫಿಕೇಶನ್'ಗೆ ಬಾಜಾರ ಭಾವವಿರಲಿಲ್ಲ. ಮೇ॥ ಸರಕಾರ ಇಂಥ ಖಾಸಗೀ ಸ್ವರೂಪದ ವಿಷಯದಲ್ಲಿ ಕೈಹಾಕುವ ಚಿಲ್ಲರತನ ತೋರಿಸುತ್ತಿರಲಿಲ್ಲ. ತಥಾ, ಈ ಮುದ್ದೇ ನಂ. ೨. ಉತ್ತರಿಸದಿದ್ದರೂ ನಡೆಯುವಂತಿತ್ತು. ಮೇ॥ ಸರಕಾರಕ್ಕೆ ನಿರುತ್ತರ ಸ್ಪಷ್ಟೀಕರಣವೇ ಬೇಕಾಗುತ್ತಿತ್ತು. 'Noted. No remarks to offer' ಎನ್ನುವ ಗಾಯತ್ರಿ ಪಿ.ಡಬ್ಲ್ಯುಡಿ.ಯಲ್ಲಿಯ ಬ್ರಹ್ಮವಾಕ್ಯ. ಅದರ ಮುಂದೆ ಪ್ರಚ್ಛೆ ಇಲ್ಲ – ಆ ಉತ್ತರಕ್ಕೆ ಇಲಾಜು ಇಲ್ಲ.

ರಾ.ಸಾ. ಠೋಮರೇಮಾಮಾನ – ಸಾಹೇಬರ ಸ್ವಂತ ಮಾಲ್ಕಿಯ ಫಾಯಲ್‌ಗಳನ್ನು ಜೋಡಿಸುವಾಗ – 'ಕ್ರಾಸ್-ರೆಫರನ್ಸ್' ಹಾಕುವಾಗ, ನಾನು ಅವನ್ನು 'Alice in wonderland' ಕತೆಯನ್ನು ಓದುವಾಗಿನ ಕುತೂಹಲದಿಂದಲೇ ಓದಿದ್ದೆ. ಭಾರೀ ಮಜಾ ಅನಿಸಿತ್ತು. ಅದರಲ್ಲಿ ಇಬ್ಬರೂ ತಮ್ಮ ಪರಿಷ್ಕಾರ ಕೂಡ – ಸರಕಾರದ ಕೂಡ, ಸಾದಾ ಪೇಚು, ಡಾವ್‌ಪೇಚು ಹಾಕಿ ಮಲ್ಲಕಾಳಗ ಮಾಡಿದ ರಸರಮ್ಯ ಪ್ರಸಂಗವಿದ್ದವು. ನವಕರಿಯಲ್ಲಿ ನಾನೂ ನಡೆದರೆ – ದಾರಿ ಸುಗಮವಾಗಲಿ ಎಂಬ ಆಸ್ಥೆಯಿಂದ ಈ ಫೈಲ್‌ಗಳನ್ನು ಓದಿ ಮನನ ಮಾಡಿಕೊಂಡಿದ್ದೆ. ಸಾಹೇಬರ 'ಡಿಕ್ಟೇಶನ್' ತೆಗೆದುಕೊಳ್ಳುವಾಗ ಅವರೂ, ನಾನು ತಿಳಿದು ಕೊಂಡಿರಲಿ ಎಂದೋ, ತಮಗೆ ಬಹಳ ತಿಳುವಳಿಕೆ ಎಂದೋ ಏನೋ, ಅನೇಕ

ಕ್ಲ್ರಿಷ್ಟಗಳನ್ನು ಹೇಳುತ್ತಿದ್ದರು. ಅದರ ಹಸಿರು ಇನ್ನೂ ರಸರಸಿತವಾಗಿತ್ತು. ದಾದಲ್ಯಾ ವಿಸ್ಮರಣೆಯನ್ನು ಮರೆತೇ ಹುಟ್ಟಿ ಬಂದಿದ್ದ. ಅವನಿಗೆ ಘನಪಾಠೀಪು ಅಧಿಕೃತ ಬಿರುದು ಇರದಿದ್ದರೂ – ಆ ಸತ್ವ ಅವನಲ್ಲಿ ಖಾಸ್ ಇತ್ತು.

"ಎಸ್. ಈ. ಸಾಹೇಬರಿಗೆ ಈ 'ಕೇಸ್-ಪೇಪರ್' ತಿರಿಗಿ ಕೊಟ್ಟು ಹೇಳಿ ಬಿಡಿರಿ. ನಿಮ್ಮ ಕಡೇ ಇರೂ ನಾಕಾರ ಮಂದಿ ದೊಡ್ಡ ಕಂಟ್ರಾಕ್ಟರ್ನ ಹೆಸರು. ಅವರ ಕಡಿಂದ ಲೇಖೀ ಜವಾಬ ತಗೋರ್‍ಯಂತ: ನಾವೇನೂ ಗೋಪಾಳ ಕೊಟ್ಟಿಲ್ಲಾ. ಅವರ ದಶಿಂದ ನಮಗ ತಗಾದೀನೂ ಇಲ್ಲಾ. ಸಾಹೇಬರನ ನಾಲಸ್ತೀ ಮಾಡೂ ವರ ವಶಿಂದ, ಯಾರೋ ಆಗದವರು – ಕಂತ್ರಾಟು ಕೆಲಸ ಸಿಗದವರು ಈ ರೀತಿ ಅರ್ಜಿ ಮಾಡಿರೂ ಸಂಭವ ಅದs. ಸರಕಾರದವರು ಇಂಥಾ ಬೇಜವಾಬ್ದಾರೀ ಲಿಖಾಣಕ್ಕ ಮಹತ್ವ ಕೊಟ್ಟರೆ, ನಿಷ್ಠಾವಂತ ಕಂತ್ರಾಟದಾರರದು ಅನ್ಯಥಾ ನಾಮೀ ಕೆಡೂ ಸಂಭವ ಅದs ಅಂತs. ಇಷ್ಟ ಲೇಖೀ ಜವಾಬ ಸಿಕ್ಕರ ಸಾಕು. ಸರಕಾರದವರಿಗರೆ ಹೆಚ್ಚಿಗೇನು ಬೇಕಾಗೇದ. ಎರಡನೇ ಮುದ್ದೇ ಅಂತೂ ಫ್ರೋಕಳಸs ಅದs. ಎಸ್.ಈ. ಅವರು ಅದನ್ನ 'ಪ್ರೂಜಿಡೀಸಿಯಲ್' 'ಬೇಸ್‌ಲೆಸ್' 'ಮೀನ್' ಶಬ್ದಾ ದಬಾಸಿ ಹಾಕಿ ಉತ್ತರಾ ಕೊಟ್ಟರಂದರ ತೀರಿತು."

ನಾವು ಸೂಚಿಸಿದೆವು.

"ದಾದಲ್ಯಾ, ಎಸ್.ಈ. ಸಾಹೇಬರು ಅಷ್ಟ ಮಾಡೇ ಮಾಡತಾರ. ಅದರ ದೇನು ಕಾಳಜೀ ಇಲ್ಲಾ. ಆದರ ನನ್ನ ವಿರುದ್ಧ ಹಿಂದಕ ಎಂದೂ ಅರ್ಜೀ ಇದ್ದಿದ್ದಿಲ್ಲಾ. 'ಪರ್ಸನಲ್ ಅಲಿಗೇಶನ್' ಅಂತೂ ಯಾರೂ ಮಾಡಿದ್ದಿಲ್ಲಾ. ಮೊದಲನೇ 'ಅಲಿಗೇಶನ್'ದ್ದರಿಂದ ನಾ ವ್ಯಥಾ ಪಡಿಗೊಂಬೂ ಕಾರಣನs ಇಲ್ಲಾ. ಮುಕೀ-ಜೇನಾಮೀ ಅರ್ಜೀ ಒಳಗ ಈ ಸಾರ್ವಜನಿಕ ಸತ್ಯಾ ಯಾವಾಗಲೂ ನಮೂದ ಆಗೇ ಇರತದ. ಇದರ 'ಕಾಗ್ನಿಸೆನ್ಸ್' ತಗೋಬೇಕಂತ, ಅರ್ಜೀ-ಧರ್ಮರಾಜ ರದೂ ಆಗ್ರಹ ಇರೂದಿಲ್ಲಾ. ದಾದಲ್ಯಾ, ನನಗ ವ್ಯಥಾ ಅನಸೇದ, ಆ ಎರಡನೇ 'ಅಲಿಗೇಶನ್'ದ್ದರಿಂದ. ಕಮೀತ್ ಕಮೀ ವೀಸ-ಬಾವೀಸ ವರ್ಷದ ಮ್ಯಾಲ ಸರ್ವೀಸ ಆತು. ಗುಜರಾಥ-ಮಹಾರಾಷ್ಟ್ರದಾಗ ಭಾಳ ಕಡೇ ದಿನಾ ಕಳದೆ. ಇಂಥಾ ಅರ್ಜೀ, ಇಂಥಾ 'ಅಲಿಗೇಶನ್' ಯಾರೂ ಮಾಡಿದ್ದಿಲ್ಲಾ. ಈ ಟಾಪೂದಾಗ ಬಂದು ವರ್ಷ-ಎರಡ ವರ್ಷ ಆಗೂದರಾಗs, ಈ ಶುಕ್ಲಕಾಷ್ಠ ಬೆನ್ನ ಹತ್ತ್ಯು. ನಮ್ಮ ಹಿರ್‍ಯಾರ ಮಾತೃಭೂಮೀ, ಅಷ್ಟ ಎಳತ ಇರೂದೇ. ಉರ್ವರಿತ ನೌಕರೀ-ಜೀವನಾ ಇಲ್ಲೇ

ಹಾಕೂಣಂತ ಬಂದರ, ಇಲ್ಲದ ಹಗರಣ ಕೊಳ್ಳಿಗೆ ಬಿತ್ತು. ಇದರ 'ಕಾಗ್ನಿಸೆನ್ಸ್'ನೂ ಗವ್ಹರ್ನಮೆಂಟದವರು ತಗೊಂಬೂದಿಲ್ಲಾ. ಆ ಮಾತ ಬ್ಯಾರೇ. ಆದರ ಮನಸ್ಯಾ ಅಂದ ಮ್ಯಾಲs, 'ಫೀಲಿಂಗ್ಸ್' ಇರತಾವ. ಭಾವನಾ ಇರತದ. 'ಕ್ಯಾರೆಕ್ಟರ್' ಅನ್ನೂದು ಇರತದ. ಅದಕ್ಕ ವಿನಾಕಾರಣ ಕಲಂಕ ಬಂದರ ಸಂಕಟಾಗತದ. ದರಜ ಇಲ್ಲದೇ ಇರೂ ಅವರ ಧಾಡಸೀತನಾ ನನ್ನಲ್ಲೆ ಇಲ್ಲಾ. ಅದಕೇ ಈ ಅರ್ಜೀ ಓದಿ ಕಳವಳ ಆಗೇದ. ಅಂಥಾ ಆಗದವರರೇ ಯಾರ ಇರಬೇಕು? ಗುಂಭ ಅದs ಎಲ್ಲಾ."

"ಗುಂಭ ಅದs ಅನೂದಕಿಂತಾ, 'ಸ್ಟಂಟ್' ಅದs ಅನ್ನೂದು ಯೋಗ್ಯ ಕಾಣಸ್ತದ ಸಾಹೇಬರs. ಅರ್ಜೀ ಒಳಗ ಎಲ್ಲಾ ಮೋಗಮ್‌ಸs ಅದ. ಬರೇ ರೊಕ್ಕಾ ತಿಂತಾರ ಸಾಹೇಬರು ಅಂತ ಬರದಿದ್ದರ, ಅಷ್ಟ 'ಇಫೆಕ್ಟಿವ್' ಆಗತಿದ್ದಿಲ್ಲಾ. ಕಾಣೀ ಕಟ್ಟಿ ವಜನ ಸರೀ ಮಾಡೂಣಂತ, ಇನ್ನೊಂದು ಮಾತು ಸೇರಿಸಿದರು. ವೈಯುಕ್ತಿಕ ಷೋಕೀ-ಲಂಪಟತನಾ ಬೇಕಾಯದೇಶೀರ ಅಂತ, ಸರಕಾರದವರೇನು ಹುಕುಮು ಹೊರಡಸಿಲ್ಲಾ. ಆದ್ಯಾಕs 'ಪ್ರಾಸ್ಟಿಟ್ಯೂಶನ್' 'ಪ್ರಾಹಿಬಿಟ್' ಆದರೂ ಗಂಡಸು, 'ಉಮನಾಯಿಜರ್' ಆಗಿ ಉಳಿಯೂವವನs. ಈ ಮಾತು, ಸರ ಕಾರಕ್ಕೂ ಮಾನ್ಯ ಅದs. ಸಾರ್ವಜನಿಕರಿಗೂ ಮಾನ್ಯ ಅದs. ಆದರ ನಿಮಗ ಅದರ ಲೇಪನs ಇಲ್ಲಂತ, ಅಂತರಾತ್ಮನ ಸಾಕ್ಷೀ ಅದs. ಅಂದ ಮ್ಯಾಲ ನೀವು ಅದನ್ನ 'ಲೈಟಲೀ' ತಗೊಂಬೂದು ಠೀಕ ಅನಸ್ತದ. ಇಷ್ಟೂ ಮೀರೀನೂ ಎಸ್.ಈ. ಸಾಹೇಬರು, ಈ 'ಅಲಿಗೇಶನ್'ನ್ನಕ್ಕ ನಿಮ್ಮದೇನು ಉತ್ತರಾ ಅಂತ ಕೇಳಿದರ, ಅಗದೀ ಧೈರ್ಯಾದಿಂದ ಹೇಳಿಬಿಡಿರಿ. ಜರೂರ ಅನಿಸಿದರ ನಮ್ಮ ಕುಟುಂಬದ ಸಾಕ್ಷೀ ತಗೋಬಹುದು. ಗಂಡನ ಶೀಲದ ವಿಷಯಾ, ಹೊರಗಿನವರಕಿಂತಾ, ಕೈ ಹಿಡಿದ ಹೇಣತಿಗೆ ಹೆಚ್ಚ ಅವಗತ ಇರತsದಂತ. ಇಂಗ್ಲೀಷ್ ಸಾಹೇಬರಿದ್ದಾರ ಎಸ್.ಈ. 'Perfectly right you are' ಅಂತs, ತಮ್ಮ ಮಡ್ಡಮ್ಮಸಾಹೇಬರ ಕಡೇ ನೋಡತಾರ. ಒಂದ ಕೆಲಸಾ ಮಾತ್ರ ಜರೂರ ಮಾಡರಿ. ಶ್ಯಾಮರಾಯರಿಂದ ಮೊದಲ ಮಾಡಿಕೊಂಡು, ಎಲ್ಲಾ ಕಂತ್ರಾಟದಾರ ಕಡಿಂದ ಲೇಖೀ ಜವಾಬ ಮಾತ್ರ ತಗೋ ಅಂತ ಹೇಳರಿ ಎಸ್.ಈ. ಸಾಹೇಬರಿಗೆ. ಅದರ ಫಾಯದೇ ಆಗನೇ ಹೋಗೂದಿಲ್ಲಾ. ಕೈಫಿಯತ್ತ ಕೊಡೂ ಮುಂದ ಯಾವನರs ಹಿಂದ-ಮುಂದ ನೋಡಿದಾ ಅಂದರ 'ಮಾರ್ಕ್'ಮಾಡಿ ಇಡಬೇಕು. ಪ್ರಸಂಗ ನೋಡಿ ಚಂಡ ಹಿಡದು

ವಬಾಸಬೇಕು. ಆಗಳೇ ನೀವೇ ಅಂದ್ರ್ಯಲಾ 'ಯತ್ರ ಯತ್ರ ದೂಮಃ ತತ್ರ ತತ್ರ ವಹ್ನಿಃ' ಅಂತs. ಆಗದೀ ಖರೇ ಅದು. ಅರ್ಜೀ ಮಾಡಿದ ಇಸಮನೇ, ಹಸೀ ಕೊರಡಿನ್ಹಾಂಗ ಹೊಗೀ ಹಾಯಸ್ತದನೂದು. ಬಣ್ಣ ಹೊರಬೀಳಲಿಕ್ಕೆ ವ್ಯಾಳ್ಯಾ ಒಡಿಯೂದಿಲ್ಲಾ."

ಸಾಹೇಬರ ಅರ್ಜಿಯು ಸಿಕಾಲೆಯ ವಿಷಯು ನನ್ನ ಕುತ್ಯಾಗಿರಲಿಲ್ಲ. ಈ ಕಂತ್ರಾಟ ಕಚೇರಿಯ ದರಬಾರಿನ ಭಾನಗಡಿಯದಾಗಿತ್ತು. ಎಸ್.ಈ. ಸಾಹೇಬರು ಸಾರಾಸಾರ ವಿಚಾರ ಮಾಡಿ, ಆ ಬಗ್ಗೆ ಸರಕಾರಕ್ಕೆ ಉತ್ತರ ಕೊಡುವದನ್ನು ಅವಲಂಬಿಸಿತ್ತು. ಅಷ್ಟು ದೂರ ಕೈ ಚಾಚುವ ಯೋಗ್ಯತೆ ನನ್ನದಾಗಿರಲಿಲ್ಲ. ಆದರೆ ಶ್ಯಾಮರಾಯ, ತನ್ನ ಮಿತ್ರರಿಗೆ ಬರೆದ ಕಾಗದದ ಹೆಗಲನ್ನೇರಿ, ನನ್ನ ಎತ್ತರವನ್ನೂ ಹೆಚ್ಚಿಸಿಕೊಂಡು, ಮುಟ್ಟದಲ್ಲೂ ಕೈ ಚಾಚುವ ಸಾಹಸ ಮಾಡಬಹುದಾಗಿತ್ತು. ಅದಕ್ಕೆ ಇನ್ನೂ ಕಾಲ ಹಣ್ಣಾಗಿರಲಿಲ್ಲ. ಶ್ಯಾಮರಾಯನ ಬೇಟೆ ನನ್ನ ನೆಗೆತದ ಅಳವಿನಲ್ಲಿ ಇನ್ನೂ ಬಂದಿರಲಿಲ್ಲ.

ಇದೆಲ್ಲವನ್ನೂ ಗುಣಿಸಿ. ನಾನು ಸಾಹೇಬರಿಗೆ ಸೂಚಿಸಿದೆ:

"ಇನ್ನ ಮುಂದ. ನೀವೂ ಅಷ್ಟು 'ಕಾಶೆಸ್‌ಲೀ' ಇರೂದು ನೆಟ್ಟಗ. ಪಂಕ್ತೀ ಪ್ರಪಂಚ ಮಾಡದೇ ಎಲ್ಲಾ ಕಂತ್ರಾಟದಾರರಿಗೆ ತಿಳಿಸಿ ಇಡರಿ. ಏನರs ಕೆಲಸ-ಭೊಗಸಿ ಇದ್ದರ, ಅದನ್ನ ಆಫೀಸಿನ್ಯಾಗೇ ಬಗೀಹರಸರಿ ಅಂತs. ಅವರು ಬಂಗಲೇಕ ಹಾಕೂ ವಾರೀ ಬಂದ ಮಾಡಸರಿ. ಇವರು ಶ್ಯಾಮರಾಯರು. ಭಾರೀ ಇಸಮಾ, ಹ್ಯಾಂಗ ಹೇಳೂದು ಅಂತs ಅನಮಾನಸಬ್ಯಾಡರಿ. ಶ್ಯಾಮರಾಯರು ಬಂಗಲೇಕ ಬರಬಾರದಂತ ನನ್ನ ಅಂಬೋಣ ಅಲ್ಲಾ. ಅವರ ವಾರೀ ನಿರಾಬಂಧ ನಡೀತು. ಉಳವವರಿಗೆ ಅದರ 'ಚಾನ್ಸ್' ಸಿಗದಿದ್ದರ ಸುಮ್ಮನೇ ಮನಸ ಕೆಡಿಸಿಗೊಂಡ್ಹಾಂಗ. ಎಲ್ಲಾರಿಗೂ ಒಂದೇ ಕಾಯಿದೇ ಲಾಗೂ ಮಾಡೂದು ಠೀಕಾ. ನೋಡರಿ. ನನ್ನ ಮಾತು ಪಟಾಸೂ ಹಾಂಗ ಇದ್ದರ ವಿಚಾರ ಮಾಡರಿ. ನನಗ ನಿಮ್ಮ 'ಆಫೀಸಿಯಲ್' ಡಾವ್‌ಪೇಚಿನ ಅನುಭವ ಕಡಿಮಿ. ಏನೋ 'ಇನ್‌ಫರನ್ಸ್' ತಗದು ಅಷ್ಟ ಹೇಳಿನಿ. ಇದs ಹೊತ್ತಿನ್ಯಾಗ ನನ್ನ ಅರ್ಜೀ ಅಷ್ಟು ಸಿಕಾಲೇದಾಗ ಹೊರಟರ ಠೀಕ ಆಗತದ. 'ಇಂಟರ್‌ವ್ಯೂ'ದ ವ್ಯಾಳ್ಯಾದಾಗ, ಎಸ್.ಈ. ಅಂದಿದ್ರು: ನಿನ್ನ 'ಕ್ಯಾಂಪ್ ಕ್ಲಾರ್ಕ್' ಅಂತs ತಗೋತೀನೀ ಅಂತs. ಎಸ್.ಈ. ಅವರ ಖಾಸಗೀ ಸಚಿವ ಆದೇ ಅಂದರ ಇಂಥಾ ಅರ್ಜೀಗೆ ಪರಭಾರೇನs ನೀರ ಹಚ್ಚತೀನಿ."

"ದಾದಲ್ಯಾ, ಅವರ ಕಾಳಜೀ ಬಿಡೂ. ಇಂದೇ ಎಸ್.ಈ. ಅವರಿಗೆ ಜರೂರ ಭೆಟ್ಟಿ ಆಗಬೇಕಾಗೇದ. ಆಗ ಇದರ ಪ್ರಸ್ತಾಪ ಮಾಡಿ, 'ಅಪಾಯಿಂಟ್‌ಮೆಂಟ್'ದ ಆರ್ಡರ್ ತಗಸ್ತೇನಿ. 'ಹೆಡ್‌ಕ್ಲಾರ್ಕ'ಗಂತೂ ಹೇಳೇ ಇಟ್ಟೇನಿ. ಎಂ.ಎ.ಕ್ಕ ಬ್ಯಾರೇ ಅಭ್ಯಾಸ ಮಾಡಬೇಕು. ಭಾಳ ಥಾಪತೀ ಆದೀತಂತ ನಾನೇ ಅಲಗರ್ಜೀತನಾ ಮಾಡಿದ್ದೆ. ದಾದಲ್ಯಾ, ನೀ, ಈ 'ಅಪಾಯಿಂಟ್‌ಮೆಂಟ್'ದ ನಾದಸs ಬಿಡು. ಎಂ.ಎ. ಮುಗಸು. ಎಷ್ಟ ನವಕರೀ ಬೇಕ ನಿನಗ? ಖರೇ ಅಂದರ ಇದರಾಗ ನಿನಗ ಏನೂ ಫಾಯದೇನs ಇಲ್ಲಾ. ನಿನಗ ಯಾತರದರ ಅಡಚಣೀ ಅನಸ್ತಿದ್ದರ ಹೇಳು. ನಾ ಸಹಾಯ ಮಾಡತೇನಿ. ನನಗ, ಶಕೂ ಹೆಚ್ಚು, ನೀ ಕಡಿಮಿ ಅನೂ ಭಾವನಾ ಇಲ್ಲಾ. ಅಂಥಾ ಭೇದ ನಾ ಎಂದೂ ಮಾಡಲಿಕ್ಕಿಲ್ಲಾ."

"ಅಂಥಾ ಭೇದಾ ನೀವು ಎಂದೂ ಮಾಡೂದಿಲ್ಲಾ ಅನೂ ಖಾತ್ರೀ ಅದ ನನಗ. ನೂರ ರೂಪಾಯಿ, ಎರಡ ಭಾಂಡು. ನೀವು ಕೊಟ್ಟ ದಿನಾನs, ನಾನು, ನಿಮ್ಮನ್ನ, ರಂಗಕ್ಕವರನ, ಪಾರ್ವತೀ-ಪರಮೇಶ್ವರ ಅಂತ ಭಾವಿಸಿಕೊಂಡೇನಿ. ನೀವು ಹೂಂ ಅಂದದ್ದಕ್ಕ ನನ್ನ 'ನಾ' ಇಲ್ಲಾ. ಯಾಕೋ, ಏನೋ ಈ ವರುಷ ಇಲ್ಲೇ ಇದ್ದು ಎಂ.ಎ. ಮುಗಿಸಬೇಕು, ನವಕರಿನೂ ಮಾಡಬೇಕು, ಅನ್ನೂ ಹವ್ಯಾಸ ಹೊಕ್ಕsದ. ಅಷ್ಟರ ದಶಿಂದ ನಾಕೆಂಟ ತಿಂಗಳ ಶ್ರಮಾ ಬಟ್ಟು 'ಶಾರ್ಟ್-ಹ್ಯಾಂಡ್ ಟೈಪಿಂಗ್'ದ ಪ್ರ್ಯಾಕ್ಟೀಸ್ ಮಾಡೇನಿ. "Everything happens for good" ಅನೂ ಮಾತಿನ್ಯಾಗ ನನಗ ವಿಶ್ವಾಸ ಅದs. ಅದೇ ಕಾರಣದಿಂದ, ನಾ ನವಕರೀ ಮಾಡೂದರಾಗೂ ನನ್ನ ಕಲ್ಯಾಣ ಇದ್ದೀತು – ಆದೀತು ಅನೂ ಭರೋಸ ಅದs. ಈ 'ಅಪಾಯಿಂಟ್‌ಮೆಂಟ್'ದಶಿಂದ ನಿಮ್ಮ ಜೆನ್ನೇ ಹತ್ತೂದು ಠೀಕ ಅಲ್ಲಂತs ಸುಮ್ಮ ಇದ್ದೆ. ಚಿಲ್ಲರ ಮಾತಿಗೆ ನಿಮ್ಮ ವಜನ ಖರ್ಚೀ ಬೀಳಬಾರದು."

"'ಆಲ್‌ರೈಟ್' ದಾದಲ್ಯಾ. ಇಂದೇ ನಿನ್ನ ನೇಮಣೂಕೀ ಆರ್ಡರ್ ಹೊಂಟಿ ತಂತ ತಿಳೀ. ಹ್ಯಾಂಗೂ ಈ ಯು.ಓ.ಆರ್.ದ್ದಶಿಂದ ಎಸ್.ಈ. ಸಾಹೇಬರ ಬಂಗಲೆಕ್ಕ ಹೋಗೂದು ಅದs. ನಿನ್ನ ಆರ್ಡರ್ ಅಲ್ಲೇ ತಗಿಸಿ, ಆಫೀಸಿಗೆ ಕಳಸೂ ಹಾಂಗ ಮಾಡತೇನಿ. ನಾಳಿನಿಂದ ನಿನಗೂ "Your obedient servant" ಗಾಯತ್ರೀ ಜಪಾ ಸುರೂ ಆತು."

ಮರುದಿನ ಸಂಜೆಗೇ ನನ್ನ ನೇಮಣೂಕಿಯ ಆಜ್ಞೆ ನನ್ನ ಕೈಗೆ ಬಂದಿತು. 'ಅರಾವ್ಲ್ ರಿಪೋರ್ಟ್'ನ್ನು ಸಾದರಪಡಿಸಿದೆ. ಬೆಳಗಿನ ಎಂಟರಿಂದ ಎಸ್.ಈ.

ಸಾಹೇಬರ ಬಂಗಲೆಯ ವಾರೀ ಸುರುವು ಮಾಡಬೇಕೆಂದು ನಮ್ಮ ಹೆಡ್‌ಕ್ಲಾರ್ಕ ಸೂಚಿಸಿದ.

ದಾದಲ್ಯಾ ಕಾರಕೂನ ತಳಿಗೆ ಶೋಭಿಸುವ ಧರ್ತಿಯಲ್ಲಿ. ಅಂದೇ ಪರಕ-ಜಂಪ ಮಾರವಾಡಿಯ ಅಂಗಡಿಯಲ್ಲಿ ಉದ್ದರಿ ಲೆಕ್ಕ ಬರೆಸಿ, ಎರಡು ಡಕ್ ಪ್ಯಾಂಟಿನ ಅರಿವೆ ಖರೀದಿ ಮಾಡಿದ. ಶರ್ಟ ಮಜಬೂತ ಇದ್ದವು. ಸದ್ಯ ಅದರ ಅಗತ್ಯವಿಲ್ಲ ವೆಂದ. ಸ್ಯಾಂಡಲ್ಸದ ಮಾಪು ಕೊಟ್ಟು ಬಂದ. ಸಾಹೇಬರಲ್ಲಿ ಬಿದ್ದ, ಖಾಲೀ ಬಿಸ್ಕೀಟಿನ ಡಬ್ಬಿಯಲ್ಲಿ ದಾಡೀ ಸಾಮಾನು ಸಜ್ಜು ಮಾಡಿದ, ಅವನ ಈ ಜಯ್ಯತ್ತ ತಯಾರಿ ನಡೆದಾಗ, ಕು. ಚಿ. ಶಕೂ ಜೋಡಿಗೇ ಇದ್ದಳು. ಅಂದು ರಾತ್ರಿ ಹನ್ನೊಂದರ ವರೆಗೆ ಅವಳ ಕೋಣೆಯಲ್ಲಿ ದೀಪವಿತ್ತು. ಅಭ್ಯಾಸ ಜೋರಿನಲ್ಲಿರ ಬೇಕೆಂದು ನನ್ನ ಭಾವನೆಯಾಗಿತ್ತು. ಆದರೆ ಮರುದಿನ ಅವಳು. ಪುಣೆಯಲ್ಲಿಯ ತಮ್ಮ 'ಅವರಿಗೆ' – ದಾದಲ್ಯಾನ ಸಿಂಗಾರವರ್ಣನೆಯ ರಸಮಯ ಚಿತ್ರವನ್ನು ರೇಜಿಸಿದ ಪತ್ರ ಓದಲಿಕ್ಕೆ ಸಿಕ್ಕಿತು. ಆರನೇ ಎತ್ತೇ 'ರೀ-ಎಕ್ಸಾಮಿನೇಶನ್'ದಲ್ಲಿ ದಾದಲ್ಯಾ ತಿದ್ದಿ-ತೀಡಿದ ಮೂರ್ತಿ, ತನ್ನ ಹುಳಿ-ಒಗರು, ಬರೇ ಸಾಬೂತ ಇಟ್ಟಿಲ್ಲ – ಬೆಳೆಸಿಕೊಂಡು ಮಹಾ ಹರೇಮಿ ಆಗಿದೆಯೆಂದು ಖಾತ್ರೀ ಆಯಿತು. ಪತ್ರಕ್ಕೆ ನಾನೊಂದು ತಾ.ಕ. ಜೋಡಿಸಿದೆ:

"ಸುರ್ಯಾ ಮಗನs. ನಿನ್ನ 'ಲಾರ್ಕ' ಬರೇ ಮಂಜು-ಗುಂಜಾರವ ಅಷ್ಟs ಮಾಡೂದಿಲ್ಲಾ. ಕಾ:ವ್ ಕಾ:ವ್‌ನೂ ಅಂತ್ಯದ. ನಮ್ಮ ಸಿಂಗಾರ ವರ್ಣನಾದ ಭಾಗನs ಈ ಕಾ:ವ್ ಕಾ:ವ್! ಅಖಂಡ ಎರಡ ತಾಸು, ಈ ಸಿಂಗಾರ ಪ್ರಸಾಧನ ಖರೀದಿಗೆ, ನಿನ್ನ ಗಿರಾಕಿ ನನ್ನ ಜೋಡೀ ಅಡ್ಡಾಡ್ಯೇದ. "evening in Paris, morning in France" ಈ.ಯು.ಡೀ. ಕೋಲನ್. ಇದೇನ ಕಂತ್ರಾಟಂತ. 'ಎನ್‌ಸೈಕ್ಲೋಪಿಡಿಯಾ ಬ್ರಿಟಾನಿಕಾ' ನೋಡಾಂವ ಇದ್ದೆ. ಚಿ. ಕು. ಸೌ. ಕಾಂ. ಶಕುಂತಲಾ ಪಂತ ಅವರು ಪ್ಯಾರಿಸ್ ಸಂಧ್ಯಾ, ಫ್ರಾನ್ಸ ಪ್ರಭಾತ. ಎರಡೂವರ ಸಮ್ಯಗ್‌ದರ್ಶನಾ ಫೋರವಾಲನ ಅಂಗಡ್ಯಾಗ ಮಾಡಿಸಿ ಪುಣ್ಯಭಾಗೀ ಆದರು. ದಾದಲ್ಯಾನ ಅನಂತ ಧನ್ಯವಾದಕ್ಕ ಪಾತ್ರ ಆದರು. ಸುರ್ಯಾ, ಇಸಮು ಭಾರೀ ಇರಸಾಲ ಹಾಂs. 'ಸಮಾಲ್ನೇಕೂ ಮುಷ್ಕಿಲ್ ಪಡೇಗಾ. ಜಯ್ಯತ್ ತಯಾರೀ ಕರೋ.'"

ನಾನು ಬರೆದ ತಾ. ಕ. ದ. ಮೇಲೆ ಕು. ಚಿ. ಶಕೂ ಒಂದು ಕೆಂಪ್ರ ಗೆರೆ

ಎಳೆದು, ಅದರ ಬುಡಕ್ಕೆ ಬಾಣ-ಚಿಹ್ನ ಮಾಡಿ, ಕೆಂಪು ಮಸಿಯಲ್ಲಿ ಪತ್ರದಲ್ಲಿ ಬರೆಯಲಿಕ್ಕೆ ಮರೆತು ಉಳಿದ ಬಾತಮೀ:

"ದಾದಲ್ಯಾ ಪ್ಯಾಂಟ್-ಸ್ಯಾಂಡಲ್ಸದಲ್ಲಿ ಅವತರಿಸಿದರೆ, 'ಸ್ಪೆನ್ಸರ್ ರಿಫ್ರೆಶ್-ಮೆಂಟ್'ದಲ್ಲಿಯ 'ಸರ್ವ್ಹರ್'ನಂತೆ ಕಾಣಿಸಬಹುದೆಂದು ನನ್ನ ಖಚಿತ ಅಂದಾಜು.

"ಕಿಂತು ಯಹ ಬಾತಸೇ ಆಪ್ ಸಹಮತ ಹೈ ಕರಕೂ ಆಶಾ ಕರತೇ ಹೂಂ."

ಎಂದು ಇನ್ನೊಂದು ತಾ. ಕ. ಜೋಡಿಸಿದಳು.

ನನ್ನ, ಕು. ಚಿ. ಶಕೂನ ಹಿಂದೀ, ಸಾಹೇಬರ ಹೆಡ್ ಪ್ಯೂನ್ ಜಾಂಬುವಂತ ಜಮಾಲ್‌ಸಾಬ್ ದಾವಲ್‌ಸಾಬ ದಡ್ಡೀಕರನಿಂದ ಪ್ರಭಾವಿತವಾಗಿತ್ತು.

"ಗುರುವೇ ನಿನಗಿರಲಿ ಶುಭ-ಮಂಗಳಂ, ಅಖಂಡ ಪಿಂಚಣಿ ಭೋಗಭಾಗ್ಯಂ,
ಹರಹರಾ ಶ್ರೀಚೆನ್ನಸೋಮೇಶ್ವರಾ !"

ಜಮಾಲ್‌ಸಾಬರು ಬಂಗಲೆಗೆ ಬಂದಾಗಲೆಲ್ಲ ನಾನು, ಕು. ಚಿ. ಶಕೂ, ಈ ಸ್ವರಚಿತ ಪರಾಕು ಹೇಳಿ ಗುರುಪೀಠಕ್ಕೆ ಆದಾಬ-ಅಲೇಕುಂ ಸಲಾಮ್ ಅರ್ಪಿಸುತ್ತಿದ್ದೆವು.

೦ ೦ ೦ ೦

ದಾದಲ್ಯಾ ಈ ನವಕರಿಯ ಬೆನ್ನು ಹತ್ತಲಿಕ್ಕೆ ಇನ್ನೂ ಒಂದು ಸಬಲ ಕಾರಣ ವಿತ್ತು. ಅದೆಂದರೆ ಅವನ ವಯಸ್ಸಿನ ಮರ್ಯಾದೆ. ಅವನು ಈಗಾಗಲೇ ಮುಂವರಿದ ಜಮಾತಿಯವರಿಗೆ ಸರಕಾರದವರು ನಿರ್ದಿಷ್ಟ ಪಡಿಸಿದ ವಯೋಮಾನದ ಮರ್ಯಾದೆಯ ಸೀಮೋಲ್ಲಂಘನ ಮಾಡಿ ಎರಡು ವರುಷವಾಗಿತ್ತು. ಅನ್ಯ ಖಾತೆಗಳಲ್ಲಿ ಈ ವಯೋಮಾನದ ಕಿಟಿಕಿಟಿ ಬಹಳ. ಸಾರ್ವಜನಿಕ ಬಾಂಧ-ಕಾಮ್ (ಪಬ್ಲಿಕ್ ವರ್ಕ್ಸ್) ಖಾತೆಯಲ್ಲಿ ಅಡಗಾಣಿಸಿದಾಗ ಅನುಕೂಲ, ಬೇಡವೆನಿಸಿದಾಗ ಬ್ರಹ್ಮ ನಿಗೂ ಅಳಿಸಲು ಬರದಷ್ಟು ಕಠಿಣ ಮಾಡಲು ನಿಯಮಗಳು ನಿರ್ಮಿತವಾದಂತಿವೆ. ಇಲ್ಲಿ 'ಸೂಟೆಬಲ್ ಕ್ಯಾಂಡಿಡೇಟ್ಸ್'ರ ಅಗತ್ಯ ಅನಗತ್ಯ, ವಯೋಮಾನ, ಪದವಿ, ಪರೀಕ್ಷೆ ಏನನ್ನೂ ಅವಲಂಬಿಸಿರುವದಿಲ್ಲ. 'ಆ್ಯಜ ಏ ಟೆಂಪ್ರರಿ ಮೇಜರ್' ಎಂದು ಯಾರನ್ನಾದರೂ ನೇಮಣೂಕಿ ಮಾಡಿದರೆ, ಆ ಪ್ರಾಣಿ ಪೆನ್‌ಶನ್‌ದ ಘಾಜೆಗಟ್ಟಿ ಮುಟ್ಟಿದರೂ, ಕಾಯಂ ಆಗುವ ಆಶೆಯನ್ನು ಹಿಡಿಯಬೇಕಾದುದಿಲ್ಲ. ಅಷ್ಟರಲ್ಲಿ

ಟರ್ ಎಂದರೆ ಅವನೂ ಗೆದ್ದ; ಅವನ ನೇಮಣೂಕಿ ಮಾಡಿದ ಖಾತೆಯೂ ಗೆದ್ದಿತು. ಇಲ್ಲ – ಅವನು ತಾತ್ಪೂರ್ತಿಕನೆಂದೇ ಪೆನ್‌ಶನ್ ಪಡೆಯಬೇಕು – ಆ ಪೆನ್‌ಶನ್ನಿನ ಉಪಭೋಗ ನಡೆಸಿದಾಗಲೇ ಒಂದು ದಿನ "ಹರೇ ರಾಮ್" ಎನ್ನಬೇಕು.

ಇಪ್ಪತ್ತೇಳನೇ ವರ್ಷದಲ್ಲಿ ಪದಾರ್ಪಣ ಮಾಡಿದ ನನ್ನ ನೇಮಣೂಕಿಯೂ "in view of the non-availability of suitable candidates" ಎಂದು ವಿಶೇಷಣ-ವಿಶೇಷ್ಯ ಹಚ್ಚಿಕೊಂಡೇ ಹೊರಬಂದಿತ್ತು. ಇದರ ಯಾವ ಸುಖ-ದುಃಖವೂ ನನ್ನನ್ನು ಬಾಧಿಸುವ ಭಾನಗಡೀ ಇರಲಿಲ್ಲ. ಎಸ್.ಈ.ಯ ಕೃಪಾ ಕಟಾಕ್ಷ ಅಖಂಡ ರಕ್ಷೆಯಂತಿದ್ದರೆ ನಾನು. ಸರ್ಕಲ್ ಆಫೀಸಿನ ಎರಡನೇ ಮಜಲಿನಿಂದ, ಚೀಫ ಇಂಜನಿಯರರ ಕಟ್ಟಕಡೆಯ ಮಜಲಿಗೆ – ಪಾವಟಿಗೆ, ಲಿಫ್ಟ ಯಾವುದರ ಅಗತ್ಯವೂ ಇಲ್ಲದೆ – ಚಟ್ಟನೆ ಉಡ್ಡಾಣ ಮಾಡುವ ಗ್ಯಾರಂಟೀ ಇತ್ತು. ಬರೇ ಫಾಯನಲ್-ಮ್ಯಾಟ್ರಿಕ್ ಆದವರು 'ಅಸಿಸ್ಟೆಂಟ್ ಸೆಕ್ರೆಟರಿ'ಯ ಜಾಗ ಭೂಷಿಸುತ್ತಿದ್ದರು – ನಾನು ಅವರಿಗಿಂತ ಹತ್ತು ಪಾಲು ಮೇಲು. ಬಿ.ಏ. ಕ್ಲಾಸ್ ಇತ್ತು. ಎಂ.ಏ. ಕ್ಲಾಸು ಬರುವ ಧೈರ್ಯವಿತ್ತು.

ದಾದಲ್ಯಾ ಯಾವುದೋ ದೂರಾಲೋಚನೆಯಿಂದ ತನ್ನ ಬೇಳೆ ಬೇಯಿಸಿಕೊಳ್ಳುವ ವಿಚಾರ ಮಾಡಿ, ಈ ನವಕರಿಗೆ ಅಂಟಿದ.

ಎಸ್.ಈ. ಸಾಹೇಬರ ಕಚೇರಿಯಲ್ಲಿ ದಾದಲ್ಯಾ, ಕೇವಲ ಒಂದೇ ಒಂದು ವರ್ಷ ನವಕರಿ ಮಾಡಿದ. ಅವರ ಕ್ಯಾಂಪ ಇದ್ದಲ್ಲೆಲ್ಲ ಅವರನ್ನು ನೆರಳಿನಂತೆ ಅನುಸರಿಸಿದ. ಘನ ಪಿಂಡ ಪೋಷಣೆ ಮಾಡಿಕೊಂಡ. ಇಲ್ಲಿಯ ವರೆಗೆ ದಾದಲ್ಯಾ. ದೇವರನ್ನು ತೊಳೆದು ತೀರ್ಥದ 'ಆಲ್‌ಕೇಮೀ' ಪ್ರಾಶನ ಮಾಡಿದ್ದ. ಆದರೆ ಒಂದು ವರ್ಷದ ಅವಧಿಯಲ್ಲಿ ಇಂಗ್ಲಂಡ, ಸ್ಕಾಟಲಂಡಿನಿಂದ ರಫ್ತಾಗಿ ಬಂದ ಸೀಲಬಂದ್ ಬಾಟಲಿಯಲ್ಲಿಯ ತೀರ್ಥದ ಸವಯ ಮಾಡಿಕೊಂಡ. ಪತ್ರಾವಳೀ. ಬಾಳೀಎಲೆಯಲ್ಲಿ ಹಿಂದೆ ಎಂದೂ ಉಣ್ಣದವರಂತೆ, ಪ್ಲೇಟ್-ಡಿಶ್ ಪರಿಚಯ ಮಾಡಿಕೊಂಡ. ಒಂದು ಕೈಯಲ್ಲಿ ಗಂಟೆ, ಇನ್ನೊಂದು ಕೈಯಲ್ಲಿ ಧೂಪಾರತಿ. ಮಂಗಳಾರತಿ ಎತ್ತಿ ಲೀಲಾಜಾಲವಾಗಿ 'ದೀಪಂ ಗೃಹಾಣ ದೇವೇಶ' ಹೇಳಿದನು. ಇಂದು ಕಾಟಾ, ಚಮಚಾ, ಚೂರಿಗಳನ್ನು ಸರಾಗವಾಗಿ ನಡೆಸುವದರಲ್ಲಿ ಪಟಾಯಿತನಾದ. ತೀರ್ಥ-ಪ್ರಸಾದದಲ್ಲಿ ವಿಧಿ-ನಿಷೇಧದ ಪಂಕ್ತಿ-ಪ್ರಪಂಚ ಮಾಡಲಿಲ್ಲ. ಘೃತ-ಹೂರಣದಿಂದ ಬಂದ ಜಿಡ್ಡನ್ನು, ಮಬ್ಬನ್ನು. ಈ ಇಂಗ್ಲಿಷ್ ತೀರ್ಥದಿಂದ ಸಾಫ್ ತೊಳೆದನು.

ಎಸ್.ಈ. ಸಾಹೇಬರ ಆ ಪ್ರಸಾದದಿಂದ, ಅಂಗ-ರಂಗದಲ್ಲಿ ಅತೋನಾತ ಬದಲಾದ. ಸಾಹೇಬರು ದಾದಲ್ಯಾನಿಗೆ ನವಕರಿ ಮಾಸಿಸಿತೆಂದರು. ನಡುವೆ ಒಮ್ಮೆ ಊರಿಗೆ ಹೋದಾಗ. ನಡುಮನೆಯಲ್ಲಿ ಕುಳಿತ ಗೋವಿಂದಭಟ್ಟ. ನಾನು ತಲೆಬಾಗಿಲಲ್ಲಿ ಬಂದು ಘುತ್ತೆಂದು ನಿಂತಾಗ ಅಪ್ಪನಿಗೆ "ಯಾರೋ ಹೊಸಬರು ಬಂಧಾಂಗ ಕಾಣತದ ನೋಡು? ಯಾರಂತ ಕೇಳು?" ಎಂದು ಹೇಳಿದ್ದ. ನಾನು ಬಾಗಿ ನಮಸ್ಕರಿಸಿದಾಗ "ದಾದಲ್ಯಾ, ನೀ...ನೀ...ನೀನs" ಎಂದು ಸುಖಾಶ್ರು ಮಿಡಿದಿದ್ದ.

ಹಿಂದೆ ನವಕರಿಯಲ್ಲಿದ್ದಾಗ, ಶ್ಯಾಮರಾಯ. ಸಂಬಳದ – ಗೋಪಾಳದ ಕುಬೇರ ಚೀಲವನ್ನು ಕಾಕಾ ಅವರ ಮುಂದೆ ಬರಿದುಮಾಡುತ್ತಿದ್ದ. ಅದನ್ನು ಕೇಳಿ ಅರಿತ ಗೋವಿಂದಭಟ್ಟನಿಗೆ, ಈಗ ತನ್ನ ಚಿರಂಜೀವನೂ, ಬಂದಾಗೊಮ್ಮೆ ರಜತ ರೂಪ್ಯಕಗಳ – ಅರ್ಥಾತ್ ಮೀಸಲು ಮುರಿಯದೆ ಮಡಗಿಸಿದ ತಿಂಗಳ ಪಗಾರ, ಛತ್ತೆ ಬಿಲ್ಲಿನ ರೊಕ್ಕದ ದರ್ಶನಲಾಭವನ್ನು ಮಾಡಿಸುವ ಯೋಗ ಮಾಗಿತ್ತು. ಗೋವಿಂದಭಟ್ಟ ಆನಂದಾಶ್ರುವಿನಿಂದ, ಪ್ರೀತಿ-ತೀರ್ಥದಿಂದ ಮಗನ ಗಳಿಕೆಯನ್ನು ಪವಿತ್ರೀಕರಿಸಿ ಸ್ವೀಕರಿಸುತ್ತಿದ್ದ. ಅವನ ಗಳಿಕೆ – ಅದು ಅವನ ಲಗ್ನದ ಹೊತ್ತಿಗೇ ಅನುಕೂಲವಾಗಲಿ ಎಂದು ರಾಚಪ್ಪನ ಪೇಢಿಯಲ್ಲಿ ಸಂಚಯಿಸುತ್ತಿದ್ದ.

ನನ್ನ ವರ್ಣವಿನ್ಯಾಸದಲ್ಲಿಯು. ಅಂಗಕಾಂತಿಯಲ್ಲಿಯು ಬದಲಾವಣೆಯನ್ನು ಅಚೂಕ ಹೇರಿಸಿದ ದಸ್ತಗಿರ್‍ಯಾ. ಟರ್ಮು ತುಂಬುವ ನಾಟಕ ಮಾಡಲಿಕ್ಕೆ ನಾಕು ದಿನ ಸಾಂಗಲಿಗೆ ಹೋದಾಗ, ವಸೂನಿಗೆ ಹೇಳಿದ್ದ: 'ವಸೂ ನಿಮ್ಮ ಮನೀ ದೇವರನ ಮುಟ್ಟಿಸಿಗೊಡಬ್ಯಾಡಾ. ದಾದಲ್ಯಾ ಖಾಟಾಸ್ಯಾನ. ಅವನ ಕಣ್ಣಾ-ಬಣ್ಣಾ ನೋಡು. ಹ್ಯಾಂಗ ಸತೇಜ ಆಗ್ಯಾವ. ನಿಮ್ಮ ಊಟಾ-ಗೀಟಾ ಎಲ್ಲಾ ಮರ್‍ತಾನ ಅಂವಾ. ಕಮಾಲ ಮಾಡೀಯಾಂ ದಾದಲ್ಯಾ. ತೀರ್ಥಾ – ತೀರ್ಥಧಾಂಗs ತಗೋಂಬೂತ ಬಾ. ನೀ ಅಮೇಶಖೋರ ಮಗಾ. ನೀರ ಕುಡಧಾಂಗ ಮಾಡೀ."

ಈ ತೀರ್ಥ-ಪ್ರಸಾದ, ಅದನ್ನೂ ಮುಕ್ತಮಾನಸರಾಗಿ ನನಗೆ ಮೆಯ್ಯಲು ಪರವಾನಗೀ ದಯಪಾಲಿಸಿದ – ಒಂದು ವರ್ಷ, ದಾದಲ್ಯಾನನ್ನು 'ಡಾಫ್ಲ್ಯಾ' ಮಾಡಿದ. ಮಾನಸಪುತ್ರನಂತೆ ಭಾವಿಸಿ ವಾತ್ಸಲ್ಯ-ಪ್ರೀತಿಯ ಧಾರೆ ಹಿಡಿದ ಎಸ್. ಈ. ಸಾಹೇಬರು ನಿವೃತ್ತಿಪೂರ್ವ ರಜೆಯ ಮೇಲೆ ಹೊರಟರು. ಅಪತ್ಯ ವಿರಹಿತರಾದ ಸಾಹೇಬರು ಹೋಗುವಾಗ ಎಲ್ಲವನ್ನೂ ದಾನಮಾಡಿ ಹೊರಟರು. ಅಹುದು – ದಾನಮಾಡಿದರು. ಅನ್ಯರಂತೆ ಬಂದಷ್ಟು ಬಂತೆಂದು ಮೋಡಕಾ

ಬಾಜಾರದಲ್ಲಿ ಲೀಲಾವಿಗೆ ಹಚ್ಚಲಿಲ್ಲ. ಕ್ರೋಕರಿ – ಫರ್ನಿಚರ್ ಹಂಚಿಬಿಟ್ಟರು. ಪುಸ್ತಕದ ದೊಡ್ಡ ಪ್ರಪಂಚವನ್ನು ಒಂದು ಶಾಲೆಯ ಲಾಯಬ್ರರಿಗೆ ಕೊಟ್ಟರು. ನನಗೆ ಬೇಕಾದದ್ದನ್ನು ಆರಿಸಿಕೊಳ್ಳುವ ಮುಕ್ತ ಮಕ್ತೇ ಕೊಟ್ಟಿದ್ದರು. ಆದರೆ ದಾದಲ್ಯಾ ಒಂದೇ ಒಂದು ಅಮೂಲ್ಯ ವಸ್ತು ಆರಿಸಿಕೊಂಡ. ಅದು ಸಾಹೇಬರ ಟೇಬಲ್ಲನ್ನು ಸರ್ವದಾ ಅಲಂಕರಿಸುತ್ತಿದ್ದ ಹಸ್ತಿದಂತದಲ್ಲಿಯ 'ಥ್ರೀ-ಮಂಕೀ' ಪ್ರತಿಮೆ. ಸಾಹೇಬರು ದಾದಲ್ಯಾನ ಬೆನ್ನು ಚಪ್ಪರಿಸಿದರು. ತಮ್ಮ ಸ್ವಾಕ್ಷರೀ ಮಾಡಿ. ತಾವು ಹಾಗೂ ಮಡ್ಡಮ್ಮ ಸಾಹೇಬರು ಜೊತೆಯಾಗಿ ನಿಂತು ತೆಗಿಸಿಕೊಂಡ ಭಾವಚಿತ್ರ ಕೊಟ್ಟರು. ದಾದಲ್ಯಾ ಇಂದಿಗೂ ಬೆಳಗಿನಲ್ಲಿ ಹಾಸಿಗೆ ಬಿಡುವಾಗ, ಈ ಭಾವಚಿತ್ರಕ್ಕೆ ಕೈಮುಗಿಯುತ್ತಾನೆ. ನಂತರ ಕರ ಮಸೆದು 'ಕರಾಗ್ರೇ ವರ್ತತೇ ಲಕ್ಷ್ಮಿ'ಯ ಪ್ರಾರ್ಥನೆಗೆ ತೊಡಗುತ್ತಾನೆ.

ಬಹಳ ಜನ. ಸಾಹೇಬರಿಂದ ಸರ್ಟೀಫಿಕೇಟ್ ಪಡೆದರು. ದಾದಲ್ಯಾ ತನಗೆ ಅಗತ್ಯವಿಲ್ಲವೆಂದ. ಸಾಹೇಬ-ತಳಿಯ ಇಲ್ಲಿಯ ಋಣ ಮುಗಿಯಿತು. ಕಂಟ್ರೀ ಮಾಲಿನ ಕೂಡ ತಾನು ತೇಕುವ ಧಾವತಿ ಮಾಡುವದಿಲ್ಲವೆಂದೂ, ರಾಜೀನಾಮೆಯ ಒಂದು ಚತುರ್ಥಾಂಶ ಕಾಗದವನ್ನು ಸಾದರ ಪಡಿಸಿದ. ನನ್ನ ನಿರ್ಧಾರವನ್ನು ಕೇಳಿ, ಅಲ್ಲಿಯ ವರೆಗೂ ಹಿಡಿದಿಟ್ಟ, ನನ್ನ ರಾಜೀನಾಮೆಯ ಕಾಗದವನ್ನು ಹೊರಗೆ ತೆಗೆದು 'resignation accepted; relieve mr· Joshi today only.' ಎಂದು ಬರೆದರು. ಇಂದೇ ಎಂದು ಅವರು ಅಂದಿರದಿದ್ದರೆ, ನಮ್ಮ ಹೆಡ್ ಕ್ಲಾರ್ಕ್ ಸಾಹೇಬ, ಬಿ.ಸಿ.ಎಸ್.ಆರ್. ಹುಡಿಕಿ, ನಿಯಮ ಲಾಗೂ ಮಾಡಿ. ದಾಖಲೇ ತೋರಿಸಿ, ತಿಂಗಳ ನೋಟೀಸಿನ ಕಾರಣ ನಮೂದಿಸಿ. ನನ್ನನ್ನು ತನ್ನ ಕೈಯಲ್ಲಿ ತೇಕಿಸುವ ಡಾವು ಹಾಕುತ್ತಿದ್ದ. ಸಾಹೇಬರು ಪುಣ್ಯ ಕಟ್ಟಿಕೊಂಡರು.

ಬಿಡಾಡಿ ದನಕ್ಕೆ ಗುದ್ದೀ ಕಟ್ಟಿ ಅದರ ಅನಿರ್ಬಂಧ ಸಂಚಾರವನ್ನು ವಿಹಾರ ವನ್ನು ತಡೆಗಟ್ಟುವಂತೆ. ಈ ನವಕರಿ ಒಂದು ವರ್ಷ ನನ್ನ 'ಗ್ಲೋಬಲ್ ಟೂರ್' ಬಂದು ಮಾಡಿತ್ತು. ಭಾನಗಡಿಗೆ ಅವಕಾಶ ಕೊಟ್ಟಿರಲಿಲ್ಲ. ಅದರಲ್ಲಿಯ 'Your most obedient servant' ಗರಳ, ರಕ್ತಗತವಾಗುವದರಲ್ಲಿಯೇ ನಾನು ಪಾರು ಬಿದ್ದಿದ್ದೆ. ಯಾವ ಚಟವನ್ನೂ ಚುಟುಕಿನಲ್ಲಿ ಬಿಡಬಹುದು. ಬೀಬೀಗೆ ತಲ್ಲಖನಾಮಾ ಕೂಡ ಕೊಡಲು ಹಿಂದೆ-ಮುಂದೆ ನೋಡದಿರಬಹುದು. ಆದರೆ ಕಾಯಕ್ಕೆ ಜಿಗಳಿ ಯಂತೆ ಅಂಟಿ ನೆತ್ತರ ಹೀರುವ ನವಕರಿಯನ್ನು ಸಹಜಾಸಹಜೀ ಬಿಡುವದು

ಮುಷ್ಕಿಲ್ ಎಂದು ನನ್ನ ರಾಮು ಮತ. ನಮ್ಮ ಎಸ್. ಈ. ಸಾಹೇಬರು ನಿವೃತ್ತ ರಾಗಿರದಿದ್ದರೆ – ನಾನೇ ಇದನ್ನು ಬಿಡುತ್ತಿರಲಿಲ್ಲ.

ನನಗೆ ಒಂದು ವರ್ಷದಲ್ಲಿ ಹೆಚ್ಚಾಗಿ ಗೋವಿಂದಭಟ್ಟನ ನೆನಪಾಗಲಿಲ್ಲ. ರಾವಜೀಕಾಕಾ-ಸೋನಕ್ಕನ ಧ್ಯಾಸ ಹಾರಿತ್ತು. ಪಂತಮಾಮಾ-ಬನೂಮಾಮೀ ಮರೆತಂತಾದರು. ವಸೂ-ವಿಶ್ಯಾ ತ್ರೋಟಕ ಪತ್ರದಲ್ಲಿ ಜೀವಂತರಿದ್ದರು. ಸುರ್ಯಾ ಬರೆಯುತ್ತಿದ್ದನೆಂದು, ಬಸವಂತಿ ಜೀವಂತಳಿದ್ದ ಮಾಹಿತಿ ಇತ್ತು. ಆ ಪ್ರಸಾದ, ಆ ತೀರ್ಥ ದಾದಲ್ಯಾನನ್ನು ಮಬ್ಬುಕವಿಸಲಿಲ್ಲ. ಡಕ್ ಪ್ಯಾಂಟ್-ಸ್ಯಾಂಡಲ್ಸ ದಲ್ಲಿಯ ಮೆರೆದಾಟ – ಎಸ್.ಈ. ಅವರ ಕಾರಿನಲ್ಲಿ 'ಫ್ರಂಟ್ ಸೀಟ್' ಹಿಡಿದು ಊರ ತುಂಬ ಅಲೆಯುವ ವೈಭವ ಕಣ್ಣಿಗೆ ಪರೆ ಇಳಿಸಿರಲಿಲ್ಲ. ದಾದಲ್ಯಾನಿಗೆ ಮೋಹಿನೀ ಹಾಕಿದ ಚೀಜ-ವಸ್ತುವೇ ಅದ್ಭುತರಮ್ಯವಾಗಿತ್ತು.

ತಪ್ತಕಾಂಚನವರ್ಣ, ಘಾರೆಗಣ್ಣು, ಪ್ಯಾಂಟಿನ ಕಿಸೆಯಲ್ಲಿ ಒಂದು ಕೈ, ಇನ್ನೊಂದು ಕೈಯಲ್ಲಿ – ಇಲ್ಲ – ಬಾಯಿಯಲ್ಲಿ ಪಾಯಿಪ್, ಮುಖದಲ್ಲಿ ಮಿನು ಗುವ ಮಗುವಿನ ಅವ್ಯಾಜ ಮನೋಹರ ಹಾಸ್ಯ. ನಾನು ಬಂದ ಕೂಡಲೇ 'Good morning ಡಾಡ್ಲ್ಯಾ. Good morning. How do you do? Will you please do this — will you please attend to that.' ಎಂದು ನನಗೇ 'ಪ್ಲೀಜ್, ಪ್ಲೀಜ್' ಎಂದು ವಿನಮಿಸಿ ಮಾತನಾಡುವ ಮಹೋನ್ನತ ಜೀವ – ಎಸ್. ಈ. ಆ ಮೋಹಿನೀ ಎಸೆದಿದ್ದರು. ಅಂತರರಾಷ್ಟ್ರೀಯ ವ್ಯಾಪಾರ ಮಾಡುವ ಒಂದು ದೊಡ್ಡ ಎಣ್ಣೆಯ ಕಂಪನಿಯ ಮುಂಬೈ ಶಾಖೆಯ ಮ್ಯಾನೇ ಜರರು – ನಮ್ಮ ಎಸ್. ಈ. ಅವರ ಜೀವಸ್ಯ-ಗಳಸ್ಯ ಸ್ನೇಹಿತರು. ಅವರೊಮ್ಮೆ ಎಸ್.ಈ. ಅವರ ಭೆಟ್ಟಿಗೆ ಬಂದು ನಾಲ್ಕೈದು ದಿನ ಅವರಲ್ಲಿ ನಿಂತಿದ್ದರು. ದಾದಲ್ಯಾ ಅವರ ಕಣ್ಣಲ್ಲಿ ತುಂಬಿದ್ದ. 'Nice chap, smart chap' ಎಂದು ಹೇಳೀ ಹೇಳಿದ್ದರು. ಹೋಗುವಾಗ ನನ್ನಿಂದ ಒಂದು ಅರ್ಜಿಯನ್ನೂ ತೆಗೆದುಕೊಂಡಿದ್ದರು ಇನ್ಸ್ಪೆಕ್ಟರ್ ಜಾಗೆಗೆ. ಅವರು ಹೋಗಿ ಒಂದು ತಿಂಗಳೂ ಕೂಡ ಆಗಿರಲಿಲ್ಲ – 'ಆಫೀಸಿಯಲ್' ಆಗಿ 'ಇಂಟರ್‌ವ್ಯೂ'ಗೆ ಕಾಗದ ಬಂತು. ನನ್ನ ಡಕ್ ಪ್ಯಾಂಟು, ಸ್ಯಾಂಡಲ್ಸ, ಚೌಕಡೀಶರ್ಟ ಎಸ್. ಈ. ಅವರಲ್ಲಿ ಖಪ್ಪಿಸಿದಂತೆ, ಮುಂಬೈ ಸಾಹೇಬ ರಲ್ಲಿ ಖಪ್ಪಿಸುತ್ತಿರಲಿಲ್ಲ. ನನಗೆ ಪಂಚೀತಿಗಿಟ್ಟಿತು. ಅನುಮಾನಿಸುತ್ತ ಆ ಕಾಗದವನ್ನು ಎಸ್. ಈ. ಅವರಿಗೆ ತೋರಿಸಿದೆ. 'ಇಂಟರ್‌ವ್ಯೂ'ಗೆ ಹೋಗುವದಕ್ಕೆ ಆಗ್ರಹ

ಪಡಿಸಿದರು. ಬದಿಯಲ್ಲಿಯೇ ಮುಂಡಿಸಿದ ಮಡ್ಡವಾಸಾಹೇಬರ ಕಡೆ ನೋಡಿದರು. ಆ ತಾಯಿ ಸಂಜೆಯು ಮುಂದೆ ನನ್ನನ್ನು ಮೋಟಾರಿನಲ್ಲಿ ಒಗೆದು, ಕ್ಯಾಂಪಿನಲ್ಲಿ ಅಲೆಸಿ, 'ಊಲನ್ ಸೂಟ್' ಹೊಲಿಸಿಕೊಟ್ಟರು. ಮುಂಬೈಗೆ ಹೊರಟು ನಿಂತಾಗ 'ಪಾಕೆಟ್-ಮನೀ' ಕೊಟ್ಟರು. ನೂರರ ನೋಟು ಸಕ್ಕು ದಾದಲ್ಯಾನಿಗೆ ಹೇಳಿತು: "ಸೂಳೀಮಗನsಸ ನಿನಗೆಲ್ಲ್ಯದ ಋಣಪರಿಹಾರಾ?" ಎಂದು.

ಎಸ್. ಈ. ಅವರಿಗೆ ಮೆಚ್ಚಿಕೆಯಾದದ್ದು ನನ್ನ ನಿಷ್ಠೆ, ನನ್ನ ಕೆಲಸದಲ್ಲಿಯ ಆತ್ಮೀಯತೆ, 'ಸ್ವ'ದ ವಿಸ್ಮರಣ. ಇದನ್ನು ದಿಮಾಖೆಂದು ನಾನು ಹೇಳುವದಿಲ್ಲ. ನೀವು ದಿಮಾಖೆಂದು ಭಾವಿಸಲಿಕ್ಕೆ ನನ್ನ ಅಭ್ಯಂತರವಿಲ್ಲ. "ಬೇಕಾದರಾಲಿಪುದು, ಬೇಡವಾದರೆ ಪರಾಕು ಮಾಡುವದು, ನನಗೆ ವ್ಯಾಕುಲಮಿಲ್ಲ – ಸಂತಸಮಿಲ್ಲ, ನಾನು ಕೇವಲ ನಿರಾಕಾಂಕ್ಷಿ." ರತ್ನಾಕರವರ್ಣಿಯ ಅಮೋಘ ಸೂತ್ರ ನಮ್ಮ ಬ್ರೀಡ ವಾಕ್ಯ.

ಎಸ್. ಈ. ಸಾಹೇಬರು ನಿವೃತ್ತರಾಗುವರೆಂದು, ಶ್ಯಾಮುರಾಯ ವೈಭವ ಪೂರ್ಣ ಪಾನ-ಸುಪಾರೀ ಮಾಡಿದ. ವಾಡೆಯ ಪಟಾಂಗಣದಲ್ಲಿ ಪೇಶ್ವಾಯೀ ದರ್ಬಾರು ನಡೆಸಿದ. ಎರಡು-ಮೂರು ಸಾವಿರ ಖರ್ಚುಮಾಡಿದ. ಭವ್ಯ ಮಂಟಪ, ತಳಿರು-ತೋರಣ, ಗ್ಯಾಸ್-ಬತ್ತಿಗಳ ಅಖಂಡ ಮೆರವಣಿಗೆ, ಒಂದಲ್ಲ – ಹತ್ತಿಪ್ಪತ್ತು ಕಾರು, ಟ್ರಕ್ಕುಗಳ ಓಡಾಟ, ಶ್ಯಾಮುರಾಯನ ವಜನದಿಂದ ಊರವರ ಕಣ್ಣು ಕುಕ್ಕಿದವು.

ಚಾ-ಪಾಣೀಗೆ ಸ್ಪೆನ್ಸರ್‌ದವರಿಗೆ ಕಂತ್ರಾಟು ಕೊಟ್ಟಿದ್ದ. ಬೆಳಗಾಂವಿಯಲ್ಲಿಯ ಅಧಿಕಾರೀವೃಂದ ಬಳಿದು ಬಂದಿತ್ತು. ಕಮೀಶನರ್, ಕಲೆಕ್ಟರ ಆದಿಯಾಗಿ ಬಂದು ಶ್ಯಾಮುರಾಯನ ಅಲ್ಪ ಸೇವೆ ಸ್ವೀಕರಿಸಿ ಖುಷಿಯಾಯಿತು. ಅತಿಥಿ-ಮುಖ್ಯನ ನರ್ಮ-ಸಚಿವನಾದ ದಾದಾಲ್ಯಾನನ್ನು ಬಲಗೈ ಮಾಡಿಕೊಂಡು, ಶ್ಯಾಮುರಾಯ ಎಲ್ಲ ವ್ಯವಸ್ಥೆ ಮಾಡಿ ಮುಗಿಸಿದ. ರಾಜೀನಾಮೆ ಕೊಟ್ಟು ನವಕರಿಯಿಂದ ಹೊರ ಬೀಳುವ ನನ್ನನ್ನು ಶ್ಯಾಮುರಾಯ ಮುಂದೆ ಅಲಕ್ಷ್ಯ ಮಾಡದಿರಲಿ ಎಂಬ ಮುಂದಾ ಲೋಚನೆಯಿಂದ, ನಾನು ಅವನಿಗೆ ಆಸ್ಥೆಯಿಂದಲೇ ನೆರವಾದೆ. ಅವನ ಘನ ಮರ್ಜೀ ಸಂಪಾದಿಸಿದೆ. ಎಸ್. ಈ ಸಾಹೇಬರ 'ಕ್ಯಾಂಪ್ ಕ್ಲಾರ್ಕ್' ಆವ ಬಾತಮೀ ತಿಳಿದಾಗಲೇ ಶ್ಯಾಮುರಾಯ ನನ್ನ ಉಠಾಠೇವ ನಡೆಸಿದ್ದ.

"ದಾದಲ್ಯಾ, ನಮ್ಮ ಪುರೋಹಿತಾ ಅಂತsಸ ನೀನು ಭಿಡೇ ಭಾರ ಮಾಡಕೋ

ಬ್ಯಾಡಾ. ಇದು ಲೌಕಿಕಾ. ಅದು ಅಲೌಕಿಕಾ. ವ್ಯವಹಾರ ತಪ್ಪಬಾರದು. ಅಡಚಣೀ ಪಿಡಚಣೀ ಅನಿಸಿದರ ಹೇಳತಿರು. ಅದೇನಪಾ ಪದ್ಧತೀನs?"
ಸರಾಗವಾಗಿ ಹಾಡುತ್ತಿದ್ದ.

ಎಸ್. ಈ. ಸಾಹೇಬರಿಗೆ ಒಮ್ಮೆ. ಮಡ್ಡಮ್ ಸಹಿತ 'ಬೋಟಿಂಗ್'ದ ಹುಕೀ ಬಂತು. ದಸರೆಯ ಸುಮಾರಿಗೆ ಮೂರು ದಿನ ನಮ್ಮ ಕ್ಯಾಂಪು ಧೂಪ ಧಾಳ ಬಂಗಲೆಯಲ್ಲಿತ್ತು. ಎಸ್. ಈ. ಇ. ಇ. ಅವರ ವ್ಯವಸ್ಥೆ ಶ್ಯಾಮರಾಯನ ಕಡೆಗಿತ್ತು. ಅವರ ಊಟ ಒಂದು ಕಡೆಗೆ. ನಾನು ಶ್ಯಾಮರಾಯ ಒಂದು ಕಡೆಗೆ. ನಮ್ಮ ಇ. ಇ. ಸಾಹೇಬರು ಕೇವಲ ಪಿಟ್ಲ್ಯs ಭಾತ. ಅವರಿಗೆ ತಮ್ಮ ಖಾಸ್ ವಲಲ ವಿಷ್ಣೂನ ಕಡೆಯಿಂದಲೇ ಅಡಿಗೆಯಾಗಬೇಕು. ಧಾಬಳಿಯ ಕಡ್ಡಾಯ ಹಾಕುತ್ತಿದ್ದಿಲ್ಲ, ಪುಣ್ಯ. ನಾನು-ಶ್ಯಾಮರಾಯ ಜೂರಿ-ಜಮುಚಾ.

"ಹೀಂಗ 'ಆ್ಯಡ್‌ಜಸ್ಟೆಬಲ್' ಇರಬೇಕ ನೋಡ ದಾದಲ್ಯಾ. ಅನ್ನಾ-ಋಣಕದ ಸೂತಕೀತನಾ ಇರಬಾರದು."
ಎಂದು ಶ್ಯಾಮರಾಯ ಸೂಪ ಭುರಕಾ ಹೊಡೆದು ಹೇಳಿದಾಗ, ದಾದಲ್ಯಾ ಭುರಕಿಯ ಹಿಂದಿನ ಭಾವ ಅರಿತುಕೊಂಡು —

"ಸೂತಕೀ ಮಂದಿ ಆಕಡೆ ಗಂಡಲ್ಲಾ, ಇಕಡೆ ಹೆಣ್ಣ ಅಲ್ಲಾ. ಯಾರೋ ಮಾಡಿದರಂತ ಇವರು ಸಾಹೇಬರಾದದ್ದು. ಸ್ವಂತ ಸಾಹೇಬರೇ ತಾಕತ್ತ ಪಡಕೊಂಡು ಆದಾವ್ರಲ್ಲಾ. ದಾದಾ, ನೀವು ಸುಮ್ಮನೇ 'ರೆಸಿಗ್ನೇಶನ್' ಕೊಟ್ಟರಿ. ಇಲ್ಲದಿದ್ದರ ಇಷ್ಟ ಹೊತ್ತಿಗೆ. ಖಾತ್ರೀಲೇನs ಇ. ಇ. ಆಗತಿದ್ದಿರಿ. ಅವರಾಗಿನ ಗಮುಜೇ ಬ್ಯಾರೇ ಇರತಿತ್ತು."
ನಾವು ಹವಾ ಭರಣಾ ನಡಿಸಿದೆವು.

"ಅದೇನೋ ಖರೇ ದಾದಲ್ಯಾ. ಈ ಲಿಗಾಡ ಎಲ್ಲಾ ನೋಡಲಿಕ್ಕೆ ಕೂತರ, ಅದೇ ಠೀಕಿತ್ತು ಅಂತ ಅನಸ್ತದ. ಹಡದರ ರಿದ್ಧಿ ಇಲ್ಲಾ. ಸತ್ತರ ಸೂತಕ ಇಲ್ಲಾ. ಕಡದಾಗ ಇಷ್ಟ ತುರಿಸಿಗೊಂಡು ಕಡೀಕಾಗೂದು. ಎಸ್.ಈ. ಭಲೋ ಇದ್ದಾರಂತ ಠೀಕದ. ಬ್ಯಾರೇ ಯಾರರ ಆಗಿದ್ದರ, ಬರೇ 'ಬೋಟಿಂಗ್'ದ್ದs ಯಾಕs, ವಿಮಾನದ ಹುಕೀನೂ ಬಂದ್ವದ ಅಂತಿದ್ದರು. ಇ.ಇ.ಗೋಳರೇ ಏನು? ನಾ ಇನಾ 'ಓವರ್ ಸೀರ್' ಇದ್ದಾಗ ಏನ ಮಜಾ ಆತಂದಿ: ಒಬ್ಬರು ಇ.ಇ. ಇದ್ದರು. ಆಹೇರೀ ಹುಕೀ ಬಂದು, ಮಕ್ಕಳ ಮುಂಜಿವಿ ಎರಡ ಸಾರೇ ಮಾಡಿದರು. ಒಮ್ಮೆ ಗುಜರಾಥದಾಗ;

ಒಮ್ಮೆ ಕರ್ನಾಟಕದಾಗ. ಗಂಡಾ-ಹೇಣತಿ ಪ್ರಣೋಜನಸಕ್ಕ ಕೂತದ್ದು ಅಷ್ಟೇ ಪ್ರವಾ. ಈ ಸಾಹೇಬರ ಹುಕೀ ಅಂದರ ನಾನಾ ಥರದ್ದು ಇರತಾವ. ನನ್ನಂಥಾ 'ಕಾಂಟ್ರ್ಯಾಕ್ಟರ್ ಸಿಕ್ಕನಂದರಂತೂ ಮುಗದೇ ಹೋತು. ನಿಮ್ಮ ಇ.ಇ. ಸಾಹೇಬರೂ ಇನ್ನೊಮ್ಮೆ ತಮ್ಮ ಮುಂಜಿವಿಗೆ ತಯಾರ ಆದರೂ ಆದರೇ. ಚ್ಯಾಷ್ಟಿಯಾ ದಾದಲ್ಯಾ. ಖರೇ ಅಂತ ತಿಳದೀ ನೀ. ಉಧಾರಣೀ ಅಂತ ಹೇಳಿದೆ. ಅದು ಆತಪಾ ದಾದಲ್ಯಾ. ಶಕೂಂದು ಎಲ್ಲಿಗೆ ಬಂತು? ಇತ್ತಿತ್ತಲಾಗs ಸಾಹೇಬರೇನು ಅದರ ದಶಿಂದ ಅಷ್ಟ 'ಸೀರಿಯಸ್' ಕಾಣಸೂದಿಲ್ಲಾ? ಆರ್ಡರ್ ಬ್ಯಾರೇ ತಗದಾರ ಯಾ 'ಕಾಂಟ್ರ್ಯಾಕ್ಟರ್'ನೂ ಬಂಗಲೇದ ಕಡೇ ಹಾಯೂ ಹಾಂಗಿಲ್ಲ ಅಂತs. ಠೀಕ ಆತು ಅಂದೇವು. ಹೋದಾಗೊಮ್ಮೆ ಇಲ್ಲದ ಲಿಗಾಡು ಕೊಳ್ಳಿಗೆ ಬೀಳತಿತ್ತು. ಆ ಶೋಮರೇಮಾಮಾ, ಏನ ಥಾಡಿ ಆಗೇದಪಾ ಅಂಪಗ. ಇನಾ ಅಡೀಚ-ತೀನಸೇ ಪೆನ್‌ಶನ್ ತಿಂತಾನs. ಒಮ್ಮೆ ಕಾಲಚೀಲ ಹರದಿದ್ದೂ ಅವನ್ನೊ. ಶ್ಯಾಮರಾವ್ ಹ್ಯಾಂಗೂ ಪ್ಯಾಟ್ಯಾಗ ಹೊಂಟೀರಿ. ಬರೂ ಮುಂದ, ಅಗದೀ ಮರೀದೆ ಮಜ ಬೂತ ಜೋಡು ಪಾಯಮೋಜ ತಗೊಂಡು ಬರ್ರೈಪಾ. ಚಾರ-ಸಹಾ ಆಣೇ ಪನರs ಬಿದ್ದೀತು. ನನ್ನ ಕಡೇ ಶಂಭರದ ನೋಟ ಅದs. ಚಿಲ್ಲರ ಇದ್ದರ ಹೇಳರಿ. ಕೊಟ್ಟುಬಿಡತೀನಿ. ಅಂತs ಉದಾರತನಾ ಬ್ಯಾರೇ ತೋರಸೂದು. ಏನ ಸುಡತೀ ದಾದಲ್ಯಾ, ಧೊಡ್ಡ ಕಾಂಟ್ರ್ಯಾಕ್ಟರ್‌ನ ತಗೊಂಡು. ನೀ ಹೇಳಿಧಾಂಗ ರೆಸಿಗ್ನೇಶನ್ ಕೊಟ್ಟಿರದಿದ್ದರ, ನಾವೂ ಯಾರಿಗ್ಯಾರs ಪಾಯಮೋಜದ ಮಾಪ ಕೊಟಗೋತ ಕೂಡಲಿಕ್ಕೆ ಬರುತಿತ್ತು. ಅಂದಾಜs ತಪ್ಪಿತು.”

“ಅಂದಾಜು ಯಾಕ ತಪ್ಪತದ ದಾದಾ? ಈಗಂತೂ ನೀವು 'ಎಸ್ಟ್ಯಾಬ್ಲಿಶ್ಡ್ ಕಾಂಟ್ರ್ಯಾಕ್ಟರ್' ಆಗೀರಿ. ಬಸಗೋಂಡಾ, ನಬೀಸಾಬಾ ಶಿಸ್ತ ತಯಾರ ಆಗಲಿಕ್ಕೆ ಹತ್ತ್ಯಾರ. ನಾಕೆಂಟ ವರ್ಷ ನೀವು ಮಾಡಮಾಡತs ಸುರೇಶನ್ನ ಕೈಯಾಗ ತಗೊಂಡು, ಅಂವನ್ನ ತಯಾರ ಮಾಡಿದರೀ ಅಂದ್ರ ತೀರಿತು. ಮುಂಬೈ-ಪ್ರಣೇದ 'ಕಾಂಟ್ರ್ಯಾಕ್ಟರ್ ಫರ್ಮ್'ದ ಜೋಡೀ 'ಕಾಂಪೀಟ್' ಮಾಡತೀರಿ. 'ಫಿನಾನ್ಸ್'ದ್ದು ದಡಾತೀ ಅದs ಅನ್ನೂ ಹಾಂಗಿಲ್ಲಾ. ಬಿ. ಈ. ಫಸ್ಟ್‌ಕ್ಲಾಸ್ ಬಂದ ಹುಡುಗ ಇರತಾನ ನಿಮ್ಮ ಕೈಯಾಗ. ನಿಮ್ಮ ವಜನಾ-ವಶೀಲೀನೂ ಭಾರೀ ಅದs.”

“ನಾನೂ ಅದೇ ಲೆಕ್ಕಾನೇ ಹಾಕಿದ್ದೆ ದಾದಲ್ಯಾ. ಆದರ ಸುರ್ಯಾ ದಗಾ ಕೊಟ್ಟಾ. ಸಾಹೇಬರು-ರಂಗಕ್ಕಾ ಅಂವಗೇನೋ ಗಿಡಾನೇ ಮಾಡಿದರು. ನಮ್ಮ

ಮನ್ಯಾಗಿನ ರಾಡೀ-ಹೊಲಗೇರಿ ಹೊರಗ ಹೋಗೂದು ಬ್ಯಾಡಾ ಅನೂ ದೃಷ್ಟೀ ಯಿಂದ ನಾ ಶಕೂಸ ವಿಷಯದಾಗ ಅಷ್ಟ 'ಇಂಟರೆಸ್ಟ್' ತೋರಸಿದ್ದಿಲ್ಲಾ. ನೋಡೂಣು. ನೋಡೂಣು ಅಂತ ಢಕಲಾಸಿಗೋತ ಬಂದಿದ್ದೆ. ಇಂವಾ ಏನಪಾ ಅಂದರ, ಪರಭಾರೇ ಬಂದು, ಅಕಿನ್ನ ನೋಡಿ. 'ಕನ್ಸೆಂಟ್' ಕೊಟ್ಟ ಹೋಗ್ಯಾನಂತ. ಸುರ್ಯಾನೂ ಉದ್ದ ನೀರಿಸವಾ ಇದ್ದಾನ."

"ದಾದಾ, ಯಾರ ಮನೀ ದ್ವಾಸಿಗೆ ತೂತ ಇಲ್ಲಾ. ಊರ ಇದ್ದಲ್ಲೆ ಹೊಲ ಗೇರಿ ಇರೂ ಹಾಂಗs, ಮನೀ ಇದ್ದಲ್ಲೆ ರಾಡಿ ಇರೂದೇನs! ಅದು ಅದs ಅಂತ, ನೀವು ನಿಮ್ಮ 'ಪ್ರಾಸ್ಪೆಕ್ಟ್ಸ' ಯಾಕ ಹಾಳಮಾಡಕೋಬೇಕು? ಐದೂ ಬಟ್ಟಾ ಎಲ್ಲೆ ಸಂವಾ ಇರತಾವs. ಸುರ್ಯಾನ್ನ 'ಟ್ಯಾಕಲ್' ಮಾಡಿ ನೋಡರಿ. ಇಲ್ಲೀ ತನಕಾ ನೋಡೂಣಂತ, ಹ್ಯಾಂಗೂ ಢಕಲಾಸಿಗೋತ ಬಂದೀರಿ. ಹೀಂಗs ವರ್ಷಾರ ತಿಂಗಳಾ ಮುಂದ ಹಾಕ್ಕೋತ ಬರ್ರಿ. ಇಷ್ಟೂ ಮೀರಿನೂ ಅವರದು ಜಮಾಸಿದರ, ಆಗೂ ಲುಕ್ಸಾನ ಏನ ಇಲ್ಲಾ. ಠೋಮರೇಮಾಮಾಂದು – ಸಾಹೇಬರದು ಖಜಾ ನೀನೇ ಬಳದ ಬರತದ. ವಿಶ್ಯಾನ್ನ ದತ್ತಕ ಕೊಟ್ಟಿರಿ. ಅವಂದೇ ಕಲ್ಯಾಣ ಮಾಡಿದರಿ. ದೊಡ್ಡ ಇಷ್ಟೇಟಿಗೆ ಒಬ್ಬನೇ ಅಧಿಕಾರೀ ಆದಾ. ಸೂರ್ಯಾನ್ನೂ ಹೀಂಗ ಮಾಡಿದರೀ ಅಂದರ, ಅವಂದೂ ಝಟ್ ಕಡೀತು. ಸತೀಶ-ಕಿಶೋರ ಇಬ್ಬರುಳದರು. ನೀವು ಕಾಕಾ ಘಳಿಸಿದ್ದೇನ ಕಡಿಮಿ ಅದss? ರಾಜಭೋಗ ಅನುಭೋಗಿಸಿದರೂ ನಡೀತದ."

ನಮ್ಮ ಪಂಪಿಂಗ್ ಧಂದೇ ಇನ್ನೂ ಚಾಲೂ ಇತ್ತು. ಊಟ ಮುಗಿದು ಬಹಳ ಹೊತ್ತಾಗಿತ್ತು. ಎಸ್.ಈ. ಸಾಹೇಬರು, ಮುದ್ದಮ್ಮ ಸಹಿತ ಬೆಳದಿಂಗಳಲ್ಲಿ ನೌಕಾವಿಹಾರಕ್ಕೆ ಎದ್ದರೆಂಬ ವರದಿ ಬಂತು. ಅದರ ವ್ಯವಸ್ಥೆಗೆ ಶ್ಯಾಮರಾಯ ಧಾವಿಸಬೇಕಾಗಿದ್ದ ಕಾರಣ ನಮ್ಮ ಮಾತು ಅರ್ಧಕ್ಕೇ ನಿಂತವು.

ಶ್ಯಾಮರಾಯನ ಮುಂದೆ ನಾನು ಸಿಗರೇಟು ಸೇದುತ್ತಿರಲಿಲ್ಲ. ಊಟ ಜಡವಾಗಿದ್ದ ಪ್ರಯುಕ್ತ ಯಾವಾಗ ಸಿಗರೇಟು ಹಚ್ಚೇನೆಂದು ಸಂಕಟಪಡುತ್ತಿದ್ದೆ. ಅನಾಯಾಸ ಅವಧಿ ಸಿಕ್ಕಿತು. ಸಿಗರೇಟು ಬೂದಿಯಾಗುತ್ತ ನಡೆದಂತೆ, ಶ್ಯಾಮ ರಾಯನನ್ನು ಬಗಲಿಗೆ ಒಗೆದುಕೊಳ್ಳುವ ಕ್ಲೃಪ್ತಿ ಟಿಸಿಲು-ಟೊಂಗೆಯಾಗಿ ಒಡೆಯ ತೊಡಗಿದವು. ಇದು ನೌಕಾವಿಹಾರದ ಕ್ಯಾಂಪ ಇದ್ದ ಕಾರಣ ಅರ್ಜಂಟ್ ಕಾಗದದ ವಿನಾ ಯಾವ ಸತ್ತ ಟಪಾಲನ್ನೂ ಕಳಿಸಬಾರದೆಂಬ ಸಕ್ತಮುನಾಯಿ ಹುಕುಂ ಇತ್ತು. ಇಲ್ಲದಿದ್ದರೆ ನಮ್ಮ ಹೆಡ್-ಕ್ಲಾರ್ಕ, 'ಅಕ್ನಾಲೇಜ್ಮೆಂಟ್ ಕಾರ್ಡಿ'ನ ಮೇಲೆ

ಕೂಡ "for favour of perusal & order" ಎಂದು ಬರೆದು ಬೋಕಾತನದ ಪ್ರದರ್ಶನ ಮಾಡಿಕೊಳ್ಳುತ್ತಿದ್ದ. ಬಂದ ಟಪಾಲನ್ನು ಪೋಸ್ಟ್ ಆಫೀಸಿನಂತೆ ನಮಗೆ 'ಪಾಸ್ ಆನ್' ಮಾಡುತ್ತಿದ್ದ. ಈ ಬಂದೀ ಹುಕುಮಿನಿಂದಾಗಿ, ನಮಗೆ ಬಿಳಿ ಕಾಗದದ ಶುಭ್ರ ಧವಲತೆಯನ್ನು ಕರಿ ಮಸಿಯು ಹಚ್ಚೀ ಬಟ್ಟಿನಿಂದ ವಿದ್ರೂಪ ಗೊಳಿಸುವ ಧಾವತಿ ಇರಲಿಲ್ಲ.

ಈ ಕ್ಯಾಂಪಿನಲ್ಲಿ ನಾನು-ಶ್ಯಾಮರಾಯ ತೀರ ಹತ್ತಿರ ಹತ್ತಿರಕ್ಕೆ ಬಂದಿದ್ದೆವು. ನಾನಾಗಿಯೇ ಅವನೆದುರು, ಕಾಕಾ, ವಿಶ್ವಾಸ, ಸೋನಕ್ಕ, ಸಾಹೇಬರು, ರಂಗಕ್ಕನ ವಿಷಯ ತೆಗೆಯಲಿಕ್ಕೆ ಹೋಗುತ್ತಿರಲಿಲ್ಲ. ಅಪರಿಹಾರ್ಯವಾಗಿ ಬಂದರೆ, ರಾಮಾಯ ಸ್ವಸ್ತಿ, ರಾವಣಾಯ ಸ್ವಸ್ತಿ ಹೇಳಿದರೂ, ಶ್ಯಾಮರಾಯನನ್ನ ಉಬ್ಬಿಸಲಿಕ್ಕೆ ಎಲ್ಲ ಡಾವೂ ಮಾಡುತ್ತಿದ್ದೆ. ಏಕಪ್ರಕಾರವಾಗಿ ನಾನು ಕೈ ತೊಳೆದುಕೊಂಡು ಬೆನ್ನು ಹತ್ತಿದ್ದರೆ, ಶ್ಯಾಮರಾಯ ಇನ್ನೂ ಸಮೀಪಸ್ಥನಾಗಿ ತನ್ನ 'ಅಂದರಕೀ ಬಾತ' ಎಲ್ಲಾ ವಿವರಿಸುತ್ತಿದ್ದ. ಆದರೆ ನವಕರಿಯ ಧ್ಯಾಸ, ಎಸ್.ಈ. ಸಾಹೇಬರ ಸೇವೆ, ಬಂಗ ಲೆಯ ವಾರೀ, ನನಗೆ ಬಿಡುವು ಕೊಡಲಿಲ್ಲ. ನನ್ನಲ್ಲಿ ಒಂದು ಕೆಟ್ಟ ಚಾಳೀ. ಒಂದರ ಧ್ಯಾಸ ಹಿಡಿದರೆ ಅನ್ಯ ವ್ಯವಹಾರ ಸೂಚಿಸುವದಿಲ್ಲ. ಸೂಚಿಸಿದರೂ ಅರಗಚ್ಚಿ ಮಾಡಿ ಕೈಬಿಡುವ ಪ್ರಸಂಗ ಬರುತ್ತದೆ. ಬೆಳಗಾಂವಿಯಲ್ಲಿ ನಿಂತು ಏನೋ ಡಾವು ಸಾಧಿಸುವ ಹುಕಿಯಿಂದ ಬಂದಿದ್ದೆ. ಸಾಹೇಬರ ಅರ್ಜೀ-ಪ್ರಕರಣ ನವಕರಿಗೆ ಎಳೆಯಿತು. ಡಾವೂ ಮರೆತಿತು. ಸಾಹೇಬರೂ ಮರವಾದರು. ನವಕರಿ ಏಕಮೇವ ಧ್ಯಾಸವಾಯಿತು. ಎಂ.ಏ. ಅರಗಚ್ಚಿ ಉಳಿಯಿತು. ವಸೂನ ಶಾಪ-ತಾಪದ ಪತ್ರ, ವಿಶ್ವಾಸನ ಎಚ್ಚರಿಕೆಯ ಕಾಗದ ಏನೂ ಪರಿಣಾಮಕಾರಿಯಾಗಲಿಲ್ಲ. ನಡುವ ಒಮ್ಮೆ ಹೋಗಿ ನಾಕು ದಿನ ನಿಂತು 'ಟರ್ಮ್' ತುಂಬುವ ನಾಟಕವಾಡಿ ಬಂದಿದ್ದೆ. ವಸೂ-ದಸ್ತಗೀರ್‍ಯಾರಿಂದ ಜಂಪೀ ಮಾಡಿಸಿಕೊಂಡಿದ್ದೆ. ನವಕರಿ ಬಿಟ್ಟು ಬಂದು ಎಂ.ಏ. ಮುಗಿಸದಿದ್ದರೆ, ಪ್ರೀತಿ-ವಿಶ್ವಾಸದ ಸದರಿನಿಂದ ವಜಾ ಮಾಡಿಬಿಡುತ್ತೇನೆ ಎಂದು, ಪಂತಮಾಮಾ ಧಮಕೀ ಕೊಟ್ಟಿದ್ದರು. ಆದರೂ ದಾದಲ್ಯಾ ಎಸ್.ಈ ಸಾಹೇಬರಿಗೆ ಅಂಟಿದ್ದ. ಮುದ್ದಮ್ಮರ ತಾಯಿ-ವಾತ್ಸಲ್ಯಕ್ಕೆ ಸೋತಿದ್ದ.

ಯಾರ್‍ಯಾದರೂ ಹಚ್ಚಿಕೊಳ್ಳುವ ಬಾಬ್ತಿನಲ್ಲಿ ದಾದಲ್ಯಾ ಹುಚ್ಚನಾಗುತ್ತಾನೆ.

ಎಸ್. ಈ. ಸಾಹೇಬರ ನಿವೃತ್ತಿ, ಅವನನ್ನು ಈ ವಿಸ್ಮೃತಿ-ಬಂಧನದಿಂದ ಮುಕ್ತವಾಗಿಸಿತು.

ದಾದಲ್ಯಾ ಈಗ ವರುಷದ ಘೋಷಯಾತ್ರೆ ಮುಗಿಸಿ, ಸೇವೆಯ ಶೃಂಖಲಾ ಬಂಧ ತೊಡೆದು, ನವಜೀವ, ಹೊಸ ಅನುಭವ ಪಡೆದು, ಶಮೀವೃಕ್ಷದಡಿಯಲ್ಲಿ ನಿಂತು, ತನ್ನ ಕವಚ-ಕುಂಡಲ, ಧನುರ್ಬಾಣಗಳನ್ನು ಮರಳಿ ಕೊಡಲು ದೇವತಾ ಆವಾಹನ ನಡೆಸಿದ. ಅಸ್ತ್ರ-ಶಸ್ತ್ರಧಾರಿಯಾಗಿ ಮೊದಲನೇ ಸಲಾಮೀ ಎಂದು, ರಾಜೀನಾಮೆಯ ಪ್ರಥಮ ಶರಸಂಧಾನ ಮಾಡಿ, ವಿಜಯಿಯಾಗಿದ್ದ. ಪಾನ-ಸುಪಾರಿಯಲ್ಲಿ ಶ್ಯಾಮರಾಯನಿಗೆ ಬಲಗೈಯಾಗಿ ಸಹಕರಿಸಿ, ಅವನ ಮೇಲೆ ಮೋಹನಾಸ್ತ್ರವೆಸೆದು, ಅವನನ್ನು ತನ್ನ ರಥದ ಹಿಂಬದಿಗೆ ಹೆಡೆಮುರಿಗೆ ಕಟ್ಟಿ ಒಗೆದು ಮುಂದಿನ ದಾರಿ ಕಡಿಯುವ ಸನ್ನಾಹ ನಡೆಸಿದ್ದ.

ಈ ವರುಷದಲ್ಲಿ ಕಚೇರಿ ಇದ್ದೂ ದಾದಲ್ಯಾ ಅಖಂಡ ಸೂಟಿಯ ಸುಖ ಅನುಭೋಗಿಸಿದ್ದ. ಆದರೆ ಆ ಸುಖಾನುಭೋಗದಲ್ಲಿ ಸಾಲೆಯ ಹುಡುಗರು, ಕಾಲೇಜ-ಕುಮಾರರು ಅನುಭೋಗಿಸುವ ಬೇಫಿಕೀರ ವೃತ್ತಿಯ ಸುಖವಿರಲಿಲ್ಲ. ಅನಿರ್ಬಂಧ ಬಂಧನವಿತ್ತು. ಕೈ-ಕಾಲಿಗೆ ತೊಡರಿದ ಬೇಡಿ, ಸ್ವರ್ಣಶೃಂಖಲೆ ಯಾಗಿದ್ದವು. ಗರುಡಭರಾರಿಯ ಅನಿರ್ಬಂದ-ಸ್ವಚ್ಛಂದ-ಉಡ್ಡಾಣ-ಛಂದವಿರಲಿಲ್ಲ. ದೀಪಾವಳಿ, ಕ್ರಿಸ್‌ಮಸ್ ಸೂಟಿ ಅವನಿಗೆ ಸೂಟಿ ಅನಿಸಲೇ ಇಲ್ಲ. ಹಿಂದೆ ಅವನು ಇಡೀ ಮೇ ತಿಂಗಳಲ್ಲಿ, ಮೆಯ್ದುಂ-ಮಲಗಿ, ಯಾರದೋ ರೊಕ್ಕದಲ್ಲಿ ರೇಲ್ವೆ ಪ್ರವಾಸ, ಮೋಟಾರ ಪ್ರವಾಸ ಮಾಡಿ ಹತ್ತೂರು ಅಲೆದು, ನೂರು ಕೆಲಸ ಮಾಡಿ, ಫುಕ್ಕಟೆ ಫೌಜದಾರಿ ನಡೆಸುತ್ತಿದ್ದ. ಆದರೆ ಜೂನದಲ್ಲಿ ಎಸ್. ಈ. ಸಾಹೇಬರು ನಿವೃತ್ತಿಪೂರ್ವ ರಜೆಯ ಮೇಲೆ ಹೋಗಲಿದ್ದುದರಿಂದ, ತಮ್ಮ ಕಾಲಕಿರ್ದಿಯ ಇತಿಹಾಸ, ಕೆಲಸದ ಆಥಾವೇ, ಆಫೀಸ ಪಾಗಾದ 'ಕಾನ್‌ಫಿಡೆನ್ಶಿಯಲ್ ರಿಪೋರ್ಟ್' ಸಿದ್ಧಮಾಡಿ, ಅಧಿಕಾರಸೂತ್ರ ಕೆಳಗಿರಿಸುವ ಸರ್ವ ತಯಾರೀ ಮಾಡಬೇಕಾಗಿತ್ತು. ದಾದಲ್ಯಾ ಮೇ ತಿಂಗಳಲ್ಲಿ ಎಸ್. ಈ. ಅವರ ಬಂಗಲೇ ಬಿಟ್ಟು ಅನ್ಯತ್ರ ಅಲೆದಿರ ಲಿಲ್ಲ. ಜೂನ ತಿಂಗಳು ಕಣ್ಣು ತೆರೆಯಿತು. ಪಾನ-ಸುಪಾರಿಯ ಭರ್ಜರೀ ತಯಾರಿ ನಡೆಯಿತು. ಶ್ಯಾಮರಾಯನ ಮೋಟಾರು ದಾದಲ್ಯಾನ ತಾಬೇದಾರಿಯಾಗಿ ಹಣ್ಣುಗಾಯಿ, ನೀರುಗಾಯಿ ಆಯಿತು. ಇಬ್ಬರೂ ಊರಿಂದ ಬೆಳಗಾಂವಿ, ಬೆಳಗಾಂವಿಯಿಂದ ಊರು, ಮಗ್ಗದಲ್ಲಿಯ ಲಾಳದಂತೆ ಅಲೆದಾಡಿದರು. ದಾದಲ್ಯಾ ಪಿ.ಡಬ್ಲ್ಯು.ಡಿ.ಯ ವಜನ-ವಚಕ ಖರ್ಚುಮಾಡಿ, ಶ್ಯಾಮರಾಯನಿಗೆ, ಪಾನ-ಸುಪಾರಿಗೆ ಬೇಕಾಗುವ ಚಾ-ಪಾಣೀಗೆ ಅಗತ್ಯವಿರುವ ಎಲ್ಲ ಸಾಮಾನು-ಸರಂಜಾಮು

ಸ್ವಸ್ಥಾಯಿಯಲ್ಲಿ ಗಿಟ್ಟಿಸಿಕೊಟ್ಟ. ರೊಕ್ಕದ ಬಾಬತ್ತಿನಲ್ಲಿ ದಾದಲ್ಯಾ ಜೇನುಹಂಕ. ಖರ್ಚುಮಾಡುವಾಗ ಅಂಗೈಗೆ ಅಂಟು ಸವರಿಕೊಂಡಿರುತ್ತಾನೆ. ಒಂದು ಚಿಕ್ಕಾಸೂ ಸಹಜಾಸಹಜೀ ನುಸುಳಿ ಬಿದ್ದರೆ ಆಣೆ. ಈ ಬಾಬತ್ತಿನಲ್ಲಿ ಅವನಿಗೆ ಇದು ತನ್ನದು, ಇದು ಶ್ಯಾಮರಾಯನದು ಎಂಬ ಭೇದ ಕಾಣುವದಿಲ್ಲ.

ಶ್ಯಾಮರಾಯ ದಾದಲ್ಯಾನ 'ಇಂಟೆಗ್ರಿಟಿ' ಮೆಚ್ಚಿದ.

ಪಾನ-ಸುಪಾರಿಯ ಪೇಶ್ವಾಯೀ ದರಬಾರು ನಡೆದು ಬರಖಾಸ್ತ ಆಯಿತು. ಎಸ್. ಈ. ಸಾಹೇಬರು ಎಂಟು ದಿನಗಳಲ್ಲಿಯೇ ಬೆಳಗಾಂವೀ ಬಿಡುವವರಿದ್ದರು. ಮುಂಬೈಯಲ್ಲಿ ಒಂದೆಂಟು ದಿನ ತಂಗಿ ಇಂಗ್ಲಂಡಾಭಿಮುಖವಾಗುವವರಿದ್ದರು. ದಾದಲ್ಯಾನಿಗೆ ಆಗಲೆ ಮುಂಬೈ ಪ್ರಯಾಣದ ಅಗಾವು ಆಮಂತ್ರಣ ದೊರಕಿತ್ತು. ಇಂಗ್ಲೀಷ್ ಸಾಹೇಬರಿಗೂ ಪುರೋಹಿತರ ಗರಜು ಇಲ್ಲದೆ ಇಲ್ಲ.

ಶ್ಯಾಮರಾಯನಿಗೆ ನಾನು ನನ್ನ ಮುಂಬೈ ಪ್ರಯಾಣದ ಬಾತಮೀ ತಿಳಿಸಿದೆ.

"ದಾದಲ್ಯಾ, ಮುಂಬೈಯಾಗ ಎಷ್ಟ ದಿನಾ ಮುಕ್ಕಾಮ್ ಮಾಡಾಂವಾ?" ಶ್ಯಾಮರಾಯ ಕೇಳಿದ.

"ಭಾಳ ಆದರ ಎರಡ-ಮೂರ ದಿನಾ. ಸಾಹೇಬರಿಗಷ್ಟ ಬಾಯ್‌ಬಾಯ್ ಹೇಳಿ, 'ಕರ್‌ಚೀಫ್' ಬೀಸಿದೆ ಅಂದರ ಬಗೀಹರೀತು. ಉದೋ ಲಕ್ಷ್ಮಣಾ ಅಂತs ಮತ್ತ ಬೆಳಗಾಂವಿಗೇ ಬರೂದು. ಇಲ್ಲs ಸಾಂಗಲಿಗೆ ಹೋಗೂದು. ಇನಾ ಎಂ.ಎ. ಒಂದು ಎದೀ ಮ್ಯಾಲ ಕೂತದ. ಅದನ್ನಿಷ್ಟ ಸರಿಸಿದೇ ಅಂದರ ಮೋಕಳೀಕ ಆದೆ. ಎಸ್.ಈ. ಸಾಹೇಬರು ಬ್ಯಾರೇನs ವಿಚಾರ ಮಾಡ್ಯಾರ. ಮುಂಬೈಯಾಗs ಅವರ ದೋಸ್ತ ಮಂಡಳೀ ಅದs. 'ಲಾಜಿಂಗ್-ಬೋರ್ಡಿಂಗ್' ವ್ಯವಸ್ಥಾ ಆಗತದ. ಎಂ.ಎ. ಮತ್ತು ಎಲೆಲ್.ಬಿ. ಎರಡೂ ಮುಗಸಂತ ತಾಕೀತನೂ ಮಾಡ್ಯಾರ! ಎಸ್.ವ್ಹಿ.ಓ.ಸಿ. ಒಳಗ 'ಅಪಾಯಿಂಟ್‌ಮೆಂಟ್' ಅಂತೂ ಖಾತ್ರೀಲೇನs ಆಗತದ. 'ಇಂಟರ್‌ವ್ಯೂ' ಒಂದಕೇ ಮುಗದ್ವದ. ನಾನೂ ವಿಚಾರ ನಡಿಸೀನಿ. ಅನಾಯಾಸಾ ಥೊಡ್ಡ ಮಂದೀ ಗುರುತು ಆಗತದ. ನವಕರೀ, ಶಿಕ್ಷಣಾ ಎರಡೂ ಮುಗಿತಾವ. ಬೆಳಗಾಂವ್ಯಾಗ ನಿಂತೇನು ಬಳಕೊಂಬೂದದ?"

"ಎರಡೂ 'ಕೋರ್ಸ್' ಮುಗಸೂದೇ ಇದ್ದರ, ನಿನಗ ಪುಣೇನೂ ಏನ ಅಡ್ಡೀ ಇಲ್ಲಾ. ನಿಮ್ಮ ಕಾಕಾನ ಮನೀನೇ ಅದs. ಇಷ್ಟ ದಿನಾ ಫುಕಟದವರ ಮನ್ಯಾಗೇ ನಿನ್ನ ಇಟ್ಟು, ಘಂಟೀ ಬಡೀಲಿಕ್ಕೆ ಹಚ್ಚಿದರು. ನಿನ್ನ ಹುಷಾರೀಯಿಂದ, ನೀ ಕಲ್ತು

ಪಾಸಾದಿ. ಆದರೂ ನಿಮ್ಮ ಗೋವಿಂದಭಟ್ಟಾ, ಇನಾ ಸಾರಿಕೋತ ಅಡ್ಡ್ಯಾಡತಾನ: ಎಲ್ಲಾ ಕಾಕಾಂದೇ ಪುಣ್ಯಾ ಅಂತs. ಸಹಜ ಕಾಕಾಗ ಕೇಳಿ ನೋಡು: ನಿನ್ನ 'ಅರೇಂಜ್‌ಮೆಂಟ್' ಏನರs ಆಗತದೇನಂತ ಪುಣೇದಾಗ?"

"ದಾದಾ, ನಿಮಗೇನು ಠಾಂವಿಕಿಲ್ಲ ಅನ್ನೂ ಹಾಂಗಿಲ್ಲಾ. ಕಾಕಾನ ಕೊಳ್ಳಿಗೆ ಹತ್ತ ಲಿಗಾಡಾ! ರಮಾಕಕ್ಕಿ, ಗಿರಿಜಾ 'ಡೆಡ್ ಹಾರ್ಸ್'ಊ. ಹುಡುಗೂರ ಶಿಕ್ಷಣಾ! ಈಗ ಏನರs ಸುರ್‍ಯಾ ಘುಳಸಲಿಕ್ಕೆ ಹತ್ಯಾನ. ನಾಳೆ ಅಂವಗೂ ಸಂಸಾರ ಕೊಳ್ಳಿಗೆ ಬೀಳೂದು. 'ಟ್ರಾನ್ಸ್‌ಫರ್' ಅಂತ ಅದs. ಕಾಕಾ ಅವರಿಗೇನು ನಿಮ್ಮ ಹಾಂಗ ಜೀವಂತ 'ಅರ್ನಿಂಗ್' ಇಲ್ಲಾ. ಜಮೀನದಾರ ಜೀವನ ಅವರದು. ಸುಗ್ಗಿ ಗೆದ್ದರ ಹುಗ್ಗಿ. ಅವರದು ತುಂಬಿದ ಬಂಡಿ. ನಂದೂ ಒಂದ ಮರದ ಭಾರಾ ಯಾಕ ಹಾಕಲಿ? ಮುಂಬೈಕಿಂತಾ ಪುಣೇ ಅಭ್ಯಾಸಕ ಠೀಕ ಅನೂದೇನೋ ಖರೇ. ಹಿಂದಕೇ ಠೋಮರೇಮಾಮಾ ಹೇಳಿದ್ದರು. 'ಇನ್‌ಕಮ್‌ಟ್ಯಾಕ್ಸ ಕಮಿಶನರ್' ನನ್ನ ಆಪ್ತರು. ಅವರ ವಶೀಲೀಯಿಂದ ಪುಣೇ, ಮುಂಬೈ, ಬೆಳಗಾಂವೀ ಎಲ್ಲೆ ಬೇಕ ಅಲ್ಲೇ ನಿನ್ನ ವರ್ಣೀ ಹಚ್ಚತೀನೀ ಅಂತs. ಆದರ ಠೋಮರೇಮಾಮಾ ನಮ್ಮ ಸಾಹೇಬರ ಫಾಯದೇ ತಗೊಂಬೂದು ತುಟ್ಟೀ ಧಂದೇ ಆಗತದ. ಶಕೂನ ಲಗ್ನದ್ದು, ವರ ಶೋಧನದ್ದು ಶುಕ್ಲಕಾಷ್ಠನs ಬೆನ್ನಿಗೆ ಹತ್ತತದ. ಠೋಮರೇಮಾಮಾ, ನನ್ನ ದತ್ತಕ ತಗೋತೀನಿ ಅಂದರೂ, ನಾ ಅವರ ಸೋಬತೀ ಒಲ್ಲೆ ಅಂತೀನಿ ನೋಡರಿ."

"ಯಾಕ ದಾದಲ್ಯಾ, ಸಾಹೇಬರು, ರಂಗಕ್ಕಾ, ಠೋಮರೇಮಾಮಾ ಬ್ಯಾಸರ ತರಸಿದರೇನು? ಕೂತರs, ನಿಂತರs, ಶಕೂನ ಮಾತು ತಗೀತಾರಿಲ್ಲೋ? ಮೂರೂ ಮಂದಿಗೆ ಅದನ್ನ ಬಿಟ್ಟರ ಬ್ಯಾರೇ ಧ್ಯಾಸನs ಇಲ್ಲಾ."

"ಧ್ಯಾಸ ಏನು? ರಂಗಕ್ಕವರಿಗೆ ಹಜಾರ ಧ್ಯಾಸ ಇರತಾವ. ದಾದಾ, ಸಿಟ್ಟಿಗೆ ಬರದಿದ್ದರ ಹೇಳತೀನಿ. ನಾನು ನಿಮ್ಮ ಮುಂದ ಮುಂಗಡೀ ಕೂಸು. ಅಕಾಲ ವೃದ್ಧಾಪ್ಯ ಬರೂ ಹಾಂಗ, ನನಗ ಅಕಾಲ ಜವಾಬ್ದಾರೀ ಭಾರ ಬಿತ್ತು. ಈ ಧಡ ಪಡದಾಗ ಹಣ್ಣ ಆದರೂ ಅನುಭವ ಬಂತು. ಸಾಲೀ, ಅಭ್ಯಾಸಾ, ಶಿಕ್ಷಣ ಸಾಗಸ ಲಿಕ್ಕೆ ಹತ್ತ ಮಂದೀ ಕಾಲ ಹಿಡಿಯೂ ಪ್ರಸಂಗ ಬಂತು. ಅದರಿಂದ ನನ್ನ ಕಲ್ಯಾಣ ಆದದ್ದು ಖರೇ. ಆದರ ಆದರ ಜೋಡೀ ಈ ಅಕಾಲಿಕ ಹಿರೇತನಾ ಬಂತ ನೋಡರಿ. ಅದೂ ಮಾತ್ರ ಈಗ ತ್ರಾಸದಾಯಕ ಆಗಲಿಕ್ಕೆ ಹತ್ತೇದ. ಇಲ್ಲೆ ನಿಂತರ ಎಂ.ಏ. ಮುಗಿಯೂದಿಲ್ಲಾ ಅಂದು ರಾಜೀನಾಮೆ ಕೊಟ್ಟೆ. ಎಸ್.ಈ. ಸಾಹೇಬರದು

ಮುಂಬೈ ಆಮಂತ್ರಣ ಅದs. ನಮ್ಮ ಸಾಹೇಬರದು ಈಗs 'ಪ್ರೋಗ್ರ್ಯಾಮ್' ತಯಾರ ಆಗೇದ. ದಾದಲ್ಯಾ. ನಿನಗ ಶಕೂನ ವ್ಯವಸ್ಥಾ ಹತ್ತಿತೇನಪಾ ಅಂತs. ಮುಂಬೈಗೆ ಹೋದರ, ಹೊಸಾ ಟಾಪ್ಕೂ. ಹೊಸ ಗುರುತಾ; ಮತ್ತ ಸಾಹೇಬ ಮಂದೀ ಭಿಡೇ ಮುರೀದಕ್ಕ ಅವರ ಬಜಾರ-ಮಾಸ್ತರ ಆಗಬೇಕಾಗತದ. ಅವರ ಕಿಟೀ-ವಿಟೀನ್ನ ಸಂಡೇ ಸರ್ವೀಸಕ್ಕ ಕರಕೊಂಡು ಹೋಗಬೇಕಾಗತದ. ಇನ್ನ ಮುಂಬೈ ಬಿಟ್ಟು, ಪುಣೇದಾಗ ನಿಂತರ, ಮುಗದs ಹೋತು. ರಮಾಕಕ್ಕಿ ತನ್ನ ಅಲವಾನ ಸುದ್ದೀ ಕೊಡತಾರ, ದಾದಲ್ಯಾ ಇದನ್ನಿಷ್ಟು ಹಿಂಡಿ ಹಾಕಂತ. ಎಲೆಲ್.ಬಿ. ಆಗಿ ನಾ ಏನ ಮಾಡೂದದs? ಎಲೆಲ್.ಬಿ. ಆದ್ಯೆಪಾ? ಹೊಟ್ಟಿಗೇನ ಮಾಡತೀ ಅಂತ ನಮ್ಮ ನಾಯಕ ವಕೀಲರು ಕೇಳಿದರು. ಅಗದೀ ಖರೇ ಅದs ಅವರ ಮಾತಾ. ಅದರಕಿಂತಾ ಸಾಂಗಲೀ ಠೀಕಾ. ಪಂತಮಾಮಾ ಪಲ್ಯಾ ತರೂ ಧಾವತೀ ಸುದ್ದೀ ಹಚ್ಚಾsಗಿಲ್ಲಾ. ಎಂ.ಎ.ನೂ ಮುಗೀತದ. ಅಷ್ಟರಾಗ ಶಕೂನ ಲಗ್ನ ಬಗೀಹರದಿತ್ತಂದರ 'ಇನ್‌ಕಮ್ ಟ್ಯಾಕ್ಸ್'ದಾಗ ಠೋಮರೇಮಾಮಾನ ವಶೀಲೀ ಹಚ್ಚಲಿಕ್ಕೂ ಠೀಕ ಆಗತದ."

"ದಾದಲ್ಯಾ, ಹಿಂದಕ ಸುರ್‍ಯಾನ್ನದಹಿಂದ ಅರಗಚ್ಚಿ ಮಾತ ಆಗಿ ನಿಂತಿತ್ತು. ಅಂವನ್ನ 'ಟ್ಯಾಕಲ್' ಮಾಡರೀ ಅಂದಿದ್ದಿ. ಅದನ್ನ ನೀನೇ ಮಾಡಿದರ ಹ್ಯಾಂಗ? ನೀವು ಪಾರಿಗೀ ಅವರು ಆಗತೀರಿ. ಅಂವಗೂ ಸ್ಪಷ್ಟ ತನ್ನ ಅಂಬೋಣ ತಿಳಸಲಿಕ್ಕೆ ಅನಕೂಲ ಆಗತದ. ಅಂವಾ ಏನರs ಕಬೂಲಾಗಿ, ನನ್ನ ಕೆಲಸಾ ಮುಂದ ಸಾಗಿಸಿದರ, ನಿನಗೂ ಏನು ನಾನು ಲುಕ್ಸಾನ ಮಾಡಿಗೊಡೂದಿಲ್ಲಾ. ಬೆಳಗಾಂವೀ 'ಹೆಡ್ ಆಫೀಸ್' ಮಾಡಿ, ಅದರ ಇಡೀ 'ಮ್ಯಾನೇಜ್ಮೆಂಟ್' ನಿನಗೇ ಒಪ್ಪಸ್ತೀನಿ. ನಾನು, ಬೆಳಗಾಂವೀ – ಊರಾ ಎರಡೂ ಕಡೇ ಇದ್ದು ಓಡಾಡಿ ಕೆಲಸದ ದೇಖರಖೀ ಮಾಡತೀನಿ."

ಶ್ಯಾಮರಾಯನ ಬೇಟಿ ನನ್ನ ಅಳವಿನ ಆಸು-ಪಾಸಿನಲ್ಲಿ ಬಂದ ಅಂದಾಜು ಹತ್ತಿತು. ಹಿಂದೆ ರಾಜಪ್ಪನಿಗೆ ಚಾರ ಆಣೆಯ ಪಾಲೇ 'ಪಾರ್ಟನರ್‌ಶಿಪ್'ದ ಆಮಿಷ ತೋರಿಸಿದಂತೆ ನನಗೆ ಬೆಳಗಾಂವೀ ಆಫೀಸಿನ 'ಮ್ಯಾನೇಜ್ಮೆಂಟ್'ದ ಆಶೆಯನ್ನು ತೋರಿಸಿದ. ಅದರ ಬಗ್ಗೆ ಏಕದಮ್ ರುಕಾರ-ಸಕಾರ ಹೇಳುವದಕ್ಕಿಂತ ಮುಂಚೆ, ಅವನನ್ನು ಇನ್ನಷ್ಟು ಹತ್ತಿರ ಮಾಡಿಕೊಳ್ಳುವ ಗರಜಿತ್ತು. ಆ ನಿಮಿತ್ತದಿಂದ ನಾನು ಶ್ಯಾಮರಾಯನಿಗೆ ಮುಚ್ಚುಮರೆ ಇರದೆ, ಅವನ – ಬಸವಂತಿಯು

ಸಂಬಂಧ ಬಂದ ವಿಷಯು ನನಗೂ ಅರಿವಿದ್ದ ಬಗ್ಗೆ ನೇರವಾಗಿ ಹೇಳಿದೆ. ಅದನ್ನು ಕುರಿತು ಜನ ಆಡಿಕೊಳ್ಳುತ್ತಿರುವ, ಅದೇಕೆ ರಂಗಕ್ಕನವರೇ ಪಾನ-ಸುಪಾರಿಗೆ ಬಂದ ಸಮಯದಲ್ಲಿ–"ಅಷ್ಟ ಕಣ್ಣಿಗೆ ಬೀಳೂ ಹಾಂಗ ಇದ್ದರ ನೋಡು ದಾದಲ್ಯಾ" ಎಂದು ಅಂದಿದ್ದರು. ಆ ಒಂದು ವಿಷಯ ಬಿಟ್ಟು ಏನನ್ನು ಹೇಳಿದರೂ ಮಾಡಲಿಕ್ಕೆ ಸಿದ್ಧ – ಪಂತರ ಮನೀ ಅನ್ನದಿಂದ ಈ ಪಿಂಡ ಬೆಳಕೋತ ಬಂದಾವ. ಅಜ್ಜ ಆರ ತಲೀ, ಮುತ್ತ್ಯಾ ಮೂರ ತಲೀ! ನಮಗ ಅವರ ಮನೀ ಕಿತಬೀ ಅಂದರ ಸ್ವಂತದ ಕಿತಬಿ ಇದ್ಧಾಂಗ" ಎಂದಿದ್ದೆ. ರಂಗಕ್ಕ ಸುಮ್ಮನಾದರು.

ಹೀಗೆ ರಂಗಕ್ಕ ನನ್ನನ್ನು ಕೇಳಿರಲಿಲ್ಲ. ನಾನೂ ಹಾಗೆ ಅವರಿಗೆ ಉತ್ತರಿಸಿರಲಿಲ್ಲ. ಶ್ಯಾಮರಾಯನ ಮುಂದೆ ಕೇವಲ ನಾಟಕ ನಡಿಸಿದ್ದೆ. ಅವನ ಸುತ್ತಲೂ ಜಾಲ ಹರಡಿ ಬಲೆಯಲ್ಲಿ ಜಗ್ಗುವ ಡಾವು ನಡೆಸಿದ್ದೆ:

"ರಂಗಕ್ಕವರಿಗೆ ನಿಮ್ಮದು, ಸೋನಕ್ಕಂದು ಬಿಘಡಾಯಿಸಿದ ವಿಷಯಾ ತಿಳಧಾಂಗ ಇಲ್ಲಾ. ನಾ ಅವರಲ್ಲೆ ಇರೂ ತನಕಾ ನಿಮ್ಮ ಹೇಳಕೀ ಪ್ರಕಾರಾ ಬ್ಯಾರೇ 'ಇಂಪ್ರೆಶನ್' ಆಗೂ ಹಾಂಗs ಹೇಳಿಕೋತ ಬಂದೆ. ಇದು ಭಾಳ ದಿನಾ ಟಿಕಾಸೂದಲ್ಲಾ. ಇದ್ದ 'ಫ್ಯಾಕ್ಟ್ಸ' ಹೇಳಿಬಿಡೂದು ಠೀಕ ಕಾಣಸ್ತದ. ಹರಕಚಂದ ಮಾರವಾಡೀ ಸುದ್ದೇ ಕಣ್ಣ ಮಿಟಕಿಸಿ ಕೇಳತಾನ: ಏನಪಾ, ನಿಮ್ಮ ರಾಯರ ಶೀರೀ ಖರೀದೀ ಬಂದ ಆತು. ಸೆರಗು ಕಚ್ಚಿತೇನಂತ. ನಾಳೆ ನೀವೇ ಹೋಗಿ ಇವರ್ನ ಗಾಠಾಸಿ ಕೇಳಿದಿರಿ ಅಂದರ, ಅವರೆಲ್ಲಾ ಕಿಂವಿ ಮ್ಯಾಲ ಕೈ ಇಟಗೊಂಬೂವವರು. ಉರ್ಲ ಬರೂದು ನನಗ. ಆ ಉರ್ಲ ಬಂದರೂ ಬರಲಿ, ನಿಮಗ 'ಕಾ:ಶನ್' ಕೊಟ್ಟು ಇಡೂದು, ನಾ ನಿಮ್ಮ ಪುರೋಹಿತಾ, ಕುಟುಂಬದ ಆಸ್ಥೇವಾಯಿಕಾ ಅನ್ನೂ ಕಾರಣದಿಂದ ರಾಸ್ತ ಅದs ಅಂತ ತಿಳಿಸಿ ಇಟ್ಟೆ. ಇಲ್ಲೀ ತನಕಾ ನಿಮ್ಮ ಮುಂದ ಚಕಾರ ಶಬ್ದ ತಗದಿದ್ದಿಲ್ಲಾ. ಈಗ ಪ್ರಸಂಗ ಬಂತೂ ಅಂತ ಹೇಳಿದೆ.

ಒಂದ ಠಿಕಾಣದಾಗ ಇರತೀನ್ಯಂದರಿ. ಎಲ್ಲೆ ಇರಾವ್ರು? ಊಟಾ-ಉಡಿಗೆಗೆ ಏನ ಮಾಡೂವವರು? ಹುಡುಗೂರು ಥೊಡ್ಡವರು ಆದರು. ಕಾಕಾ ಇದ್ದಾರ. ಸೋನಕ್ಕನs ಇರಬೇಕಂತ ಏನ ಬರಕೊಟ್ಟಿಲ್ಲಾ. ಶ್ಯಾಮರಾಯರು ಮನೀ ಅವರ್ನ ಎಂದ ಕರಸವರು? ಏನ ಬಸವಂತಿನ್ನs ಉಡಕೀ ಆದರೋ? ನಿಮ್ಮ ಕಾಳಜೀ ತಮಗೇ ಹತ್ತಿಧವರ್ಹಾಂಗ ಮಂದಿ ಕೇಳಲಿಕ್ಕೆ ಹತ್ಯಾರ. ಈ ಕಿಲಾಪನ್ನ ನೀವು ದರಜ ಮಾಡದಿದ್ದರೂ, ಅದು ನಿಮ್ಮ ತಲೀನs ಕೆಡಸ್ತದ. ಕೆಲಸದ ಧಾವತೀ

ಬುಂವ ದೇಪ ಹಣ್ಣ ಆಗತವ. ಈ 'ಮೆಂಟಲ್ ವರೀ'ಯಿಂದ ಜೀವ ಸಣ್ಣ ಆಗತವ. ಏನ ಘಳಿಸಿದರೂ, ಎಷ್ಟ ಘಳಿಸಿದರೂ ದಾದಾ, ನಿಮಗ ಸುಖಾ ಅನೂದು ಶೂನ್ಯನs."

"ಅಗದೀ ಖರೇ ಮಾತಾಡದೀ ದಾದಲ್ಯಾ. ಸುರ್ಯಾನ ಸಂಬಂಧೀ ಅವಗಚ್ಚಿ ಮಾತಾಡಿಬಿಟ್ಟಾಗಿನಿಂದ ಈ ವಿಚಾರ ತಲೀ ತಿಲ್ಲಿಕ್ಕಿ ಹತ್ತೇದ. ಆಕೀದು-ವಿಶ್ಯಾಂದು ವಿಷಯಾ ಮರ್ತುಬಿಡು. ಅವರ ಮೋತೀ ಈ ಜನ್ಮದಾಗಂತೂ ನೋಡೂದು ಸಾಧ್ಯನs ಇಲ್ಲಾ. ಅಂವಾ ದತ್ತಕ್ಕ ಹೋಗಿ ಖುಣಾನs ಕಡಕೊಂಡಾನ. ಇದ್ದೂ ಬಿದ್ದೂ ಇಕೀ ವಿಚಾರಾ. ನಾ ಇಟಗೊಂಡ ಬಸವಂತೀಯಲ್ಲೆ ಇನಾ ಇಷ್ಟಿಷ್ಟು ಧೊಡ್ಡ ಗುಣಾ ಅವs. ಅದರ ಗಂಧ ಸುದ್ದೇ ಇಕೀಯಲ್ಲೆ ಇಲ್ಲಾ. ಬಸವಂತಿಗೆ ಹತ್ತ ಶೀರಿ-ವಸ್ತಾ, ಒಡವೀ ತಂದ ಕೊಟ್ಟರ ಅದರ ಕಡೇ ಕಣ್ಣೆತ್ತಿ ಸುದ್ದೇ ನೋಡ ಲಿಲ್ಲಾ. ಇಕೀ ಗಂಡ ಬಿಟ್ಟ ವ್ಯಥಾ ಇಲ್ಲದs ರೇಶಿಮಿ ಕಾಟ ಶೀರೀ ಉಟಗೊಂಡು ಪುಣೇದ ಊರಾಗ ಮೆರೀತಾಳ. ಮಕ್ಕಳ್ನ ಕರಕೊಂಡು ಚಾಹಾದ ಅಂಗಡಿಗೆ ಹೋಗತಾಳ. ನಾನೇ ನೋಡೀನಿ ಈ ಕಣ್ಣಲೇ, ವಿಶ್ಯಾ, ಸುರ್ಯಾ, ಇಕೀ ನಕ್ಕೋತ, ಕೆಲಕೋತ ತಾಸಗಟ್ಟಲೆ ಲಕ್ಷ್ಮೀರೋಡ್‌ದಾಗ ನಿಂತದ್ದು. ಪುಣೇದಾಗಿನ ಮನೀ ಖಾಲೀ ಮಾಡಿಸಿದ್ದೆ. 'ವೈಟ್‌ವಾಶಿಂಗ್-ರಿಪೇರ್ಸ್' ನಡದಿತ್ತು. ನಾಕ ದಿನಾ ಅಲ್ಲಿ ನಿಂತರ ಇವರ ನಾಟಕಾ ನೋಡಿ ನನಗೇ ಜೀವ ಹೇಸಿಕಿಟ್ಟಿತು. ಬಸವಂತಿ ಧಂದೇಕs ಇಳೀತಿದ್ದಳು. ನಾ ಕೈಕೊಟ್ಟೆ. ಬಚಾವಾದಳು. ನನ್ನ ಹೊರ್ತ ಗತೀ ಇಲ್ಲಂತ ಇಟ್ಟಾ್ಹಂಗ ಇದ್ದಲ್ಲೆ ಬಿದ್ದಿರತಾಳ. ಇಕೀ ಹಾಂಗ ಹರಾಹುರಿಗೇ ಬಿದ್ದಿಲ್ಲಾ. ಯಾರೋ ಅಂದಾರ "after all prostitution is woman's business" ಅಂತ. ಅದನ್ನ ಸುಳ್ಳ ಹ್ಯಾಂಗ ಮಾಡಲೀ ಅಂತ ಇಕೀ ಜಿದ್ದ ಕಟ್ಟಿಧಾಂಗ ಆಗೇದ. ಇಕಿನ್ನ ಮೀರಸೂವಂಥಾ ಉಲ್ಲೂ ಜಾತೀ ಹೆಣ್ಣು ಅನ್ಯತ್ರ ಸಿಗೂದು ದುರ್ಮಿಳನs. ಆಕೀ ನೆನಪs ತಗೀಬ್ಯಾಡಾ. "She is forever dead and gone to me"

ನಿನಗ ಹೇಳಲಿಕ್ಕೆ ಅಡ್ಡೀ ಏನ ಇಲ್ಲಾ. ಬಸವಂತಿ ಈಗ ಪುಣೇದಾಗ ಇದ್ದಾಳ. ಬಸವಂತೀ ಅಂದರ ಇದೇ ಕಡವ ತಂವ ಗಂಧದ ಕೊರಡ ಇದ್ದಾಂಗ ಹಾಳs. ತಿದ್ದ ಬೇಕು-ತೀಡಬೇಕು. ಇನಾ ಚಕಳೀ ಹಾರಸಬೇಕಾಗೇದ. ಆಕೀಗೆ ಛಲೋ ಕಂಪನೀ ಇದ್ದರ ಗಿರಿಜಾನ ತಲೀ ಮೆಟ್ಟಿ ಹಾರತಾಳ. 'ಬಂವಕ್ಯಾಸಿ. ಜೆರಿಗಿ' ಭಾಷಾ ಅಷ್ಟ ಬಿಟ್ಟಳಂದರ ಫೇಟ ಗಿರಿಜಾನs. ಅದರ ಇಂಥಾ ಊಚ ಗಿರಾಕಿ 'ಡೇಂಜರಸ್'ನೂ

ಇರತಾವ. ಯಾವ ಕಡೆ ಹೊಳ್ಳ್ಯಾವು ತಿಳಿಯೂದು ಕಠಿಣಾ. ಸದೋದಿತ 'ಹ್ಯಾಪರಿಂಗ್' ಬೇಕಾಗತದ. ನನಗ ಅದು ಸಾಧ್ಯ ಇಲ್ಲಧಾಂಗ ಆಗೇದ. ಸುರ್ಯಾ ಬರದಿದ್ದರೂ-ಬಂದರೂ, ನನಗ ಈ ಜಾಗಾ ವರ್ಷಾರ ತಿಂಗಳಾ ಬಿಡಲಿಕ್ಕೆ ಬರ ಧಾಂಗ ಆಗೇದ. ಎಲ್ಲಾ ಕೆಲಸಾ ಇನಾ ಅರಗಚ್ಚಿ ಆಗಿ ಕೂತಾವ. ಅವು ಮುಗದು 'ಫೈನಲ್' ಬಿಲ್ ಆತಂದ್ರ ಪುಣೇದಾಗs ಮೆಟ್ಟ ಹಾಕಲಿಕ್ಕೆ ಅನಕೂಲ ಆಗತದ. ಅಗದೀ 'ಕಾನ್‌ಫಿಡೆನ್ಸ್'ದಾಗಿನ ಒಬ್ಬ ವ್ಯಕ್ತೀ ಸಿಕ್ಕರ ಬಸವಂತಿಗೆ ಜೋಡಮಾಡಿ ಪುಣೇದಾಗs ಕಾಯಂ ಆಗಿ ಅಕಿನ್ನ ಇಡಬೇಕಂತ ಮಾಡೀನಿ. ಉಳದ ಬಾಬತ್ಯಾಗ ಬಸವಂತೀ 'ಕಾನ್‌ಫಿಡೆನ್ಸ್' ಅದs ನನಗ. ಇಕೀದೂ ಬಸವಂತಿದೂ ಎಲ್ಲ್ಯರs ಎಳೀ ಜೋಡಿಸಿದರ ಇಕೀ ಬಸವಂತೀ ಮ್ಯಾಲ ಎಲ್ಲಾದ್ರೂ 'ವಿಚ್‌ಕ್ರ್ಯಾಫ್ಟ್'ಪ್ರಯೋಗ ಮಾಡೂ ಅಕೀ. ಬಸವಂತೀ ದಶಿಂದ ಏನರs ಅಷ್ಟಿಷ್ಟು ಸಂಶಯ ಬರತಿದ್ದರ ಇಷ್ಟರ ವಶಿಂದ. ಊರಾಗ ಇದ್ದಾಗ ಯಾರೋ ಅಕೀ ಕಿಂವಿ ಊದಿದ್ದರು. ಇನಾ ಅಳತ್ಯಾಗ ಇತ್ತಂತ ಈ ಜಾಗಾನೇ ಬಿಡಿಸಿದೆ. ದಾದಲ್ಯಾ "I have full confidence in you" ನೀ ಕಬೂಲ ಇದ್ದೀಯೇನು ಪುಣೇದಾಗ ನಿಂದರಲಿಕ್ಕೆ? "You are capable of making men out of clay" ಸುರ್ಯಾನ್ನ ಹಾದಿಗೆ ತಂದ ಹಾಂಗೂ ಆಗ ತದ. ಬಸವಂತೀ ಮ್ಯಾಲs 'ವಾಚ್'ನೂ ಇಟ್ಟಾಂಗ ಆಗತದ. ನಿನ್ನ ರಾಹಣೇ-ಊಟನೂ ಪರಭಾರೇ ಹೋಗಿ ಎಂ.ಏ.,ಎಲ್‌ಎಲ್.ಬಿ.ನೂ ಮುಗೀತದ. ನೀನು ಇನ್ನೂ ತನಕಾ ನನ್ನ ಕಡಿಂದ ಯಾವದೇ ರೀತಿಯಿಂದ 'ಹೆಲ್ಪ್' ತಗೊಂಡಿಲ್ಲಾ. ಕೊಡರೀ ಅಂತ ಯಾಚನಾನೂ ಮಾಡಿಲ್ಲಾ. ಈ 'ಬೋರ್ಡ್-ಲಾಜ್'ದಕಿಂತಾ ನಿನ್ನ ಜವಾಬ್ದಾರೀ ಥೊಡ್ಡವದ. ಅದರ ಠಾಂವಿಕ್ಯದ ನನಗ. ಅದನ್ನೂ 'ಕಾಂಪೆನ್ಸೇಟ್' ಆಗೂ ಹಾಂಗ ಏನರs ಮಾಡತೀನಿ. ಸುರ್ಯಾನ್ನ ಒಪ್ಪಿಸಿದರ, ನಿನ್ನಂತೂ ಬೆಳಗಾಂವೀ ಆಫೀಸದ 'ಮ್ಯಾನೇಜ್ಮೆಂಟ್'ಕ್ಕ ಇಡತೀನಿ. ಯೋಗ್ಯ ಪಗಾರನೂ ಕೊಡತೀನಿ. ಅಲ್ಲದೆ 'ಟು-ಎನಾ-ಪಾರ್ಟನರ್‌ಶಿಪ್'ನೂ ಠರಾಸ್ತೀನಿ. ಏನಂತೀ? ಕಬೂಲs? ಎಸ್. ಈ. ಸಾಹೇಬರ ಜೋಡೀ ಮುಂಬೈಗೆ ಹೋದಾಂವಾ ತಿರಿಗಿ ಇಕಡೆ ಬರೇ ಬ್ಯಾಡಾ. ಪುಣೇಕ್ಕs ಇಳದಬಿಡು. 'ಡೈರೆಕ್ಟ್' ನಮ್ಮ ಬಂಗಲೇಕ್ಕs ಟಾಂಗಾ ಹೊಡಸು. ಅಲ್ಲೆ ಖಾದರ್ ಇದ್ದಾನ. ಅಂವಗ ಪತ್ರಾ ಹಾಕಿ ಇಡತೀನಿ. ನಾಕಾರ ದಿನಾ ನೀನೂ ನಿಂದರೂದರಾಗ ಅಂವನ್ನ ಇಕಡೆ 'ಡಿಸ್‌ಪ್ಯಾಚ್' ಮಾಡಿಬಿಡು. ಶ್ಯಾಮರಾಯ ಕೋರಾ ಚೆಕ್ಕು ಕೊಟ್ಟು ಹೇಳಿದ.

"ದಾದಲ್ಯಾ 'I have full confidence in you' ಎಂದು ಶ್ಯಾಮು ರಾಯ ಹೇಳಿದ್ದರಲ್ಲಿ ಅರ್ಥವೂ ಇರಲಿಲ್ಲ; ತಥ್ಯವೂ ಇರಲಿಲ್ಲ. ದಾದಲ್ಯಾ ಮುಂಗಡಿ ಕೂಸು. ತಿದ್ದಿದಂತೆ-ತೀಡಿದಂತೆ ಮೂರ್ತಿಯಾಗುವ ಹಸಿ ಮಣ್ಣಿನ ಮುದ್ದೆ. ಎಂದು ಅವನ ಭಾವನೆಯಾಗಿರಬೇಕು. 'Prostitution is woman's business' ಎಂದು ಸೋಸಕ್ಕನ ಬಗ್ಗೆ ಅಂದಿದ್ದ. ಇಂದಿಲ್ಲ ನಾಳೆ ಇದೇ ಮಾತನ್ನು ಬಸವಂತಿಯ ಕೊರಳಿಗೂ ಕಟ್ಟಿ ಅವಳ ಕೈ ಬಿಟ್ಟನೆಂದರೆ – ಅವನು ಇಂಥ ಆರೋಪ ಕೊಟ್ಟು ಬಸವಂತಿಯ ಕೈ ಬಿಟ್ಟನೆಂಬ ವಿಷಯ ಎಲ್ಲರಿಗೂ ತಿಳಿದರೆ, ದಾದಲ್ಯಾನ ಪಾಡು ನಾಯಿಯ ಪಾಡಾಗುತ್ತಿತ್ತು.

ಸುರೇಶನನ್ನು 'ಟ್ಯಾಕಲ್' ಮಾಡುವ ಸಮಸ್ಯೆಯೇ ಇರಲಿಲ್ಲ. ಅವನು ಶಕೂನನ್ನು ಆಗಲೆ ಒಪ್ಪಿಕೊಂಡಿದ್ದ. ವಿಶ್ಯಾ-ಸುರ್ಯಾ ಕಾಕಾನ ಅಚ್ಚೆಯ ಕೂಸುಗಳು. ಅವರ ಮನಸ್ಸು ಮುರಿಯುವ ಯಾವ ಕೆಲಸವನ್ನೂ ಕಾಕಾ ಮಾಡರು. ಸಾಹೇಬ ರಿಗೆ ಇದ್ದ ಸಂಗತಿಯನ್ನು ತಿಳಿಸಿ, ಹರಕತ್ ಇರದಿದ್ದರೆ, ಶಕೂನನ್ನು ಸುರೇಶನಿಗೆ ಕೊಡಿರಿ ಎಂದು ನೇರವಾಗಿ ಹೇಳಿಬಿಡುತ್ತಿದ್ದರು. ಆಚು ಇರುವದು ಹೆಣ್ಣಿನವರಿಗೆ. ಅವರಿಗೆ ಕಾಕಾ ಅವರ ಮಾತು ಪಟಾಯಿಸಿ, ಶ್ಯಾಮುರಾಯನ ನೀತಿಯೇ ಅನೀತಿಯ ದೆಂದು ಭಾವನೆಯಾದರೆ, ಅವರು ಈ ಸಂಬಂಧಕ್ಕೆ ನಿಂತ ಕಾಲಮೇಲೆ ಒಪ್ಪು ತ್ತಿದ್ದರು. ನಾಲಸ್ತೀ ಆಗುತ್ತಿತ್ತು ಶ್ಯಾಮುರಾಯನದು.

ಇಂಗ್ಲೀಷ್ ಸಾಹೇಬರ ಜಾಗಗಳನ್ನು ದೇಶೀ ಸಾಬರು ಭೂಷಿಸತೊಡಗಿ ದ್ದರು. ನಮ್ಮ ಇ.ಇ. ಸಾಹೇಬರೂ ಸರ್ವೀಸದ ದೃಷ್ಟಿಯಿಂದ ಹಿರಿಯರಾಗಿ ಎಸ್.ಈ. ಜಾಗೆಗೆ ವರ್ಣೀ ಹಚ್ಚಿಕೊಂಡು ಕೂತಿದ್ದರು. ಅವರು ಎಸ್.ಈ. ಆದರೆ, ಮತ್ತೆ ಶ್ಯಾಮುರಾಯನಿಗೆ ಘನ ಪಂಚೀತಿಗೆ ಇಡುತ್ತಿತ್ತು. ಆಗ ಅವರಿಗೆ ಅವನ ಭಾನಗಡೀ ವಿದಿತವಾಗುತ್ತಿತ್ತು. ಸುರೇಶ ಅಳಿಯನಾಗಿರುತ್ತಿದ್ದ. ಎ.ಇ. ಸ್ಥಾನದಿಂದ ಇ.ಇ. ಸ್ಥಾನಕ್ಕೆ ಹೋಗುತ್ತಿದ್ದ. ಬೇರೆ ಇದ್ದವರು ಒಂದಾಗುತ್ತಿದ್ದರು. ಶ್ಯಾಮು ರಾಯ ಏಕಮಾತ್ರ ಅನಿಕೇತನಾಗುತ್ತಿದ್ದ. ಅವನಿಗೆ ಸುಖವಂತೂ ಸಿಗುವ ಆಶೆಯೇ ಇರಲಿಲ್ಲ. ತಳಮಳ ಕಡೆಯ ವರೆಗೂ ಕಡಿಯುತ್ತಿರಲಿಲ್ಲ.

ಇದನ್ನೆಲ್ಲ ವಿವರವಾಗಿ ಹೇಳಿ —

"ದಾದಾ, ಅರ್ಥಾತ್ ಇದು ನನ್ನ ವಿಚಾರಾ. ನೀವೂ ಹೊಟ್ಟೀಯೊಳಗಿನ ಹಾಕ ಮಾತು ಬಿಚ್ಚಿ ಹೇಳಿದಿರ್ಯಂತ ನನಗೂ ಬಿಚ್ಚಮನಸಲೇ ಮಾತಾಡಬೇಕಾತು.

ಪ್ರಣೇದಾಗ ನಿಮ್ಮ ಮನ್ಯಾಗ ಇರೂ ಅಂದರಿ. ಅದು ನಿಮ್ಮ ಥೊಡ್ಡ ಮನಸಾ. ಸಾಹೇಬರಲ್ಲೆ. ನನ್ನ ಜಾಗಾ ಫಟ್ಟಿ ಮಾಡಿದವರೂ ನೀವೇ. ನಿಮ್ಮ 'ಡ್ಯಾರೆಕ್ಟ್ ಹೆಲ್ಪ್' ನಾ ತಗೊಂಡಿರಲಿಕ್ಕಿಲ್ಲಾ. 'ಇನ್‌ಡಿರೆಕ್ಟ್‌ಲೀ' ನೀವೇನು ಥ್ವಾಡೇ ಸಹಾಯ ಮಾಡಿಲ್ಲಾ. ನಾನು ಅದನ್ನ ಮರೀಯೂದು ಸಾಧ್ಯನಽ ಇಲ್ಲಾ. ದಾದಲ್ಯಾ ಒಮ್ಮ ಯಾರ್ನರ ಹಚಿಗೊಂಡಾ ಅಂದರ ಮುಗೀತು. ಜೀವಾ ಕೊಡಲಿಕ್ಕೆ ಸುದ್ದೇ ಹಿಂದ-ಮುಂದ ನೋಡೂ ಅಂವಾ ಅಲ್ಲಾ. ನಿಮ್ಮನ್ನ ಹಚಿಗೊಂಡೇ ಅಂತ ಇಷ್ಟ ಸ್ಪಷ್ಟ ಮಾತಾಡಬೇಕಾತು. ಕಾಕಾ-ವಿಶ್ಯಾನ್ನ ಏರಿಗಟಿಗೊಂಡೇ, ನಿಮ್ಮನ್ನ ಇಳಿಸಿದೆ ಹೀಂಗ ಮಾತ್ರ ಭಾವಿಸಬ್ಯಾಡ್ರೀ. ಹಾಂಗ ಭಾವನಾನೇ ಮಾಡಕೋತಿದ್ದರ 'forgive and forget' ಅನುಸರಸೂಣು. 'as if nothing has happend.' ಅಂತಽ ನಾನೂ ಇರೂದು. ನೀವೂ ಇರೂದು."

"ದಾದಲ್ಯಾ ಉಳದ ವಿಚಾರಾ ಹಿಂದಾಗಡೇ ಮಾಡೂಣು. ನೀ ಮಾತ್ರ ಪ್ರಣೇಕ್ಕ ಇಳದೇಬಿಡು. ಬಸವಂತೀ ಕಾಳಜೀ ನಿನಗ ಹತ್ತಿತು. ನಾನೂ ಹತ್ತೆಂಟ ದಿನಾ ಬಿಟ್ಟು ಅಕಡೆ ಹಾಯತೀನಿ. ಸುರ್ಯಾನ್ನ ಅಗಳ್ಯಾಡಿಸಿ ಇಟ್ಟಿರೂ. ಬಸವಂತಿ, 'ಪೂಯಿಂಗ್-ಬಿಜಿನೆಸ್'ಗೆ ಲಾಯುಖ ಇದ್ದಾಳ. ಸುರ್ಯಾನ ಮ್ಯಾಲಽ ಅಕೀ ಛಾಪ ಹಾಕೂ ಹಾಂಗ ಮಾಡು. ನೀ ಅಲ್ಲೆ ಹೋಗಿ ನಿಂತೀ ಅಂದರ, ನಂದು-ಬಸವಂತೀದು ಸಂಬಂಧಾ ಕಾಕಾ ಅವರಿಗೆ ತಿಳೀತದ. ಗೊತ್ತಾಗಲಿ. ಎಷ್ಟ ದಿನಾ ಅಂತಽ ಮುಚ್ಚಿ ಇಡೂದು. ನನ್ನ ಆಶಾ ಅವರು ಬಿಟ್ಟಾರ. ಅವರ ಆಶಾ ನನಗ ಇಲ್ಲಾ. ನಾ ಏನ ಮಾಡಿದ ಸೌಭಾಗ್ಯನೂ ಅವರಿಗೆ ಅಷ್ಟರಾಗೇ ಅದಽ. ನಾ ಬಸವಂತಿನ್ನ ಕೂಡಿದ್ದರ ಕೆಟ್ಟ ಪರಿಣಾಮಾ ಇಕೀ ಮ್ಯಾಲ ಆದೀತಂತ ನಿನಗ ಅನಸಬಹುದು. ಅದು ಅಗದೀ ಅನಾರಾಯೀ ಅದಽ. ಇದೇ ಕಾರಣದಿಂದ ಅಕೀ ಏನು ಸಣ್ಣ ಆಗೂ ಜೀವನ ಅಲ್ಲಾ. ಆದಲೂ ಅಂತೂ ತಿಳೀ. ಅದೇ ಚಿಂತೀಯಿಂದ ಟಿಕ್ ಅಂದಳು ಅಂತನೂ ಭಾವಿಸಿಕೋ. ಅದರಿಂದ ನನಗೇನು ಸೂತಕ ಬರಬೇಕಾಗೇದ? ನಾ ಎಂದೋ ಅಕೀದು ಜೀವಂತ ಶ್ರಾದ್ಧಾ ಮಾಡೀನಿ. ಇಂದ ಟಕ್ಕ ಅಂದರ ನಾ ಏನು ದರ್ಭ ಧಾರಣ ಮಾಡೂ ಥಾವತೀ ಉಳದಿಲ್ಲಾ. ಸಾಹೇಬರಲ್ಲಿ ಕಾಮಗಿರಿ ಅದಽ ಅಂತ ನಾನೂ ರಾಮರಾಮ್ ಮಾಡಬೇಕಾಗೇದ. ನನ್ನ ರಾಮರಾಮ್, ಈ ಸಾಹೇಬರಿಗೆ ಅಲ್ಲಾ – ಆ 'ಪ್ರೋಸ್ಟ್'ಗೆ. ಇವರ ಶಕೂ ನಮ್ಮ ಸುರ್ಯಾನ ಹೇಣತೀ ಆಗಿ ಬಂದರ ಇದೇ ಕಣ್ಣಲೇ ಅಕಿನ್ನ ನೋಡಕೋತ ಇರಬೇಕು. ಅಕೀ ಅಪ್ಪಾ ನನ್ನ ಜೀವನಾನೇ

ಹಾಳಮಾಡಿದಾ. ಅದರ ನೆನಪು ನಿಮಿಷ ನಿಮಿಷಕ್ಕ ಆಗತದ. ಇದು ಅಶಕ್ಯ ದಾದಲ್ಯಾ, ಸುರ್ಯಾ ನನ್ನ ಕಾಮಗಿರಿ ಮುಂದ ಸಾಗಸದಿದ್ದರೂ ಅಡ್ಡೀ ಇಲ್ಲಾ. ನಾ ಇಲ್ಲೀದ ಗುಳೇ ಕಿತ್ತಿದರೂ ಅಡ್ಡೀ ಇಲ್ಲಾ. ಆದರ ಅಪಂದು-ಶಕೂಂದು ಸಂಬಂಧ ಕೂಡಿ ಅಂವಾ ನನ್ನ ಜೋಡೀ ಇರೂದು ಶಕ್ಯ ಇಲ್ಲಾ. ನಾ ತಂದೀ - ಅಂವಾ ಮಗಾ ಅನೂ ಕಳಕಳೀಯಿಂದ ಅವಗ ನನ್ನ ಕಡೆ ಬರಬೇಕಾಗಿದ್ದರ, ಅಂವಾ ಶಕೂನ ಪರ್ಲಹರಕೊಂಡೇ ಬರಬೇಕು. ಅದು ಶಕ್ಯ ಇರದಿದ್ದರ ಅಂವಾ ನನ್ನ ಜೀವಂತ ಶ್ರಾದ್ಧ ಮಾಡಬೇಕು. ಇದನ್ನ ಸೂಕ್ಷ್ಮ ಆಗಿ ಸುರ್ಯಾಗ ತಿಳಸು. ನಾ ತಂದೀ ಅನೂ ಕಳಕಳೀಯಿಂದ ಈ ಮಾತ ತಿಳಸೀನಿ ಅಂತ ಹೇಳು. ದಾದಲ್ಯಾ ಅಲ್ಲಿಗೆ ಬರತಾನ. ನಮ್ಮ ಬಂಗಲೇದಾಗs ನಿಂದರತಾನ ಅಂತs ನಾಳಿಂದ ನಾಳೇ ಪುಣೇಕ್ಕ ಬರೀತೀನಿ. 'it is finally decided' ಹೌದಲ್ಲೋ ದಾದಲ್ಯಾ?"

"ನನಗ ಎರಡ ದಿನದ ವ್ಯಾಳ್ಯಾ ಕೊಡರಿ. ನಾನೂ ಅಷ್ಟು ನಿವಾಂತಾಗಿ ವಿಚಾರ ಮಾಡತೀನಿ. ನಾ ಲಟ್ಟನೇ ಒಪಿಗೊಂಡೆ. ನೀವೂ ನನ್ನ ಪುಣೇಕ್ಕ ಹೊತ್ತ ಹಾಕಿದರಿ. ನಾಕೂ ವ್ಯಾಳ್ಯಾ ಸರೀ ಇರೂದಿಲ್ಲಾ. ನಾನೇ ಅಲ್ಲೆ ಇರೂವಕ್ಕ ಕತವಾಸಿದೆ. ನಿಮಗೇ ನಾ ಇರೂದು ಬ್ಯಾಡಾತು. ಅಂದರ, ಮತ್ತ ನನಗ ಕೋರ್ಯಾಣ ದಲ್ಲಿ ಭಿಕ್ಷಾ ಅಂತs ಹೊಂಡಬೇಕಾಗತದ. ಖರೇ ಅಂದರ ನಿಮಗ ಯಾರೂ ಆಗದವರು, ನಿಮಗ ಅಹಿತ ಆಗಲಿ ಅನೂವವರು ಇಲ್ಲಾ. ಇದ್ದಾರನೂದು ಕೇವಲ ನಿಮ್ಮ ಕಲ್ಪನಾ ಆಗೇದ. ಕಾಕಾ, ಸೋನಕ್ಕಾ, ವಿಶ್ಯಾ, ಸಾಹೇಬರು. ರಂಗಕ್ಕಾ, ಪಂತಮಾಮಾ ಏನ ಭಾವನಾ ಮಾಡಿಕೋತಾರ ಅನೂದನ್ನ ಕಲ್ಪನಾ ಮಾಡಿಕೋರಿ. ದಾದಲ್ಯಾ ಉಂಡ ಮನೀ ಗಳಾ ಎಣಿಸಿದಾ ಅಂದಾರು. ಬಾಗಲ ದಾಗ ನಿಂದರಸಿಗೊಡಲಿಕ್ಕಿಲ್ಲಾ. ಜೀವಂತ ಶ್ರಾದ್ಧ ಅಂದರಿ – ಗೋವಿಂದಭಟ್ಟಾ. ಶ್ರಾದ್ಧಾ ಬಿಡರಿ, ಚಟಕಾ ಸುದ್ದೇ ಮಾಡಲಿಕ್ಕಿಲ್ಲಾ. ಸೂಳೇಮಗಾ ಗೋತ್ರಕ್ಕ ಹೊರ್ತ ಆದಾ ಅಂತ ಶಾಪಿಸ್ಯಾನು. ದಾದಾ, ನಾ ಸ್ವಾರ್ಥೀ ಆಗಿ ಈ ಮಾತ ಆಡತೀನಿ ಅಂತs ಭಾವಸಬ್ಯಾಡ್ರೀ. ಹಾಂಗ ನೋಡಿದರ ದಾದಲ್ಯಾಗ ಯಾರದೂ ದರಜನೂ ಇಲ್ಲಾ, ಯಾತರ ದದಾತೀನೂ ಇಲ್ಲಾ. ನೀವೂ ಸುಖೀ ಆಗಬೇಕು. ನಿಮಗೂ ಸಮಾಧಾನ ಇರಬೇಕು. ಅನೂ ಭಾವನಾದಿಂದ ನಾ ವಿಚಾರ ಮಾಡಲಿಕ್ಕೆ ಹತ್ತೀನಿ. ನೀವು ಜೀವಂತ ಶ್ರಾದ್ಧದ ಭಾಷಾ ಮಾತಾಡಿದಿರಿ. ಆ ಶ್ರಾದ್ಧ ಮಾಡಿದ ಸಂಕಟೇ ನಿಮ್ಮನ್ನ ಅಶಾಂತ ಮಾಡೇದ. ಬಸವಂತಿ ನಿಮಗ ಬೇಸೂರ ಅನಸೂ

ಘರ್ತೀಗೆಲೇ ಮಾತಾಡಿದಳು ಅಂತ, ಆಕಿನ್ನ ಊರ ಬಿಡಿಸಿದಿರಿ. ಪುಣೇದಾಗ, ನಾ ಆಕಿನ್ನ ತಿದ್ದಿ-ತೀಡುವ ಮುಂದ, ರೀತಿ-ರಿವಾಜ ಕಲಿಸಾಗ ಮತ್ತ ಇದೇ ಸೂರ ತಗದರ ನೀವು, ನನ್ನ-ಆಕಿನ್ನ ಕೂಡೇ ಹದ್ದ ಪಾರ ಮಾಡುವರು. ನನ್ನ ಭೂಮಿಕಾ ಈಗೇ ಸ್ಪಷ್ಟ ಮಾಡೂದು ಠೀಕಾ. ಹಿಂದಾಗಡೇ ಇಬ್ಬರಿಗೂ ಕಸಿವಿಸಿ ಆಗಿರ ಬಾರದು. ಮನಸ್ಸು ಕೆಟ್ಟಿರಬಾರದು. ಎರಡ ದಿನಾ ನೀವೂ ವಿಚಾರ ಮಾಡರಿ. ನಾನೂ ಮಾಡತೀನಿ. ಜಮಾಸಿದರ ಠೀಕ ಆತು. ಇಲ್ಲದಿದ್ದರ ಯಾರಿಗೂ ವ್ಯಥಾ ಇಲ್ಲಾ."

ಬಹಳ ಎಳೆದಾಡಿ ಎಳೆದಾಡಿ ಶ್ಯಾಮರಾಯನಿಂದ ಠಳಠಳಕ ಬಾತಮೀ ಹೊರಡಿಸುವದರ ಜೊತೆಗೆ. ಅವನು ಸೋನಕ್ಕನ ಕೂಡ ಸನ್ಮಾನ್ಯ ಒಪ್ಪಂದಕ್ಕೆ ತಯಾರಾಗಬಹುದೇನೆಂದು ಯತ್ನಿಸಿದೆ; ವಿಫಲ ಮನೋರಥನಾದೆ. ಶ್ಯಾಮ ರಾಯ-ಸೋನಕ್ಕರ ನಡುವೆ ಅಭೇದ್ಯ ಭಿತ್ತಿ ಎದ್ದು ನಿಂತಿತ್ತು. ಸೋನಕ್ಕನ ಮಾತು ಬಂದಾಗಲೆಲ್ಲ ಅವನು ಆಡಿದ ಮಾತು, ತೋರಿಸಿದ ಹೀನ ಮಾನಸ, ಕೊಟ್ಟ ಸಾದೃಶ್ಯ ನಂಜಿನಲ್ಲೆದ್ದಿ ತೆಗೆದಂಥವಿದ್ದವು. ಅವನ್ನು ನಾನೆಂದೇ ಕೇಳಿ ದಕ್ಕಿಸಿ ಕೊಂಡೆ. ಅವನ ಅಕ್ಷಮ್ಯ ಅಪಲಾಪವನ್ನು ಕೇಳಿದ್ದರೆ ಪಂತ-ತಳಿ ಅದನ್ನು ಗುಂಡಿ ನಿಂದ ಉತ್ತರಿಸುತ್ತಿತ್ತು. ರಾಚಪ್ಪ ಕಣ್‌ಮುಚ್ಚಿ ಕುಡುಗೋಲು ಭಿರಕಾಯಿಸುತ್ತಿದ್ದ. ಬಸವಂತಿ, ವಜ್ರಪಾದದಿಂದ ಶ್ಯಾಮರಾಯನ ಶಿರವನ್ನೇ ಮೆಟ್ಟಿ ಪಾತಾಳಕ್ಕೆ ಅದುಮುತ್ತಿದ್ದಳು. ಆದರೆ......

ಆದರೆ ದಾದಲ್ಯಾ......

ಹುಲ್ಲು-ನೀರು ಕಂಡಲ್ಲಿ ಅವನತಮುಖನಾಗಿ, ಬಾಲ ಮುದುಡಿಸಿ, ಮೂಕ ಪಶುವಿನಂತೆ ಮೆಯ್ದಾಡುವ ದಾದಲ್ಯಾ, ಆ ಮಾತುಗಳನ್ನು ಕೇಳಿ ಕೈಯಲ್ಲಿ ತಾರದ ಶಕ್ತಿಯನ್ನು ಬಾಯಲ್ಲಿ ಮೂಡಿಸಿ, ತಾಸುಗಟ್ಟಲೆ ಶಾಬ್ದಿಕ ಸರ್ಕಸ್ ನಡೆಸಿದ. ಇಲ್ಲಿಯ ವರೆಗೂ ಪರಾನ್ನ-ಪರತೀರ್ಥದಿಂದ ಬೆಳೆಸಿಕೊಂಡು ಬಂದ ಪಿಂಡದಲ್ಲಿ, ಶಕ್ತಿ ಸಂಚಲಿಸಿ, ಜೀವಸ್ಪಂದಿಸಿ, ಅದರ ಪ್ರಸಾದವನ್ನು ಶ್ಯಾಮರಾಯನಿಗೆ ಕೊಟ್ಟಿ ದ್ದರೆ ಪಂತರ ಪೌರೋಹಿತ್ಯ-ಪೀಠದಲ್ಲಿ ವಿರಾಜಮಾನನಾಗಲಿಕ್ಕೆ ಅರ್ಹತೆ ಪಡೆಯು ತ್ತಿದ್ದ. ಅರೆಹೊಟ್ಟೆ ಉಂಡು, ಅರ್ಧಾಂಗ ಮುಚ್ಚಿಕೊಂಡು ವಾಡೆಯ ಬಾಗಿಲಲ್ಲಿ ಶ್ಯಾಮರಾಯನ ಬಲಿಪರಣಕ್ಕೆ ಧರಣೆ ಕುಳಿತು, ಪಂತರ ಮಾನ-ಪಾನಕ್ಕೆ ಜೀವ ವನ್ನೇ ಪಣಕ್ಕೊಡ್ಡಿದ ಗೋವಿಂದಭಟ್ಟನಲ್ಲಿಯ ಅಗಸ್ತಿಶಕ್ತಿ, ಆ ಸಾಮರ್ಥ್ಯ,

ಜೆಪ್ಟು ಬಿಡಿದು ಆಸನ್ನಮರಣನಾದ ದಾದಲ್ಯಾನಲ್ಲಿ ಹೇಗೆ ಬಂದೀತು? ಎಲ್ಲಿಂದ ಬಂದೀತು?

ಅನುನಯ, ಅನುಸಂಧಾನದಿಂದ ಶ್ಯಾಮರಾಯ ದಾರಿಗೆ ಬರುವ ಮಾತು ಬಹಳ ದೂರವಾಯಿತೆಂದು ಅನ್ನಿಸತೊಡಗಿತು. ದಾದಲ್ಯಾ ಉತ್ತರ-ಧ್ರುವದಲ್ಲಿ ನಿಂತಿದ್ದ. ಶ್ಯಾಮರಾಯ ದಕ್ಷಿಣ-ಧ್ರುವದಾಚೆಗಿದ್ದ. ಸಾಮೋಪಚಾರಕ್ಕೆ ಕರಗಿ ಒಲಿಯುವ ಕುಳ ಶ್ಯಾಮರಾಯನಾಗಿರಲಿಲ್ಲ. ಭೇದ-ದಂಡನೀತಿ ಎರಡೇ ಅಸ್ತ್ರ ಶಿಲ್ಲಕ ಬಿದ್ದಿದ್ದವು. ಅಸ್ತ್ರಾದಿಕರಿಗೆ ಅಸ್ತ್ರದ ಪಹತಿ ಗೊತ್ತಿದ್ದರೂ ಅದರ ಕಾಯಕ ಅವರ ತುತ್ತಾಗಿರಲಿಲ್ಲ. ಅದು ಗೊತ್ತಿದ್ದರೆ, ಶ್ಯಾಮರಾಯ ಸೋನಕ್ಕನಿಗೆ ಹೀನವಚನ ಆಡಿದಾಗಲೇ ಮುಂಗೈಯಲ್ಲಿ ವಜ್ರಬಲ ಬಂದಿರಬಹುದಾಗಿತ್ತು. ಅಶನಾರ್ಥಿಗಳ ಮುಂಗೈ-ಶಕ್ತಿ ಅನ್ಯ-ಪ್ರಸಂಗಗಳಲ್ಲಿ ಮಾತ್ರ ಪ್ರಕಟವಾಗುತ್ತದೆ. ಇಂಥ ಆಣೀ-ಬಾಣೀ ನೇಳಿಯುಲ್ಲಿಲ್ಲ.

ಉಳಿದದ್ದು ಭೇದನೀತಿ. ಅದು ದಾದಲ್ಯಾನಿಗೆ ಕರತಲಾಮಲಕವಾದ ವಿದ್ಯೆ. ಆ ವಿದ್ಯೆಯ ಬಲದಿಂದ ಅವನು ಬಸವಂತಿಯನ್ನು ಒಡೆದುಕೊಂಡಿದ್ದ. ಸಾಹೇಬರನ್ನು ದಾವಸೆಯ ಮೇಲೆ ಜಾರಿಸಿದ್ದ. ಶ್ಯಾಮರಾಯ, ಸಾಹೇಬರ ಬಂಗಲೆಗೆ ಹಾಯುವಂತೆ ಮಾಡಿದ್ದ. ಈಗ ಬಸವಂತಿ-ಶ್ಯಾಮರಾಯರ ನಡುವೆ ಚೈನಾ-ಭಿತ್ತಿ ನಿರ್ಮಿಸುವ ಹಂಚಿಕೆ ಹಾಕಿದ್ದ. ಭಿತ್ತಿಯ ಪಾಯಭರಣೀ ನರಬಲಿಗೆ ಆಸುರಿಸಿತ್ತು. ಶ್ಯಾಮರಾಯನ ಬಲಿಯನ್ನೇ ದಾದಲ್ಯಾ ಕೊಡಲು ನಿಶ್ಚಯಿಸಿದ್ದ. ಶ್ಯಾಮರಾಯನ ಮನೆಯಲ್ಲಿ, ಕೇವಲ ಅವನದೇ ಆಗ್ರಹದಿಂದ ಬಸವಂತಿಯ ಕೂಡ ನಿರಾಬಂಧವಾಗಿ–ನಿಶ್ಚಿಂತವಾಗಿ ಇರುವ ಪರವಾನಿಗೆಯನ್ನು ಕೇಳಿದ್ದ. ಅದನ್ನು ಪಡೆದಿದ್ದ. ದಾದಲ್ಯಾನ ಪಾದಗಳಿಗೆ, ಶ್ಯಾಮರಾಯ ತಲೆಯನ್ನು ತಾನಾಗಿಯೇ ಒಡ್ಡಿ ಬಲಿಯಾಗಲಿದ್ದ.

ಶ್ಯಾಮರಾಯ ಹೇಳಿದ ಕೂಡಲೇ ಒಪ್ಪಿ ಪುಣೆಯಲ್ಲಿ ನಿಲ್ಲುವದಕ್ಕೆ ಸಮ್ಮತಿಸದಿದ್ದುದು ಒಳ್ಳೆಯದಾಯಿತು. ದಾದಲ್ಯಾನನ್ನು ಅನುನಯಿಸುವಾಗ ಶ್ಯಾಮರಾಯ ತನ್ನ ಅಂತರಂಗದ ಕದವನ್ನೇ ತೆರೆದಿದ್ದ. ತನ್ನ ಹೀನಮಾನಸದ ಸಮ್ಯಗ್ದರ್ಶನ ಮಾಡಿಸಿದ್ದ. ದಾದಲ್ಯಾನಿಗೆ ಭವಿಷ್ಯದ ಚಿತ್ರ ಕಣ್ಣಿಗೆ ಕಟ್ಟಿತು. ಶ್ಯಾಮರಾಯನ ವಿಚಾರದ ಗತಿಯು, ಕತೆ ವಿದಿತವಾಯಿತು. ದಾದಲ್ಯಾನ ದಾರಿ ಅನೇಕ ರೀತಿಯಿಂದ ಸುಗಮವಾಯಿತು.

ದಾದಲ್ಯಾನನ್ನೇ ತಿದ್ದಿ-ತೀಡಬಲ್ಲ ಜನ್ಮಜಾತ ಸಂಸ್ಕಾರ. ಅನುಭವದಿಂದ ಪಕ್ವವಾದ ತಿಳುವಳಿಕೆ, ಅಸಾಮಾನ್ಯ ಸಹಿಷ್ಣುತೆ, ಮಹಾನಿಷ್ಠೆ, ಬಸವಂತಿಯಲ್ಲಿ ಯಾರದೋ ಲೀಲೆಯಿಂದ, ಯಾರದೋ ವರದಾನದಿಂದ ಮುಪ್ಪುರಿಗೊಂಡು, ಬಸವಂತಿಯನ್ನು ತೇಜೋವಲಯ ಮಾಡಿದಾಗ, ದಾದಲ್ಯಾ ಅವಳನ್ನು ಏನೆಂದು ತಿದ್ದುವದು? ಯಾತಕೆಂದು ತಿದ್ದುವದು ಶಿಲ್ಲಕ ಉಳಿದಿತ್ತು?

"After all prostitution is woman's business ಅನೂ ಮಾತಾ. ಬಸವಂತಿಗೂ ಲಾಗೂ ಮಾಡಿದಿರಿ ಅಂದರ ದಾದಲ್ಯಾ ಖಲಾಸನs"

ಎಂದು ನಾನೆಂದಾಗ —

"ಇಂಥಾ ಬಾಬತ್ಯಾಗ ಅಕೀ 'ಕಾನ್‌ಫಿಡೆನ್ಸ್' ಅದs ನನಗ"

ಎಂದಿದ್ದ. ಬಸವಂತಿಗೆ. ಇಂಥ ಸರ್ಟಿಫಿಕೇಟಿನ ಅಗತ್ಯವಿರಲಿಲ್ಲ. ಆ ಬಾಬತ್ತಿನಲ್ಲಿ ಶ್ಯಾಮರಾಯನಿಗಿಂತ ದಾದಲ್ಯಾ ಹೆಚ್ಚು 'ಕಾನ್‌ಫಿಡೆಂಟ್' ಇದ್ದ.

ಸುರೇಶನನ್ನು 'ಟ್ಯಾಕಲ್' ಮಾಡುವ ಗರಜು ದಾದಲ್ಯಾನಿಗೆ ಇರಲಿಲ್ಲ. ಅವನನ್ನು 'ಟ್ಯಾಕಲ್' ಮಾಡಿ, ಶಕೂನಿಂದ ಬಿಡಿಸಿ, ಬೆಳಗಾಂವಿಯಲ್ಲಿ ಅವನನ್ನು ಶ್ಯಾಮರಾಯನಂತೆ ಲಾಂಗೂಲ-ಚಾಲನ-ವೃತ್ತಿಯ ಕಂತ್ರಾಟದಾರನನ್ನು ಮಾಡುವ ಅಗತ್ಯ, ಶ್ಯಾಮರಾಯನಿಗಿರುವಂತೆ ದಾದಲ್ಯಾನಿಗೆ ಇರಲಿಲ್ಲ. ಅವನಿಗೆ ಬೆಳಗಾಂವೀ ಆಫೀಸಿನ ಮ್ಯಾನೇಜರಿಕೀ, ಕಂತ್ರಾಟ-ಧಂದೆಯಲ್ಲಿ ಎರಡಾಣೆಯ ಹಿಸೇ ಅವರದೂ ಆಸ್ಥೆ ಇರಲಿಲ್ಲ; ಅಗತ್ಯವೂ ಇರಲಿಲ್ಲ. ನಿವೃತ್ತಿಯ ಮಾರ್ಗದಲ್ಲಿದ್ದ ಎಸ್.ಈ. ಸಾಹೇಬರು, ಇಂಗ್ಲೆಂಡಿನಲ್ಲಿ ವಿರಾಮವಾಗಿ ಕಾಲ ಕಳೆಯುವಾಗಲೂ ದಾದಲ್ಯಾ ಯಾಚಿಸಿದ್ದರೆ, ಅಲ್ಲಿಂದಲೇ ಕಾಗದ-ಕುದುರೆ ಬಿಟ್ಟು. ಅವನ ಉದ್ಧಾರ ಮಾಡುವ ತಾಕತ್ತಿನವರಿದ್ದರು. ಅವರ ತಾಕತ್ತಿನ ಯೋಗ್ಯತೆ ದಾದಲ್ಯಾನಿಗಿತ್ತು. ಶ್ಯಾಮ ರಾಯನ ಸ್ವಾರ್ಥಸಾಧನೆಗೆ ಬಸವಂತಿಯನ್ನು ತಿದ್ದಿ-ತೀಡುವ ಧಾವತಿಪಡುವದ ಕ್ಕಿಂತ, ಮುಂಬೈಯಲ್ಲಿ ಯಾರೋ ಕಿಟೀ-ವಿಟೀಯರನ್ನು ಸಂಡೇ-ಸರ್ವೀಸಿಗೆ ಕರೆದುಕೊಂಡು ಹೋಗಿ. ಅವರ ಮನೆಯ ಬಜಾರ್-ಮಾಸ್ಟರಾಗಿ, ಮಾನ-ಸನ್ಮಾನ ದಿಂದ ಎಂ. ಏ. ಎಲೆಲ್. ಬಿ. ಮುಗಿಸುವದು ದಾದಲ್ಯಾನಿಗೆ ಸದ್ಯದಲ್ಲಿ ಹೆಚ್ಚು ಬಿನ್-ಧೋಕಾದ್ದೆನಿಸಿತು.

ಆದರೆ ಶ್ಯಾಮರಾಯನ ಸೂಚನೆಗೆ ನಕಾರ ಹೇಳಿ ಅವನ ಪರಲು ಹರಿದು ಕೊಂಡರೆ, ಅದರಲ್ಲಿ ಶ್ಯಾಮರಾಯನಿಗೂ ಯಾವ ಹಾನಿಯೂ ಇರಲಿಲ್ಲ. ಈ

ಸಾಹೇಬರಲ್ಲ. ಇನ್ನೊಬ್ಬ ಸಾಹೇಬರು: ಈ ಧಂದೇ ಅಲ್ಲ, ಇನ್ನೊಂದು; ಎಂದು ಆವನು ಅರ್ಥಸಂಚಯರತನಾಗುತ್ತಿದ್ದ. ಅರ್ಥಸಂಚಯದ ಕಂತ್ರಾಟಕ್ಕೆ ಬೇಸರೆನಿಸಿ ದಾಗ. ಪ್ರಮದವನ್ನು ಕಳೆಯಲು, ನಿರಾಯಾಸವಾಗಿ ತನ್ನ ಮಾಲ್ಕೀ ಮಾಲಿನ ಕಡೆಗೆ ಧಾವಿಸುತ್ತಿದ್ದ. ಊರಲ್ಲಿ ನಿರಾಬಂಧವಾಗಿ, ನಿರ್ಭಯವಾಗಿ ಅಲೆದು ರಾವಜೀ ಕಾಕಾ ಅವರ ನಾಲಸ್ತೀ ಮಾಡುತ್ತಿದ್ದ. ಶಕೂ-ಸುರೇಶ ಹೇಗೆ ಮದುವೆಯಾಗು ತ್ತಾರೆ ನೋಡುತ್ತೇನೆಂದು ಪ್ರಪಾರಕೀ ಹೊಡೆದು, ಆ ಪ್ರಪಾರಕೀ ಸತ್ಯಸೃಷ್ಟಿ ಯಲ್ಲಿ ಅವತೀರ್ಣವಾಗುವಂತೆ ನಾನಾ ಕ್ಲೃಪ್ತಿ ಮಾಡುತ್ತಿದ್ದ. ಸಾಹೇಬರ ಚಾಂದೀ ಮಿರಾಕಿನ ಛಾಸಗಡಿಗೆ ಸುಣ್ಣ-ಬಣ್ಣದ ಸಾರಣೆ-ಕಾರಣೆ ಮಾಡಿ. ಅವರ ಬಗ್ಗೆ ಮೇಲಿನ ಆಫೀಸಿನವರನ್ನು ಕಲುಷಿತರನ್ನಾಗಿ ಮಾಡುತ್ತಿದ್ದ. ಸಾಹೇಬರನ್ನು ತೋಂದರೆಯಲ್ಲಿ ತಂದು ಮಜ್ಝಾ ನೋಡುತ್ತಿದ್ದ. ಸೋಸಕ್ಕನ ಹರಲಿಯ ಕತೆಗೆ ಬಣ್ಣ ಸವರಿ. ಅದನ್ನು ವಿಕಾರರೂಪದಲ್ಲಿ ನಾಕು ಜನರ ಮುಂದೆ ಪ್ರದರ್ಶನ ಮಾಡುತ್ತಿದ್ದ. ಇದಾವುದರ ಲೇಪವೂ ಇಲ್ಲದೆ ತಾನು ಘನ ನಿರ್ಲಿಪ್ತನಾಗಿ ಬದುಕು ತ್ತಿದ್ದ. ಇದನ್ನೇ ಸುಖ ಇದನ್ನೇ ಸಂತಸವೆಂದು ಬಗೆದವನಿಗೆ ಮುಳ್ಳಿನ ಹಾಸಿ ಗೆಯೂ ಹಂಸತೂಲಿಕಾತಲ್ಪದ ಸುಖವನ್ನು ಕೊಡುವ ಭ್ರಮೆಯಾಗುವದರಲ್ಲಿ ಸಂದೇಹವಿರಲಿಲ್ಲ.

ಜೀವಂತ ಶ್ರಾದ್ಧ ಮಾಡಿದವರ ಪಿಂಡಗಳನ್ನು ಕಾಕರೂಪಧಾರಣಮಾಡಿ, ಶ್ಯಾಮರಾಯ ತಿಂದು-ತೇಗುವ ಕೃತ್ಯಕ್ಕೆ ಹೇಸುತ್ತಿರಲಿಲ್ಲ.

ದಾವಲ್ಯಾ ವಿಚಾರ ಮಾಡಲಿಕ್ಕೆ ಎರಡು ದಿನದ ಅವಕಾಶ ಕೇಳಿದಾಗ, ಶ್ಯಾಮರಾಯ ಬೆಳಗಾಂವಿಯಲ್ಲೇ ಇದ್ದ. ಬೆಳಗಾಂವಿಗೆ ಬಂದಾಗಲೆಲ್ಲ ಅವನು 'ಗ್ರೀನ್ಸ್'ದಲ್ಲಿಯೇ ಮುಕ್ಕಾಂ ಹಾಕುತ್ತಿದ್ದ. ಈಗಂತೂ ಬಂಗಲೆಯ ವಾರಿ ಬಿಟ್ಟಿತ್ತು. ಸುರೇಶನನ್ನು ಅಳಿಯನ ಸದರಿನಲ್ಲಿ ಒಗೆದುಕೊಂಡು ನಿರ್ಧಾಸ್ತರಾದ ರಂಗಕ್ಕ ಈಗ ಶ್ಯಾಮರಾಯನ ಉಠಾಠೇವಿನ ಉಸಾಬರಿಯನ್ನು ಮುಂಚಿನ ಆಸ್ಥೆಯಿಂದ ಮಾಡುತ್ತಿರಲಿಲ್ಲ. ಮಾಗಣಿಯ ಲಾಂಬ-ಲಚಕ ಯಾದಿಯನ್ನು ಶುಷ್ಕಕಾಷ್ಠದಂತೆ ಶ್ಯಾಮರಾಯನ ಚಿಸ್ಸಿಗೆ ಹಚ್ಚುತ್ತಿರಲಿಲ್ಲ. ಈ ನಿತ್ಯ 'ನಿಗ್ಗರ'ದಿಂದ ಪಾರಾದ ಸಂತಸ ಶ್ಯಾಮರಾಯನಿಗಿತ್ತು. "ಒಬ್ಬ ಕಂತ್ರಾಟದಾರ ಕಡಿಂದ ಕಾಸ ಹಡೀ ಖಿದ್ದೀ ಅಪೇಕ್ಷಾ ಸುದ್ದೇ ಇಲ್ಲ ನಮಗ" ಎಂದು ಇತ್ತೀಚೆ ಉಪೇಕ್ಷಿತವಾದ ಅಪೇಕ್ಷೆಯು ಸುಳ್ಳು-ಸಮಾಧಾನ ರಂಗಕ್ಕನಿಗಿತ್ತು.

ಶ್ಯಾಮರಾಯನ ಬಂಗಲೇ ಸಂದರ್ಶನ ಇತ್ತೀಚೆ ತಪ್ಪಿತ್ತು. ಅವನು ತಾನಾಗಿಯೇ ಬಂದು, ನನ್ನನ್ನು ಪುಣೆಗೆ ಕಳಿಸಲು ಹಾಕಿದ ಯೋಜನೆಯನ್ನು ಸಾದರಪಡಿಸುವ ಶಕ್ಯತೆ ಇರಲಿಲ್ಲ. ಸಾಹೇಬ-ರಂಗಕ್ಕನವರಿಗೆ ಈ ವಿಷಯ ಅವಿದಿತವಾಗಿಯೇ ಉಳಿಯುತ್ತಿತ್ತು. ನಾನು ಹೇಳಬೇಕಾಗುತ್ತಿತ್ತು. ಹೇಳಲಿದ್ದೆ. ಊರಿಗೆ ಹೋಗಿ, ಗೋವಿಂದಭಟ್ಟನ, ರಾಚಪ್ಪನ ಪರವಾನಗೀ ಪಡೆಯುವ ಅಗತ್ಯವಿತ್ತು, ಗೋವಿಂದಭಟ್ಟ ತಿರಸಷ್ಠಿ. ಸಾದಾ-ಸೀದಾ ಮಾತಿನಿಂದ ಒಪ್ಪುವ ಜಾತಿಯಲ್ಲ. ಶ್ಯಾಮರಾಯನ ಒಕ್ಕಲಾಗಲು ಹೊರಟಿದ್ದೇನೆಂದು ಹೇಳಿದರೆ, ಅವನು ತನ್ನ ಕುಲ, ನನ್ನ ಕುಲ, ನನ್ನ ಗೋತ್ರ, ತನ್ನ ಗೋತ್ರ ಒಂದೇ ಎನ್ನುವದನ್ನೂ ಮರೆತು, ತನ್ನಿಂದ ಹಿಂದಿನ ಆರು ತಲೆ, ನನ್ನಿಂದ ಮುಂದಿನ ಮೂರು ತಲೆಯ ಸಾರೋದ್ಧಾರ ಮಾಡದೆ ಬಿಡುತ್ತಿದ್ದಿಲ್ಲ. ಇಷ್ಟು ಮಾಡಿ, ಮೂರು ಗಾವುದ ದೂರದಿಂದ ಒಂದೇ ಧಾಪಿನಲ್ಲಿ ಓಡಿ ಬಂದು ದಮ್ಮುಹತ್ತಿ ಬಾಯಿಂದ ನೊರೆಯ ತೆರೆಯನ್ನು ತೇಲಿಸುವ ಹಯಗ್ರೀವಶ್ರೇಷ್ಠನಂತೆ ಮುಸುಮುಸು-ಭುಸುಭುಸುಗುಟ್ಟತೊಡಗಿದನೆಂದರೆ, ಅವನನ್ನು ಅದೇ ಅಶ್ವರೂಪದಲ್ಲಿ ಬಿಟ್ಟು,

"ಅವ್ವಾ, ಸಂಜೀ ಊಟಕ್ಕs, ನಾ ಬೆಳಗಾಂವಿಗೇ ಹೋಗತೀನಿ. ನನ್ನ ಅಡಿಗೀ ಏನು ಮಾತಬ್ಯಾಡಾ. ಮುಂಬೈಗೆ ಹೋದೆ ಅಂದರ ಪಷ್ಠಾರ ತಿಂಗಳಾ ಇಕಡೇನು ಹಾಯೂದಿಲ್ಲಾ. ರಾಚಪ್ಪಗ ಅಷ್ಟು ಭೆಟ್ಯಾಗಿ ಬರತೀನಿ. ಗಣಪತಿಗೆ ಕಾಯಿನೂ ಒಡಸಿಗೊಂಡು ಬರತೀನಿ. ನೀನೂ ಬರತಿದ್ದರ ನಡೀ. ಮಾತಾಡಿಕೋತ ಹೋಗೂಣಂತ."

ಎಂದು ಸೂಚಿಸಿ ನಾನು ಅಂಗಿಯ ಚಿಲಖತ್ತು ಏರಿಸಬೇಕು. ಪಿತಾ-ಪುತ್ರರ ಈ ಕಲಹಕೋಲಾಹಲದಲ್ಲಿ ಕಲಹವೇ ಇರುವದಿಲ್ಲ. ಗೋವಿಂದಭಟ್ಟನ ವ್ಯರ್ಥ ಕಂಠಶೋಷಣೆಯ ಕೋಲಾಹಲ ಮಾತ್ರ ಇರುತ್ತದೆಂದು ದೃಢ ನಿಶ್ಚಿತೆಯಾದ ಅವ್ವ, ನಡುಮನೆಯ ಬಾಗಿಲಲ್ಲಿಯೇ ಕುಳಿತು ಇದೆಲ್ಲವನ್ನು ಕಣ್ಣಾರೆ ಕಂಡಿರುತ್ತಾಳೆ; ಕಿವಿಯಾರೆ ಕೇಳಿರುತ್ತಾಳೆ. ಎದ್ದು ನನ್ನ ಕೂಡ ಗುಡಿಗೆ ಬರುವ ಯಾವ ಹಾಲ್-ಚಾಲಿಯೂ ಇಲ್ಲದೆ, ಅತ್ಯಂತ ಓವುಥಂಡ್ ಧರ್ತಿಯಲ್ಲಿ —

"ದಾದಲ್ಯಾ ಇಂದೇ ಊರಿಗೆ ಹೋಗತೀನ್ಯಂತಾನಲಾ. ಸಂಜೀ ಊಟಕ್ಕ ಸುದ್ದೇ ನಿಂದರೂದಿಲ್ಲ ಅಂತಾನ. ನೀವೂ ಮೂಕ ದೆವ್ವಿನ್ಹಾಂಗ ಕೂತರs, ಅಂವಗರ ಹ್ಯಾಂಗ ಹೋಗಲಿಕ್ಕೆ ಮನಸ್ಸು ಆದೀತು. ಅಂವಗ ಎಲ್ಲಿದ್ದರೂ, ನಿಮ್ಮದs ಧ್ಯಾಸಾ.

ವಾರಕೊಂದು ಕಾಗದ ಬಂದರ ಅದರಾಗ ಇರತ್ಯದೇನು? ನೀವು ಹಲಾಕ ಆಗ ಬ್ಯಾಡರಿ. ಇಲ್ಲದ ಥಾವತಿ ಮಾಡಿಕೋಬ್ಯಾಡರಿ. ಹೊಟ್ಟೀ ನೆತ್ತೀ ಸುಟಗೋ ಬ್ಯಾಡರಿ. ನಿಮ್ಮ ಪುಣ್ಯಾದಿಂದ ದಾದಲ್ಯಾ ಹಾದಿಗೆ ಹತ್ತ್ಯಾನ. ನೀವು ಸುಖದಾಗ ಇದ್ದರ ತಾ ಸುಖದಾಗ ಇದ್ದಾಂಗ ಅಂತನs ಬರದಿರತಾನ. ನೀವೇ ಅದನ್ನ ಸಾವಿರ ಸಾರೇ ಹೇಳತೀರಿ. ಸಾಂಗ್ಲ್ಯಾಗ ನಿಂತಾ, ಬೆಳಗಾಂವ್ಯಾಗ ನಿಂತಾ, ಯಾರು ನೆರಳ ಮಾಡಿಕೊಟ್ಟರು ಅವರಿಗೂ ಕೀರ್ತೀ ತಂದಾ. ನಿಮಗೂ ಕೀರ್ತೀ ತಂದಾ. ಇಂಗ್ರೇಜಿ ಸಾಬರು ಚಾಲಪರದ ಹೇಳಿದರೂ ಒಲ್ಲೆ ಅಂದು ಪುಣೇದಾಗs ನಿಂದರತೀನಿ ಅಂತಾನ. ಅಂವನ ಕಲ್ಯಾಣದ ಕಾಳಜೀ ಅಂವಗ ಅದs ಇಲ್ಲೋ? ಶ್ಯಾಮರಾಯರು ಅನೂತ್ಲೇ ಇಲ್ಲದ ಸಂಶಾ ನಿಮಗ......"

"ನಿನ್ನ ಪರಟೀ. ಮಾತಾಡನೂತ್ಲೇ ಮಾತಾಡಿದಳು. ಬೀಸಿಮೀ ಚಕ್ಕಾ ನ್ಹಾಂಗ ಎಲ್ಲಾದರಾಗೂ ನಾಕ ಅಕ್ಕೀಕಾಳು ಹಾಕದೇ ಏನ ನೀನು ಬಿಡೂದಿಲ್ಲಾ. ಪುಣೇದಾಗ ಬಸವಂತಿ ಇದ್ದಾಳ ಬಸವಂತೀ, ಶ್ಯಾಮರಾಯನ ಮನ್ಯಾಗs! ಅದೇನರs ಠಾಂವಿಕ್ಯದ ಏನು?"

"ಬಸವಂತಿನ್ನ ಕಾಕಾನೇ ಮನೀ ತುಂಬಿಸಿಗೊಂಡಾರ. ಪುರೋಹಿತಕೀ ಬಾಬು ಮುಣಗಿತು ಅನೂ ಸಂಕಟಿದ್ದರ ಹೇಳಿಕಳಸಿರಿ ದಾದಲ್ಯಾನ ಜೋಡೀ. ನೀವ್ಯಾಕ ಬಸವಂತಿನ್ನ ನೀರಾಗ ನೋಡೂದು. ಅಕೀ ಮಾಡಿದ ಅಡಗೀ ಉಂಡು ನೀವೇನು ಕುಲಗೆಡಬೇಕಾಗಿಲ್ಲಾ. ಪುಣೇಕ ಹೋದರ, ನಿಮಗ ಕಾಕಾನ ಮನೀ ಅದs. ಶ್ಯಾಮರಾಯರ ಮನ್ಯಾಗೂ ಬ್ರಾಂಬ್ರ ಅಡಿಗೀಯವನs ಇದ್ದಾನಂತ. ದಾದಲ್ಯಾ ಏನು ತೀರಾ 'ಚೌ'ಹಾರಿಲ್ಲಾ. ದಾದಲ್ಯಾ, ನೀ ಹೋಗಿ ಬಾ, ರಾಚಪ್ಪನ ಕಡೇ. ನಾಳೆ ಮುಂಜಾನೀ ಮೋಟರಕ ಹೋಗೀಯಂತ. ಇವರಿಗೆ, ಇಂದ ರಾಚಪ್ಪಾ ತಿಪ್ಪರೀಕಾಯೀ ಕೊಟ್ಟಿದ್ದನಂತ. ದಾದಲ್ಯಾ ಬಂದಾಗ, ಗಿಣ್ಣಾ ಮಾಡಂತ ತಾಂವೇ ಹೇಳ್ಯಾರ. ಹಾಂಗs ಹ್ಯಾಂಗ ಹೋಗತೀ, ಊಟಾ ಮಾಡದೇ. ಮತ್ತ, ನಿಂದೂ-ನಮ್ಮದು ಎಂದ ಭೆಟ್ಟಿನೋ ಏನೋ?"

"ಎಂದ ಭೆಟ್ಟ್ಯೋ ಏನೋ–ತಿಪ್ಪರೀಕಾಯೀ ಗಿಣ್ಣ" ಗೋವಿಂದಭಟ್ಟ ನನ್ನು, ಏಕದಮ್ ಥಂಡಾ ಮಾಡಿಬಿಡುತ್ತವೆ. ನಿನ್ನೆ, ನಾನು ಬಂದಾಗಿನಿಂದಲೇ ಅವನ ದಾದಲ್ಯಾ-ಸೂಕ್ತ ಏಕಪ್ರಕಾರವಾಗಿ, ಮುಕ್ತಮಾನಸವಾಗಿ ಸುರುವಾಗಿತ್ತು. ಪೋಸ್ಟಮನ್ ಪಾಂಡು, ಹಾಲಿನ ಬಸಲಿಂಗವ್ವ, ತಪಕೀರ ಗುರುಭಟ್ಟ, ಜೋಯಿ

ಸರ ನಾಗಪ್ಪ. ಪೋಸ್ಟ್‌ಮಾಸ್ಟರ್ ಜನರಲ್ ಗೋವಿಂದಮಾಸ್ತರರು ಒಬ್ಬರೂ ಈ ಸೂಕ್ತ ಕೇಳದೆ ಉಳಿದಿರಲಿಲ್ಲ. ಇಂದು ಮಧ್ಯಾಹ್ನ ಅವ್ವ ಅಡಿಗೆಯ ಒಲೆಯ ಮುಂದೆ ಕುಳಿತು ಭಕ್ಕರಿಯ ಹಿಟ್ಟು ನಾದುತ್ತಿದ್ದಳು. ಗೋವಿಂದಭಟ್ಟ ದೇವರ ಜಗುಲಿಯ ಮೇಲೆ ಕುಳಿತು, ಸಮ್ಮುಖದಲ್ಲಿ ಸಾಣೆಯ ಕಲ್ಲು, ಗಂಧಕೊರಡ ಇಟ್ಟುಕೊಂಡು ಗಂಧ ತೇಯುತ್ತಿದ್ದ. ಅದೇ ವೇಳೆಗೆ ಅವನಿಗೆ, ಎಸ್.ಈ. ಸಾಹೇಬರು, ನನಗೆ 'ವೂಲನ್‌ಸೂಟ' ಹೊಲಿಸಿ ಕೊಟ್ಟ, 'ಪಾಕೆಟ್‌ಮನಿ' ದಯಪಾಲಿಸಿದ ಸ್ಮರಣೆ ಜಾಗರಿಸಿತು. ದಾದಲ್ಯಾ-ಸೂಕ್ತ ಸುರುವಾಯಿತು. ಗಂಧಕೊರಡ ಊಜು ಗಂಧ ಬಿಡತೊಡಗಿತು. 16726

ವೈದಿಕಬ್ರಾಹ್ಮಣ ದಾದಲ್ಯಾ, ತನ್ನ ಜಾತಿಯವರೇ ಆದ ಇನ್ನೊಬ್ಬ ವಿಪ್ರ ಶ್ರೇಷ್ಠರ ಕಥೆ ಹೇಳದೆ ಮುಂದೆ ಸಾಗಲಾರ. ಅವಧರಿಸಬೇಕು:

ಶೀಲ-ಜ್ಞಾನ-ಸಂಪನ್ನರಾದ ಆಚಾರ್ಯರೊಬ್ಬರು, ಒಂದು ಸಮಾರಾಧನೆಯ ಹೊತ್ತಿನಲ್ಲಿ, ಗಂಧ ತೇಯುತ್ತಿದ್ದರು. ಕೈ ಗಂಧ ತೇಯುತ್ತಿದ್ದವು. ಬಾಯಿ ಅಗ್ನಿ ಸೂಕ್ತ ಪಠಿಸುತ್ತಿತ್ತು. ಸೂಕ್ತಪಠನದಲ್ಲಿ ಅವರು ಏಕಾಗ್ರಚಿತ್ತರಾಗಿದ್ದರು. ಆಚಾರ್ಯರ ಏಕಾಗ್ರತೆ-ನಿಷ್ಠೆಗೆ ಒಲಿದ ಜಾತವೇದ, ಮಹಾಪ್ರೀತನಾಗಿ, ತನ್ನ ಅಖಂಡ ಪ್ರಭಾವ-ಪ್ರಸಾದವನ್ನು ಗಂಧದಲ್ಲಿ ಹರಿಸಿದ. ನೆರೆದ ವಿಪ್ರವೃಂದಕ್ಕೆ ಗಂಧ-ಅಕ್ಷತೆಯ ವಿನಿಯೋಗವಾಯಿತು. ಗಂಧಲೇಪನ ಮಾಡಿಕೊಂಡ ವಿಪ್ರಶ್ರೇಷ್ಠರ ಅಂಗಾಗಕ್ಕೆ ಪಂಜು ಹಚ್ಚಿದಂತಾಯಿತು. ಮೈಯ್ಯಂತ ಮೈಯೆಲ್ಲ ಹುತಾಶನ ಧಗಿ ಇಟ್ಟಿತು. ಅಗ್ನಿಸೂಕ್ತ ಪಠಿಸಿ, ಸೂಕ್ತ-ದೈವತವನ್ನು ಒಲಿಸಿಕೊಂಡ ಆಚಾರ್ಯರಿಗೆ, ವರುಣಸೂಕ್ತ ಕಠಿಣ ಹೋಗಿರಲಿಲ್ಲ. ಆ ಮಾತು ಬೇರೆ – ಈ ಕಥೆ ನೆನಪಾದ ಕಾರಣವೆಂದರೆ —

ಗೋವಿಂದಭಟ್ಟ ಅಖಂಡ ಅಂತಃಕರಣವನ್ನೇ ಧಾರೆ ಒಡಿದು ದಾದಲ್ಯಾ ಸೂಕ್ತ ಪಠಿಸುತ್ತ ಗಂಧ ತೇಯ್ದಿದ್ದ. ತೆಯ್ದ ಗಂಧವನ್ನು ತಾನೇ ಲೇಪಿಸಿಕೊಂಡಿದ್ದ. ಆ ಅಂತಃಕರಣ-ವಾತ್ಸಲ್ಯ ಬಿಟ್ಟ, ಹಿಮಶೀತಲ ತಂಪು, ಅವ್ವನ ಮಾತಿನಿಂದ ಏಕದಮ್ ಪ್ರಭಾವ ಬೀರತೊಡಗಿತು. ಗಂಧದ ಕಂಪು-ತಂಪು ದರವಳಿಸತೊಡಗಿತು. ಗೋವಿಂದಭಟ್ಟನ ಪ್ರೀತಿ-ವಾತ್ಸಲ್ಯ ಮರುಕಳಿಸಿತು. ಗಿಣ್ಣಕ್ಕೆ ತಿಪ್ಪರಿಕಾಯಿ ತಂದ ನೆನಪು ಮರುಕಳಿಸಿತು. ಚೋಟ ಹುಡುಗ ದಾದಲ್ಯಾ, ತಮಗಾಗಿ, ಎಲ್ಲೆಲ್ಲಿಯೋ ಅಲೆದು, ಹಲಾಕಾಗುವ ಚಿತ್ರ ಕಣ್ಣಿಗೆ ಕಟ್ಟಿತು. ಬಡವನ ಮನೆಯಲ್ಲಿ

ಇದ್ದುದನ್ನೇ ಪಂಚಾಮೃತ ಮಾಡಿಕೊಂಡು, ಕರಳು ಥಣ್ಣಗಿಟ್ಟುಕೊಂಡಿರಲಿ ಎಂದು ತಾವೇ ತಂದ ತಿಪ್ಪರಿಕಾಯಿಯ ನೆನಪು ಗೋವಿಂದಭಟ್ಟನಿಗಾಯಿತು. ಎರಡನೇ ಮಾತೇ ಇಲ್ಲ. ಗೋವಿಂದಭಟ್ಟ —

"ದಾದಲ್ಯಾ, ಪುಣೇಕ್ಕ ಹೋಗಿ ಬಾ ಆಂs...ಹೋಗಿ ಬಾ. ಪ್ರಕೃರ್ತೀ ಸಂಬಾಳಸು. ಜಪ್ಪಿಸಿಕೊಂಡು ಇರು. ಇಲ್ಲದ ಧಾವತಿ ಮಾಡಕೋಬ್ಯಾಡ ಜೀವಕ್ಕ."
ಎಂದು ನನಗೆ ಹೇಳಿ. ಅಪ್ಪನ ಕಡೆಗೆ ತಿರುಗಿ —

"ಇಕಾ, ನೀ ಅಡಿಗ್ಗೆ ಕೂಡು. ನಾನs ಹೋಗತೀನಿ ದಾದಲ್ಯಾನ ಜೋಡಿ ಗುಡೀಗೆ. ದಾದಲ್ಯಾನ ಖರ್ಚ-ಖಂದೇಕ್ಕ ಚೂರ-ಚಾರ ಇರಲೀ ಅಂತ, ರಾಜಪ್ಪನ ಕಡಿಂವ ಅಷ್ಟ ರೂಪಾಯಿನೂ ತರತೀನಿ. ಆದೂ ದಾದಲ್ಯಾ ಕೊಟ್ಟಿದ್ದs. ನನ್ನ ಹತ್ತೀಲೆ ಇದ್ದರ ಖರ್ಚ ಆದೀತಂತ ರಾಜಪ್ಪನ ಕಡೇ ಇಟ್ಟಿದ್ದೆ. ತಿಳೀತೇನು? ನಡೀ ದಾದಲ್ಯಾ"

ನಿನ್ನೆ ರಾತ್ರಿಯೇ, ಅಪ್ಪ-ಗೋವಿಂದಭಟ್ಟರ ಮುಂದೆ ಕಾಕಾ ಅವರು ಬಸವಂತಿಯನ್ನು ಮನೆತುಂಬಿಸಿಕೊಂಡ ಕಥೆ ಹೇಳಿದ್ದೆ. ಆಗಲೂ ಶ್ಯಾಮರಾಯನ ಮೇಲೆ ಗೋವಿಂದಭಟ್ಟ ಸಿಡಿದು ಬಿದ್ದಿದ್ದ. ಅಪ್ಪ, ಹೆಣ್ಣು ಹೆಂಗಸು. ಅವಳು ಬಸವಂತಿಯನ್ನು ಮರೆಯುವದು ಅಶಕ್ಯ. ಗೋವಿಂದಭಟ್ಟ ತೀರ ಅಡ್ನಾಡಿ. ಆಚಾರ್ಯರ ತಟ್ಟೊ. ಅವ್ವನ ಮೋಹನತಿಯಿಂದಲೇ ಅದು ಇಷ್ಟಾದರೂ ಸಾದು ಆಗಿದೆ. ಅಂತಃಕರಣದಲ್ಲಿ ಅವ್ವನನ್ನೂ ಮೀರಿಸುವಷ್ಟು ಸಾಧು-ಭೋಳೆ ಆಗುತ್ತದೆ. ಥೇಟ ರಾವಜೀಕಾಕಾ ಅವರ ಕಪಿಲಾ ಧೇನುವಿನಂತೆ ರಾಧಾಕಾಕೂ ಅವರೇ ಕೆಚ್ಚಲಿಗೆ ಕೈ ಹಾಕಿ ತೊರೆ ಬಿಡಿಸಬೇಕೆಂದಿಲ್ಲ. ನಾನು ಬಾಯಿ ಹಾಕಿ ಚುರುಚುರು ಮೊಲೆ ಹೀರಿದರೂ, ವಾತ್ಸಲ್ಯವತಿ ತಾಯಿಯಂತೆ ನಿರ್ಧಾಸ್ತ ನಿಂತುಬಿಡುತ್ತದೆ. ಭೋಳೇ ಆವಾಗ ನಮ್ಮ ಗೋವಿಂದಭಟ್ಟನೂ ಕಪಿಲಾ ಧೇನುವಾಗುತ್ತಾನೆ.

ಗೋವಿಂದಭಟ್ಟ-ರಾಜಪ್ಪ ಅವರ ಪರವಾನಗಿ ಪಡೆದೆ. ರಂಗಕ್ಕ-ಸಾಹೇಬರ ಒಪ್ಪಿಗೆಯೂ ಸಿಕ್ಕಿತು. ಆದರೂ ನಾನು ಶ್ಯಾಮರಾಯನ ಕೈಯಲ್ಲಿ ಚಂಡಿಕೆ ಕೊಟ್ಟು ಅವನ ತಾಬೇದಾರಿ ಗಿರಾಕಿ ಆಗಲಿಲ್ಲ.

"ದಾದಾ, ನಾ ಪುಣೇದಾಗ ನಿಂದರೂದಕ ಎಸ್.ಈ. ಸಾಹೇಬರ ಒಪ್ಪಿಗಿ ಇಲ್ಲಾ. ಎಸ್.ಈ. ಸಾಹೇಬರು ಗುಜರಾಥ ಸೈಡಕ್ಕ ಇದ್ದಾಗ, ಯಾರೋ ಸುಲೇಮಾನ್ ತಯ್ಯಬ್ಜೀ ಅಂತ, ಭಾರೀ ಕಾಂಟ್ರ್ಯಾಕ್ಟರ್ ಇದ್ದರಂತ. ಅವರು ಈಗ

ಮುಂಚೈಯಾಗs ಇರತಾರಂತ. ಅವರ ರಾಜಹರ್ಮ್ಯದೊಳಗ ಇನ್ನ ನಮ್ಮ ಪ್ರತಿಷ್ಠಾಪನಾ ಆಗೂದು. 'ಎಕ್ಸಕೂಜ್' ಮಾಡರಿ ದಾದಾ. 'for utterly disappointing you' ನನಗ ಎಸ್.ಈ. ಅವರ್ನ ನಾರಾಜ ಮಾಡೂದು ಜೀವದ ಸುತ್ತ ಬಂದ್ಹದ. ಅಗದೀ ಉಪಾಯನs ಇಲ್ಲಾ. ಎಡಚೀ-ಬಿಡಚೀ ಪುಣೇಕ್ಕ ಬಂದೇ ಬರತೀನಿ. ನಿಮ್ಮ ಕೆಲಸಾ ಅಗತ್ಯ ಮಾಡತೀನಿ. ನಿಮ್ಮ ಬಂಗಲೇದಾಗ ನಿಂದರದೇನೂ, ಹೊರಗ ಇದ್ದೇ ನಿಮ್ಮ ಕೆಲಸಾ ಬಗೀಹರಿಸಿದರ ಆತಲಾ. ಅದರಿಂದ ಯಾರಿಗೂ ಸಂಶಯನೂ ಇಲ್ಲಾ. ಕಾರ್ಯನೂ ಸಾಧಸ್ತದ."

"ಆಗಲಿ ದಾದಲ್ಯಾ. ಅಲ್ಲೆ ಠೀಕ ಅನಿಸ್ತ್ಯ ಅಲ್ಲೆ ಇರೂ. ಇಲ್ಲs "you are welcome to my Bungalow at any moment." ನಾ, ನಿನ್ನೇ ಪುಣೇಕ್ಕ ಪತ್ರಾ ಬರದೆ: ದಾದಲ್ಯಾ ಬರಾಂವ ಇದ್ದಾನಂತ. ಖಾದರನಿಂದ ಬಸವಂತಿಗೆ ಈ ಸುದ್ದಿ ತಿಳೀತದ. ನೀ ಬೇಕಾದಾಗ ಅಲ್ಲಿಗೆ ಹೋದರೂ ಅಡಥsಳ ಏನ ಆಗೂದಿಲ್ಲಾ. ಸುರ್ಯಾನ್ನದಶಿಂದ ಜರೂರ ಬರೀ. ಪುಣೇಕ್ಕ ಹೋದಾಗ ಜರೂರ ಅವನ್ನ ಬಸವಂತಿಗೆ 'ಇಂಟ್ರಡ್ಯೂಸ್' ಮಾಡಿ ಇಟ್ಟಿರು... 'wish you best of the luck, chap!"

ಶ್ಯಾಮರಾಯ, ನನಗೆ ಪುಣೆಯ ಮನೆಯಲ್ಲಿ ಅನಿರ್ಬಂಧ ಹರಿದಾಡುವ ಪರವಾನಗೆಯನ್ನು ಕೊಟ್ಟ. ದಾದಲ್ಯಾ ತನ್ನ ಜುಟ್ಟವನ್ನು ಬಚಾವು ಮಾಡಿ ಕೊಂಡು, ಶ್ಯಾಮರಾಯನ ಬೇಡಿಕೆಯನ್ನು ಬುಡಮಟ್ಟ ಕೈಯಲ್ಲಿ ಹಿಡಿದು ಕೊಂಡು ಗೆದ್ದ.

ದಾದಲ್ಯಾ ಯಥಾಪ್ರಕಾರ ದಗಾ ಕೊಟ್ಟನೆಂದು ಹಳಹಳಿಸಿ ಸಿಟ್ಟಿಗೆ ಬಂದ ಒಂದೇ ಒಂದು ಗಿರಾಕಿಯಂದರೆ – ವಸೂ.

ಎಸ್.ಈ. ಸಾಹೇಬರಿಗೆ 'ಬಾಯ್ ಬಾಯ್' ಹೇಳಿ, ಕೈವಸ್ತ್ರ ಬೀಸಿ, ಅವರನ್ನು ಬೀಳ್ಕೊಟ್ಟು, ಅವರನ್ನು ಕಳಿಸಲಿಕ್ಕೆಂದು ಬಂದ ಸಣ್ಣ-ದೊಡ್ಡ ಸಾಹೇಬ-ಪಟಾಲಮ್‌ದ ಪರಿಚಯ ಮಾಡಿಕೊಂಡು 'ಈ ಇಸಮನ್ನು ನಿಗಾ ಮಾಡಿರಿ' ಎಂದು ಖುದ್ದ ಎಸ್.ಈ. ಸಾಹೇಬರೇ ಅವರಿಗೆ ಹೇಳಿದಾಗ, ಧನ್ಯತೆಯ ಮೂರಿಂಚು ಜಿಡ್ಡು ಲೇಪಿಸಿಕೊಂಡು, ದಾದಲ್ಯಾ, ಸೇಟ್ ಸುಲೇಮಾನ್ ತಯ್ಯಬ್ಜೀ ಅವರ ರೋಲ್ಸರಾಯಸಿನಲ್ಲಿ ವಿರಾಜಮಾನನಾಗಿ ಅವರ ಬಂಗಲೆಗೇ ಬಂದು ತಳ ಊರಿದ. ಸೇಟಸಾಹೇಬರ ಮಲಬಾರ-ಹಿಲ್ಲಿನಲ್ಲಿಯ ಪ್ರಾಸಾದತುಲ್ಯ

ಹರ್ಮ್ಯವಲ್ಲಿ ಒಂದು ದೊಡ್ಡ ಕೋಣೆಯನ್ನು ಪಡೆದು, ಊಟಕ್ಕೆ ಅವರು ನಿಶ್ಚಯಿಸಿದ ಗುಜರಾಥೀ ಖಾನಾವಳಿಯನ್ನು ಗುರುತುಮಾಡಿಕೊಂಡು, ತೀರಾ ಪ್ರಕಟ ಮಾಯ್ದಿರುವದು ಸರಿಯಲ್ಲವೆಂದು – ಸೇಟ ಸುಲೇಮಾನ್ ತಯ್ಯುಬ್ಜೀ ಅವರ ಮೊಮ್ಮಕ್ಕಳ ದಂಡಿಗೆ ಕಿಂಡರ್-ಗಾರ್ಟನ್ ಸುರುವು ಮಾಡಿದ. ಬೆಳೆದ ಹುಡುಗರಿಗೆ ಇಂಗ್ಲೀಷ್ ಆದಿ ಪಾಠ-ಪ್ರವಚನರತನಾದ. ಹತ್ತೆಂಟು ದಿನಗಳಲ್ಲಿ ದಾದಲ್ಯಾ ನಾಮ, ನಾಮಶೇಷವಾಗಿ, ಅವನಲ್ಲಿ "ಮಾಸ್ತರಜೀ"ಯ ಪರಕಾಯಪ್ರವೇಶವಾಗಿತ್ತು. ನಿವೃತ್ತ ಎಸ್.ಈ. ಸಾಹೇಬರು, ನನ್ನನ್ನು ಖಾಸಗೀ ಕಾರ್ಯದರ್ಶಿಯನ್ನಾಗಿ ಮಾಡಿಕೊಳ್ಳಲು ಏನೂ ಅಡ್ಡಿಯಿಲ್ಲವೆಂದು ತಮ್ಮ ಸ್ನೇಹಿತರಾದ ಸೇಟಸಾಹೇಬರಲ್ಲಿ ವಿಶ್ವಾಸಪೂರ್ವಕವಾಗಿ ಹೇಳಿದ್ದರು. ಹೀಗಾಗಿ ನಾನು – ಪಗಾರೀ ಕಾರ್ಯದರ್ಶಿಯಾಗದಿದ್ದರೂ – ಸೇಟಸಾಹೇಬರ ಚಿತ್ರಗುಪ್ತನ ಪೀಠದಲ್ಲೂ ಆಗೀಗ ಮಂಡಿಸತೊಡಗಿದೆ. ಅವರ ಖಾಸ್ ದಫ್ತರಿಯಾದೆನೆಂದರೂ ಅಡ್ಡಿಯಿಲ್ಲ.

ಇಲ್ಲಿ ಬಸ್ತಾನ ಠೀಕ ಕೂಡುವ ತನಕ ನಾನು ವಿಶ್ವಾಸನ ಉಸಾಬರಿಯನ್ನು ಮಾಡಿರಲೇ ಇಲ್ಲ. ಅದು ಕೂತ ನಿರ್ಧಾಸ್ತತನ ಬಂದ ಮೇಲೆ, ಒಂದು ರವಿವಾರ, ತಯ್ಯುಬ್ಜೀ ಮಂಡಳಿಗೆ ನನ್ನ ಗೆಳೆಯನನ್ನು ಕಾಣುವ ಕಾರಣ ತಿಳಿಸಿ, ಅಖಂಡ ದಿನದ ಅನುಪಸ್ಥಿತಿಯ ಕಾರಣ ಹೇಳಿ, ಇನ್ನೂ ಒಂಭತ್ತು ಬಡೆದುಕೊಂಡಿರಲಿಲ್ಲ – ಜಿ. ಎಮ್. ಕಾಲೇಜದ ಹಾಸ್ಟೆಲ್ಲಿನಲ್ಲಿಯ, ವಿಶ್ಯಾನ ಮುಂದೆ ಮಾಡಿದ ಕೋಣೆಯ ಬಾಗಿಲ ಮೇಲೆ ಟಕ್...ಟಕ್. ಟೇಂಕಾರ ಮಾಡಿದೆ —

"Yes, come in please."
ನನ್ನ ವಿಶ್ಯಾನ ಕೂಜನ ಕೇಳಿಬಂದಿತು.

ಎಸ್.ಈ. ಸಾಹೇಬರು ಹೊಲಿಸಿ ಕೊಟ್ಟ ಪೂಲನ್-ಪ್ಯಾಂಟ್ ಭೂಷಿತನಾದ ದಾದಲ್ಯಾ – ಮಾಸ್ತರಜೀ – ಮುದ್ದಾಂ ಚಣ್ಣದ ಕಿಶೆಯಲ್ಲಿ ಕೈಹಾಕಿಕೊಂಡು, ಬೇಫಿಕೀರ ವೃತ್ತಿಯಿಂದ ಕೋಣೆಯ ಬಾಗಿಲು ದೂಡಿ, ದಾಡೀ ಮಾಡಿಕೊಳ್ಳುತ್ತ. ಬಾಗಿಲಿಗೆ ಬೆನ್ನಾಗಿ ನಿಂತ ವಿಶ್ಯಾನ ಕಣ್ಣಿಗೆ, ಕತ್ತಲೆ ಬರುವ ಘರ್ತಿಯಲ್ಲಿ ಹೋಗಿ ಎದುರು ನಿಂತ. ಕೈಯಲ್ಲಿಯ ರೇಝರ್ ಒಗೆದು. ಸಾಬಾಣದ ಮುಖದಿಂದಲೇ ವಿಶ್ಯಾ ಬೇಭಾನನಾಗಿ —

"ದಾದಲ್ಯಾ...ದಾದಲ್ಯಾ, ಲಪಡೀಕೇ ಪ್ಯಾಂಗs, ಇಲ್ಲಿ ಹ್ಯಾಂಗ ಬಂದೀ? ಎಂದ ಬಂದೀ? ಹೇಳ ಮಗನs?"

ಎಂದು ಅಪ್ಪಿಕೊಳ್ಳಲಿಕ್ಕೆ ಬರುವಷ್ಟರಲ್ಲಿಯೇ ಅವನಿಂದ ದೂರ ಸರಿದು, ಪ್ಯಾಂಟಿನ ಇಸ್ತ್ರೀ ಮುರಿದೀತೆಂಬ ಪರಿವೆ ಇಲ್ಲದೆ ವಿಶ್ಯಾನ ಕಾಟಿನ ಮೇಲೆ ಹೊರಳುತ್ತ —

"No..No..my dear chap. I am no more your ದಾದಲ್ಯಾ. I am...ಮಾಸ್ಟರ್...ಜೀ now. Say ಮಾಸ್ಟರಜೀ, not ದಾದಲ್ಯಾ" ಎಂದು ನಗತೊಡಗಿದೆ.

ಸಾಬಾಣದ ಮುಖದಿಂದಲೇ ವಿಶ್ಯಾ, ಕಾಟಿನ ಮೇಲೆ ನನ್ನ ಬದಿಗೆ ಮಂಡಿಸಿ, ಎರಡೂ ಕಿವಿಗಳನ್ನು ಕೈಯಲ್ಲಿ ತೆಗೆದುಕೊಂಡು, ನಗುತ್ತ —

"ಬೋಲೋ ಮಾಸ್ಟರ್...ಜೀ. ದಾದಲ್ಯಾ ಕಿದರ ಗಯೇ? ಕಬ್ ಖತಮ್ ಹೋಗಯೇ? ಮಾಸ್ಟರ...ಜೀ, ತುಮ್ ಕಬ್ ಅವತಾರ ಕಿಯೇ? ಬೋಲೋ... ಬೋಲೋ...ಬೋಲೋ...ಏಕದಮ್ ಬೋಲೋ. ನಹೀತೋ ಮಾಸ್ಟರ್‌ಜೀಕಾ ದಾದಲ್ಯಾ ಹೋಯೇನಾ ಮಾಲೂಮ್ ಹೈ? ಬೋಲೋ ಯಾರ್? ಕ್ಯಾ ಬಾತ ಹೈ?"
ಕಿವಿಯ ಗಿರಡಿ ತಿರುಗಿಸತೊಡಗಿದ.

"ಅರೇ ಮೀಯಾಂ, ಕಾನ ತೋ ಛೋಡ ದೋ. ಸಬ್ ಕುಚ್ಛ ಬೋಲೇಂಗಾ. ವಿಶ್ಯಾ, ಅಷ್ಟ ದಾಡೀ ಬಗೀಹರಸು. ಒಂದೇ ಕೈ ಎಳಕೊಂಡರೂ ನಡೀತದ. ಈಗೇನು ಯಾರದೂ, ಸುಮಕೋಮಲ...ಅದು ತರಿಯೂ 'ಚಾನ್ಸ್' ಇಲ್ಲಾ. ಎದ್ದ ಕೈಲೇ ಇಕಡೇ ಬಂದೀನಿ ಮಗನs! ಅಷ್ಟು ಹೊಟ್ಟೀ ನೆತ್ತೀ ಕಾಳಜೀ ಮಾಡು. ಇಡೀ ಒಂದಿನಾ 'off' ಅದs. ನಿನ್ನ ಬಿಟ್ಟರ ಕೇಳು. ಸಾಂಗಲೀಗೆ ನಾ ಬರೂತ್ಲೇ ತಪ್ಪಿಸಿ ಪುಣೇಕ್ಕ ಜಿಗದಿದ್ದಿ, ನಿನ್ನ ಲಾರ್ಕ್‌ನ್ನ ನನ್ನ ಕೊಳ್ಳಿಗೆ ಕಟ್ಟಿ. ನೀ ಮುಂಬೈ ಬಿಡೂ ತನಕಾ ಸರ್ತೀ ಹತ್ತಿತು ಇನ್ನs. ನಿಂದೂ – ದಾದಲ್ಯಾಂದೂ ಎಂ.ಏ., ಎಲೆಲ್‌ಬಿ. ಎಲೆಲ್‌ಎಂ. ಪಿ.ಎಚ್‌ಡಿ. ಸ್ಯಾನಿಟರಿ ಇನ್ಸ್‌ಪೆಕ್ಟರ್‌ದು ಒಂದ ವರ್ಷದ ಕೋರ್ಸು. ಎಲ್.ಎಸ್.ಜಿ.ಡಿ. ಎಷ್ಟ ಬೇಕ ಮಗನs. ಟೈಮ್ಸ್‌ದಾಗಿನ 'ವಾಂಟೆಡ್ ಕಾಲಮ್' ನೋಡೀ ಇಲ್ಲೋ? "wanted graduates, preferably 1st class preferably double or trible. Knowing Company Law. Secretariat Practice with social leanings — having thorough knowledge of typing & shorthand & Index filing ಇನಾ ಇರತದ ಮುಂದs. ಇಷ್ಟೆಲ್ಲಾ ಇರೂ ಮರಗ ಸಿಗೂ ಅರ್ಥಕನ್ಯಾ ಎಷ್ಟರದಂದರ 'all

told ೧೫೦. ಇಷ್ಟೆಲ್ಲಾ ಕೋರ್ಸ ಮುಗಸಬೇಕಾಗೇದಪಾ, ವಿಶ್ಯಾ, ಇಷ್ಟೆಲ್ಲಾ ಮುಗಸಬೇಕಾಗೇದ. ನನ್ನ ಹೊಸಾ ಅನ್ನದಾತಾ ತಯ್ಯಬ್ಜೀ, ಕಬರಸ್ಥಾನ ಮುಟ್ಟಿದರೂ ನನ್ನ ಕಲಿಯೂದು ಮುಗಿಯೂದಿಲ್ಲಾ. ನಿಮ್ಮ ಪಂತಮಾಮನ ಮನ್ಯಾಗಿನ ಘಂಟೀ ಮ್ಯಾಲಿನ ಮುಖ್ಯಪ್ರಾಣನ್ನ ಪ್ರೀತಿಯಿಂದ ಹಿಡೀಲಿಕ್ಕೆ ಹೋದರ, ಅಂವಾ ಬಾಲಾ ಬಿಚ್ಚಿ ನನ್ನ ಕಾಲಿಗೇ ಸುತ್ತಿದಾ. ಬಿ.ಏ. ಆಗೂ ತನಕಾ ಸವಾರೀ-ಪೇಚು ಸಡ್ಲ ಮಾಡಲಿಲ್ಲಾ. ಗೆದ್ದೇ ಅಂದು ನವಕರೀ ಹಿಡದೆ. ಹೋಗಹೋಗತ ಎಸ್.ಈ. ಸಾಹೇಬರು, ನಾ ನಿಮ್ಮ ಹಣಮಂತನ ಅಪ್ಪಾ – ಜಾಂಬುವಂತಾ ಅಂತs. ತಮ್ಮ ಲಾಂಗೂಲ ಸಾಮರ್ಥ್ಯನೂ ತೋರಿಸಿದರು. ವಿಶ್ಯಾ, ದಾದ್ಲ್ಯಾನ ಗೋತ್ರ ಬದ್ಲ ಆತು. Your ದಾದಲ್ಯಾ has gone in adaption to ತಯ್ಯಬ್ಜೀ – ಸೇಟ ಸುಲೇಮಾನ್ ತಯ್ಯಬ್ಜೀ – ಮುಶಾಫಿರ್ ಮಂಝಿಲ್ ಮಲಬಾರ್ ಹಿಲ್ ಮುಂಬಯಿ. ಈಗ ಮಾಸ್ಟರ್...ಜೀ ಆಗ್ಯಾನ ದಾದಲ್ಯಾ. ಹೇಳತೀನಿ ಮಗನs. ಸಾದ್ಯಂತ ನನ್ನ ಲೀಲಾ-ಕಥನ ಮಾಡತೀನಿ; over a cup of tea and sumptous tiffin. ಅದು ಮಾತ್ರ ಅಗದೀ ಅವಶ್ಯ, with immediate effect. ಘುಕೇ ಕಂಗಾಲ ಹುಯೇ ಯಾರ್ ನಿನ್ನ ನೋಡೀ, ಆಂ ವಿಶ್ಯಾ."

"ಗೋತ್ರ ಬದ್ಲ ಆದರೂ ಮಾತ ಎಲ್ಲೆ ಹೋಗತಾವ ಮಗನs! ಭಾರೀ ಚಮಕಾಸಲಿಕ್ಕೆ ಹತ್ತೇದ ನಾಲಿಗಿ. ನನ್ನ ಕಣ್ಣಿಗೇ ಕತ್ತಲಿ ಬರಲಿಕ್ಕೆ ಹತ್ತೇದ. my dear ದಾದಲ್ಯಾ is still alive – ದಗಾ ಕೊಟ್ಟಿಲ್ಲಂತ ಖಾತ್ರೀ ಆತು ಈಗ. ನಡೀ ದಾದಲ್ಯಾ, ನಿನ್ನ ಕಂಠತ್ರಾಣದ ಧ್ವಜಾ ಊರಾಕ್ಯಂತ 'ಕ್ಯಾಫೇ- ಈ-ಲಾಯಿಟ್'ದಾಗ. ನನಗೂ 'off' ಅದs. ನಿನ್ನ ಇಂಜಿನಕಿಷ್ಟು ಭರತೀ ಹಾಕಿ ಕೂಡೂಣಂತ ಊಟದ ವ್ಯಾಳ್ಯಾದ ತನಕಾ."

ವಿಶ್ಯಾ ಖುಷಿಯಲ್ಲಿದ್ದ. ನಿರ್ಧಾಸ್ತನಿದ್ದ. ನನ್ನ ದೃಷ್ಟಿಯೇ ಆಗುವಂತೆ ಮೈ-ಕೈ ತುಂಬಿಕೊಂಡು ಗೆಲುವಿನ ನಗೆಯನ್ನು ಮನಸಾ ನಕ್ಕು ಖರೇ ಖುಷಿಯಲ್ಲಿದ್ದ. ಅವನನ್ನು ಈ ಭಂಗಿಯಲ್ಲಿ, ಈ ರೂಪದಲ್ಲಿ, ಈ ಸುಖದ ಕುಶಾಲಚೇಂಡೂತನದಲ್ಲಿ ನೋಡಿ ನನಗೆ ಅನನ್ಯಸಾಧಾರಣ ಸಮಾಧಾನ ಬಂತು. ಸಂತಸ ಉಕ್ಕಿತು.

"ವಿಶ್ಯಾ. ಅಖಂಡ ಜೀವನ ನಿನಗೆ ಈ ರೂಪವಿರಲಿ – ಈ ನಗೆಯಿರಲಿ – ಈ ಸಂತಸವಿರಲಿ ..."

ಎಂದು ನನ್ನ ಜೀವಪಕ್ಕಿ ಹಾಡತೊಡಗಿತು. ಮುಕ್ತಕಂಠದಿಂದ ನುಡಿಯುತೊಡಗಿತು.

ನಾನು ಇಂಗ್ಲಿಷ್ ಕಂಪನಿಯಲ್ಲಿಯ 'ಇಂಟರ್‌ವ್ಯೂ'ಗೆ ಕೇವಲ ಎರಡೇ ದಿನದ ಕಿರುಕುಳ ರಜೆಯ ಮೇಲೆ ಬಂದಿದ್ದೆ. ಅದೂ ದೀಪಾವಳಿಯ ಹೊತ್ತಿಗೆ. ವಿಶ್ಯಾ ಸಾಂಗಲಿಗೆ ಪ್ರಯಾಣ ಹೊಡಿಸಿದ್ದ. ಅದರಿಂದಾಗಿ ನನ್ನ ಅವನ ಭೆಟ್ಟಿಯಾಗಿರಲಿಲ್ಲ. ಶ್ಯಾಮರಾಯನೂ ಪುಣೆಯಲ್ಲಿದ್ದುದರಿಂದ, ಬಸವಂತಿಯ ಭೆಟ್ಟಿಗೆ ಪುಣೆಯಲ್ಲಿ ಇಳಿಯುವದು ಶಕ್ಯವಿರಲಿಲ್ಲ. ಹೀಗಾಗಿ ಸನಿಸನಿಯ ಒಂದು ವರ್ಷದ ಖಾಡಾ ಬಿದ್ದಿತ್ತು, ನನ್ನ-ವಿಶ್ಯಾನ ಭೆಟ್ಟಿಯಲ್ಲಿ. ಅದನ್ನೀಗ ಭರತೀ ಮಾಡತೊಡಗಿದೆ.

ಒಂದು ವರುಷದ ಅಖಂಡ ನನ್ನ ಘಡಾಮೋಡೀ ವಿವರಿಸಿದೆ. ನನ್ನ ಶ್ಯಾಮರಾಯನ ಸಖ್ಯ ಬೆಳೆದು ಬಂದ ಪರಿಯನ್ನು ತಿಳಿಸಿದೆ. ಶ್ಯಾಮರಾಯನ ಡಾವು ಅವನು ಸೋನಕ್ಕ-ವಿಶ್ವಾಸರ ಸಂಬಂಧದಲ್ಲಿ ತಳೆದ ಕಟು ಧೋರಣದ ಪರಿಚಯ ಮಾಡಿಸಿದೆ. ಸುರೇಶ-ಬಸವಂತಿಯರ ಮುಖಾಂತರ ಅವನನ್ನು ಜೇರಿಗೆ ತರಿಸಿ ಹಣ್ಣುಮಾಡುವ ನನ್ನ ಯೋಜನೆಯನ್ನು ತಿಳಿಸಿದೆ. ಶ್ಯಾಮರಾಯನಿಂದ, ಪುಣೆಯ ವಾಸ್ತವ್ಯಕ್ಕಾಗಿ, ಬಸವಂತಿಯನ್ನು ತಿದ್ದಿ-ತೀಡುವದಕ್ಕಾಗಿ, ಸುರ್‍ಯಾನನ್ನು 'ಟ್ಯಾಕಲ್' ಮಾಡುವದಕ್ಕಾಗಿ ನಿಯಮಿತನಾದ ನನ್ನ ಹೊಸ ಹುದ್ದೆಯ ಪರಿಚಯ ಮಾಡಿಸಿಕೊಟ್ಟೆ. ಶ್ಯಾಮರಾಯನ ಅಂದಾಜು ತಪ್ಪಿಸಿ ಅವನನ್ನೇ ಅಲ್ಲಾಡಿಸುವ ಉದ್ದೇಶದಿಂದ ಮುಂಬೈಗೆ ಬಂದು, ತಯ್ಯಬ್ಜೀ ಅವರಲ್ಲಿ ಮುಕ್ಕಾಂ ಠೋಕಾಸಿದ ಕತೆಯ ಕಥನವನ್ನೂ ಮಾಡಿದೆ.

"ವಿಶ್ಯಾ, ಇನ್ನಮುಂದ 'ಪ್ಲಾನಿಂಗ್ ಕಮೀಶನ್'ದ 'ಮೀಟಿಂಗ್' ಇಲ್ಲೇ ಆಗೂದು. ನಾನು-ನೀನು ಇಬ್ಬರೇ ಕಮೀಶನ್ ಮೆಂಬರು: 'You can make men out of clay' ಅಂತ ನನಗ ಸರ್ಟಿಫಿಕೇಟ ಕೊಡೂದರ ಜೋಡೀ ಪುಣೇದ ಬಂಗಲೇದ್ದು ತಾಬೇದಾರೀನೂ ಕೊಟ್ಟಾನ ದಾದಾ. ಆಗೀಗ ಹೋಗಿ ಅಲ್ಲೀ ಬಾತಮೀನೂ ತರತೀನಿ, ಬಸವಂತೀ 'ಕ್ಲೇ' ಅಲ್ಲಾ, ಒಣಗಿ ತಾರ ಆದ ಮದ್ದು ಇದ್ಧಾಂಗ. ಸುರಂಗ ಹಚ್ಚೂದಷ್ಟs ಕೆಲಸಾ. ಸುರ್‍ಯಾನ 'ವೂಯಿಂಗ್' ಧಂದೇಕ್ಕ ಬಸವಂತಿನ್ನ ಬಿಡೂ ಅಂತ ಹೇಳ್ಯಾನ. ಅವಗೂ ಅಲ್ಲಿಗೆ ಹೋಗಿ ಬರೂದಕ್ಕ ಅಡಥsಳ ಉಳೀಲಿಲ್ಲಾ. ದಾದಾ ನೋಡಿದಾ, ಸಂಶಯ ತಗೊಂಡಾ ಅನೂದಕ್ಕ ಆಸ್ಪದನs ಉಳೀಲಿಲ್ಲಾ. ತಯ್ಯಬ್ಜೀ ಅವರಲ್ಲೆ 'ಇಂಪ್ರೆಶನ್' ಬೀಳೂ ಹಾಂಗ ಒಂದೆರಡು ತಿಂಗಳಾ ನಾನೂ ಮೇಹನತ ಮಾಡತೀನಿ. ಅಲ್ಲಿಂದ ಪುಣೇದ ವಾರೀ ಸುರೂ ಮಾಡತೀನಿ. ದೀಪಾವಳೀ ಸೂಟಿಗೇ ಮೊದಲನೇ ಬಾರ ಹಾರ

ಸೂಣು. ಮೇ ತಿಂಗಳದಾಗ 'ಸೆಕಂಡ್ ಅಫ್ ದಿ ಲಾಸ್ಟ್' ಗೋಳೀ ಹಾರಿರಬೇಕು. ಸುರ್‍ಯಾ ಮೊದಲ ಬಾರ ಮಾಡಲಿ. ಶಕೂ ಮುಸಿ ತುಂಬಿಸಿಗೋತಾಳ. ವಿಶ್ಯಾ 'ಸೆಕೆಂಡ್ ಆಫ್ ದಿ ಲಾಸ್ಟ್' ಗೋಳೀ ಹಾರಸಲಿ. ವಸುಧಾಬಾಯರ ಆಗಮನ ಆಗತದ. ಬಸವಂತಿ ಹ್ಯಾಂಗೂ ಕೈ ಬಿಟ್ಟಿರತಾಳ. ನಿಮ್ರ ದಾದಾ ಕೂಡೊಲ್ಲಿನ್ಯಾಕ ಗೆಣಸ ಕೆರಕೋತ."

"ದಾದಲ್ಯಾ. ಶಂಕರಕಾಕಾ-ಪಂತಮಾಮಾ ಬಂದು ಹೋದರು, ನಾಕೆಂಟು ದಿನದ ಹಿಂದ."

"ಮತ್ತ ವಸೂ?"

"ಅರ್ಥಾತ್. ನಾ ಖುಷೀಯೊಳಗ ಇದ್ದೀನಿ ಅನ್ನೂದರ ಮ್ಯಾಲಿಂದs ನೀ ತಿಳಕೋಬೇಕಾಗಿತ್ತು. ದಾದಲ್ಯಾ ವಸೂಗ 'ಲೈನ್ ಕ್ಲೀಯರ್' ಕೊಟ್ಟು ಮೋಕಳೀಕ ಆದೆ. "ಕೋಪಾಡೀಸ್" ಅಂತs ಹೇಳಿದೆ."

"ವಿಶ್ಯಾ... ವಿಶ್ಯಾ ಏನ ಹೇಳಿದೀ?"

"ಅಗದೀ ಸೋಳಾ ಅಣೇ ಖರೇ ಹೇಳತೀನಿ. ವಿಶ್ಯಾನ ಮ್ಯಾಲ ನಿನ್ನ ವಿಶ್ವಾಸ ಅದsನೋ ಇಲ್ಲೋ? ಕೇಳು:

"ನಾ ಬೇಕಾದವರನ ಲಗ್ನ ಆಗಲಿಕ್ಕ ನಿಂದೇನು ತಕರಾರ ಇಲ್ಲಲಾ ವಿಶ್ಯಾ? ಹಿಂದಾಗಡೇ ಇಬ್ಬರೂ ಹಳಹಳಸೂದು ಬ್ಯಾಡಾ. ವಿಚಾರ ಮಾಡಿ. ನಿಧಾನಾಗಿ ತಿಳಸು. ಈಗೇನು ಅಂಥಾ ಅವಸರನೂ ಇಲ್ಲಾ. ಗಡಿಬಿಡಿನೂ ಇಲ್ಲಾ" ಅಂತs ವಸೂ, ಪಂತಮಾಮಾ-ಶಂಕರಕಾಕಾನ ಎದುರಿಗೇನs ಕೇಳಿದಳು."

"ವಸೂ. ಶಂಕರಕಾಕಾ ನನಗ ಹೊರಗಿನವರಲ್ಲಾ. ಪಂತಮಾಮಾ ನಿನಗ ಬ್ಯಾರೇ ಅಲ್ಲಾ. ಅವರ ಸಾಕ್ಷೀ ಇಟ್ಟು ಹೇಳತೀನಿ: ನಿನ್ನ ಮನಸ್ಸಿಗೆ ಒಪ್ಪಿದವರನ. ನಿನ್ನ ಜೀವನಾ ಯಾರಿಂದ ಸುಖೀ ಆದೀತು ಅಂಥವರನ ನೀ ಖುಷೀಲೇ ಲಗ್ನ ಆಗು. ವಸೂ ಹೀಂಗ ಮಾಡಿದಳು ಅಂತs ಜನ್ಮಾಂತರದಾಗೂ ನಾ ಹಳಹಳಸೂದಿಲ್ಲಾ. ವಿಶ್ಯಾ ಏಕವಚನೀ ಅನ್ನೂದು ವಸೂ. ನಿನಗ ಗೊತ್ತ ಅದs" ಅಂತ ಹೇಳಿದೆ."

"ವಿಶ್ಯಾ. ನಿನ್ನ ತಲೀ ಹೆಗಲ ಮ್ಯಾಲ ಇತ್ತೇನು ಹೀಂಗ ಹೇಳೂ ಮುಂದs? ನಾ ಸತ್ತಿದ್ದಿಲ್ಲಾ. ಇನಾ ಜೀವಂತನs ಇದ್ದೆ. ದಾದಲ್ಯಾ ದೋಸ್ತಾ. ಜೀವದ ಗೆಳ್ಯಾ ಅನ್ನೂ ದೃಷ್ಟಿಯಿಂದ ಒಂದ ಮಾತಿನಿಂದರೇ ಕೇಳಬೇಕಾಗಿತ್ತು. ವಿಶ್ಯಾ. ಸಾಯು

ಕೋತ ಬರತಿದ್ನೆಲಾ. ದಸ್ತಗೀರ್ಯಾ ಏನ ಮಾಡತಿದ್ದಾ. ನೀ ಹ್ಯಾಂಗ ಹೇಳೂ ಮುಂದs? ಅಂಪಗ ನೀ ತಿಳಸದೇ ಇರೂದಂತೂ ಶಕ್ಯನs ಇಲ್ಲಾ. ನಿಮ್ಮ ದಾದಾ ಒಬ್ಬನs ಕೂಡತಿದ್ದಾ ಗೊಣಸ ಕೆರಕೋತ. ನೀನೂ ಕುಕ್ಕರಸು ಇನ್ನ ಅವನ ಜೋಡೀ. ವಿಶ್ಯಾ, ನಾ ಒಂದ ವರ್ಷದ ನವಕರೀ ಮಾಡದೇ, ಸಾಂಗ್ಲ್ಯಾಗ ನಿಂತಿದ್ದರ, ಶಂಕರಕಾಕಾ ನನ್ನ ಬಿಟ್ಟು ಇಲ್ಲೀ ತನಕಾ ಹ್ಯಾಂಗ ಬರತಿದ್ರು ನೋಡತಿದ್ದೆ. ಅವರ ಮನೀ ಪೊಸ್ತುಲಕ ಅಡ್ಡ ಬೀಳತಿದ್ದೆ. ಧರಣೀ ಕೂಡತಿದ್ದೆ. ವಿಶ್ಯಾ, ನನ್ನ ಸ್ವಾರ್ಥನs ಕಡೀಕೂ ಕೈಕೊಟ್ಟಿತು. ನವಕರೀ ಆಶಾ. ಎಸ್.ಈ. ಜೋಡೀ ಆಡ್ಯಾಡಶೀನೀ ಅನೂ ಆಶಾ – ಅವರೊಂದು ಸೂಟ ಹೊಲಿಸಿ ಕೊಟ್ಟಿದ್ದರ ಆಶಾ ನನ್ನ ಅಲ್ಲೆ ಕಟ್ಟಿ ಹಾಕಿತು. ಗೋವಿಂದಘಟ್ಟಾ, 'ಅನ್ನಂ ಮಾ ನಿಂದ್ಯಾತ್' ಅಂತ ಕಲಿಸಿದ್ದಾ. ಉಂಡ ಮನೀ ಗಳಾ ಎಣಸಬ್ಯಾಡಾ ಅನೂದು ಅದರ ಅರ್ಥ ಅಂತ ಹೊಳೀಲಿಲ್ಲಾ. ಕಾಕಾ-ಪಂತಮಾಮಾನ ಮನೀ ಗಳಾ ಎಣಿಸಿದೆ. ವಿಶ್ಯಾನ ದೋಸ್ತಂತ ಯಾ ಬಾಯಿಲೇ ಹೇಳಲೀ! ವಿಶ್ಯಾ. ವಸೂಗ 'ಲೈನ್ ಕ್ಲೀಯರ್' ಕೊಟ್ಟೆ. ಮೋಕಳೀಕ ಆದೆ ಅನೂ ಖುಷೀಯೊಳಗ ಇದ್ದೀಯಲ್ಲs? ವಸೂಗ ಏನ ವೇದನಾ ಆಗಿರ ಬೇಕು? ಎಂಥಾ ಸಂಕಟ ಆಗಿರಬೇಕು? ಅನ್ನೂದರ ಕಲ್ಪನಾ ನಿನಗ ಬಂತೇನು? ಈ ಸಂನ್ಯಾಸನs ತಗೊಂಬೂದಿದ್ದರ ಎರಡು-ಮೂರು ವರುಷದ ಹಿಂದೇ ಹೇಳ ಬೇಕಾಗಿತ್ತು? ವಸೂನ್ನ ಯಾಕ ಅತಂತ್ರ ಮಾಡಿ ಕೂಡಿಸಿದ್ದಿ? ದಾದಾ, ಒಂದ ರೀತಿಯಿಂದ ಮೂರ್ಖಾ. ನೀ ಒಂದ ರೀತಿಯಿಂದ ಶತಮೂರ್ಖಾ. ಸುರ್‍ಯಾ ನಿನ ಕಿಂತಾ ಸಾವಿರ ಪಟ್ಟ ಠೀಕಾ. ಘಟ್ಟಿ ಹಿಡದು ಹೇಳಿಬಿಟ್ಟಾ. ಆದರ ಶಕೂನ್ನ – ಇಲ್ಲದಿದ್ದರ ಇಲ್ಲಾ ಅಂತs. ಇಷ್ಟರ ಪೂರ್ತೇ ಅವನ ಕಿತ್ತೇ ತೀಡಬೇಕಾಗಿತ್ತು. ತಮ್ಮನ ಕಿತ್ತೇ ತೀಡಲಿಕ್ಕೆ ದುರಭಿಮಾನ ಯಾಕs?"

ವಿಶ್ಯಾ. ನಾ ಇಂದೇ ಸತ್ತೆ. ಮುಂಬೈ ಆಶಾ ಮುಗೀತು. ತಯ್ಯಬ್ಜೀ ಅವರಿಗೆ ಹೇಳಿ, ಇಂದೇ ಹೊರಟಬಿಡತೀನಿ. ಬಸವಂತಿಗೆ ಏನಾದ ಸೌಭಾಗ್ಯನೂ ನನಗ ಅಷ್ಟರಾಗೇ ಅದ. ಸಾಹೇಬರು-ರಂಗಕ್ಕಾ ಹಾಳಭಾವೀ ಬಿದ್ದರೂ ನನಗ ಸೂತಕಿಲ್ಲಾ. ನಿಮ್ಮ ದಾದಾ ದಗಾ ಕೊಟ್ಟರೂ ನನಗೇನು ಸಂಕಟಿಲ್ಲಾ. ಸತ್ತ ದಾದಲ್ಯಾನ ಕಣ್ಣಿಗೆ ಕಾಮಿಣಿ ಅರ್ಧಾಂಗ ಆಗೇದ. ಜಗತ್ತs ಸತ್ಹಾಂಗ ಆಗೇದ. ಇಲ್ಲೆ ಬರೂ ಮುಂದ ದಾದನ ಚಂಡಿಕೀ ಹಿಡಕೊಂಡೇ ಬಂದೆ ಅನೂ ಗಮಜ ಇತ್ತು. ದಾದಾನ ಪಾವ್‌ನs ಸಾಧಿಸಿತು. ಅವನೇ ಕಡೀಕೂ ಗೆದ್ದಾ. ಸತ್ಯಕ್ಕ ಸಾವಿಲ್ಲ ಅಂದವರು ಘನ ಸುಳ್ಳ

ಸೂಳೇಮಕ್ಕಳು. ಈ ಸುಳ್ಳ ವಿಧಾನ ಮಾಡೇ ಸತ್ಯದ ಪಾಠ ಕಲಿಸಲಿಕ್ಕೆ ಹೊಂಟರು. ಅಂದಲ್ಲೇ ಜಗತ್ತು ಅಪ್ಪಾಪಕ್ರ ಆತು. ಹೋಗಲಿ ಸೂಳೇಮಗಂದು. ನಾನs ಆದೆ ಅಪ್ಪಾಪಕ್ರಾ. ಜಗತ್ತು ಏನ ಆದ ಭಾಗ್ಯನೂ ನನಗ ಅಷ್ಟರಾಗೇ ಅದs ಇನ್ನ. 'Come on ವಿಶ್ಯಾ, let us bid good-bye and part forever."

"ವಾಃ, ವಾಃ, ವಾಃ, ಏನ ಮಸ್ತ ಆತ್ಮಗತ-ಭಾಷಣ ಮಾಡಿದೀ ಅಂದಿ ದಾದಲ್ಯಾ. ಹ್ಯಾಮ್ಲೆಟ್ ಮಗಾ ಝುಕ್ಕಿಸಿದಾ: 'To be or not to be' ಅಂತs ಅಂವಾ ಅಂದಾಗ ಟಾಳೀ ಕಡಕಡಾಟ ಆಗೂ ಹಾಂಗ, ನಿನ್ನ 'let us bid good-bye' ಕೇಳಿ ನಾನೂ ಟಾಳೀ ಬಾರಿಸಿದೆ. ಲಕ್ಷ್ಯದಾಗ ಬರದಷ್ಟು ತನ್ಮಯತಾ ಬಂದಿತ್ತು. ಆಹಾ, ಏನ ತನ್ಮಯ ಆಗತೀ ಅಂದಿ ದಾದಲ್ಯಾ. ಗಂಧರ್ವಾ, ಬೋಡಸ್, ಚಿಂತಾಮಣರಾವ ಅವರೂ ಭಾರೀ ತನ್ಮಯ ಆಗತಾರ ಪಾರ್ಟ ಮಾಡೂದರಾಗ. ಆದರ ನಿನ್ನ ಮುಂದs – ಛೇ, ಫಿಕ್ಕಾ ಫಟಫಟೀತ ಬೀಳತಾರ. ಅರೇ ಏ ಛೋಕರಾ, ಇದರ್ ಆವ್. ಹಂ... ಏ ದೇಖೋ ಔರ್ ದೋ ಮಸ್ತ ಚಾಯ್ ಚಾರ ಖಾರಾ ಬಿಸ್ಕಿಟ್, ಏಕ ಗೋಲ್ಡ ಫ್ಲೇಕ ಪಾಕೀಟ ಲಾವ್. ಜಲ್ದೀ ಕರೋ! ಹಂ. ದಾದಲ್ಯಾ, ಚಹಾ ಬಗೀಪರೀಲಿ. ಅಷ್ಟ ಬಿಸೀ ಚಹಾ ಶೆಡ್ಡಿ ಥಣ್ಣಗಾಗು. ಒಂದೆರಡು ಸಿಗರೇಟಿನ ಝುರಿಕೀ ಎಳೀ. ತಲೀ ಭುಜದ ಮ್ಯಾಲ ಕುಕ್ಕರಸಲಿ. ವಿಶ್ಯಾ ನಗೂ ಕಾರಣಾ, ವಸೂಗ 'ಲೈನ್ ಕ್ಲಿಯರ್' ಕೊಟ್ಟ ಕಾರಣಾ ಸಾದ್ಯಂತ ಹೇಳತೀನಿ. ಖೋಲೀ ಕಡೇನs ಹೋಗೂಣು. ನಿನಗ ಭವಳಿ ಬಂದು ಬಿದ್ದರೂ ಅಲ್ಲೇ ಕಾಟ್ ಅದs. ನೀ ಕಾಟಿನ ಮ್ಯಾಲೇ ಅಡ್ಡಾಗಿ ಸುದ್ದೀ ಕೇಳತಿರು. ಕೇಳಿಕೋತೇ ಟಕ್ ಅಂದರ, ಬ್ಯಾರೇ ತಿರಡೀ ಕಟ್ಟಸೂ ಜರೂರಿನ ಬೀಳೂದಿಲ್ಲಾ. ಕಾಟವರಸಲೇನs ಸೋನಾಪುರೀಗೆ ಸಾಗಸಲಿಕ್ಕೆ ಅನುಕೂಲ ಆಗತದ. ಚಹಾ ಬಂತು ತಗೋ ದಾದಲ್ಯಾ. ಕಡೀದು ಈ ಚಹಾ, ಈ ತೀರ್ಥ-ಪ್ರಸಾದಾ. ಏನರs ಆಶಾ ಇದ್ದರ ಈಗೇ ಹೇಳು. ಕಾಕಪಿಂಡದ ವ್ಯಾಳ್ಯಾದಾಗ ಇಲ್ಲದ ತ್ರಾಸ ಕೊಡಬ್ಯಾಡಾ. ಚಹಾ-ಬಿಸ್ಕೀಟದ ತೃಪ್ತಿ ಆಗಲಿಲ್ಲಂತ ಗೋವಿಂದಭಟ್ಟಗ ಕಲ್ಪನಾ ಬರೂ ಶಕ್ಯತಾ ಇರೂದಿಲ್ಲಾ. ಮಗನs, ನಿಂದು ಜಲಪಿಂಡಾನs ಮಾಡಿ ಬರಬೇಕಾಗತದ."

ವಿಶ್ಯಾ ನಗುತ್ತಲೇ ಮಾತನಾಡುತ್ತಿದ್ದ. ನಗೆಯ ಒಂದೊಂದು ಬಾಣ ವಿದಿಸ ಮುಳ್ಳಿನಂತೆ ಬೀಸಿ ಬಂದು ಅಂಗಾಂಗದಲ್ಲಿ ಸೇರಿ ಅಸಹ್ಯ ವೇದನೆಯನ್ನು ಕೊಡ ತೊಡಗಿದ್ದವು. ಹಾಲಾಹಲ-ಸಮನಾದ ಆ ಚಹಾ, ಆ ಬಿಸ್ಕೀಟು ಒಂದೇ ಗುಟುಕ-

ಒಂದೇ ತುತ್ತು ಮಾಡಿ ಗಂಟಲ ಕೆಳಗಿಳಿಸಿ ನಾನು ಎದ್ದೆ. ವಿಶ್ಯಾ ನಿಧಾನವಾಗಿ ಎದ್ದು ಲೆಕ್ಕದ ಪಟ್ಟಿಯಲ್ಲಿ ಲೆಕ್ಕ ಬರೆದು. ಹನ್ನೊಂದು ಗಂಟೆಗೆ ಇನ್ನೊಮ್ಮೆ ಚಹಪನ್ನು ಕೋಣೆಗೆ ಕಳಿಸಲು, ಇರಾಣೀ ಮ್ಯಾನೇಜರನಿಗೆ ತಿಳಿಸಿ, ಒಂದು ಕೈ ಪ್ಯಾಂಟಿನ ಕಿಶೆ ಯಲ್ಲಿ ಹಾಕಿ, ಇನ್ನೊಂದನ್ನು ನನ್ನ ಹೆಗಲ ಮೇಲಿರಿಸಿ ಬಾಯಿ ಸಿಳ್ಳಿನ ಮುರಲೀ ನಾದಕ್ಕೆ ಸುರುವು ಮಾಡಿದ. ಅನ್ಯ ಪ್ರಸಂಗದಲ್ಲಿಯಾಗಿದ್ದರೆ ಬೀದಿ ಎನ್ನದೆ, ಹೊಟೇಲ್ ಎನ್ನದೆ, ಯಾವುದರ ದರಜೂ ಇಲ್ಲದೆ. ವಿಶ್ಯಾನನ್ನು ಅಪ್ಪಿ ಮುದ್ದಾಡು ತ್ತಿದ್ದೆ. ಆದರೆ ಈಗ ನನಗೆ ವಿಶ್ಯಾನ ಸಂತಾಪ ಅತಿರೇಕವಾಗಿತ್ತು. ನನ್ನ ಹೆಗಲ ಮೇಲಿಟ್ಟ ವಿಶ್ಯಾನ ಕೈಯನ್ನು ಸರಿಸುತ್ತ —

"ವಿಶ್ಯಾ, ನೀ ಹೆಗಲ ಮ್ಯಾಲ ಕೈ ಇಡೂ ಅಧಿಕಾರ ಸುದ್ದೇ ಕಳಕೊಂಡು ನಾಲಾಯುಖ ಆಗೀ. ನಿನಗ ಏನ ಹೇಳೂದದ ಅಷ್ಟ ಹೇಳಿ ಮುಗಸು. ಕೇಳೂದು ಮುಗದ ಮ್ಯಾಲs. ಒಂದ ಘಳಿಗಿ ಸುದ್ದೇ ನಾ ನಿಂದ್ರಾಗಿಲ್ಲಾ. ರಾತ್ರೀ ಗಾಡಿಗೇ ಮುಂಜೈ ಬಿಡೂ ತಯಾರಿ ಮಾಡತೀನಿ. ನಿಂದೂ. ವಸೂಂದು, ಕಾಕಾ, ಸೋನಕ್ಕಾ, ಬಸವಂತಿ ಎಲ್ಲಾರದೂ ಪರಲ ಪರೀತಂತೀನಿ. ಗೋವಿಂದಭಟ್ಟನ ಸಂಬಂಧಾ ತಂತಾನೇ ಕಡಧಾಂಗ ಆಗತದ. ದಾದಲ್ಯಾನ ಜೀವಂತ ಶ್ರಾದ್ಧಾ ಬಗೀಹರಿಸಿಗೋ ಅಂತ ತಿಳಿಸಿಬಿಡತೀನಿ. ವಿಶ್ಯಾ-ವಸೂ ಇದ್ದರ ನನಗ ಊರ ಇತ್ತು. ಕಾಕಾ-ಸೋನಕ್ಕಾ ಇದ್ದರು. ಬಸವಂತಿ ಇದ್ದಳು. ಸಾಹೇಬರು. ರಂಗಕ್ಕಾ, ಶಕೂ ಇದ್ದರು. ಗೋವಿಂದಭಟ್ಟಾ-ಅವ್ವಾ ಇದ್ದರು. ಇಂದ ಎಲ್ಲಾರೂ ಇದ್ದೂ ಇಲ್ಲಧಾಂಗ ಆದರು. ಅವರ್ನ ನಾ ಮರತು, ನನ್ನ ಅವರು ಮರತು ಇನ್ನ ಬದಕೂದನ್ನ ಕಲೀ ತೀನಿ. ಇದು ಇಷ್ಟು ನಶೀಬದಾಗ ಇತ್ತಂತೇ, ವಿಧೀ ಹದ್ದಪಾರ ಮಾಡಿಸಿ, ನನ್ನ ಮುಂಬೈಗೆ ತಂದಿತು. ಇಲ್ಲೆ ತರಬೇಕಾದರ ಅದರದೂ ಏನರs ಡಾವ್ ಇರಬೇಕು. ಇನ್ನ ವಿಧೀ ಒಂದೇ ಡಾವ್ ಮಾಡೂದು. ದಾದಲ್ಯಾಗ ಪ್ರತಿ ಡಾವಿನ ಅಗತ್ಯಾನs ಉಳೀಲಿಲ್ಲಾ. ಅಂವಾ ಕೈಯಾಗಿನ ಕಲ್ಲ ಆದ ಇನ್ನs. ಒಗದಲ್ಲೆ ಹೋಗಿ ಬೀಳತಾನ. ವಿಧೀ ಒಕ್ಕೊಂತ ಹೋಗವಲ್ಲದ್ಯಾಕ. ಹೇಳ ವಿಶ್ಯಾ ಲಟ್ಟನs. ನಿನಗ ಏನ ಹೇಳೂದದ ಅದನ್ನ ಲಗೂ ಮುಗಸು. ಮೇಹರ್ಬಾನಗೀ ಮಾಡು."

ನಾವು ಕೋಣೆಗೆ ಬಂದಿದ್ದೆವು. ವಿಶ್ಯಾ ಬಾಗಿಲು ಮುಂದೆ ಮಾಡಿದ. ನನ್ನನ್ನು ಒತ್ತಾಯದಿಂದ ಕಾಟಿನ ಮೇಲೆ ಕುಕ್ಕರಬಡಿದು ಕೂಡಿಸಿದ. ತಾನೂ ತೀರ ಬದಿ ಯಲ್ಲಿ ಕುಳಿತು, ಸಿಗರೇಟು ಮುಂದೆ ಹಿಡಿದು —

"ದಾದಲ್ಯಾ 'ಪಾರ್ಟಿಂಗ್ ಸಿಗರೇಟ್' ಸೇದಲಿಕ್ಕೆ ಅಡ್ಡಿೀ ಏನಿಲ್ಲಾ. ಹಚ್ಚ ಸಿಗರೇಟು. ಖರೇ ಅಂದರ ನನಗ ಏನ ಹೇಳೂದದ ಅದನ್ನ, ಲಟ್ಟನೇ ಹೇಳಿ ಮುಗಿಸ್ತಿದ್ದೆ. ನಾ ಇನ್ನೂ ಮಾತಾಡಂವಾ. ನೀ ಅಡ್ಡ ಬಾಯೀ ಹಾಕಿ ಘನ ಲೆಕ್ಚರನs ಬಿಗದೀ. ಪರಲ ಹರಕೊಂಡ ಕಥನ ಮಾಡಿದಿ. ಸೀಮೋಲ್ಲಂಘನ ಆದದ್ದು ಠೀಕ ಆತಂದಿ. ಹಾಂ... ಏನಪಾ ಅಂದರ. ಎಲ್ಲಿಗೆ ಬಂದಿತ್ತು ಅಗಳೇ ನಾ ಹೇಳಿದ್ದು? ವಸೂನ ಲಗ್ನದ 'ಪ್ಯಾಸ್‌ಪೋರ್ಟ್' ಕೊಟ್ಟಿದ್ದಕ್ಕ. ಹೌದಲ್ಲೋ? ಆತು; ನನ್ನ ನಿರ್ಣಾಯಕ ಅಭಿಪ್ರಾಯ ಹೊರಬಿತ್ತು. ಪಂತಮಾಮಾ-ಶಂಕರಕಾಕಾ, ನೀ ಹ್ಯಾಂಗ ಈಗ ಥಂಡ ಗಾರ್ ಆಗೀ, ಹಾಂಗ ಆದರು. ಪಂತಮಾಮಾ, ಶಂಕರ ಕಾಕಾನ ಕಡೇ, ಶಂಕರಕಾಕಾ ಪಂತಮಾಮಾನ ಕಡೇ ಟಕಮಕ ಟಕಮಕ ನಡೆಸಿದರು. ನಾಲಿಗೀಲೇ ಒಣಗಿದ ತುಟೀ ಸವರಿಕೊಂಡರು. ಜೇಮು-ತೇಮು ಪಾಸಿನ ಪೂರ್ತೇ ಪೇಪರ ಬರದ ಬಂದ ಹುಡುಗೂರು, ಉತಾವೀಳ ಆಗಿ, 'ರಿಜಲ್ಟ್ ಶೀಟ್'ನ್ಯಾಗ ತಮ್ಮ ನಂಬರು, ಹೆಸರು ಎಲ್ಲ್ಯರs ಬಂದದೇನು ಅನೂದನ್ನ ಅಡರಾಸಿ ನೋಡೂ ಹಾಂಗ, ಕೈಯಾಗ ಜೀವಾ ಓಡಕೊಂಡು ವಸೂನ ಮಾರೀ ನೋಡಲಿಕ್ಕೆ ಹತ್ತಿದರು......"

"ವಿಶ್ಯಾ, ನೀ ಉಧಾರಣೇ ಕೊಟ್ಟು, ಮಾತ ಎಳದೆಳದು ವ್ಯರ್ಥ ವ್ಯಾಖ್ಯಾ ಹಾಕಬ್ಯಾಡಾ. ವಸೂ ಏನಂದ್ಲು ಅನೂದನ್ನ ಸಟ್ಟನs ಹೇಳಿಬಿಡು. ಪಂತಮಾಮಾ, ಶಂಕರಕಾಕಾನ ಮಾರೀ, ಹಳೀ ಕೃಷ್ಣಾಂಜನಧಾಂಗ ಹಟಾಹಟಾ ಹಾರಿದ್ದರೂ ನನಗ ಅಷ್ಟರಾಗೇ ಅದs. ಅದರ ಸಂಕಟ ಇಲ್ಲ ನನಗ."

"ಹಾಂಗ ಗಡಿಬಿಡಿ ಮಾಡಬ್ಯಾಡ ದಾದಲ್ಯಾ. 'ಜಾತಸ್ಯ ಮರಣಂ ಧ್ರುವಂ' ಹೌದಲ್ಲೋ? ನಿನ್ನ ಅಂತ್ಯ ಹ್ಯಾಂಗೂ ಶತಸಿದ್ಧನs ಅನುದನ್ನ ನೀನೇ ಒಪಿ ಗೊಂಡೀ. ಸಾಯೂದಕ್ಕ ಯಾಕ ಅಷ್ಟು ಅವಸರಾ ಮಾಡಕೋತೀ? ಸಾಯೂದರ ಥಾವತೀ ನಮ್ಮ ಮುಂಜೈ ಟ್ರ್ಯಾಮ್‌ನ್ಹಾಂಗ ಇರಬೇಕು. 'ಡೆಸ್ಟಿನೇಶನ್' ಎಂದರs ಯಾಕ ಮುಟ್ಟ ಪಲ್ಲೇವ ಯಾಕ. ಮುಟ್ಟೂದು, ಮುಟ್ಟೂದೂ ಖಾತ್ರೀ. ಕಾರಣಂವರ 'ಟ್ರೇನ್' ಚಲತ್ ಸ್ಥಿತೀ ಒಳಗ ಇರತದ. 'ಡೆಸ್ಟಿನೇಶನ್'ದ್ದು ತಿಕೀಟ ಕೈಯಾಗ ಇರತದ. ಹಾಂಗ ಏನಪಾ ದಾದಲ್ಯಾ. 'ಟ್ರೇನ್'ನ್ಹಾಂಗ ನಿಧಾನ ಆಗಿ ಸಾಗು. ವಸೂ ಏನಂದ್ಲು: ವಿಶ್ಯಾ ನಿಂದ ಘಟ್ಟಿ ಹೌದಲ್ಲೋ? ಏಕವಚನೀ ನೀ ಅನೂದು ಘಟ್ಟಿ ಹೌದಲ್ಲೋ? ನಾ ಏನ ಅಂದೆ: ವಸೂ, ಇದೇನ ನಡಿಸಿದಿ

ಏಕವಾರ, ದೋನವಾರ, ತೀನವಾರದವರ್ಗ್ಯಾಂಗ, ವಿಶ್ಯಾನ ಏಕವಚನದ ಸವಾಲು? ನನ್ನ 'ಫೈನಲ್ ಡಿಸಿಶೆನ್' ಏನ ಅನೂದನ್ನ ಹೇಳೀನಿ. ನೀ ನಿಂದ ಹೇಳು, ಸಾಕಾರ ಬಿಡೂ. ನೀ ಈಗ ಹೇಳದಿದ್ದರೂ ನಿನ್ನ ಲಗ್ನದ ಸಾದಾ 'ಇನ್‌ವ್ಹಿಟೇಶನ್' ಕಾರ್ಡ ಬಂದ ದಿನಾ ತಾನs ತಿಳೀತದ. ಉತ್ತರಾ ಹೇಳೂ ಅಗತ್ಯ ನಿನಗ ಇದ್ಧಾಂಗ ಕೇಳೂ ಗರಜು ನನಗ ಇಲ್ಲಾ. ಕನ್ಯಾಪಿತೃ ಸಾಕ್ಷಾತ್ ಇಲ್ಲೇ ಇದ್ದಾರ. ಅವರಿಗೆ ಹೇಳಿದರೂ ನಡದೀತು. ವಿಶ್ಯಾ, ಏಕವಚನೀ ಅನೂದರ ಸವಾಲ ಪುಕಾರಸಲಿಕ್ಕೆ ಮುಂಬೈ ತನಕಾ ಬರೂದರ ಜರೂರಿ ಇದ್ದಿದ್ದಿಲ್ಲಾ. ಮೂರ ದುಡ್ಡಿನ ಕಾರ್ಡಿನ ಮ್ಯಾಲಿಂದ ಬಗೀಹರೀತಿತ್ತಂತ ನಾ ಅಂದೆ ಏನಪಾ. ದಾದಲ್ಯಾ, ದಾದಲ್ಯಾ, ನಿದ್ದಿ ಹತ್ತೇನು? ಏಳ ಮಗನs. ಹಚ್ಚ ಇನ್ನೊಂದು ಸಿಗರೇಟು. Be attentive now – ಹಂs crucial moment is fast approaching. Be in readiness for the best or worst – ನಿನ್ನ ಭಾಷಾದಾಗ ಹೇಳೂದಂದರ, ಅಸ್ಮಾದಿಕರ ಈ ಖಂಡತುಂಡ ಮಾತ ಕೇಳಿ, ವಸೂಗ ಏನ ಅನಿಸಿತೋ ಏನೋ. ಠಾಂವಿಕಿಲ್ಲಪಾ. ಚಟ್ಟನs ಎದ್ಲು. ಶಂಕರಕಾಕಾ, ಪಂತಮಾಮಾಗ ಹೇಳಿದಳು: "ಮುಗೀತಲಾ, ನಡೀರಿನ್ನ. ವಿಶ್ಯಾ ತನ್ನ 'ಫೈನಲ್ ಡಿಸಿಶೆನ್' ತಿಳಿಸಿದಾ. ಅವನ ಕರ್ತವ್ಯ ಮುಗೀತು. ಇನ್ನ 'ಡಿಸಿಶೆನ್' ತಗೊಂಬಾಕಿ ನಾನು. ವಿಶ್ಯಾ, ಏಕವಚನೀ ಅಂತs ತಾನs ಒಪಿಗೊಂಡಾನ. ಅಂದರ ನನ್ನ 'ಡಿಸಿಶೆನ್'ದ ಪ್ರಕಾರ ನಡೀಲಿಕ್ಕೆ ಅವಂದೇನು ಅಡ್ಡೀ ಇಲ್ಲಾ. ಸಾಂಗಲೀಯಿಂದನs ಮೂರು ದುಡ್ಡಿನ ಕಾರ್ಡ ಹಾಕಿಬಿಡೂಣು. ವಸೂ ವಿಶ್ಯಾನ ಜೋಡೀ ಲಗ್ನ ಆಗೂ 'ಡಿಸಿಶೆನ್' ತಗೊಂಡಾಳಂತs." ಆಕಾಶವಾಣೀಗೆ ಆತುರ ಆಗಿ ಕೂತಿದ್ದು, ಮಾಮಾ, ಕಾಕಾ ಒಂದೇ ಉಸಲಿನ್ಯಾಗ ಎರಡೂ "ತರ್‍ರೀ ಕೈ ಮಾಮಾ, ತರ್‍ರೀ ಕೈ ಕಾಕಾ" ಅಂತs, ನಮ್ಮ ಕೈ ಕೂಡಿದ್ದಕ್ಕ ತಮ್ಮ ಕೈ ಹೆಣಿಕೊಂಡು, ನಡೀರಿ, ಪಂತಮಾಮಾ, ಇಲ್ಲ್ಯಾಕೋ ಭಾಳ ಕುದಿಸಿಧಾಂಗ ಆಗತದ. ನಾವಿಷ್ಟು ಚೌಪಾಟೀ ಕಡೇ ಹಾದಬರೂಣು. ಭಾರೀ ಭಾರ ಇಳೀತ್ರ್ಯೆಪಾ ಅಂದು, ಚೌಪಾಟಿ ಸಫರಿಗೆ ನಡದರು. ಅರ್ಥಾತ್, ವಸೂ-ನಾನು ಇಬ್ಬರೇ ಕುದಸೂ ಶಕ್ಯಾಗ ಉಳದೇವನೂದನ್ನ ದಾದಲ್ಯಾಗ ಹೇಳೂ ಕಾರಣ ಇಲ್ಲಾ — ಇತಿ ವಸುಧಾ-ವಿಶ್ವಾಸ-ಪರಿಣಯ-ಪ್ರಕರಣದ ಪೀಠಿಕಾ-ಸಂಧೀ ಸಮಾಪ್ತಮಸ್ತೂ — ತಿಳೀತs ಮಗನs. ದಾದಲ್ಯಾ, ಸತ್ತ್ಯೇನೋ, ಹೀಂಗ್ಯಾಕ ಥಣ್ಣಗಾಗೀ?"

ವಿಶ್ಯಾ ಜೋರಿನಿಂದ ಸಿಗರೇಟಿನ ಝುರಕಿ ಎಳೆದು ನನ್ನ ಮುಖದ ಮೇಲೆ

ಬಿಟ್ಟ. ಏಕದಮ್ ಬೇಭಾನನಾಗಿ ದಾದಲ್ಯಾ, ವಿಶ್ಯಾನನ್ನು ಗಟ್ಟಿಯಾಗಿ ಅಪ್ಪಿ, ಮುಖದಲ್ಲಿ ಎಲ್ಲಿಯೂ ಬಿಡದೆ ಲಟಲಟನೆ ಮುದ್ದಿಸಿಬಿಟ್ಟ.

"ವಿಶ್ಯಾ, ಮಗನ್ಯ, ದಾದಲ್ಯಾ ಚಿರಂಜೀವಿನೋ – ದಾದಲ್ಯಾ ಚಿರಂಜೀವಿ. ಆವನ ಅಜ್ಜಿ ಐವತ್ತ ವರ್ಷ ಆತು, ಯಮರಾಜನ್ನ ಅಂಜಿಸಿಗೋತ ಇದ್ದಾಳ. ಅಜ್ಜಿಗೇ ಅಂಜಿದ ಯಮಾ ಮೊಮ್ಮಗನ ಸನೇಕ ಹಾದಾನ್ಯ? ಏನ ಗೋಳ್ಯಾಡಿಸಿ ಹೇಳಿದಿ ನಿನ್ನ ಕಥೀ. ನೀ ಎಳೆಎಳದು ಹೇಳಾಗ, ಕಪಾಳಿಗೆ ಹೊಡೀಬೇಕಂತ ಮಾಡಿದ್ದೆ. ಉಳಕೊಂಡಿ. ಈ ಸುದ್ದೀ ಹೇಳೂದು ಇತ್ತಂತ, ವಸುಧಾಬಾಯರು, ಅಗದೀ ಅಗತ್ಯದ ಪತ್ರಾ ಬರದಿದ್ದರು: ಸಾಂಗಲೀಗೆ ಜರೂರ ಬಾ, ಮುಂಬೈಗೆ ಹೋಗೂ ಮುಂದ ಅಂತ. ವಿಶ್ಯಾ. ನನ್ನ ಬಾಯ್ಲೇ–ವೈದಿಕಬ್ರಾಹ್ಮಣನ ಬಾಯಿಲೇ ಅಚಾನಕ ಆಗಿ ಬಂದಿತ್ತು: ಸುರ್ಯಾನ ಬಾರು ಮೊದಲ ಹಾರಲಿ; ಮೇ ತಿಂಗಳದಾಗ ನಿಂದ ಹಾರಲೀ ಅಂತ್ಯ. 'ಇಂಟ್ಯೂಶನ್' ಅಂತಾರಲಾ ವಿಶ್ಯಾ. ಅದು ಇತ್ತಂತ್ಯ ನನ್ನ ಬಾಯಿಲೇ ಸತ್ಯ ಹೊರಬಿತ್ತು. ಸತ್ಯ ಹೋಗಲಿ ಹಾಳಾಗಿ. ವಸೂ-ವಿಶ್ಯಾನ ಬೆಸಿಕಿ ಆತು. ವಜ್ರಲೇಪ ಆತು. ದಾದಲ್ಯಾ ಧನ್ಯ ಆದ ಮಗಾ."

ವಸೂ ಒಪ್ಪಿಕೊಂಡಿದ್ದಳು. ತನ್ನ ಶಂಕರಕಾಕಾ, ವಿಶ್ಯಾನ ಪಂತಮಾಮಾ, ಅವರ ಸಮಕ್ಷಮದಲ್ಲಿ ಒಪ್ಪಿಕೊಂಡಿದ್ದಳು. ಆದರೆ ವಿಶ್ಯಾ ನನ್ನ ಇಲ್ಲದಿದ್ದರೆ ಯಾರನ್ನೂ ಇಲ್ಲ ಎನ್ನುವ ತನ್ನ ಅಂತಿಮ – ಖಚಿತ ನಿರ್ಣಯ ಕೊಟ್ಟು ಒಪ್ಪಿ ಕೊಂಡಿದ್ದಳು. ದಾದಾ-ಸೋನಕ್ಕನ ಪ್ರಕರಣದ ಬಣ್ಣ ಅವಳಿಗೆ ತಿಳಿದ ಮೇಲೂ, ಅವಳು ಅದಕ್ಕೆ ಒಪ್ಪಿಗೆ ಕೊಟ್ಟಿದ್ದಳು.

ವಿಶ್ವಾಸ ತನ್ನ ಭೂಮಿಕೆಯನ್ನು ಸ್ಪಷ್ಟಗೊಳಿಸುವ ನಿಮಿತ್ತದಿಂದ ವಸೂನಿಗೆ ಶ್ಯಾಮರಾಯ-ಸೋನಕ್ಕನ ಸಂಬಂಧ ಬಿಘಡಾಯಿಸಿದ ಮೂಲ ಕಾರಣ–ಸೋನಕ್ಕ ನಿಗೆ ತನಗೆ ಬಂದ ಹೀನ ಅಪವಾದದ ಕಲಂಕ ಅವನ್ನು ಕುರಿತು ಹೇಳಿದ್ದ. ವಿಶ್ವಾಸ ನಲ್ಲಿ ಅಪಾರ ನಂಬಿಗೆ-ಭರವಸೆ ಇದ್ದ ವಸೂ ಅದರಿಂದ ವಿಚಲಿತಳಾಗದೆ, ಶ್ಯಾಮ ರಾಯನ ಆರೋಪ ತಥ್ಯರಹಿತವೆಂದು ಭಾವಿಸಿಯೇ, ಅವನ ಕೂಡ ತನ್ನ ಜೀವನ ವನ್ನು ಹೆಣೆಯಲು ಎಂದೋ ಸಿದ್ಧಳಾಗಿದ್ದಳು. ವಿಶ್ವಾಸ-ವಸೂ ಆ ನಿರ್ಣಯಕ್ಕೆ ಬಂದ ವಿಷಯ ಪಂತಮಾಮಾ-ಶಂಕರಕಾಕಾ ಅವರಿಗೆ ಅವಿದಿತವಾಗಿತ್ತು. ಅವರೂ ಕೂಡ ಇಷ್ಟು ಅವಸರದಿಂದ ಈ ಅವಿದಿತ ಗುಪಿತವನ್ನು ವಸೂನಿಗೆ ತಿಳಿಸುವ ಅಗತ್ಯವಿರಲಿಲ್ಲ. ಆದರೆ ಅವರಿಗೆ ಅವಸರ ಮಾಡಹಚ್ಚಿದ ಶ್ಯಾಮರಾಯ.

ವಿಶ್ವಾಸನ ಕಾಯಿಯನ್ನು ಮುಲ್ಲಿಯಾಗಿ ಮಾಡುವೆ – ಅವನು ಲಗ್ನವನ್ನು ಕಾಣದೆ ಕೊಡುವಂತೆ ಮಾಡುವೆನೆಂದು ಹಿಂದೆ ಪುಷಾರಕೀ ಹೊಡೆದಿದ್ದ. ಅದನ್ನು ಕೃತಿಯಲ್ಲಿ ಇಳಿಸಲು ಧಡಪಡ ನಡೆಸಿದ್ದನೆಂದು ಕಾಣುತ್ತದೆ.

ಆ ಧಡಪಡದಲ್ಲಿಯ ಪ್ರಥಮ ಶರಸಂಧಾನವೆಂದು ಅವನು ನೇರವಾಗಿ ಶಂಕರಕಾಕಾ ಅವರಿಗೆ ಕಾಗದ ಬರೆದು, ತಾನು ಸೋನಕ್ಕನನ್ನು ಹಣದ ವ್ಯವಹಾರದ ಸಲುವಾಗಿ ಬಿಡದೆ. ಸೋನಕ್ಕನ ಕಲಂಕಿತ ಚರಿತ್ರೆಯು ಬಗ್ಗೆ ಬಿಟ್ಟೆ. ವಿಶ್ವಾಸನ ಜನನಕಥೆ ಸಂಶಯಾಸ್ಪದವಾಗಿದೆ. ಆ ಸಂಶಯ ಗಟ್ಟಿಗೊಂಡ ದಿನವೇ ತಾನು ಸೋನಕ್ಕನ ಪರಲು ಹರಿದುಕೊಂಡು ಮೋಕಳೀಕನಾದೆ. ಇಂಥ ಕಲಂಕಿತಚರಿತನಿಗೆ ನಿಮ್ಮ ಮಗಳನ್ನು ಕೊಡುವ ವಿಷಯದಲ್ಲಿ ಸಾರಾಸಾರ ವಿಚಾರಮಾಡುವದು ಕ್ಷೇಮವೆಂದು ತಿಳಿಸಿದ್ದ.

ಕ್ಷುದ್ರ ಮಾನಸರಿಗೆ ಯಾತರ ದರಜೂ ಇರುವದಿಲ್ಲ. ತಮ್ಮ ಕೃತಿಯ ಅಂತ್ಯ ಪರಿಣಾಮ ಹೇಗಾದ-ಏನಾದ ಸುಖ-ದುಃಖವೂ ಅವರನ್ನು ಕಾಡಿಸುವದಿಲ್ಲ. ಆದರೆ ಅದರ ಕಿರುಕುಳ ಬಹಳ ಜನಕ್ಕೆ ಚಿಟುಕುಮುಳ್ಳಾಗಿ. ಪ್ರಾಣಘಾತಕ ಆಘಾತವಾಗಿ ಪರಿಣಮಿಸಬಹುದಾದ ಸಂಭವವೂ ಇರುತ್ತದೆ. ಶ್ಯಾಮರಾಯ ಈ ಕಾಗದ ಬರೆಯುವಾಗ ಏನು ಡಾವು ಹಾಕಿಕೊಂಡಿದ್ದನೋ ಯಾರು ಬಲ್ಲರು? ಇದರ ಗುಪಿತ ಶಂಕರಕಾಕಾನಿಗೆ-ಪಾರ್ವತೀಕಾಕೂನಿಗೆ ತಿಳಿಯುತ್ತದೆ. ಅದರ ಸತ್ಯಾಸತ್ಯತೆಯ ತನಿಖೆಗೆ ಪಂತಮಾಮಾ-ಬನೂಮಾಮೀ ಅವರ ಕಡೆಗೆ ಹೋಗುತ್ತದೆ. ಅವರು ಮಾತಾಡದೆ ಮುಖ ಕೆಳಗೆ ಮಾಡುತ್ತಾರೆ – ಸಾವಿರ ಕೆಂಜಗ ಏಕಕಾಲಕ್ಕೆ ಕಡಿದ ಸಂಕಟ ಅನುಭವಿಸುತ್ತಾರೆ. ಕದಾಚಿತ್ ತಮ್ಮ ದುಃಖವನ್ನು ರಾವಜೀಕಾಕಾ-ಸೋನಕ್ಕನ ಮುಂದೆ ತೋಡಿಕೊಳ್ಳುತ್ತಾರೆ. ಸೋನಕ್ಕ, ತನ್ನಿಂದ ತನ್ನ ಹಡೆದ ತಂದೆ-ತಾಯಿಗೆ. ಹೊಟ್ಟೆಯ ಕೂಸು ವಿಶ್ವಾಸನಿಗೆ, ಎಂಥ ಅಪಮಾನ, ಎಂಥ ಸಂಕಟ ಅನುಭವಿಸುವ ಪ್ರಸಂಗ ಬಂದಿತೆಂದು ತಳಮಳಿಸುತ್ತಾರೆ. ಆ ತಳಮಳದ ಕುದಿಯಲ್ಲಿ ಬೇಯುತ್ತಾರೆ. ಅವರ ಜೀವ-ಕುಸುಮ ಬಾಡುತ್ತದೆ. ಅದರಿಂದ ಕಾಕಾ ಆಸನ್ನಮರಣರಾಗುತ್ತಾರೆ......ಸಾಕಲ್ಲ! ಶ್ಯಾಮರಾಯನ ಉಡಿಯಲ್ಲಿ ಅವನು ಬಯಸಿದ ಫಲ ಬೀಳುತ್ತಿದೆ. ಅವರು ಪಡುವ ಸಂಕಟದಿಂದ, ಅವನ ಚಿತ್ತ ಹರುಷಿತವಾಗುತ್ತದೆ. ಅವನಿಗೆ ಸುಖದ ಗುದುಗುಲಿಕೆಯಾಗುತ್ತದೆ. ಕೇವಲ ಎರಡಾಣೆಯ ಅಂಚೆಯ ಪಾಕೀಟು ಈ ಕೆಲಸ ಬಗೆಹರಿಸುತ್ತದೆ. ಶ್ಯಾಮರಾಯನು

ಪಡುವ ಸ್ವರ್ಗೀಯ ಸುಖದ ಮೂಲ್ಯ – ಕೇವಲ ಎರಡಾಣೆ.

ಇದೇ ಹೀನಮಾನಸದಿಂದ ಇಂಥ ಕೆಲಸ ಮಾಡಿರುವ ಸಂಭವವಿತ್ತು.

ಆದರೆ ರಾವಜೀಕಾಕಾ......!

ಶ್ಯಾಮರಾಯನಿಗಿಂತಲೂ ಮುಂಚೆಯೇ ಹುಟ್ಟಿದವರು. ಇವನ ಅಡ್ಡ ಆರು – ಉದ್ದ ಎಂಟು ಗೆರೆಯ ಕತೆ-ಗತಿಯನ್ನು ಬಲ್ಲವರು. ಇವನು ದಿಗಂತದಲ್ಲಿ ಉಡ್ಡಾಣ ಮಾಡುವಾಗ. ಕಣ್ಣು ಮುಚ್ಚಿ ಇವನ ಪುಚ್ಛದ ಅಂಕಿ-ಸಂಖ್ಯೆಯನ್ನು ಅಚೂಕವಾಗಿ ಹೇಳಬಲ್ಲವರು. ಅವರು, ವಸೂ-ವಿಶ್ವಾಸರ ಸಖ್ಯ ಜೀವ-ಸಂಗಮ ದಲ್ಲಿ ಪರಿಣತಿ ಹೊಂದಲೆಂದೇ ಮೊದಲಾಗಿದೆಯೆಂದು ಅರಿತಿದ್ದರು. ಅದಕ್ಕೆ ತಮ್ಮ ಅಂತಃಕರಣದ ವಾತ್ಸಲ್ಯದ, ಆಶೀರ್ವಾದ-ಹಸ್ತವನ್ನು ಹಿಡಿದಿದ್ದರು. ಅವರ ಜೀವನ ಮಂಗಲ-ಮಿಲನದಲ್ಲಿ ಇರುವದನ್ನು ಕನಸಿಸಿಕೊಂಡಿದ್ದರು. ಅದರ ಕೂಡ...

ಶ್ಯಾಮರಾಯ. ಸೋನಕ್ಕನನ್ನು ತ್ಯಜಿಸಿದ ದಿನ – ವಿಶ್ವಾಸ-ಸೋನಕ್ಕರಿಗೆ ಹೀನ ಅಪವಾದ ಕೊಟ್ಟು ಬಿಟ್ಟ ದಿನ – ಮತ್ತೂ ಒಂದು ಭವಿಷ್ಯದ ವಿಷ-ಗಳಿಗೆ ಯನ್ನು ಕಲ್ಪಿಸಿಕೊಂಡಿದ್ದರು. ಪಂತರ ತಳಿಯದಲ್ಲದ ವಿಶ್ವಾಸನ ದುರ್ಬೀಜವನ್ನು ನಿರ್ನಾಮ ಮಾಡುವೆನೆಂದು ಶ್ಯಾಮರಾಯ ಸಾರಿದ ದಿನ ಅವರ ಕಲ್ಪನೆ ಇನ್ನೂ ಧೃಡವಾಯಿತು. ಶ್ಯಾಮರಾಯ-ಪಂತಮಾಮಾ ಅವರ ವ್ಯವಹಾರವನ್ನು ಮುಗಿ ಸುವ ಸಮಯದಲ್ಲಿ ಶಂಕರಕಾಕಾನೂ ಮಧ್ಯಸ್ಥರಾಗಿದ್ದರು. ಅಂದು ಅವರಿಗೆ ಈ ವ್ಯವಹಾರದ ಗುಪಿತವಷ್ಟೇ ಅವಗತವಾಗದೆ, ಅದರ ಹಿಂದಿನ ಶ್ಯಾಮರಾಯನ ಭಾನಗಡಿಯೂ ವಿದಿತವಾಗಿತ್ತು. ರಾವಜೀಕಾಕಾ, ಮುತ್ಸದ್ದಿ. ವಿಶ್ವಾಸ-ವಸೂರ ಭವಿಷ್ಯ-ಜೀವನ ಮಂಗಲಮಯವಾಗಲಿ ಎಂದು, ಅಂದೇ, ಶಂಕರಕಾಕಾ ಅವರಿಗೆ ಸಾದ್ಯಂತ ಹಕೀಕತ್ತು ವಿವರಿಸಿದರು. ಅದನ್ನು ಕೇಳಿದ ಶಂಕರಕಾಕಾ ಒಂದೇ ಒಂದು ಮಾತಿನಿಂದ, ಕಾಕಾ ಅವರ ವಿಶ್ವಾಸ ಸಂಪಾದನೆಯನ್ನು ಮಾಡಿ, ವಿಶ್ವಾಸ-ವಸೂರ ಭವಿಷ್ಯ-ಜೀವನದ ದಾರಿಗೆ ಶುಭದ, ಮಂಗಳದ ಹಡದಿಯನ್ನು ಹಾಸಿದ್ದರು.

"ಕಾಕಾ, ನನ್ನ ವಸೂಗ, ಯಾರರs ಇಂಥಾ ಆರೋಪ ಮಾಡಿದರ, ಅದನ್ನ ನಾ ನಂಬೂದು ಸಾಧ್ಯ ಅದs ಏನು?"

ರಾವಜೀಕಾಕಾ ನಿಶ್ಚಿಂತರಾಗಿದ್ದರು. ಶಂಕರಕಾಕಾ ಅವರೂ ನಿಶ್ಚಿಂತರಾಗಿಯೆ ಇದ್ದರು.

ಆದರೆ ತೀರಾ ಅನಿಶ್ಚಿಂತವಾಗಿತ್ತು ವಿಧಿ! ವಿಕೃತರೂಪದಲ್ಲಿ ಕಾಣಿಸಿಕೊಳ್ಳಲು

ಫಡಪಡಿಸುತ್ತಿತ್ತು. ಸುತಾಣದ ತಪಾಸಿನಲ್ಲಿತ್ತು. ಅದರ ಶೋಧಕ-ದೃಷ್ಟಿಗೆ ಅಚೂಕವಾಗಿ ಶ್ಯಾಮರಾಯ ಕಾಣಿಸಿದ. ತನ್ನ ಕಾರ್ಯಸಾಧನೆಗೆ ಅದು ಶ್ಯಾಮರಾಯನಲ್ಲಿ ಪರಕಾಯಪ್ರವೇಶ ಮಾಡಿತು.

ನಾಯಕ ವಕೀಲರಲ್ಲಿ ನಾಕೆಂಟು ತಿಂಗಳ ಕೆಳಗೆ ಅವರ ಮೊಮ್ಮಕ್ಕಳ ಮುಂಜಿವೆಯಾಯಿತು. ಗೋವಿಂದಭಟ್ಟ ಪುರೋಹಿತನೆಂಬ ಅಧಿಕಾರದಿಂದ, ರಾಚಪ್ಪ, ಗೌಡರು ನಾಯಕ ವಕೀಲರ ಭಾರೀ ಅಶೀಲುಗಳೆಂಬ ನಾತೆಯಿಂದ ಮುಂಜಿವೆಗೆ ಮುನ್ನ ಎರಡು-ಮೂರು ದಿನ ಮೊದಲೇ ಬಂದು, ಮುಂಜಿವೆ ಮುಗಿದ ಮೇಲೆ ಎರಡು ದಿನ ನಿಂತು ಹೋಗಿದ್ದರು. ನಾಯಕ ವಕೀಲರದು, ರಾವಜೀಕಾಕಾ ಅವರದು ಐವತ್ತು ವರುಷದಿಂದ ನಡೆದು ಬಂದ ಋಣಾನುಬಂಧ. ಶ್ಯಾಮರಾಯ ಅವರಿಗೆ ಹೊರಗಿನವನಲ್ಲ. ಅವನ, ಕಾಕಾ ಅವರ ಸಂಬಂಧ ಬಿಘಡಾಯಿಸಿದ ಹಕೀಕತ್ತು, ನಾಯಕ ವಕೀಲರಿಗೆ ವಿದಿತವಿದ್ದೂ, ಅವರು ಗೃಹಸ್ಥಿಕೆಯ ಲಕ್ಷಣವೆಂದು, ಶ್ಯಾಮರಾಯನಿಗೆ ಆಗ್ರಹದ ಔತಣ ಕೊಟ್ಟಿದ್ದರು. ಅವನನ್ನು ಸಮಕ್ಷಮ ಕಂಡು, ಅಕ್ಷತೆ-ಊಟಕ್ಕೆ ಆಮಂತ್ರಣ ಕೊಟ್ಟುದಲ್ಲದೆ, ಎರಡು ದಿನ ತಮ್ಮಲ್ಲಿಯೇ ಇರಬೇಕಾಗಿ ವಿನಂತಿಸಿದ್ದರು. ಶ್ಯಾಮರಾಯನೂ ಅವರ ವಿನಂತಿಯನ್ನು ಮನ್ನಿಸಿ ಅಕ್ಷತೆ-ಊಟಕ್ಕೆ ಬಂದ. ಎರಡು ದಿನ ನಿಲ್ಲದಿದ್ದರೂ ಒಂದೊಪ್ಪತ್ತು ಅವರಲ್ಲಿಯೇ ಇದ್ದ. ಇಲ್ಲಿಯ ವರೆಗೆ ಎಲ್ಲಾ ಆಲ್‌ಬೇಲ್ ಆಯಿತು. ಏತರಲ್ಲಿಯೂ ಯಾರಿಗೂ ಹೈಗೈ ಆಗಲಿಲ್ಲ.

ಮುಂಜಿವೆಗೆ ನಾಯಕ ವಕೀಲರ ಸೊಸೆಯಂದಿರ ತಂದೆ-ತಾಯಿ, ಬಂಧು-ಬಳಗ ಬರುವದು ಸಹಜ. ಅವರೂ ಬಹಳ ದೂರಿನಿಂದ – ಹೈದ್ರಾಬಾದ, ಸೋಲಾ-ಪೂರ, ಸಾತಾರಾಗಳ ಕಡೆಯಿಂದ ಬಂದಿದ್ದರು. ಗುರುತು-ಪರಿಚಯವನ್ನು ನಾಯಕ ವಕೀಲರು ಮಾಡಿಕೊಟ್ಟರು. ಶ್ಯಾಮರಾಯನ ಇಬ್ಬರು ಚಿರಂಜೀವರು ಭಾರೀ ವರಗಳೆಂದು ವರ್ಣಿಸಿದರು. ರಾವಜೀಕಾಕಾನ ಕುಬೇರ ವಿಭವ, ಶ್ಯಾಮರಾಯನ ಮಹಾ ಗಳಿಕೆಯನ್ನು ಮನಸಾ ಹೊಗಳಿದರು. ಕನ್ಯಾಪಿತೃಗಳಾದ ಅವರ ಬೀಗರಲ್ಲಿ ಆಶೆಯ ಕಿರಣ ಮೂಡಿತು. ಕನ್ಯೆಯರೂ ಮುಂಜಿವೆಗೆ ಬಂದಿದ್ದರು. ಸಲಕ್ಷಣರಾಗಿದ್ದರು. ಬೀಗರೂ ಸುಸಂಪನ್ನರು. ಶ್ಯಾಮರಾಯ ಪ್ರತಿಷ್ಠೆಗೆ ಬಿದ್ದು, ಅಥವಾ ಶಕೂ-ಸುರೇಶರ ಸಂಬಂಧ ಕೆಡಿಸಬೇಕೆಂದು – ಏನೋ ವಿಚಾರಮಾಡಿ, ನಾಯಕ ವಕೀಲರ ಬೀಗರಿಗೆ ಭರವಸೆ ಮಾತು ಕೊಟ್ಟ. ಬೀಗಮಂಡಳಿಯಲ್ಲಿಯ ಗಂಡಸರು

ಶ್ಯಾಮರಾಯರ ಅನುನಯ ಮಾಡಿದಂತೆ, ಅವರ ಶ್ರೀಮತಿಯರು. ನಾಯಕ ವಕೀಲರ ಮನೆಯ ಪುರೋಹಿತ ಗೋವಿಂದಭಟ್ಟನನ್ನು ರಂಬಿಸತೊಡಗಿದರು: ಹುಡುಗರ ತಂದೆ ಭರವಸೆಯ ಮಾತು ಕೊಟ್ಟಿದ್ದಾರೆ – ನಿಮಗೆ ಉಳಿದ ಜವಾಬು ದಾರಿ ಪತ್ತಿತು – ಎಂದು ಅವರು ಗೋವಿಂದಭಟ್ಟನನ್ನು ಅಟ್ಟಕ್ಕೇರಿಸತೊಡಗಿದರು. ಗೋವಿಂದಭಟ್ಟ ಥರ್ಡರೇಟ ವೈದಿಕಬ್ರಾಹ್ಮಣ, ಸಾದಾ-ಸೀದಾ ಪುರೋಹಿತ. ಕೈತುಂಬ ದಕ್ಷಿಣೆ ಕೊಟ್ಟರೆ ತಮ್ಮ ದಾರಿಯನ್ನು ಸುಗಮ ಮಾಡಬಲ್ಲನೆಂದು ಪಾಪ, ಅವರು ಭಾವಿಸಿದ್ದರು. ರಾವಜೀಕಾಕಾ-ಪಂತಮಾಮಾ ಅವರನ್ನು ಬದಿಗೊತ್ತಿ ಭರವಸೆಯ ಮಾತು ಕೊಡಲು ಶ್ಯಾಮರಾಯನಿಗೆ ಅಧಿಕಾರವೇ ಇಲ್ಲವೆಂದು, ಸ್ವಾಮಿನಿಷ್ಠೆ ಜಾಗೃತವಾದ ಗೋವಿಂದಭಟ್ಟ, ಮೊದಲೇ ಖವಳಾಯಿಸಿದ್ದ. ಹಲ್ಲು ಕಡಿದಿದ್ದ. ದವಡೆ ಕಚ್ಚಿದ್ದ. ತೀರಾ ಉತಾವಿಳನಾಗಿ —

"ಶ್ಯಾಮರಾಯನ ಕೈಯಾಗ ಏನ ಭಗರಿ ಆದs ಅಂತ ಮಾಡೀರಿ? ಅಂವಾ ನಾಮಕೇ ವಾಸ್ತೇ ತಂದಿ ಏನ್ರ್ಯಾವಾ? ನಿಮಗ ಸಂಬಂಧನs ಮಾಡೂದಿದ್ದರ ಥೇಟ ಪುಣೇದ ತಿಕೀಟ ತಗಸರಿ. ರಾವಜೀಕಾಕಾನ್ನ ಗಾಠಾಸರಿ. ಪ್ರಯತ್ನಾಂತೇ ಪರಮೇಶ್ವರಃ. ಯೋಗ ಇತ್ತs ಸಾಧಸ್ತದ. ಈ ಶ್ಯಾಮರಾಯನ ನಾದಕ್ಕ ಬೀಳಬ್ಯಾಡ್ರೀ." ಎಂದು ಹೇಳಿ, ಶ್ಯಾಮರಾಯನ ಭಾನಗಡಿಯ ಘಟಾರದ ಒಂದು ಕಲ್ಲು ಸರಿಸಿ ನಾತವೆಬ್ಬಿಸಿದ್ದ. ಪುಣ್ಯಕ್ಕೆ ಹೆಣ್ಣುಮಕ್ಕಳಿಗೆ ಗೋವಿಂದಭಟ್ಟನ ಭಗರಿಯ ಅರ್ಥವಾಗಲಿಲ್ಲ. ಉಳಿದದ್ದು ಸಂಶಯ-ಕಿಲಾಪ, ಚಿಕಿತ್ಸೆಯ ಗಾಳಿ-ಧೂಳು ಎಬ್ಬಿಸಿತು. ಗೋವಿಂದಭಟ್ಟ ಅನ್ಯಥಾ ಭಾವನೆಯನ್ನಿಟ್ಟುಕೊಂಡು ಈ ರೀತಿ ಮಾತಾಡಿದನೆಂದು ನಾಯಕ ವಕೀಲರು ಭಾವಿಸಲಿಲ್ಲ. ಅವನ ಸ್ವಭಾವ ಅವರಿಗೆ ಚಿರಪರಿಚಿತವಾಗಿತ್ತು. ಸುತ್ತಿ ಸುತ್ತಿ ಹೇಳಿ ಅವರು ಬೀಗರನ್ನ ಸಮಾಧಾನಪಡಿಸಲು ಯತ್ನಿಸಿದರು. ಶ್ಯಾಮರಾಯನಿಗೂ ನಡೆದ ಹಕೀಕತ್ತು ವಿವರಿಸಿ – ಇಲ್ಲಿಯ ವರೆಗೂ ಆದದ್ದು ಆಗಿಹೋಯಿತು – ಕುಟುಂಬ-ಕ್ಷೇಮದ ದೃಷ್ಟಿಯಿಂದ, ಹಿಂದಿನದನ್ನು ಮರೆತು ಸೋನಕ್ಕನ ಒಗೆತನ ಹೊಂದಿಸಿಕೊಳ್ಳಲು ಆರ್ಜವತೆಯಿಂದ ಬಿನ್ನವಿಸಿದರು. ಅವರ ಅನುನಯದಿಂದ ಮೆತ್ತಗಾಗುವದರ ಬದಲಿಗೆ ಶ್ಯಾಮರಾಯ ಪ್ರತಿಯಾಗಿ ವಿಪರೀತ ಕೆರಳಿ, ಕಾಕಾ ಅವರನ್ನು ಏರಿಗಟ್ಟಿಕೊಂಡು, ತನ್ನ ಪ್ರತಿಷ್ಠೆಗೆ ಕುಂದು ತರುವಂತೆ ಗೋವಿಂದಭಟ್ಟ ಮಾತಾಡಿದ; ಅದರಿಂದ ತನ್ನ ಪ್ರತಿಷ್ಠೆಯನ್ನೇ ಪಣಕ್ಕೊಡ್ಡುತ್ತೇನೆ – ಪಿಶ್ಯಾ-ಸುರ್ಯಾರ ನಿಶ್ಚಿತವಾದಂತಿದ್ದ ಸಂಬಂಧಗಳನ್ನೇ ಬುಡ

ಮೂಲ ಕಿತ್ತೆಸೆಯುತ್ತೇನೆ ಎಂದು ಪಣ ಪುಕಾರಿಸಿ ಹೊರಬಿದ್ದ. ಆ ಪಣದ ಪ್ರಥಮ ಸಲಾಮೀಯೆಂದು ಶಂಕರಕಾಕಾ ಅವರಿಗೆ ಸ್ವದಸ್ತೂರ ಖುದ್ದ ಕಾಗದ ಬರೆದಿದ್ದ. ಅವನ ಕಾಗದ ಮುಟ್ಟುವ ಮೊದಲೇ, ನಾಯಕ ವಕೀಲರ ಬೀಗರು, ಈ ಬಾತ ಮಿಯ ಅದರ ಸತ್ಯಾಸತ್ಯತೆಯ ತನಿಖೆಗೆಂದು ಸಾಂಗಲಿಯ ಪಂತಮಾಮಾನ ಗೆಳೆಯರ ಬಳಗದಲ್ಲಿ ವಿಚಾರಿಸಿದ್ದರು.

ತೀರ ಅಪರಿಚಿತ ಗುಪಿತ, ಜನಜನಿತವಾಯಿತು. ಪಂತಮಾಮಾ-ಬಸೂ ಮಾಮೀ ಅವರಿಗೆ ಊರಲ್ಲಿ ಮುಖವಿಲ್ಲದಂತಾಯಿತು. ವಸೂನ ಗೆಳತಿಯರಲ್ಲಿ ಮುಸಿನಗೆ, ನಸು ಮೂಗುಮುರಿತ ಮೊದಲಾದವು. ವಸೂ ತನ್ನ ನಿರ್ಧಾರವನ್ನು ಶಂಕರಕಾಕಾ ಅವರಿಗೆ ತಿಳಿಸಿದಳು. "ವಸೂನ ನಿರ್ಧಾರನs ಇದ್ದರ ನಿಂತ ಕಾಲ ಮ್ಯಾಲ, ನಿಶ್ಚಯಾ ಹಾಕರಿ" ಪಾರ್ವತೀಕಾಕೂ ಸೂಚಿಸಿದರು. ಅದೇ ಅಂತಿಮ ಪರಿಣಾಮಕಾರೀ ಉಪಾಯವೆಂದು ಪಂತಮಾಮಾ ನಿಶ್ಚಯಿಸಿ, ಶಂಕರಕಾಕಾ, ವಸೂನನ್ನು ಮುಂಬೈಗೆ ಕರೆದುಕೊಂಡು ಬಂದು "ನಿಶ್ಚಯ"ದ ಮಾತು ಮುಗಿಸಿ ಕೊಂಡಿದ್ದರು.

ಬೆಳಗಾಂವಿಯಲ್ಲಿ ಭಾನಗಡಿ ಮಾಡಿದ ಗೋವಿಂದಭಟ್ಟ, ಸುಮ್ಮನೇ ಕೂಡದೆ, ಸಾಂಗಲಿಗೆ ಪ್ರಯಾಣಿಸಿ, ಶ್ಯಾಮರಾಯನನ್ನು ಮಣಿಸುವ ಏಕಮೇವ ಉಪಾಯವೆಂದರೆ, ವಸೂ-ವಿಶ್ವಾಸರ ನಿಶ್ಚಯವೆಂದು, ಪಂತಮಾಮಾ-ಶಂಕರ ಕಾಕಾ ಅವರಿಗೆ ಗಂಟುಬಿದ್ದು ಅವರನ್ನು ಮುಂಬೈಗೆ ಕಳಿಸಿದ ಮೇಲೆಯೇ ತಾನು ಊರಿಗೆ ಹೊರಟಿದ್ದನಂತೆ.

ಎಸ್.ಈ. ಅವರ ಕೂಡ, ನಾನು ರತ್ನಾಗಿರಿ-ವಿಜಾಪೂರ ಡಿವ್ಹಿಜನ್ನುಗಳ 'ಇನ್‌ಸ್ಪೆಕ್ಶನ್ ಟೂರ್' ಮೇಲೆ ಇದ್ದೆ. ಹತ್ತು ಹನ್ನೆರಡು ದಿನ ಬೆಳಗಾಂವಿಯಲ್ಲಿ ಇರಲಿಲ್ಲ. ಅದರಿಂದ ಈ ಯಾವ ಬಾತಮಿಯೂ ನನಗೆ ಅವಗತವಿರಲಿಲ್ಲ. ಗೋವಿಂದಭಟ್ಟ ಒಂದು ಚಕಾರ ಶಬ್ದವನ್ನೂ ಯಾರ ಮುಂದೆಯೂ ಒಡೆದಿರ ಲಿಲ್ಲ. ರಾಜಪ್ಪನಿಗೂ ಗೊತ್ತಿರುವ ಸಂಭವವಿತ್ತು. ಅವನೂ ಈ ಬಗ್ಗೆ ಏನೂ ಹೇಳಿರಲಿಲ್ಲ. ಪಂತಮಾಮಾ ಅವರಿಂದ ಈ ಸುದ್ದಿ ವಿಶ್ವಾಸನಿಗೆ ತಿಳಿದಿತ್ತು. ಅವನು ಹೇಳಿದ ಮೇಲೆ ಈಗ ನನಗೆ ಗೊತ್ತಾಯಿತು. ಗೋವಿಂದಭಟ್ಟ ಶ್ಯಾಮರಾಯನ ಡಾವಿಗೆ ನೀರು ಹಚ್ಚಿ ಗೆದ್ದಿದ್ದ.

ಇದೆಲ್ಲವನ್ನೂ ಸಾದ್ಯಂತವಾಗಿ ವಿವರಿಸಿ ವಿಶ್ವಾಸ —

"ದಾವಲ್ಯಾ, ಒಂದ ಮಾತಿನ ದಶಿಂದ ನನಗ ಭಾರೀ ಸಮಾಧಾನ ಆನಸೇದ. ಶಂಕರಕಾಕಾನ ಮನಸಿನ್ಯಾಗ ಇಲ್ಲದ ಶಂಕಾ ಉಳೀಲಿಲ್ಲಾ. ರಾವಜೀಕಾಕಾ ಭಾಳ ಮುತ್ಸದ್ದಿತನದಿಂದ ಈ ಮಾತಿನ ಉಲಗಡಾ ಮಾಡಿ, ನಮ್ಮ ಹಾದೀ ಸುಗಮ ಮಾಡಿದ್ದರು. ತಮ್ಮ ಮಗಳು ಒಬ್ಬ ಕಲಂಕಿತ ವ್ಯಕ್ತೀ ಕೈಹಿಡಿದಳು ಅನೂ ಸಂಕಟಾ. ತಳಮಳಾ ಅವರಿಗೆ ಉಳೀಲಿಲ್ಲಾ. ಪಂತಮಾಮಾ-ಬನೂಮಾಮೀ ಅವರದೂ ಸಂಕಟ ಕಡೀಬೇಕು, ಅವರಿಗೆ ನಾಕ ಮಂದ್ಯಾಗ ಮಾರಿ ಉಳೀಬೇಕು ಅಂತ್ಸ. ಶಂಕರಕಾಕಾನ್ಸ ಈ ವಿಷಯದಾಗ ಅಧ್ವರ್ಯು ಆಗಿ ನಿಂತರು. ವಸೂನ ನಿರ್ಧಾರಾ. ಆಕೀ ಅಂತಿಮ ನಿರ್ಣಯಾ ಅವರ್ನ ಮುಂದ ನುಗಿಸಿತು. ಅಂತೂ ದಾವಲ್ಯಾ. ನಂದೂ-ವಸೂಂದು 'ಪ್ರಾಬ್ಲೆಮ್' ಬಿಟ್ಟಿತು. ಶಕೂನ ತಂದಿಗೂ ಇಂಥಾ 'ಅಂಡರ್ ಸ್ಟ್ಯಾಂಡಿಂಗ್' ಬರಬೇಕು. ಅವರಿಗೂ ದಾದಾನ ಡಾವ ತಿಳೀಬೇಕು. ಅವರೂ ದಾದಾನ ಹೀನತನಾ ಅಲಕ್ಷ್ಯಮಾಡಿ. ಸಂಬಂಧಕ್ಕ ತಯಾರಾಗಬೇಕು. ನಾಯಕರ ಬೀಗರು, 'ಪ್ರ್ಯಾಕ್ಟಿಕಲ್' ಆಗಿ ಕಾಕಾಗ ಭೆಟ್ಯಾದ ಸುದ್ದಿ ಇಲ್ಲಾ. ಕಾಕಾ ಯಾರ ಮುಂದೂ ಇದರ ಸಂಬಂಧೀ ಮಾತಾಡೂ ಜಾತೀನೂ ಅಲ್ಲಾ. ತಮಗ ಆದ ಸಂಕಟಾ, ದುಃಖಾ ತಾಂವ್ಸ ನುಂಗಿ ಶಾಂತ ಇರತಾರ. ಪಂತಮಾಮಾ-ಶಂಕರಕಾಕಾ, ಪುಣೇಕ್ಕ ಇಳದೇ ಸಾಂಗಲಿಗೆ ಹೋದರು. ಅವರು ಕಾಕಾ ಅವರಿಗೆ ಈ ಸುದ್ದೀ ಸಂಬಂಧೀ ಹೇಳದೇ ಇರೂದಿಲ್ಲಾ. ಕಾಕಾ, ತಾಯೀ, ಸುರ್‍ಯಾ ಮೂರು ಮಂದಿ ಪತ್ರಾ ಬರದಾರ. ಆದರ ಇದರ ದಶಿಂದ ಏನೂ ಬರದಿಲ್ಲಾ ಅನ್ನೂ ಅರ್ಥದಿಂದ, ಕಾಕಾ, ಅವರಿಗೆ ಏನೂ ಹೇಳಿಲ್ಲ ಅನ್ನೂದು ನಿಶ್ಚಿತ ಅದ್ಸ. ದಾವಲ್ಯಾ, ನಿಮ್ಮ ಸಾಹೇಬರಿಗೆ ಸುರ್‍ಯಾನ್ನ ದಶಿಂದ ಗಡಿಬಿಡಿ ಹತ್ತಿರಬೇಕು. ವರ್ಷ ಆಗತ ಬಂತು, ಅಂವಗ ಲಗ್ನಬಲಾ ಇಲ್ಲಂತ ತಿಳಿಸಿದ ಮಾತಿಗೆ. ಇನ್ನ ಅವರೂ ಅವಸರ ಮಾಡ ಪರೇ. ದಾದಾನ್ನ ಗಾಠಾಯಿಸಿದ್ದರೂ ಗಾಠಾಯಿಸಿರಬೇಕು. ನೀ ಇಕಡೆ ಬಂದಿ. ಅಲ್ಲೀ ಸುದ್ದಿ ತಿಳಿಯೂ ಆಶಾ ಉಳೀಲಿಲ್ಲಾ."

"ಆ ಬಂದೋಬಸ್ತ ಮಾಡೀನಿ ಏಶ್ಯಾ. ಸಾಹೇಬರ ಬಂಗಲೇದಿಂದ, ದಾದಾಗ ನೀರ ಹಚ್ಚಿಸೀನಿ. ಶಕೂನ ವಿಷಯದಾಗ. ಕಾಕಾ ಅವರದೇ 'ಫೈನಲ್ ವರ್ಡ್' ಅನೂದನ್ನ ಒತ್ತಿ ಹೇಳೀನಿ. ಸಾಹೇಬರು-ರಂಗಕ್ಕಾ. ಈ ವಿಷಯದಾಗ ಮನ ಘರಣೀ ಮಾಡೂದಿಲ್ಲಾ. ಅವರ ದಶಿಂದ ಅಗದೀ ನಿರ್ಧಾಸ್ತ ಇರು."

"ಅದೂ ಅಲ್ಲ ದಾವಲ್ಯಾ ನಾ ಅನ್ನೂದು. ಅವರು ದಾದಾನ್ನ ಕೇಳೂದು

ಬಿಡೂದು, ಒತ್ತಟ್ಟಿಗಿರಲಿ. ನಾವು ಅವರಿಗೆ ಇದ್ದ 'ಫ್ಯಾಕ್ಟ್ಸ' ಹೇಳಬೇಕು. ದಾದಾ ಮಾಡಿದ ಆರೋಪದ್ದು ಸಪಶೇಲ ಇನ್‌ಕಾರ ಸಾಹೇಬರಿಂದ ಆಗಬೇಕು. ಈ ಆರೋಪಾ, ದಾದಾ, ವಿಶ್ಯಾಗ, ಸೋನಕ್ಕಗ ಮಾಡಿದ್ದು – ಸುರೇಶಗ ಸಂಬಂಧಿಸಿದ್ದಲ್ಲಾ. ವಿಶ್ವಾಸ ದತ್ತಕನs ಹೋಗ್ಯಾನ. ಸೋನಕ್ಕನ ಸಂಬಂಧನs ಕಡದದ, ತಮ್ಮ ಮಗಳಿಗೆ, ತಮ್ಮ ಅಳ್ಯಾಗ ಇದರ ಲೇಪನs ಇಲ್ಲಾ ಅನೂ ಬೇಫಿಕೀರತನದಿಂದ ಅವರು ಈ ಸಂಬಂಧಕ್ಕ ತಯಾರ ಆದರೂ, ನಮ್ಮ 'ಪ್ರಾಬ್ಲೆಮ್' ಬಿಡೂದಿಲ್ಲಾ. ಸುರ್ಯಾನೂ ಇದಕ್ಕ ಒಪ್ಪೂದಿಲ್ಲಾ. ಇಂವಾ ಇಲ್ಲಾ, ಇನ್ನೊಬ್ಬಾ ಅಂತs, ಸಾಹೇಬರು ಬ್ಯಾರೇ ಕಡೇ ಧಾವಸಬಹುದು. ಅದರಿಂದ ಶಕೂ-ಸುರ್ಯಾ ಇಬ್ಬರೂ ಸುಖೀ ಆಗೂದಿಲ್ಲಾ. ಇಬ್ಬರದೂ ಭಾರೀ ಘಟ್ಟೀ ಜಮಾಸೇದ. ನಂದೂ-ವಸೂಂದು ಯಾವ ಸ್ಟೇಜಕ್ಕ ಬಂದ ನಿಂತಿತ್ತು ಅಲ್ಲಿಗೆ ಈಗ ಬಂದ ನಿಂತದ. ಇದರಾಗ 'ಫೈನಲ್ ಡಿಸಿಶೆನ್' ಶಕೂ ತಗೋಬೇಕಾಗತದ; ನನಗ ಸುರ್ಯಾನ್ನ ಅಗತ್ಯ ಅದ ನಿಮ್ಮದಲ್ಲಾ ಅನಬೇಕಾಗತದ. ಅದರಿಂದ 'ಪ್ರಾಬ್ಲೆಮ್' ಬಿಟ್ಟೇತು. ಆದರೆ ಅದರ 'ರಿಪರ್ಕಶನ್ಸ್' ರಂಗಕ್ಕಾ-ಸಾಹೇಬರ ಮ್ಯಾಲ ಆಗದs ಉಳಿಯೂದಿಲ್ಲಾ. ತಾಯೀಗೆ, ನನಗ ಬಂದ 'ಬ್ಲೊಟ್' ಅಳಸೂದಿಲ್ಲಾ."

ಶ್ಯಾಮರಾಯ ನಾಲಾಯಖತನದಿಂದ ಸೋನಕ್ಕನಿಗೆ ಅಪವಾದವನ್ನು ಕೊಟ್ಟಿದ್ದ. ಅದರಲ್ಲಿ ಅನ್ಯಾಯವಾಗಿ ಸಾಹೇಬರ ಹೆಸರು ಬದನಾಮಿಯಾಗುವಂತೆಯೂ ಮಾಡಿದ್ದ. ಅವನು ನಾಲಾಯಖನಿರುವನೆಂದು ಸಿದ್ಧಪಡಿಸಲಿಕ್ಕೆ ನನ್ನಲ್ಲಿ ಸಾಕ್ಷಿ ಪುರಾವೆಯ ಸಾಠಾ ಇತ್ತು. ಬಸವಂತಿ ಜೀವಂತ ಸಾಕ್ಷಿಯಾಗಿದ್ದಳು. ಅವನು ತನ್ನ ಮಿತ್ರರಿಗೆ, ಸಾಹೇಬರ ಬಗ್ಗೆ ಬರೆದ ಲಿಖಿತ ಸಾಕ್ಷ್ಯವಿತ್ತು. ಅವನು ನರಮಾಗಲಿಕ್ಕೆ ಇಷ್ಟು ಸಾಧನ-ಸಾಮುಗ್ರಿ ಸಾಕಾಗಿದ್ದವು. ಆದರೆ ಅವನ ನಾಲಾಯಖಿಯನ್ನು ಜಗಜ್ಜಾಹೀರು ಮಾಡುವದರಲ್ಲಿ ಅರ್ಥವಿರಲಿಲ್ಲ. ಭಾರೀ ಅನರ್ಥವೇ ಇತ್ತು. ಅದನ್ನು ಜಾಹೀರು ಮಾಡಿದ್ದರೆ, ಅದರ ಶಕ ಎಲ್ಲರಿಗೂ ಬಡಿಯುತ್ತಿತ್ತು. ಅದು ಯಾರಿಗೂ ಬಡಿಯಬಾರದು. ಶ್ಯಾಮರಾಯನಿಗೂ ಬಡಿಯಬಾರದೆಂದು ನನ್ನ ಯತ್ನ ನಡೆದಿತ್ತು.

ಶ್ಯಾಮರಾಯ ನೀಚನಿದ್ದ. ನಾಲಾಯಖನಿದ್ದ. ನಿಜ. ಆದರೆ ಅವನು ವಿಶ್ವಾಸನ ತಂದೆಯಾಗಿದ್ದ. ರಾವಜೀಕಾಕಾ ಅವರ ಮಗನಾಗಿದ್ದ. ಪಂತ-ತಳಿಯವನಾಗಿದ್ದ. ಒಂದೇ ಸವತಿಯ ಬಳ್ಳಿಗೆ, ಸೀಕಾಯಿ ಬಿಡುವಂತೆ, ಕಹಿ ಖಡಗಾಯಿಯೂ ಬಿಡು

ತ್ತಾವೆ. ಆ ಖಡಗಾಯಿ ಮನುಷ್ಯನ ಆಹಾರವಾಗದಿದ್ದರೂ, ದನ-ಕರ ತಿನ್ನುತ್ತಾವೆ. ಅದನ್ನು ಕಿತ್ತಿ ಬಿಸಾಡುವದಿಲ್ಲ. ಶ್ಯಾಮರಾಯ ಪಂತರ ಮನೆತನಕ್ಕೆ ಖಡಗಾಯಿ ಯಂತೆ ಬಂದನೆಂದು ಅವನನ್ನು ಕಿತ್ತಿ ಎಸೆದಿದ್ದರೆ ಹಾನಿ ಇರಲಿಲ್ಲ. ಆದರೆ ಅದರಿಂದ ಸೋನಕ್ಕನಿಗೂ ಸುಖವಾಗುತ್ತಿರಲಿಲ್ಲ. ಬಸವಂತಿಗೂ ಸುಖವಾಗುತ್ತಿರಲಿಲ್ಲ.

ನಮ್ಮ ಧಡಪಡ ಸರ್ವರ ಕಲ್ಯಾಣದ ಸಲುವಾಗಿ ನಡೆದಿತ್ತು. ಎಲ್ಲರ ಮಂಗಲದ ಸಲುವಾಗಿ ನಡೆದಿತ್ತು – ಎನ್ನುವದಕ್ಕಿಂತ, ಕೇವಲ ಶ್ಯಾಮರಾಯನ ಕ್ಷೇಮದ ಸಲುವಾಗಿ ನಡೆದಿತ್ತೆಂದರೂ ಅಡ್ಡಿಯಿಲ್ಲ. ಅವನೇ ಎಲ್ಲದಕ್ಕೂ ಬಾಟ ಲೀಕಾ ಬೂಚ ಆಗಿ ಕೂತಿದ್ದ. ಅವನು ಸರಳಾದರೆ – ಎಲ್ಲವೂ ಸುರಳೀತವಾದಂತೆ. ಎಲ್ಲರೂ ಸಂಕಟಮುಕ್ತರಾದಂತೆ. ಅವನ ಬಗ್ಗೆ ಅನುಕಂಪವೆನಿಸುತ್ತಿತ್ತು. ಅವನು ಸೋನಕ್ಕನ ಯಜಮಾನನಾಗಿ, ವಿಶ್ವಾಸ-ಸುರೇಶ ಅವರ ತಂದೆಯಾಗಿ, ರಾವಜೀ ಕಾಕಾ ಅವರ ಮಗನಾಗಿ, ವಾಡೆಯ ಅಧಿಕೃತ ಬಾಧ್ಯಸ್ಥನಾಗಿ ಬದುಕಲಿ, ಬಾಳಲಿ ಎನ್ನುವ ಹುಚ್ಚು ಹವ್ಯಾಸ ನನಗೆ ತೊಡಗಿತ್ತು.

ನಾನು ಇದುವರೆಗೂ ಮಾಡಿದ ಡಾವಿನಲ್ಲಿ, ಶ್ಯಾಮರಾಯನಲ್ಲಿಯ ರಾವಣ ದುರ್ಯೋಧನ ಕುಶಕ್ತಿಯನ್ನು ಜೇರಿಗೆ ತರಿಸುವ, ಹಣ್ಣುಮಾಡುವ ಹವಣಿತ್ತು. ವಿಶ್ವಾಸನ ತಂದೆ, ಸೋನಕ್ಕನ ಯಜಮಾನ, ಶ್ಯಾಮರಾಯನನ್ನು ಸಮೂಲ ನಿರ್ನಾಮಗೊಳಿಸುವ ಹಂಚಿಕೆ ಇರಲಿಲ್ಲ.

ಅದು ಯಾರಿಗೂ ಬೇಕಾಗಿರಲಿಲ್ಲ.

ಆ ದಾರಿಯಲ್ಲಿ ನಡೆದು ನಾನು ಸಾಮೋಪಚಾರದ ಪ್ರಯೋಗ ಮಾಡಿ ನೋಡಿದ್ದೆ. ಶ್ಯಾಮರಾಯ ಹಣಿದಿರಲಿಲ್ಲ. ಭೇದಪ್ರಯೋಗದಲ್ಲಿ ಯಶ ಸಂಪಾದಿಸಿ ಬಸವಂತಿಯನ್ನು ಒಡೆದುಕೊಂಡಿದ್ದೆ. ಶ್ಯಾಮರಾಯನನ್ನು ನಿರ್ಲಕ್ಷಿಸುವಂತೆ ರಂಗಕ್ಕ ನವರನ್ನು ತಿದ್ದಿ ತೀಡಿದ್ದೆ. ಈಗ ವಸೂ-ವಿಶ್ವಾರ ಸಮಸ್ಯೆ ಬಗೆಹರಿದು, ಶ್ಯಾಮ ರಾಯನ ಡಾವಿನ ಒಂದು ಭುಜ ಕತ್ತರಿಸಿ ಬಿದ್ದಿತ್ತು. ಸುರೇಶ-ಶಕೂರ ಸಮಸ್ಯೆ ಬಗೆ ಹರಿದರೆ, ಅವನು ತೀರಾ ನಿಃಸ್ಸತ್ವನಾಗಿ ನಿಕಾಮಿಯಾಗಿಬಿಡುತ್ತಿದ್ದ. ಅವನನ್ನು ನಿಃಶ್ಯಕ್ತನನ್ನಾಗಿ ಮಾಡಲು, ನಿರ್ಜೀವನನ್ನಾಗಿ ಮಾಡಲು ಇನ್ನು ಒಂದೇ ಒಂದು ಉಪಾಯ :

ಅದೆಂದರೆ ಅವನು ತನ್ನ ಮಿತ್ರರಿಗೆ ಸಾಹೇಬರ ಬಗ್ಗೆ ಬರೆದ ಪತ್ರದ ವಿಷಯವನ್ನು ಹೊರಗೆಡವುವದು.

ಆದರೆ......

ಆ ಪತ್ರ ನನಗೆ ಶ್ಯಾಮರಾಯನ ಬಂಗಲೆಯಲ್ಲಿ ಸಿಕ್ಕಿತ್ತು. ಶ್ಯಾಮರಾಯನ ಅನುಪಸ್ಥಿತಿಯಲ್ಲಿ ಸಿಕ್ಕಿತ್ತು. ನಾನದನ್ನು ಅವನೆದುರು ಹಿಡಿದಾಗ – ಅವನ ಕಣ್ಣಿಗೆ ಕತ್ತಲೆ ಬರುತ್ತಿತ್ತು. ಬವಳಿ ಬರುತ್ತಿತ್ತು. ತತ್‌ಕ್ಷಣ ಜಾಗರ ಸೈತಾನನಂತೆ ಜಾಗರಿಸುತ್ತಿತ್ತು. ಅದು ನನ್ನ ಕೈಗೆ ಬಂದ ಕತೆ ಅವನಿಗೆ ನಿಮಿಷದಲ್ಲಿ ಮಿಂಚುತ್ತಿತ್ತು. ನಾನು-ಬಸವಂತಿ ಅವನ ಉರಿಗಣ್ಣಿನ ಜ್ವಾಲೆಯಲ್ಲಿ, ಧಗೆಯಲ್ಲಿ ದಹಿಸುತ್ತಿದ್ದೆವು. ಅವನಿಲ್ಲದಾಗ, ಅವನ ಬಂಗಲೆಯನ್ನು ಹೊಕ್ಕು. ನಾನಾದರೂ ಆ ಪತ್ರವನ್ನು ಹಾರಿಸಿರಬೇಕು; ಇಲ್ಲ – ಬಸವಂತಿ ನನಗೆ ಸಾಮೀಲಾಗಿ ಆ ಪತ್ರವನ್ನು ನನ್ನ ಕೈಯಲ್ಲಿ ಕೊಟ್ಟಿರಬೇಕು. ಅವನ ಕಾಯಾಸದಲ್ಲಿ ಹೇಗೂ ಅರ್ಧ ಸತ್ಯವಿರುತ್ತಿತ್ತು. ಅದರ ಪರಿಣಾಮ ಭಯಂಕರವಾಗುವ ಸಂಭವವಿತ್ತು.

ಬಸವಂತಿ ಪ್ರಥಮ ಬಲಿಯಾಗುತ್ತಿದ್ದಳು. ಯಾರ ಸಮಸ್ಯೆಯೂ ಬಿಡುತ್ತಿರಲಿಲ್ಲ. ಬಲಿದಾನ ನಿರರ್ಥಕವಾಗುತ್ತಿತ್ತು.

ಪತ್ರದ ಗುಪಿತ ಅಕಾಲದಲ್ಲಿ ಸ್ಫೋಟವಾಗಿ ಯಾರಿಗೂ ಸುಖದಾಯಿಯಾಗುತ್ತಿರಲಿಲ್ಲ.

ಸಾಹೇಬರನ್ನು ಅಳವಿನಲ್ಲಿ ತಂದುಕೊಂಡು, ಅವರ ಮನಸ್ಸು ಎಂಥ ಆಘಾತವನ್ನೂ ಸಹಿಸಿ ಬದುಕಬಲ್ಲದೆಂಬ ಖಾತ್ರೀ ಮಾಡಿಕೊಂಡು, ಅವರಿಗೆ ಈ ಕಾಗದ ತೋರಿಸಿದರೆ, ಅವರು ಸೋನಕ್ಕನ ಕ್ಷೇಮದ ದೃಷ್ಟಿಯಿಂದ, ತಮ್ಮ ಶಕೂನ ಕಲ್ಯಾಣದ ದೃಷ್ಟಿಯಿಂದ, ಇದರ ಪರಿಣಾಮವನ್ನು ಸಹಿಸಿ, ಶ್ಯಾಮರಾಯನನ್ನು ದಯಾರ್ದ್ರಹೃದಯರಾಗಿ ಕ್ಷಮಿಸಿದರೆ......ಕದಾಚಿತ್ ಇದು ಸಾಧಿಸಬಹುದು. ಇದನ್ನು ನಾನು ಸಾಧಿಸಬಲ್ಲೆ. ಇದರಿಂದ ಬಸವಂತಿಗೆ ಏನೂ ಧಕ್ಕೆ ತಗಲುವದಿಲ್ಲ. ಶ್ಯಾಮರಾಯ ದುರ್ಲಕ್ಷಿತನಾಗುತ್ತಿದ್ದ. ಸೋನಕ್ಕನಿಗೆ ಸಮಾಧಾನ ಬರುತ್ತಿತ್ತು. ಶಕೂ-ಸುರ್ಯಾ ಸುರಿಗೆಯಲ್ಲಿ ಮಿಂಡಿಸುತ್ತಿದ್ದರು. ತನ್ನ ಡಾವು ಖಚಿತವಾಯಿತೆಂಬ ಧೈರ್ಯ ಬಂದಿತು. ಅದರ ವಿವರಗಳನ್ನು ತಿಳಿಸದೆ ನಾನು ವಿಶ್ವಾಸನಿಗೆ —

"ವಿಶ್ಯಾ, ದೀಪಾವಳೀ ಆದಮ್ಯಾಲs, ಮಾತಕಥೀಗೆ ಪುಣೇಕ್ಕ ಬರ್‍ರೀ ಅಂತs ಸಾಹೇಬರಿಗೆ ತಿಳಸಿ ಇಡೂಣು. ತುಳಸೀ ಲಗ್ನ ಮುಗಿಯೂದs ತಡಾ, ಮೊದಲನೇ ಮೂರ್ತs ಠರಾಸೂಣು. ಸಾಹೇಬರಿಗೆ ಈಗ ಶಕೂನ ಲಗ್ನದಕಿಂತಾ, ತಾವು

ಏಸ್.ಈ. ಆಗೂ ಧ್ಯಾಸ ತಗೊಂಡದ. ಮುಂಬೈ ಫೇರೀ ಮಾಡಲಿಕ್ಕೆ ಸುರೂ ಮಾಡಿದರೂ ಮಾಡಿದರೇ. ಏಸ ನೇಮಾ? ಅವರು ಬರೂದೇ ಆದರ ನನಗ ತಿಳಸಿ ಇಡತಾರ. ಅವರು ಬಂದಾಗ. ನೀ ಏಕದಮ್ ಸೋನಕ್ಕಂದು-ದಾದಾಂದು ವಿಷಯ ತಗೀಬ್ಯಾಡಾ. ಅವರ 'ಮೂಡ್' ನೋಡಿಕೊಂಡು ನಾನs ಹೇಳತೀನಿ. ಅಷ್ಟ ಮಾತ್ರ ನನ್ನ ಮಾತು ನಡಸು. ಯಾಕಂದರ. ಈ ಸುದ್ದೀ ಕೇಳಿದರ ಅವರು. ನಿನಗ ಉತ್ತರಾ ಕೊಡಲಿಕ್ಕೆ ಜೀವಂತ ಉಳದಾರು ಅನ್ನೊ ಭರೋಸ ಇಲ್ಲಾ. ಅವರ ಸ್ವಭಾವನs ಆ ರೀತಿ ಅದs – too sensitive· shock ಆಗಿ ಟಿಕ್ ಅಂದರೂ ಅಂದರs. ಹಿಂದಕ ತಾಂವಾಗೇ ಹೇಳಿದ್ದರು: ಸೋನಕ್ಕನ್ನ ನಾ ಮಾನಸ ತಂಗೀ ಅಂತs ಭಾವಿಸೀನ್ಯಂತ. ಯಾವ ಅಣ್ಣಾಗ, ಇಂಥಾ ಆರೋಪ ಕೇಳಿ 'ಶಾಕ್' ಆಗಲಿಕ್ಕಿಲ್ಲಾ? ಅದಕs ನೀ ಜಪ್ಪಿಸಿ ಇರೂ. ಮಾತಾಡೂ ಭಾರಾ ನನಗ ಬಿಡು."

ಬಾಗಿಲ ಮೇಲೆ ಟಕ್ ಟಕ್ ಬಡಿತ ಕೇಳಿಸಿತು. ವಿಶ್ವಾಸ ಎದ್ದು ಬಾಗಿಲು ತೆರೆದ. ಇರಾಣೀ ಹೊಟೇಲಿನ ಹುಡುಗ ಚಹ ತಂದಿದ್ದ. ಈ ವೇಳೆಗೆ ಚಹ ಬಂದದ್ದು ಒಳ್ಳೆಯದೇ ಆಯಿತು. ಚಹ ಮುಗಿಸಿ ಮತ್ತೆ ಮಾತಿಗೆ ತಯಾರಾದೆವು.

ಸುರೇಶನಿಗೆ ಲಗ್ನಬಲವಿಲ್ಲದ ಕಾರಣವನ್ನು ಮುಂದೆ ಮಾಡಿ, ಮಾತು ಕತೆಯ ಪ್ರಸ್ತಾಪವನ್ನು ನಾವು ಒಂದು ವರ್ಷದ ಮಟ್ಟಿಗೆ ಮುಂದೆ ದೂಡಿದ್ದೆವು. ಆ ಅವಧಿ ಮುಗಿದಿತ್ತು. ಸುರೇಶ-ಶಕೂರ, ಸುರೇಶ-ಸಾಹೇಬರ ಪತ್ರವ್ಯವಹಾರ ಉಭಯಕುಶಲೋಪರಿ ನಿರಾತಂಕವಾಗಿ ನಡೆದ ಕಾರಣ, ಸಾಹೇಬರು ವರುಷದ ಅವಧಿಯನ್ನು ಹೇಗೋ ಕಳೆದಿದ್ದರು. ಇನ್ನು ಮುಂದೆ ಅವರು ಸ್ವಸ್ಥರಾಗಿ ಕೂಡುವ ಶಕ್ಯತೆಯೇ ಇರಲಿಲ್ಲ. ಇಲ್ಲದ ನೆವಗಳನ್ನು ಮುಂದೆ ಚಾಚುವ ಶಕ್ಯತೆ ನಮಗೂ ಇರಲಿಲ್ಲ.

ಜೂನ-ಜುಲೈ ತಿಂಗಳ ಮಳೆಗಾಲ ಪ್ರಯುಕ್ತ ಬಂದು ಬಿದ್ದ ಪಿ.ಡಬ್ಲ್ಯು.ಡಿ. ಕಾಮಗಿರಿಗಳು, ಅಕ್ಟೋಬರ-ನವ್ಹೆಂಬರದ ಹೊತ್ತಿಗೆ ಮತ್ತೆ ಜೋರಿನಿಂದ ಸುರುವಾಗುತ್ತಿದ್ದವು. ಸಾಹೇಬರಿಗೆ ಜುಲೈ ತಿಂಗಳಿಂದ ಅಕ್ಟೋಬರದ ಅಂತ್ಯದ ವರೆಗೆ ಸಾಧಾರಣವಾಗಿ, ಆಫೀಸಿನಲ್ಲಿ, ಬಿಳಿ ಕಾಗದ ಕರೇ ಮಾಡುವವಷ್ಟೇ ಧಾವತಿ ಇರತಿತ್ತು. ಹೊರಗಿನ ಕೆಲಸ 'ಔಟ್-ಡೋರ್-ವರ್ಕ್ಸ್' ಅಷ್ಟಾಗಿ ಇರುತ್ತಿರಲಿಲ್ಲ. ಈ ಅಮೂಲ್ಯ ಸಂಧಿಯನ್ನು ಸಾಹೇಬರು ಗೃಹಕೃತ್ಯದ ಕೆಲಸದಲ್ಲಿ ವಿನಿಯೋಗಿಸುವ ಲಾಭ ಪಡೆಯುತ್ತಿದ್ದರು. ಆದರೆ ಈಗ ಅವರಿಗೆ ಬಿಳಿ ಕಾಗದ ಕರಿ ಮಾಡುವ

ಭಾರವೇ ಸೀಗದಪ್ಪಾಗಿತ್ತು. ಹೊಸ ಎಸ್.ಈ. ಸಾಹೇಬರ ಜಾಗ ಇನ್ನೂ ಭರತಿ ಯಾಗಿರಲಿಲ್ಲ. ಹಳೆಯ ಎಸ್.ಈ. ಸಾಹೇಬರಿಗೆ ನಿವೃತ್ತಿಪೂರ್ವ ರಜೆಯನ್ನು ದಯ ಪಾಲಿಸುವಾಗ, ಹೊಸ ಎಸ್.ಈ.ಯ ನೇಮಣೂಕೀ ಆಜ್ಞೆಗಳು ಹಿಂಬಾಲಿಸಲಿವೆ ಎಂಬ ಮೋಘಮ್ ವಾಕ್ಯವಿತ್ತು. ಇನ್ನೂರು ವರುಷ ಇಲ್ಲಿಯ ಗಾಳಿ-ನೀರು ಪ್ಯೈವುಂಡು, ಪಾರಜದಂತೆ ಚಲಾಕಾದ ಸಾಹೇಬರೂ ಕೂಡ, ಅಕಾಲ ಜಡತ್ವವನ್ನು ಪಡೆದಂತಾಗಿತ್ತು. ದ್ವಿತೀಯ ಜಾಗತಿಕ ಯುದ್ಧದ ದಳ್ಳುರಿ. ಅವರ ಮನೆಯನ್ನೇ ರಾಚಲು ನಾಲುಗೆ ಚಾಚಿತ್ತು. ಅವರ ಸರ್ವಲಕ್ಷ್ಯ ಅಲ್ಲಿಯ ತಮ್ಮ ಮನೆಯನ್ನು ಶಾಬೂತಾಗಿಡಲು ಥಡಪಡಿಸತೊಡಗಿತ್ತು. ಸೂರ್ಯಾಸ್ತವನ್ನೇ ಅರಿಯದ ಮಹಾ ಸಾಮ್ರಾಜ್ಯದಲ್ಲಿ ಅವರಿಗೆ, ಕುಡ್ಡ ಎಸ್.ಈ.ಯ ಸ್ಥಾನ ರಿಕಾಮಿ ಬಿದ್ದಿರುವ, ಅದನ್ನು ಭರತೀ ಮಾಡಬೇಕೆನ್ನುವ ಅಗೋರಣೀಯಾನ್ ವಿಷಯ ಗಮನಕ್ಕೆ ಬಂದಿರುವಂತಿರಲಿಲ್ಲ. ಹೀಗಾಗಿ, ಈಗ ಬರಿಯದಾದ ಎಸ್.ಈ.ಯ ಪೀಠದಲ್ಲಿ, ಕಾಯಂ ವ್ಯವಸ್ಥೆಯ ಆಜ್ಞೆ ಬರುವ ವರೆಗೆ, ತುದಿಗಾಲ ಮೇಲೆಯೇ ನಮ್ಮ ಸಾಹೇಬರು, ದಿನದಲ್ಲಿ ಒಂದೆರಡು ತಾಸು ಕೂಡುತ್ತಿದ್ದರು. ಅವರ ಕೊಳ್ಳಿಗೆ ತಮ್ಮ ಕಚೇರಿಯ, ಎಸ್.ಈ. ಕಚೇರಿಯ ಲಿಗಾಡ ಗಾಲಿ ಬಿದ್ದಿದ್ದವು. ತುದಿಗಾಲ ಬೈಠಕೀ ಪ್ರಶಸ್ತ ಚಕ್ಕಳ-ಮುಕ್ಕಳಿ ಹಾಕಿಕೊಂಡು ಪ್ರತಿಷ್ಠಾಪಿತವಾಗಲು ಅನುವು ಕೊಡುವ ಸಂಭವವಿತ್ತು. ಅದಕ್ಕೆಂದೇ ಸಾಹೇಬರಿಗೆ ಗೃಹಕೃತ್ಯದ ವಿಷಯದಲ್ಲಿ ತಲೆ ಖರ್ಚು ಮಾಡಲು ಸವಡಿರಲಿಲ್ಲ. ತಾಂವು ಎಸ್.ಈ. ಆಗುವ ಯೋಗ ಅವರಿಗೆ ಸಿಗದಿದ್ದರೂ ಮತ್ತೊಬ್ಬ ಹೊಸ ಎಸ್.ಈ. ಬಂದು ಕೆಲಸದ ಚಾರ್ಜ ತೆಗೆದುಕೊಂಡಿದ್ದರೂ ಅವರು ಬಿಡುಗಡೆ ಪಡೆದು, ನಿವಾಂತವಾಗಿ ಮನೆಯ ವ್ಯವಹಾರದ ಕಡೆಗೆ ಲಕ್ಷ್ಯ ಪೂರೈಸುವದು ಶಕ್ಯವಿರಲಿಲ್ಲ. ಹೊಸ ಎಸ್.ಈ.ಯ ಕೂಡ, ಒಂದೆರಡು ತಿಂಗಳಿದ್ದು ಅವನ ರೀತಿ-ನೀತಿ ಅರಿತುಕೊಂಡು, ಬೇಕು-ಬೇಡಿನ ಅಂದಾಜು ಪಡೆದು, ಹೇಗೆ ನಡೆದರೆ ತಮ್ಮ ಬೇಳೆ ಬೆಯ್ಯಬಹುದೆಂದು ಅಜಮಾಯಿಸಬೇಕಾಗುತ್ತಿತ್ತು. ಆಗಸ್ಟ-ಸಪ್ಟೆಂಬರದ ವರೆಗೆ ಇದು ಸಾಗುತ್ತಿತ್ತು. ಅಕ್ಟೋಬರ ಕೊನೆಗೆ, ಇಲ್ಲ – ನವ್ಹೆಂಬರ ಮೊದಲಲ್ಲಿ ದೀಪಾವಳಿ. ಆಗ ಅವರಿಗೆ ಬಿಡುವು ದೊರಕುವ ಆಶೆ. ನಮಗೆ ಬೇಕಾದದ್ದೂ ಅದೇ.

ಅಷ್ಟರಲ್ಲಿ ಸುರೇಶ. ತಾನು ಬೆಳಗಾಂವಿಗೆ ಬಂದು ಸ್ಥಾಯಿಯಾಗುವ ಒಲವು ತೋರಿಸಿದರೆ, ಶ್ಯಾಮರಾಯನನ್ನು ಕರಾರು ಹಾಕಿ, ಬಲೆಯ ಅಳವಿನಲ್ಲಿ ತರುವ

ಶಕ್ಯತೆ ಇತ್ತು. ಅವನ ಹಟವೇ ನಿಲ್ಲುವಂತಿದ್ದರೆ, ಅವನಿಗೆ ವಿಶ್ವಾಸ-ಪಸೂರ ಸಮಸ್ಯೆ ಬಿಟ್ಟು, ಅವನ ಪತ್ರದ ಪರಿಣಾಮ ಏನೂ ಆಗದೆ, ಅವನದೇ ಅಪೇಕ್ಷಿಯಾದ ವಿಷಯ ತಿಳಿಸಿ. ಸುರೇಶನ ಬಾಬತ್ತಿನಲ್ಲಿಯೂ ಖಾತ್ರೀಯಾಗಿ ಹೀಗೆ ಆಗುವದೆಂದು ಒತ್ತಿ ಹೇಳಲಿಕ್ಕೆ ಬರುತ್ತಿತ್ತು. ಅವನು ಹಣ್ಣಾದ ಸಮಯ ನೋಡಿ, ಅವನು ತನ್ನ ಮಿತ್ರರಿಗೆ ಬರೆದ ಪತ್ರದ ಗುಪಿತವನ್ನು ಸ್ಫೋಟಮಾಡಿದರೆ ಶ್ಯಾಮರಾಯ ಕಾಲು ಹಿಡಿಯಕೊಳ್ಳಲು ಬರುತ್ತಿದ್ದ. ಅವನು ಮುಖಭಂಗಿತನಾದರೂ, ಅವಮಾನಿತನಾದರೂ, ನಮ್ಮ ಮಾತಿಗೆ ಒಪ್ಪಿ ತನ್ನ ಜಾನ್ ಬಚಾವ್ ಮಾಡಿಕೊಳ್ಳಬೇಕಾಗುತ್ತಿತ್ತು. ಅವನು ಸಾಯದೆ ಬದುಕುತ್ತಿದ್ದ.

ಇದೆಲ್ಲ ಕಾರಣದಿಂದ ಸಾಹೇಬರಿಗೆ ಶ್ಯಾಮರಾಯನ ಭಾನಗಡೀ ವಿದಿತವಾಗುವದು ಸದ್ಯ ಬೇಡವಾಗಿತ್ತು. ಕಾಲ ಬಂದಾಗ ಅದಕ್ಕೆ ವಾಚ್ಯತೆ ಮೂಡಿದ್ದರೆ, ಆಗ ಪ್ರಸಂಗೋಚಿತವಾಗಿ ಅದರ ಪರಿಣಾಮವನ್ನು ಸವರಿಸಿಕೊಂಡು ಹೋಗುವದು ಸಾಧ್ಯವಿತ್ತು.

ಇದೆಲ್ಲ ಕಂತ್ರಾಟವನ್ನು ಸರಾಗವಾಗಿ ಸಾಗಿಸಲು, ಪುಣೆಯಲ್ಲಿ ನಾನು ನಿಂತಿದ್ದರೆ ನೆಟ್ಟಗಾಗುತ್ತಿತ್ತು. ಶ್ಯಾಮರಾಯನಲ್ಲಿ ನಿಲ್ಲದೆ ಕಾಕಾ ಅವರಲ್ಲಿ ನಿಂತಿದ್ದರೆ ಅವರಿಂದ ನಕಾರ ಬರುವದಂತೂ ಶಕ್ಯವಿರಲಿಲ್ಲ. ಹಾಗೆ ಕೇಳಿದರೆ ಅವರು ಖುಷಿಯಿಂದಲೇ ನನಗೆ ಆಶ್ರಯ ಕೊಡುತ್ತಿದ್ದರು. ಅದರಿಂದ ಶ್ಯಾಮರಾಯನ ಹಾಲ್-ಚಾಲೀ ತಿಳಿಯುತ್ತಿತ್ತು. ಸಾಹೇಬರನ್ನು ಪುಣೆಗೆ ಬರದಂತೆ ಮಾಡಲು ಬರುತ್ತಿತ್ತು. ಈಗ......

ಎಸ್.ಈ. ಸಾಹೇಬರ ನಾದಕ್ಕೆ ಬಿದ್ದು, ಒಂದಿಷ್ಟು ಘೋಟಾಳೀ ಮಾಡಿಕೊಂಡೆ. ಚುಟುಪುಟು ಸುರುವಾಯಿತು. ಎಸ್.ಈ. ಅವರು ನನ್ನನ್ನು ತಯ್ಯಬ್ಜೀ ಅವರ ಉಡಿಯಲ್ಲಿ ಹಾಕಿ ಹೋಗಿದ್ದರು. ಎಂ.ಎ. ಮುಗಿಸುವ ತನಕ ಮುಂಬೈಯಿಂದ ನನ್ನನ್ನು ಬಿಡಕೂಡದೆಂದು ತಾಕಿತ್ತು ಮಾಡಿದ್ದರು. ತಯ್ಯಬ್ಜೀ ಮಂಡಳಿಯೂ ಕೂಡ, ನನ್ನನ್ನು ಪಂತಮಾಮಾ-ಬನೂಮಾಮೀಯವರಂತೆ, ರಾವಜೀ ಕಾಕಾನಂತೆ ವಾತ್ಸಲ್ಯದಿಂದಲೇ ನೋಡುತ್ತಿತ್ತು. ಬಂದು ನಿಂತ ಎಂಟೇ ದಿನದಲ್ಲಿ ನಾನು ಅವರ ಹುಡುಗರ ಜೀವನದಲ್ಲಿ ಏಕರಸವಾಗಿ ಹೋಗಿದ್ದೆ. ದಾದಲ್ಯಾ ನಾಮ, ಸಾಫ ಅಳಿಸಿ, ತೊಳೆದು ಹೋಗಿ ಮಾಸ್ಟರ...ಜೀ ಆಗಿದ್ದೆ. ಈಗ ಇಲ್ಲಿಂದ ಬಿಡುಗಡೆ ಇರಲಿಲ್ಲ.

ಬಿಡುಗಡೆ ಇಲ್ಲದ ಬಂಧನವನ್ನು ಎಸ್. ಈ. ಸಾಹೇಬರು ಮುದ್ದಾಂ ನನಗೆ ಹಾಕಿ ಹೋಗಿದ್ದರು. ಕಾರಣ, ನಾನು ಕ್ಲಾಸ್ ಬರುವದು ಶಕ್ಯವಿಲ್ಲವೆಂದು ಭಾವಿಸಿ 'ಡ್ರಾಪ್' ತೆಗೆದುಕೊಂಡಿದ್ದೆ. ಇದು ಕೇವಲ 'ನರ್ವ್ಹಸ್‌ನೆಸ್' ಎಂದು ಎಸ್.ಈ. ಅವರು ಸಿಟ್ಟುಮಾಡಿ, ಮುಂದಿನ ವರ್ಷ, ಇದನ್ನು ಉಗಾಯಿಸಲು ಪ್ರಸಲಾಯಿಸಿದ್ದರು. 'ಫಸ್ಟ್‌ಕ್ಲಾಸ್' ಬರುವಂತೆ ಆಶೀರ್ವದಿಸಿದ್ದರು. ನಾನು 'ಡ್ರಾಪ್' ತೆಗೆದುಕೊಳ್ಳಬೇಕು – ಹಿಂದುಳಿಯಬೇಕೆಂದು ಅವರು ನನಗೆ 'ವೂಲನ್ ಸೂಟ್' ಹೊಲಿಸಿ ಕೊಟ್ಟಿರಲಿಲ್ಲ. ನೂರರ 'ಪಾಕೆಟ್‌ಮನಿ' ಕೊಟ್ಟಿರಲಿಲ್ಲ. ಇನ್ನೂ ನಾನು ಅವರ ಋಣದಲ್ಲಿದ್ದೆ. ಕ್ಲಾಸ್ ಬಂದರೆ ಅವರಿಗೆ ಸಮಾಧಾನವಾಗುತ್ತಿತ್ತು. ಹಾಗೆ ಬಂದ ಸಮಾಧಾನ ಸಣ್ಣದಲ್ಲ. ರಾವಜೀಕಾಕಾ. ಪಂತಮಾಮಾ, ಸಾಹೇಬರೂ ಈ ಬಗ್ಗೆ ನನ್ನನ್ನು ದೂಷಿಸಿದ್ದರು. ವಸೂ – ಕ್ಲಾಸ್ ಬರದಿದ್ದರೂ, ಪಾಸಾಗಿ, ನನಗಿಂತ ಮುಂಚೆಯೇ ಎಂ.ಎ.ದ ಘಾಜೆಗಟ್ಟಿಯನ್ನು ಮುಟ್ಟಿ ನಿರಂಬಳವಾಗಿದ್ದಳು. ನಾನು ಪರೀಕ್ಷೆಗೆ ಕೂಡದಿದ್ದ ಬಗ್ಗೆ ಶಪಿಸಿದ್ದಳು. "ದಾದಲ್ಯಾ, ಹೀಗೇಕೆ ಮಾಡಿದೆ?" ಎಂದು ಎಲ್ಲರೂ ಕೇಳುವವರೇ – ದಾದಲ್ಯಾನಿಗೆ ಉತ್ತರಿಸಲು ಬಾಯಿ ಇಲ್ಲದಾಗಿತ್ತು. ದಾದಲ್ಯಾ ಅನ್ಯರ ದೃಷ್ಟಿಯಲ್ಲಿ ಅಪೇಶಿಯಾಗಿದ್ದ.

ನಾನು ಪರೀಕ್ಷೆಗೆ ಕೂಡದಿದ್ದ ನೇಮಕೀ ಕಾರಣದ ಮೇಲೆ – ನನ್ನ ಉದ್ದೇಶದ ಮೇಲೆ, ನೇರವಾಗಿ ಬೊಟ್ಟಿಟ್ಟು ತೋರಿಸಿದ – ವಿಶ್ವಾಸ. ಅವನ ಹೇರಕ ಸಾಮರ್ಥ್ಯ ಅಚೂಕವಾಗಿತ್ತು.

ನಾನು-ವಿಶ್ಯಾ ಕೂಡಿ ಕಲಿತದ್ದಕ್ಕಿಂತ. ಕೂಡಿ ಆಡಿದ್ದೇ ಹೆಚ್ಚು. ನಾನು ಸಾಂಗಲಿಗೆ ಬರುವ ಹೊತ್ತಿಗೆ ಅವನು ಪುಣೆಗೆ ಪ್ರಯಾಣಿಸಿದ್ದ. 'ಇಂಟರ್'ಗೆ ಹೋದ ಕೂಡಲೇ ನನ್ನ-ಅವನ ಶಿಕ್ಷಣದ ಮುಖವೇ ಬದಲಾದವು. ಅದರ ಕೂಡ, ಜೀವನದ ಮುಖವೂ ಬದಲಾದವು. ಕಾಲೇಜಿನಲ್ಲಿ ಐದಾರು ವರುಷದ ಅವಧಿಯನ್ನು ನಾವು ರಾಜಕುಮಾರರಂತೆ ಕಳೆಯಬಹುದಾಗಿತ್ತು. ವಿಶ್ಯಾ, ಒಂದರ್ಥದಲ್ಲಿ ರಾಜಕುಮಾರನೇ ಆಗಿದ್ದ. ಯಾವ-ಯಾತರ ದದಾತಿಯೂ ಇರಲಿಲ್ಲ. ನನಗೆ ದದಾತಿಯೇ ವರವಾಗಿದ್ದರೂ, ಶಾಪವಾಗಿರಲಿಲ್ಲ. ಸೇವೆಯ ಶುಕ್ಲಕಾಷ್ಠ ಬೆನ್ನಿಗೆ ಇತ್ತು. ವೈದಿಕ ಬರುತ್ತಿತ್ತು. ಬದುಕಿದೆ – ಎನ್ನುವದು ನನ್ನ ಗಮಜಾಗಿರಬೇಕು. ಒರಿಯ ಪೀಠದ ಸ್ವಾಮಿಗಳ ಭಿಕ್ಷೆಗೆ ನಾವು ಪ್ರಸ್ಥವೆನ್ನುತ್ತೇವೆ. ಅದೇ ಅಯ್ಯನವರು ಜೋಳಿಗೆ ಹಾಕಿಕೊಂಡು ಬಂದರೆ, ಕೋರ್‍ಯಾಣದಲ್ಲಿ ಭಿಕ್ಷಾ ಎನ್ನುತ್ತೇವೆ. ಭಿಕ್ಷೆಯಲ್ಲಿ

ತಾರತಮ್ಯವಿದ್ದರೂ. ಭಿಕ್ಷೆ ಭಿಕ್ಷೆಯೇ. 'ದೇಹೀ' ಎಂದು ಚಾಚಿದ ನನ್ನ ಕೈ ಚಾಚಿ ದಂತೇ ಇತ್ತು. ವಿಶ್ವಾಸನಿಗೆ, ನಿದಾನ ಅರಿವೆ-ಅಂಚಡಿ, ಊಟ-ಉಪಚಾರದ ಸಂಕಟವೇ ಇರಲಿಲ್ಲ. ಅಧಿಕಾರದಿಂದ ಅವನು ಇವನ್ನು ಪಡೆಯುತ್ತಿದ್ದ. ನನಗೆ ಅಧಿಕಾರದ ಅರ್ಥವೇ ಅಗಮ್ಯವಾಗಿತ್ತು. ಎಲ್ಲಿಯಾದರೂ ಎಲೆ ಶಿಲ್ಲಕ ಉಳಿ ದಿರುವದೋ ಹೇಗೆ ನೋಡಿ. ಅಲ್ಲಿ ಹೋಗಿ ಕುಳಿತರೆ, ಯಾರಾದರೂ ಏನನ್ನಾ ದರೂ ಅಂದರೆ ಹೇಗೆ – ಎಂದು ಅನುಮಾನದ ರೀತಿಯಲ್ಲಿ ನಾನು ಒಂದು ಮೂಲೆ ಯಲ್ಲಿ ನಿಲ್ಲಬೇಕು. ಕಾರುಣ್ಯ ಕರಗಿದವರು, ಸನ್ನೆಮಾಡಿದರೆ ಶಿಲ್ಲಕ ಎಲೆಯ ಮೇಲೆ ಕೂಡಬೇಕು. ಘಂಟೆಯನ್ನು ಬಡಿದ ಕೂಲಿಯೆಂದು, ನಾಕೆಂಟಾಣೆಯನ್ನು ಸೊಂಟಕ್ಕೆ ಸಿಗಿಸಬೇಕು. ಈ 'ದೇಹೀ' ಸಾಧನೆ ನಡೆದಾಗಲೇ ಅಚಾನಕವಾಗಿ ಹಿರಿತನ ಕೊರಳಿಗೆ ಬಿತ್ತು. ಅದು ತಾನಾಗಿಯೇ ಬಿದ್ದಿತೋ – ನಾವೇ ಹಾಕಿಕೊಂಡೆವೋ ದೇವರೇ ಬಲ್ಲ.

ಸೋನಕ್ಕ ಒಗೆತನಗೇಡಿಯಾಗಿ ಬಂದರು. ವಿಶ್ವಾಸನ, ನನ್ನ ಜೀವನದ ಮುಖವೇ ಬದಲಾದವು. ವಿಶ್ಯಾ ಸಾಂಗಲಿಯಿಂದ ಪುಣೆಗೆ ಹೊರಟು ನಿಂತಿದ್ದ. ಆ ಸಮಯದಲ್ಲಿ ದಸ್ತಗೀರ್‍ಯಾ ಹೇಳಿದ್ದ: 'ವಸೂ, ವಿಶ್ಯಾಗ ಸಾಂಗಲೀ ಸಣ್ಣ ದಾಗತಿತ್ತು. ಪುಣೇದಾಗ ಅಂವಾ 'ಟೆನಿಸ್ ಚಾಂಪಿಯನ್‌ಶಿಪ್'ದ ಝೆಂಡಾ ಹಚ್ಚದ ಬಿಡೂದಿಲ್ಲಾ: ನೋಡತೀರಿ' ಎಂದು. ವಿಶ್ಯಾ 'ಟೆನಿಸ್-ಕ್ರಿಕೆಟ್'ದಲ್ಲಿ ನಿಶ್ಚಿತವಾಗಿಯೂ ಚಮಕಾಯಿಸುತ್ತಿದ್ದ. ಮಹಾರಾಷ್ಟ್ರದ ಇಲೆವ್ಹನ್‌ದಲ್ಲಿ ಖಚಿತ ಅವನ ನಂಬರು ಹತ್ತುತ್ತಿತ್ತು. ವಿಶ್ಯಾ ನೂರು, ನೂರಾಐವತ್ತು ಕೊಟ್ಟು ಅಪ್ರತಿಮ ಬ್ಯಾಟು ಖರೀದಿ ಮಾಡಿದ್ದ. ಅದೂ ಹಾಗೇ ಅವನಿಗೆ ಸಾದು ಆಗಿತ್ತು. ಆದರೆ ವಿಶ್ಯಾನಿಗೆ ಆಟದ 'ಚಾಂಪಿಯನ್‌ಶಿಪ್'ದ ಯೋಗವಿರಲಿಲ್ಲ. ಸೋನಕ್ಕನ ವನವಾಸದ ಕೂಡ, ಅವನ ವನವಾಸವೂ ಮೊದಲಾಯಿತು. ರಾವಜೀಕಾಕಾ, ವಿಶ್ವಾನ ಉಡಿಯಲ್ಲಿ, ಅಗತಿಕ ಸೋನಕ್ಕ, ನಾಲ್ವರು ತಮ್ಮಂದಿರನ್ನು ಹಾಕಿದರು. ಅವರ ಕ್ಷೇಮದ ಭಾರವನ್ನು ಅವನಿಗೆ ವಹಿಸಿದರು. ಅವನಿಗೆ ಆಗ ಹೆಚ್ಚು-ಕಡಿಮೆ ಇಪ್ಪತ್ತು-ಇಪ್ಪತ್ತೊಂದು ವರುಷ!

ವಿಶ್ವಾಸ ಹುರುಪಿನಿಂದ ಆಡಲು ಕೊಂಡ ಬ್ಯಾಟನ್ನು ಸುರೇಶ-ಸತೀಶರು ಆಡಿ ಮುರಿದರು. ಅದು ಮುರಿದ ದಿನ ಕಾಕಾ ಬಹಳ ಸಂಕಟಪಟ್ಟರು. ಬಹಳ ಕಳವಳಿಸಿದರು. ಸೋನಕ್ಕ ಕಣ್ಣಲ್ಲಿ ನೀರು ತಂದು – "ವಿಶ್ಯಾ, ನಿನ್ನ ಸುಖಾ, ನಿನ್ನ

ಹುರಪಾ ಅದನ್ನೂ ಯಾರೋ ಹೀಂಗs ಮುರದು ಮೂರಾಬಟ್ಟೆ ಮಾಡಿದರು" ಎಂದು ಪರಿತಪಿಸಿದರು. ವಿಶ್ವಾಸನಿಗೆ ಸೋನಕ್ಕನ ಕ್ಷೇಮದ ಧ್ಯಾಸ ತೊಡಗಿತ್ತು. ಅವರನ್ನು ಸುಖಿಯಾಗಿಸುವ ಹವ್ಯಾಸಕ್ಕೆ ಅವನ ಜೀವನ-ಸಾಧನೆ ನಡೆದಿತ್ತು.

ಆ ಅಗತಿಕ ಜೀವನಕ್ಕೆ ಗಂಡನ ಸುಖ ಬರಪಣವಾದಾಗ, ಮಕ್ಕಳ ಸುಖ ವಾದರೂ ಸಿಗಲಿ. ಅದರಿಂದ ಆ ಜೀವಕ್ಕೆ ನೆಮ್ಮದಿ ಉಂಟಾಗಲಿ ಎಂದು ಅವನು ತಮ್ಮಂದಿರನ್ನು ತನ್ನಂತೆ ತಿದ್ದಿ-ತೀಡಿದ್ದ. ಸುರೇಶ, ಬೀ.ಈ. ಪರೀಕ್ಷೆಯಲ್ಲಿ ಪ್ರಥಮ ವರ್ಗದಲ್ಲಿ ಪಾಸಾದ. ರಾವಜೀಕಾಕಾ ಅದರ ಶ್ರೇಯಸ್ಸನ್ನು ಶ್ರೀಹರಿಗೆ ಅರ್ಪಿಸಿ ದರೆ – ಸುರ್ಯಾ ಅದನ್ನು ಅಣ್ಣನಿಗೆ ಮುಕ್ತಮಾನಸನಾಗಿ ಅರ್ಪಿಸಿದ್ದ. ಸುರೇಶನೇ ಒಂದು ಸಲ ಹೇಳಿದ್ದ: "ದಾದಲ್ಯಾ, ವಿಶ್ಯಾ ಕಿಂವೀ ತಿರವಲಿಲ್ಲಾ, ಹೀಂಗ್ಯಾಕs ಹೀಂಗ ಅಲ್ಲಾ' ಅಂತs ಎಂದೂ ಬಾಯಿಬಿಟ್ಟು ಹೇಳಲಿಲ್ಲಾ. ಅವನ ರೀತಿ-ನೀತಿ ನೋಡೇ ನಾ ಅವನ ಕಿತ್ತೇ ತೀಡಿದ್ದೆ. ವಿಶ್ಯಾಗ ಮಾತಾಡೂ ಗರಜನ್s ಬೀಳೂ ದಿಲ್ಲಾ. ಅವನ ನಡವಳಿಕೀನs ಉಳದವರಿಗೆ ದಾರಿದೀಪ ಆಗತದ. ವಿಶ್ಯಾಗ ಅದರ ವರಾನs ಅದs."

ಸುರೇಶ ಹದಿನಾರಾಣೆಯ ಸತ್ಯವನ್ನು ವದಿಸಿದ್ದ.

ಸುರೇಶನ ವಿಷಯ ಈಗ ಕುತ್ತಿಗೆಗೆ ಬಂದಿತ್ತು. ಸಾಹೇಬ ಬ್ರುವರು ಯಾವತ್ತು ಧುತ್ತೆಂದು ಬಂದು ಪುಣೆಯಲ್ಲಿ ಇಳಿದಾರೆಂಬ ಬಗ್ಗೆ ನೇಮವಿರಲಿಲ್ಲ. ಅವರಿಗೆ ಕಾಕಾ-ಸೋನಕ್ಕ ಅವರು, ಇದ್ದ ಸಂಗತಿಯನ್ನು ವಿವರಿಸದೆ ಇರುತ್ತಿರಲಿಲ್ಲ. ಅದರ ಪರಿಣಾಮ ಸುಖದವಾಗಿರಲಿಲ್ಲ.

ಯಾರೂ ಹುಳಿ ಹಿಂಡಬಾರದೆಂದು ನಾನು ಧಡಪಡಿಸಿದ್ದೆ. ಸಾಹೇಬರನ್ನು ಬದುಕಿಸುವ, ಶಕೂ-ಸುರೇಶರ ಸಂಬಂಧ ಹೊಂದಿಸುವ, ಶ್ಯಾಮರಾಯನನ್ನು ಉಳಿಸುವ ಜಾಲಂದ್ರ ರಚಿಸತೊಡಗಿದ್ದೆ. ನನ್ನ ಅನ್ಯ ಕಂತ್ರಾಟಗಳೆಲ್ಲ ವಿಶ್ವಾಸನಿಗೆ ತಿಳಿದಿದ್ದವು. ಅವನು ಆ ಬಗ್ಗೆ ಅಂದಿದ್ದ:

"ದಾದಲ್ಯಾ, ನಿನ್ನ ಧಡಪಡದ ಅರ್ಥ ನನಗ ಆಗೇದ."

ದಾದಲ್ಯಾ, ನನಗ ಬಂದ ಉರ್ಲಾ ನಾನs ತಗೀತಿದ್ದೆ. ಆದರ ನನಗ ಆ ಧಾವತೀ ಬ್ಯಾಡಾ ಅಂತs ನೀ ಧಾವಿಸಿ ಬಂದಿ. ಅದರಾಗ ನಿನ್ನ ಸ್ವಾರ್ಥ ಇರ ಲಿಲ್ಲಾ. ನಿನಗ ಸುಖಾ ಇರಲಿಲ್ಲಾ. ಏನೂ ಇರಲಿಲ್ಲಾ. ಕೇವಲ ಅಭಿಮನ್ಯೂನ ನಿಷ್ಠಾ ಇತ್ತು; ನಿಸ್ವಾರ್ಥ ಇತ್ತು. ಕಾಕಾ ಅವರದು, ಪಂತಮಾಮಾ ಅವರದು

ನನಗ ಋಣಪರಿಹಾರ ಇಲ್ಲಂತ ಸದಾ ಹಾಡತೀ ದಾದಲ್ಯಾ. ಆದರ ಆ ಪರಿಹಾರಾ ಯಾರಿಗೆ ಇಲ್ಲಾ ಅನ್ನೂದರ ಠಾಂಪಿಕ್ಯದ ನನಗ.

ದಾದಲ್ಯಾ, ನಮ್ಮದು ಭಾಳ ಗಡಿಬಿಡಿ ನಡದದಽದ, ಭಾಳ ಗಡಿಬಿಡಿ. ನೀನೇ ನೋಡು? ಸಾಂಗಲೀ. ಬೆಳಗಾಂವೀ. ಪುಣೇ ಎಲ್ಲೆ ನೀ ನಿಂತಿದ್ದರೂ ನಡಿಯೂ ಹಾಂಗ ಇತ್ತು. ಆದರ ಇಲ್ಲಿಗೇ ಬಂದಿ – I will sink or swim with ವಿಶ್ಯಾ – ಅಂತಽ, ಹಗಲೆಲ್ಲಾ ಅಂತೀದಿ. ಅದನ್ನ ಖರೇ ಮಾಡೂದರ ದಶಿಂದನಽ ಬಂದಿರಬೇಕು ಅಂತ ಅನಸ್ತದ. ಸಾಹೇಬರನ ಒಂದೆರಡ ವರ್ಷ ಸಂಬಾಳಿಸಿದಿ. ಇನ್ನಮು ಶಕ್ಯ ಇಲ್ಲಾ, ಸಂಬಾಳಸೂದು ಠೀಕ ಅಲ್ಲಾ ಅಂತಽ ನಿನಗರ ಅನಿಸಿರಬೇಕು. ಇಲ್ಲಽ ವಿಧೀಗ್ಯರಽ ಅವಸರ ಹತ್ತಿರಬೇಕು. ನೀ ಮಾಡಕೋತ ಬಂದ ಡಾವು ಸಿದ್ಧ ಸಿದ್ಧೂ, ಒಂದ ವರ್ಷದ ನಿನ್ನ 'ಕರಿಯರ್' ಬಾದ ಮಾಡಿ ಸಿದ್ಧ ಸಿದ್ಧೂ – ಏನೂ ಸಾಹಸ ಇಲ್ಲದೇ ಇದೆಲ್ಲಾ ಸಾಧಿಸಿತೂ ಅಂತಽ ನಿನ್ನ ಭಾವನಾ ಖಾತ್ರೀಲೇನಽ ಆಗೇದ. ಅದರಾಗ ಅರ್ಥ ಇಲ್ಲ ದಾದಲ್ಯಾ. ಸಾಹಸದಕಿಂತಾ, ಚಮತ್ಕಾರ ಆತು, ದೈವೀಘಟನಾ ನಡೀತು ಅಂತಽ ನೀ ಭಾವಿಸಿದ್ದರ – he who accounts all things easy will have many difficulties – ಅನ್ನೂ ಮಾತು ಅಸತ್ಯ ಆಗಬೇಕಾಗತದ. ಹಾಂಗ ಆಗೂದು ಶಕ್ಯ ಇಲ್ಲ ದಾದಲ್ಯಾ. 'ಕಾಂಪ್ಲಿಕೇಶನ್ಸ್' ಕಗ್ಗಂಟನಽ ಹಾಕ್ಕೋತ ಏಳತಾವ.

ಸಾಹೇಬರನ ಭಾಳ ದಿವಸ ಅತಂತ್ರದೊಳಗ ಇಟ್ಟೀ. ಇದು ಅಗದೀ 'ಅನ್‌ಬೆರೆಬಲ್' ಆಗೇದ ದಾದಲ್ಯಾ. ಅವರಿಗೆ ಇದ್ದ 'ಫ್ಯಾಕ್ಟ್ಸ' ತಿಳಿಸಿ ಮೋಕಳೀಕ ಆಗೂದಂತ ಠರಾಸೀನಿ. ಈ ಸಾವು ಇಂದಿಲ್ಲ, ನಾಳೆ ಬರೂದೇನಽ ಅನ್ನೂ ನಿಶ್ಚಿತೀ ಇರುವಾಗ, ಇಂದೇ ಅದರ ಗುಪಿತ ಸ್ಫೋಟ ಮಾಡಲಿಕ್ಕೆ ಏನೂ ಹರಕತ್ ಇಲ್ಲಾ. ದೀಪಾವಳೀ ಹೊತ್ತಿಗೆ ತಾಂವೇ ಬರತೀನ್ಯಂತ ಅವರು ತಿಳಿಸಿದರ ನೆಟ್ಟಗಽ ಆತು. ಕಾಕಾ-ತಾಯೀ ಅವರಿಂದ, ಹ್ಯಾಂಗೂ ಈ ಬಾತಮೀ ಹೊರಬೀಳದೇ ಇರೂದಿಲ್ಲಾ. 'ರಿಪರ್ಕಶನ್'ದ ವಿಚಾರ ಅಗದೀ ಅನಿಶ್ಚಿತ ಅದಽ. ಬಸವಂತೀ ಪ್ರಕರಣ ಉಲಗಡಾ ಆಗಿ ಕಾಕಾ-ತಾಯೀಗೂ ನಿಶ್ಚಿಂತಿ ಬಂತು. ಬಸವಂತಿಗೂ ನಿಶ್ಚಿಂತಿ ಬಂತು. ಇದೂ ಹಾಂಗೇ ಆದರ ಠೀಕನಽ. ಇಲ್ಲಽ ಬಂದದ್ದನ್ನು ಭೋಗಸಲಿಕ್ಕೆ ತಯಾರಾಗಬೇಕು."

"ವಿಶ್ಯಾ, ಸಾಹೇಬರಿಗೆ ಒಂದು ಪತ್ರಾನೂ ಬರೀತೀನಿ. ಅವರ 'ಪ್ರೋಗ್ರ್ಯಾಂ' ಏನು ಅನ್ನೂದನ್ನ ತಿಳಕೋತೀನಿ. ಅಷ್ಟರಾಗೇ ಒಮ್ಮೆ ಪುಣೇದ ಮ್ಯಾಲೂ ಹಾದ

ಬರತೀನಿ. ಅಲ್ಲೀ ಬಾತಮೀ ಬಸವಂತೀಯಿಂದ ತಿಳೀತದ. ದಾದಾನ ಹಾಲ್‌ಚಾಲೀ ದಶಿಂದ ಚೂರ-ಚಾರರ ತಿಳದಿರತದ ಅಕೀಗೆ. ಅಲ್ಲಿಂದ ತಿರಗಿ ಬಂದ ಮ್ಯಾಲ ಮುಂದಿನ ವಿಚಾರ ಮಾಡೂಣು."

ನಿಶ್ಚಿತವಾಗಿ ಏನನ್ನೂ ಠರಾಸದೆ ಅಡ್ಡಗೋಡೆಯ ಮೇಲೆ ಕುಡ್ಡ ಪಣತಿ ಇಟ್ಟವರಂತೆ ಇಬ್ಬರೂ ಮಾತಾಡಿ ಮುಗಿಸಿದೆವು.

ಶ್ಯಾಮರಾಯ ಸೋನಕ್ಕನ ಮುಖಾವಲೋಕನವೂ ನಿಷಿದ್ಧವೆಂದು ಸಾರಿ ಆ ಬಗ್ಗೆ ತನ್ನ ನಿಶ್ಚಿತ – ನಿರ್ಣಾಯಕ ಅಭಿಪ್ರಾಯವನ್ನು ಎಂದೋ ಕೊಟ್ಟಿದ್ದ. ಅದನ್ನು ಕುರಿತು ನಾನು ವಿಶ್ವಾಸನ ಮುಂದೆ ಒಂದು ಚಕಾರ ಶಬ್ದವನ್ನೂ ಎತ್ತ ಲಿಲ್ಲ. ಕಾರಣ, ಶ್ಯಾಮರಾಯ ಅಂದ ಮಾತು – ಉಚ್ಚರಿಸಿದ ವಿಶೇಷಣ. ವಿಶ್ವಾಸ ನನ್ನು ಕೆರಳಿಸಿ. ಅವನ ಕಿಚ್ಚನ್ನು ಕೆದಕುವ ಸಂಭವವಿತ್ತು. ಅದರಿಂದ ಸುರೇಶ-ಶಕೂರ ಪ್ರಶ್ನೆಯೂ ತೀವ್ರದಲ್ಲಿ ನಿಕಾಲೆಗೆ ಬಂದು ಅನಿರ್ಣೀತವಾಗಿ ಉಳಿಯು ವಂತಿತ್ತು. ಕಾಕಾ-ಸೋನಕ್ಕ ಮತ್ತೆ ಸಂಕಟಪಡುವ. ತಳಮಳಿಸುವ ಸಂಬವವಿತ್ತು. ಶ್ಯಾಮರಾಯ ಆಡಿದ್ದನ್ನೆಲ್ಲ ವರದಿ ಮಾಡಿದ್ದರೆ, ಕೊಳ್ಳಿ ಕಿಡಿಕಾರಿ ಬೆಂಕಿ ಹೊತ್ತಲು ಹೊತ್ತು ಹಿಡಿಯುತ್ತಿರಲಿಲ್ಲ. ವಿನಾಶದ ಕ್ಷಣ, ಗೇಣಂತರದಲ್ಲಿಯೇ ಬಂದು ತುಡುಕು ತ್ತಿತ್ತು. ಅದರ ಪರಿಣಾಮವನ್ನು ಊಹಿಸಿಯೇ ನಾನು ವಿಶ್ವಾಸನಿಗೆ ಠಳಕ ಬಾತ ಮಿಯ ವರದಿಯನ್ನು ಅಷ್ಟೇ ಮಾಡಿದ್ದೆ. ಸಾಧ್ಯವಾದರೆ. ಶ್ಯಾಮರಾಯನ ಕೂದ ಲಿಗೂ ಧಕ್ಕೆಯಾಗಗೊಡದೆ ಬಚಾವು ಮಾಡುವ ವಿಚಾರವನ್ನೂ ಸೂಚಿಸಿದ್ದೆ.

ಆದರೆ ವಿಶ್ವಾಸ, ಸಾಹೇಬರ ಮುಂದೆ. ಶ್ಯಾಮರಾಯ-ಸೋನಕ್ಕರ ಸಂಬಂಧ ಬಿಘಡಾಯಿಸಿದ ಕಾರಣವನ್ನು ಹೇಳುವ ದೃಢ ನಿರ್ಧಾರಕ್ಕೆ ಬಂದದ್ದು ನನ್ನ ಯೋಜನೆ-ವಿಚಾರಗಳ ಬುಡಕ್ಕೇ ಪೆಟ್ಟು ಹಾಕಿದಂತಾಯಿತು. ಮರೆ ಬಿಟ್ಟು ನಡೆದ ಎಂಥ ಧೈರ್ಯ-ಮೇರುವಿಗೂ. ಅಚಾನಕ ಸ್ಫೋಟ, ಗಡಗಡಾಟದ ಸದ್ದು ಒಂದೇ ಒಂದು ನಿಮಿಷ ದಿಕ್ಕು ತಪ್ಪಿಸುವಂತೆ, ಸಾಹೇಬರಿಗೆ ಈ ವಿಷಯ – ತಮ್ಮ ಮೇಲೆ ಬಂದ ಆರೋಪ, ಕಣ್ಣಿಗೆ ಕತ್ತಲೆ ಬರಿಸದೆ ಬಿಡುತ್ತಿರಲಿಲ್ಲ. ಅವರ ಮೇಲೆ ಅದರ ಘೋರ ಆಘಾತವಾಗದೆ ಹೋಗುತ್ತಿರಲಿಲ್ಲ. ಅವರ ಮೃದು-ಹೊಂಗರುಳ ಸ್ವಭಾವವನ್ನು ತೀರ ಹತ್ತಿರದಿಂದ ನೋಡಿ. ಅನುಭವಿಸಿದ ಅನುಭವ ನನಗಿತ್ತು. ಅಂಥ ಜೀವ ಇಂಥ ಭೀಕರ ಆರೋಪವನ್ನು, ತಾನು ತಣ್ಣಗಾಗದೆ ಸಹಿಸುವದು ಶಕ್ಯವಿರಲಿಲ್ಲ. ಸೋದರ-ವಾತ್ಸಲ್ಯದಿಂದ ತಮ್ಮನ್ನು ಕಂಡ, ಒಬ್ಬ ಅಣ್ಣ, ಹೀಗೆ

ತಮಗಾಗಿ ತಣ್ಣಗಾದರೆಂದು ಸೋನಕ್ಕನಿಗೆ ಸಂಕಟವಾಗದಿರುತ್ತಿರಲಿಲ್ಲ. ಆದರ ಅನಿಷ್ಟ ಪರಿಣಾಮ ಅವರ ಜೀವನವನ್ನು ಕಬಳಿಸದೆ ಬಿಡುತ್ತಿರಲಿಲ್ಲ. ಸೋನಕ್ಕನ ಹಿಂಬಾಲಿಗೆ ನಡೆಯುವ ಮೃತ್ಯುಕಾಮಿ ಜೀವಗಳ ವೀಥಿಯೇ ಇತ್ತು. ಮೃತ್ಯು ತಾಂಡವವಾಡದೆ ಬಿಡನೆಂಬ ಕಲ್ಪನೆ ನನಗಿತ್ತು. ಅದನ್ನು ಊಹಿಸಿಯೇ ನಾನು ಕೆಲ ಮಾತುಗಳನ್ನು ಮುಚ್ಚಿಟ್ಟಿದ್ದೆ... ಈಗ ವಿಶ್ವಾಸ ಆ ಗುಪಿತದ ಬುಡಕ್ಕೆ ಕೈ ಹಾಕಿ ಅಲ್ಲಾಡಿಸುವ ನಿರ್ಧಾರ ಸೂಚಿಸಿದ. ನನಗೆ ಸಂಕಟಕ್ಕಿಟ್ಟಿತು.

ವಿಶ್ವಾಸ-ವಸೂರ ಸಂಬಂಧ ಗಟ್ಟಿಗೊಂಡು, ಅದರಿಂದ ವಿಶ್ವಾಸ ಹರುಷಿತನಾದ – ಉಲ್ಲಸಿತನಾದ, ಸರ್ವಮಾಂಗಲ್ಯದ ಕ್ಷಣ ಸಮೀಪಗತವಾಗುತ್ತಿರುವ, ಕಲ್ಪನಾ-ಸುಖ-ವಿಲಾಸದ ಮಂಜಿನ ಪರೆ ತಟ್ಟನೆ ಮಾಯವಾಯಿತು. ಎದೆಯಲ್ಲಿ ಯಾರದೋ ಅಕಾಂಡ-ತಾಂಡವ ನಡೆದ ಭೀತಿ ಮೂಡಿತು. ಜೀವ ಅಸ್ವಸ್ಥ, ಅಧೀರವಾಯಿತು.

ಕಂಠತ್ರಾಣದಲ್ಲಿ ಕೈ ಎತ್ತಿದ ದಾದಲ್ಯಾ, ಮೂಕಪಶುವಿನಂತೆ, ವಿಶ್ವಾಸನ ಹಿಂಬಾಲಾಗಿ ಹೋಗಿ, ಎಲೆ ಎಂಜಿಲು ಮಾಡಿ, ಊಟದ ಶಾಸ್ತ್ರ ಮುಗಿಸಿ ಬಂದ. ವಿಶ್ಯಾ ನಗುತ್ತ. ಅಪ್ಯಾಯಮಾನವಾಗಿ ಸಿಗರೇಟಿನ ಹೊಗೆಯನ್ನು ಬಿಡುತ್ತ —

"ದಾದಲ್ಯಾ, ದೀಪ ಆರೂ ಮುಂದ, ಧೊಡ್ಡದಾಗತದ ನೋಡು. ಆಗ ಅದು ಅಮೇಶಖೋರನ್ಹಾಂಗ ಇದ್ದಬಿದ್ದ ಎಣ್ಣೀ ಹೀರಿಕೋತದ. ಅದಕs ಧೊಡ್ಡದಾಗಿ ಉರೀತದ. ಮುಂಜಾನೆ ಮಾತಾಡೂ ಮುಂದ ನಿನಗ ಹೇಳಿದ್ದೆ: ಯಾಕೋ ಘನ ಅವಸರಾ ನಮ್ಮ ಬೆನ್ನಿಗೆ ಹತ್ತೇದಂತ. ನಮಗೂ ದೀಪಧಾಂಗ, ಎಣ್ಣೀ ಹೀರೂ ಅವಸರ ಹತ್ತೇದ. ಅದಕೇ ದಾದಲ್ಯಾ, ಏನ ಮಜಾ ಮಾಡೂದು ಉಳದ್ವದ ಅದನ್ನ ಶಿಲ್ಲಕ ಇಡಬ್ಯಾಡಾ. ಅರಹೊಟ್ಟೀ ಉಂಡು ಕಸಿವಿಸಿ ಪಡಬ್ಯಾಡಾ. ಹಸದ ಹೊಟ್ಟಿಗೆ ಹಜಾರ ವಿಚಾರಾ. ಕುತ್ತಿಗಿ ಮಟಾ ಕೂಳ ಬಿದ್ದರ, ವಿಚಾರದ ಉಸಲ ಗಟ್ಟತದ. ಮಗನs, ಚಿಂತೀ ಮಾಡಿ ಏನ ಮಾಡಾಂವ ಇದ್ದೀ? ಅಂತ್ಯದ್ದು 'ಸಿಮೆಂಟ್ ಕಾಂಕ್ರೀಟ್'ನ ರಾಜಮಾರ್ಗ. ಅದು ನಮಗ ಗೊತ್ತ ಇತ್ತು. ಇಷ್ಟ ಲಗೂನs ಆ ಹಾದೀ ಮ್ಯಾಲ ಯಾಕ ಹಾಯೂದಂತ, ಕಾಲದಾರೀ, ಕವಲದಾರೀ ಒಳಗ ನಡದು, ಅಂತ್ಯ ತಪ್ಪಸೂ ಧಡಪಡ ನಡಿಸಿದ್ದೇವು. ಜಮಾಸಲಿಲ್ಲ ದಾದಲ್ಯಾ. ಮತ್ತ, ಇದೇ ರಾಜಮಾರ್ಗದ ಮ್ಯಾಲ ಇಂದ ಬಂದ ನಿಂತೇವು. ನೀ ಏನ ಗಮಜ ಇದ್ದರೂ ಈ ಪ್ರಯಾಣ ತಪ್ಪಸೂದು ನಿನ್ನಿಂದ ಸಾಧ್ಯ ಆಗದು. ಅದು ಗೊತ್ತಿದ್ದೂ

ಯಾಕ ಸುಮ್ಮನೇ ರಕ್ತಾ ಸುಟಗೋತೀ ? ನಾ ಅವಸರ ನಡದದ ಅಂದಿದ್ದೆ. ದಾದಲ್ಯಾ ನಂದಂತೂ ಏನ ಘನ ಅವಸರ ನಡದsದ ಅಂದೀ. ಇಲ್ಲೀ ತನಕಾ ಅಂತೂ, ನಾ ನರಕಕ್ಕ ಹೋಗೂವಂಥಾ ಪಾಪಾ ಏನ ಮಾಡಿಲ್ಲಾ. ಅಂದಮ್ಯಾಲs ಸ್ವರ್ಗದ್ದಂತೂ ಗ್ಯಾರಂಟೀ ಅದನs. ಅಲ್ಲೇನು 'ಫ್ಯಾಸಿಲಿಟೀಸ್' ಅವನೋ ಇಲ್ಲೋ ಯಾರಿಗೆ ಗೊತ್ತು? ಮಹಾಯುದ್ಧ ಬ್ಯಾರೇ ನಡದsದ. ವೀರಸ್ವರ್ಗಕ್ಕ ದಯಮಾಡಿಸಿದ ಗಿರಾಕಿಗೋಳದು ಇಂದ್ರಪುರಿ ಬಾಗಲದಾಗ ಕ್ಯೂನs ಹತ್ತಿರಬೇಕು. ಇಲ್ಲೀ ಹಾಂಗs ಅಲ್ಲೂ, ಜಾಗದ ಟಂಚಾಯಿ–ಕೂಳಿನ ರೇಶನ್ನು ಸುರುವು ಆಗಿರಬೇಕು. 'ಓವರ್ ಕ್ರೌಡ್' ಆಗಿ ಯಾರಿಗೆ ಯಾರದೂ ಥಾಕ ಇರೂ ಸಂಭವ ಇಲ್ಲಾ, ಕದಾಚಿತ್, ವಿಧಿಗೂ ಇದರ ಕಲ್ಪನಾ ಇರಬೇಕು. ಅಂವಾ ಆ 'ಅಪರ್ ರೀಜನ್'ದ 'ರಿಪ್ರೆಜೆಂಟೇಟಿವ್' ಅಲ್ಲೇನು......?"

"ಯಾಕ ವಿಶ್ಯಾ, ಅಗದೀ 'off' ಆಧಾಂಗ ಕಾಣಸ್ತೀ? ನೀ ಈ 'ಮೂಡ್'ನ್ಯಾಗ ಇದ್ದಾಗೇ ವಸೂನ್ನ ಒಪಿಗೊಂಡಿ ಕಾಣಸ್ತದ. ವಿಶ್ಯಾ ವ್ಯಾವಹಾರಿಕ ಇದ್ದಷ್ಟೇ ಭಾವನಾತ್ಮಕನೂ ಇದ್ದಾನ ಅನೂದು ಗೊತ್ತಿತ್ತು. ಅಂವಾ ಡಾಕ್ಟರ ಆದರೂ ಅವನಲ್ಲೀ ಕಾವ್ಯ ಸತ್ತಿಲ್ಲ ಅನೂದು ಠಾಂವಿಕಿತ್ತು. ಆದರ ನಿನ್ನ ಮಾತ ಕೇಳಿ, ಭಾವನಾ ವ್ಯವಹಾರಾ ಎರಡೂ ಕರಕಾಗಿ. ಅದರ ಜಾಗಾದಾಗ ಭ್ರಮಾ ಉನ್ಮಾದಾ ರಟಗಳ್ಳೀ ಹಾಂಗ ಬೆಳದಾವ ಅನಸ್ತದ."

"ದಾದಲ್ಯಾ, ರಟಗಳ್ಳಿ ಬೆಳದಿಲ್ಲಾ. ಕರಿಕಿ-ಕಳ್ಳೀನೂ ಬೆಳದಿಲ್ಲಾ. ಅದು ಬೆಳದsದ ಅನೂ ಭ್ರಮಾ ನಿನಗ ಆಗೇದ. ನಿನ್ನ ವಿಶ್ಯಾ, ಮುಂಚಿನ ಹಾಂಗೇ 'ಪ್ರ್ಯಾಕ್ಟಿಕಲ್' ಇದ್ದಾನ. ಕವೀನೂ ಇದ್ದಾನ. ವ್ಯವಹಾರ ಅನೂದು ಪಂತರ ರಕ್ತಾ. ವಿಶ್ಯಾನ್ನ ನೋಡಿದರs ಅನಸಬೇಕು, ಆ ರಕ್ತಾ ಚಿಲ್ ಅಂತ ಚಿಮಕತ್ತದಂತ. ವ್ಯವಹಾರಸ್ಥರು 'loss'ನೂ ಅಷ್ಟೇ ಧೈರ್ಯದಿಂದ 'accept' ಮಾಡತಾರ. 'ಸುಖ-ದುಃಖೇ ಸಮೇಕೃತ್ವಾ'ಕ್ಕ ಅವರೇ ಖರೇ ಸಾಕ್ಷೀ. 'ಹಾರ್ಟ್‌ಲೆಸ್ ಕ್ರೀಚರ್' ಅಂತs, ನೀ ನನಗ ಅಂದರೂ ಅನ್ನು. ವಸೂಗ 'ಫೈನಲ್ ಡಿಸಿಶೆನ್' ಕೊಡಾಗ ನನ್ನಲ್ಲೆ ಇದೇ ಭಾವನೆಯೇ ಇತ್ತು. ವಸೂ ಹೊರಗ ಎಲ್ಲ್ಯಾರs ಸುಖೀ ಆಗತಿದ್ದರ, ಅದನ್ನ ನೋಡಿ. ದುಃಖ ಹಚಿಗೊಂಬೂದಕಿಂತಾ ಅಕೀ ಸುಖಾ ನೋಡೀ ಆನಂದಪಡಬೇಕು, ಅನೂ ವೃತ್ತೀ ನನ್ನಲ್ಲೆ ಅಗದೀ ಘಟ್ಟಿ ಇತ್ತು. ತಾಯೀ ಸುಖದ ಮುಂದ, ನನಗ ಎಲ್ಲಾ 'ಸೆಕೆಂಡರಿ ಇಂಪಾರ್ಟೆನ್ಸ್'ದ್ದು ಅನಸತಾವ ದಾದಲ್ಯಾ. ಖರೇ ಇದರಾಗ

ಭಾವನಾ ಇಲ್ಲಾ, ಕಾವ್ಯ ಇಲ್ಲಾ. ಬರೇ ಕರ್ತವ್ಯ ಅದs. ಅದನ್ನ ಮಾಡಿ ಮುಗಸ ಬೇಕಾಗೇದ. ಈ ಕರ್ತವ್ಯ ಮುಗಸೂದಕ್ಕ ನಾನೂ ನೆರವಾಗತೀನಿ ಅಂತs, ವಸೂ ತಾನಾಗೇ ಧೈರ್ಯಾದಿಂದ ಮುಂದ ಬಂದಳು. ನನ್ನ ಕರ್ತವ್ಯದ ಭಾರ ಇಳಸದಿದ್ದರೂ, ನಾ ಸೋತು ಕೈ ಊರಾಗ, ಆಕೀ ಆಸರಾದಾಳು. ಕರ್ತವ್ಯ ಮುಗದ ಮ್ಯಾಲ, ಆಸರಾದ ಕೈ, ನನ್ನ ಜೀವನದಾಗ, ಸ್ವರ್ಗನs ನಿರ್ಮಾಣ ಮಾಡೀತು. ಅದು ಆ ರೀತೀ ಮಾಡೀತನೂ ಧೈರ್ಯಾ ಅದs. ಆದರ ದಾದಲ್ಯಾ, ವಿಧೀಗೆ ಅನಿಸಿತು: ವಿಶ್ಯಾಗ ಒಂದೇ ಕೈ ಆಸರಾ ಸಾಕಾಗೂದಿಲ್ಲಂತ! ಹತ್ತೆಂಟು ವರ್ಷದಿಂದ ಏಕ ಪ್ರಕಾರಾಗಿ, ಅಗದೀ ಉರ್ಮಿಳಾನ ಹಾಂಗ. ಅಷ್ಟೇ ನಿಷ್ಠಾದಿಂದ, ವಿಶ್ಯಾನ ತೆಕ್ಕಿಗೆ, ತನ್ನ ತೋಳ-ಮಾಲೀ ಹಾಕಲಿಕ್ಕೆ ಉತಾವಿಳ ಆಗಿ ನಿಂತ ಒಂದ ಗಿರಾಕೀ ಕಳಿಸಿದಾ..."

"ವಿಶ್ಯಾ...... ವಿಶ್ಯಾ......"

"ಕೇಳ ದಾದಲ್ಯಾ, ಗಡಿಬಿಡಿ ಮಾಡಬ್ಯಾಡಾ. ತೋಳು ತೇಲಿ ಬಂದೂ. ಅಚಾನಕ ತೇಲಿ ಬಂದೂ. ಕನಸ-ಮನಸಿನ್ಯಾಗ ಸುದ್ದೇ ಇದ್ದಿದ್ದಿಲ್ಲಾ, ಹೀಂಗ ಬಂದಾವಂತs, ಇದೇ ಮೂರ್ತಕ್ಕ ಬಂದಾವಂತ. ರಾಮಾ-ಸೀತಾಗ, ಪಾಂಡವರಿಗೆ ಹದಿನಾಕ ವರ್ಷದ್ದು 'ರಿಗರಸ್ ಪನಿಶ್ಮೆಂಟ್' ಆಗಿತ್ತು. ವಿಶ್ಯಾನ ಗಿರಾಕಿಗೂ ಸುಮಸುಮಾರು ಅಷ್ಟೇ ವರ್ಷದ ವನವಾಸ ಭೋಗಸೂದಿತ್ತು. ನಡೀ ದಾದಲ್ಯಾ. ಮೂರು ಹೊಡೀಲಿಕ್ಕೆ ಬಂತು. ಅಷ್ಟ ಚಹಾ ಹಾಕಾಣು. ಗುಡೀಗೆ ಹೋಗದs ಗಿರಾಕೀ ದರ್ಶನ ಆಗೂ ಹಾಂಗ ಇಲ್ಲ ನಿನಗ. ಗುಡೀನೂ ಏನ ಧೂರಿಲ್ಲಾ. ಅಲ್ಲಿಗೆ ಹೋಗೂತನಕಾ, ಗಿರಾಕಿ ಗಂಟಬಿದ್ದ ರಸಾಳ ಕಥನ ಮಾಡತೀನಿ."

ನನ್ನ ಜೀವ ಮೊದಲೇ ತ್ರಸ್ತವಾಗಿತ್ತು. ವಿಶ್ವಾಸನ ಗುಂಭ ಮಾತಿನಿಂದ ಮತ್ತಿಷ್ಟು ಚಲವಿಚಲಿತವಾಯಿತು. ವಿಶ್ಯಾ ಏನೋ ಭಾನಗಡಿ ಮಾಡಿದ ವಾಸ ಸೂಸತೊಡಗಿತು. ಅವನ ತೆಕ್ಕೆಗೆ ಬಿದ್ದ ತೋಳಿನ ಅಸ್ಫುಟ ಕಲ್ಪನೆಯೂ ಮಿಂಚದಾಯಿತು. ವಿಶ್ಯಾ... ವಿಶ್ಯಾ... ವಿಶ್ಯಾನಿಗೆ ಕಾದು ನಿಂತ – ಅಖಂಡ ಹತ್ತು-ಹನ್ನೆರಡು ವರುಷ ಉರ್ಮಿಳಾ ತಪಸ್ವಿನಿಯಂತೆ ದಾರಿಕಾಯ್ದು ದೇವತೆ ಯಾರಿರಬೇಕು? ಯಾವ ಗುಡಿಯಲ್ಲಿರಬೇಕು? ಅದೂ ಮುಂಬಯಿಯ ಗುಡಿಯಲ್ಲಿ? ಛೇ, ವಿಶ್ಯಾ ಏನೋ ಹುಡುಗಾಟ ಮಾಡಿರಬೇಕು. ಆದರೆ ವಿಶ್ಯಾ 'ಪ್ರ್ಯಾಕ್ಟಿಕಲ್' ಆಗಿದ್ದೇನೆ – ಘನ ವ್ಯಾವಹಾರಿಕನಾಗಿದ್ದೇನೆ ಎಂದು ಹೇಳಿದ. ಅವನಲ್ಲಿ ಹುಡುಗಾಟ

ಇರುವದು ಶಕ್ಯವಿಲ್ಲ. ವಿಶ್ಯಾ 'ಪ್ರ್ಯಾಕ್ಟಿಕಲ್' ಆಗಿ ಯಾವ-ಯಾರ ತೋಳಿನ ಮಾಲೆಯನ್ನು ತನ್ನ ಕೊರಳಿಗೆ ಬಳಸಿಕೊಂಡಿರಬೇಕು? ಯಾರ ತೋಳಿಗೆ ಆ ಭಾಗ್ಯ ಕಣ್ಣು ತೆರೆದಿರಬೇಕು? ಭಾಗ್ಯ ತೆರೆಸಿಕೊಂಡ, ಈ ತೋಳಿನ ಕಲ್ಪನೆ ವಸೂನಿಗೆ ಇರಬಹುದೇ? ವಸೂನ-ಅವನ ಪರಿಚಯಕ್ಕೆ ಹತ್ತೆಂಟು ವರುಷದ ಸನಿಯಕ್ಕೆ ಬಂದಿದೆ. ಅಂದ ಮೇಲೆ ಈ ಗಿರಾಕಿ ವಸೂ ಅಂತೂ ಅಲ್ಲವೇ ಅಲ್ಲ. ಅದು ಖಚಿತ.

ವಿಶ್ಯಾನ ಜೀವನದಲ್ಲಿ ವಸೂನಿಗಿದ್ದ ಸ್ಥಾನ-ಮಾನದ ಪರಿಚಯು ನನಗಿತ್ತು. ಆ ಸ್ಥಾನವನ್ನು ಅನ್ಯ ವ್ಯಕ್ತಿ ಆಕ್ರಮಿಸುವದು, ವಸೂನ ಸರಿಸಮಾನವಾಗಿ ಕುಳಿತು ಕೊಳ್ಳುವದು ಕೇವಲ ಅಶಕ್ಯವಿತ್ತು. ಆದರೆ ವಿಶ್ಯಾ, ಯಾವ ತೋಳನ್ನು ತನ್ನ ಕೊರಳ ಮಾಲೆಯಾಗಿ ಮಾಡಿಕೊಂಡ? ವಸೂನ ಸರಿಸಮ ಗಿರಾಕಿ ಗಾಠಾಸಿದ? ಇಂದಿನ ಮಿತಿಗೂ, ವಿಶ್ಯಾ, ಆ ಗಿರಾಕಿಯ ಬಗ್ಗೆ ಚಕಾರ ಶಬ್ದವೆತ್ತಿರಲಿಲ್ಲ. ಅಂಥ ಗಿರಾಕಿಯು ಏಕಾಂತ ಧ್ಯಾಸವಿದ್ದ ಸುಳಿವೂ ನನಗೆ ಹತ್ತಿರಲಿಲ್ಲ. ವಿಶ್ಯಾ ಅದನ್ನು ಹತ್ತಿಸಿಗೊಟ್ಟಿರಲಿಲ್ಲ. ಗುಪ್ತ ಗಂಗೆಯಾದ ಶಾಲ್ಮಲಿ ಈಗ ಪ್ರಕಟವಾದ ಚಮತ್ಕಾರ ತೀರ ಚಿಂತನೀಯವಾಗಿತ್ತು.

ಸಾಹೇಬರಿಗೆ, ಶೋಮರೇಮಾಮಾನಿಗೆ ಖೋಕಾ ಅಂದಿದ್ದೆ. ಈಗ ನಾನೇ ಖೋಕಾ ಆಗಿದ್ದೆ. ಹವಾ ತುಂಬುವ ಎಲ್ಲಾ ದಾರಿ ಕಟ್ಟಾಗಿ, ಖಾಲೀ ಖೋಕಾ, ತೀರಾ ಪ್ಯಾಕ್-ಶೀಲ-ಬಂದ್ ಆಗಿತ್ತು.

"ಸುಮ್ಮನೇ ಯಾಕ ವಿಚಾರ ಮಾಡತೀ ದಾದಲ್ಯಾ? ನಿನ್ನ ವಿಚಾರಚಕ್ರಾ ಸುಂಟರಗಾಳೀ 'ಸ್ಪೀಡ್'ಲೇ ನಡದsದ ಅನ್ನೂದಕ್ಕ ನಿನ್ನ ಅವಲಕ್ಷಣ ಮೋತೀನs ಸಾಕ್ಷೀ! ನಾನೂ ಮಾರೀ ನೋಡಿ, ಜಾತಕಾ ಹೇಳತೀನಿ. ಹುಟ್ಟಿದಾಗಿನಿಂದೂ ನಿನ್ನ ಮೋತೀ ನೋಡಿಕೋತೇ ಬೆಳದೀನಿ. ನೀ ಅಂತೂ ಬಿಡು. ನಿನ್ನ ಪಿತಾಜಿ ಗೋವಿಂದ ಭಟ್ಟ ಸುದ್ದೇ ಗಜಮು ನಿಂತರೂ ಉರ್ಮಿಳಾನ ಕಲ್ಪನಾ ನಿನ್ನ ಹರವೀಯಂಥಾ ತಲ್ಯಾಗ ಮಿಂಚೂದಿಲ್ಲಾ. ನಾನೇ ದಂಗ ಆದೆ ದಾದಲ್ಯಾ. ಹತ್ತ-ಹನ್ನೆರಡ ವರ್ಷದ ಹಿಂದ ನಡದ ಘಟನಾ; ಅಂದ ಸಹಜಾಸಹಜೀ ಆಗಿ. ಒಗದ ಬೀಜಾ, ಗಿಡಾ ಆಗಿ, ನೂರ ಟೊಂಗೀ ಚಾಚಿ, ಹೂ-ಹಣ್ಣು ಬಿಟ್ಟಿರೂದ ನೋಡಿ ನಾನೇ ದಂಗ ಆದೆ! ಯಾಕ ಈ ಲೀಲಾ ನಡದಿರಬೇಕು? ದಾದಲ್ಯಾ. ಯಾರದು ಈ ಲೀಲಾ ನಡದಿರಬೇಕು. ಯಾಕs, ಯಾರದು ಅನೂದು ಅಗಮ್ಯ ಆತಂತ, ಏನೋ ಸಮಾಧಾನಕ್ಕ. ವಿಧೀ ಅಂತ ಅದಕ್ಕ ಹೆಸರ ಇಟ್ಟೆ. ಹೆಸರ ಇಡದೇ ಮನಸ್ಯಾಗ ಸಮಾ

ಧಾನನs ಇರೂದಿಲ್ಲಾ. ಮುಂದೀ ಸಮಾಧಾನಕ ಅಲ್ಲದಿದ್ದರೂ, ತನ್ನ ಸಮಾಧಾನಕರ್s ಅಂವಾ ಹೆಸರ ಇಡತಾನ.

ಹೋದ ವರ್ಷ ನಾ ದೀಪಾವಳೀಗೆ ಸಾಂಗಲೀಗೆ ಹೋದದ್ದು ನಿನಗ ಗೊತ್ತs ಅದs. ವಸೂ ಭಾಳ ಜೋರ ಮಾಡಿ ಪತ್ರಾ ಬರದಿದ್ದಳು ಅಂತ ಹೋಗಿದ್ದೆ. ಈ ಗಿರಾಕಿ ಗಂಟೂ ಬೀಳೂ ಮೂರ್ತಾ ಟಪಕಾಸಿಕೊಂಡು ಕೂತಿತ್ತು. ಉರ್ಮಿಳಾ ತಪಸ್ವಿನೀಗೆ ನಿಷ್ಕಾದ ಫಲಾ ದೊರಕೂ ಕಾಲಾ ಹಣ್ಣ ಆಗಿತ್ತು. ವಸೂನ ಪತ್ರಾ ಆ ಕೆಲಸಾ ಮಾಡಿತು. ಹಣ್ಣ ಕೈಗೆ ಬಂದಿತು. ನಿನ್ನ ವಿಶ್ಯಾ, ಚತುರ್ಭುಜ ಆಗೂದರ ಬದಲೀ ಷಟ್-ಭುಜ ಆದಾ."

## ಹನ್ನೆರಡು

### ವಿಶ್ವಾಸ-ಕಥಿತ, ದಾದಲ್ಯಾ-ಲಿಖಿತ ತುಳಸೀ ಪ್ರಕರಣ:

ರಾತ್ರಿಯ ಒಂಭತ್ತು-ಒಂಭತ್ತೂವರೆಗೆ ಮೊದಲಾದ ತಾನೂಬಾಯೀ ಸಾತಾರಕರ ಮೇಳದ 'ಗೋಕುಲಗಮನ' ತಮಾಶೆಯ ಆಟ ಹನ್ನೆರಡಕ್ಕೆ ಮುಗಿಯಿತು. ಹನ್ನೆರಡೂವರೀ ಗಂಟೆಯಿಂದ, ಇನ್ನು ಧೊಂಡೂಬಾಯೀ ತಾಸಗಾಂವಕರ ಮೇಳದ "ಗೋಕುಳೀಚಾ ರಾಜಾ" ಆಟ ಮೊದಲಾಗಲಿತ್ತು. ಎರಡೂ ಆಟದಲ್ಲಿ ಉತ್ತಮವೆಂದು ಪರಿಗಣಿತವಾದ ಆಟಕ್ಕೆ, ಬಾಗವಾನ-ಭಾಜೀಪಾಲಾ-ಸಂಘದವರ ಇನ್ನೂರು ರೂಪಾಯಿಯ ಬಹುಮಾನ, ಸೀರೆ-ಖಣದ ಆಹೇರಿ ಸಿಗಲಿತ್ತು. ಅದರಿಂದಾಗಿ, ಬಾಗವಾನರು, ಹಣ್ಣಿನವರು, ಭಾಜೀಪಾಲಾ ಪೇಟೆಗೆ ಹತ್ತಿ ಹೊಂದಿದ್ದ ಇತರ ವ್ಯವಹಾರಸ್ಥ ಮಂಡಳಿಯು, ಅನ್ಯ ಕಸಬಿನವರು ಬಳಿದು ಬಂದು ಮುಂದಿನ ಜಾಗದಲ್ಲಿ ಮಂಡಿಸಿದ್ದರು. ಲೌಕಿಕಾರ್ಥದಲ್ಲಿ ತಮಾಶೆ ನೋಡುವದು, ಮೈಲಿಗೆಯೆಂದರೂ, ನೋಟಕಾರ್ಥದಲ್ಲಿ ಮಡಿಯೆಂದು, ಕಣ್ಣ ಪಾರಣೆಯೆಂದು

ಭಾವಿಸಿದ 'ಹಾಯರ್‌-ಕ್ಲಾಸ್' ಪ್ರೇಕ್ಷಕರು 'ಲೋ-ಕ್ಲಾಸ್' ತಿಕೀಟು ಖರೀದಿ ಮಾಡಿ 'ಫ್ರಂಟ್ ಸೀಟಿ'ನ ಮಹಾಪ್ರಭುಗಳ ಹಿಂದೆ, ಬಾಕ-ಸೀಟಸ್ಥರಾಗಿ ಕುಳಿತಿದ್ದರು.

ಈ ಬಾಕ-ಸೀಟಿನವರ ಸಂಕಟ ದೇವರೇ ಬಲ್ಲ. ಇವರಲ್ಲಿ 'ಸಂಡೇ ಪ್ಲೀಡರ್ಸ್' ಇರುತ್ತಾರೆ. 'ಸೆಟರಡೇ ಡಾಕ್ಟರ್ಸ್' ಇರುತ್ತಾರೆ. ಕಂದಾಯ-ನ್ಯಾಯಖಾತೆಯಲ್ಲಿಯ ಸಣ್ಣ-ಪುಟ್ಟ ಅಧಿಕಾರೀ ಬ್ರುವರು ಇರುತ್ತಾರೆ. ಇವರ ಉಪಸ್ಥಿತಿಯನ್ನು ಸಹನ ಮಾಡಿಕೊಳ್ಳಬಹುದು. ಆದರೆ ಯಾರಿಗೂ ಬೇಡಾದ, ಯಾರೂ ಮಾತಾಡಿಸದಿದ್ದ 'ಸರ್ವೇ ಡಿಪಾರ್ಟಮೆಂಟಿ'ನವರೂ ಇರುತ್ತಾರೆ. ಇದೂ ಸಹ್ಯ ಬಾಬಿನಲ್ಲಿ ಬಂದೀತು. ಆದರೆ ತೀರ ಅಸಹ್ಯ-ಬಾಬಿನ ಗಿರಾಕಿಗಳು – ಅಂದರೆ ಅಗದೀ ನಾಲಾಯಖ್ ಪೇಶಾದ ಶಾ.ಮಾ.ಗಳೂ ಇರುತ್ತಾರೆ. ಇವರಿಗೂ ಅಂದು ಜೀವನದಲ್ಲಿ ರಸಿಕತೆ ಎಂಬ ಚೀಜ ಇದೆ; ಅದರ ಸಮ್ಯಗ್‌ದರ್ಶನ ಇಂದು ಘಟಿಸಲಿದೆ ಎಂಬ ಪ್ರಜ್ಞೆ ಜಾಗ್ರುತವಾಗಿರಬೇಕಾದರೆ ತಮಾಶಾ-ಮಾಹಾತ್ಮ್ಯ ಏನು – ಎಷ್ಟು "ರಸೋ ವೈ ಸಃ" ಆಗಿರಬೇಕು, ನೀವೇ ಊಹಿಸಿರಿ?

ದೀಪಾವಳಿಯ ಸೂಟಿಗೆ, ವಸೂನ ಪತ್ರಕ್ಕೆ ಏಕದಮ್ ಮಾನ್ಯತೆ ಕೊಟ್ಟು ಧಾವಿಸಿದ ವಿಶ್ಯಾ, ನರಕಚತುರ್ದಶಿಯ ದಿನ, ಪಂತಮಾಮಾ ಅವರಲ್ಲಿ, ಶಂಕರ ಕಾಕಾ ಅವರಲ್ಲಿ ಆರತಿ ಮಾಡಿಸಿಕೊಂಡು – ಇಲ್ಲಿ ಆರತಿ ಎತ್ತಿದಾಗ, ಬನೂಮಾಮಿ ಆರತಿಗೆ ಕೈ ಹಚ್ಚಿದ್ದರು – ಅಲ್ಲಿ ಪಾರ್ವತೀಕಾಕೂ ಕೈ ಹಚ್ಚಿದ್ದರು. 'ಕಾಮನ್ ಫ್ಯಾಕ್ಟರ್' ವಸೂ ಎರಡೂ ಕಡೆಗೆ ಮಾಡಿದ್ದೇ ಖರೇ ಆರತಿ, ಆ ಮಾತು ಬೇರೆ – ಎರಡೂ ಮನೆಯ ಫಳಾರ ಹೊಡೆದು, ದಸ್ತಗೀರ್‍ಯಾನ, ದಸ್ತಗೀರಭಾಯೀ, ರಸೂಲ್‌ಭಾಯೀ, ಅತ್ತಾರ – ಬೀಡೀ ಮರ್ಚಂಟ ಆ್ಯಂಡ್ ಕಮೀಶನ್ ಎಜಂಟ್, ಸಾಂಗಲಿ, ದಲಾಲಿ ಅಂಗಡಿಯಲ್ಲಿಯ, ಪರೀಟ ಘಡಿಯ ಅಬರಾ ಹಾಕಿದ ಲೋಡಿಗೆ ಆತುಕೊಂಡು, ವಿರಾಜಮಾನನಾಗಿದ್ದ ದಸ್ತಗೀರ್‍ಯಾ, ಗೆಳೆಯನ ಬಳಿಯಲ್ಲಿ ಕುಳಿತು ಕಿವಿಕಚ್ಚುವಂತೆ ಕುಜು-ಬುಜು ನಡೆಸಿದ್ದ.

"ವಿಶ್ಯಾ, ಕ್ಯಾ ಮಾಲ ಹೈ ಸಾಲಾ, ಒಮ್ಮೆ ನೋಡಿದರs ಸಾಕು. ಫೇರೀ ಬರಬೇಕ ಮಗನs ಕಣ್ಣಿಗೆ. ಮನ್ನೀ ಆಟಕ್ಕ ಸಾಂಗ್ಲೀ ಊರs ಬಳದ ಹೋಗಿತ್ತು. ನೀ ಬರಾಂವ ಇದ್ದೀಯಂತs ವಸೂ ಹೇಳಿದ್ಲು. ವಿಶ್ಯಾನ್ನ ಬಿಟ್ಟು ದಸ್ತಗೀರ್‍ಯಾ ಮಜಾ ಎಂದೂ ಲುಟಾಸಾಂವ ಅಲ್ಲಾ. ವಿಶ್ಯಾ ಬರ್ಲೀ, ಒಂದ ಬಿಟ್ಟ ನಾಕ ಆಟಾ ನೋಡೂಣು. ಜಮಾಸಿದರ, ಗೋಂದ್ಯಾ, ಪೀಂದ್ಯಾನ್ನ ಹಿಡದು, ಇಲ್ಲೇ ಒಂದ

'ಸ್ಪೆಶಲ್' ಆಟಾ ಹೊಡಸೋಣು ಅಂತ್ಸ ಠರಾಸಿಗೊಂಡಿದ್ದೆ. ದೋನಸೇ ಬಿಟ್ಟ, ಚಾರಸೇ ಹಾರಿದರೂ ಪರಕತ್ ಇಲ್ಲಾ. ಮಜಾ ಬರೂದು ಒಮ್ಮೆ. ಇಂಪ ಮಿರಜಿಗೆ ಹೋಗೂಣು. ನಮ್ಮ ದಾವಲ್‌ಸಾಬನ ಖಟರಾ ಅದ್ಸ ತಾಬೇದಾಗ. ಆಟಾ ನೋಡೀ, ಬೆಳಗಮುಂಜಾನೆ ತಿರಗಿ ಬರೂಣು. ಪಂತಮಾಮಾನ ಕಣ್ಣಿಗೆ ಇಂಗ ಹಚ್ಚಲಿಕ್ಕೆ ವ್ಯಾಳ್ಯಾ ಹಿಡ್ಯಾಂಗಿಲ್ಲಾ. ದಸ್ತಗೀರ್‍ಯಾನಲ್ಲೆ ಪಗಡೀ ಪ್ರೋಗ್ರ್ಯಾಂ ಅದ್ಸ ನಾ ಬಂದೀನ್ಯಂತ, ಎಲ್ಲಾರೂ ಕೂಡ್ಯಾರ್‍ಸ ಅಂತ ಹೇಳು. ನಿನ್ನ 'ಲಾರ್ಕ'ಂದ್ಸ ಅಂಜಿಕಿ. ವಸೂಗ ಹೇಳಿ ಇಡೂಣು. 'ಮಾಫ್ ಕರೋ ದೀದೀ ಆಬ್ ಏಕೀಚ ದಿನ್. ಸಲಾಮ್ ಹೈ ಆಪಕೂ' ಅಂತೀನೀ ನಾ. ಖುಷ್ ಆಗತಾಳ ಮಗನ್ಸ ನಿನ್ನ ಮೈನಾ. ನಾನು, ನೀನೂ, ಗೋಂದ್ಯಾ, ದಾತ್ಯಾ, ನಾಕ ಮಂದಿ ಹೋಗೂಣು. ದಾದಲ್ಯಾ ಚೋರೀಕೆ ಇದ್ದರ ಏನ ಶಿಸ್ತ ಆಗತಿತ್ತಂದೀ. ತಮಾಷಾದ ಮಜಾ ಅಂವಾ ಇದ್ದರೇನ್ಸ. ಪೂಜೀ ಮಾಡಿ ಪನ್ನಾಸ ರೂಪೈ ತಗೀತಿದ್ದಾ. ಅರಾಮು ಇದ್ದಾ. ಅದನ್ನ ಬಿಟ್ಟ ಮಗಾ, ನೌಕರೀ ಬೆನ್ನಹತ್ತಿದಾ. ನಾ ತಾರ ಕೊಟ್ಟ ಕರಸತಿದ್ದೆ. ಬರೂದಿಲ್ಲ್ಸ ಮಗಾ. ಅಲ್ಲೇನೋ ಸಂವೀ ಹತ್ತೇದ ಅಂವಗ್ಸ. ಅಂದರ ಠರಾಸಿಧಾಂಗ ವಿಶ್ಯಾ, ಬರೋ ಬರೀ ಸಾಡೇ ಆಠಕ್ಕ ಇಲ್ಲೀದು ಬಿಡೂಣು. ಮಂದ್ಯೆಲ್ಲಾ ಸಜ್ಜ ಕೂತ ಮ್ಯಾಲ್ಸ ಹೋಗೂಣು. ಮಿಜ್ಯಾ೯ಗ ಯಾರ ಹಿಡೀತಾರ ಬಿಡೂ ನಿನ್ನ ಗುರ್ತಾ. ವಿಶ್ಯಾ, ಮಜಾ ಮಾಡೂಣು ಅಂ್ಸ. ನೀ ನನ್ನ ಪಟಕಾ ಸುತ್ತಲೇ ಶಿಸ್ತ ಆಗೀ. ಕೋಲ್ಲಾ ಪೂರ ಸರದಾರನ್ಹಾಂಗ ಕಾಣಸ್ತೀ. ಪತ್ತೇನೂ ಹತ್ತೂದಿಲ್ಲಾ. ಗೋಂದ್ಯಾ, ದಾತ್ಯಾ ಅಂತೂ, ಸರದಾರೀ ಡ್ರೆಸ್ಸಿನ್ಯಾಗ್ಸ ಹೋಗಿ, ನಾಕ ಸಾರೇ ನೋಡಿ ಬಂದಾರ. ಯಾರಿಗ್ಯರ್‍ಸ ಪತ್ತೇ ಹತ್ತಿದ್ದರ ಆಣೇ."

"ದಸ್ತಗೀರ್‍ಯಾ, ರಾಧಾ ಆಗೂ ಹುಡಗಿನ್ನ್ಸ ನೀ ನೋಡೀ ಏನು? ಏನ ಬರೇ ಗೊಂದ್ಯಾ ಹೇಳೂದು ಕೇಳೀಯೋ? ಅಂವಾ ಸಂಸ್ಕೃತ ಪಂಡಿತ ಬ್ಯಾರೇ. ಬರೇ ಕುಚ-ತಟೀ ಅಂದ್ರೂ ಬೇಭಾನ ಆಗತಾನ."

"ನಾ ನೋಡಿಲ್ಲ ವಿಶ್ಯಾ. ಗೋಂದ್ಯಾ ಹೇಳ್ಯೇ ನನ್ನ ಬೇಭಾನ ಮಾಡ್ಯಾನ. ಯಾಕ ಸಂಕಟಾ ಸೂಳೇಮಗನ್ದು. ಇಂದ ಸಮುಕ್ಷಮ ನೋಡೇಬಿಡೂಣಲಾ. ಪೆಟ್ರೋಲಾ-ತಿಕೀಟಾ ಖರ್ಚ ಹಿಡದರೂ ಹತ್ತ ರೂಪಾಯ ಏನು ಹಾರೂದಿಲ್ಲಾ. ಜಾನೇ ದೋ. ದೀಪಾವಳೀ ನೆನಪಿನ್ಯಾಗರ್‍ಸ ಉಳೀತದ."

ಮುಂಜಾನೆಯೇ ಪ್ರೋಗ್ರಾಮ್ ಠರಾಸಿಗೊಂಡು, ವಿಶ್ಯಾ-ದಸ್ತಗೀರ್‍ಯಾ

ಆ್ಯಂಡ ಕೋ. ಸಾಂಗಲಿಯಿಂದ ಬಂದು, ತಮಾಷಾ ನಡೆಯುವ ಪಟಾಂಗಣದಲ್ಲಿ ನುಸುಳಿದ್ದರು. ಎರಡಾಣೆಯ ಹಾಯ್‌ಕ್ಲಾಸಿಗೆ ಇಳಿಯದೆ, ಎಂಟಾಣೆಯ ಲೋ ಕ್ಲಾಸಿಗೆ ಏರದೆ, ಆರಾಣೆಯ ಬಾಕಿನ ಮೇಲೆ, ಈ ಚೌಕಡೀ ವಿರಾಜಮಾನವಾಗಿತ್ತು.

ಎರಡನೇ ಆಟ ಇನ್ನೂ ಸುರುವಾಗಿರಲಿಲ್ಲ.

ರೇಲ್ವೇ ಇಂಜನ್ ಝುಕ್ಕಿಸುವ ಹಾಗೆ, ಬಾಯಿ-ಸೀಟಿ, ಟಿರ್-ಟಿರ್-ಟುರ್ ಟುರ್ ನಾದ, ಪಟಕಾ-ಶಮನಾ-ಟೆಪ್ಪಿಗೆಯ ತೂರಾಟ, ಟಾಳಿಯ ಕಡಕಡಾಟ, "ಓ ಮೇರೇ ರಾಜಾs" "ಓ ಮೇರೀ ರಾನೀ" ಸಾಥ-ಪ್ರತಿಸಾಥ ಮಾಡುವ ದ್ವಂದ್ವ-ಗೀತದ ಪಾಲುಪದ, ಅನಿರ್ಭಂಧ ಛಂದವಾಗಿ ಪಟಾಂಗಣದಲ್ಲಿ ದುಮುದುಮಿಸುತ್ತಿದ್ದವು. ನಾದ-ನಿನಾದ ಗಗನಭೇದಿಯಾಗಿತ್ತು. ರಸದ ಸೆಲೆ ಬತ್ತಿಲ್ಲವೆಂದು ತೋರಿಸುವ ಧರ್ತಿಯಲ್ಲಿ, 'ಫ್ರಂಟ್-ಸೀಟ' ಪ್ರೇಕ್ಷ-ಕಸಮೂಹ ತಾರತಮ್ಯದ ಸೀಮೋಲ್ಲಂಘನ ಮಾಡಿ ಏಕಕಂಠನಾದವನ್ನು ಉಗ್ಗಡಿಸುತ್ತಿತ್ತು. ನಡನಡುವೆ "ಚಾಯ್ ಗರಮ್"ದವರ ಬಾಯಿ-ಗರಮು ಗದಗಮಿಸುತ್ತಿತ್ತು.

ಸರಿಯಾಗಿ ಹನ್ನೆರಡೂವರೆ ಗಂಟೆಗೆ ಪಡದೆಯ ಹಿಂದೆ ಗಂಟೆ ಬಾರಿಸಿತು. ಮುಚ್ಚಿದ ತೋಳು ಬಿಚ್ಚಿದಂತೆ, ತೆರೆ ಇಬ್ಭಾಗವಾಗಿ ಮೇಲೇರಿತು.

ಧೋಂಡೂಬಾಯಿಯ ಠರಾವಿಕ ಮೇಳವನ್ನು ಕಂಡು, ಪ್ರೇಕ್ಷಕವೃಂದ ಹರ್ಷಭರಿತವಾಗಿ ಟಾಳಿಯ ಕಡಕಡಾಟ ಮಾಡಿತು.

ಡಪ್-ಸಾಥೀದಾರ ಜ್ಯೋತ್ಯಾ, ತುಂತುಣಿವಾದನಕಾರ ಸಖ್ಯಾ, ಕುಬ್ಜ-ಕನ್ನಯ್ಯ, ಬಜರಬಟ್ಟೂ ಕೃಷ್ಣ ಸ್ವಯಂ ಧೋಂಡೂಬಾಯಿ ಸಾಲುಗಟ್ಟಿ ನಿಂತಿದ್ದರು. ಅವರಿಂದ ಒಂದಡಿ ಮುಂದೆ, ಗುರುವಾರ ದತ್ತನಿಗೆ ಹಾಕುವಂತಹ ಒಂದಾಣೆಯ ಹಾರವನ್ನು ಹಿಡಿದುಕೊಂಡು, ಧೋಂಡೂಬಾಯಿಯ ಮೇಳದ ಮಕುಟಮಣಿ ತುಳಸಿ ನಿಂತಿದ್ದಳು.

ಹರೆ ಕಡೆದು ಬಂದಂತೆ – ಚೆಲುವು ಘನಿಸಿದಂತೆ, ಲಾವಣ್ಯಕ್ಕೆ ಅನ್ಯ ಠಿಕಾಣೆ ದೊರಕದೆ ಇಲ್ಲೇ ಆಶ್ರಯ ಹಿಡಿದಂತೆ, ತುಳಸಿ, ಇಪ್ಪತ್ತೆರಡು-ಇಪ್ಪತ್ತಮೂರರ ಮನೆಯಲ್ಲಿಯ ಚಿರವಿನೂತನ ಕನ್ಯೆ – ತುಳಸಿ, ಎಡಗೈಯನ್ನು ಸಿಂಹಕಟಿಯ ಮೇಲಿರಿಸಿ, ಬಲಗೈಗೆ ಹಾರ ಸುತ್ತಿಕೊಂಡು, ಬಾಗಿ ತೀರ ಅನಿತ ವಾಲಿದಂತೆ ಬಾಗಿ ಕುರ್ನೀಸಾತ ಒಪ್ಪಿಸಿದಾಗ, ಪ್ರೇಕ್ಷಕರ ಚಿತ್ತ ಹರ್ಷಪುಲಕಿತವಾಗಿ ಚೀತ್ಕರಿಸಿತು. ಒಂದು ಕಡೆಯಿಂದ ದಸ್ತಗೀರ್ಯಾ, ಇನ್ನೊಂದು ಕಡೆಯಿಂದ ಗೋಂದ್ಯಾ, ವಿಶ್ಯಾನ

ಪಕ್ಕಡಿ ತಿವಿದರು. ಖೂಬ ಸೂರತ ಮಾಲು, ಸ್ವರ್ಗದಿಂದ ಕೇವಲ ಇವರಿಗಾಗಿಯೇ ಇಳಿದು ಬಂದ ಹುಕಿಯಿಂದ ಬೇಭಾನರಾಗಿದ್ದರು. ದಾತ್ಯಾ, ಹೊಟ್ಟೆಯಲ್ಲಿಯ ಖುಷಿ, ಕೈ ಬಾಯಿ ತುಟಿ ಮೀರಿದ್ದರ ಸಾಕ್ಷಿ ಸಾರುವಂತೆ, ಅಚಾನಕವಾಗಿ —

"ವಿಶ್ಯಾ, ತುಳಸ್ಯೋ ತುಳಸೀ !"

ಎಂದು ಒದರಿ – ಆಜೂ-ಬಾಜೂದವರಿಂದ 'ಹೇ-ಹುಶ್' ಅನ್ನಿಸಿಕೊಂಡ.

ತುಳಸಿ ಭರಜರೀ ಶಾಲೂ ಉಟ್ಟಿದ್ದಳು. ನಿತಂಬದ ವರೆಗೂ ಇಳಿಬಿದ್ದು ನಲಿಯುತ್ತಿದ್ದ ನಾಗವೇಣಿಯಲ್ಲಿ ಮಲ್ಲಿಗೆಯ ಗುಚ್ಛ ಮುಡಿದಿದ್ದಳು. ಮೂಗಿನಲ್ಲಿ ಮಿನುಗುತ್ತಿದ್ದ ಮೂಗುಬೊಟ್ಟು, ಕಿವಿಯಲ್ಲಿಯ ದೊಡ್ಡ ಮುತ್ತಿನ ಬೆಂಡೋಲೆ, ದೀಪದ ಬೆಳಕಿನಲ್ಲಿ ಮಿರಿಮಿರಿ ಮಿಂಚಿ, ಗಲ್ಲದರಪಿಣದಲ್ಲಿ ಮಿರುಗುವ ಹಚ್ಚೀ ಬಟ್ಟಿನ ಹರಿದ್ವರ್ಣದ ಟಿಕಳಿಯೊಡನೆ ಸ್ಪರ್ಧಿಸುತ್ತಿದ್ದವು. ಚಂದ್ರಕೋರ ತಿಲಕ ವಿಶಾಲ ಫಾಲದಲ್ಲಿ ವಿರಾಜಮಾನವಾಗಿತ್ತು. ಬಟ್ಟಗಣ್ಣಿನಲ್ಲಿ, ನಂದಾದೀಪದ ಶಾಂತ-ಪ್ರಶಾಂತ-ಪ್ರಸನ್ನ-ತೇಜ ದೇದೀಪ್ಯಮಾನವಾಗಿ ಬೆಳಗುತ್ತಿತ್ತು.

ಮೇಳದವರಿಂದ ಅನತಿ ಮುಂದೆ ಸರಿದು ತುಳಸಿ ವಾಮಪಾದವೆತ್ತಿ, ಕಾಲ್ಗೆಜ್ಜೆಯ ಕಿಣಕಿಣ ಖುಳ-ಖುಳ ನಿನಾದ ಮಾಡಿದಳು. ಜೀ-ಜೀ, ಸಾಥೀದಾರ, "ಆಂs ಹಾಂs" ಎಂದ. ಜ್ಯೋತ್ಯಾ ಡಪ್ಪಿನ ಮೇಲೆ ಮೃದುವಾಗಿ ಮಾಧ್ಯಮಿ ಕಾಂಗುಲಿ ನಡೆಸಿದ. ಸಖ್ಯಾ ತುಂತುಣಿಯ ಟಿಂವ್ ಟಿಂವ್ ಮಾಡಿದ.

ನಾಂದೀಪದ ಮೊದಲಾಗಲಿತ್ತು. ಪ್ರೇಕ್ಷಕವೃಂದದ ಪ್ರಥಮ ಸಾಲಿನಲ್ಲಿ ಪ್ರತಿಷ್ಠಿತವಾದ ರಸಿಕವೃಂದ ಕೂಗಿತು:

"ಠೈರೋ"

ಈ ಠೈರೋ ಪಟಾಲಂದ ಮುಂದಾಳು ಬಾಗವಾನರ ಗೌಸ್ಯಾ, ಅನಭಿಷಿಕ್ತ ಸಾಮ್ರಾಟನಂತೆ, ಕೈಯಲ್ಲಿ ಒಂದು ದೊಡ್ಡ ಹೂವಿನ ಹಾರ ಹಿಡಿದುಕೊಂಡು, ರಂಗದ ಮೇಲೆ ನೆಗೆದು ಬಂದ.

ಅಷ್ಟು ಹೆಚ್ಚಲ್ಲ – ಇಷ್ಟು ಕಡಿಮೆಯಲ್ಲ ಎನ್ನುವ ರೀತಿಯಲ್ಲಿ, ಗೌಸ್ಯಾ, ವಾಲಿಸಿ, ತಲೆಗೆ ಫೆಜ್-ಕ್ಯಾಪ ಇಟ್ಟುಕೊಂಡಿದ್ದ. ಅದರ ಕರಿಯ ಗೊಂಡೆ ದಿಮಾಖಿ ನಿಂದ ಡೋಲಾಯಮಾನವಾಗುತ್ತಿತ್ತು. ಕಿವಿಯಲ್ಲಿಯ ಕುಣಿಕೆಯಲ್ಲಿ ದಿಲ್ ಬಹಾರ್ ಅತ್ತರಿನಲ್ಲಿ ಅದ್ದಿ ತೆಗೆದ ಅರಳೆಯ ಗುಂಡು ಶಾಬೂತಾಗಿ ಕುಳಿತಿದ್ದವು. ಸರ್ಜ-ಕೋಟಿನ ಮೇಲಿನ ಕಿಸೆಯಲ್ಲಿ, ಅರ್ಧ ಅವಿತು, ಅರ್ಧ ಹೊರಗೆ ಪಣಿಕಿ

ಹಾಕಿದ ಚೈನಾ ಶಿಲ್ಕಿನ, ಭಡಕು-ರಂಗಿನ ಹಸಿರು ಕರವಸ್ತ್ರ, ಕೋಟಿಗೆ ಚುಚ್ಚಿಕೊಂಡ ಗುಲಾಬಿಯ ಹೂವಿಗೆ ಗಲ್ಲಗಲ್ಲ ಹಚ್ಚಿ ಉಲುಕೋಚಿ ಸಲಿಗೆಯಲ್ಲಿ ಸುಳಿಯುತ್ತಿತ್ತು.

ಗೌಸ್ಯಾ ಆಟದ ಮುಖ್ಯ ಪಾತ್ರಧಾರಿಣಿಗೆ – ತುಳಸಿಗೆ ಹಾರ ಸಮರ್ಪಿಸಿದ ನಂತರ ಆಟ ಸುರುವಾಗಬೇಕು. ಬಟಮೋಗರಾದ, ಓಡಿಯಳತೆಯ ಗಾತ್ರದ ಹಾರ ದಲ್ಲಿ, ನಾಲ್ಕಾರು ಕಡೆಗೆ ಗುಲಾಬಿ, ಮರುಗ, ದವನ. ಅಬರಂಗದ ರಂಗುರಂಗಿನ ಕಾಗದ ಕೋದದ್ದರಿಂದ ಹಾರ ಕಮನೀಯವಾಗಿಯೇ ಆಗಿತ್ತು. ಬಲದ ಮುಂಗೈಯಲ್ಲಿ ಹಾರಭೂಷಿತನಾಗಿ ಬಂದ ಗೌಸ್ಯಾ, ಲೈಲಾನನ್ನು ಸಂಧಿಸ ಬಂದ ಮಜನೂನ ನಂತೆ ಕಾಣಿಸುವ ಆವಿರ್ಭಾವ ತೋರಿಸುತ್ತಿದ್ದ. 'ಹಮಾರೇ ಬಗೀಚೇಮೇ ಪೈದಾ ಹುವೇ' ಎನ್ನುವ ರೀತಿಯಲ್ಲಿ, ತುಳಸಿ ಅವನಿಗೆ ಗಂಧರ್ವಕನ್ಯೆಯಾಗಿ ಕಾಣುತ್ತಿರಬೇಕು. ಅರ್ಜುನ ಸುಭದ್ರೆಯನ್ನು, ಪೃಥ್ವೀರಾಜ, ಸಂಯುಕ್ತೆಯನ್ನು ಹಾರಿಸಿಕೊಂಡು ಹೋಗುವಾಗ ಕೂಡ ಇಷ್ಟು ಆಢ್ಯತೆಯ. ಅಧಿಕಾರದ ಗಮಜನ್ನು ತೋರಿಸಿರಲಿಕ್ಕಿಲ್ಲ. ಆದರೆ ಗೌಸ್ಯಾನಲ್ಲಿ ತುಳಸಿ, ಮಜನೂ-ಅರ್ಜುನ-ಪೃಥ್ವೀರಾಜರನ್ನು ಪ್ರಜ್ವಲಿಸಿದ್ದಳು.

ಈ ಹಾರ-ಪ್ರಕರಣ ಉಳಿದ ತಮಾಷಗಾರರಲ್ಲಿ ಅಷ್ಟು ವಿಶೇಷ ಲಕ್ಷಿತ ವಾಬಲ್ಲ. ಅವರು ಅದಕ್ಕೆ ಇಲ್ಲದ ಮಹತ್ವವನ್ನೂ ಕೊಡುವದಿಲ್ಲ. ಹಾರ-ಧಾರಣೆಗೆ ಸಮ್ಮತಿಸಿ ಜನಾನುರಾಗವನ್ನು ಆಟದ ಮೊದಲೇ ಸಂಪಾದಿಸುತ್ತಾರೆ.

ಆದರೆ ಧೋಂಡೂಬಾಯಿ ಎಂದಿಗೂ ಇದಕ್ಕೆ ಅಪವಾದ. ಕಳೆದ ಮೂವತ್ತು ಮೂವತ್ತೈದು ವರುಷಗಳಿಂದ ಅವಳು ರಂಗನಾಯಕಿಯಾಗಿ ಕುಣಿದಿದ್ದಾಳೆ. ಈಗ ಹತ್ತು-ಹದಿನೈದು ವರುಷಗಳಿಂದ ಮಗಳನ್ನು ಕುಣಿಸುತ್ತಿದ್ದಾಳೆ. ಆದರೆ ಯಾರಿಂದಲೂ ಹಾರ ಹಾಕಿಸಿಕೊಂಡಿಲ್ಲ. ಈರ್ಷೆಗೆ ಬಿದ್ದೇ ಗೌಸ್ಯಾ, ನೂರಾರು ರೂಪಾಯಿ ಹಾರಿಸಿ, ಆಟವಿಡಿಸಿ, ಖಾಸ್ ತುಳಸಿಗೆಂದು ಹಾರ-ಸಮರ್ಪಣೆಯ ಕಣಕ್ಕಿಳಿದಿದ್ದ. ಅವನಿಗೆ ಜನಬೆಂಬಲವೂ ಇತ್ತು.

ಈ ಹಾರ-ಸಮರ್ಪಣೆಯಲ್ಲಿ ಒಂದಿಷ್ಟು ಆಂಬಟಶೋಕೀ ಸುಖವಿದೆ. ರಾಧಾ ಪಾತ್ರಧಾರಣೆ ಮಾಡುವ ಇಸಮು ಹುಡುಗಿ ಇದ್ದು, ಚೀಜ ಮಾಲಾಗಿ, ದೇಖಣೀ, ಖೂಬಸೂರತ್ತ ಆಸಾಮಿ ಇದ್ದರಂತೂ ತೀರಿತು, ಹಾರ-ಸಮರ್ಪಕನ ಕಿಸೆಗೆ ಕತ್ತರಿ ಹತ್ತುತ್ತದೆ. ಅವನು ಹಾರ ಹಾಕಿ, ಅಂಗಸ್ಪರ್ಶ, ಎಲ್ಲಿ ಇನ್ನಾತರದೋ ಸ್ಪರ್ಶ

ಮಾಡಿದೆನೆಂಬ, ಅದರ ಘನ ಸುಖ ಅನುಭೋಗಿಸಿದೆನೆಂಬ ಭ್ರಾಂತಿ-ವಿಲಾಸವಲ್ಲಿರುತ್ತಾನೆ. ಅವನೂ ನೇಟ ಕುಳವಾಗಿದ್ದರೆ, ಮೇಳದ ಒಡತಿಯ ನಕಾರ ಬರದಿದ್ದರೆ, ಆಟದಲ್ಲಿಯ ಈ ರಾಧಾ, ಆಟದ ಹೊರಗಿನ ಈ ಕೃಷ್ಣ. ಖೇಲ್-ಖಲಾಸಾದ ಮೇಲೆ. ಏಕಾಂತವಾಗಿ ಜಮಾಸಿಕೊಳ್ಳುತ್ತಾರೆ. ಇಂಥ ಅರ್ಥಪ್ರಾಪ್ತಿಯ ಅರ್ಧ ಪಿಸೆಯಲ್ಲಿ ಮೇಳದ ಒಡತಿಯ ಪಾಲಿರುತ್ತದೆ. ಹಲಕೆಲವು ಜರಠ ಕೃಷ್ಣರು, ಮೇಳದ ಹುಡಿಗಿ, ರಾಧಾವೇಷಭೂಷಣದಲ್ಲಿಯೇ ಅನುನಯಿಸಬೇಕೆಂಬ ಹಟ ಹಿಡಿಯುತ್ತಾರೆ. "ಖಾಸ್-ಖೇಳ" ಮಾಡಿಸಿ, ರಸಿಕತೆಯ ಅತಿರಂಜಕ ಸ್ವರ್ಗ-ಭೋಗ ಪಡೆದೆವೆಂದು, 'ಟ್ಯಾಂ' ಹೊಡೆಯುತ್ತಾರೆ. ರಂಗೀಲ್ ರಾಜಾ ಕೃಷ್ಣ– ರಂಗರಾಣಿ ರಾಧಾನ ಈ ಖ್ಯಾಲಿಯ ಕೂಡಿಕೆ ಏಕಾಂತದಲ್ಲಿ ಜಮಾಸಿದರೂ ಅದರ ವಾಸ ಲೋಕಾಂತವಾಗಿರುತ್ತದೆ. ಈ ಬೋಣಗೀ-ವ್ಯವಹಾರವನ್ನು ಎಲ್ಲ ಮೇಳದವರೂ ಮಾಡುತ್ತಾರೆಂದಲ್ಲ. ಅದರಲ್ಲಿಯೂ ಪಂಕ್ತಿಪ್ರಪಂಚ, ಸ್ಥಾನಮಾನದ ಪರ್ಯಾಯ ಇದ್ದೇ ಇದೆ.

ತುಳಸಿಯ ಅಪ್ರತಿಮ ಚೆಲುವಿಗೆ ಮಾರುಹೋದ ಗೌಸ್ಯಾ, ಒಂದು ಹಸಿರು ಕಾಗದ ಹಾರಿಸುವ ಇರಾದೆಯಿಂದಲೇ ಬಂದಿದ್ದ. ಐದೋ-ಹತ್ತೋ ಹಾರಕ್ಕೇ ಬಡಿದಿದ್ದ. ಹತ್ತಿಪ್ಪತ್ತು ಅನ್ಯ ಶೋಕಿಗೆ ನೀರು ಬಿಟ್ಟಿದ್ದ. ತುಳಸಿಯ ಸಹವಾಸದಲ್ಲಿ ಏಕ ದಿನಕಾ ಸುಲ್ತಾನ್ ಪದದ ರಮ್ಯಚಿತ್ರ ರೇಖಿಸಿಕೊಂಡಿದ್ದ.

ಧೋಂಡೂಬಾಯಿ ಹತ್ತೂರಿನ ನೀರು ಮುಕ್ಕಳಿಸಿದಾಕೆ. ಮುಂಬೈ. ಸೋಲಾಪುರ, ಕೊಲ್ಹಾಪೂರದಂಥ ಗುಂಡಾ ಜನವಸತಿಯಲ್ಲಿ, ಆಟವಾಡಿ ಗೆದ್ದು ಬಂದಾಕೆ. ಗೌಸ್ಯಾ ಅವಳಿಗೆ ಯಾವ ಗಿಡದ ತೊಪ್ಪಲು. ಅವಳು ಸವಿನಯವಾಗಿ ಹೇಳಿದಳು:

"ಸಾಹೇಬ. ಆ ಹಾರಾ. ನನ್ನ ಕೈಯ್ಯಾಗ ತರ್ರಿ. ನಾ ರಾಧಾಗ ಹಾಕತೀನಿ. ಮುಂದಿ ಹಾರಾ ಹಾಕೂ ಪದ್ಧತ ನಮ್ಮಲ್ಲಿ ಚಾಲ್ತೀ ಇಲ್ಲಾ."

"ಈ ಊರಾಗ ಅದು ಚಾಲ್ತೀ ಅದs. ಇಲ್ಲೆ ಆಟಾ ಆಡತೀರಿ. ನಾವು ಆಟಾ ಮಾಡಿಸೇವು. ನಾ ಹಾರಾ ಹಾಕಾವನs. ಬೇಕಾರ ಮುಂದಿ ಏನಂತಾರ ಕೇಳು"
ಗೌಸ್ಯಾ ಗಮಜಿನಿಂದ ಉತ್ತರಿಸಿದ.

"ಮುಂದಿನ್ನ ಕೇಳೂ ಜರೂರೀನs ಇಲ್ಲಾ. ನಾ ಪದ್ಧತ ಮುರ್ಯಾಕ್ಕಲ್ಲಾ." ತುಳಸಿಯನ್ನು ಹಿಂದೆ ಸರಿಸಿ. ಧೊಂಡೂಬಾಯಿ ಮುಂದೆ ಜನಸಮ್ಮುಖಕ್ಕೆ ಬಂದು. ಕೈ ಜೋಡಿಸಿ —

"ನಾ ಮೂವತ್ತ ವರ್ಸ ಲಾಗಾಯ್ತು ಆಟಾ ಆಡತೀನಿ. ಈ ಊರಾಗೂ ಓಂದಕ ಆಟಾ ಮಾಡೀನಿ. ರಾಜೇ-ಮಾರಾಜರ ಮುಂದ ಆಟಾ ಆಡಿ ತೋರಿಸೀನಿ. ಯಾರೂ ಹಾರಾ ಹಾಕೂ ಹಟಾ ಮಾಡಲಿಲ್ಲ. ಹಾರಾ ಹಾಕೂದು, ಈ ಊರ ಪದ್ಧತೀನೂ ಅಲ್ಲಾ. ಬಾಜಾರ ಬಸವ್ಯಾರು, ಜವಲೀ-ಪಾವಲೀ ಆಟದವರು ಹಾಂಗ ಹಾರಾ ಹಾಕಿಸಿಗೋತಿರಬೇಕು. ಅದು ನಮಗ ಜಮಾಸೂದಿಲ್ಲಾ. ನಿಮಗ ನನ್ನ ಆಟಾ ನೋಡಬೇಕನಿಸಿದರ ಆಡತೀನಿ. ಆದರ ಹಾರಾ ಹಾಕಿಸಿಗೊಂಬೂದಿಲ್ಲಾ. ತಮಾಮ್ ಮಿರಜಕರ ಮಂಡಳೀ ಜಮಾಸೀರಿ. ನಿಮಗ ಆಟ ಬೇಕಾಗಿದ್ರ ಹೇಳ್ರೀ. ಆಟ ಬ್ಯಾಡಾ ಅನ್ನರೀ – ಅದಕೂ ನನ್ನ ತಯಾರೀ ಅದs. ದೋನಸೇ ರೂಪಾಯದ ಆಶಾಕ್ಕs ನಾ ಪದ್ಧತ ಮುರ್ಯಾಕ್ಯಲ್ಲಾ."

ಧೋಂಡೂಬಾಯಿಯ ಮಾತಿನಿಂದ ಜನಸಮುದಾಯದ ಅಭಿಪ್ರಾಯದಲ್ಲಿ ದ್ವಿಧಾಭಾವ ಮೂಡಿತು.

"ಗೌಸ್ಯಾ ಹಾರಾ ಹಾಕಲೇ. ಹಂಗs ಬಂದ್ಯಂದ್ರ ನೋಡು."

"ಖಾಮೋಷ್. ಹಾರಾ ಹಾಕೂದ ಬ್ಯಾಡಾ. ಆಟ ಸುರೂ ಆಗಲಿ."

ಯಾರು ಏನು ಒದರುತ್ತಾರೆನ್ನುವದು ತಿಳಿಯುವಂತಿರಲಿಲ್ಲ.

ಗೌಸ್ಯಾ ಏನಕೇನ ಕಾರಣೇನ ತುಳಸಿಯ ಲಗಟವಾದರೆ ಸಾಕೆನ್ನುವ ಬೇತಿನಲ್ಲಿದ್ದ. ಹಾರ ಹಾಕದೆ, ರಂಗ ಬಿಟ್ಟಿಳಿಯಬೇಡವೆಂದು ಕೂಗಿ, ತನ್ನ ಬೆನ್ನಿಗಿದ್ದು ಬಲ ತೋರಿಸುವ ಜನಜಂಗುಳಿಯ ಕೂಗು ಕೇಳಿದ್ದ. ಅವನಿಗೂ ಧೈರ್ಯ ಬಂದಿತು. ಒಂದೆರಡು ಹೆಜ್ಜೆ ಮುಂದೆ ಸರಿದು, ಅವನು ತುಳಸಿಯ ಬಳಿ ಸಾರಿದ. ತುಳಸಿ ಒಂದಿಷ್ಟು ಹಿಂದೆ ಸರಿದಳು. ಗದ್ದಲ ಸತ್ತಿತು. ಜನ, ಈ ಹಾರ-ಪ್ರಸಂಗದ ಪರಿಣಾಮ ಪ್ರತೀಕ್ಷೆಯಲ್ಲಿತ್ತು.

ಗೌಸ್ಯಾ ಇನ್ನಿಷ್ಟು ಮುಂದೆ ಸರಿಯುವವ —

ಮಿಂಚಿನ ವೇಗದಲ್ಲಿ ವಿಶ್ಯಾ ರಂಗದ ಮೇಲೆ ಮಿಂಚಿ ಬಂದ. ಅಚಾನಕವಾಗಿ ಅವತರಿಸಿದ ಈ ಅಡದಾಂಡ – ಆಜಾನುಬಾಹು ವ್ಯಕ್ತಿಯನ್ನು, ಅವನ ಕೋಲ್ಹಾಪುರೀ ಧರ್ತಿಯ ಗುಲಾಬೀ ವರ್ಣದ ಪೇಟಾದ, ಸುರವರದ, ವೂಲನ್‌ಕೋಟಿನ ಆಕೃತಿಯನ್ನು ನೋಡಿ, ಇವನು ಯಾರ ನೆರವಿಗೆ ಬಂದನೆಂಬುದು ಯಾರಿಗೂ ಹೊಳೆಯಲಿಲ್ಲ.

ಗೌಸ್ಯಾನ ಹೆಗಲ ಮೇಲೆ ಕೈ ಹಾಕಿ, ವಿಶ್ಯಾ ಹೇಳಿದ:

“ದೋಸ್ತ, ಆಟದ ರಂಗ ಕೆಡಿಸಬ್ಯಾಡಾ. ಹಾರಾ ಸಖ್ಯಾಗ ಹಾಕು. ಬೇಕಾರ ಕೃಷ್ಣಗ ಹಾಕು. ನಿನ್ನ ಹಟಾ ನಡಸಬ್ಯಾಡಾ.”

ಗೌಸ್ಯಾನೂ ವಸ್ತಾದ. ಅವನ ಈರ್ಷೆಗೆ ಆಗಲೇ ಎಸರು ಬಂದಿತ್ತು.

“ನೀ ಯಾರೋ ಹೇಳಾಂವಾ ಗೋಮಾಜೀ. ತುಳಸಿನ್ನ ಏನ ಗುತ್ತಿಗಿ ತಗೊಂಥವರ್ಧಾಂಗ ಮಾತಾಡ್ತ್ಯಲಾ.”

ವಿಶ್ವಾಸನ ಕೈಯನ್ನು ಹೆಗಲ ಮೇಲಿಂದ ಕಿತ್ತೊಗೆಯುತ್ತ ಗೌಸ್ಯಾ ವದಿಸಿದ.

“ಶಬಾಸ್ ಪಟ್ಟೇ!”

ಎಂಬ ಕೂಗು ಕೇಳಿ ಬಂದಿತು.

“ಮುಕಾಟ್ಲೇ ಹೋಗಿ ಜಾಗಾದ ಮ್ಯಾಲಾ ಏನ ಕೂಡಾಂವೋ......”

ವಿಶ್ವಾಸನ ಮಾತು ಇನ್ನೂ ಮುಗಿದಿರಲಿಲ್ಲ – ಗೌಸ್ಯಾ ಅವನನ್ನು ಅರ್ಧದಲ್ಲಿಯೇ ತಡೆಯುತ್ತ ಹೇಳಿದ :

“ಅರೇ ಗೊತ್ತ ಅದs ಹೋಗೋ ನಿನ್ನ ದಿಮಾಕು. ಸಖ್ಯಾಗ ಹಾರಾ ಹಾಕೂ ಓಜಡ್ಯಾ. ನಿನ್ನ ಗಂಡಸ್ತನಾ ತೋರಸಬ್ಯಾಡಾ ನನ್ನ ಮುಂದs. ಗೌಸ್ಯಾನ ಕೈ ಗೊತ್ತ ಇದ್ಧಾಂಗ ಕಾಣೂದಿಲ್ಲಾ.”

ವಿಶ್ವಾಸ ಬೆಂಕಿಯಾದ. ಗೌಸ್ಯಾನ ಕೈಯಲ್ಲಿಯ ಹಾರವನ್ನು ಹಿಡಿದು, ಚೂರುಚೂರು ಮಾಡಿ ಚಲ್ಲಿದ. ಗೌಸ್ಯಾನನ್ನು ಅನಾಮತ್ತಾಗಿ ತಲೆ ಎತ್ತರಕ್ಕೆ ಎತ್ತಿ, ಪ್ರೇಕ್ಷಕ-ವೃಂದದ ದೊಡ್ಡ ಪರಿಸೆಯಲ್ಲಿ ಹಾಲೀ-ಬಾಲಿನ ಚೆಂಡನ್ನು ಭರಕಾಸುವಂತೆ ತೂರಿದ. ಗೌಸ್ಯಾ ಚಿತ್-ಪಟ್ಟಾಗಿ ಎಲ್ಲಿ ಬಿದ್ದನೋ ಯಾರಿಗೂ ತಿಳಿಯಲಿಲ್ಲ.

“ಹೋ” ಎಂದು ಕಿರಿಚಿ ಜನಸ್ತೋಮವೆದ್ದಿತು. ಪರದೆ ಕೆಳಗೆ ಬಿತ್ತು. ವಿಶ್ವಾಸ ಪರದೆಯ ಒಳಗೆ ಇನ್ನೂ ರಂಗಪೀಠದಲ್ಲಿದ್ದ. ವಿಶ್ಯಾನಿಗೆ ಬಂದ ಸಂಕಟವನ್ನು ಊಹಿಸಿ, ದಸ್ತಗೀರ್‍ಯಾ ಆ್ಯಂಡ ಕೋ. ರಂಗದ ಕಡೆಗೆ ಧಾವಿಸಿತು.

ಹೊರಗೆ ಭೀಮಭಯಂಕರ ಕೂಗಾಟ ಕಿರಿಚಾಟ ನಡೆದಿತ್ತು. ಪೋಲೀಸರ ಸೀಟಿ ಕೇಳುತ್ತಿತ್ತು. ಗ್ಯಾಸ್‌ಬತ್ತಿಗೆ ಲಾಠಿಯ ಏಟು ಬಿದ್ದು ಅವು ಗತಪ್ರಾಣವಾಗ ತೊಡಗಿದ್ದವು. ಮುಚ್ಚಿದ ಪಡದೆಗೆ ಒಂದೆರಡು ಕಲ್ಲು ಬಂದು ಅಪ್ಪಳಿಸಿದವು. ಅಂತಿಮ ಪರಿಣಾಮವನ್ನು ಊಹಿಸಿ ಧೋಂಡೂಬಾಯಿ, ಗಡಿಬಿಡಿಯಿಂದ, ತುಳಸಿ-ವಿಶ್ವಾಸರನ್ನು ಕೈ ಹಿಡಿದು ಜಗ್ಗಿಕೊಂಡೇ ರಂಗದ ತೀರ ಹಿಂಬದಿಯ ಜಾಗಕ್ಕೆ ಹೋದಳು. ಅವಳ ಟ್ರಕ್-ಚಾಲಕ ರಘೂ ಬೆನ್ನಿಗೇ ಬಂದ.

"ರಘೂಬಾ, ಜಲ್ದೀಮಾಡು, ಇವರ್ನ ಗಡಾ ಮನೀಗೆ ಪೋಸ್ತೀ ಮಾಡಿ ಬಾ. ಇಲ್ಲೀದು ಠೀಕ ಕಾಣೂದಿಲ್ಲಾ. ಜನಾ ಖವಳಾಸೇದ. ಜೀವಕ್ಕs ಧೋಕಾ. ಎಲ್ಲಾ ಮೋಡ-ತೋಡ ನಡಸ್ಯಾರs. ಲಗೂನs ಥಾಂಬಣೀ ಆಗ್ತಾಂಗ ಕಾಣಸೂದಿಲ್ಲಾ. ಹೂಂ ಗಾಡೀ ಇಸ್ಟಾರ್ಟ ಮಾಡು. ಇವರ್ನ ಬಿಟ್ಟು ನೀ ಜಲ್ದೀ ತಿರಗಿ ಬಾ. ಹೂಂ. ಬಿಡೂ ಗಾಡೀ."

ವಿಶ್ವಾಸ-ತುಳಸಿಯರನ್ನು ಫ್ರಂಟ್‌ಸೀಟಿನಲ್ಲಿ ತುರುಕಿ ಕೂಡಿಸಿ ಧೋಂಡೂಬಾಯಿ ಹೇಳಿದಳು.

ಹದಿನೆಂಟನೆಯ ಶತಮಾನದ ಆದಿ ಮಾಡೆಲ್ ಟ್ರಕ್ ಟರ್... ಘರ್... ಟರರ ಶಬ್ದ ಮಾಡುತ್ತ ಕತ್ತಲೆಯನ್ನು ಕೊರೆದು ಹೊರಟಿತು.

ಪರದೆಯ ಹಿಂದಿನ ರಂಗದಲ್ಲಿಯ ವಿಶ್ಯಾಸ ನೆರವಿಗೆ ಧಾವಿಸಿದ ದಸ್ತಗಿರ್‍ಯಾ, ಗೋಂದ್ಯಾ, ದಾತ್ಯಾ, ವಿಶ್ವಾಸನನ್ನು ಕಾಣದೆ, ಧೋಂಡೂಬಾಯಿಯಿಂದ, ತನಗೆ ಠಾಂವಿಕಿಲ್ಲವೆಂದು ಹೇಳಿಸಿಕೊಂಡು, ಹಾರಿ ಹೋದ ಹಕ್ಕಿಯ ತನಿಖಿಗೆ ಗದ್ದಲದಲ್ಲಿ ನುಸುಳಿದರು.

ಫ್ರಂಟ್ ಸೀಟಿನ ಅರ್ಧ ಅಧಿಕೃತ ಜಾಗ ರಘೂನ ಜಾಗೀರಿಯದು. ಉಳಿದ ಅರ್ಧದಲ್ಲಿ ವಿಶ್ವಾಸ-ತುಳಸಿ ಹತ್ತಿಹತ್ತಿಕ್ಕಿಕೊಂಡು ಹೇಗೋ ಕುಳಿತಿದ್ದರು. ಯಾರ ಅಂಕವನ್ನು ಯಾರು ಅಲಂಕರಿಸಿದ್ದರೆನ್ನುವದು ಹೇಳಬರದಷ್ಟು ಸಮೀಪವರ್ತಿಯಾಗಿತ್ತು ಅವರ ತಿಷ್ಠಂತಿ.

ತುಳಸಿಯ ಬೆನ್ನಾಸರೆಗೆ ವಿಶ್ವಾಸನ ತೋಳು ವಾಲದೆ ಗತಿ ಇರಲಿಲ್ಲ. ತೋಳು ಚಾಚಿ, ಅವನು ಡ್ರಾಯವ್ಹರ್ ರಘೂ – ಹಾಗೂ ಇತ್ತೀಚೆ ಇವರಿಬ್ಬರು. ಕುಳಿತ ಜಾಗವನ್ನು ಇಬ್ಭಾಗಿಸಿದ, ಕಟ್ಟಿಗೆಯ ಅರ್ಧವಿಭೇದಕ (ಹಾಫ್-ಪಾರ್ಟಿಶನ್)ದ ಪಟ್ಟಿಯನ್ನು ಮುಂಜೋಲಿ ಹೋಗದಂತೆ ಆಸರೆಗೆ ಹಿಡಿದಿದ್ದ. ಮಿರಜಿಯ ಒಂಟೆಯ ಡುಬ್ಬದಂತಹ ಮಹಾವೀಥಿಯಲ್ಲಿ ಟ್ರಕ್ಕು ಏರಿ ಇಳಿದಾಗ ಜೋಕಾಲಿಯ ಜೀಕು ಕೊಡುತ್ತಿತ್ತು. ನಿಮಿಷ ನಿಮಿಷಕ್ಕೂ, ಹತ್ತುಗಡೆ-ಬಿಡುಗಡೆಯ ಧಕ್ಕೆ ಕೊಡುತ್ತಿತ್ತು. ಇಬ್ಬರೂ ಈ ಧಕ್ಕೆಯ ಬ್ಯಾದದಿಂದ ದೂರಾಗುವದಂತೂ ದೂರೇ ಉಳಿದು, ಇತ್ತಡದ ಒತ್ತಡದಲ್ಲಿ ಎರಡು ಹೋಳು ಒಂದಾಗುವಂತಾಗುತ್ತಿತ್ತು. ಜಾಗ ಮಾಡಿಕೊಡಬೇಕೆಂದು ತುಳಸಿ ಸರಿದರೆ, ವಿಶ್ವಾಸ ಅವಳಿಗೆ ಇನ್ನಿಷ್ಟು ಸನಿಯನಾಗುತ್ತಿದ್ದ. ವಿಶ್ವಾಸ ಸರಿದು ತುಳಸಿಗೆ ಎಡೆಮಾಡಿಕೊಡಬೇಕೆಂದರೆ, ತುಳಸಿ ಶೀರ

ಹತ್ತಿರವಾಗುತ್ತಿದ್ದಳು. ಬಿಡುಗಡೆಯ ಎತ್ತುಗಡೆಗಿಂತ, ಅವರ ಅಂಗಾಂಗದ ಹತ್ತುಗಡೆಯೇ ಹೆಚ್ಚಾಯಿತು.

ಗಾಳಿ ಗದ್ದಲ ಮಾಡಿ, ತುಳಸಿಯ ಮುಂಗುರುಳ ಚವರಿಯನ್ನು ಮೃದುವಾಗಿ ವಿಶ್ವಾಸನ ಮುಖಕ್ಕೆ ಬೀಸುತ್ತಿತ್ತು. ಮುಂಗುರುಳಿನ ಉಲುಕೋಚಿತನ ತಡೆಯುಲೆಂದು ತುಳಸಿ ಒಂದೆರಡು ಸಲ ಯತ್ನಿಸಿ ವಿಫಲ-ಮನೋರಥಳಾದಳು. "ಲೀಲೆಯಲಿ ಯಾವುದೂ ವಿಫಲವಲ್ಲ"ವೆಂದು ಸಾರುವಂತೆ, ಈ ಕುಂತಳ ಕೇಳಿ, ಅಚಾನಕವಾಗಿ, ಅನುದ್ದೇಶವಾಗಿ, ಅವಳ ಮೃದು-ಕೋಮಲ-ಕರಾಂಗುಲಿಯನ್ನು, ವಿಶ್ವಾಸನ ಹಾಲುಗಲ್ಲದ ಸ್ಪರ್ಶ-ಹರ್ಷ-ಸುಖದಿಂದ ಪುಲಕಿತವಾಗಿಸಿತ್ತು. ಇದನ್ನು ತಪ್ಪಿಸಿದರೆ ಅದು, ಅದನ್ನು ತಪ್ಪಿಸಲೆತ್ನಿಸಿದರೆ ಇನ್ನೊಂದು, ವಿಶ್ವಾಸ-ತುಳಸಿಯರನ್ನು ಆಗಲದಂತೆ ಬಿಗಿಯತೊಡಗಿದ್ದವು. ತುಳಸಿಯ ನಾಗವೇಣಿಯಲ್ಲಿ ವಿರಾಜಮಾನವಾದ ಮಲ್ಲಿಗೆಯ ಮಾಲೆ, ವಿಶ್ವಾಸ ಆಸರೆಗೆ ವಾಲಿದರೆ, ಅವನ ಮುಖಸ್ಪರ್ಶ ಸುಖದ 'ಚಾನ್ಸ್' ಮುಸಿಹೋಗಬಿಡುತ್ತಿದ್ದಿಲ್ಲ.

ಸಿಧಾನವಾಗಿ ಸಾಗಿದ ಟ್ರಕ್ಕನ್ನು, ದಾರಿಯಲ್ಲಿ ಬಿದ್ದ ಸಣ್ಣ ಕಲ್ಲೊಂದು ಮೇಲೆತ್ತಿ, ಕೆಳಕ್ಕೆ ಇಕ್ಕರಿಸಿತು. ಧಡಕಿಗೆ ತುಳಸಿ – ತೀರಾ ನಿರಾಸರಾಗಿ ಕುಳಿತವಳು – ಬೀಳುವಂತೆ ಬಾಗಿದಳು. ವಿಶ್ವಾಸ ಎಡಗೈಯನ್ನು ಅಡ್ಡವಾಗಿಸಿ ಹಿಡಿದು, ಜೋಲಿ ಹೊಡೆತ ತಪ್ಪಿಸಿದ. ಅವನ ನೀಳ್ತೋಳ ಸ್ಪರ್ಶ, ತುಳಸಿಯ ವಕ್ಷಸ್ಥಲಕ್ಕಾಯಿತು. ಬಾಗಿದ ತುಳಸಿ, ಮುಖವೆತ್ತಿ ತಿರುಗಿ ನೋಡಿದಳು. ವಿಶ್ವಾಸನೂ ನೋಡಿದ. ನಾಕು ಕಣ್ಣು ಒಂದಾದವು.

ಗಾಡಿ, ಎದ್ದು-ಬಿದ್ದ ಧಡಕಿಯನ್ನು ಸಹಿಸಿಕೊಂಡು ಮತ್ತೆ ಸರಾಗವಾಗಿ ಸಾಗತೊಡಗಿತು. ಟ್ರಕ್-ರಥಿಕ ರಘೂ ಹೇಳತೊಡಗಿದ:

"ರಾವ್‌ಸಾಬ್, ಇದು ಏನ್ ರಸ್ತೇ ಅದs ನೋಡಿದಿರಿಲ್ಲೋ? ಮೂರ ಹೋಗೂದರಾಗ ಮೂರ ಸಾರೇ ಡೊಗ್ಗಾ ಲೂರಬೇಕಾಗತದ. ರಸ್ತೇನೂ ಹಾಂಗs, ಊರೂ ಹಾಂಗs. ಕೈಯಾಗ ಖಡ್ಡೀ ಕೊಟ್ಟ ಹೇಳಿದೆ, ಧೋಂಡೂಗ, ಈ ಊರ ಸೋಬತೀ ಬ್ಯಾಡಂತs. ಹಲಕಾ ಮಂದಿ ಸೂಳೀಮಕ್ಕಳು. ಎಲ್ಲಾ ಚವಲೀ-ಪಾವಲೀ ಗೆಣ್ಯಾರು. ಕುಡಕರ್‍ರೀ ಮಕ್ಕಳು. ಇಂಥಾವ್ರ ಮುಂದ ಬಣ್ಣಾ ಬಡಕೊಂಡ ಕುಣಿಊದಕಿಂತಾ, ಕಸಾಮುಸರೀ ಮಾಡಿ ಹೊಟ್ಟೀ ತುಂಬಕೋಮೂದು ಠೀಕಾ. ಒಂದಕ ಖೇಳ ಮಾಡಾಸಾವ್ರು ಇಜ್ಜತ್ತಿನ ಮಂದಿ ಇದ್ದರ್‍ರೀ. ದಿನಾ ಬದ್ಲ ಆದೂ.

ಜಮಾನಾ ಬದ್ಲ ಆತು. ಹುಡಗೀನೂ ಹರೇದಕೀ ಆದ್ಲು. ಇನ್ ಖೇಳ ಬಂದ್ ಮಾಡು; ಕಂಪನೀ ಮುರದಬಿಡೂ ಅಂತ ಚಾಲವರೀಲಿಕ್ಕೆ ಹತ್ತೇ ನಾಕ ವರ್ಸ ಆತರಿ. ಆಕೀನೂ ಕೇಳಾಂಗಿಲ್ಲಾ. ಈಕೀನೂ ದಾದ ಮಾಡೊಳ್ಳು. ಈ ಸೂಳೀ ಮಗ್ಗs ಬ್ಯಾರೇ ಹೊಗದೇಶಿಲ್ಲಂತs ಇವರ ಚಾಕರ್‍ಯಾಗ ಬಿದ್ದೀನ್ರೀ. ನೀವರs ರಾವಸಾಬ್, ತುಳಸಿಗೆ ಹೇಳ್ರೀ, ನಿಮ್ಮ ಮಾತರs ನಾಟತದೋ ಏನೋ ನೋಡೂಣು."

"ರಘೂ, ಸಾಕ ಸುಮ್ಮ ಕೂಡ ಇನ್ನs."
ತುಳಸಿ ರಘೂನನ್ನು ತಡೆಯುತ್ತ ಹೇಳಿದಳು.

"ಏನ ಸಾಕ ಅಂತೀದಿ ಬಿಡ. ನೋಡಿದಿಲ್ಲs ಏನ ರಾಡ್ಯಾತು? ಯಂಥಾ ರಂದ್ಯಾತು, ಅನೂದ್ನs. ರಾವಸಾಬ್ ಇದ್ದ್ರಂತ ಉಳದಿ. ಇಲದಿರಕ ಮಂದಿ, ಪುಂಡೀಪಲ್ಯಾ ಹರಧಾಂಗ ಹರೀತಿದ್ರು ನಿನ್ನ. ರಾವಸಾಬ್, ತುಳಸೀ ದಶಿಂದ ಭಾಳ ಖಟಪಟೀ ಮಾಡಿನ್ರೀ ನಾ. ಛಲೋ ಜಾಗಾ ನೋಡೀ, ಒಗತಾನಕ ಹಚ್ಚಬೇಕಂತ ಥ್ವಾಡೇ ಧಡಪಡಸೀನ್ಯಂತ ತಿಳದೀರೇನು? ಆಟದ ಮಂದ್ಯಾಗs ಬೆಳದು, ಹುಡಗಿ ಅಡ್ನಾಡ್ಯಾಗಬಾರದಂತ, ಓದ-ಬರೀ ಕಲಿಸಾಕ ಶಿಕೋಣೀ ಮಾಸ್ತರ್‍ನ ಇಡಸಿದನ್ರೀ. ಆಟದ ಮೋಸಮ್ಮ ಇಲ್ಲದಾಗ ಊರಾಗs ಮುಕ್ಕಾಮು ಇರತಿತ್ತಿರಿ. ನಾಕ ಬುಕ್ ಕಲೀಲೀ ಅಂತ ಸಾಲೀಗೆ ಕಳಸಾಕ ಹಚ್ಚಿದನರೀ. ತುಳಸಿಗೆ ಮಸ್ತ ಹುಡುಗೂರ್‍ನ ತಂದಿದ್ನಿ. ಚಂದ್ರಾಮನಂಥಾವರ್‍ನ. ಇಕೀ ಕಣ್ಣೆತ್ತಿ ನೋಡಿದ್ದರ ಆಣೆರಿ. ನನ್ನ ರಾಜಾ ಬರಾಂವ ಇದ್ದಾನ. ಅಂವನ ಜೋಡೀನs ನನ್ನ ಶಾದೀ ಅಂತs ಹಟಾನ ಹಿಡದಳರೀ. ಯಾ ರಾಜಾನೋ ಏನೋ ಆಕೀಗೇ ಠಾಂವಿಕ್ಯರೀ."

"ರಘೂ, ಯಾರ ಮುಂದ ಏನ ಹೇಳಬೇಕು, ಏನ ಅನಬೇಕು. ಅನೂದರದು ಏನರs......"
ತುಳಸಿ ತ್ರಾಸಿಕವಾಣಿಯಲ್ಲಿ ರಘೂನನ್ನು ತಡೆಯುತ್ತ ಹೇಳಿದಳು.

"ಯಾರ ಮುಂದs. ಏನ ಹೇಳಬೇಕನೂದು ನನಗ ಠಾಂವಿಕ್ಯದs ತುಳಸೀ. ರಾವಸಾಬರ ಮುಂದ ಹೇಳಲಿಕ್ಕೆ ಯಾರದ ಅಡಥsಳಾ. ಅವರs ಇಂದ ನಿನ್ನ ಉಳಸ್ಯಾರ. ರಾವಸಾಬ, ಇಕೀ ಸಣ್ಣಾಕಿದ್ದಾಗಿನ ಮಾತರೀ. ಅಷ್ಟs ಧಾ-ಬಾರಾ ವರ್‍ಸದ ಹುಡಿಗಿ ಏನರs ಇರಬೇಕರೀ. ಬಸವಣ್ಣನ ಜಾತ್ರೀಗೀ, ನಾವು ವಾಡೇದ ಪಂತರಂತ ಆದಾರು – ಅವರ ಊರಿಗೆ ಆಟಕಂತ ಹೋಗಿದ್ದೇವರಿ. ಆ ಊರಾಗ

ಒಬ್ಬ ಹುಡಗನ್ನ ನೋಡ್ಯಾಳಂತ್ರೀ. ಆ ಹುಡಗಾ ಏನ ಜಾದೂ ಮಾಡ್ಯಾನೋ ಯಾರಿಗಿ ಠಾಂವಿಕೀ. ಅವತ್ತಿನ ಲಾಗಾಯತ ಆ ಹುಡಗನ ಮ್ಯಾಲs ಖುಷ್ ಆಗಿ ಬಿಟ್ಟಾಳ್ರೀ. ಆದರ ನಾ ಅಂವನ್ನs ಆಗಾಕೀ ಇಲದಿದ್ದರ ಇಲ್ಲಾs ಅಂತಾಳು. ಧಾ-ಬಾರಾ ವರ್ಸ ಆಗತ ಬಂತರೀ ಆ ಮಾತಿಗಿ. ಹುಡಗ-ಬುದ್ಧೀ ಅಂತ ಮೊದಲ ಸುಮ್ನs ನಗೀಮ್ಯಾಲ ಹಾಕಿದೇನೇನ್ರೀ. ಅದs ಇಂದs ದೆವ್ವ ಆಗ್ಯೆತ್ರೀ. ಆ ಹುಡಗೇನ ಹಾರೂರಾವನೋ, ಮುಸಲನೋ ಯಾರಿಗ್ಗೊತ್ತರಿ. ಅಂವಾ ಏನು ಇಕೀ ದಶಿಂದ ಹಾರಾ ಹಿಡಕೊಂಡs ನಿಂತಿರತಾನs, ನೀವs ಹೇಳ್ರೀ ರಾವಸಾಬ? ಅಂವಾ ಯಾರ ಅನೂದು ಇಕೀಗೂ ಠಾಂವಿಕಿಲ್ಲಾ. ಧೊಂಡೂಗ ಎಲ್ಲೆ ಗಡಿಬಿಡಿ ಐತರೀ ತುಳಸೀ ಮದವೀದು? ಮದವಿ ಜರಾ ತುಟ್ಟರೀ ಈ ಮಂದ್ಯಾಗ. ಹುಡಿಗಿ ಇದs ವ್ಹಾರೇಕ ನಿಂದರಬಾರದು ಅಂತs ನಂದ ಧಡಪsಡ ನಡದೈತ್ರಿ."

ಗಾಡಿ ಧೋಂಡೂಬಾಯಿಯ ಬಿಡಾರದ ಬಾಗಿಲಲ್ಲಿ ಬಂದು ನಿಂತಿತು.

ರಘೂ ಇಬ್ಬರನ್ನೂ ಇಳಿಸಿ, ಮನೆಯ ಕೀಲಿ ತೆಗೆದ. ಸ್ವಿಚ್ ಒತ್ತಿ ದೀಪ ಹತ್ತಿಸಿದ.

"ತುಳಸೀ, ಒಳ ಚಿಲಕಾ ಹಾಕ್ಕೋ. ಯಾರರ ಬಂದರ ಬಾಕಲಾ ತಗದ-ಗಿಗದೀ. ನಾವ್ ಬರೂತನಕಾ ರಾವಸಾಬ್ ಇರತಾರ ಇಲ್ಲೇ. ಅಂಜಬ್ಯಾಡಾ. ನಾ ಹೋಗತೀನರೀ ರಾವಸಾಬ ಇನ್ನs."

ಎಂದು ಹೇಳಿದವನೇ ರಘೂ ತಲೆಬಾಗಿಲನ್ನು ಮುಂದೆಮಾಡಿಕೊಂಡು ಕಾಣೆಯಾದ.

ಅವನ ಶಕಟ ಮುಖ ತಿರುವಿ ಹೊರಟು ಹೋದ ಸದ್ದು ಕೇಳಬಂದಿತು.

ತುಳಸಿ ಬಾಗಿಲ ಚಿಲಕ ಹಾಕಿ ಅಗಳಿ ಎಳೆದು, ಪಡಸಾಲೆಯನ್ನು ದಾಟಿ ನಡು ಮನೆಗೆ ಬಂದಳು. ದೀಪ ಹೊತ್ತಿಸಿದಳು. ಇನ್ನೂ ಪಡಸಾಲೆಯಲ್ಲಿ ಘಟಮಳಿಸು ತ್ತಿದ್ದ ವಿಶ್ವಾಸನಿಗೆ —

"ನಡಮನ್ಯಾಗs ಬರ್ರಿ. ಆರಾಮ ಮಾಡಕೋರಿ. ನಾ ಈಗ ಬಂದೆ."

ಎಂದು ನುಡಿದು ಬದಿಯ ಕೋಣೆಗೆ ನುಸುಳಿದಳು.

ವಿಶ್ವಾಸ ಪಡಸಾಲೆಯಿಂದ ನಡುಮನೆಗೆ ಬಂದ.

ನಡುಮನೆಯ ತುಂಬ ಅಚ್ಚ ಹಸಿರು ಜಮಖಾನೆ ಹಾಸಿತ್ತು. ಎರಡು-ಮೂರು ಬಿದರಿನ ಕಟ್ಟಿಗೆಯ ಕುರ್ಚಿ. ಒಂದು ಬೆತ್ತದ ಗುಂಡುಟೇಬಲ್ಲನ್ನು ಸುತ್ತು ವರಿದು ನಿಂತಿದ್ದವು. ಒಂದು ಬದಿಗೆ, ದೊಡ್ಡ ತತ್ತಿಯಾಕಾರದ, ಕನ್ನಡಿಯನ್ನು

ಕೂಡಿಸಿದ, ಸಣ್ಣ ಡ್ರೆಸಿಂಗ್ ಟೇಬಲ್ಲಿತ್ತು. ಮತ್ತೊಂದು ಬದಿಗೆ ಕುತನಿಯ ದಿಂಬಿನ ವ್ಯಾಘ್ರಚರ್ಮವೇಷ್ಠಿತವಾದ ಕರಿ ಕಟ್ಟಿಗೆಯ ಸೋಫಾ ಇತ್ತು.

ವಿಶ್ವಾಸ ತನ್ನ ಪೇಟಾ-ಕೋಟು ತೆಗೆದು ಅಲ್ಲೇ ಗೂಟಕ್ಕಿರಿಸಿದ. ಕರವಸ್ತ್ರ ದಿಂದ ಬೆವೆತ ಮುಖ ಒರೆಸಿಕೊಂಡ. ಕೆದರಿದ ತಲೆಗೂದಲನ್ನು ಸರಿಮಾಡುವ ನೆವದಿಂದ, ಡ್ರೆಸಿಂಗ್ ಟೇಬಲ್ಲಿಗೆ ಕೂಡಿಸಿದ ಕನ್ನಡಿಯಲ್ಲಿ ನೋಡಿಕೊಂಡ. ಅವನು ಪೇಟಾದಲ್ಲಿದ್ದಾಗಿನ ರೂಪ ಕಣ್ಣ ಮುಂದೆ ಬಂತು.

ಎಂ.ಬಿ., ಬಿ.ಎಸ್. ಡಾಕ್ಟರ ಆಗಿ ಸುಟಸುಟೀತ. ಪ್ಯಾಂಟ-ನೆಕ್‌ಟಾಯನ್‌ನಲ್ಲಿ, ಇಲ್ಲs, ಗೌನ್‌ದಲ್ಲಿ, ಕೊರಳು ಸುತ್ತಿ ಇಳಿಬಿದ್ದ ಸ್ಟೆಟಸ್‌ಕೋಪ-ಹಾರ ಹಾಕಿಕೊಂಡು, ವಾರ್ಡದಿಂದ ವಾರ್ಡಿಗೆ ಹೋಗುವ ರೀತಿ ಎಲ್ಲಿ – ಈ ಪೇಟಾ-ಸುರವರ-ಕೋಟಿನ ರಾಜಠೀವಿ ಎಲ್ಲಿ? ಸಂಸ್ಥಾನೀ ದರಬಾರಕ್ಕೆ ಅದು ಶೋಭಿಸುತ್ತಿತ್ತು. ವಿಶ್ವಾ ಡಾಕ್ಟರ ಆಗಿ, ಸಾಂಗ್ಲೀ ಸಂಸ್ಥಾನದಲ್ಲಿ ಮುಖ್ಯ ಡಾಕ್ಟರ ಹುದ್ದೆಗೆ ಬಂದಿದ್ದರೆ – ಕದಾಚಿತ್ ಒಮ್ಮೊಮ್ಮೆ ಇಂಥ ಡ್ರೆಸ್ ಮಾಡುವ ಪ್ರಸಂಗ ಬರಬಹುದಾಗಿತ್ತು. ಆದರೆ ಇಂಥ ಡ್ರೆಸ್ಸು ಮಾಡಿಸಿದ ಪ್ರಸಂಗದ ವಿಶೇಷ ಅವನನ್ನು ವಿಸ್ಮಯಗೊಳಿ ಸಿತು. ಆಟ ನೋಡಿ, ದಸ್ತಗೀರ್‍ಯಾ ವದಿಸಿದ ಖೂಬ ಸೂರತ ಮಾಲಿನ ದೂರ ದರ್ಶನ ಪಡೆದು, ಮರುದಿನ ದಸ್ತಗೀರ್‍ಯಾನ ಅಂಗಡಿಯಲ್ಲೇ ಪಾಕೀಟು ಗೋಲ್ಡ ಫ್ಲೇಕ – ಹತ್ತು ಕಪ್ಪು ಚಹ ಹಾರುವ ತನಕ ಕಾವ್ಯಶಾಸ್ತ್ರವಿನೋದ ಮಾಡಿ ಮುಗಿಸುವ ಮಾತೆಲ್ಲಿ – ಇಂದು ಅಚಾನಕವಾಗಿ ಉದ್ಭವಿಸಿದ ತೊಂದರೆಗೆ ತಲೆ ಯೊಡ್ಡಿ, ಆಟದ ಹುಡಿಗಿ ತುಳಸಿಯನ್ನು ಸಹಿಸಲಾಮತ್ ಉಳಿಸಿ – ಅವಳ ಬದಿಗೆ ಕುಳಿತು, ಅವಳ ಮನೆಗೆ ಬಿಜಯಿಸಿದ ಮಾತೆಲ್ಲಿ?

ಹಾರ-ಪ್ರಕರಣ ಪೂರ್ವದಲ್ಲಿಯೇ – ತುಳಸಿ ರಂಗದ ಮೇಲೆ ಪ್ರಕಟವಾದಾ ಗಲೇ, ವಿಶ್ವಾಸ ತುಳಸಿಯನ್ನು ಗುರುತಿಸಿದ್ದ. 'ಧಾ-ಬಾರಾ' ವರ್ಷದ ಹಿಂದಿನ ಅವನ ಚಕೋರಿಯಲ್ಲಿ ಈಗಿನ ತುಳಸಿಯ ಮಹಾದರ್ಶನ ಪಡೆದಿದ್ದ. ದಸ್ತಗಿರ್‍ಯಾ ಹೇಳಿದಾಗ– ಖೂಬ ಸೂರತ್ತ ಮಾಲನ್ನು ರಸರಸೀತ ವರ್ಣಿಸಿದಾಗ, ಅವನಿಗೆ ಬಂದ ಅನುಮಾನ ತುಳಸಿಯ ಪ್ರತ್ಯಕ್ಷ ದರ್ಶನದಿಂದ ದೃಢವಾಗಿತ್ತು. ಅಂದು ಹಾರಿ ಹೋದ ಹಕ್ಕಿ, ಗರುಡಭರಾರಿಯಾಗಿ ಗಗನಮಂಡಲ ಸುತ್ತಿ, ಮರಳಿ ಈಗ ಭೂಮಿಗೆ ಇಳಿದಿತ್ತು. ಆಗ ಇನ್ನೂ ಹನ್ನೆರಡರ ಹೊಸ್ತಿಲಲ್ಲಿ ಅಲೆಯುವ ಹಕ್ಕಿ ಈಗ ಹರೆ ಉಕ್ಕುವ, ಹುಮ್ಮಸ ತುಳುಕುವ, ಹೆಣ್ಣಾಗಿ ಭೂಮಿಗಿಳಿದುಬಂದಿತ್ತು. ವಿಶ್ವಾ. ಆ

ಹೆಣ್ಣಿನಲ್ಲಿಯೆ ತನ್ನ ತುಳಸಿಯನ್ನು ಗುರುತಿಸಿದ್ದ; ತಾನು ಗುರುತಿಸಿದ್ದ ತುಳಸಿಯನ್ನೆ ಈಗ ಪಡೆದಿದ್ದ. ಆದರೆ ಈ ತುಳಸಿ ...

ತುಳಸಿಗೆ ತನ್ನ ಗುರುತು ಖಚಿತ ಹತ್ತಿಲ್ಲ. ಅದರ ಅಂಧುಕ ಕಲ್ಪನೆಯೂ ಬಂದಿಲ್ಲ. ಬಂದಿದ್ದರೆ – ಹಾಗೆ ಅವಳು ಅವನನ್ನು ಗುರುತಿಸಿದ್ದರೆ ಮೋಟಾರಿನಲ್ಲೇ ಕೇಳಬಹುದಾಗಿತ್ತು. ಕಾದು ನಿಂತ ಉರ್ಮಿಳೆ ತನ್ನ ರಾಜನ ಆಕಸ್ಮಿಕ ಆಗಮನ ವನ್ನು ಬೇಭಾನಚಿತ್ತಳಾಗಿ ಸ್ವಾಗತಿಸಬಹುದಾಗಿತ್ತು. ಅವಳಿಗೆ ರಘೂನ ಅಂಜಿಕೆ ಏತರದು? ರಘೂ, ಅವಳ ರಾಜನ ಕತೆಯನ್ನು ಹೇಳುವಾಗ, ಅವನನ್ನು ನಡು ನಡುವೆ ತಡೆದು ನಿಲ್ಲಿಸಿದ್ದಾಳೆ. ಯಾರೋ ಪರಕೀಯ – ಮೂರನೆಯ ತನಗೆ ಅಪರಿಚಿತ ವ್ಯಕ್ತಿಯ ಮುಂದೆ ತನ್ನ ಜೀವನ-ಕಥನ ಬೇಡವೆಂದು ಅವನನ್ನು ಗದರಿಸಿ ಬೆದರಿಸಿದ್ದಾಳೆ.

ಹತ್ತು ವರುಷದ ಹಿಂದೆ ತನ್ನನ್ನು ನೋಡಿದ ಮಸಕು ನೆನಪು ಮಾಸಿರ ಬೇಕು. ಹತ್ತು-ಹದಿನೈದು ಮಿನೀಟಿನ ಅವಧಿಯಲ್ಲಿ ಅಂದು ಅವರು ಒಬ್ಬರ ನ್ನೊಬ್ಬರು ನೋಡಿದ್ದರು. ಅಂದಿನ ನೋಟದಲ್ಲಿಯ ಬಾಲಿಶವೃತ್ತಿ ಎಂದೋ ಮಾಸಿರಬೇಕು. ಯಾರಿಗೂ ಆ ನೆನಪು ಮಸಕಾಗುವಂಥದು. ತುಳಸಿ ಹತ್ತು-ನೂರು ಊರು ಅಲೆದು ಬಂದಿದ್ದಾಳೆ. ಸಾವಿರ-ಲಕ್ಷ ಜನದೆದುರು ರಂಗನಾಯಿಕೆ ಯಾಗಿ ಕುಣಿದಿದ್ದಾಳೆ. ಲಕ್ಷದ ಪರಿಸೆಯಲ್ಲಿ ತನ್ನ ಮುಖದ ಗುರುತು ದರಿಯಾಮೇ ಖಸ್‌ಖಸ್ ಆದರೂ, ತುಳಸಿ ತನ್ನ ಹೃದಯದ – ಕಣ್ಣಿನ ದುರ್ಬಿಣಿ ಹಿಡಿದು, ಆ ಖಸ್-ಖಸ್‌ನ್ನು ಇನ್ನೂ ತನ್ನದನ್ನಾಗಿ ಮಾಡಿಕೊಳ್ಳುವ ತವಕದಿಂದ ತಡೆದು ನಿಂತಿದ್ದಾಳೆ. ರಘೂ ಅದನ್ನೇ ಹೇಳಿದ.

ಹತ್ತು ವರುಷದ ಹಿಂದೆ, ಒಂದು ಪ್ರಶಾಂತ ಬೆಳಗಿನ ಸಮಯದಲ್ಲಿ, ತಾನು ತುಳಸಿಯ ದರ್ಶನಕ್ಕೆ ಧಾವಿಸಿದ್ದ. ಧೋಂಡೂಬಾಯಿಯ ಡೇರೆಯನ್ನು ಅಭಿ ಮನ್ಯುವಿನ ಆವಿರ್ಭಾವದಿಂದ ಭೇದಿಸಿದ್ದ. ತುಳಸಿಯನ್ನು – ಕೇವಲ, ತನ್ನ ವಯಿ ಸ್ಸಿನ – ಓರಿಗೆಯ ಕನ್ಯಾಮಣಿ ತುಳಸಿಯನ್ನು ಗಾಠಾಯಿಸಿದ್ದ. ಅವಳ ಸುಶೀಲ ಕಂಠಕ್ಕೆ – "ಸೋಡನಾऽ ಪದ್ಽರಽ, ರಾಜಾऽ, ಸೋಡ್ಽನಾऽ ಪದ್ಽರಽ" ಹಾಡಿಗೆ, ಅವಳ ಅಪ್ರತಿಮ ಅಭಿನಯಕ್ಕೆ, ಯಾಕೋ ಏನೋ ಅವಳ ಗೆಳೆತನ ಬಯಸುವ ಆಶೆಗೆ, ಒಂದು ರೂಪಾಯಿಯ ಕಾಣಿಕೆಯನ್ನು ತನ್ನದೆಂದು, ಅವಳ ಅಂಗೈಯಲ್ಲಿ ಇರಿಸಿ ಫರಾರಿಯಾಗಿದ್ದ. ತಾನು ಓಡಿದಾಗ, ಬೆನ್ನಿಗೇ ಬಂದು, ತುಳಸಿ, ಎಷ್ಟೋ

ಹೊತ್ತು ತನ್ನನ್ನೇ ನೋಡುತ್ತ, ಏನೋ ಹೆಸರು ಹಿಡಿದು ಕೂಗುತ್ತ ನಿಂತಿದ್ದರ, ಅವಿಸ್ಮರಣೀಯ ರಮ್ಯಚಿತ್ರ ವಿಶ್ಯಾನ ಕಣ್ಣೆದುರು ಕಟ್ಟಿತು. ತನಗೆ ಇದೆಲ್ಲ ಮರೆತಿಲ್ಲ. ಇನ್ನೂ ಹಸಿರು ಮುರಿಯುತ್ತಿದೆ. ತುಳಸಿ... ತುಳಸಿಯೂ ಮರೆತಿಲ್ಲವಲ್ಲ. ರಘೂ ಹೇಳಿದ. ನಮ್ಮೂರಿನ ಹೆಸರು ಹೇಳಿದ. ಪಂತರ ವಾಡೆಯ ಊರಿನ ಹೆಸರು ಹೇಳಿದ. ಅಲ್ಲಿ ಅವಳು ನೋಡಿದ. ನೆಚ್ಚಿದ, ಮೆಚ್ಚಿದ, ಹುಡುಗನ ಕತೆ ಹೇಳಿದ. ತುಳಸಿ ಮರೆತಿಲ್ಲ. ಖಚಿತ ಮರೆತಿಲ್ಲ. 16726

ಮರೆತಿದ್ದರೆ ತಾನೇ ತುಳಸಿಯನ್ನು ಮರೆತಿದ್ದ. ಅಭ್ಯಾಸದಲ್ಲಿ – ವಸೂನ ಸಹವಾಸದಲ್ಲಿ, ಸೋನಕ್ಕನ ಪ್ರಕರಣದಲ್ಲಿ, ತುಳಸಿಯ ನೆನಪನ್ನು ಪಾತಾಳಗರ್ಭಕ್ಕೆ ಇಳಿಸಿಬಿಟ್ಟಿದ್ದ. ಇಂದು ತುಳಸಿಯನ್ನು ಕಂಡಿರದಿದ್ದರೆ – ತುಳಸಿ ಈ ರೀತಿಯಾಗಿ ದರ್ಶನ ಕೊಟ್ಟಿರದಿದ್ದರೆ – ತನಗೆ ತುಳಸಿಯ ಸ್ಮೃತಿ, ಅದರ ಅಂಧುಕ ನೆನಪು ಕೂಡ ಮರುಕಳಿಸುವದು ಅಶಕ್ಯವಿತ್ತು.

ಇಂದು ಬೆಳೆದು ನಿಂತ, ಹರೆ ಕಡೆದು ಲಾವಣ್ಯಮೂರ್ತಿಯಾದ ತುಳಸಿ ತನ್ನನ್ನು ಗುರುತಿಸಬಹುದೆ? ತನ್ನ ಇಂದಿನ ಬೆಳವಣಿಗೆಯಲ್ಲಿ, ಆಕಾರದಲ್ಲಿ, ಅಂದಿನ ಗೀರು-ಗಂಧದ, ಗಾಂಧೀ-ಟೊಪ್ಪಿಗೆಯ, ಹಾಫ್-ಪ್ಯಾಂಟು-ಶರ್ಟಿನಲ್ಲಿಯ ಹುಡುಗ ವಿಶ್ಯಾ ಅದೃಶ್ಯನಾಗಿ ಹೋಗಿದ್ದಾನೆ. ಅಳಿಸಿ ಹೋಗಿದ್ದಾನೆ. ಇಂದು ಹೀಗೆ ಅಡದಾಂಡ ಬೆಳೆದ – ಕೋಲ್ಹಾಪುರೀ ಪೇಟಾ-ಸುರವರದಲ್ಲಿ ಪರಕಾಯ ಪ್ರವೇಶಮಾಡಿದ ಹುಂಬ ಗುದ್ದಿಕೆಯ ವಿಶ್ಯಾನನ್ನು ತುಳಸಿ ಗುರುತಿಸುವದು ಸಾಧ್ಯವಾದೀತೇ? ಆದೀತು... ಆದೀತು. ಯಾಕಾಗಬಾರದು? ತಾನು ಅವಳನ್ನು ಗುರುತಿಸಿದ್ದಾನೆ. ಅವಳ ನೆರವಿಗೆ ಅನಾಹೂತವಾಗಿ ಧಾವಿಸಿದ್ದಾನೆ. ಅವಳನ್ನು ಉಳಿಸಿದ್ದಾನೆ. "ತುಳಸಿ... ತುಳಸಿ... ವಿಶ್ಯಾ, ಕ್ಯಾ ಖೂಬ ಸೂರತ್ ಮಾಲ ಹೈ ಸಾಲಾ" ಎಂದು ದಸ್ತಗೀರ್‍ಯಾ, ಲಟಕಿ ಹೊಡೆದಾಗ, ಏನೋ ಅನುಮಾನ ಬಂದು, ಮನೆಯಲ್ಲಿ ಪಗಡೆಯಾಟದ ನೆವ ಹೇಳಿ, ವೇಷಾಂತರಿಸಿ, ನೋಟಕರ ಮಧ್ಯೆ ಸೇರಿ –

ಎಸೆವ ವಿಪ್ರಾಕಾರದಲಿ ರಂ
ಜಿಸುವ ಭೂಪತಿ ತತ್ಸಭಾಸ
ದ್ವಿಜರ ಮಧ್ಯದೊಳಿದ್ದು......

ಮನ್ಮಥನ ಹೊಗರಿಟ್ಟಲಗಿನಂತೆ ಚಕಚಕಿಸಿ ಬರುವ ತುಳಸಿಯ ದರ್ಶನ

ಕ್ಕಾಗಿ ಕಾದು ಕುಳಿತಿದ್ದಾನೆ. ಸಾಧಿಸಿದರೆ ಅವಳನ್ನು ಸಂಧಿಸಿ ಹಳೆಯ ಸ್ಮೃತಿಯ ಕತೆಯನ್ನು ಹೇಳುವ ಭರವಸೆಯಿಂದ ಬಂದಿದ್ದಾನೆ.

ತನ್ನ ವೇಷಾಂತರ ಅವಳನ್ನು ಖಚಿತ ವಂಚಿಸಿದೆ. ಅದು ಯಾರನ್ನೂ ವಂಚಿಸುವಂಥದಾಗಿದೆ. ಕಾಲೇಜ-ಕುಮಾರ, ಈ ಧರ್ತಿಯ ದರಬಾರೀ ಥಾಟಿನಲ್ಲಿ ಬಿಜಯಿಸಿದರೆ ಯಾರಿಗೆ ಅವನ ಪತ್ತೆ ಹತ್ತೀತು? ಸಾಂಗಲಿಯಲ್ಲಾಗಿದ್ದರೆ ಹಾಗೆ ಯಾರಾದರೂ ಗುರುತಿಸಬಹುದಾಗಿತ್ತು. ಮಿರಜಿಯಲ್ಲಿ ಅದಕ್ಕೆ ಅವಕಾಶವಿರಲಿಲ್ಲ.

ಹತ್ತು ವರುಷದಿಂದ, ತನಗಾಗಿ ಕಾದು ನಿಂತ, ತನ್ನ ಬರವಿನ, ದರ್ಶನದ ಕಾಂಕ್ಷೆಯಲ್ಲಿ, ನಿರೀಕ್ಷೆಯಲ್ಲಿ ಜಾಗರಳಾಗಿ ಕಾಯುತ್ತ ನಿಂತ ತುಳಸಿಗೆ ತನ್ನ ಗುರುತು ಪತ್ತೀತು. ತನ್ನ ನೈಜ-ರೂಪವನ್ನು ಮರೆಮಾಡಿದ ಕೊಟು-ಪಟಕಾ ಈಗ ಇಲ್ಲ. ಈಗ ತುಳಸಿಯ, ಪ್ರತೀಕ್ಷೆಯ – ನೆಚ್ಚಿನ ರಾಜ – ವಿಶ್ವಾಸ, ಮೂಲ-ರೂಪ-ಧಾರಣ ಮಾಡಿದ್ದಾನೆ. ತುಳಸಿ ಗುರುತು ಹಿಡಿದಾಳು; ಓಡಿಯುತ್ತಾಳೆ. ಅದರಲ್ಲಿ ರವಷ್ಟೂ ಸಂಶಯವಿಲ್ಲ.

ಬದಿಯ ಕೋಣೆಯ ಇಕ್ಕಿದ ಬಾಗಿಲು ತೆಗೆದ ಸದ್ದಾಯಿತು. ಕನ್ನಡಿಯ ಮುಂದೆ ನಿಂತ ವಿಶ್ವಾಸ ತಿರುಗಿ ನೋಡಿದ —

ಜರದ ಶಾಲೂ, ಜರದ ಖಣ ಇರಲಿಲ್ಲ. ಅನ್ಯ ನಾಟಕೀಯ ಅಂಗವಸ್ತ್ರ, ರಂಗಲೇಪವಿರಲಿಲ್ಲ. ತುಳಸಿ ತನ್ನ ಅಚ್ಚ ಬಿಳಿಯ ತಿಳು ವಾಯಿಲಿನ್ ಸೀರೆಯಲ್ಲಿ, ಸ್ವರ್ಣಗೌರಿಯಾಗಿ – ಶ್ವೇತವಸನಧಾರಿಯಾಗಿ ನಿಂತಿದ್ದಳು.

ತುಳಸಿ ವಿಶ್ವಾಸನನ್ನು ನೋಡಿದಳು. ವಿಶ್ವಾಸ ತುಳಸಿಯನ್ನು ನೋಡಿದ.

"ತುಳಸೀ..."

ಎದೆ ತುಂಬಿ ಬಂದು, ತುಟಿ ತುಳಸಿಯ ನಾಮವನ್ನು ಚಿಲ್ಲನೇ ತುಳುಕಿಸಿತು.

"ನೀ...... ನೀ...... ನನ್ನ ರಾಜಾ......"

ತುಳಸಿ ಒಮ್ಮೆಲೆ ಧಾವಿಸಿದಳು. ಅವಳ ರಾಜಾ ಎದುರು ಸಾರಿ ಸಂಗಮವನ್ನು ಸುಗಮ ಮಾಡಿದ.

ಐದು ನಿಮಿಷ ಒಂದಾದ ಎರಡು ಹೋಳು ಮೂಕ-ಬಂಧನದಲ್ಲಿ, ಹೃದಯ-ಮಿಲನದಲ್ಲಿ – ಜೀವ-ಜೀವದ ಕತೆ ಹೇಳಿ-ಕೇಳಿಕೊಂಡವು.

"ತುಳಸೀ, ತುಳಸೀ, ಗುರುತ ಹತ್ತ್ಯೇನು?"

"ರಾಜಾ...... ನನ್ನ...... ರಾಜಾ......"

ತುಳಸಿಯ ಮುಖ ವಿಶ್ವಾಸನ ವಿಶಾಲ ವಕ್ಷದಲ್ಲಿ ವಿರಾಜಮಾನವಾಗಿತ್ತು. ಎಲೆಯ ಅಂಗೈಯಲ್ಲಿ ಅರಳಿದ ಕೆಂದಾವರೆಯಂತೆ, ಅರೆತೆರೆದ, ಕಂಬನಿದುಂಬಿ ಮಿಡಮಿಡಿಸುವ ಕಣ್ಣಲ್ಲಿ ಪ್ರೀತಿಪೂರ್ಣಿಮೆಯ ಕಾರ್ತಿಕೋತ್ಸವ ನಡೆದಿತ್ತು.

"ತುಳಸೀ, ನನ್ನ ಮರತಿರಬೇಕಂತ ಮಾಡಿದ್ದೆ. ಇನಾ ನೀ ಮರೆತಿಲ್ಲ ತುಳಸೀ !"

"ನನ್ನs ನೀ ಮರತಿರಬೇಕಂತs ನಾನೂ ಮಾಡಿದ್ದೆ. ನನ್ನ ರಾಜಾ ನನ್ನ ಮರತಿಲ್ಲಾ." !

"ತುಳಸೀ, ಇಷ್ಟ ದಿನಾ ಎಲ್ಲೆ ಗಡಪ್ ಆಗಿದ್ದೀ?"

"ರಾಜಾನ ತಪಾಸಣ್ಯಾಗ ಇದ್ದೆ."

"ಖರೇ ?"

"ಖರೇ, ಖೊಟ್ಟಿ. ರಘೂ ಮೋಟರದಾಗ ಏನ ಹೇಳತಿದ್ದ ಕೇಳೀಯಲಾ."

"ಮೋಟಾರದಾಗ ನನ್ನ ಗುರುತ ಹತ್ತಲಿಲ್ಲೇನ ತುಳಸೀ ?"

"ನಿನ್ನ ಸರದಾರೀ ಪೇಟಾ-ಕೋಟಾ ಘಸಕೀ ಹಾಕಿತು. ಎಂದ ನಿನ್ನ ನೋಡಿದ್ದೆ, ನೆನಪ ಅದs ಏನು? ಧನಿನೂ ಬದ್ಲ ಆಗೇದ. ನನ್ನ ರಾಜಾ ಸರದಾರ ಆದದ್ದು ಹ್ಯಾಂಗ ಗೊತ್ತಾಗಬೇಕು? ಪೇಟಾ-ಸುರವರ-ಡ್ರೆಸ್ ಯಾಕ ಮಾಡೀ?"

"ತುಳಸೀ, ನಾ, ಕೊಲ್ಲಾಪೂರ ಸರದಾರ ಆಗಿಲ್ಲ ಖರೇ. ಸಾಂಗಲೀಕರ ಖಾಸ್ ಆಗೀನಿ. ಆ ಕಥೀ ಹೇಳತೀನಿ ಹಿಂದಾಗಡೇ. ನೀ ಹ್ಯಾಂಗೂ ನನ್ನ ರಾಣೀ ಆಗೂ ಬೇತಿನ್ಯಾಗ ಇದ್ದೀಯಲಾ. ಸಾಧಿಸಿದರ ರಾಜಾ-ರಾಣೀಗೆ ಬ್ಯಾರೇ ಏನೂ ಉದ್ಯೋಗನs ಇಲ್ಲಾ. ಬರೇ ಕಥೀ ಹೇಳೂದು. ಬರೇ ಕಥೀ ಕೇಳೂದು."

"ನನಗ ರಾಣೀ ಆಗೂದು ಬ್ಯಾಡಾ ಏನೂ ಬ್ಯಾಡಾ. ನಾ ನಿನ್ನ ರಾಣೀ ಹ್ಯಾಂಗ ಆದೇನು? ನಾ ನನ್ನ ಜಾಗಾ ಠರಾಸಿಗೊಂಡೀನಿ. ನನ್ನ ರಾಜಾ ಆ ಜಾಗಾ ನನಗ ಕೊಡತಾನನೂ ಭರೋಸ ಅದs. ಅದs ಆಶಾದ್ಲೇ ದಾರೀ ಕಾದೆ ಇಷ್ಟ ದಿನಾ. ಅಷ್ಟ ಜಾಗಾ ನನಗ ಕೊಟ್ಟರ ಸಾಕು. ಬ್ಯಾರೇ ನನಗ ಏನೂ ಬ್ಯಾಡಾ. ಯಾವುದೂ ಆಶಾನೂ ನನಗ ಇಲ್ಲಾ."

ತುಳಸಿ ಮಂಡೆಯೂರಿ ವಿಶ್ವಾಸನ ಕಾಲು ಮುಟ್ಟಿದ ಕೈ ಕಣ್ಣಿಗೆ ಹಚ್ಚಿ ಕೊಂಡಳು. ವಿಶ್ವಾಸ ವಾತ್ಸಲ್ಯದಿಂದ ಅವಳನ್ನು ಎತ್ತಿ ಹಿಡಿದು, ಎದೆಗೆ ಆನಿಸಿ ಕೊಂಡ. ಮೃದುವಾಗಿ ಬೆನ್ನು ಸವರಿದ. ಆ ನೇವರಿಕೆಯಲ್ಲಿಯೆ ಸ್ಥಾನದಾನದ ಅಭಯವಿತ್ತು.

"ರಾಜಾ ನೀ ಹ್ಯಾಂಗ ಇಂದ ಇಲ್ಲಿ ಬಂದೀ?"

"ನಾ ಬರಲಿಲ್ಲ ತುಳಸೀ. ನಶೀಬನs ಎಳದು ತಂತ್ಯೂ. ಒಂದ ರುಪಾಯು ದಾಗ ಸೋಯೀ ಮಾಲ ಖರೀದೀ ಮಾಡಿದ್ದೆ. ನೆನಪ ಅದs ಇಲ್ಲೋ ತುಳಸೀ? ಪಿಂಜರದಾಗ ಹಾಕಬೇಕನೂದ್ರಾಗ ನನ್ನ ಮೈನಾ ಹಾರಿ ಹೋಗಿತ್ತು. ನಿನಗ ರುಪಾಯು ಕೊಟ್ಟ ಮರದಿನಾನೇ ಮತ್ತ ನಿಮ್ಮ ಡೇರೇದ ಕಡೇ ಬಂದಿದ್ದೆ. ನನ್ನ ಮೈನಾನ ದೋಸ್ತೀ ಜಮಾಸಿಗೋಬೇಕಂತ. ನಿಮ್ಮ ಡೇರೆ ಕಿತ್ತಿ ನೀವು ಎಲ್ಲಿಗೋ ಹೋಗಿದ್ರಿ. ಬಾಳ ಸಂಕಟಾಬಿಟ್ಟೆ ತುಳಸೀ. ಅಂದs ಆಣೀ ಮಾಡಿದ್ದೆ: ತುಳಸೀ? ಏನ ಜಗತ್ತ ಬಿಟ್ಟsಹೋಗೂದಿಲ್ಲಾ. ಒಂದಿನಾನರೇ ಸಿಕ್ಕಾಳಲಾ ಅಂತs. ತುಳಸೀ, ಆಕಸ್ಮಾತ್ ನನ್ನ ಮೈನಾ ನನಗ ಹೀಂಗ ತಿರಿಗಿ ಸಿಕ್ಕಿತು. ಅಂತs ಮನಸಾ ಆಣಿ ಮಾಡಿದ್ದೆ ತುಳಸೀ. ಆಣೀ ಹುಸೀ ಹೋಗಲಿಲ್ಲಾ."

"ಪಿಂಜರ ಎಲ್ಲ್ಯದ, ರಾಜಾ. ಮತ್ತ ನಿನ್ನ ಮೈನಾ ಹಾರಿ-ಗಿರೀತು ನೋಡು. ಇನ್ ಹಾರಿದರ ಮತ್ತೆ ಸಿಗೂದಿಲ್ಲಾ."

"ಹಾರೂ ಹಾಂಗ ಇದ್ದರ ನನ್ನ ಮೈನಾ ಹತೀಲೆ ಬರತಿದ್ದೇ ಇಲ್ಲಾ. ಇನ್ನದು ಮುಂಬೈ ಬಿಟ್ಟ ಅಗಲ್ಯಾಥಾಂಗ ಇಲ್ಲಾ. ಆ ಧೈರ್ಯಾ ಅದs ತುಳಸೀ ನನಗ! ಹೌದಲ್ಲೋ?"

"ಸಾಕ್ಷೀ ಜರೂರೀ ಇದ್ದರ ಹೇಳು. ತೋರಸ್ತೀನಿ. ಇದ್ನೋಡ ರಾಜಾ..."

ತುಳಸಿ ತನ್ನ ಕಂಠದಲ್ಲಿಯ ಸ್ವರ್ಣಚೇನನ್ನು ಎತ್ತಿ ಅದರಲ್ಲಿ ಪವಣಿಸಿದ ಲಾಕೆಟ್ಟನ್ನು ವಿಶ್ವಾಸನ ಎದುರು ಹಿಡಿದಳು. ಸ್ವರ್ಣಕಟ್ಟಿನ ಲಾಕೆಟ್ಟಿನಲ್ಲಿ, ಚಕಚಕಿಸುವ, ಲಕಲಕಿಸುವ, ವಿಶ್ವಾಸ ಅವಳಿಗೆ ಹತ್ತು ವರುಷದ ಹಿಂದೆ —

"ತುಳಸೀ, ಇದು ನಿನಗ ನನ್ನ 'ಪ್ರೆಜೆಂಟ್'. ಮಸ್ತ ಆಟಾ ಮಾಡಿದ್ದಕ್ಕ." ಎಂದು ಪ್ರೀತಿಯಿಂದ ಕೊಟ್ಟ ರಾಣಿಯ ಛಾಪಿನ ರಜತರೂಪ್ಯಕ ಮಿನುಗುತ್ತಿತ್ತು.

ವಿಶ್ವಾಸ ತನ್ನ ಕಣ್ಣನ್ನು ತಾನೇ ನಂಬದಾದ. ಅವಳ ರೂಪಕ್ಕೆ, ಅವಳ ಬಟ್ಟ ಗಣ್ಣಿನ ಚೆಲುವಿಗೆ, ಅವಳ ಮಾತಿನ ಚಲಾಕಿಗೆ ಮೆಚ್ಚಿ, ಮಾರುಹೋಗಿ ತಾನು ಪ್ರೀತಿ-ತೀರ್ಥದಲ್ಲಿ ಅದ್ದಿ ತೆಗೆದು ಕೊಟ್ಟ ರೂಪಾಯಿ – ತನ್ನ ಅಖಂಡ ಪ್ರೀತಿಯ ಪ್ರತೀಕವೆಂದು – ಸಾಕ್ಷಿಯೆಂದು, ತನ್ನ ತುಳಸಿ, ಅದನ್ನು ಆರಾಧ್ಯದೈವತವೆಂದು, ತನ್ನ ಕಣ್ಣಮಣಿಯ ನಿರಂತರ ಸಾನ್ನಿಧ್ಯವೆಂದು, ಕಂಠಧಾರಣಮಾಡಿದ್ದಾಳೆ. ತನ್ನ

ಅನುನಯದ ಮೂರ್ತಿಯು ಪ್ರತೀಕ್ಷೆಯಲ್ಲಿ ಹತ್ತು ವರುಷದ ಕಾಲ-ಖಂಡವನ್ನು ಉರ್ವಿಳಾ ತಪಸ್ವಿನಿಯಂತೆ ಕಾದು ನಿಂತಿದ್ದಾಳೆ.

ವಿಶ್ವಾಸನ ಕಣ್ಣಲ್ಲಿ ಪ್ರೀತಿ-ವಾತ್ಸಲ್ಯ-ಅನುರಾಗ ಮಡುವುಗಟ್ಟಿ ನಿಂತಿದ್ದವು. ವಿಶ್ವಾಸ ತುಳಸಿಯ ಕಡೆಗೆ ನೋಡಿದ.

ತುಳಸಿಯ ಬಟ್ಟಗಣ್ಣು ಅವಳ ಪ್ರೀತಿ-ಮೂರ್ತಿಯ ಪ್ರತಿಬಿಂಬವನ್ನು ಮೂಡಿಸಿದ್ದವು.

"ತುಳಸೀ...... ತುಳಸೀ"

ಎಂದು ಆರ್ತನಾಗಿ ಪ್ರೀತಿ-ವೀಣಾ-ಕ್ವಣಿತವಾದಂತೆ ನುಡಿದು ಅವಳನ್ನು ಗಟ್ಟಿಯಾಗಿ ಎದೆಗವಚಿಕೊಂಡು ಮುಖದಲ್ಲಿ ಮುಖವಿರಿಸಿ ಮುದ್ದಿಸಿದ. ತುಳಸಿ ತನ್ನ ತೋಳನ್ನು ಬಾಚಿ ಅವನನ್ನು ಅಪ್ಪಿದ್ದಳು. ಪ್ರೀತಿ-ಸಂಗಮದಲ್ಲಿ ಎರಡು ಹೊನಲು ಒಂದಾಗಿದ್ದವು. ಎರಡು ಜೀವ ಒಂದಾಗಿದ್ದವು. ಸಮರಸ-ಜೀವನದ ಅನಿರುದ್ಧ ಪ್ರೀತಿ-ತೀರ್ಥಕ್ಕೆ ಪೂರ ಬಂದಂತಾಗಿತ್ತು.

೦ ೦ ೦ ೦

ಧೋಂಡೂಬಾಯಿ ವಿಶ್ವಾಸನಿಗೆ, ಮಗಳಿಗೆ ಚಹ ತಂದಳು. ಇಬ್ಬರೂ ಮಾತಾಡುತ್ತ ಚಹ ಕುಡಿದು ಮುಗಿಸಿದರು.

ಬೆಳಕುಹರಿಯಲನುವಾಗಿತ್ತು. ಗಿಡ-ಗಂಟೆಯ ಕೊರಳ-ಕಂಠದಿಂದ — ಮನೆಯ ಮುಂದಿನ ಅಶ್ವತ್ಥವೃಕ್ಷದ ರೆಂಬೆ-ಕೊಂಬೆಗಳಲ್ಲಿಂದ, ಪಕ್ಷಿಸಂಕುಲದ ಮಂಗಲ-ಪ್ರಭಾತ-ಕೂಜನ ಮಿಡಿಯುತ್ತಿತ್ತು. ಉಷೆ ವೀಣಾಪಾಣಿಯಾಗಿ ಮೃದು ಲಹರಿ-ನಾದ ಮಿಡಿಸುತ್ತ ಏಳುವಂತಿತ್ತು.

ವಿಶ್ವಾಸ ಹೊರಡಲೆದ್ದು —

"ತುಳಸೀ, ಇನ್ನ ಹೊರಡತೀನಿ"

ಎಂದ.

"ಹೋಗಿ ಬರತೀನಿ ಅನ್ನು"

ತುಳಸಿ ತಿದ್ದಿದಳು.

"ತುಳಸೀ, ಹೋಗತೀನಿ ಅನೂದು ಹೆಸರಿಗೆ. ನಾ ಇನ್ನs ನೀ ಇದ್ದಲ್ಲೆ." ತುಳಸಿಯ ಮುಖದ ಬಳಿ ಮುಖ ತಂದು, ಅವಳ ಕಣ್ಣ ಕನ್ನಡಿಯಲ್ಲಿ ನೋಡುತ್ತ ಹೇಳಿದ.

"ವಿಶ್ವಾಸ...... ನನ್ನ ರಾಜಾ."

ಇಷ್ಟೇ ನುಡಿದು ತುಳಸಿ ವಿಶ್ವಾಸನ ಬಲಗೈಯನ್ನು ಎದೆಗೆ ಮುಟ್ಟಿಸಿಕೊಂಡಳು. ಅಲ್ಲಿ ಅವನಿದ್ದ ಸಾಕ್ಷಿಗಾಗಿ ಹಾಗೆ ಮಾಡಿದಳೋ ಏನೋ. ಅವಳ ಬಾಯಿ ಅದನ್ನು ನುಡಿಸಲಸಮರ್ಥವಾಗಿತ್ತು. ಪ್ರೀತಿ-ವಾಚಾ ವಿಮುಖವಾಗಿತ್ತು. ಕಣ್ಣು ವಾಚಾಳಿಯಾಗಿದ್ದವು.

ಇಬ್ಬರ ಕೈ ಹೆಣೆದಿದ್ದವು. ತುಳಸಿ, ವಿಶ್ವಾಸನ ಬಲಗೈ ಎತ್ತಿ ಕಣ್ಣಿಗೆ ಹಚ್ಚಿಕೊಂಡಳು. ಶ್ರೀಕಾರ ಕೊರೆದ, ವಜ್ರ-ಕೆತ್ತನೆಯ ಉಂಗುರ-ಭೂಷಿತ ಅವನ ನೀಳ ಬೆರಳನ್ನು ಸಲಿಗೆಯಿಂದ ಅದುಮಿದಳು.

ವಿಶ್ವಾಸನಿಗೆ ತಟ್ಟನೆ ಏನೋ ನೆನಪಾದಂತಾಗಿ —

"ತುಳಸೀ, ಕೈ ತಾ ಇಲ್ಲೇ"

ವಿಶ್ವಾಸ ತನ್ನ ಬೆರಳಲ್ಲಿಯ ವಜ್ರದುಂಗುರವನ್ನು ಸಡಲಿಸಿ ತೆಗೆದು, ಅವಳ ಬೆರಳಿಗೆ ಹಾಕಿದ. ತುಳಸಿ —

"ವಿಶ್ವಾಸ ಇದೇನು?"

"ನಿಶ್ಚಯದ ಉಂಗುರ ತುಳಸೀ."

ತುಳಸಿ ದಂಗುಬಡಿದು ನಿಂತಳು.

ಅವಳ ಮೌನವನ್ನು ಮುರಿದು ವಿಶ್ವಾಸ ಕೇಳಿದ:

"ನಿಶ್ಚ್ಯಕ್ಕ ಕಬೂಲ ಇಲ್ಲೇನ ತುಳಸೀ? ಸುಮ್ಮ ಯಾಕ ಆದೀ?"

"ವಿಶ್ವಾಸ, ಅದಕಲ್ಲಾ ಸುಮ್ಮ ನಿಂತದ್ದು. ಒಂದ ವಿಚಾರ ಬಂತೂ. ಹೇಳಲೇನು? ನನ್ನ ರಾಜಾ ಒಂದ ರೂಪಾಯ ಕೊಟ್ಟು ಹತ್ತ ವರ್ಷ ಮಾರೀ ತೋರಸಲಿಲ್ಲಾ. ಈಗ ಉಂಗರಾ ಕೊಟ್ಟು ಎಲ್ಲೆ ಮರತೇಬಿಡತಾನೋ ಅಂತ್ಯ ದೇನಸತಿದ್ದೆ."

"ತುಳಸೀ, ನಿನ್ನ ರಾಜಾ ದುಷ್ಯಂತ ಅಲ್ಲಾ, ದಗಾ ಕೊಡಲಿಕ್ಕೆ. ಅಂವಾ ವಿಶ್ವಾಸ ಇದ್ದಾನ. ಖುದ್ದ ನಿನ್ನ ರಾಜಾ ಇದ್ದಾನ."

"ವಿಶ್ವಾಸ...... ರಾಜಾ......"

ಇಬ್ಬರ ಕೈಯೂ ಸುರುಳುರುಳಿ ಸುತ್ತಿದ್ದವು. ಕಣ್ಣಿನ ಅಖಂಡ ಪಾರಣೆ ನಡೆ

ದಿತ್ತು. ವಿಶ್ವಾಸ ಬಾಗಿದ. ತುಳಸಿ ಮುಖ ವಾಲಿಸಿದಂತೆ ಮಾಡಿದರೂ ಅಲುಗದೆ...

"ನಾಳಿಗಿಷ್ಟು ಶಿಲ್ಲಕ ಇರಲೀ"

"ಅಮೃತಕುಂಭ ತುಳಸೀ, ಬರೇದ ಆಗೂ ಹಾಂಗs ಇಲ್ಲಾ."

ಮೃದುವಾಗಿ ಅವಳ ಗಲ್ಲ ಸವರುತ್ತ ವಿಶ್ವಾಸ ಹೇಳಿದ.

ತುಳಸಿ-ಧೋಂಡೂಬಾಯಿ ವಿಶ್ವಾಸನನ್ನು ಬಾಗಿಲ ವರೆಗೆ ಕಳಿಸ ಬಂದರು. ವಿಶ್ವಾಸ ತಿರುಗಿ ನಿಂತು —

"ಧೋಂಡೂಬಾಯೀ, ನಾಳೆ ಮುಂಜಾನೆ ಬರತೀನಿ. ಏನಂಬೂದನ್ನ ಠರಾಸೂಣು. ನೀವೂ ತಯಾರೀ ಮಾಡರಿ......"

ಅವನು ಇನ್ನೂ ಏನೋ ಹೇಳಲಿದ್ದ–ದಸ್ತಗೀರ್‍ಯಾನ ಖಟರಾ ಗಾಡಿಯ ಹಾರ್ನ್ ಬಾರಿಸಿತು. ಅವರು ಇಡೀ ರಾತ್ರಿ ಅಲ್ಲಿಲ್ಲಿ ಅಲೆದು, ಕಡೆಗೆ ಈ ಠಿಕಾಣದಲ್ಲಿ ಗಿರಾಕಿಯನ್ನು ಗಾಠಾಸಿದ್ದರು.

ತುಳಸಿ ಕೈ ಎತ್ತಿ ವಿಶ್ವಾಸನಿಗೆ ಟಾಟಾ ಹೇಳಿದಾಗ ದಸ್ತಗೀರ್‍ಯಾ ಆ್ಯಂಡ್ ಕೋ. ಖಟರಾದಲ್ಲಿ ನಿಶ್ಚೇಷ್ಟಿತವಾಗಿತ್ತು.

o o o o

ವಿಶ್ವಾಸನ "ತುಳಸೀ-ಮಿಲನ" ಪ್ರಕರಣದ ಕಥಾ-ವಿಲಾಸ ಮುಗಿಯಿತು. ದಾದಲ್ಯಾ ಸಪಶೇಲ ನಿಶ್ಚೇಷ್ಟಿತನಾಗಿದ್ದ.

"ಇದೇನ ರಾಜಾ, ಇಂದ ಯಾರೋ ಹೊಸಾ ಗಿರಾಕೀ ಜಮಾಸಿಗೊಂಡ ಬಂದೀ."

## ಹದಿಮೂರು

ಯಾರೋ ನಗೆ-ಬುಗ್ಗೆಯೊಡನೆ ಚಿಮ್ಮಿಸಿದ ಮಾತು, ಅವನತಮುಖನಾಗಿ ನಡೆದ ನನ್ನ ಕಿವಿಗೆ ಬಿತ್ತು. ಮುಖವೆತ್ತಿ ನೋಡಿದೆ. ಬಾಗಿಲ ಒಂದು ತೋಳಿಗೆ

ವಾಲಿ ನಿಂತು, ನೀಳ ಸೆರಗನ್ನು ಒಂದು ಬದಿಯಿಂದ ಎಳೆದು ಇನ್ನೊಂದು ಬದಿಯಿಂದ ಸ್ಕಾರ್ಫದಂತೆ ಹಾಳತಾಗಿ ಕತ್ತಿಗೆ ಸುತ್ತಿಕೊಂಡು ನಿಂತ, ವಿಶ್ವಾಸನ ಗುಡಿಯಲ್ಲಿಯ ದೈವತ ಕಣ್ಣಿಗೆ ಬಿತ್ತು. ದಾದಲ್ಯಾನಿಗೆ ಬವಳಿ ಬಂತು. ಕಣ್ಣು ದೈವತದ ದೀಪ್ತಿಗೆ ತಾನೇ ಮುಂಜಾದವು.

ದಾದಲ್ಯಾನ ಕಣ್ಣ-ಪರೆ ತೆರೆದಾಗ, ವಿಶ್ವಾಸನ ದೈವತ, ವಿಶ್ವಾಸ ಇಬ್ಬರೂ ನಗುತ್ತ ಸೋಫಾದಲ್ಲಿ ಮಂಡಿಸಿದ್ದರು. ಮೂಕ ಪಶು ದಾದಲ್ಯಾ ಮಂಕುಬಡಿದು ಅವರೆದುರು ಇನ್ನೊಂದು ಸೋಫಾದಲ್ಲಿ ಮಂಡಿಸಿದ.

"ತುಳಸೀ, ಗಿರಾಕಿ ಭಾರೀ ಮಬ್ಬ ಆಗೇದ. ಖಡಕ್ ದೀಡ ಕಪ್ಪನರs ಚಹಾ ಗುಟಕರಿಸಿದರರೆ ಎಚ್ಚರಾಗತದೇನು ನೋಡೂಣು. ಒಮ್ಮೆ ಹುಷಾರಾತಂದರ ಮುಗೀತು. ಬಿನ್-ಕೀಲೀ ಅಲಾರ್ಮ-ಗಡಿಯಾಳ ಇದ್ಧಾಂಗ. ದಾದಲ್ಯಾ, ಇಲ್ಲೇನ ಕುಕ್ಕರಸತೀ, ನಡೀ ಅಡಿಗ್ಗೀಮನೀಗೆ. ಇಂದ ಅರೆಹೊಟ್ಟೀಲೆ ಬ್ಯಾರೇ ಎದ್ದೀದಿ. ತುಳಸಿಗೆ ಒಪ್ಪಸ್ತೀನಿ ನಡೀ ನಿನ್ನs. ಹೊಟ್ಟೀ-ನೆತ್ತೀ ಥಣ್ಣಗ ಮಾಡತಾಳ. ತುಳಸೀ, ಇಂದ ಆದಿತ್ಯವಾರಾ. ಠಾಂವಿಕ್ಯದ ಇಲ್ಲೋ? ನಾ ಒಬ್ಬನೇ ಅಲ್ಲಾ ನಿನ್ನ ಪಂಕ್ತೀಗೆ. ಈ ಗಿರಾಕೀದೂ ಮುಕ್ಕಾಂ ಇಲ್ಲೇ. ನೀ ಚಹಾ ಮಾಡೂದರಾಗ, ಈ ಮಿಕದ್ದು ಗುರತಾ ಮಾಡಿಕೊಡತೀನಿ. ನಿನಗ ಹೇಳಿದ್ನೆಲಾ, ದಾದಲ್ಯಾನ ಕಥೀ. ಗೋವಾ ಲಾಟರೀ ತಿಕೀಟಿನ್ಯಾಗ, ದಸ್ತುಗಿರ್ಯಾನ್ನ ಖರೀದಿ ಹಿಡದಾನಂತ. ಸಾಕ್ಷಾತ್ – ಅದೇ ಗಿರಾಕಿ ಇದು! ಹುಬೇಹೂಬ ಎದರಿಗೆ ಕೂತದ ನೋಡು. ದಾದಲ್ಯಾ, ತಿಳೀತಿಲ್ಲೋ ಇಷ್ಟೊತ್ತನಕಾ ಹೇಳಿದ ಕಥೀಯೊಳಗಿನ ಕನ್ಯಾ ಯಾರು ಅನ್ನೂದು? ದಾದಲ್ಯಾ, ಹ್ಯಾಂಗ ಮಾತಾಡಲಿ? ಏನಂತ ಸುರುವ ಮಾಡಲಿ ಅಂತ್s ಅನುಮಾನಸ ಬ್ಯಾಡಾ. ಅಗದೀ ಭಿಡೇ-ಭಾರಾ ಇಲ್ಲದೇ 'ತುಳಸೀ' ಅಂತನ್s ಸುರೂ ಮಾಡು. ಬೈಧಾಂಗ ಏನ ಆಗೂದಿಲ್ಲಾ."

"ನಮಸ್ಕಾರ ವೈನೀ"

ದಾದಲ್ಯಾ ಅಚಾನಕ ಮಾತು ಮಿಂಚಿಸಿದ.

"ನೋಡ ತುಳಸೀ, ನೇಮುಬಾಜೀ ಹ್ಯಾಂಗ ಅದ್s. ದಾದಲ್ಯಾನ ಬಾಣಾ ಎಂದೂ ಹುಸೀ ಹೋಗಿಲ್ಲಾ."

ವಿಶ್ವಾಸ.

"ಕಚ್ಚಾ ಗುರೂನ ಚೇಲಾ ಇದ್ದರ ಹುಸೀ ಹೋಗಬೇಕು. ನಿನ್ನ ತಾಲಿಮೀ

ಒಳಗ ತಯಾರಾದ ಗಿರಾಕಿ, ಅಂದಮ್ಯಾಲ ಏನ ಕೇಳೂದು? ಹೌದಲ್ಲೋ ಭಾವಜೀ?"
ತುಳಸಿಗೆ ನಾನು 'ವೈನೀ' ಅಂದದ್ದಕ್ಕೆ ಒಪ್ಪುವ ರೀತಿಯಲ್ಲಿ, ನನ್ನ-ತನ್ನ ಸಂಬಂಧ ಸೂಚಿಸಿ ಅವಳು 'ಭಾವಜೀ' ಅಂದಳು.

"ಮಾರಾಯಳ್ಯ, ಯಾಕ ನೀ ಭಾವಜೀ ಅನ್ನೂದು. ಯಾಕ ಅಂವಾ ವೈನೀ ಅನ್ನೂದು. ಸರ್‍ಳ ದಾದಲ್ಯಾ, ತುಳಸೀ ಅನ್ರ್ಯಲಾ. ಸುಟಸುಟೀತ ಹೆಸರ ಅವs. ಮಗನs, ವಸೂಗೇನು ನಾಳೆ ವೈನೀ ಅನಾವೇನು ನೀನು?"
ವಿಶ್ವಾಸ.

"ವಿಶ್ಯಾ, ನಿನ್ನ ಈ ರದ-ಬದಲೀ ಜರೂರೀನs ಇಲ್ಲಾ. ತುಳಸೀ-ದಾದಲ್ಯಾ ನಾತೇ ತಾನs ಜಮಾಸ್ತಿತ್ತು. ನಾ ಅಂತೂ ತುಳಸೀ ಅಂತs ಅಂದsಬಿಟ್ಟೀನಿ. ತುಳಸೀ, ಒಮ್ಮೆ ಬಾಯಿ ತುಂಬೇ ದಾದಲ್ಯಾ ಅಂತ ಅಂದಬಿಡು. ವಿಶ್ಯಾನ ಕಡೇ ಟಕಮಕ ನೋಡೂ ಕಾರಣೇ ಇಲ್ಲಾ. ನನ್ನ ಹೆಸರ ಅಲ್ಲಿಕ್ಕೆ ಅವಂದ್ಯಾಕ ಪರವಾನಗಿ? ಹೂಂ ಜಲ್ದೀ ಕರೋ."

"ದಾದಲ್ಯಾ"
ತುಳಸಿ.

"ತುಳಸೀ. ಖುಷ್ ಆದಾ ನಿನ್ನ ದಾದಲ್ಯಾ. ಮುಂಜಾನೆ ಅರೆಹೊಟ್ಟೀಲೇ ಎದ್ದಿದ್ದೆ. ಈಗ ಢೇಕರಿಕಿ ಬರೂ ಹಾಂಗ ಹೊಟ್ಟಿ ತುಂಬಿತು. ಮುಂಬೈಯಾಗ ಸುದ್ದೇ, ನನ್ನ ಹೊಟ್ಟೀ-ನೆತ್ತೀ ಕಾಳಜೀ ಮಾಡೂ ವೈನೀನ್ನ ದೇವರು ನಿರ್ಮಾಣ ಮಾಡೇ ಕೂಡಿಸ್ಯಾನ. ಸುಮ್ಮನೇ ಅವನ ಹೆಸರಲೆ ಕಲ್ಲ ಒಡೀತಿದ್ದೆ. ವಿಶ್ಯಾ, ಮುಂಚೇ ತಿಳಿಸಿದ್ದೀ ಅಂದರ, ತಯ್ಯಬ್ಜೀ ಅವರ ಮನ್ಯಾಗ ಠಾಣೇನs ಹಾಕತಿದ್ದಿಲ್ಲಾ. ಇಲ್ಲೇ ಮುಕ್ಕಾಂ ಠೋಕಾಸತಿದ್ದೆ. ಏನ ಮಾಡೂದು? ತುಳಸೀ. ಇನ್ನ ಆಯಿತ್ವಾರಾ, ನಮ್ಮ ಹಜರೀ ಇಲ್ಲೆ ತಪ್ಪದೇ ಬೀಳೂದಂತs ತಿಳೀ! ನಡೀ ಅಡಿಗೀ ಮನೀಗೆ. ನೀ ಚಹಾ ಬಗೀಹರಸು. ನಾ ಪಲ್ಯಾ-ಕಾಯೀ ಹೆಚ್ಚತೀನಿ, ಸಂಜೀ ಅಡಿಗ್ಗೇ. ಏನರ ತರೂದಿದ್ದರ, ವಿಶ್ಯಾನ್ನ ಹೊತ್ತಹಾಕೂಣಂತ: ನನಗ ಇನಾ ನಿನ್ನ ಜೋಡೀ ಭಾಳ ಭಾಳ ಮಾತಾಡೂದದ. ಅವನ ಭಾನಗಡೀ ಖುದ್ದ ನಿನ್ನ ಬಾಯಲೇನs ಕೇಳೂದದ."

"ತುಳಸೀ, ಸ್ಕ್ರೂ ಢೀಲಾ ಆತಿನ್ನ. ಆಸಾಮಿ ಅಟಕೇಪಾರ ಆತು. ಮಗಾ, 'ತುಳಸೀ'-'ವೈನೀ' ಅನಕೋತನs ಹ್ಯಾಂಗ ಲಗಟ ಸುರೂ ಮಾಡಿದ ನೋಡು. ಇನ್ನ

ಮುಂಗಡೀ ಕೂಸಿನ್ಹ್ಯಾಂಗ ನಿನ್ನ ಸೆರಗ ಬಿಟ್ಟರ ಕೇಳು ಮಗಾ."

"ದಾದಲ್ಯಾ, ನೀ ಪಲ್ಯಾ ಹೆಚ್ಚೂದು ಬ್ಯಾಡಾ. ರಾಜಾ ಏನ ತರಲಿಕ್ಕೆ ಹೋಗೂ ಜರೂರೀನೂ ಇಲ್ಲಾ. ಎಲ್ಲಾ ಅದs ಮನ್ಯಾಗ. ಚಹಾ ಕುಡದು ಚೌಪಾಟೀ ಕಡೇ ಹೋಗೂಣಂತ. ಇನಾ ಈಗ ದೇವರs ಅಂತ ಐದ ಹೊಡದsದ. ಏಳೂವರೀಗೆ ತಿರಿಗಿ ಬಂದರೂ ಆಗತದ. ಮೂರ ಮಂದೀ ಅಡಿಗಿ. ಆಡ್ಯಾಡಕೋತ ಆಗತದ. ರಾಜಾ ಎಲ್ಲಾ ಹೇಳಿರಬೇಕು ನಿನಗ. ನನಕಿಂತಾ ಮಸ್ತ ಅವನೇ ಹೇಳ ತಾನ, ತುಳಸೀ ಕಥೀ. ವಸೂನ ಮುಂದ ಹೇಳಾಗ ನನ್ನೂ ಮುಂದೇ ಕೂಡಿಸಿ ಗೊಂಡಿದ್ದಾ. ಅವನ್ಹಾಂಗ ನಾ ಹೇಳೂದಕ ಬರ್‍ಹಾಂಗಿಲ್ಲಾ. ಯಾಕ ರಾಜಾ?"
ತುಳಸಿ.

"ತುಳಸೀ, ನೀ ವಿಶ್ಯಾ ಅನ್ನು. ರಂಗ ತಾನs ತುಂಬತದ. ಖುಷ್ಯಾಗಿದ್ದಾಗ ವಸೂ 'ವಿಶ್ವಾಸರಾವ್' ಅನೂದು, ನೀ 'ವಿಶ್ಯಾ' ಅನ್ನೂದು ಭಾರೀ ಮೇಳ ಕೂಡ ತಾವ. ದಾದಲ್ಯಾ ಅಂತs ಹ್ಯಾಂಗ ಅಂದಿ, ಹಾಂಗ ಲಟ್ಟನs ವಿಶ್ಯಾ ಅನ್ನು. ದಾದಲ್ಯಾನ್ಹಾಂಗ, ನಿಂದೂ ಸ್ಕ್ರೂ ಢೀಲಾ ಆಗಿ ಕಥೀಗೆ ರಂಗ ಬರತsದಿಲ್ಲೋ ನೋಡು."
ವಿಶ್ವಾಸ.

"ದಾದಲ್ಯಾ, ರಾಜಾಗ ಬೈದ ಕರಿಸಿಗೊಂಬೂದು ಭಾರೀ ಹುಕೀ ಅದs. ತುಳಸೀ, 'ವಿಶ್ಯಾ' ಅನ್ನೂ ಅಂತs, ನನ್ನ ಭಾಳ ಕಾಡಿದಾ. ಯಾರ ಗೆದೀತಾರ ನೋಡ ಬೇಕಾಗೇದ. ದಾದಲ್ಯಾ, ನಂದೂ-ನಿಂದೇನ ಖರೇ ಸುಟಸುಟೀತ ಹೆಸರ ಅವs ನೋಡು. ಹ್ಯಾಂಗ ಕರದರೂ ನಡೀತದ. ಇಕಾ, ಇನಾ ಚಹಾ ಆದs ಆಂs ರಾಜಾ. ದಾದಲ್ಯಾಗ ದೀಡs ಕಪ್ಪ ಸಾಕಾದರ, ನಿನಗ ಕಮೀತಕಮೀ ಎರಡರs ಬೇಕಾಗತದ. ನಾ ಅಜಮಾಸಲೇನs ಇಟ್ಟಿದ್ದೆ."

ನಮ್ಮ ಚಹಾಪಾನ ಮುಗಿಯಿತು. ಹತ್ತು-ಹದಿನೈದು ಮಿನೀಟಿನ ಅವಧಿ ಯಲ್ಲಿ, ತುಳಸಿ ಕಪ್ಪು-ಬಸಿ ತೊಳೆದಿಟ್ಟು. ಹೊರಗೆ ಹೊರಡುವ ತಯಾರಿಯಿಂದ ವಸ್ತ್ರಾಂತರವಾಗಿ ಬಂದಳು.

ತಿಳಿ ನೀಲ ಮುಗಿಲ ವರ್ಣದ ಪಾಚವಾರೀ ಉಟ್ಟು, ಅಚ್ಚ ಕರೀ ಸ್ಯಾಟಿನ್ನಿನ ಜಾಪ್ಲಾವುಜ ತೊಟ್ಟು, ಮುಖಕ್ಕೆ ಒಂದು ಕೈ, ನವುರಾಗಿ ಪೌಡರ್ ಆಡಿಸಿ, ಏಕವೇಣಿ ಯಲ್ಲಿ ದ್ವಿವರ್ಣದ ನಡುವೆ ಅರೆ ಅರಳಿ ಮಲಮಲಿಸುವ ಮೋಗರಾ ಮುಡಿದು,

ತುಳಸಿ ನಗುನಗುತ್ತ ನಾವು ಕುಳಿತಲ್ಲಿಗೆ ಬಂದು —

"ಚಲೀಯೇ ಜನಾಬ. ಆಪಕೀ ತಯಾರೀ ಹುಯೇ"

ಎಂದಳು.

ಅರ್ಧ ಸೇದಿದ ಸಿಗರೇಟನ್ನು 'ಆ್ಯಶ್-ಪಾಟ್'ನಲ್ಲಿ ಒತ್ತಿ ಆರಿಸುತ್ತ, ವಿಶ್ವಾಸ ಹೇಳಿದ :

"ತುಳಸೀ, ನನಗೂ ಅರಿವೀ ಬದಲಾಸೂದದ. ಘಟ್ಟೀ ಅರಿವಿ ಬಂದಿರ ಬೇಕಲಾ? ಈ ವಾಸಾಂಸಿ ಜೀರ್ಣಾನೀಗೆ ರಜಾ ಕೊಡತೀನಿ. ಐದ ಮಿನಿಟಿನ್ಯಾಗ ಬಂದೆ."

ಮಾತನಾಡುತ್ತ, ತುಳಸಿ ವಸ್ತ್ರಾಂತರವಾಗಿ ಬಂದ ಅವಳ ಶಯ್ಯಾಗೃಹದ ಕೋಣೆಗೇ ಹೋದ.

"ತುಳಸೀ, ವಿಶ್ಯಾ ಮುಂಬೈಯಾಗ ಸಂಸಾರಸs ಹೂಡ್ಯಾನ ಕಾಣಸ್ತದ? ಅಭ್ಯಾಸ ಎಕಡೆ ಮಾಡತಾನ; ನಿನ್ನ ಜೋಡೀ ಸಂಸಾರ ಎಕಡೆ ಮಾಡತಾನ? ಹಾಸ್ಟೆಲ್ ಬಾಡಿಗೀ ಫುಕಟನs ಬಡೀತಾನ ಕಾಣಸ್ತದ?"

ನಾನು ಕೇಳಿದೆ.

"ದಾದಲ್ಯಾ ಮಗನs, ನೀ ಏನು ನನ್ನ 'ಗಾರ್ಡಿಯನ್ ಏಂಜಲ್'ನ್ಹಾಂಗ ಬಂದಿ ಕಾಣಸ್ತದ ಮುಂಬೈಗೆ? ಪಂತಮಾಮಾ-ರಾವಜೀಕಾಕಾ ನನ್ನ ಖರ್ಚ ನಡಸ್ತಿದ್ದರೂ ನಾ ಸಂಸಾರ ಹೂಡಿದ್ದರ ದಶಿಂದ ಕೇಳಿರಲಿಲ್ಲಾ. ನೀ ಬರೂತ್ಲೇ ಕಿಲಾಪ ನಡಿಸಿದಿ. ನಾ ಹೇಳಿದ್ದೆ ದಾದಲ್ಯಾ ನಿನಗ. ಎಲ್ಲಿಗೋ ನಮ್ಮದು ಅವಸರಲೇ 'ಕ್ವಿಕ್ ಮಾರ್ಚ್' ನಡದsದಂತ. ತುಳಸೀ ಜೋಡೀ, ಇಲ್ಲೆ ಸಂಸಾರ ಮಾಡೂದು, ಅಲ್ಲೆ ಅಭ್ಯಾಸ ಮಾಡೂದು – ಎರಡೂ 'ವಾಟರ್-ಟೈಟ್ ಕಂಪಾರ್ಟ್‌ಮೆಂಟ್' ಇದ್ಹಾಂಗ. 'ಮಮ ಕಿಂಚಿನ್ ನ ದಹ್ಯತಿ' ಅಂದ ಹಾಂಗs. ಇಲ್ಲಿ ಇದ್ದಾಗ ಅಲ್ಲೀದರ ನೆನಪ ಆಗೂದಿಲ್ಲಾ. ಅಲ್ಲೆ ಇದ್ದಾಗ ಇಕಡೀ ಪರಿವಿ ಇರೂದಿಲ್ಲಾ. ಇಂಥಾ ಬಾಬತ್ಯಾಗ, ವಿಶ್ಯಾ ಎಂಥಾವಾ ಅನ್ನೂದು ನಿನಗ ಠಾಂವಿಕ್ಯದ."

ತುಳಸಿಗೆ ನಾನು ಕೇಳಿದ ಪ್ರಶ್ನೆಯನ್ನು, ಕೋಣೆಯಲ್ಲಿ ಅರಿವೆ ಬದಲಿಸುತ್ತಿದ್ದ ವಿಶ್ವಾಸ ಕೇಳಿದ್ದ. ಅಲ್ಲಿಂದಲೇ ಉತ್ತರಿಸಿದ.

ವಿಶ್ಯಾ, ವಸೂ-ತುಳಸಿಯರ ಸಹವಾಸದ – ಅವರ ಸಖ್ಯದ ಅಮೃತ-ಕ್ಷಣದ ನೆನಪನ್ನು ಮೆಲುಕಾಡಿಸಿ ಮೆಲುಕಾಡಿಸಿ, ಕಾವ್ಯರಚನೆಯಲ್ಲಿ ಸ್ವಪ್ನರಾಜ್ಯದಲ್ಲಿ ತನ್ನ

ಅಮೂಲ್ಯ ವೇಳೆಯನ್ನು ಅಟ್ಟಿಸುವ ಜಾತಿಯಲ್ಲ. ಅವನು ಭಾವನಾಪ್ರಧಾನ ಜೀವಿಯಲ್ಲ. ಅವನು ವಸೂನ ಕೂಡ ಇರಲಿ, ತುಳಸಿಯು ಕೂಡ ಇರಲಿ, ಆಗ ಅವನಿಗೆ – "ಕಾಡಾದೊಡೇನದುವೆ ಸಗ್ಗಸುಖವೆನಗೆ" ಎನ್ನುವ ಭಾವವಿರುತ್ತದೆ. ಕಾಲೇಜಿನ ಆವಾರದಲ್ಲಿ ಕಾಲಿಟ್ಟಾಗ – ಅಸಿಧಾರೆಯ ಮೇಲೆ ಸರಾಗವಾಗಿ ನಡೆಯ ಬಲ್ಲ – ನಡೆಯುವ ಚಿತ್ತಸ್ಥೈರ್ಯವಿರುತ್ತದೆ. ಅದರ ಪರಿಪೂರ್ಣ ಪರಿಚಯ ನನಗೆ ಇರಲಿಲ್ಲವೆಂದಲ್ಲ. ನಾನು ತುಳಸಿಗೆ ಕೇಳಿದ ಪ್ರಶ್ನೆಯಲ್ಲಿ ಯಾವ ಅನ್ಯ ಭಾವನೆಯೂ ಇರಲಿಲ್ಲ. ನನಗೆ ಬೇಕಾದದ್ದು – ನಾನು ತಿಳಿಯ ಬಯಸಿದ್ದು – ತುಳಸಿ, ಊರು-ಕೇರಿ ಬಿಟ್ಟು, ಮುಂಬೈಗೆ ಬಂದು ನಿಂತುದೇಕೆಂದು – ಅವಳ ಇಲ್ಲಿಯ ವಾಸ್ತವ್ಯವನ್ನು ಯಾರು ನಿರ್ವಹಿಸುತ್ತಿರಬೇಕೆಂಬುದು. ವಿಶ್ವಾಸ ಅದನ್ನು ಊಹಿಸಿರಬೇಕು. ಅದಕ್ಕೇ ಸೂಚ್ಯವಾಗಿ. ಪಂತಮಾಮಾ-ರಾವಜೀಕಾಕಾ, ತನ್ನ ಖರ್ಚು ಸಾಗಿಸುತ್ತಿದ್ದರೂ ಇದರ ಬಗ್ಗೆ ಕಿಲಾಪಿಸಿರಲಿಲ್ಲವೆಂದು ಅಂದಿದ್ದ. ಆದರೆ ವರ್ಷಾನುಗಟ್ಟಲೇ ಎರಡೋ-ಮೂರೋ ಸೂಟಿನ ಮೇಲೆ ದಿವಸ ತೆಗೆಯುವ, ಖರ್ಚಿನ ಬಾಬಿನಲ್ಲಿ ಜೀನಹಂಕನಾದ ವಿಶ್ಯಾ, ತುಳಸಿಯ ವಾಸ್ತವ್ಯದ ಖರ್ಚು ವಹಿಸಿಕೊಂಡಿರುವದೂ ನನಗೆ ಗುಂಭವೆನಿಸಿತು.

ತುಳಸಿ-ವಿಶ್ವಾಸರ ಸಂಬಂಧ ವಸೂನಿಗೆ ವಿದಿತವಿದೆ ಎಂಬ ಮಾತನ್ನು ತುಳಸಿ ಆಗಲೇ ಹೇಳಿದ್ದಳು. ವಿಶ್ಯಾ-ತುಳಸಿಯ ಸಂಬಂಧ ಜೋಡಿಸಿಕೊಳ್ಳುವಾಗ, ವಸೂನ ನಿದರ್ಶನಕ್ಕೆ ಇದನ್ನು ತಂದಿರಲೇಬೇಕು. ಅವನಲ್ಲಿ ಒಳ-ಹೊರಗು, ಕವಡುಗಂಟಕುತನ, ಮುಚ್ಚುಮರೆಗೆ ಎಂದೂ ಆಸ್ಪದವಿಲ್ಲ. ವಸೂನ ಸ್ಥಾನ-ಮಾನ ಭದ್ರವಾಗಿತ್ತು. ಅದು ತುಳಸಿಗೂ ಗೊತ್ತಿರಬೇಕು. ಗೊತ್ತಿರದಿದ್ದರೂ ತನ್ನ ಸ್ಥಾನ-ಮಾನದ ಅರಿವಿರಬೇಕು. ತಾನು ವಿಶ್ವಾಸನ ಪ್ರೇಯಸಿಯಾಗಿ, ಸಖಿಯಾಗಿ, ಜೀವನದ ಜೊತೆಗಾರ್ತಿಯಾಗಿ ಬಂದರೂ, ತನ್ನ ಜಾಗದ ಪರಿವೆ ಇದ್ದು ಅದನ್ನು ಕೇಳಿ ಪಡೆದುಕೊಂಡಿರಬೇಕು. ಅವಳಿಗೆ ಪಟ್ಟಮಹಿಷಿಯ ಪೀಠದ ಆಶೆ ಇರಲಿಕ್ಕಿಲ್ಲ. ಅದು ಅಲಭ್ಯವೆನ್ನುವದಕ್ಕಿಂತಲೂ. ತಾನು ಅದನ್ನು ಅಪೇಕ್ಷಿಸುವದು, ರೀತಿ-ರಿವಾಜು ಬಾಹಿರವೆಂದು ಖಚಿತವಾಗಿ ಅವಳಿಗೆ ಗೊತ್ತಿರಬೇಕು. 'ವಸೂ' ಎಂಬ ಹೆಸರಿನ ಇನ್ನೊಂದು ಜೀವ, ವಿಶ್ವಾಸನ ಹೃದಯಪೀಠದಲ್ಲಿ ವಿರಾಜಮಾನವಾದ ವಿಷಯ ಅವಳಿಗೆ ಅವಿದಿತವಿತ್ತು. ಅದರ ಕಲ್ಪನೆಯೂ ಅವಳಿಗಿರಲಿಲ್ಲ. ತನ್ನ ಸ್ಥಾನ-ಮಾನದ ಖಾತ್ರೀ ಮಾಡಿಕೊಂಡೇ ಅವಳು ವಿಶ್ವಾಸನಿಗೆ ಅದನ್ನು ಕೊಡಲು

ವಿನವಿಸಿಕೊಂಡಿರಬೇಕು......?

ತುಳಸಿಗೆ ಸ್ಥಾನ-ದಾನ ಮಾಡಿದ ವಿಶ್ವಾಸ, ಅದನ್ನು ಮುಚ್ಚಿಡದೆ ನೇರವಾಗಿ ವಸೂನಿಗೆ ತಿಳಿಸಿದ್ದ. ವಿಶ್ವಾಸನಲ್ಲಿ ತನ್ನ ಜೀವನದ ಸಾರ್ಥಕ್ಯವನ್ನು ಕಂಡುಕೊಂಡ ವಸೂ, ಇದರಿಂದ ಚಲ-ವಿಚಲಿತವಾಗಿರಲಿಕ್ಕಿಲ್ಲ. ಅವಳು ಮುಕ್ತಮಾನಸಳಾಗಿಯೇ ಇಬ್ಬರನ್ನೂ ಸ್ವಾಗತಿಸಿರಬೇಕು. ಸಾಂಗಲಿಯಲ್ಲಿ ತುಳಸಿ-ವಿಶ್ವಾಸರ ಸಂಬಂಧ ಹೆಣೆದ ಮೇಲೆಯೇ ಅವಳು ಮುಂಬೈಗೆ ಬಂದು, ಅವನ ಕೈ ಹಿಡಿಯುವ ನಿರ್ಧಾರವನ್ನು ಸಾರಿ ಹೋಗಿದ್ದಾಳೆ. ಅವಳಿಗೆ ವಿಶ್ವಾಸ-ತುಳಸಿಯರ ಪ್ರಕರಣ ಪೂರ್ವಪರಿಚಿತವಿತ್ತೇ? ಆದರೆ ಅದರ ಪರಿಚಯು ಅನ್ಯರಿಗೆ, ರಾವಜೀಕಾಕಾ-ಪಂತಮಾಮಾ ಅವರಿಗೆ ಇರಬಹುದೇ? ವಿಶ್ವಾಸ, ಇದನ್ನು ಅವರಿಗೆ ತಿಳಿಸಿರಬಹುದೇ? ಧೋಂಡೂಬಾಯಿ ಬೆಳೆದು ನಿಂತ ತುಳಸಿಯನ್ನು ವಿಶ್ವಾಸನಿಗೆ ಒಪ್ಪಿಸಿ, ಸಹಜಾಸಹಜೀ ಕಡೆಗಾಗಿರುವದು ಶಕ್ಯವಿದೆಯೇ?

ವಿಶ್ವಾಸ ತನ್ನ-ತುಳಸಿಯ ಕಥನ ಮುಗಿಸುವ ಹೊತ್ತಿಗೆ ನಾವು ತುಳಸಿಯ ಮನೆಯ ಬಾಗಿಲಿಗೆ ಬಂದಿದ್ದೆವು. ಮಾತು ಅರೆಗಚ್ಚಿಯಾಗಿ ನಿಂತಿದ್ದವು. ಉಳಿದದ್ದನ್ನು ನಾನು ತುಳಸಿಯ ಬಾಯಿಂದಲೇ ಕೇಳುವದೆಂದು ಹೇಳಿದ್ದೆ. ಕದಾಚಿತ್ ಚೌಪಾಟಿಯ ಬೈಠಕಿಯಲ್ಲಿ, ತುಳಸಿ ಇದರ ಕಥನ ಮಾಡಬಹುದೆಂದು ನಂಬಿದ್ದೆ. ಅದರ ಪೂರ್ವ ಪೀಠಿಕೆಯೆಂದು ವಿಶ್ವಾಸನ ಸಂಸಾರ, ಅವನ ಅಭ್ಯಾಸದ ವಿಷಯವನ್ನು ಕುರಿತು ಕಿಲಾಪಿಸಿದ್ದೆ. ನನ್ನ ಕಿಲಾಪದಲ್ಲಿಯ ಆಶಯ ವಿಶ್ವಾಸನಿಗೆ ಅವಗತವಾಗಿತ್ತು.

ಕೋಣೆಯಿಂದ ಹೊರಬರುತ್ತ ವಿಶ್ವಾಸ —

"ಯಾಕ ತುಳಸೀ, ಸಮುದ್ರಸಾಕ್ಷೀ ಆಗೇ, ದಾದಲ್ಯಾಗ ನಿನ್ನ ಕಥೀ ಹೇಳೂದಂತ ಠರಾಸೀ ಏನು? ನನ್ನ ಅಭ್ಯಾಸ ಹ್ಯಾಂಗ ನಡದ್ವದ. ನಿನ್ನ ಜೋಡೀ ಸಂಸಾರ ಹ್ಯಾಂಗ ನಡದ್ವದ ಅಂತ ಕೇಳ್ಯಾನ ದಾದಲ್ಯಾ? ಈ ಸಾರೇ ನಾ ಪಾಸ ಆದರ, ಅಭ್ಯಾಸ ಮಾಡಿದ್ದಾ ಅನ್ನೂದಕ್ಕ ಸಾಕ್ಷೀ ಜರೂರೀನs ಇಲ್ಲಾ. ಇನ್ನ ಸಂಸಾರ ಹ್ಯಾಂಗ ನಡದ್ವದ ಅನ್ನೂದಕ್ಕ ಯಾರು ಉತ್ತರಾ ಕೊಡಬೇಕು? ನೀವs ಠರಾಸರಿ. ನಾನೇ ಕೊಡಬೇಕಂದರ ಅಗದೀ, ಸಾಕ್ಷೀ-ಪುರಾವೇ ಸಹಿತ ಕೊಡಬೇಕಾಗತದ. ಅದಕ ಮುದ್ದತ ಬೇಕಾಗತದ. ರಾತ್ರೀ ಅಕರಾದ ತನಕಾ ವ್ಯಾಖ್ಯಾ ಮಾತ್ರ ಕೊಡಬೇಕ, ದಾದಲ್ಯಾ."

ಎಂದು ಹೇಳಿದ.

ಯಾರೂ ಉತ್ತರಿಸುವ ಅಗತ್ಯವಿರಲಿಲ್ಲ. ದಾದಲ್ಯಾ ತೀರ ಖೋಕಾ ಗಿರಾಕಿಯುಲ್ಲ. ಅವನಿಗೂ ಕಣ್ಣು, ಕಿವಿ, ಹೆಗಲ ಮೇಲೆ ಮಜಬೂತಾಗಿ ಕುಳಿತ ಖೋಕಾದಲ್ಲಿ ಚೀಜ ಎಂಬ ವಸ್ತು ಇದ್ದವು. ದಾದಲ್ಯಾ ಇಷ್ಟು ಹೊತ್ತಿನ ವರೆಗೆ ಕಣ್ಣ ಪಾರಣೆಯಾಗುವಂತೆ ಕಿವಿಯು ಧನ್ಯವಾಗುವಂತೆ ತುಳಸಿಯ ಸಂಸಾರಗಿತ್ತಿತನ ನೋಡಿದ್ದ. ಅವಳ ಸುಗೃಹಿಣೀ-ವಾಣಿಯನ್ನು ಕೇಳಿದ್ದ. ಮನೆಯಂತ ಮನೆಯಲ್ಲ ಸಂಸಾರಗಿತ್ತಿಯ ಕೈ, ಕಸೂತಿಯ ಕುಸುರು ಬಿಡಿಸಿದ್ದನ್ನು ನೋಡಿದ್ದ. ಜೀವಂತ ತನದ, ಪ್ರೀತಿಯ ಅಖಂಡ ಧಾರೆ ಹಿಡಿದದ್ದನ್ನು ಕಣ್ಣಾರೆ ಕಂಡಿದ್ದ. ತುಳಸಿ ಚಹ ಮುಗಿಸಿ, ಕಪ್ಪು-ಬಸಿಗಳನ್ನು, ಚಹದ ಪಾತ್ರೆಗಳನ್ನು ಚಟ್ಟನೆ ಬೆಳಗಿ, ಅವುಗಳ ಜಾಗದಲ್ಲಿ ಓರಣವಾಗಿ ಇರಿಸಿದ್ದಳು. ನಿಧಾನವಾಗಿ ಮಾಡಿದರಾಯಿತೆಂದು ಬಚ್ಚಲ ಮೂಲೆಯಲ್ಲಿ ಒಟ್ಟಲಿಲ್ಲ. ಆಗಲೇ ನನಗೆ, ಇಲ್ಲಿ ಸಂಸಾರಕಾಮಿ ಇರುವ ಖಾತ್ರೀಯಾಗಿತ್ತು. ವಿಶ್ವಾಸನ ಅರಿವೆ-ಅಂಚಡಿ ತುಳಸಿಯ ಮನೆಗೇ ಬಂದಿದ್ದವು. ಅವಳಿಂದ ಮಡಿಯಾಗಿ, ಇಸ್ತ್ರಿಯ ಅಸ್ತ್ರವಾಡಿ, ಶುಭ್ರಧವಲವಾಗಿದ್ದವು. ಸಂಸಾರ ಹೇಗೆ ನಡೆದಿದೆ ಎನ್ನುವದನ್ನು ಹೇಳಲಿಕ್ಕೆ ಸಾಕ್ಷಿ-ಪುರಾವೆಯ ಅಗತ್ಯ ಬೇಕಿರಲಿಲ್ಲ.

ಪಂತರ ಮನೆಗೆ ಗೃಹಿಣೀ-ದಾನವನ್ನು ದೇವರು ಮುಕ್ತಮಾನಸನಾಗಿ ಮಾಡಿದ್ದ. ರಾಧಾಕಾಕೂ ಅವರ ಗೃಹಿಣೀ-ಜೀವನವನ್ನು ಪ್ರತ್ಯಕ್ಷವಾಗಿ ನೋಡಿದ್ದೆ. ಸೋನಕ್ಕನ ಜೀವನವನ್ನು ಅಷ್ಟಿಷ್ಟು ನೋಡಿದ್ದೆ. ಅವರನ್ನು ಬಿಟ್ಟು, ಗಿರಿಜಾ-ಬಸವಂತಿಯರೂ ಈ ಮನೆಯ ಬಳಗದಲ್ಲಿ ಬಂದಿದ್ದರು. ಅವರ ಗೃಹಿಣೀ ಗೃಹ ಮುಚ್ಯತೇ ಬದುಕನ್ನು ಕಣ್ಣಾರೆ ಕಂಡಿದ್ದೆ – ಕಾಣುತ್ತಿದ್ದೆ. ಇಂದು ತುಳಸಿ ಬಂದಳು. ಯಾವ ನಾತೆಯಿಂದಲೇ ಬಂದಿರಲಿ. ಗೃಹಿಣಿಯಾಗಿ ಬಂದಳು. ಸಂಸಾರವನ್ನು ಅಂದಚಂದಗೊಳಿಸಿದಳು. ಗಿರಿಜಾ-ಬಸವಂತಿ ಶಾಪವಾಗದೆ ವರವಾಗಿ ಬಂದಂತೆ, ತುಳಸಿಯೂ ವರವಾಗಿಯೇ ಬಂದಂತಿದ್ದಳು. ಈ ವರದಾನ-ಮಾಲಿಕೆ ನನಗೆ ವಿಚಿತ್ರವೆನಿಸಿತು.

"ವಿಶ್ಯಾ, ಗಿರಿಜಾ-ಬಸವಂತಿ-ತುಳಸಿ ಯಾವ ಮಾಯದಿಂದ, ಯಾರ ಲೀಲಾದಿಂದ ಅವತಾರ ಮಾಡಿರಬೇಕು? ದಾದಾನ ಯೋಗ್ಯತಾ ಖಟ್ಟಿಗೆ ಹಚ್ಚೊ ಭಾಸಗಡೀ ಒಳಗ ದೇವರು ಬೀಳಲೇ ಇಲ್ಲಾ. ತನ್ನ ವರಾ ಹುಸೀ ಹೋಗಬಾರದು ಅನೂ ಖಟಿಪಿಟಿ ಮಾಡಿದಾ. ಬಸವಂತಿನ್ನ ಅಂವಗ ವರದಾನ ಮಾಡಿದಾ. ವಸೂ, ಬರೂದು-ಬಿಡೂದು ತಿಪಲಾ ಅವನ ತಲೀಗೇ ಹತ್ತಿರಲಿಕ್ಕಿಲ್ಲಾ. ಇಲ್ಲೆ ನಿನ್ನ ಫಲಾ

ಅದs, ಭೋಗಸು ವಿಶ್ಯಾ, ಅಂತs ತುಳಸಿನ್ನ ಕಳಿಸಿದಾ. ಹತ್ತ ವರ್ಷ ತನ್ನ ಅಂಗೈಯಾಗ ಹಿಡದು ಜ್ವಾಕಿ ಮಾಡಿ ನಿನ್ನ ಕಡೇ ಕಳಿಸಿದಾ. ಯಾಕ ಕಳಿಸಿರಬೇಕು ? ಯಾಕ ತಡದ ನಿಂತಿರಬೇಕು ? ಎಲ್ಲಾ ವಿಚಿತ್ರನs ವಿಶ್ಯಾ !"

"ದಾದಲ್ಯಾ, ಗಿರಿಜಾಂದು-ಬಸವಂತೀದು ಪವಾಡ ಆತೂ ಅಂತs ನನಗೇನು ಅನಸೂದಿಲ್ಲಾ. ಅವರಲ್ಲೆ ಸಾಮರ್ಥ್ಯ ಇತ್ತು. ಅವರು ಪಂತರ ಮನೀಗೆ ಬಂದು ತಮ್ಮ ಸಾಮರ್ಥ್ಯ ಪ್ರಕಟ ಮಾಡಿದರು. ಪವಾಡ ಮಾಡಿ ತೋರಿಸಿದರು. ಆದರ ತುಳಸೀದ ಮಾತ್ರ ಖರೇ ಪವಾಡ ಆತು. ನನ್ನ ಕಡಿಂದ ಒಂದು ರೂಪಾಯಿ 'ಪ್ರೆಜೆಂಟ್' ಕೊಡಿಸಿ, ಯಾರೋ ಪವಾಡ ಮಾಡಿಸಿದರು. ಪಂತರ ಮನೀ ಗಂಡಸರು ಐದ ದೀಪಾ ಹಚ್ಚತಾರೋ ಇಲ್ಲೋ ಅನ್ನೂ ಅಭರೋಸಾ ಅವರ್ನ ನಿರ್ಮಾಣ ಮಾಡಿದವಗ ಇದ್ದಿರಬೇಕು. ಅದರ ಕೊರತಿ ಅನಿಸಿರಬಾರದಂತs ಅಂವಾ, ತನ್ನ 'ಕ್ರಿಯೇಶನ್'ದಾಗಿನ ಎಲ್ಲಾ ಸಾಮರ್ಥ್ಯನೂ ಈ ಹೆಣ್ಣ ತಳೀಗೆ ಮೀಸಲು ಮಾಡಿರತಾನ ಕಾಣಸ್ತದ. ನನಗೂ ನಿನ್ಹಾಂಗ ಈ ವಿಚಾರಾ ಭಾಳ ಸಾರೇ ಬಂದ ಹೋಗೇದ. ಹೀಂಗs ನಡೀ ದಾದಲ್ಯಾ. ಮಾತಾಡಿಕೋತ ಚೌಪಾಟೀ ಕಡೇನs ಹೋಗೂಣಂತೆ."

ಮೂವರೂ ಚೌಪಾಟಿಯ ದಾರಿ ಹಿಡಿದೆವು.

ದಿಗ್-ದಿಗಂತದ ಅಂಚಿನ ವರೆಗೂ ಚಾಚಿದ ಮಹಾರ್ಣವನ ಸಾಕ್ಷಿಯಾಗಿ. ವಿಶ್ವಾಸ, ತುಳಸಿ ಮುಂಬೈಗೆ ಬಂದು ಸ್ಥಾಯಿಯಾದ ಕಥೆಯನ್ನು ತಾನೇ ವಿವರಿಸಿದ. ನಾನು-ತುಳಸಿ ಕೇವಲ ಶ್ರೋತಾ ಪಾತ್ರ ಧರಿಸಿದ್ದೆವು. ಅವನ ಕಥನ ಮುಗಿದಾಗ ತುಳಸಿ ನಗುತ್ತ ಹೇಳಿದಳು:

"ರಾಜಾ, ನಾ ಇದನ್ನ ಕೇಳೂದು ಎರಡನೇ ಸಾರೇ. ಇನ್ನ ಅದನ್ನ ಹೇಳೂ ಭಾರಾ ದಾದಲ್ಯಾಗ ಒಪ್ಪಸು. ಹ್ಯಾಂಗೂ ಅಂವಾ ನಿಮ್ಮ ಪುರೋಹಿತಾ. ಮನೀ ಭಡಜೀ. ಕೀರ್ತನಾ ಶಿಸ್ತ ಮಾಡತಿರಬೇಕು."

ದಾದಲ್ಯಾ ರಾಧಾಕಾಕೂ, ಗಿರಿಜಾ, ಸೋನಕ್ಕ, ಬಸವಂತಿಯರ ಕೀರ್ತನ ನಡಸೇ ಇದ್ದ. ಅವನಿಗೆ ಅದರಲ್ಲಿ ಅಮಿತ ಆನಂದವೂ ಇತ್ತು; ಅಭಿಮಾನವೂ ಇತ್ತು. "ಪಶ್ಯ ದೇವ ದೇವಸ್ಯ ಕಾವ್ಯಮ್" ಎಂದು ಹಾಡಿದವನ ಭಕ್ತಿಭಾವವೂ ಇತ್ತು. ದಾದಲ್ಯಾ ಆ ದೇವತಾ-ಸದೃಶ ತಾಯಂದಿರಿಗೆ ಬಾಗಿದ್ದ. ತುಳಸಿಯ ಪ್ರತಿಮೆಗೂ ಬಾಗಿ, ನತಶಿರನಾಗಿ ವಂದಿಸಲು ಅವನು ಅನುಮಾನಿಸುವ ಕಾರಣ

ಏರಲಿಲ್ಲ. ರಾಧಾಕಾಕೂ ನಿರ್ವಾಣ-ಕ್ಷಣದ ಎಣಿಕೆಯಲ್ಲಿದ್ದಾಗ, ಗಿರಿಜಾನನ್ನು ಧೇನಿಸಿಕೊಂಡಿದ್ದರು.

"ಗಿರಿಜಾ ಇದ್ದಾಳಂತ, ಇವರ ಝುಲ್ಲು ನನಗಿಲ್ಲಾ"

ಅಂದಿದ್ದರು. ಆ ತಾಯಿಯ ಧೇನಿಕೆಯಲ್ಲಿ ಗಿರಿಜಾನ ಎಂಥ ದಿವ್ಯ ಪ್ರತಿಮೆ ಮೂರ್ತಿ ವೆತ್ತು ನಿಂತಿರಬೇಕು? ತಮ್ಮ ನಿರಂತರ ಅಗಲಿಕೆಯ ಸಂಕಟವನ್ನು ಕಾಕಾ ಅವರು ಗಿರಿಜಾನ ಸಾನ್ನಿಧ್ಯದಿಂದ ಮರೆಯುವಂತಾದೀತೆಂಬ ಭಾವ, ಕಾಕೂನಲ್ಲಿ ದೃಢ ವಾಗಬೇಕಿದ್ದರೆ, ಅವರು ಗಿರಿಜಾನನ್ನು ಯಾವ ಬಗೆಯಲ್ಲಿ ಕಂಡು ಸಂತವಿಸಿರ ಬೇಕು? ಸೋನಕ್ಕ ತಮ್ಮ ಸಂಕಟ, ಅವಮಾನ, ಅಗತಿಕತೆ, ಎಲ್ಲವನ್ನೂ ಮರೆತು, ಬಸವಂತಿಯನ್ನು ತಂಗಿಯಾಗಿ ಸ್ವಾಗತಿಸಿ ಆದರಿಸಿರಬೇಕಾದರೆ, ಬಸವಂತಿಯಲ್ಲಿ ಎಂಥ ದಿವ್ಯತೆಯನ್ನು ಅವರು ಕಂಡಿರಬೇಕು. ಅಂಥ ದಿವ್ಯತೆಯನ್ನು ಕಾಣುವ ಸಾಮರ್ಥ್ಯ ಪಡೆದ ದೃಷ್ಟಿ, ತಾನೇ – ಸ್ವಯಮೇವ – ಎಂಥ ಪ್ರದೀಪ್ತವಿರಬೇಕು. ಭವ್ಯತೆಯನ್ನು, ದಿವ್ಯತೆಯನ್ನು ದೃಷ್ಟಿಸಲು ಮನೋವೈಶಾಲ್ಯ, ದಿವ್ಯದೃಷ್ಟಿ ಬೇಕೆಂದೆನಿಸಿಯೇ **ಅವನು** "ದಿವ್ಯಂ ದದಾಮಿ ತೇ ಚಕ್ಷುಃ" ಎಂದು ಅಂದಿದ್ದ! ರಾಧಾಕಾಕೂ-ಸೋನಕ್ಕರಿಗೂ ಅವನು ಈ ದೃಷ್ಟಿದಾನ ಮಾಡಿದ್ದ. ಅವರಿಗೆ ದಿವ್ಯ ಸೃಷ್ಟಿಯ ದರ್ಶನ ಮಾಡಿಸಿದ್ದ.

ಧೋಂಡೂಬಾಯಿಯ ತಮಾಶಾ ಕಸಬು, ನಾಕು ತಲೆಯಿಂದ ನಡೆದು ಬಂದದ್ದು. ಅವಳ ತಾಯಿ, ಅವಳ ಅಜ್ಜಿ, ಒಬ್ಬನೇ ಯಜಮಾನನನ್ನು ಅಧಿದೈವ ವೆಂದು ಆದರಿಸಿ, ನೆಚ್ಚಿ, ನಂಬಿ ಗರತಿ-ಜೀವನ ಸಾಗಿಸುತ್ತ ಬಂದವರು. ಕಸಬಿಗಿಳಿದ ವರೆಂದು ರಂಗವಿಲಾಸಿನಿಯರಂತೆ, ತಮ್ಮ ಚೆಲುವಿನ, ಹರೆಯದ, ಸುರೇಲ ಕಂಠದ ಚೆರಗ ತೂರಾಡಿದವರಲ್ಲ. ಮಾನ-ಮರ್ಯಾದಸ್ಥ ಕಸಬಿನ ಘರಾಣೆಯೆಂದು ಖ್ಯಾತನಾಮರಾದವರು. ತುಳಸಿ, ಇನ್ನೂ ಮೂರು-ನಾಲ್ಕು ವರುಷದ ಹುಡಿಗೆ ಇದ್ದಾಗ, ಧೋಂಡೂಬಾಯಿಯನ್ನು ಪಡೆದ ಯಜಮಾನ ಕಣ್ಣು ಮುಚ್ಚಿದ್ದ. ತಮಾಶಾ ಕಸಿಬಿನವರಿಗೆ ಹೆಣ್ಣೆ ಸಂತಾನಸರ್ವಸ್ವ. ಅವರಿಗೆ ಗಂಡು-ಸಂತಾನದ ಅಗತ್ಯ, ಅವಶ್ಯಕತೆ ಅಷ್ಟು ಭಾಸವಾಗುವದಿಲ್ಲ. ಜಾಗೀರು ಮುಣುಗುವ ಭೀತಿ ಇರುವದಿಲ್ಲ. ಆದರೆ ಹೆಣ್ಣು-ಸಂತಾನದ ಹೂ ಅರಳದಿದ್ದರೆ, ಕಸಬಿನ ಬಳ್ಳಿ ಬರಡಾ ದಂತೆ; ಕಲವಿನ ಧಾವತಿ ಮಾಡಬೇಕು. ಧೋಂಡೂಬಾಯಿಯ ಜೀವನಲತೆಗೆ ಅರಳಿದ ತುಳಸಿ ಅವಳ ಕಸಬಿನ ಕಂಪು ಬೀರಿದ್ದಳು. ಕಳೆದ ಐದಾರು ವರುಷದಲ್ಲಿ,

ತನ್ನ ಕಲಾವಿಲಾಸದ ಬೆಡಗಿನಿಂದ, ಚೆಲುವಿನ ಸುರೇಲು ಕಂಠದ ಸಾಮರ್ಥ್ಯದಿಂದ ಧೋಂಡೂಬಾಯಿಗೆ ಘನ ಸಂಪಾದನೆಯನ್ನು ಮಾಡಿಕೊಟ್ಟಿದ್ದಳು. ಧೋಂಡೂಬಾಯಿಗೆ ಮಗಳ ಋಣ ಮುಗಿಸಬರದಷ್ಟಿತ್ತು.

ಕಾಲ ಬದಲಾಗುತ್ತ ನಡೆದಿತ್ತು. ಜೀವನದಲ್ಲಿಯ ರಸದ ಸೆಲೆ ಬತ್ತುತ್ತ ನಡೆದಿತ್ತು. ರಸಿಕತೆಯೂ ಅಳಿದು ರಾಸಲೀಲೆ ಧಿಂಗಣ-ಗುಣಿತ ಹಾಕತೊಡಗಿತ್ತು. ಭರತನ ನಾಟ್ಯವೇದವನ್ನು ಸುರತದೃಷ್ಟಿಯಿಂದ ನೋಡುವ ಪ್ರೇಕ್ಷಕರ ಸಂಖ್ಯೆ ಬೆಳೆಯತೊಡಗಿತ್ತು. ಮೈ-ಮನ ಎರಡನ್ನೂ ಬಚಾವು ಮಾಡಿಕೊಂಡು ಬಂದ ಧೋಂಡೂಬಾಯಿಗೆ ತುಳಸಿಯನ್ನು ಕಸಬಿನ ಕಣದಲ್ಲಿ ನಿರಂತರ ಬಿಡುವದು ಧೋಕಾದ್ದೆಂದು ಅನಿಸತೊಡಗಿತ್ತು. ಅವಳಲ್ಲಿಯೇ ಚಾಕರಿಗೆ ಸೇರಿ, ಅಖಂಡ ಆಯುಷ್ಯವನ್ನು ಅವಳ ಸೇವೆಯಲ್ಲಿ ತೇಯ್ದ ರಘೂ, ತುಳಸಿಗೆ ಚಂದ್ರಾಮನಂತಹ ವರಗಳನ್ನು ಹುಡುಕಿ ತಂದಿದ್ದ. ಅವಳಿಗೆ ನಾಕಾರು ಬುಕ್ಕಿನಷ್ಟು ಅಕ್ಷರಜ್ಞಾನವನ್ನೂ ಮಾಡಿಸಿದ್ದ. ಧೋಂಡೂಬಾಯಿಯ ಸಂಚಿತ ಅರ್ಥ, ತುಳಸಿಯ ಅಮೋಘ ಚೆಲುವು ಯಾರನ್ನೂ ಆಕರ್ಷಿಸುವಂಥವಾಗಿದ್ದವು. ಆದರೆ ತುಳಸಿ ತನ್ನ ತಾಯಿಗೆ ತಾನು ನೆಚ್ಚಿ ನಂಬಿದ ರಾಜನ ಬಗ್ಗೆ ತಿಳಿಸಿ ಹಟವನ್ನೇ ಹಿಡಿದಳು. ತುಳಸಿ ಹದಿನೆಂಟರ ಮನೆ ದಾಟಿದ ಮೇಲೆ ಧೋಂಡೂಬಾಯಿ, ಕಣ್ಣು ತೆರೆದು ಸುತ್ತಲೂ ನೋಡಿಕೊಂಡಳು. ತುಳಸಿಗೆ ಸುರಕ್ಷಿತ ಜಾಗವನ್ನು ಹುಡುಕತೊಡಗಿದಳು. ಅವಳಿಗೆ ಅನುರೂಪ ಯಜಮಾನನ ತನಿಖೆ ನಡೆಸಿದಳು. ತುಳಸಿ ಸಂಸಾರಗಿತ್ತಿಯಾಗುವ ಒಂದೆರಡು ಪ್ರಸಂಗ ಬಂದಾಗ, ಧೋಂಡೂಬಾಯಿಗೆ ಮಗಳ ನಿಶ್ಚಿತ ನಿರ್ಣಯ ತಿಳಿದು ಬಂದಿತು. ಈ ಸಲ ಬಸವಣ್ಣನ ಜಾತ್ರೆಗೆ ಹೋದಾಗ ಮಗಳು ಮೋಹಿಸಿದ ವರನ ತನಿಖೆ ನಡೆಸಿ ಅವಳ ಜೀವನವನ್ನು ಸುಗಮ ಮಾಡುವ ವಿಚಾರ ಹಾಕಿಕೊಂಡಿದ್ದಳು.

ಮಿರಜಿಯಲ್ಲಿ ಆಟ ಮುರಿದು, ತುಳಸಿ ಪುಂಡೀಪಲ್ಲೆಯಾಗುವ ಪ್ರಸಂಗದಲ್ಲಿ ವಿಶ್ವಾಸ ಅವಳ ನೆರವಿಗೆ ಧಾವಿಸಿ, ತುಳಸಿಯನ್ನು ಬಚಾವು ಮಾಡಿದ್ದ. ಅವನೇ ತುಳಸಿ ಮೆಚ್ಚಿಕೊಂಡ, ರಾಜನೆಂದು ತಿಳಿದುಬಂದಿತು. ಮಗಳ ದೃಷ್ಟಿಯಿಂದ ಆದದ್ದೆಲ್ಲ ಠೀಕಾಗಿತ್ತು. ಆದರೆ ಧೋಂಡೂಬಾಯಿಯ ವ್ಯಾವಹಾರಿಕ ಪ್ರಜ್ಞೆ ಜಾಗೃತವಾಗಿ, ತಲೆಯ ಮೇಲಿನ ಮಾಸ ಹಾರದ ಹುಡುಗ – ವಿಶ್ವಾಸನಿಗೆ ತುಳಸಿಯನ್ನು ಒಪ್ಪಿಸುವ ಬಗ್ಗೆ ಅವಳಲ್ಲಿ ಸಾಶಂಕತೆ ಮೂಡಿತ್ತು. ಅದು ಅವಳ ದೃಷ್ಟಿಯಿಂದ

ಸರಿಯಾದದ್ದೇ. ವಿಶ್ವಾಸ ಯಾರೆಂಬ ತನಿಖೆಯನ್ನು ಅವಳ ಸರ್ವಸಚಿವ, ರಘೂ ನಡೆಸಿ, ತಪಾಸು ತೆಗೆದಿದ್ದ. ಪಂತರ ವಾಡೆಯ ಹುಡುಗ, ಸಾಂಗಲಿಯ ದಾತಾರ ಸಾವಕಾರರ ದತ್ತಕ ಮಗ, ಎಂಬ ಬಾತಮೀ ಹತ್ತಿದಾಗ ಧೋಂಡೂಬಾಯಿ ಭಾರ ಇಳಿದ ಉಸಿರು ಬಿಟ್ಟಿದ್ದಳು. ತನ್ನನ್ನೂ ಕೂಡ ಖರೀದಿಗೆ ಕೇಳುವ ಗಿರಾಕಿ ಸಿಕ್ಕ ಧೈರ್ಯ ಅವಳನ್ನು ನಿಶ್ಚಿಂತವಾಗಿಸಿತ್ತು.

"ಸಾಂಗ್ಲ್ಯಾಗ ಧೊಡ್ಡ ಡಾಕ್ದರ ಅಗೂ ಹುಡುಗಾ. ನಿನ್ನ ತುಳಸೀ ಕೈ ಹಿಡಿವಾನ ಧೋಂಡೂ: ನಿನ್ನ ನಶೀಬಸ್ಽ ನಿವಾಳಿಸಿ ಒಗೀ ಅವರ ಮ್ಯಾಲ. ಕಣ್ ಮುಚ್ಚಿ ತುಳಸಿನ್ನ ಅವರ ಉಡ್ಯಾಗ ಹಾಕು. ನಾಳೆ, ನಿನ್ನ ಕೈ-ಕಾಲೂ ಲಟಪಟಿಸಿದರ ಮುಂಪ್ಪಿನ ಕಾಲಕ್ಕಽ ಅವರಽ ನಿನಗ ಆಧಾರ ಆದಾರು."

ಎಂದು ಭಾರೀ ಖುಷಿಯಾದ ರಘೂ ವಕೀಲೀ ಸಾಧಿಸಿದ್ದ. ಬಡೇ ಬೀಡೀ ಕಾರಖಾನದಾರ ದಸ್ತಗೀರ್‍ಯಾ, ರಘೂನನ್ನು ತಿದ್ದಿ ಮೆದ್ದಿದ್ದ.

"ಧೋಂಡೂಬಾಯೀ, ನೀ ಘಳಿಸಿದ್ದು ಬ್ಯಾಂಕಿನ್ಯಾಗ ಇಡೂ; ಭಂಗಾರ ತಗೋ – ಇಲ್ಲಽ ಹೊಲಾ-ಮನೀ ತಗೋ. ಅದರದೇನು ನಮಗ ಅಗತ್ಯ ಇಲ್ಲಾ. ನಿಂದು, ನಿನ್ನ ಮಗಳದು ಕಾಳಜೀ ನನಗ ಹತ್ತ್ಯ. ಸಾಂಗ್ಲ್ಯಾಗ ಮನೀ ಮಾಡಿ ಕೊಂಡು ಇರತಿದ್ದರ ಹೇಳು. ಎಂಥಾ ಮನೀ ಬೇಕು ಅನ್ನೂದು. ನೀ ಒಂದು ಕುಡ್ತ ಕವಡೀ ಖರ್ಚ ಮಾಡಬ್ಯಾಡಾ. ವಖಾರ-ಭಾಗದಾಗ, ಸರಾಫೀಕಟ್ಟ್ಯಾಗ ಕೇಳಿ ಬಾ. ಪಂತಮಾಮಾ ದಾತಾರ ಅಂದರ ಯಾರಂತ? ಆರ ತಾಸ ರಾತ್ರ್ಯಾಗ ನಿನ್ನ ಸುರತೀಲೇ ಅಳೆಯೂವಷ್ಟು ರೊಕ್ಕ ಅದ ಅವರಲ್ಲೆ. ನಿನಗ ಧೈರ್ಯಾ ಇರದಿದ್ದರ ಹೇಳು. ನನ್ನ ಅಂಗಡೀ ನಿನ್ನ ಮಗಳ ಹೆಸರ್ಲೇ ಹಚ್ಚತೀನಿ"

ಅತ್ತಾರ ಬೀಡೀ ಪ್ರಸಿದ್ಧಿಯ ದಸ್ತಗೀರ್‍ಯಾ ಅಭಯ ಕೊಟ್ಟಾಗ, ಧೋಂಡೂ ಬಾಯಿ ತುಳಸಿಯನ್ನು ಸೇರು ಭಂಗಾರದಲ್ಲಿ ಮಡಿಸಿ, ವಿಶ್ವಾಸನ ತಾಬೇದಾರೀ ಮಾಡ ಬಂದಳು. ದಸ್ತಗೀರ್‍ಯಾ ಭಾರೀ ಮುತ್ಸದ್ದಿ. ಅಂದು ಬ್ಯಾಂಕಿನಲ್ಲಿಯ ತನ್ನ ರೊಕ್ಕ ಬಳೆದು ತಂದು ತಿಜೋರಿಯಲ್ಲಿ ಮುದ್ದಾಂ ಕಟ್ಟುಗಟ್ಟಲೆಯಾಗಿ ಇಟ್ಟಿದ್ದ. ತನ್ನ ಖಟರಾ ಗಾಡಿಯಲ್ಲಿ ಧೋಂಡೂಬಾಯಿ, ತುಳಸಿ, ರಘೂನನ್ನು ಹಾಕಿ ಕೊಂಡು ಹೋಗಿ ಇಡೀ ಸರಾಫಕಟ್ಟೆಯನ್ನು ತಿರುವಿ ಹಾಕಿ, ಎರಡು ಸೇರು ಭಂಗಾರಿನ ವಸ್ತು-ಒಡವೆ ಖರೀದಿ ಮಾಡಿ, ತನ್ನ ಮನೆಗೇ ಈ ನಿಬ್ಬಣ ಕರೆದುಕೊಂಡು ಬಂದು. ತುಳಸಿಯನ್ನು ಅಣ್ಣನಾಗಿ ಘೋಷಿಸಿದ. ಧೋಂಡೂಬಾಯಿ ಮಗಳಿಗೆ

ಕೊಟ್ಟ ಭಂಗಾರವನ್ನು ಹಿಂದಿರುಗಿ ಕೊಟ್ಟುಬಿಟ್ಟ. ತನ್ನ ಎರಡು ಸೇರು ಭಂಗಾರ ದಿಂದ ತುಳಸಿಯನ್ನು ಸಿಂಗರಿಸಿದ. ಧೋಂಡೂಬಾಯಿಯ ಕಣ್ಣು ಬರೇ ಕುಕ್ಕ ಲಿಲ್ಲ – ತೇವವಾದವು. ಅವಳಿಗೆ ಮಗಳ ಝುಲ್ಲು ಬಿಟ್ಟಿತು.

ಸಾಂಗಲಿ-ಮಿರಜಿ ಆದಿ ಭಾಗದಲ್ಲಿ ತುಳಸಿ, ದಸ್ತಗೀರ್ಯಾನ ಖಾಸ್ ಮಾಲು ಆದಳೆಂದು ಸುದ್ದಿ ಹರಡಿತು.

ಧೋಂಡೂಬಾಯಿ ತಮಾಶೆಯ ಮೇಳವನ್ನು ಮುರಿದಳು. ತಿಂಗಳೊಪ್ಪತ್ತು ಮಗಳ ಕೂಡ ಮುಂಬೈಯಲ್ಲಿ ನಿಂತು, ನಂತರ ತನ್ನ ಹುಟ್ಟಿದೂರಿಗೆ ನಡೆ ದಳು. ಅಲ್ಲಿ ಇಂದು, ತುಳಸಿಯ ಹೆಸರಿನಲ್ಲಿ ಹೊಲಗಳನ್ನು ಖರೀದಿಗೆ ಹಿಡಿಯುತ್ತ, ಇದ್ದ ಜಮೀನುಗಳನ್ನು ಕಮತವಿಟ್ಟು ಸಾಗಿಸುತ್ತ ನಡೆದಿದ್ದಾಳೆ. ರಘೂ ಅವಳ 'ವ್ಹೋಲ್ ಸೇಲ್ ಮ್ಯಾನೇಜರ್' ಸ್ಥಾನದಲ್ಲಿದ್ದಾನೆ.

"ಇನಾಮದಾರ, ವತನದಾರ ಮುಂದಿಗೆ ಜಮೀನ್ದಾರ ಮನೀ ಹುಡಗಿನ್ನs ಕೊಡೂದು, ಅದs ವಾಜಮೀ. ರಾವಸಾಬರು ಡಾಕ್ಟರ ಆಗಿ ಬರೂದರಾಗ, ತುಳಸೀ ಹೆಸರಲೇ ಕಮೀತಕಮೀ ಶಂಭರ ಎಕರೇ ಜಮೀನರs ಮಾಡತೀನಿ" ಎಂದು ಪುಷಾರಕೀ ಹೊಡೆಯುತ್ತಿದ್ದಾನೆ.

ದಸ್ತಗೀರ್ಯಾ, ವಿಶ್ವಾಸ ಕೊಟ್ಟ ತುಟಪುಂಜೀ ಬಂಡವಲಿನಿಂದ ಮುಂದೆ ಬಂದಿದ್ದ. ದಾದಲ್ಯಾನ ಹೆಸರಿನಲ್ಲಿ ಗೋವಾ ಲಾಟರೀ ತಿಕೀಟು ಹಾಕಿ ಹಣ ಗಳಿಸಿದ್ದ. ಅದನ್ನು ಒಂದಕ್ಕೆ ಹತ್ತು ಮಾಡಿಕೊಂಡು ಇಂದು ಬಡೇ ಆದಮೀ ಆಗಿದ್ದ. ಆದರ ಋಣವನ್ನು ವಿಶ್ವಾಸನಿಗೆ ತೀರಿಸಬರದ ರೀತಿಯಲ್ಲಿ ತೀರಿಸಿದ.

ತುಳಸಿಯ ಮುಂಬೈ ವಾಸ್ತವ್ಯದ ವೆಚ್ಚ, ದಸ್ತಗೀರ್ಯಾ ಪ್ರತಿ ತಿಂಗಳು ಕಳಿಸುವ ಎರಡು ನೂರರ ಚೆಕ್ಕಿನ ಮೇಲೆ ನಡೆದಿತ್ತು!

"ದಾದಲ್ಯಾ, ನಾ ದಸ್ತಗೀರ್ಯಾಗ ಕೊಟ್ಟಿದ್ದು ಬರೇ ಐನೂರು ರುಪಾಯಾ. ಹೊಟ್ಟಿಗೂ ನೀರ ಹನೀ ಅಲ್ಲ ಅದು. ನೀ ಕೊಟ್ಟ ಇಪ್ಪತ್ತೈದು ರುಪಾಯೀ ಸಾಲದಾಗ ಅಂವಾ ಗೋವಾ ಲಾಟರೀ ತಿಕೀಟ ತಗೊಂಡಿದ್ದಾ. ಅವಗ ಬಂದ 'ಪ್ರಾಯಿಜ್ ಅಮೌಂಟ್'ನ್ನು ನೀನು ತಗೋಳಿಕ್ಕೆ 'ಪಾಯಿಂಟ್-ಬ್ಲ್ಯಾಂಕ್' 'ರಿಫ್ಯೂಜ್' ಮಾಡಿದ್ದಿ. ಇದೆಲ್ಲಾ ನಿನಗೇನು ಅರೀದ ವಿಷಯ ಅಲ್ಲಾ. ವಿಶ್ಯಾನ ಸಂಸಾರ ಹ್ಯಾಂಗ ಸಾಗೇದಂದಿ ದಾದಲ್ಯಾ? ಗೆಳ್ಯಾರ ರೊಕ್ಕದ ಮ್ಯಾಲs ಅನ್ನೂ ದಂತೂ ಖರೇನs. ಆದರ ಅವರ ಅಂತಃಕರಣದ ಮ್ಯಾಲಂತ ಅನಸ್ತದ ನನಗ.

ದಸ್ತಗೀರ್ಯಾ ಹೋದ ಜನ್ಮದಾಗ, ನನಗ ಅಣ್ಣನೋ-ತಮ್ಮನೋ ಇರಬೇಕು. ನಾ ಛಲೋ ಅರಿವೀ ಹಾಕೊಂಬೂದಿಲ್ಲಂತ, ಅಂವಾ ತಾನೇ ಇಲ್ಲಿಗೆ ಬಂದಾಗ ಊಲನ್ ಅರಿವೀ ಖರೀದಿ ಮಾಡಿದಾ. ಆಣೀ ಹಾಕಿದಾ. ದಾದಲ್ಯಾ, ತನ್ನ ಆಣೀ ಹಾಕಿದಾ. ಇಂಥಾ ಜೀವನಾ ದಾದಲ್ಯಾ, ನಾ ಬೇಡಿ ಬಂದೀನಿ. ಅಂವನ ಋಣಾ ತೀರಸೂ ಯೋಗ ಇಲ್ಲ ನನಗ."

ವಿಶ್ವಾಸ ಕರವಸ್ತ್ರದಿಂದ ಮುಖ ಮುಚ್ಚಿಕೊಂಡ.

"ದಾದಲ್ಯಾ. ದಸ್ತಗೀರಭಾಯೀ, ಗೆಳ್ಯಾ ಅನೂ ರೀತೀಲೆ ಮುಂದ ಬಂದು, ಮದ್ದತ ಮಾಡಿದಾ. ಅಂವಗ ಇನ್ನಾ, ರಾಜಾನ ಐದನೂರ ರುಪಾಯಿದ್ದs ಧ್ಯಾಸಾ. ರಾಜಾ ಅಂದ ಬದಕಿಸಿದನಂತ ಇಂದ ಮಾಲ ಆದೇ ಅನ್ನೂ ಹಾಡಾ ಏನು ಅಂವಾ ಬಿಟ್ಟಿಲ್ಲಾ. ರಾಜಾ ಸುಖೀ ಆಗಲೀ ಅನ್ನೂದಷ್ಟs ಅವನ ಹವ್ಯಾಸಾ, ನೀರಿನ್ಹಾಂಗ ದುಡ್ಡ ಹರಿಬಿಡಲಿಕ್ಕೆ ಅಂವಾ ಹಿಂದ-ಮುಂದ ನೋಡಲಿಲ್ಲಾ. ಈಗೂ ನೋಡೂದಿಲ್ಲಾ. ಆದರ ದಾದಲ್ಯಾ, ನನ್ನ ಕಥೀ ಕೇಳಿ, ವಸೂ ನಕ್ಕೋತ್ನs, ನನ್ನ ಕೈ ತಗೊಂಡು ರಾಜಾನ ಕೈ ಹಿಡಿಸಿದಳು. ವಿಶ್ಯಾ, ನಿನಗ ಇನ್ನ ಆರ ಕೈ ಆದೂ. ತ್ರಿಮೂರ್ತೀ ಆದಿ; ಜ್ವಾಕೀಲೇ ಸಂಬಾಳಸಬೇಕಾಗತದ ನೋಡು. ನನ್ನೂ ಎರಡ ಕೈ, ತುಳಸೀವು ಎರಡ ಕೈ, ನಿನ್ನ ಜೇರಿಗೆ ತರಸದೆ ಬಿಡೂದಿಲ್ಲಾ ಅಂದಳು. ದಾದಲ್ಯಾ, ವಸೂನ ದೊಡ್ಡಿಸ್ತನಾ ಏನ ಸಣ್ಣದಲ್ಲಾ. ತುಳಸಿನ್ನ ರಾಜಾಗ ಒಪ್ಪಸಾಗ ತನ್ನ ಎದೀನs ತುಕಡೀ ಮಾಡಿ ಅಕಿ ಕೊಟ್ಟಳು. ಹೆಂಗಸಾಗಿ, ತನ್ನ ಸುಖಾ ನೋಡ ಲಿಲ್ಲಾ. ರಾಜಾಂದು-ತುಳಸೀದು ಸುಖಾ ಕಾಣಿಸ್ತ್ಯೂ ಅಕೀ ಕಣ್ಣಿಗೆ. ತನ್ನ ಸುಖಾ ಮರ್ತ್ತರ, ಮುನಸ್ಯಾ ದೇವರಾಗತಾನಂತಾರ. ದಸ್ತಗೀರಭಾಯೀ, ವಸೂ ನನಗ ದೇವರು ಆದರು ದಾದಲ್ಯಾ"

ವಿಶ್ವಾಸ ಹೇಳುವದನ್ನು ಬಿಟ್ಟ, ಒಂದು ದಿವ್ಯ ಸತ್ಯವನ್ನು ತುಳಸಿ ವದಿಸಿದಳು.

ದಾದಲ್ಯಾ ಒಂದು ನಿಮಿಷ, ತನ್ನ ಮನದೆದುರು ಪಂತಕುಟುಂಬ-ಜೀವನ ದಲ್ಲಿಯ ಮಹಾ ತೇಜಸ್ವಿನಿಯರನ್ನು ಕಲ್ಪಿಸಿಕೊಂಡು ನೋಡಿದ. ಪಂತಕುಟುಂಬದ ವರಲಕ್ಷ್ಮಿ– ರಾಧಾಕಾಕೂ, ಸೋನಕ್ಕ, ವಸೂರಲ್ಲಿ ತಮ್ಮ ಆತ್ಮತೇಜದ ನಂದಾ ದೀಪವನ್ನು ಬೆಳಗಿಸುತ್ತಿರುವ ಭಾಸವಾಯಿತು. ಅವರ ಅಭಯ-ರಕ್ಷೆ, ಇನ್ನೂ ಸ್ವಾಪಕಚೇತನೆಯಾಗಿ, ಜೀವಸಂಜೀವಿನಿಯಾಗಿ, ಆ ಮನೆಯ ತೇಜವನ್ನೂ ಶಾಂತಿಯ ತಂಪನ್ನೂ ಕಾಯುವ ಕಾರ್ಯಕ್ಕೆ ಬಸವಂತಿ-ತುಳಸಿಯರನ್ನು ನಿರ್ಮಿಸಿದ

ಭಾಸವಾಯಿತು. ಈ ತೇಜಸ್ವಿಸಿಯರ ಭವ್ಯ ದೀಪ್ತಿಗೆ ದಾದಲ್ಯಾನ ಕಣ್ಣು ಕುಕ್ಕ ತೊಡಗಿದವು.

ತನಗೆ ದಸ್ತಗೀರ್ಯಾನ ಋಣಪರಿಹಾರವಿಲ್ಲವೆಂದು, ವಿಶ್ವಾಸ ಹೇಳಿದ ಮಾತಿನಲ್ಲಿ ತಥ್ಯವಿತ್ತು. ವಿಶ್ವಾಸ-ತುಳಸಿಗಾಗಿ ದಸ್ತಗೀರ್ಯಾ ತನ್ನತನ ಮರೆತು ದೇವತ್ವ ಸಾಧಿಸಿದನೆಂದು, ತುಳಸಿ ಹೇಳಿದ ಮಾತಿನಲ್ಲಿ ಅಖಂಡ-ಪೂರ್ಣ-ಸತ್ಯ ವಿತ್ತು. ವಿಶ್ವಾಸ ಮೊದಲನೇ ಕಂತಿನಲ್ಲಿ ದಸ್ತಗೀರ್ಯಾನಿಗೆ ತುಟಿಪುಂಜೀ ಬಂಡವಲು ಒಪ್ಪಿಸಿದಾಗ —

"ದಸ್ತಗೀರ್ಯಾ, ಈ ರೊಕ್ಕಾ ಎಂದ ತಿರಗಿ ಕೊಡಾಂವಾ ಅಂತ ನಾ ಕೇಳಿದ ದಿನಾ, ನಂದೂ-ನಿಂದೂ ಗೆಳೆತಾನ ಬಗೀಹರಿತು ಅಂತs ತಿಳಿಯೂದು."

ಎಂದು ವಿಶ್ಯಾ ಹೇಳಿದ್ದ. ಹೇಳಿದಂತೆ ನಡೆದಿದ್ದ. ಇಂದು ದಸ್ತಗೀರ್ಯಾ, ಯಾವುದೋ ಹಣವನ್ನು —

"ವಿಶ್ಯಾ, ಇದು ನಿಂದೂ ಅಂತs ನಿನಗ ಕೊಡೂದಿಲ್ಲಾ. ನಂದೂ ಅಂತನೂ ಕೊಡೂದಿಲ್ಲಾ. ತುಳಸಿ ನನಗ ತಂಗೀ ಹಾಂಗs. ಹುಂಡಾ ಅಂತ ಕೊಡತೀನಿ. ನೀ ತಗೋಳಿಕ್ಕೇಬೇಕು. ತಿರಗಿ ಕೊಡೂ ಭಾರ ನಿನಗಿಲ್ಲಾ. ಕೊಡೂ ಅಂತs ಕೇಳೂ ಗರಜ ನನಗಿಲ್ಲಾ."

ಎಂದು ಹೇಳಿ, ಅವನನ್ನು ಒಪ್ಪಿಸಿ, ತುಳಸಿಯ ಮುಂಬೈ ವಾಸ್ತವ್ಯದ ಭಾರವನ್ನು ಆದಿಶೇಷನಂತೆ ಹೊತ್ತು ನಿಂತಿದ್ದ. ವಿಶ್ವಾಸ-ತುಳಸಿಯರು ತನಗೆ ಶಿರೋಭಾರ ವಾಗದೆ ಶಿರೋಭೂಷಣರಾದರೆಂದೇ ಭಾವಿಸಿದ್ದ. ವಿಶ್ವಾಸನ ಐನೂರು ರೂಪಾ ಯಿಯ ನೆರವಿನಿಂದ ತನ್ನ ಮನೆಯಲ್ಲಿ ದೀಪ ಬೆಳಗುವಂತಾಯಿತೆಂದು ದಸ್ತಗೀರ್ಯಾ ಇನ್ನೂ ಹೇಳುತ್ತಾನೆ.

ದಸ್ತಗೀರ್ಯಾ ಇನ್ನೂ ಹದಿನಾರು-ಹದಿನೇಳು ತುಂಬಿದಾಗಲೇ, ಅವನ ತಂದೆ ರಸೂಲಭಾಯೀ ಖಾಲೀ ಮಾಡಿದ ಅಂಗಡಿಯ ಗಲ್ಲೆಯ ಮೇಲೆ ವಿರಾಜಮಾನ ನಾಗಿದ್ದ. ಸಂಸಾರ-ಶಕಟ ಮುನ್ನಡೆಯಲು ತನ್ನ ತಾಯಿಗೆ ಎಡಗೈ-ಬಲಗೈಯಾಗಿ ನೆರವು ನೀಡುವ ಸಾಹಸಕ್ಕೆ ತನ್ನನ್ನು ಜೋಡಿಸಿಕೊಂಡಿದ್ದ. ವ್ಯವಹಾರದಲ್ಲಿ ಬುದ್ಧಿ ಒರೆಗೆ ಹತ್ತಿ ಚಕಚಕಿಸತೊಡಗಿತು. ಅನುಭವ ಲಕಲಕಿಸತೊಡಗಿತು. ವಿಶ್ಯಾನ ವಯ ಸ್ಸಿನ ಮಾನದಿಂದ ದಸ್ತಗೀರ್ಯಾ ಮೂರು-ನಾಲ್ಕು ವರುಷಕ್ಕೆ ಹಿರಿಯ. ಸಮಸಮ ನನ್ನ ವಯಸ್ಸಿನವ. ಅನುಭವ, ಧಾಡಸೀತನ, ಅವನಿಗೆ ವಯಸ್ಸಿನ ಮಾನದಿಂದ

ಬರಲಿಲ್ಲ. ಆ ಜಾತಿಯು ಅಂತಃಸ್ಸತ್ವವೇ ಅಂತಹದು. 'ಅಲ್ಲಾಕೇ ಕಸಮ್' ಎಂದು ಅದು ಕಿಚ್ಚಿನ ಕಾವಲನ್ನೂ ಸರಾಗವಾಗಿ ನಡೆದು ಹೋಗಬಲ್ಲದು. ಕೈ-ಮೈ ಸುಟ್ಟೀತೆಂಬ ಭೀತಿಗಿಂತ, ಆ ಜಾತಿಗೆ ಕಸಮ್‌ದ ಪ್ರಜ್ಞೆ ತೀವ್ರದಾಹಕವಾಗಿರುತ್ತದೆ. ಪ್ರಜ್ಞೆಯು ನಿಷ್ಠೆ. ಜಾತವೇದ ಜಾಗೃತವಾಗಿರುತ್ತದೆ. ಆ ನಿಷ್ಠೆಯು ಪರಿಣತಿ ಇಂದು ದಸ್ತಗೀರ್‍ಯಾನ ತ್ಯಾಗದಲ್ಲಿ ತೊಳಗಿತು. ಅವನು ತುಳಸಿಗೆ ಮುಂಬೈಯಲ್ಲಿ ಆಸರೆ ಕಲ್ಪಿಸಿದ ಧಾಡಸೀತನದಲ್ಲಿ ಪರಿಣತಿ ಹೊಂದಿತ್ತು.

ದಸ್ತಗೀರ್‍ಯಾನಿಗೆ. ಪಂತಮಾಮಾ-ರಾವಜೀಕಾಕಾ ಅವರ ಸಮ್ಮತಿಯು. ಒಪ್ಪಿಗೆಯು ಕಲ್ಪನೆಯೂ ಸುಳಿದಿರಲಿಲ್ಲ. ಅವರ ಭಾಸವೂ ಬಂದಿರಲಿಲ್ಲ. ಅವರಿಗೆ ಇದು ವಿದಿತವಾದರೆ ಪ್ರತಿಕ್ರಿಯೆ ಏನಾಗಬಹುದೆಂಬ ಶಂಕೆಯೂ ಮೂಡಿರಲಿಲ್ಲ. ವಿಶ್ಯಾ ಈ ಸಮಸ್ಯೆಯನ್ನು ಮುಂದೆ ಮಾಡಿದಾಗ. ದಸ್ತಗೀರ್‍ಯಾ, ಏನೂ ಘಟಿಸಲಿಲ್ಲವೆಂಬುವಂತೆ – ಘಟಿಸಿದ್ದರೂ ಅದಕ್ಕಷ್ಟು ಮಹತ್ವವೂ ಸಲ್ಲದೆಂಬ ರೀತಿಯಲ್ಲಿ —

"ಒಂದ ರೂಪಾಯಿದ ಮಾಲ ಖರೀದೀ ಮಾಡಾಗ ಸಂಶಾವಿಟ್ಟಿ. ಹೋಗಲಿ. ಮೊನ್ನೆ ತುಳಸಿಗೆ ಕೈಯಾಗಿನ ಉಂಗರಾ ಕೊಟ್ಟೆ. ಆಗ ಏನೂ ವಿಚಾರ ಬರಲಿಲ್ಲೇನು ವಿಶ್ಯಾ? ಮುಗನs. ಸಾಂಗಲೀಯಿಂದ ಮಿರಜೀ ತನಕಾ ಓಡಿ ಹೋಗಿ ನಿನ್ನ ಮೈನಾ ಹಿಡಕೊಂಡಿ ಯಾಕs? ತುಳಸೀ ಅಶ್ಯಾನs ಇರದಿದ್ದರ, ಆಟಾ ನೋಡಲಿಕ್ಕೆ ಬರೂದನ್ನ ತಪ್ಪಸಬೇಕಾಗಿತ್ತು. ಗೌಸ್ಯಾ ತುಳಸಿಗೆ ಹಾರಾ ಹಾಕಿದ್ದರ ನಿಂದೇನ ಗಂಟು ಖರ್ಚು ಆಗತಿತ್ತು? ಅಲ್ಲೀದನs ಆಕಿನ್ನ ಓಡಿಸಿಕೊಂಡು ಹೋದಿ. ಮಿರಜ್ಯಾಗ ಭೆಟ್ಟಿ ಆಗಿರದಿದ್ದರೂ ತುಳಸಿ ಏನು ನಿನ್ನ ಬಿಡತಿದ್ದಿಲ್ಲಾ. ಇಂದಿಲ್ಲ ನಾಳ್ಯೆರs ಗಾಠಾಸತಿದ್ದಳು. ಆಗೇನ ಮಾಡಾಂವ ಇದ್ದೀ? ಆಕೀ, ನೀನೇ ಗತಿ ಅಂತನs ಲಲಕಾರೀ ಹೊಡದಿದ್ದಳು. ಹತ್ತು ವರ್ಷದಿಂದ ನಿನ್ನ ದಾರೀ ಕಾಯ್ಕೊಂತ ನಿಂತಾಳ ತುಳಸೀ. ಅವರ ಘೊಡ್ಡಿಸ್ತನಾ ನೋಡು. ನಿನ್ನ ಶಂಕಾದ ವಿಚಾರ ಮಾಡಬ್ಯಾಡಾ. ಏನೂ ತುಳಸಿನ್ನ ಆಳೂವಂಥಾ ನೀನು. ಅವರ ಜಿಂತಿ ಮಾಮಾ-ಕಾಕಾಗ ಇಲ್ಲಾ. ತುಳಸೀ ಸಮಸ್ಯಾ ನಿಸ್ತರಲಿಕ್ಕೇ ಆಗದಿದ್ದರ ಪ್ರೇಮದ ಹುದಲಾಗ ಕಾಲನರs ಯಾಕ ಸಿಗಸಿದೀ? ಮಾಮಾ-ಕಾಕಾಂದು ಅಂಜಿಕಿದ್ದರ. ದಸ್ತಗೀರ್‍ಯಾದಂತೂ ಇಲ್ಲ? ಎರಡ ಸೇರ ಭಂಗಾರ ಹಾಕೇ ತಂಗಿನ್ನ ನಿನ್ನ ಕೈಯಾಗ ಕೊಟ್ಟೇನಿ. ಹೇಳು, ನಿನ್ನ ಕಲಿಯೂ ಜವಾಬ್ದಾರೀನೂ ಹೊರೂ ಅಂತs. ಅದಕೂ ತಯಾರಿನಂದು. ತುಳಸಿನ್ನ ಮುಂಬೈಯಾಗ ಇಡೂದು ಬ್ಯಾಡಾಗಿದ್ದರ ತಿಳಿಸು. ಆಕೀ

ತನ್ನ ಅಣ್ಣನ ಮನ್ಯಾಗ ನಿಂಪರತಾಳ, ನಿನ್ನ ಕಲಿಯೂದು ಮುಗಿಯೂ ತನಕಾ. ವಿಶ್ಯಾ, ನೀವು ಬಾಜೀರಾಯನ ಒಕ್ಕಲಾ. ಮಸ್ತಾನೀ ಮ್ಯಾಲs ಜೀವಾ ನಿವಾಳಿಸಿ ಒಗದಾ ನಿಮ್ಮ ಯಜಮಾನಾ. ಇನಾ ಅವರ ಅನ್ನಾ ಉಣತೀರಿ. ಒಂದಿಷ್ಟು ಯಾದ ಇರಲಿ ಅವರ ಅನ್ನದ್ದು."

ವಿಶ್ವಾಸನಿಗೆ ಧೈರ್ಯ ಕೊಟ್ಟಿದ್ದ.

ಸದ್ಯಕ್ಕಂತೂ ಈ ವಿಷಯ ಪಂತಮಾಮಾ-ರಾವಜೀಕಾಕಾ ಅವರಿಗೆ ವಿದಿತ ವಾಗುವ ಶಕ್ಯತೆ ಇರಲಿಲ್ಲ. ಸಾಂಗಲೀ-ಮಿರಜಿಯ ತಮಾಷಾ-ಶೋಕೀ-ಬಳಗದಲ್ಲಿ ತುಳಸಿ ದಸ್ತಗೀರ್‍ಯಾನ ಮಾಲು ಆದಳೆಂಬ ಸುದ್ದಿ ಇತ್ತು. ಧೋಂಡೂಬಾಯಿ ತಮಾಷಾ-ಮೇಳವನ್ನು ಆಗಲೇ ಮುರಿದು ಮಗಳ ಕೂಡ ಮುಂಬೈಗೆ ಹೋಗಿ ದ್ದಳು. ತುಳಸಿ ಸಾಂಗಲಿಯಲ್ಲಿ ನಿಂತಿದ್ದರೆ, ಆಡಿಕೊಳ್ಳುವ ನೂರು ಬಾಯಿಗೆ ಅನ್ನ, ನೋಡುವ ಸಾವಿರ ಕಣ್ಣಿಗೆ ಮೇಜವಾನಿ ಆಗುತ್ತಿತ್ತು. ಅವಳೇ ಅಲ್ಲಿಂದ ಗಡಪ್ ಆಗಿಬಿಟ್ಟಿದ್ದರಿಂದ ಈ ಸುದ್ದಿ ಸದ್ಯಕ್ಕಂತೂ ವಾಸ ಸೂಸುವ ಶಕ್ಯತೆ ಅಷ್ಟಾಗಿರಲಿಲ್ಲ. ಸಾಂಗಲಿಯಲ್ಲಿ ತುಳಸಿ ಮನೆಮಾಡಿಕೊಂಡು ನಿಂತಿದ್ದರೆ ಒಂದಿಷ್ಟು ಗಡಿಬಿಡಿಯಾಗದೆ ಇರುತ್ತಿರಲಿಲ್ಲ. ಗುಪಿತ ಸ್ಫೋಟಕ್ಕೆ ವೇಳೆ ಹಿಡಿಯುತ್ತಿರಲಿಲ್ಲ. ಅಂದು ರಾತ್ರಿ ಗದ್ದಲ ವಾದಾಗ ತುಳಸಿಯನ್ನು ಹಾರಿಸಿಕೊಂಡು ಹೋದ ವ್ಯಕ್ತಿ ದಸ್ತಗೀರ್‍ಯಾ ಅಲ್ಲವೆಂದು ಬಹಳ ಜನಕ್ಕೆ ಖಾತ್ರೀ ಇತ್ತು. ಯಾರು ಹಾರಿಸಿಕೊಂಡು ಹೋದರೆಂಬುದನ್ನು ಖಾತ್ರೀ-ಲಾಯಖಾಗಿ ಹೇಳಲು ಅವರಲ್ಲಿಯೂ ಪುರಾವೆಯ ಅಭಾವವೇ ಇತ್ತು. ಈ ಪುರಾವೆಯ ಅಭಾವವೇ ಕಿಲಾಪ ಕುಟಿಲತೆಗೆ ಗುತ್ತಿಗೆ ಕೊಡುತ್ತಿತ್ತು. ಇದನ್ನು ತಾಡಿಸಿಯೇ ದಸ್ತಗೀರ್‍ಯಾ, ಮುಂಬೈ ವಾಸ್ತವ್ಯದ ಯೋಜನೆ ಹಾಕಿದ. ಅಲ್ಲಿಯ ಮಹಾಜನಸಾಗರದಲ್ಲಿ ವಿಶ್ಯಾ-ತುಳಸಿ ದರಿಯಾಮೇ ಖಸ್‌ಖಸ್. ಅಲ್ಲಿಯ ಜನ ದೃಷ್ಟಿ ನೇರವಾಗಿ ತನ್ನ ದಾರಿಯನ್ನು ನೋಡುತ್ತದೆ. ಬಾಯಿ ಉದರಂಭರಣ ವ್ಯವಸಾಯದ ಮಟ್ಟಿಗೆ ಬಿಚ್ಚುತ್ತದೆ. ಅದಕ್ಕೆ ದಿನದ ಇಪ್ಪತ್ತುನಾಲ್ಕು ತಾಸು ಕಮ್ಮೀ ಅನಿಸುತ್ತದೆ. ಕಿಲಾಪಕ್ಕೆ ಕ್ಷಣದ ಪುರುಸೊತ್ತು ಕೊಡುವಷ್ಟು ಅವಕಾಶ ಅದಕ್ಕಿರುವದಿಲ್ಲ. ವಿಶ್ಯಾ-ತುಳಸಿಯ ಸಂಬಂಧದ ಕಿಲಾಪದಿಂದ ಅದರ ಹೊಟ್ಟೆ ತುಂಬುವದಿಲ್ಲ.

ಇದರ ಕೂಡ, ತುಳಸಿ ಒಬ್ಬೊಂಟಿಗಳಾಗಿ ಮುಂಬೈಯಲ್ಲಿ ನಿಲ್ಲುವ ಶಕ್ಯಾ ಶಕ್ಯತೆಯನ್ನು ಯೋಚಿಸಿ, ಆಳಿ-ಪಾಳಿಯಿಂದ ಧೋಂಡೂಬಾಯಿ-ರಘೂರ

ಕಾವಲನ್ನೇ ನಿಯಮಿಸಿದ್ದ. ಥೋಂಡೂಬಾಯಿ ತಿಂಗಳೊಪ್ಪತ್ತು ನಿಂತು ತಿರುಗಿ ಹೋದ ಮೇಲೆ ರಘೂ ಬಂದು ನಿಲ್ಲುತ್ತಿದ್ದ. ತುಳಸಿಗೆ ರಕ್ಷೆಯಾದಂತೆ ಜೊತೆಯೂ ಆಗುತ್ತಿತ್ತು. ಹರೆಯದ ಹೆಣ್ಣು ಒಂಟಿಯಾಗಿ ಇಲ್ಲಿ ನೆಲಸಿದೆಯೆಂದು, ಹಸಿದ ಕಣ್ಣು ಅಡರಾಸಿ ಹರಿಹಾಯುವ ಭೀತಿ ಇರಲಿಲ್ಲ. ಎಲ್ಲಕ್ಕಿಂತ ಕಮಾಲ್ ಮಾಡಿದ್ದ ರಘೂ —

"ನಮ್ಮ ತಂಗೀ ಅಳ್ಯೆಂದರು. ಡಾಕ್ದರ ಕಾಲೇಜದಾಗ ಇದ್ದಾರ. ಮನ್ಯಾಗ ಅಭ್ಯಾಸ ನೆಟ್ಟಗ ಆಗೂದಿಲ್ಲಂತ ಬೋರ್ಡಿಂಗದಾಗನs ಇರತಾರ. ಹಳ್ಳೀ ಊರ ಸೋಬತೀ ಬ್ಯಾಡಂತs, ನಾವೂ ಇಲ್ಲೇ ಮನೀ ಮಾಡಬೇಕಾತು. ಹೋಗಿ-ಬರೂ ತ್ರಾಸ ಆಗತದ ಖರೇ. ಆದರ ಮಗಳು-ಅಳ್ಯಾನ ಸುಖಾ ನೋಡಬೇಕಂದರ ಎಲ್ಲಾ ಸವರಿಸಿಗೋಬೇಕಾಗತದ. ಇರಾಕಿ ಒಬ್ಬ ಹುಡಿಗಿ. ಎಲ್ಲಾನೂ ಆಕೀ ದಶಿಂದ ಮಾಡೂದಲ್ಲರೀ"
ಎಂದು ನಿರ್ಭಿಡೆಯಾಗಿ ವಿಶ್ವಾಸ-ತುಳಸಿಯ ತಳಕನ್ನು ಗಂಡ-ಹೆಂಡತಿಯ ಸಂಬಂಧ ದಲ್ಲಿ ಜೋಡಿಸಿ. ಯಾರಿಗೂ ಸಂಶಯ ಬರದ ಬೆಸಿಗೆ ಬೆಸೆದಿದ್ದ.

ವಿಶ್ಯಾ ತುಳಸಿಗೆ ಜೋತು ನಿಂತು ಅಭ್ಯಾಸದಲ್ಲಿ ಹೈಗೈ ಮಾಡುವ ಮಜನೂ ಗೋತ್ರವಲ್ಲ. ತುಳಸಿ ಮೂರು ದಿನ ನಿಂತು, ಮಜಾ ಲುಟಾಯಿಸಿ. ವಿಶ್ವಾಸನ ತಪೋಭಂಗದ ಕಾರ್ಯ ಪೂರ್ತಿಯಾದ ನಂತರ ನೇರ ಸ್ವರ್ಗಕ್ಕೆ ಉಡ್ಡಾಣಿಸಿಬಿಡುವ ರಂಭಾ-ಊರ್ವಸಿ ತಳಿಯಲ್ಲ. ಅವಳ ಹತ್ತು ವರುಷದ ತಪ ಸಿದ್ಧಿಸಿ. ಫಲ ವರದಾನವಾಗಿ ಬಂದಿತ್ತು. ಆ ಫಲ ಕೈ ಬಿಡುವ ಚಿಂತೆ ತುಳಸಿಗಿರಲಿಲ್ಲ. ಅದರ ಮೇಲೆ ಅವಳ ನಾಲ್ಕೀ ಹಕ್ಕಿನ ಶಿಕ್ಕಾ ಮೋರ್ತಬ್ ಆಗಿತ್ತು. ಅದರ ಉಪಭೋಗ ಸುಖದ ಅವಸರ ಅವಳಿಗಿರಲಿಲ್ಲ. ವಿಶ್ಯಾನ ಜೀವನದಲ್ಲಿ ತುಳಸಿ ಕಾಲ್ತೊಡಕಾಗಿ ಬರದೆ, ಅವನ ದಾರಿ ಸುಗಮವಾಗುವಂತೆ ಹಡದಿ ಹಾಸಬಂದಿದ್ದಳು.

ಅದೆಲ್ಲ ಸರಿ; ಆದರೆ ಈ ವಿಷಯ ಬಹಳ ದಿನ ಗುಪಿತವಾಗಿ ಉಳಿದೀತೆಂಬ ಬಗ್ಗೆ ನನಗೇ ಖಾತ್ರೀ ಇರಲಿಲ್ಲ. ಅದರ ಗುಪಿತವನ್ನು ವಿಶ್ವಾಸನೇ ಸ್ಫೋಟ ಮಾಡುವ ಶಕ್ಯತೆ ಹೆಚ್ಚಾಗಿತ್ತು. ಅವನಿಗೆ ಪಂತಮಾದಾನ ಛಿಕೇ-ಮುರವತ್ತು ಇರಲಿಲ್ಲ. ಇದ್ದ ಆಳಕು ಸೋಸಕ್ಕ – ನಂತರ ರಾವಜೀಕಾಕಾನದು. ಈ ಸುದ್ದಿಯನ್ನು ಕೇಳಿ, ಬಹಳವಾದರೆ ರಾವಜೀಕಾಕಾ."ಶ್ರೀಹರೀ, ಶ್ರೀಹರೀ, ಶ್ರೀಹರೀ ನೀನೇನಪಾ! ನಿನ್ನ ಲೀಲಾ ಅಗಾಧ ಅದs!" ಎಂದು ಲೀಲಾ-ನಾಟಕ-ಸೂತ್ರಧಾರನಿಗೆ ಶರಣು

ಹೋಗಿ ತಮ್ಮ ಜವಾಬುದಾರಿಯನ್ನು ಅವನಿಗೆ ಬದಲಿಸಿಬಿಡುತ್ತಿದ್ದರು. ಗಿರಿಜಾನ ಕಡೆಗೆ ನೋಡುತ್ತಿದ್ದರು. ಗಿರಿಜಾ –

"ವಿಶ್ಯಾ ಯಾರ್ನ ಹೋತಾನs ? ಮುತ್ಯಾ್ಯಂದು, ಅಪ್ಪಂದು, ಕಿತ್ತೇ ತಿಂದಿದಾ. ನೀವ್ಯಾಕ ತಲೀ ಕೆಡಿಸಿಗೋತೀರಿ. ಅನ್ನೂ ಕೈಲೀ ಇನ್ನೊಂದು ಎರಡ ಸಾರೇ ಶ್ರೀಹರೀ ಅಂದಬಿಡಿರಿ. ಗೆದ್ದಿರಿ."

ಎಂದು ನಿರ್ಣಾಯಕ ಅಭಿಪ್ರಾಯ ಕೊಟ್ಟು. ಅವರ ಮಟ್ಟಿಗೆ ಈ ಪ್ರಶ್ನೆಯ ಉತ್ತರವನ್ನು ಸರಿಯಾಗಿ ಬಿಡಿಸುತ್ತಿದ್ದಳು.

ಆದರೆ ಸೋನಕ್ಕ......

ಅವರು ಒಂದು ತುಟಿ ಎರಡು ಮಾಡುತ್ತಿದ್ದಿಲ್ಲ. ಬ್ರ ಎನ್ನುತ್ತಿರಲಿಲ್ಲ. ಹಿಂದೆ ಘುಳೆಯಿಂದ ತಿರುಗಿ ಬಂದಾಗ – ಅಗತಿಕರಾಗಿ ಬಂದಾಗ – ಹತ್ತೆಂಟು ದಿನ ಹಾಸಿಗೆ ಯಲ್ಲಿಯೇ ಇದ್ದರು. ಜೀವ-ಸರ್ವಸ್ವವನ್ನೂ ಕಣ್ಣಲ್ಲಿ ತಂದು ಏಕಾಗ್ರದೃಷ್ಟಿಯಿಂದ ಜಂತಿಜಂತಿಯನ್ನು ನೋಡುತ್ತ, ಏನನ್ನೋ ಎಣಿಸುತ್ತ. ಏನನ್ನೋ ಗುಣಿಸುತ್ತ, ನಿಶ್ಚಲ-ಜಡರಾಗಿ ಮಲಗಿಬಿಟ್ಟಿದ್ದರು. ಆ ನೋಟ ಇನ್ನೂ ನನ್ನ ಕಣ್ಣಿಗೆ ಕಟ್ಟಿದೆ. ರಾವಜೀಕಾಕಾ ಹೇಳಿದ್ದರು:

"ಸೋನಾ, ನೀ ಬದಕೂದು. ನಾಕ ಕೂಸಗೋಳ ದಸಿಂದ. ಕೂಸಿನಕಿಂತಾನೂ ಕಡೀ ಆದ ನನ್ನ ದಸಿಂದ. ನಿನ್ನ ಕಾಕೂ ನನ್ನs. ನಿನ್ನ ಉಡೀಯೊಳಗs ಹಾಕಿ ಹೋಗ್ಯಾಳ. ಅದನ್ನ ಮರೀಬ್ಯಾಡಾ"

ಎಂದು ಕರುಳು ಕರಗಿ – ಕಣ್ಣಲ್ಲಿ ನೀರು ತಂದು ಹೇಳಿದಾಗ. ಸೋನಕ್ಕ ನಿಧಾನವಾಗಿ ಎದ್ದು. ಕಾಕಾ ಅವರ ಅಡಿಯ ಮುಡಿಯನ್ನು ನೆತ್ತಿಗೆ ಒತ್ತಿಕೊಂಡಿದ್ದರು. ಈಗ...... ಈಗ ತಮ್ಮ ನೆಚ್ಚಿನ ವಿಶ್ಯಾ, ವಸೂನ ಮೇಲೆ ಇನ್ನೊಂದು ಹೆಣ್ಣನ್ನು ತಳಕಿಸಿಕೊಂಡ ನೆಂಬುದು ತಿಳಿದರೆ...... ವಸೂಸಿಗೆ ಎಂತಹ ಸಂಕಟವಾಗಬಹುದೆಂಬುದನ್ನು ಚಿತ್ರಿಸಿಕೊಂಡರೆ...

ರಾವಜೀಕಾಕಾನ ಸಾಂತ್ವನ, ಗಿರಿಜಾನ ಸಮಾಧಾನ. ಅದೇಕೆ ಖುದ್ದ ವಸೂನ ಅಭಯ ಅದರಿಂದಲೂ ಅವರು ನಿರಂಬಳವಾಗುತ್ತಿರಲಿಲ್ಲ. ನಿಶ್ಚಿಂತರಾಗುತ್ತಿರ ಲಿಲ್ಲ. ಅವರ ನವೆತ ನಿಲ್ಲುತ್ತಿರಲಿಲ್ಲ. ಅದಕ್ಕೆ ಒಂದೇ ಒಂದು ಗುಣಕಾರಿ ರಾಮು ಬಾಣ ಔಷಧವೆಂದರೆ ...

ವಿಶ್ಯಾ ತಾನಾಗಿಯೇ ಅವರಿಗೆ ಈ ಸುದ್ದಿಯನ್ನು ಹೇಳಬೇಕು. ಅವರ

ಸಮ್ಮತಿ ಪಡೆಯಬೇಕು. ಕಾರಣ, ಸೋನಕ್ಕನಿಗೆ ವಿಶ್ವಾಸನಲ್ಲಿ ಅಪಾರ ವಿಶ್ವಾಸವಿತ್ತು. ಬಲವಾದ ನಂಬಿಗೆ ಇತ್ತು. ತಮ್ಮ ವಿಶ್ಯಾ ಎಂದೂ – ಯಾರಿಗೂ ಅನ್ಯಾಯ ಬಗೆಯುವ ಜೀವವಲ್ಲವೆಂಬ ದೃಢ ನಂಬುಗೆ ಇತ್ತು. ತಮಗಾಗಿ ತಮ್ಮ ವಿಶ್ಯಾ ಸವೆಯುತ್ತಿದ್ದ – ಸಂಕಟಬಡುತ್ತಿದ್ದ ಕಲ್ಪನೆ ಅವರಿಗಿತ್ತು. ತಮ್ಮ ಹೊಟ್ಟೆಯೊಳಗಿನ ಒಂದೆರಡು ಮಾತು ಹೇಳಬೇಕಾದರೂ ಅವರಿಗೆ ವಿಶ್ಯಾನೇ ಬೇಕಾಗುತ್ತಿತ್ತು. ಶ್ಯಾಮರಾಯ ವಿಶ್ವಾಸನನ್ನು ನಿರ್ನಾಮಮಾಡುತ್ತೇನೆಂದು ವೀರ ಪಣ ಪ್ರಕಾರಿಸಿದಂದಿನಿಂದ, ಅವರು ಅವನನ್ನು ಕಣ್ಣು-ಮಣಿ ಮಾಡಿಕೊಂಡಿದ್ದರು. ಜೀವ-ಸರ್ವಸ್ವವನ್ನಾಗಿ ಭಾವಿಸಿಕೊಂಡಿದ್ದರು. ಅವರ ನವೆತ, ಸಂಕಟ, ತಳಮಳ ವಿಶ್ವಾಸನಿಗಾಗಿ ಇತ್ತು. ಇಂದು ಅವನೇ ಈ ಗುಪಿತವನ್ನು ಸೋನಕ್ಕನಿಗೆ ತಿಳಿಸುವ ಅಗತ್ಯವಿತ್ತು. ಅವನ್ನು ಮುಚ್ಚಿಟ್ಟ ತಮ್ಮ ವಿಶ್ಯಾ. ತಮಗೆ ಎರಡು ಬಗೆದನೆಂಬ ಭಾವನೆ ಅವರಿಗೆ ಬರುತ್ತಿದ್ದಿಲ್ಲ. ಒಂದಿಷ್ಟು ಸಮಾಧಾನ ಅವರ ಮುಖಮಂಡಲದಲ್ಲಿ ಮಿಂಚುತ್ತಿತ್ತು. ಬಸವಂತಿಯನ್ನು ತಂಗಿಯೆಂದು ಸ್ವಾಗತಿಸಿದಂತೆ, ತುಳಸಿಯನ್ನು ಸೊಸೆಯೆಂದು ಸ್ವೀಕರಿಸುತ್ತಿದ್ದರು.

ತುಳಸಿಯ ಸಮಕ್ಷಮದಲ್ಲಿ ಈ ವಿಚಾರಕ್ಕೆ ವಾಚ್ಯತೆ ಕೊಡುವದು ಸರಿ ಕಾಣಲಿಲ್ಲ. ಅನುವು ನೋಡಿ ವಿಶ್ವಾಸನಿಗೇ ಹೇಳುವದೆಂದು ಗುಣಿಸಿಕೊಂಡೆ.

ನಾನು ವಿಶ್ವಾಸನ ಕೂಡ ತುಳಸಿಯನ್ನು ಕಾಣಲು ಅವಳ ಬಿಡಾರಕ್ಕೆ ಹೋದಾಗ. ರಘೂ ಊರಿಗೆ ಹೋಗಿ ಎರಡು ದಿನವಾಗಿತ್ತು. ಧೋಂಡೂಬಾಯಿ ಮೂರು-ನಾಕು ದಿನಗಳಲ್ಲಿ ಬರುವವಳಿದ್ದಳು. ಅವರಿಬ್ಬರೂ ಇಲ್ಲದಾಗ, ವಿಶ್ವಾಸ ಬಹುತರವಾಗಿ, ಸಾಧ್ಯವಾದಷ್ಟು ಹೆಚ್ಚು ವೇಳೆಯನ್ನು ತುಳಸಿಯ ಮನೆಯಲ್ಲೇ ಕಳೆಯುತ್ತಿದ್ದ.

ಚೌಪಾಟಿಯಿಂದ ತಿರುಗಿ. ಬರುವಾಗ, ವಿಶ್ಯಾ-ತುಳಸಿ ಇದೆಲ್ಲವನ್ನೂ ವಿವರಿಸಿದರು. ನಾನು ನನಗೇ ತಿಳಿಯದಂತೆ ಅಚಾನಕವಾಗಿ —

"ತುಳಸೀ, ನಾನs ಕಾಯಂತರೀಕ ನಿನ್ನ ಮನ್ಯಾಗ ಸಿಂತರ ಹ್ಯಾಂಗs? ಅವರಿಗೂ ಬಂದ-ಹೋಗೂ ಧಾವತಿ ಇರೂದಿಲ್ಲಾ. ವಿಶ್ಯಾಗೂ ಅಭ್ಯಾಸದಾಗ ಅಡಥsಳ ಆಗೂದಿಲ್ಲಾ. ತಯ್ಯುಬ್ಜೀ ಅವರ ಮನೀಕಿಂತಾ ಇಲ್ಲೇ ಮೋಕಳೀಕ ಅನಸ್ತದ. ತಯ್ಯುಬ್ಜೀ ಅವರು ಊಟಕ್ಕ ಖಾನಾವಳೀಯೊಳಗ ವ್ಯವಸ್ಥಾ ಮಾಡ್ತಾರ ಅನ್ನೂದು ಖರೇ. ತಯ್ಯುಬ್ಜೀ ಅವರಲ್ಲೆ ಇರೂದನ್ನ ಬಿಟ್ಟು – ಖಾನಾವಳೀ ಊಟಾ

ಬಿಟ್ಟು, ಬರೇ ಅವರ ಹುಡುಗರ ಟ್ಯೂಶನ್ ಅಷ್ಟೇ ಮಾಡಿದೇ ಅಂದರ, ಅವರೇನು ಫುಕಟ ದುಡಿಸಿಗೊಂಬೂದಿಲ್ಲಾ. ಪಾಚ-ಪನ್ನಾಸ ರುಪಾಯಿ ಖಾತ್ರೀಲೇನs ಕೊಡತಾರ. ಎರಡ ತಾಸು ಟ್ಯೂಶನ್ – ಎರಡ ತಾಸ ಕಾಲೇಜು. ಉಳದ ಇಪ್ಪತ್ತು ತಾಸು ನಿನ್ನ ರಖವಾಲದಾರಿಕಿ. ನಮ್ಮ ಊರ ಭಡಜೀ ಮಗಾ. ಗರೀಬ ಹುಡಗಾ. ಸಾಲೀ ಕಲಿಯೂದಕಂತ ಬಂದ ನಿಂತಾನ. ನನಗೂ ಜೋಡೀ ಆಧಾಂಗ ಆತು ಅಂತs ಭಂಪ ಹೊಡದರಾತು. ನಿಮ್ಮ ಊರಾಂವ ಅನ್ನೂದು ಅಷ್ಟs ಸುಳ್ಳಾ. ಬಾಕೀದ್ದು ಪಂಧರಾ ಆಣೇ ಖರೇ. ಯಾ ಚಿತ್ರಗುಪ್ತ ಮಗಾ, ನಿನ್ನ ಈ ಅಣೇದ ಸುಳ್ಳಾ ದಾಖಲ ಮಾಡಿಕೋಳ್ಳಿಕ್ಕ ಕೂತಾನs? ತುಳಸೀ, ನೋಡು, ನಿನಗೂ ಭಡಜೀ ಸೇವಾ ಮಾಡಿದ್ದು ಪುಣ್ಯಾ ಬರತದ. ಅಣೇದ ಪಾಪಾ, ಸಾಫ ತೊಳದ ಹೋಗತದ. ನೀ ಹೂಂ ಅನೂದೇ ತಡಾ, ನಾಳೇ "good-bye mr. ತಯ್ಯಬ್ಜೀ" ಅಂತs ಕುರ್ನೀಸಾತ ಮಾಡಿ ಬಂದಬಿಡತೀನಿ. ಏನಂತೀ ವಿಶ್ಯಾ?"

"ನಿನಗ ಅಡಿಗೀ ಮಾಡಿ ಹಾಕೂ ತ್ರಾಸು ತುಳಸೀದು. ಆ ಭಾರಾ ಅಕೀ ಹೊರತಿದ್ದರ ಕೇಳು. ನನ್ನ ಪರವಾನಗೀ ಜರೂರೀನs ಇಲ್ಲಾ."

ವಿಶ್ವಾಸ.

"ಇಂದ ರಾತ್ರೀ. ನಿನ್ನ ಊಟಾ ನೋಡತೀನಿ ದಾವಲ್ಯಾ. ನೀನೂ ಹಾಂಗ ಇದ್ದರ ತಯ್ಯಬ್ಜೀ ಅವರಿಗೆ ಸಲಾಂ ಹೇಳಿ ಬಾ ಅಂತೀನಿ. ಇಲ್ಲದಿದ್ದರ. ಬರಬ್ಯಾಡಂತ ನಾನೇ ಕುರ್ನೀಸಾತ ಮಾಡತೀನಿ"

ತುಳಸಿ.

"ಮೂರಾಯಳs ಇಂದ ಮಾತ್ರ ನನ್ನ 'ಟೆಸ್ಟ್' ಮಾಡಬ್ಯಾಡಾ. ಮಧ್ಯಾಹ್ನದಾಗ ವಿಶ್ಯಾನ ಮ್ಯಾಲಿನ ಸಿಟ್ಟಿಲೇ ಅರಗಚ್ಚಿ ಉಂಡೀನಿ. ಈಗೇ ಹಸಿವಿ ಸಂಕಟ ಇಟ್ಟsದ. ಇನ್ನ ನೀ ಸಲಾಮ್ ಮಾಡಿಗೀಡೀ ಅಂತs ಅರೆಹೊಟ್ಟೀಲೇ ಎದ್ದರ, ತಯ್ಯಬ್ಜೀ ಅವರ ಮನೀ ಮುಟ್ಟೂದರಾಗs ಹಾದೀ ಹೆಣಾ ಆಗತೀನಿ. ನಿಮ್ಮ ಮಾತಿನ ಧೋರಣಾದ ಮ್ಯಾಲಿಂದ, ಘಾಳಿ ನಮಗ ಅಗದೀ ಅನಕೂಲಾಗೇ ಬೀಸಲಿಕ್ಕೆ ಹತ್ತೇದಂತ ಅನಸ್ತದ. ನಾಳಿಂದ ಆ ಅನ್ನಪೂರ್ಣಾ ಖಾನಾವಳೀ – ಅಲ್ಲೀ ಆ 'ಟ್ರಾನ್ಸ್‌ಪರಂಟ್' ಚಪಾತೀ ಪರ್‍ಲಹರೀತಪಾ ಹಂಗಾರ. ನಾ ಇನ್ನೊಂದು ತಿಂಗಳೆರಡ ತಿಂಗಳಾ ಅಲ್ಲೇ ಉಂಡಿದ್ದರ, ಆ ಖಾನವಳೀ ಏನು ಜಾಗಾದ ಮ್ಯಾಲ ಇರತಿದ್ದಿಲ್ಲಾ. ದಿವಾಳೀನs ಏಳತಿತ್ತು. ನಾ ಬಿಟ್ಟೇ ಅಂದರ ಇನಾ ನಾಕೊಪ್ಪತ್ತರೆ

ಅನು ಬದುಕೀತು. ಅದನ್ನ ಬಿಟ್ಟರ ನನಗೂ ಬದಕೂ ಚಾನ್ಸನರs ಅವs."
ನಾನು.

"ಖಾನಾವಳೀ ಸತ್ತಿದ್ದರ ನಿನಗೇನು ಸೂತಕ ಇದ್ದಿದ್ದಿಲ್ಲ ದಾದಲ್ಯಾ. ಅದೂ ಇಲ್ಲಾ ಇನ್ನೊಂದು ಠಿಕಾಣ ನೋಡತಿದ್ದಿ. ಅದನ್ನ ಬದಕಿಸಿ, ನನಗ ಇನ್ನs ಕಾಯಂ ತರೀಕ ಸಾವ ತಂದಿ."
ನಗುತ್ತ ತುಳಸಿ ಹೇಳಿದಳು.

ಶುಭಸ್ಯ ಶೀಘ್ರಂ. ಬಿರಾಡು ಹಲಾಯಿಸುವಂತೆ, ತುಳಸಿ-ವಿಶ್ವಾ ಆಗ್ರಹ ಪಡಿಸಿದರು. ಆದರೆ ನನ್ನ ಕೊರಳಿಗೆ ಹಜಾರು ಲಿಗಾಡು. ಹೋದಲ್ಲೆಲ್ಲ ಬಳಗ ಕಟ್ಟಿಕೊಳ್ಳುವ ಚಾಳಿ ನನಗೆ ಅಂಟಿದೆ. ಏನಕೇನ ಕಾರಣೇನ, ವಯಸ್ಸಿನಲ್ಲಿ – ಅಧಿಕಾರದಲ್ಲಿ ನನಗಿಂತ ಬಹಳ ಹಿರಿಯರಾದವರ ಸಂಬಂಧ ಜೋಡಿಸಿಬಿಡುತ್ತದೆ. ಅವರಲ್ಲಿ ನಾನೇ ಹೋಗಿ ಬರುವ ರೂಢಿಯನ್ನು ಇಟ್ಟುಕೊಂಡರೂ, ಕಾರ್ಯಾರ್ಥಿಯಾಗಿ ಅವರಿಗೆ ನನ್ನ ಠಾವ-ಠಿಕಾಣದ ಗುರುತು ಹೇಳಿ ಇಡಬೇಕಾದ ಅಗತ್ಯವಿರುತ್ತದೆ. ಮುಂಬೈಗೆ ಶ್ಯಾಮರಾಯ ಮೇಲಿಂದ ಮೇಲೆ ಬರುತ್ತಿದ್ದ. ಪಂತಮಾಮಾ-ಶಂಕರಕಾಕಾ 'ಟ್ರಿಪ್' ಮಾಡುತ್ತಿದ್ದರು. ಸಾಂಗಲಿಯಲ್ಲಿ ನಾನು ಘಂಟೆಯನ್ನು ಬಡೆಯುತ್ತಿದ್ದ ನಾಕೆಂಟು ಮನೆಗಳ ಯಜಮಾನರ ಸವ್ವಾರಿ ಎಡಚಿ-ಬಿಡಚಿ ಮುಂಬೈಗೆ ಬಿಜಯಿಸುತ್ತಿತ್ತು. ತಿಂಗಳಿಗೊಮ್ಮೆ ನಾಯಕ ವಕೀಲರು, ಹಾಯಕೋರ್ಟಿನ ಕೆಲಸಕ್ಕೆ ತಪ್ಪದೆ ಬರುತ್ತಿದ್ದರು.

"ದಾದಲ್ಯಾ. ಖೋಲೀ ಎಲ್ಲೆ ಮಾಡೀ, ಏನ್ ಠಾನಾ? ನಿಮ್ಮ ತಯ್ಯಬ್ಜೀ ಅವರದು ಫೋನ್ ನಂಬರೂ ಕೊಟ್ಟು ಇಡೂ ಏನಪಾ. ಅಂದರ ಫೋನ್ ಮಾಡಲಿಕ್ಕೆ ಅನಕೂಲಾ."
ಎಂದು ಅನ್ನುವ ಸಂಭವವಿತ್ತು. ನಾನು ಈ ಕಾರಣದಿಂದ ತುಳಸಿಯಲ್ಲಿ ಬಿರಾಡು ಹಲಾಯಿಸುವ ಶಕ್ಯತೆ ಕೂಡಾ ಇರಲಿಲ್ಲ. ಹಾಗೆ ಮಾಡಿದ್ದರೆ ನನಗೂ ತೊಂದರೆ; ವಿಶ್ವಾಸ-ತುಳಸಿಯರಿಗೂ ತೊಂದರೆ.

'ಟ್ರಾನ್ಸ್‌ಪರಂಟ್' ಚಪಾತಿಯ ಬೇಸರ ಬಂದಾಗ, ತಯ್ಯಬ್ಜೀ ಅವರ ಬೀಬೀ-ಅಮ್ಮಾಜಾನ್ ಮಸ್ತ ಖಾನಾ ಕೊಡುತ್ತಿದ್ದರು. ದಾದಲ್ಯಾ ಮೊನ್ನೆ, ಝೂರಿ-ಚಮಚಾ ಲೀಲಾಜಾಲವಾಗಿ ನಡೆಸುವದನ್ನು ನೋಡಿ ಅವರು ಈ ಗಿರಾಕಿ ಬಾಟಾಯಿಸಿದ ಕಾಯಾಸ ಕಟ್ಟಿದ್ದರು. 'ಚೇಂಜ್' ಎಂದು ಬೇಕಾದಾಗ, ವಾರದಲ್ಲಿ

ಒಂದೆರಡು ದಿನ ತುಳಸಿಯ ಮನೆಯ ಔತಣ ಸ್ವೀಕರಿಸಿದರೂ ನಡೆಯುತ್ತಿತ್ತು. ಸದ್ಯಕ್ಕೆ ನನಗೆ ತಯ್ಯುಬ್ಜೀಯವರಲ್ಲಿಯ ಬಿರಾಡವೇ ಸರ್ವರೀತಿಯಿಂದಲೂ ಅನು ಕೂಲವಾಗಿತ್ತು.

"ತುಳಸೀ, ನಿನ್ನ ಅಡಿಗೀಮನೀ ಗ್ವಾಡಿಗೆ, ಒಂದು ಮಾರುತೀದು, ಒಂದು ಲಕ್ಷ್ಮೀದು ಫೋಟೋನರ್s ಹಾಕು. ನಾ ಬಂದಾಗೊಮ್ಮೆ ನಾಕ ಹೂವ ಏರಿಸಿ ಪೂಜೀ ಮಾಡಿದ ಸಮಾಧಾನನರ್s ಹಚಿಗೋತೀನಿ. ಪೂಜಿ ತಪ್ಪಿದರ ನನಗ ಎಡವಿಡಚನs ಆಗತದ. ಸ್ವರ್ಗಕ್ಕ ಹೋದರೂ ಶೆಟ್ಟಿಗ ತನ್ನ ಲೆಕ್ಕದ ತಿಪಲನs ಅನೂ ಹಾಂಗ, ಇಂಗ್ಲಂಡ, ಮೂನ್‌ಲ್ಯಾಂಡದಾಗ ಇಟ್ಟರೂ ನನಗ ಪೂಜೀದs ಧ್ಯಾಸಾ. ಮುಂಬೈಗೆ ಬರದೇ, ಸಾಂಗಲೀ-ಪುಣೇದಾಗ ನಿಂತಿದ್ದರ ಮತ್ತೂ ನಮ್ಮ ರಹಾಟ-ಗಾಡೀ ಸುರೂನs ಆಗತಿತ್ತು. ವಿಶ್ವಾಸ ಮನೀ ದೇವರು ಬದಕಿಕೊಂಡರು."

"ಮಾರಾಯಾ, ಅಲ್ಲೆ ನನ್ನ ದೇವರು ಬದಕಿದ್ವು. ಮುಂಬೈಯಾಗ, ತುಳಸೀ ಮನ್ಯಾಗ ಅವನ್ನ ಹಕನಾಕ ಕೊಲಬ್ಯಾಡಾ. ಒಂದೆರಡು ಫೋಟೋ ಹಚ್ಚ ಅಂದಿ. ಆದರ ತುಳಸಿ ನಿನಕಿಂತಾ ಮುಂಚೇನs ತನ್ನ ದೇವರ ಸಂಪುಷ್ಟಾ ಮಾಡಿಕೊಂಡಾಳ. ಮಗನs, 'ಸಿಲ್‌ವ್ಹರ್ ಕಾಸ್ಕೆಟ್'ದಾಗ ಸಿಕ್ಕು ಆಕೀ ದೇವರಾ ಉಸಲಗಟ್ಟಲಿಕ್ಕೆ ಹತ್ಯಾನ. ಹೇಳಲೇನ ತುಳಸೀ?"
ವಿಶ್ವಾಸ.

"ನನ್ನ ಅಣ್ಣಾಂ ರಾಜಾ ಹೇಳಿದ್ಯಂದ್ರ. ನಿಂದೂ ಭಾರೀ ಒಡಕಬಾಯಿ. ಏನ ಹೇಳಬೇಕು – ಏನ ಹೇಳಬಾರದೂ ಅದೂ ತಿಳಿಯೂದಿಲ್ಲಾ. ಬೆಳ್ಳೀ ಸಂಪುಷ್ಟ ಯಾವಾಗ ನೋಡಿದಿ? ಇನ್ನ ಹೊಟ್ಟ್ಯಾಗ ಅಷ್ಟs ಇಟಗೊಂಬೂದು ಉಳೀತು, ನಿನ್ನ ಕಣ್ಣು ತಪ್ಪಸಬೇಕಂದರ ..."
ತುಳಸಿ.

"ತುಳಸೀ. ನಿನ್ನ ಎದ್ಯಾಗಿನ ಚೀಜs ವಿಶ್ಯಾಗ ತಾಬೀಜ ಆಗೇದ. ನೀ ಹೊಟ್ಟ್ಯಾಗ ಇಟಗೊಂಡರೂ ಅಷ್ಟೇ – ನೆತ್ತ್ಯಾಗ ಇಟಗೊಂಡರೂ ಅಷ್ಟೇ. ಆ ಚೀಜಾ ಸಿ.ಐ.ಡಿ. ಹಾಂಗs ಎಲ್ಲಾದರದೂ ತಪಾಸಿನ್ಯಾಗ ಇರತದ. ಅದೇ ಫಿತೂರ ಆಗೇದ ವಿಶ್ಯಾಗ. ನಿನ್ನ ಆಣೀ-ಸೂರೀ ಏನೂ ಬ್ಯಾಡಾ. ವಿಶ್ವಾಸನs ಹೇಳೂದು ಯಾಕs? ನೀನs ಹೇಳಿಬಿಡೂ. ಅಚ್ಛಾ, ಬೋಲೋ ಕ್ಯಾ ಬಾತ ಹೈ?"

"ದಾದಲ್ಯಾ, ತುಳಸೀ-ನಾನು, ಬ್ಯಾರೇ ಬ್ಯಾರೇ ಅಂತೂ ಅಲ್ಲs. ಆಕೀ

ತನ್ನ ಆಣೀ ಹಾಕಿದರ, ನನ್ನ ಆಣೀ ಹಾಕಿಧಾಂಗೇ. ಏನ್ ತುಳಸೀ? ಇನ್‌ಕಾರ ಮಾಡತಿದ್ದರ ಈಗೇ ಮಾಡು. ಒಂದಾಗಡೇ ದುಸುಮುಸು ಮಾಡೂದು ಬ್ಯಾಡಾ. ಅಚ್ಛಾ, ಸುನೋ ದಾದಲ್ಯಾಭಾಯ್ ...

ವಿಶ್ಯಾ-ತುಳಸೀ "ಪ್ರೇಮುಪ್ರಸಿದ್ಧ" ರುಪಾಯಿ ಅದs ಅಲಾ, ಅದಕ್ಕ ಈಗs ಏಕದಮ್ ದೈವತ್ವ ಪ್ರಾಪ್ತ ಆಗೇದ. ಇಷ್ಟ ದಿನಾ ಅದು ತುಳಸೀ ಕೊಳ್ಳಾಗ ಚೇನ ಬಂಧಿತ ಆಗಿತ್ತು. ಈಗ ಸಂಪುಷ್ಟ ಬಂಧಿತ ಆಗೇದ. ನೇಮದಿಂದ ಅದಕ್ಕ ಅಭ್ಯಂಗ ಸ್ನಾನ ಆಗತದ. ಹರಿದ್ರಾ-ಕುಂಕುಮ-ಲೇಪನ ಆಗತದ. ಅದನ್ನ ತೊಳದ ನೀರಾ ತುಳಸಿಗೆ ತೀರ್ಥ ಆಗತದ. ದಾದಲ್ಯಾ, ರಾಣೀ ಛಾಪ ರುಪಾಯಿ ಅದು. ವ್ಹಿಕ್ಟೋರಿಯಾ ಮಹಾರಾಣೀ. ವಾರಕ್ಕ ಒಮ್ಮೆರs ಮೈ ತೊಳಕೋತಿದ್ದಳೋ ಇಲ್ಲೋ? ಇತಿಹಾಸದಾಗಂತೂ ನಮೂದ ಇಲ್ಲಾ. ಏನ ನಮೂದ ಮಾಡೂದು ಅಂತs ಬಿಟ್ಟಿದ್ದರು ಬಿಟ್ಟಿರೂ ಸಂಭವ ಅದs. ಆದರ ಆ ರಾಣೀ ಛಾಪಿನ ರುಪಾಯಿಗೆ ಮಾತ್ರs. ತುಳಸಿ ದಿನಾ ಥಣ್ಣೀರ ಸ್ನಾನಾ ಏನ ಬಿಡಿಸಿಲ್ಲಾ. ಅದರ ದಶಿಂದ ಛಾಳ ಪ್ಯಾಷ್ಟೀ ಮಾಡೂದು ಸುದ್ದೇ ಸೋವೀ ಇಲ್ಲಾ. ಈಗ ತುಳಸಿ ಗರಂ ಆದ ಕಂದರ. ನಾಳೆ ಮತ್ತ ಪೂಜೀ ವ್ಯಾಳ್ಯಾಕ್ಕs ನರಮ ಆಗೂದು. ಬಾರಾ ತಾಸು ಭಾರೀ 'ಟೆಂಪರೇಚರ್' ಇರತದ."

ವಿಶ್ವಾಸ.

"ನಿನ್ನ ಡಾಕ್ಟರಕೀ ಬರೇ ನನ್ನ 'ಟೆಂಪರೇಚರ್' ನೋಡೂದ್ರಾಗs ಖರ್ಚೀ ಬೀಳ್ವಾಂಗ ಕಾಣಸ್ತದ. ಆ ರುಪಾಯಿ ಏನು ನನಗ ಫುಕ್ಕಟ ಬಂದಿಲ್ಲಾ. ನನ್ನ ವಿಶ್ಯಾನ್ನೂ ತಂದsದ ಜೋಡೀ."

ತುಳಸಿ.

"ಖಿಷ್, ತುಳಸೀ, ವಿಶ್ಯಾ ಅಂದೀ. ಚಿರಡಿಗೆ ತರಸಿದರ ತುಳಸೀ ಪ್ರೀತಿ, ಹಾಲ ಉಕ್ಕಿಧಾಂಗ ಆಗತದ ಅನ್ನೂದರ ಮಾಸಲೇ ತೋರಿಸಿದೆ ದಾದಲ್ಯಾಗ. ದಾದಲ್ಯಾ, ತುಳಸೀ 'ವಿಶ್ಯಾ' ಅಂದಳೂ ಅಂದರs ಭಾರೀ ಖಿಷ್ಯಾಗಿದ್ದಾಳಂತ ತಿಳೀಬೇಕು. ಇದರ ಉಲಟ ವಸೂ,'ವಿಶ್ವಾಸ್‌ರಾವ್' ಅಂಧಾಂಗs! ತುಳಸಿ ರಾಜಾ, ರಾಜಾ ಅಂತs ಪೊರಡತಾಳ. ವಸೂ, ವಿಶ್ಯಾ ವಿಶ್ಯಾ ಅಂತs ಸುರುವು ಮಾಡತಾಳ. ಏರಡೂ ಗಿರಾಕಿ ಖಿಷೀ 'ರ್‍ಹಿನಿಶ್' ಗಾಠಾಸಿದೂ ಅಂದರ,'ವಿಶ್ಯಾ-ವಿಶ್ವಾಸರಾವ್' ಅಂತs 'shake-hand' ಮಾಡತಾವs. ಅವು ಏನs ಅಲ್ಲೀ – ನಮಗ ನಮಗ

ಫಾಯದೇನ್ರ!"
ವಿಶ್ವಾಸ.

"ದಾದಲ್ಯಾ, ವಿಶ್ಯಾನ್ನ ಮಾತ ಕೇಳಿಕೋತ ಕೂತೀ ಅಂದರ, ನೀ ಏನು ಹೊಟ್ಟೀ ತುಂಬೇ ಉಣ್ಣಾಂಗಿಲ್ಲಾ. ಇನಾ ಮೊದಲಿನ ಚಪಾತ್ಯಾಗ್ರ ಕೂತೀ. ಒಮ್ಮೆಲಗೇ ಎರಡ ಚಪಾತೀ ದಾಕತೀನಿ ನೋಡು."
ತುಳಸಿ ಎರಡು ಚಪಾತಿ ಬಿಡಿಸಿ ಹೇಳಿದಳು.

"ತುಳಸೀ, ಒಮ್ಮೆ ಸಾಂಗ್ಲ್ಯಾಗ ಏನ ಮಜಾ ಆತಂದೀ? ವಸೂಗ ಅಡಿಗಿ ಹತ್ತಿತ್ತು. ಅಂದ್ರ, ನಾನು, ವಿಶ್ಯಾ, ವಸೂ ಮೂರ್ರ ಮಂದಿ ಊಟಕ್ಕ. ಅಗದೀ ನಾಚಿಕೀ ಬಿಟ್ಟ ಹೇಳತೀನಿ. ಹನ್ನೆರಡ ಚಪಾತೀ ನಾ ಒಬ್ಬನೇ ತಿಂದೆ. ಎಲ್ಲೀ ಮ್ಯಾಲ ಕೂತಲ್ಲೇ ನಾ ಹೆಣಾ ಆಗತೀನಿ ಅಂತ್ರ ಇವರಿಗೆ ಸಂಕಟಕ್ಕ ಇಟ್ಟಿತು. ನಾನ್ರ ಹೇಳಿದೆ: ಇನಾ ಅಬ್ಬ ಅಂತ ಅಂದಿಲ್ಲಾ. ಹಾಂಗ ಅಂದೇ ಅಂದರ ಅದು ನನ್ನ 'ವಾರ್ನಿಂಗ್-ಬೆಲ್' ಅಂತ ತಿಳೀರಿ ಅಂತ್ರ. ನಿನ್ನ ಮೂರ ಚಪಾತೀ ನನ್ನ ಕರಳಿಗೆ ಎತ್ಲಾಗಿನ ಅಗಳಾ? ನೀನು ಒಟ್ಟೇ ಎಂಟ ಚಪಾತೀ ಮಾಡೀ. ನಾ ಲಗೂನ್ರ ಅಬ್ಬ ಅನ್ನದೆ ಗತೀ ಇಲ್ಲಧಾಂಗ ಆಗೇದ. ವಿಶ್ಯಾ, ಖರೇ ಮಜಾ ಬರಬೇಕಾದರ 'ಕ್ಯಾಂಪ್' ಜಮಾಸಬೇಕು ನೋಡು. ದಸ್ತಗೀರ್ಯಾ, ವಸೂ ಸಾಂಗಲೀಯಿಂದ, ಸುರ್ಯಾ, ಬಸವಂತೀ ಪುಣೇದಿಂದ ಬರಬೇಕು – ಅರೆರೆರೆರೇ, ಹೀಂಗ್ರ ಮಜಾ ಬರತ್ತದ. ಬರೇ ಒಂದ ಸ್ವರ್ಗಕ್ಕ್ರ ಕಿಚ್ಚ ಹಚ್ಚು ಅಂದಿದ್ದಾ ಸರ್ವಜ್ಞಾ; ವೈಕುಂಠ-ಪೈಕುಂಠ ಮಜಲು ಅವ್ರ ಅನ್ನೂ ಠಾಂವಿಕಿದ್ಧಾಂಗ ಕಾಣಸೂದಿಲ್ಲಾ ಅಂವಗ. ಎಲ್ಲಾರದೂ 'ಕಾಂಟ್ರಿಬ್ಯೂಶನ್' ಅಪಾ. 'ಹಂಡ್ರೆಡ್ ಪರ್ ಹೆಡ್' ರಗಡಾತು. ದರವರ್ಷ ಒಂದ ಕಡೇ 'ಕ್ಯಾಂಪ್' ಹದನೈದ ದಿನದ್ದು. ಇದೊಂದು ವ್ರತಾ ಅಂತನ್ರ ಮಾಡೂದು. ನಾವು, ಮುದಕರಾದರೂ ಹುಡಗತನಾ ಏನು ಬಿಡೂದಿಲ್ಲಾ. ಕಾಕಾ, ಪಂತಮಾಮಾ, ಠೋಮರೇಮಾಮಾ, ನೋಡೀ ಇಲ್ಲೋ? ಹ್ಯಾಂಗ ರಸಿಕತನಾ ಇನಾ ಜೀವಂತ ಇಟಗೊಂಡಾರ್ರ? ಅವರ ಮಾತಾ – ಹುಕೀ ನೋಡಿದಾಗ, ನಮ್ಮದೆಲ್ಲಾ ಸೂತಕೀ ಅಂತ್ರ ಅನಸ್ತದ. ಜೀವಕ ಅಕಾಲ ಸಂನ್ಯಾಸ ಬಂದ ಭಾಸ ಆಗತದ. 'ಜೀವೇಮ ಶರದಃ ಶತಮ್' ಅಂದರವರು. ನಮ್ಮದು ಸಾಯೂದಕ್ಕ ಶರ್ಯ್ಯತ್ತನ್ರ ಹತ್ತಿಧಾಂಗ ಆಗೇದ."
ನಾನು.

"ದಾದಲ್ಯಾ, ಅಕಾಲ ಸಂನ್ಯಾಸ ಬರಲಿಕ್ಕೆ ಕಾರಣಂದರ, ಅಕಾಲದಾಗ ಬಿದ್ದ ಓರೇತನದ ಜವಾಬ್ದಾರೀ. ಹಿಂದಕೇ ನಾ ಹೇಳಿದ್ದೆ: ನಮ್ಮ ವಾರಿಗೀ ಹುಡುಗೂರಿಗೆ, ನಮುಗ ಇರೂ ಅಂತರಾ ತಿಳಿಸಿದ್ದೆ. 'ಜೀವೇಮ ಶರದಃ' ಅಂದವರು ಪುಣ್ಯಾತ್ಮರು. ಅದು ಎಲ್ಲಾರಿಗೂ ಹ್ಯಾಂಗ ಬಂದೀತು? ನಮುಗ, ಹಿಂದ ಸರದರ ಕೆರೀ ಅದs, ಮುಂದ ಹೋದರ ಭಾಂವಿ ಅದs. ಈಸೂ ತ್ರಾಣ ಇದ್ದರ ದಂಡಿಗೆ ಹತ್ತತೇವು. ಇಲ್ಲs, ಮೂರ ಗುಟುಕು ನೀರ ಕುಡದು, ತಳಾ ಕಾಣತೇವು.

ದಾದಲ್ಯಾ, ಎಲ್ಲಾರೂ ಕೂಡೂಣಂದೀ. ನನಗೂ ಭಾಳ ಮನಸ್ಸಿತ್ತು. ಆದರ ನೋಡು, ಇದು ನನ್ನ 'ಫೈನಲ್ ಇಯರ್'. ಪಾಸ ಆಗೂ ಕಾಳಜೀ ಇಲ್ಲ ನನಗ. 'ಕ್ಲಾಸ್' ಬರೂ ಧ್ಯಾಸ ಹತ್ತೇದ. ಇಲ್ಲಿಗೇ ಕಲಿಯೂದು ಮುಗೀತಿದ್ದರ – ಮುಗಿಯೂವಾಗರs ನನ್ನ ಜಾಗೀರೀ ಜಾಗಾ ಯಾಕ ಬಿಡಬೇಕು ಅನೂ ಹವ್ಯಾಸ ಹೊಕ್ಕದ. ನಾಕಾರ ತಿಂಗಳಾ ಇಲ್ಲೆ ಬಂದು ನಿಂದ್ರುಂತ ಧೋಂಡೂಬಾಯಿಗೆ ಹೇಳಿ ಕಳಿಸೀನಿ. ತುಳಸೀಗೆ ಸುದ್ದೇ ಇನ್ನs 'ಫಾರ್ಟ್‌ನಾಯಿಟ್ಲೀ ವ್ಹಿಜಿಟ್' ಅಂತ ಕರಾರ ಹಾಕೀನಿ. ಈ ಪರೀಕ್ಷಾ ಮುಗೀಲಿ. ಬರೇ ಹದನೈದೇ ದಿನದ್ದ ಯಾಕs ಕ್ಯಾಂಪೂ – ವರ್ಷಾನಗಟ್ಟಲೇ ಹಾಕೂಣಂತ. ಪಂತಮಾಮಾನ ಬಂಗಲೇಕ್ಕs "ಗೋಕುಲ" ಅಂತs, ನಾಮಕರಣಾ ಎಂದೋ ಆಗೇದ. ಪುಣೇದಾಗ ನಿಂತರೂ ಅಷ್ಟೇ. ಕಾಕಾ ಆ್ಯಂಡ ಕೋ. ಏನ ಕಮ್ಮೀ ಅಲ್ಲಾ. ಆದರ ಈ ಆರ ತಿಂಗಳ ಮಾತ್ರ, ಅಗದೀ 'ಸೆಕ್ಲೂಜನ್' ಕಾಳಾಪಾಣೀ ನೋಡು. ನೀ ಸುದ್ದೇ ಇಲ್ಲದ ಲಿಗಾಡ ತಗೊಂಡು ಬರಬ್ಯಾಡಾ. ಇಂದ ಹ್ಯಾಂಗ ಕೂಡೇವು, ಹಾಂಗs ಹದನೈದು ದಿನಕ್ಕೊಮ್ಮೆ ಇಲ್ಲೆ ಕೂಡೂದು. ನನ್ನ ಶೆರೀ ನೀವಿಬ್ಬರೂ ಬಿಡಬೇಕಾಗತದ. ಅಗದೀ ನಾಯಿಲಾಜ ಅದs ದಾದಲ್ಯಾ. ಕಾಕಾ, ತಾಯೀ ಆಶಾ, ನಾ 'ಫಸ್ಟ್‌ಕ್ಲಾಸ್' ಬರದಿದ್ದರ ಪೂರ್ಣ ಆಗೂದಿಲ್ಲಾ. ಅವರಿಗೆ ಇದರದೂ ಸಂಕಟ ಆಗೂದು ಬ್ಯಾಡಾ.

ತುಳಸಿ ಇಲ್ಲಿಗೆ ಬಂದ ಮ್ಯಾಲs ಒಮ್ಮೆ ಪುಣೇಕ್ಕ ಹೋಗಿ ಬಂದೆ. ಸುರ್‍ಯಾನ ಹಾಂಗs ನೀನೂ 'ಫಸ್ಟ್‌ಕ್ಲಾಸ್' ಬರಬೇಕ ವಿಶ್ಯಾ ಅಂದ್ಲು ತಾಯೀ. ಆಕೀ ಈ ಆಶಾದ ಮ್ಯಾಲs ಬದಕಿರುವಾಗ, ಆಕೀ ಮುಂದ ತುಳಸಿನ್ನ ತಂದ ಸುದ್ದೀ ಹ್ಯಾಂಗ ಹೇಳಲೀ? ಮಗಾ ಕಲಿಯೂದು ಮರತು, ಮುಂಬೈಯಾಗ ಸಂಸಾರ ಹೂಡ್ಯಾನ ಅಂತ ಆಕೀಗೆ ವ್ಯಥಾ ಆಗಬಾರದಂತ ಸುಮ್ಮನೇ ಕೂತೆ. ಈ ವಿಷಯದಾಗ, ತಾಯೀ ಭಾವನಾ ಹ್ಯಾಂಗs, ಬಸವಂತೀ ಭಾವನಾ ಹ್ಯಾಂಗs ಅನೂದರ ಕಲ್ಪನಾ

ಇತ್ತು. ನನ್ನs, ಬಸವಂತೀನೇ ಸಮಾಧಾನ ಮಾಡ್ಯಾಕಂತs ನೆಟ್ಟಗ ಆಕೀ ಮುಂದs ಇದ್ದ ಪಕೀಕತ್ತು ಹೇಳಿದೆ. ದಾದಲ್ಯಾ. ಬಸವಂತಿ ಕೂಸಿನ್ನ ರಂಬಸೂ ಹಾಂಗs ನನ್ನ ರಂಬಿಸಿದಳು:

"ನಾ ಇದ್ದೀನಿ ವಿಶ್ವಾಸ ನಿನ್ನ ಬೆನ್ನಿಗೆ. ನನಗ ಯಾರದೂ ಪರಜ ಇಲ್ಲಾ. ಘಾಕ ಇಲ್ಲಾ. ನನ್ನ ವಿಶ್ವಾಸಗ ತ್ರಾಸ ಆಗಧಾಂಗ ನಾ ಬಂದದ್ದನ್ನ ನೋಡಕೋತೀನಿ."

ಅಂತs ನನಗ ಧೈರ್ಯಾ ಕೊಟ್ಟಳು. ದಾದಲ್ಯಾ, ತಾಯೀಯಲ್ಲೆ ನನಗ ಅಪಾರ ಗೌರವ ಅದs. ಭಕ್ತೀ ಅದs. ಆದರ ಸಲಿಗಿ ಇಲ್ಲಾ. ಈ ಸಲಗೀನೂ ಇರತಿತ್ತು. ಅಕೀ ಪರಿಸ್ಥಿತೀ ನೋಡಿ, ಸಲಗೀಯಿಂದ ಅಕೀ ಜೋಡೀ ಇಂಥಾ ವಿಷಯದಾಗ ಮಾತಾಡಲಿಕ್ಕೆ ಜೀವಕ ಖಿಜೀಲಿ ಅನಸ್ತದ. ಆದರ ಬಸವಂತೀ ಘಡಣs ಬ್ಯಾರೇ ಅದs. ಅಕೀ ತಾಯ್ತನದ ವಾತ್ಸಲ್ಯಂದರ ಹಾಲಿನೊಳಗ ಸಕ್ಕರಿ ಕರಗಿಧಾಂಗ. ಹಾಲು-ಜೇನು ಒಂದ ಆಧಾಂಗs. ತಾಯೀ ವಾತ್ಸಲ್ಯಂದರ ಹಾಲಿಗೆ ಎರಡ ಎಳೀ ಕೇಶರ ಬಿಟ್ಟ ಹಾಂಗs. ಹಾಲಿಗೆ ಕೇಶರೀ ಕಂಪ ಬರತ್ಯದ ಖರೇ. ಆದರ ಅದರ ಬಣ್ಣನs ಬದಲ ಆಗತದ. ದಾದಲ್ಯಾ, ತಾಯೀ ದೇವತಾ ಇಪ್ಪಾಂಗ. ಬಸವಂತೀ ಬರೇ ಹೆಣ್ಣಹೆಂಗಸು. ಮಾತೃವಾತ್ಸಲ್ಯನs ಸಾಕಾರ ಆಧಾಂಗ. ತಾಯೀ ಪಾದದ ಮ್ಯಾಲ, ತಲೀ ಇಟ್ಟು ಭಕ್ತಿಭಾವದಿಂದ ನಮಸ್ಕಾರ ಮಾಡಬಹುದು. ಆದರ ಬಸವಂತೀ ತೋಡೀ ಮ್ಯಾಲs ಕೂಸಿನ್ಹಾಂಗ. ದಿಂಡರಕಿ ಹಾಕಬಹುದು. ನಾನು ಬಸವಂತೀ ಧೈರ್ಯಾದ ಮ್ಯಾಲ ಭಿಸ್ತ ಇಟಗೊಂಡು, ತಾಯೀ ಮುಂದs ಇದರ ಸಂಬಂಧೀ ಚಕಾರ ಶಬ್ದ ಎತ್ತದೇ ಬಂದಬಿಟ್ಟೆ. ಈ ಸುದ್ದಿ ತಾಯೀಗೇನರs ತಿಳದರ, ಅದನ್ನ ನಿಭಾಸೂ ಭಾರ ತಂದೂ, ಅದರ ಕಾಳಜೀ ಮಾಡದೇ ಅಭ್ಯಾಸ ಮಾಡೂ ಅಂತs ಬಸವಂತಿ ವಚನ ಕೊಟ್ಟಳು. ಇವರೆಲ್ಲಾರದೂ ಭಿಸ್ತ ಅದs ದಾದಲ್ಯಾ ನನ್ನ ಮ್ಯಾಲs. ಅವರ್ನ ಹ್ಯಾಂಗs – ಯಾ ಮಾರೀಲೇ ನಿರಾಶ ಮಾಡಲಿ ಹೇಳು? ಆರ ತಿಂಗಳಾ, ದಾದಲ್ಯಾ, ಇನ್ನ ಬರೇ ಆರೇ ತಿಂಗಳಾ. ಮುಂದ ನಿನ್ನ ವಿಶ್ಯಾನ ಕೈ ಹಿಡಿಯೂ ತಾಕತ್ತs ಯಾರಿಗೂ ಬರೂದಿಲ್ಲಾ. ಏನೂ ದಕ್ಕಿಸಿಗೋತೀನಿ."

ವಿಶ್ವಾಸ ಬಹಳ ಆರ್ಜವತೆಯಿಂದ ಹೇಳಿದ.

"ವಿಶ್ಯಾ, ಬಡಿಸಿದ ಎಲೀ ಮುಂದ ಕೂತೀನಿ. ಅನ್ನ ಅಂದರ ಲಕ್ಷ್ಮೀದೇವತಾ. ಅಕಿನ್ನ ಮುಟ್ಟಿ ಆಣೇ ಮಾಡಿ ಹೇಳತೀನಿ: ನಿನ್ನ ಅಭ್ಯಾಸ 'ಡಿಸ್ಟರ್ಬ' ಆಗಧಾಂಗ ನೋಡಕೋತೀನೀ ಅಂತs! ನಿನ್ನ ಸಂಕಟಾ ನನಗ ತಿಳೀತು ವಿಶ್ಯಾ. ನನ್ನ ಮುಂಬೈಗೆ,

ಅದಕ್ಕೇ ತಂದಾನ ಕಾಣಸ್ತದ ದೇವರು. ವಿಶ್ಯಾಗ ಆಸರಾಗಂತ. ವಿಶ್ಯಾ, ಕ್ಲಾಸ ಬರೂದು ಖಚೀತಂತ, ಇಂದೇ ಆಣೀ ಇಟಗೊಂಡು ಹೇಳತೀನಿ. ವಿಶ್ಯಾ, ನಾಳಿ ನಿಂದ ನಿನ್ನ ತಪಸ್ಸು ಸುರೂ ಆಗಲಿ. ದಾದಲ್ಯಾ ಚಾಪಪಸ್ತ ಆಗಿ ನಿಂತನಂದರ, ಯಾ ಇಂದ್ರ-ಚಂದ್ರರೂ ಅವನ ಸನೇಕ ಹಾಯೂದಿಲ್ಲಾ. ಅವನ ಕರಾಮತ್ತು ನೋಡಕಿರೂ."

"ದಾದಲ್ಯಾ. ವಿಶ್ಯಾನ ಜೋಡೀ ಆರ ತಿಂಗಳಾ ಹಿಂಗೇ ಮಾತಾಡಿಕೋತ ಕೂತೆಂದ್ರ ಅಂವಾ ಎಕಡೆ ಅಭ್ಯಾಸ ಮಾಡ್ಯಾನು? ಊಟಾ ಬಗೀಪರಿಸಿ ಕೂಡು ಬೆಳತನಕಾ ಮಾತಾಡಿಕೋತ. ಇಂದ ಒಂದs ರಾತ್ರೀ ನಿನ್ನ ತಾಬೇದಾಗ. ವಿಶ್ಯಾ ನಾಳಿನಿಂದ ನಿನ್ನ ಕೈಗೆ ಸಿಗೂದಿಲ್ಲಾ. ನನಗ-ನಿನಗ ಬಿಷದ ಕರ್ರಾ. ನಿನ್ನ ಕರಾ ಮತ್ತಿನ ಸುದ್ದಿಗೆ ನನ್ನ ಕರಮಣೂಕ ಆದರ ಸಾಕು"
ತುಳಸಿ.

ನಾನು, ತುಳಸಿ ಹತ್ತು-ಹದಿನೈದು ಮಿನೀಟಿನಲ್ಲಿ ಎಂಜಲು-ಮುಸುರೆ ಎತ್ತಿ ಹಾಕಿ ಅಡಿಗೆ ಮಾಡಿದ ಭಾಂಡೀ ತೊಳೆದಿಟ್ಟು. ಪಡಸಾಲೆಗೆ ಬಂದಾಗ, ವಿಶ್ಯಾ ಶತಪಥ ಮಾಡುತ್ತ ಸಿಗರೇಟು ಮುಗಿಸಿದ್ದ. ಕೈಗಡಿಯಾರ ನೋಡಿಕೊಂಡು —

"ದಾದಲ್ಯಾ, ಹತ್ತೂವರೀ ಆತು. ನನಗ ನಿದ್ದಿ ತಡಿಯೂದಿಲ್ಲಪಾ. ಹತ್ತಕ್ಕ ಮಲಗಿ ಮೂರಕ್ಕ ಏಳೂ ಸವ್ವಯ ಮಾಡಿಕೊಂಡೀನಿ. ಹತ್ತ ಅನೂದಕ ಕಣ್ಣ ತಾಂವೇ ಮುಚ್ಚಲಿಕ್ಕೆ ಹತ್ತತಾವs. ನೀವಿಬ್ಬರೂ ಬೇಕಾರ ಕೂಡರಿ. ಬೆಳತನಕಾ. ನಾ ಮಲಕೋತೀನಿ ಇನ್ನs."
ಎಂದು ಹೇಳಿದವನೇ ಒಳಗಿನ ಕೋಣೆಗೆ ನಡೆದುಬಿಟ್ಟ. ತುಳಸಿ ಅವನ ಬೆನ್ನಿಗೇ ಹೋಗಿ ಹಾಸಿಗೆ ಬಿಡಿಸಿ ಕೊಟ್ಟು, ದೀಪವಾರಿಸಿ, ಕೋಣೆಯ ಬಾಗಿಲನ್ನು ಮುಂದೆ ಮಾಡಿ, ನಾನು ಕುಳಿತಲ್ಲಿಗೆ ಬಂದು ಹೇಳಿದಳು:

"ದಾದಲ್ಯಾ, ರಾಜಾಗ ನಿದ್ದಿ ಏನ ಸಾದ ಆಗೇದಂದೀ? ಮಗ್ಗಲಾಗೂ ಪುರಸೊತ್ತು ಅಷ್ಟೇ, ಗುರುಗುರು ಮಾಡಲಿಕ್ಕೇ ಸುರೂ. ಅಂವನ್ನ ಎಬ್ಬಿಸೂದಕ್ಕ ಸುದ್ದೇ ಅಲಾರಾಮ್‌ದ್ದು ಜರೂರೀ ಇಲ್ಲಾ. ಎರಡಂದರ ಎರಡು, ಮೂರಂದರ ಮೂರು. ಘಡ್ಯಾಳ ಹಿಂದ-ಮುಂದ ಆದರೇ ಆದೀತು. ರಾಜಾ, ಹಿಂದ-ಮುಂದ ಆಗೂದಿಲ್ಲಾ. ಮೈ, ಮನಸಿನ ಮ್ಯಾಲ ಭಾರೀ ಪಚಕ ಇಟಗೊಂಡಾನ."

ನಾನು-ತುಳಸಿ ಬಹಳ ಹೊತ್ತಿನ ತನಕ ಮಾತನಾಡುತ್ತ ಕುಳಿತೆವು. ನಮಗೆ

ಬೇಗ ಏಳುವ ಧಾವತಿ ಇರಲಿಲ್ಲ. ನಾವು ಮಾತು ಮುಗಿಸಿ ಮಲಗಲಿಕ್ಕೆ ಎದ್ದಾಗ ಒಂದೂವರೆಯಾಗಿ ಹೋಗಿತ್ತು. ಮುಂದೆ ಮಾಡಿದ ಕೋಣೆಯ ಬಾಗಿಲನ್ನು ಸರಿಸಿ, ಸಪ್ಪಳಾಗದಂತೆ ಕೋಣೆಯಲ್ಲಿ ಹೋಗಿ, ವಿಶ್ಯಾಸ ಆಜೂ-ಬಾಜೂದ ಹಾಸಿಗೆಯ ಮೇಲೆ ಪವಡಿಸಿದೆವು. ವಿಶ್ಯಾ ಮೂರು ತಿಂಗಳ ಕೂಸಿನಂತೆ ಗಾಢ ಸುಖನಿದ್ರೆಯಲ್ಲಿದ್ದ.

ದಾದಲ್ಯಾನಿಗೆ ನಿದ್ದೆ ಬಂದಿದ್ದರೆ ಆಣೆ. ಅವನಿಗೆ ನಾಳೆಯಿಂದ ಸುರುವಾಗುವ ವಿಶ್ವಾಸನ ತಪಶ್ಚರ್ಯದ ಧ್ಯಾಸ ಈಗಲೇ ಮೊದಲಾಗಿತ್ತು. ಚಾಪಹಸ್ತನಾಗಿ ತಾನು ವಹಿಸಬೇಕಾದ ಪಾತ್ರದ ಕಲ್ಪನೆ ಸಾಕಾರವಾಗತೊಡಗಿತ್ತು. ವಿಶ್ಯಾ ಆರ್ಜವತೆಯಿಂದ ಹೇಳಿದ: "ದಾದಲ್ಯಾ, ಬರೇ ಆರೇ ತಿಂಗಳಾ. ಬರೇ ಆರೇ ತಿಂಗಳಾ." ಅವನ ಕಿವಿಯಲ್ಲಿ, ಎದೆಯಲ್ಲಿ ಘುಮಿಸತೊಡಗಿತ್ತು. ಅದರ ನಾದ-ಪ್ರತಿನಾದ ಏಳತೊಡಗಿತ್ತು. ವಿಶ್ವಾಸನ ಆರ್ಜವತೆಯ ಅರ್ಥ ದಾದಲ್ಯಾನಿಗಾಗಿತ್ತು. ಈ ಆರು ತಿಂಗಳು ಯಾವ ತೊಡಕು-ತಿಪಲು ಇರದೆ ದಾಟಿದರೆ, ಅವನು ಅಜೇಯ-ಅಭೇದ್ಯನಾಗುವ ನಿಚ್ಚಳ ಚಿತ್ರ ದಾದಲ್ಯಾನ ಕಣ್ಣಿಗೆ ಕಟ್ಟಿತು.

ವಿಶ್ಯಾ ಪ್ರಾಂತಕ್ಕೇ ಪ್ರಥಮ ವರ್ಗದಲ್ಲಿ ಪ್ರಥಮ ಸ್ಥಾನ ಪಡೆದು, ತನ್ನ ಜಾಗೀರಿಯ ಮಯೂರ-ಸಿಂಹಾಸನದಲ್ಲಿ ಮಂಡಿಸಿ, ವಿರಾಜಮಾನನಾಗುವ, ಅದನ್ನು ಕಂಡು, ಆ ದೃಶ್ಯದಿಂದ ಸುಖಪುಲಕಿತರಾಗಿ, ಆನಂದಾಶ್ರು ಮಿಡಿಯುವ, ಕಾಕಾ, ಸೋನಕ್ಕ, ಬಸವಂತಿಯರ ವಾತ್ಸಲ್ಯವೇ ಆಕಾರವಾದ ಪ್ರತಿಮಾದರ್ಶನ ವಾಯಿತು. ದಸ್ತಗೀರ್ಯಾ ತನ್ನ ದೋಸ್ತನನ್ನು ಹೆಗಲಮೇಲೆತ್ತಿಕೊಂಡು, ಬ್ಯಾಂಡು-ಬಜಂತ್ರಿಯ ವೈಭವ-ವೀಥಿಯಲ್ಲಿ, ದಿಮಾಕಿನಿಂದ ನಡೆಯುವ – ಗೆಳೆತನ ಸಾರ್ಥಕ್ಯ ವಾದ ಸಂತಸ ಬಂದ ಹುಕಿಯಲ್ಲಿರುವ ವಿಲೋಭನೀಯ ದೃಶ್ಯ ಕಂಡಿತು. ಸೋನಕ್ಕನ ಅಕ್ಷಯ ರಕ್ಷೆಯ ಆಶೀರ್ವಾದವನ್ನು ಶಿರೋಧಾರಣ ಮಾಡಿ, ಸಲಿಗೆ ಯಿಂದ ಬಸವಂತಿಯ ತೊಡೆಯ ಮೇಲೆ ಮಂಡಿಸಿ, ವಸೂ-ತುಳಸಿಯರಿಂದ ಚವರಿ-ಚಾಮರ ಬೀಸಿಕೊಳ್ಳುವ ವಿಶ್ಯಾನ ವೈಭವಸಂಪನ್ನ ಮೂರ್ತಿ ಕಣ್ಣೆದುರಿ ನಿಂದ ಅತ್ತಿತ್ತ ಸರಿಯದಾಯಿತು.

ತನ್ನ ಚಾಪ-ಕೌಶಲ-ಸಾಮರ್ಥ್ಯದಿಂದ ವಿಶ್ಯಾನಿಗೆ ಇಂಥ ವೈಭವಸಂಪನ್ನತೆ ಯನ್ನು ತಂದು ಕೊಟ್ಟ ದಾದಲ್ಯಾ, ಯಾವುದೋ ಒಂದು ಮೂಲೆಯಲ್ಲಿ ನಿಂತು, ಧನ್ಯತೆಯ ಅಶ್ರುಧಾರೆ ಹಿಡಿದದ್ದು ಕಂಡಿತು.

ದಾದಲ್ಯಾ ಸ್ವರ್ಗಸುಖ-ವಿಹಾರಿಯಾಗಿದ್ದ. ಬೇಭಾನನಾಗಿದ್ದ. ಸ್ವ-ಆತ್ಮ ಮರೆತು ವಿಶ್ವಾಸನ ಯಶಸ್ಸಿಗೆ ಪಣ ಪ್ರಕಾರಿಸಿದ ದಿವ್ಯದಲ್ಲಿ ಏಕಜೀವ – ಏಕರಸ ವಾಗಿದ್ದ.

ಆರು ತಿಂಗಳ ಕಾಲಖಂಡ ದೊಡ್ಡದಲ್ಲ. ಹಾಂ ಹಾಂ ಅನ್ನುವದರಲ್ಲಿ ಹಾರಿ ಹೋಗುತ್ತಿತ್ತು. ಅದರ ಪಕ್ಕದಲ್ಲಿಯ ಧಾವನಸಾಮರ್ಥ್ಯವೇ ಅಷ್ಟು ವೇಗವತ್ತಾಗಿತ್ತು. ಅದಕ್ಕೆ ವಿಶ್ವಾಸನ ಪರೀಕ್ಷೆಯು, ದಾದಲ್ಯಾನ ಪ್ರತೀಕ್ಷೆಯು ಗರಜು ಇರಲಿಲ್ಲ. ನಾವು ಗೆದ್ದ ಗೆಲವಿನಿಂದ ಅದು ಸುಖಪುಲಕಿತವಾಗುವಂತಿರಲಿಲ್ಲ. ಸೋತು ಕೈಊರಿದ್ದರೆ ಸೋಲಿನ ಸೂತಕೀ ಅವಕಳೆ ತನಗೆ ಅಡರೀತೆಂಬ ಭೀತಿ ಅದಕ್ಕಿರಲಿಲ್ಲ. ಸುವಾಸ ಸೂಸಿ – ತೇಲಿಸಿ ತರುವ ಮಂದ ಸಮೀರ, ದುರ್ವಾಸವನ್ನೂ ಹೊತ್ತು ತರುತ್ತಾನೆ. ಆದರೆ ಎಂಥ ನಿರ್ಲಿಪ್ತಭಾವನಾಗಿ! ಅದೇ, ಅಂಥದೇ ನಿರ್ಲಿಪ್ತತೆ ಈ ಆರು ತಿಂಗಳ ಕಾಲಖಂಡದಲ್ಲಿಯೂ ಇದೆ. ಅದು ಸುಖ-ದುಃಖ-ಲೇಪನ ಅತೀತವಾಗಿದೆ.

ಗಾಳಿ ದುರ್ವಾಸ ತಂದರೆ – ಕಾಲಖಂಡ ಅಘಟಿತ ಘಟನೆಗಳನ್ನು ಘಟಿಸಿದರೆ – ದಾದಲ್ಯಾ ಅದನ್ನು ಹೀರಬೇಕಾಗಿತ್ತು, ದಕ್ಕಿಸಿಕೊಳ್ಳಬೇಕಾಗಿತ್ತು. ದಧೀಚಿಯಂತೆ ಅಸ್ಥಿಸಂಚಯ ಮಾಡಿ, ಬರುವ ಯಾವ ಘಟನೆಗಳಿಗೂ, ಅಭೇದ್ಯ, ಅದಮ್ಯನಾಗಿ ನಿಲ್ಲಬೇಕಾಗಿತ್ತು.

ದಾದಲ್ಯಾ, ಗೋವಿಂದಭಟ್ಟನ ಗರಡಿಯಲ್ಲಿ ಭಾರತದ ಸಾಧನೆ ಮಾಡಿಕೊಂಡಿರುವೆ. ಮಹಾಬ್ರಾಹ್ಮಣನ ತೇಜಸ್ವೀ ವಾಣಿ ನಿನ್ನ ಜೀವ ಪಳಗಿಸಿದೆ. ಪುರಾಣದ ಬದನೇಕಾಯಿ ಮಾಡೆಂದು, ಗೋವಿಂದಭಟ್ಟ ಅದನ್ನು ನಿನಗೆ ಕಲಿಸಲಿಲ್ಲ. ನಿನ್ನ ಕಂಚಿನ ಕಂಠ, ವ್ಯಾಸಭಾರತದ ಪಾರಾಯಣಕ್ಕೆ ತೊಡಗಿದಾಗ, ಗೋವಿಂದಭಟ್ಟ ಆನಂದಾಶ್ರು ಮಿಡಿದಿದ್ದಾನೆ.

“ನಾ ಭಾರತಾ ಓದತೀನಿ. ದಾದಲ್ಯಾ ಭಾರತಾ ಬದಕತಾನ”

ಎಂದು ಅವನೇ ಸಾರಿದ್ದಾನೆ.

ದಾದಲ್ಯಾ, ನೀನು ಭಾರತ ಬದುಕುತ್ತಿರುವ ಸಾಕ್ಷಿ ಸಾರುವ ಕಾಲ – ಅಮೋಘ ಮಂಗಲ ಕ್ಷಣ ಸನ್ನಿಹಿತವಾಗಿದೆ. ಜೋಳದ ಪಾಳಿಗೆ, ನಿನ್ನ ಆಚಾರ್ಯ ಶ್ರೇಷ್ಠರು – ನಿಷ್ಠರಾಗಿ ಜೀವ ನಿವಾಳಿಸಿ ಒಗೆದರು. ಸ್ನೇಹದ ಋಣವನ್ನು ಮಹಾರಥೀ ಕರ್ಣ ಜೀವತರ್ಪಣದಿಂದ ತೀರಿಸಿದ. ಮಹಾಪ್ರಭು ಕೃಷ್ಣಭಗವಾನರು

ಪಾಂಡವ-ಪ್ರೀತಿಗೆ, ಸರ್ವ ನ್ಯಾಯ-ಅನ್ಯಾಯ-ಅಪಕೀರ್ತಿಗಳನ್ನು ನಗುನಗುತ್ತ ಶಿರೋಧಾರಣ ಮಾಡಿದರು. ಪಾಂಡವಕ್ಷೇಮದ ದೃಷ್ಟಿಯಿಂದ, ತನ್ನ ಕರುಳ ಕುಡಿ ಚಿವುಟಿದರೂ, ಆ ಘೋರ ವ್ಯಥೆಯನ್ನು, ಹೃದಯವಿದಾರಕ ಸಂಕಟವನ್ನು ಸುಭದ್ರೆ ಹೃದಯಸ್ಥವಾಗಿ ಮಾಡಿಕೊಂಡಳು. ದಾದಲ್ಯಾ, ಇದನ್ನ ನೆನಸಿಕೋ!

ವಿಶ್ವಾಸನ ಮನೆಯ ಅನ್ನ-ನೀರಿನಿಂದ ನಿನ್ನ ಪಿಂಡ ಪೋಷಣೆಯಾಗಿದೆ. ಅಂಗಾಂಗದ ಮಾಸಮಯ್ಯಾದೆ ಮುಚ್ಚಿದೆ. ರಾವಜೀಕಾಕಾನ ವಾತ್ಸಲ್ಯತೀರ್ಥ ದಲ್ಲಿ ನಿನ್ನ ಕಾಯ ಸಜೀಲ ಸ್ನಾಂತವಾಗಿದೆ. ದಾದಲ್ಯಾ ನಿನಗೆ ಋಣಪರಿಹಾರ ವಿಲ್ಲ. ವಿಶ್ವಾಸ ಆರು ತಿಂಗಳು ನಿವಾಂತವಾಗಿ ಅಭ್ಯಾಸದ ತಪಸ್ಸು ಮುಗಿಸುವ ತನಕ ನಿನಗೆ ವಿರಾಮವಿಲ್ಲ – ವಿಶ್ರಾಂತಿ ಇಲ್ಲ. ಅವನ ತಪೋಭಂಗಕ್ಕೆ ಟಪಕಾಯಿ ಸಿದ ಯಕ್ಷ-ರಾಕ್ಷಸರನ್ನು ಸದೆಯಲು ನೀನು ಚಾಪಹಸ್ತನಾಗಿ, ಸದಾ ಜಾಗ್ರತನಾಗಿ, ಮೈ-ಮನದ ಅಕ್ಷನಿಮೀಲನವಾಗದಂತೆ ಕಾಯದೆ ಗತಿಯಿಲ್ಲ.

ಸಾಹೇಬರು ಬಂದು, ಸುರ್‍ಯಾನ ಮದುವೆಯ ಪ್ರಸ್ತಾಪವೆತ್ತುವ ಶಕ್ಯತೆ ಇದೆ. ವಿಶ್ವಾಸ ಗೌಪ್ಯಸ್ಫೋಟ ಮಾಡಿದರೆ, ಕಿಡಿ ಹಾರಿ, ದಳ್ಳುರಿ ಏಳುವ ಸಂಭವವಿದೆ. ಬಸವಂತಿ ನಮಗೆ ಸಾಮೀಲಾದ ವಾಸ ಬಡಿದರೆ, ಶ್ಯಾಮರಾಯ ಅವಳನ್ನು ಅನಿಕೇತ-ಅಗತಿಕಳನ್ನಾಗಿ ಮಾಡುವ ಸಂಕಟವಿದೆ. ಶ್ಯಾಮರಾಯ ಹರಲಿಯ ರಣಹಲಿಗೆ ಬಡಿಯುವ ಅಂಜಿಕೆ ಇದೆ. ಸುರೇಶ ಅನುನಯಕ್ಕೆ ಒಗ್ಗದೆ, ಶ್ಯಾಮ ರಾಯನಿಗೆ ರೋಖ-ಠೋಕು ಉತ್ತರ ಕೊಟ್ಟರೆ, ಅವನ-ಶಕೂನ ಸಂಬಂಧ ಕಡಿ ಸುವ ಹೀನಮಾನಸದಿಂದ, ಶ್ಯಾಮರಾಯ ತಾನಾಗಿಯೇ ಸಾಹೇಬರಿಗೆ, ತನ್ನ-ಸೋನಕ್ಕನ ಒಗೆತನ ಒಡೆದ ವಿಷಯಕ್ಕೆ ಬಾಯಿ ಮೂಡಿಸುವ ಸಂಭವವಿದೆ. ವಿಶ್ವಾಸ ಶಾಂತ-ಸಮಾಧಾನಿ ಇದ್ದಷ್ಟೇ, ಸುರ್‍ಯಾ ಉತಾವಿಳ-ಉಗ್ರನಾಗತೊಡಗಿದ್ದಾನೆ. ರಕ್ತಜಲದೂಟಿ ಚಿಮ್ಮಿಸುವ ಭಾಷೆಯಾಡುತ್ತಿದ್ದಾನೆ. ಊರಲ್ಲಿ ರಾಚಪ್ಪ, ಶ್ಯಾಮರಾಯರ ನಡುವೆ ಸುಪ್ತ ಕಿಚ್ಚಿನ ಕಾವಲಿದೆ. ರಾಚಪ್ಪ ನೀರೆರಚಿ ಅದನ್ನು ನಂದಿಸುವ ಸಾಹಸದಲ್ಲಿದ್ದರೆ – ಅವನ ಮಗ ಶಿವ್ಯಾ, ಒಣಗಿದ ಹುಲ್ಲನ್ನು ಒಗೆದು ಉರಿ ಎಬ್ಬಿಸುವ ಗತ್ತಿನಲ್ಲಿದ್ದಾನೆ.

ವಿಶ್ವಾಸ ಈ ಎಲ್ಲ ಘೋರದಿಂದ ಪಾರಾಗಬೇಕು. ಕೇವಲ ಆರು ತಿಂಗಳು ಬಚಾವಾಗಬೇಕು. ಅವನ ಬಚಾವಿಗೆ ದಾದಲ್ಯಾ ರಕ್ಷಾಬದ್ಧನಾಗಬೇಕು. ಅಗದೆ ಅನ್ಯ ದಾರಿ ಅವನಿಗೆ ಉಳಿದಿಲ್ಲ.

ವಿಧಿ ಏನೋ ಆಟ ಹೂಡಿ. ಡಾವು ಪಾಡಿ ದಾದಲ್ಯಾನನ್ನು ಮುಂಬೈಗೆ ತಂದಿದ್ದಾನೆ. ವಿಶ್ವಾಸನ ಸಾನ್ನಿಧ್ಯ ಕಲ್ಪಿಸಿದ್ದಾನೆ. ಇಂಥ ಅಮೃತಯೋಗ ದಾದಲ್ಯಾನಿಗೆ ಬಂದಿರಲಿಲ್ಲ. ದಾದಲ್ಯಾ ಆ ದಿವ್ಯ ಮೂರ್ತಿ-ಮಂಗಳ-ಗಳಿಗೆಯ ತಂದ್ರಿಯಲ್ಲಿದ್ದ. ವಿಶ್ವಾಸನಿಗೆ ರಕ್ಷೆಯಾಗಿ ನಿಂತ, ಅವನನ್ನು ಬಚಾವು ಮಾಡುವ ಪವಿತ್ರ ಪಣ ಪುಕಾರಿಸಿದ ಪಾವನ ಧ್ಯೇಸಿಕೆಯಲ್ಲಿದ್ದ. ದಾದಲ್ಯಾನಿಗೆ ಈಗ ತಾನು-ವಿಶ್ವಾಸ ಇಬ್ಬರೇ ಕಾಣುತ್ತಿದ್ದರು. ವಿಶ್ವಾಸ ತದೇಕಚಿತ್ತನಾಗಿ, ಪ್ರತಿಷ್ಠನಾಗಿ, ಕೃತುಶಕ್ತಿಯ ಅಖಂಡ ಮೂರ್ತಿಯಾಗಿ ಅಭ್ಯಾಸರತನಾಗಿದ್ದ. ದಾದಲ್ಯಾ ಸಹಸ್ರಾಕ್ಷನಾಗಿ, ಚಾಪ ಹಸ್ತನಾಗಿ ವಿಶ್ವಾಸನ ತಪವನ್ನು ಕಾಯುವ. ರಕ್ಷಿಸುವ ಧ್ಯೇಯಪೂರ್ತಿಗಾಗಿ ಅವನ ಸುತ್ತು ಪ್ರದಕ್ಷಿಣಾರತನಾಗಿದ್ದ.

ದಾದಲ್ಯಾ ಕಣ್ಣು ಮುಚ್ಚಿ ಹಾಸಿಗೆಯಲ್ಲಿ ಮಲಗಿದ್ದು ಎಷ್ಟೋ ಅಷ್ಟೇ. ಅವನು ನಿದ್ರೆಯಿಂದ ಬಹಳ ದೂರವಾಗಿದ್ದ. ಅಖಂಡ ಜಾಗರದಲ್ಲಿ ರಾತ್ರಿಯನ್ನು ಕಳೆಯುತ್ತಲಿದ್ದ. ನಾಳೆಯಿಂದ ಮೊದಲಾಗಲಿರುವ ಪ್ರತಿಷ್ಠ ಜೀವನಕ್ಕೆ ಸರ್ವ ಸಿದ್ಧತೆ ನಡೆಸಿದ್ದ.

ವಿಶ್ವಾಸ ಎದ್ದ ಸದ್ದಾಯಿತು. ದೀಪ ಹತ್ತಿತು. ವಿಶ್ವಾಸ ಬಚ್ಚಲುಮನೆಗೆ ಹೋಗಿ. ಮುಖ-ಮಾರ್ಜನ ಮುಗಿಸಿಕೊಂಡು ಬಂದ ಸುಳಿವು ಹತ್ತಿತು. ಹೊರಗಿನ ಕೋಣೆಯಿಂದ. ಅವನ ಕಂಚಿನ ಕಂಠದಿಂದ ಅಮೃತವಾಣಿ ಸ್ಫುರಿಸತೊಡಗಿತು:

"ಅಪೂರ್ಯಮಾಣಮಚಲಪ್ರತಿಷ್ಠಂ ।
ಸಮುದ್ರಮಾಪಃ ಪ್ರವಿಶಂತಿ ಯದ್ವತ್ ॥
ತದ್ವತ್ಕಾಮಾ ಯಂ ಪ್ರವಿಶಂತಿ ಸರ್ವೇ ।
ಸ ಶಾಂತಿಮಾಪ್ನೋತಿ ನ ಕಾಮಕಾಮೀ ॥

ವಿಹಾಯ ಕಾಮಾನ್ಯಃ ಸರ್ವಾನ್ ಪುಮಾಂಶ್ಚರತಿ ನಿಃಸ್ಪೃಹಃ ।
ನಿರ್ಮಮೋ ನಿರಹಂಕಾರಃ ಸ ಶಾಂತಿಮಧಿಗಚ್ಛತಿ ॥
ಏಷಾ ಬ್ರಾಹ್ಮೀ ಸ್ಥಿತಿಃ ಪಾರ್ಥ ನೈನಾಂ ಪ್ರಾಪ್ಯ ವಿಮುಹ್ಯತಿ ।
ಸ್ಥಿತ್ವಾಸ್ಯಾಮಂತ ಕಾಲೇಽಪಿ ಬ್ರಹ್ಮನಿರ್ವಾಣಮೃಚ್ಛತಿ ॥

ಹೀಗೆ ಸ್ಥಿತಪ್ರಜ್ಞನ ಮಹಾಲಕ್ಷಣಗಳನ್ನು ಪಠಿಸಿ, ವಿಶ್ವಾಸ ಧೀರ-ಗಂಭೀರ

ಪ್ರಸನ್ನ-ವಾಣಿಯಲ್ಲಿ ಹನ್ನೆರಡನೇ ಅಧ್ಯಾಯದ ಪಠನಕ್ಕೆ ತೊಡಗಿದ. ಆ ಪರಮಾತ್ಮನ ಅದ್ಭುತ ವಿಶ್ವ-ವಿಶಾಲ ವಿಶ್ವ-ಮನೋಹರ ಮೂರ್ತಿ, ಪರಿಪೂರ್ಣ ಮಾನವ್ಯ ಪದವಿಗೇರಿ, ಅಲ್ಲಿಂದ ಉಚ್ಚ ಕಂಠದಲ್ಲಿ ವಿಶ್ವಕ್ಕೆ ಸಾರುವ ದಿವ್ಯ ಸಂದೇಶ ಹೃದಯದಲ್ಲಿ ಘೂರ್ಮಿಸತೊಡಗಿತು.

ಭಕ್ತಿ-ಮಂತ್ರ ಹೇಳಿದ ಕೃಷ್ಣಭಗವಾನರ ವಿರಾಟ್-ರೂಪ, ಭೂವ್ಯೋಮದ ಉದ್ದಕ್ಕೆ ಬೆಳೆದು ನಿಂತಿತು. ಸೃಷ್ಟಿ-ಸ್ಥಿತಿ-ಲಯದ ಸಣ್ಣ ಚಕ್ರವೊಂದು ಆ ವಿರಾಟ್ ಮೂರ್ತಿಯ ಹೃದಯದಲ್ಲಿ ಸುತ್ತುವ ಭಾಸವಾಯಿತು. ಲೀಲಾ-ನಾಟಕ-ಸೂತ್ರಧಾರಿಯ ಅಮೋಘ, ಜೀವಚೇತೋಹಾರಕ, ಮಂದಸ್ಮಿತ ಅರಳತೊಡಗಿತು. ವಿಶ್ವಾಸ ಮಂತ್ರಪಠನದಿಂದ ಆ ದಿವ್ಯ-ಭವ್ಯ ಮೂರ್ತಿಯ ದರ್ಶನ ಮಾಡಿಸಿದ್ದ. ಅದನ್ನು ನೋಡಿ ಧನ್ಯನಾಗುವ ದೃಷ್ಟಿ ದಯಪಾಲಿಸಿದ್ದ. ದಾದಲ್ಯಾ ಮೂಕ ವಿಸ್ಮಿತನಾಗಿ, ಭಕ್ತಿಪರವಶನಾಗಿ. ಆ ವಿರಾಟ್-ರೂಪಧಾರಿಗೆ, ಅದನ್ನು ದರ್ಶನ ಮಾಡಿಸಿದ ವಿಶ್ವಾಸನಿಗೆ ಸಾಷ್ಟಾಂಗ ಪ್ರಣಾಮ ಹಾಕಿದ.

ದಾದಲ್ಯಾ ಈ ಪ್ರಣಾಮ-ತಂದ್ರಿಯಿಂದ ಜಾಗರಕ್ಕೆ ತಿರುಗಿದಾಗ, ವಿಶ್ವಾಸ ಬೆಳಗಿನ ಚಹ ಮುಗಿಸಿಕೊಂಡು, ಪ್ರತಿಷ್ಠ ಜೀವನದ ತನ್ನ ತಪೋಭೂಮಿಗೆ — ಜಿ. ಎಮ್. ಕಾಲೇಜಿನ ಹಾಸ್ಟೆಲ್ಲಿಗೆ — ಹಿಂದಿರುಗಿ ಒಂದು ತಾಸಿನ ಮೇಲಾಗಿತ್ತು.

ವಿಶ್ವಾಸನ ತಪಸ್ಸಾಧನೆ ಅಲ್ಲಿ ಸುರುವಾಗಿತ್ತು.

## ಹದಿನಾಲ್ಕು

"ದಾದಲ್ಯಾ, ಈ ಆರ ತಿಂಗಳದಾಗ ಮೂರ ಸಾರೇ ಪುಣೇದ ಯಾತ್ರಾ ಮಾಡಿದಿ. ಬಂದಾಗೆಲ್ಲಾ ಬಿಟ್ಟೂ ಬಿಡದs ಊರ ಕಿಲಾಪ ಹೇಳಿ ಹೋಗತಿ. ಆದರ ಸುರ್‍ಯಾಗ ಕನ್ಯಾ ಜಮಾಸಿದ್ದರ ದಶಿಂದ ಒಂದು ಚಕಾರ ಶಬ್ದ ತಗದಿಲ್ಲಲಾ?

ಮುಚ್ಚಿ ಇಡೂದೇನು ಇತ್ತು ಅಂಥಾದ್ದು ಅದರಾಗ? ನನಗ ಹೇಳಿದ್ದರ, ನಾ ಏನು ಬ್ಯಾಡಂತ ಅಂತಿದ್ನೇನು?"

ಸೋನಕ್ಕ ನೇರವಾಗಿ ಗುರಿಯಿಟ್ಟು ದಾದಲ್ಯಾನ ಎದೆಗೆ ಗುಂಡೆಸೆದರು. ದಾದಲ್ಯಾ ಒಂದೇ ಒಂದು ಕ್ಷಣ ಗತಪ್ರಾಣನಾದ. ಕಣ್ಣಿಗೆ ಕತ್ತಲೆಯಡರಿ ನೆಲಕ್ಕೆ ಕುಕ್ಕರಿಸು ವಂತಾದ. ಆದರೆ ಒಂದೇ ಕ್ಷಣ —

"ಸೋನಕ್ಕಾ, ಸುರ್‍ಯಾ ಬೆಳಗಾಂವಿಗೆ ಬಂದದ್ದು – ಹಾಂಗೇ ಊರಿಗೂ ಬಂದದ್ದು ನಿಮಗ ಠಾಂವಿಕಿರಬೇಕಂತ ಮಾಡಿದ್ದೆ. ಗಣಪತಿ ಮಂಗಳಾರತೀ ನಾನೇ ಮಾಡಿದ್ದೆ. ಕಾಕಾ-ಸೋನಕ್ಕಾ ಅವರಿಗೆ ಪ್ರಸಾದ ಮುಟ್ಟಿಸು ಅಂತ್ಹ ಸುರ್‍ಯಾಗ ಬಜಾಸಿ ಹೇಳಿದ್ದೆ. ಇದನ್ನಂತೂ ಅಂವಾ ಮುಚ್ಚಿ ಇಡೂದು ಶಕ್ಯನ್ಹ ಇರಲಿಲ್ಲಾ. ಆಫೀಸಿನ್ಯಾಗ ಕೆಲಸ ಇತ್ತೂ ಅಂತ್ಹ ಅಂವಾ ಬೆಳಗಾಂವಿಗೆ ಬಂದಿದ್ದಾ. ಸಾಹೇಬ ರದು ಇಂವಂದು ಅಲ್ಲೇ ಭೆಟ್ಟಿ ಆತು. ಇಬ್ಬರೂ ಆಫೀಸರು. ಇನಸ್ಪೆಕ್ಷನ್ ಬಂಗಲೇದಾಗ ಏನ ನಿಂದರತೀ? ನೀ ಏನು ನನಗ ಅರೀದಂವಾ ಅಲ್ಲಾ. ನನ್ನ ಮುಂದ ಆಡಿ ಬೆಳೆದ ಹುಡಗಾ. ನನ್ನ ಮನೀ ಏನು ನಿನಗ ಹೊರಗಿಂದಲ್ಲಾ ಅಂತ ಅವರು ಹೇಳಿ, ಸುರ್‍ಯಾನ್ನ ನಾಕ ದಿನಾ ಮನ್ಯಾಗ ಇಟಗೊಂಡರು. ನಾನೂ ಆಗ ಅಲ್ಲೇ ಇದ್ದೆ. ಸುರ್‍ಯಾ, ಶಕೂನ್ನ ಕನ್ಯಾ ಅನ್ನೂ ದೃಷ್ಟೀಯಿಂದ ನೋಡಲಿಲ್ಲಾ. ಸಾಹೇಬರು-ರಂಗಕ್ಕಾ, ಅವರೂ ಶಕೂನ್ನ, ಕನ್ಯಾ ಅನ್ನೂ ದೃಷ್ಟೀಯಿಂದ ತೋರ ಸಲೂ ಇಲ್ಲಾ. ವಸೂ-ವಿಶ್ಯಾಂದೂ ಹ್ಯಾಂಗ ಜಮಾಸೇದ ನೋಡರಿ – ಹಾಂಗ್ಹ ಇವರದೂ ಜಮಾಸಿರಬೇಕು. ಸುರ್‍ಯಾನ್ನ ನೋಡಿ, ಸಾಹೇಬರು ಕಣ್ಣಾಗ ನೀರ ತಂದು ಹೇಳಿದರು: "ದಾದಲ್ಯಾ. ಶಕೂಗ ನಾ ಏನು ಹೊರಗಿನ ವರಾ ನೋಡೂ ದಿಲ್ಲಾ. ಸುರೇಶ ನನಗ ಸ್ವಾದರಳ್ಯಾ ಇದ್ದ್ಹಾಂಗ. ಅಂವಗ್ಹ ಶಕೂನ್ನ ಕೊಡೂದಂತ ಠರಾಸೀನಿ. ಅಂವಾ ತಕರಾರು ಏನರ್‍ಹ ಮಾಡಿದರ, ನನ್ನ ತಂಗಿ ಇದ್ದಾಳ, ರದ- ಬದಲೀ ಮಾಡಲಿಕ್ಕೆ ಅಂತ್ಹ ಹೇಳಿದರು. ಇಂಥಾ ಮಾತಾ, ನಾ ಯಾಕ ಮುಚ್ಚಿ ಇಡಲಿ ಹೇಳರಿ? ಸೋನಕ್ಕಾ. ಸಾಹೇಬರ ದೊಡ್ಡಿಸ್ತನಾ ಹಾಡಲಿಕ್ಕೆ ನಾ ಏನು ಹಿಂದ-ಮುಂದ ನೋಡತಿದ್ದಿಲ್ಲಾ. ವಿಶ್ಯಾ-ಸುರ್‍ಯಾ ಇಬ್ಬರಿಗೂ ಸಾಹೇಬರು ಅಂದ ಮಾತು ತಿಳಿಸಿದ್ದೆ. ಸುರ್‍ಯಾ ಅಂತೂ, ಶಕೂನ್ನ ಒಪಿಗೊಂಡದ್ದನ್ನ, ನಿಮ್ಮ ಮುಂದ – ಕಾಕಾ ಅವರ ಮುಂದ ಹೇಳತೀನಿ ಅಂದಿದ್ದಾ. ಅದೇ ಸುದ್ದೀ ನಾ ಹೇಳೂದೇನಂತ ಸುಮ್ಮ ಇದ್ದೆ. ಸೋನಕ್ಕಾ. ಇದನ್ನ ಮುಚ್ಚಿಡೂದರಾಗ, ನಂದೇನು

ಮತಲಬ್ ಇರಲಿಲ್ಲಾ."

"ಮತಲಬ್ ಅಂತ ಎಲ್ಲೆ ಅಂದೆ ದಾದಲ್ಯಾ ನಾನು? ನೀ ಹೇಳೂದಕ, ಸುರ್‍ಯಾ ಹೇಳೂದಕ ಅಂತರದ. ಸುರ್‍ಯಾ ಸರಽಳ ಹೇಳಿಬಿಟ್ಟಾ: ತಾಯೀ, ನಾ ಶಕೂನ್ನ ಒಪಿಗೊಂಡೀನಿ. ಬ್ಯಾರೇ ಕನ್ಯಾ ನೋಡೂದು ಜರೂರಿ ಇಲ್ಲಂತ. ಕನ್ಯಾಪಕ್ಷದವರು ಕೇಳಿದಽ. ನಾವಾಗೇ ಏನು ಅವರ ಮನೀ ಬಾಗಲಿಗೆ ಹೋಗೂದದನಽ? ಅವರಾಗೇ ಬಂದಾಗ. ನೋಡಲಿಕ್ಕೆ ಬಂದೀತಂತ. ನಾನೂ ಸುಮ್ಮ ಅದೆ: ಕಾಕಾನೂ ಸುಮ್ಮಗ ಅವರು. ವರಷ ಆಗತಽ ಬಂತು ಆ ಮಾತಿಗೆ. ಆದರೂ ಅವರ ಹಾಲ್‌ಚಾಲೀ ಕಾಣಸೊಲ್ಲದು. ನನಗೂ ಯಾಕೋ ಸಂಶ್ಯಾ ಬಂತು. ಇವರದೇನರಽ ಛಾನಗಡೀ ಆಗಿರಬೇಕಂತ. ವಿಶ್ಯಾಗೂ ನೀರ ಹಚ್ಚಲಿಕ್ಕೆ ಕೂತಿದ್ರಂತ. ಶಂಕರಕಾಕಾ ಮೊಳಾ ಉದ್ದ ಪತ್ರಾ ಬರದು. ಮುಂಬಯಿಂದ ತಿರಿಗಿ ಹೋಗಾಗ ಇಲ್ಲೆ ಇಳದು ಎಲ್ಲಾ ಹಕೀಕತ್ತ ಹೇಳಿ, ಸಾಖರಪುಡಾ ಬಗೀಹರಿಸಿಕೊಂಡು ಹೋದರು......"

"ನೋನಕ್ಕಾ. ಸಾಖರಪುಡಾ ಆದ ಸುದ್ದೀನೂ ನಮಗ ಗೊತ್ತೇ ಇಲ್ಲಲಾ! ವಿಶ್ಯಾನೂ ಏನೂ ಹೇಳಲಿಲ್ಲಾ ಇದರ ದಲಿಂದ. ಅಂವಗೂ ಠಾಂವಿಕಿ ಇದ್ದ್ಹಾಂಗ ಇಲ್ಲಾ."

"ವಿಶ್ಯಾನ್ನ ಏನ ಕೇಳೂದು ಇದರಾಗ? ಪಂತಮಾಮಾನ ಮುಂದಽ ಒಪಿಗೊಂಡೇಬಿಟ್ಟಿದ್ದಾ. ನಾಳೆ ಪ್ರಸೋಜನಕ್ಕ ಕೂಡುವವರು ಮಾಮಾ-ಮಾಮೀ. ಕಾಕಾನ ಅಂಪಸರಾ ನಿನಗ ಗೊತ್ತಽ ಅದಽ. ಶಂಕರಕಾಕಾ, ಪಂತಮಾಮಾ, ವಸೂನ್ನ ಎರಡ ದಿನಾ ನಿಂದರಿಸಿಕೊಂಡು, ಸಾಖರಪುಡಾ ಬಗೀಹರಿಸಿದರು. ಓಂದಕೇ ಕಾಕೂ, ವಸೂಗ ಸೀರೀ ಉಡಿಸಿದ್ದರು. ನಿಶ್ಚ್ಯದ ಸೀರೀ ಹಾಕಿದೇನು ಅಂತಽ, ಅಂದೇ ಕಾಕಾ ಅವರು ಕಾಕೂಗ ಅಂದಿದ್ದರಂತ. ಕಾಕೂನ ಕೈಗುಣಾನಽ ಅಂಥಾದ್ದು. ಹಿಡದದ್ದು ಭಂಗಾರ ಆಗದೇ ಹೋಗಲಿಲ್ಲಾ. ವಿಶ್ಯಾ ತಮಗ ಅರೀದನೇ ಪಂತ ಮಾಮಾನ ಮುಂದಽ, ಲಗ್ನಕ್ಕ ಒಪ್ಪಿಗಿ ಕೊಟ್ಟಾನ. ಅಂವಗ ತಿಳಿಸದೇ ತಾವೂ ಸಾಖರಪುಡಾ ಬಗೀಹರಸೂಣು ಅಂದು, ಮೂರ್ತಾ ನೋಡೀ, ನಿಶ್ಚಯ ಹಾಕೇ ಬಿಟ್ಟರು. ಅಂದ ಬಸವಂತಿನ್ನ ಮುದ್ದಾಂ ಕರಿಸಿಗೊಂಡರು. ನನಗ-ಆಕೀಗೆ ಎರಡು ರೇಶಮೀ ಸೀರೀ ತಂದರು."

"ಸಾಂಗಲೀ ಮಂಡಳೀಗೆ, ಬಸವಂತೀ ಸುದ್ದಿ ತಿಳೀತನ್ನರಿ."

"ಕಾಕಾನಲ್ಲೆ ಮುಚ್ಚುಮರೀ ಇಲ್ಲ ದಾದಲ್ಯಾ. ಪಂತಮಾಮಾಗ ಸರಽಳ

ಹೇಳಿಬಿಟ್ಟರು. ನಿಮಗ ಇನ್ನೊಬ್ಬ ಮಾನಸಕನ್ಯಾ ಬಂದಾಳ ಪಂತಮಾಮಾ. ನನ್ನ ಕೈ ಸೋತರ, ನಿಮ್ಮ ಉಡ್ಯಾಗ ಅಕಿನ್ನ ಹಾಕಿ ಕಣ್ಣ ಮುಚ್ಚತೀನಿ. ನನಕಿಂತಾ ನೀವು ಸಣ್ಣವರು. ನಾ ತಿಕೀಟ ತಗೀಯೂ ವ್ಯಾಳ್ಯಾ ಸನೇಕ್ಕ ಬರಲಿಕ್ಕೆ ಹತ್ತೇದ. ನನ್ನ ಗಾಡೀ ಬಿಟ್ಟ ಮ್ಯಾಲ, ಹಿಂದಿನವರ ಜವಾಬ್ದಾರೀ ನಿಮ್ಮ ಮ್ಯಾಲ ಅಂತ. ಕಾಕಾ ಬಸವಂತೀ ವರ್ಣನಾ ತಾಸತಾಸಕಾ ಮಾಡಿದರು. ನಾನೇ ಬಸವಂತಿನ್ನ ತಂಗೀ ಅಂತ ಒಪಿಗೊಂಡಿರೂವಾಗ ಬ್ಯಾರೇದವರು ಯಾಕ ಬ್ಯಾಡಂತಾರ? ತಮ್ಮ ಮಗಳು ಒಗತಾನಗೇಡಿ ಆಗಲಿಕ್ಕೆ ಬಸವಂತೇನು ಕಾರಣಲ್ಲ ಅನ್ನೋದು ಅವರಿಗೂ ಠಾಂವಿಕಿತ್ತು. ಅವರಿಗೆ ಈ ಸುದ್ದಿ ಗೊತ್ತ ಆದದ್ದೇ ಠೀಕ ಆತು. ಮಿಜಿ ಮಿಜಿಗೆ ಹಾದಿ ಉಳೀಲಿಲ್ಲಾ. ವಿಶ್ಯಾ ದತ್ತಕ ಹೋಗಿ ಗೆದ್ದಾನ. ಅಂವಗ ಈ ಮಿಜಿಮಿಜೀದು ಲೇಪನ ಇಲ್ಲಾ. ಏನ ಸಂಕಟ ಅದ ಅದು, ಸುರ್ಯಾ, ಸತೀಶ, ಕಿಶೋರ ಅವರಿಗೆ. ಮುಲ್ಲಿ ಆದ ಕಾಯಿ. ಮಕ್ಕಳನೂದು ತಿಳೀತಂದರ, ನಾಕ ಮಂದ್ಯಾಗ ಅವರಿಗೇ ಮಾರೀ ಎತ್ತಲಿಕ್ಕೆ ಮಾರ್ಗ ಉಳಿಯೂದಿಲ್ಲಾ. ಈಗ, ಸುರ್ಯಾಂದ ಹ್ಯಾಂಗ ನೆನಿಗುದಿಗೆ ಬಿದ್ದದ ನೋಡು? ಒಪಿಗೊಂಡ ಕನ್ಯಾದ ಕಡೀ ಮಂದಿ, ಮಾತ ಆಡಲಿಕ್ಕೂ ಬರಬಾರದಂದರ? ಇವರೇ ಏನರ ಕಲ್ಲ ಹಾಕ್ಕೋತ ಕೂತಿರಬೇಕು. ನಿನಗ, ಇವರದೂ ರಗಡ ಸಂಬಂಧ ಬಂದದ. ಬೆಳಗಾಂವೀ ಮಂದೀದೂ ಸಂಬಂಧ ಬಂದದ. ಥ್ವಾಡೇ ತುಸೂನರ ಠಾಂವಿಕಿರಬೇಕಲಾ?"

"ಸೋನಕ್ಕಾ, ಥ್ವಾಡೇ ತುಸೂ ಯಾಕ. ರಗಡ ಠಾಂವಿಕ್ಯದ. ಸುರೇಶ-ಶಕೂನ್ನ ಕುಂಡಲೀ, ಜೋಯಿಸರ ನಾರಪ್ಪಾ ಕೂಡಿಸಿ ನೋಡ್ಯಾನ. ಅಂವನೇ ಹೇಳಿದ್ಯಾ. ಒಂದ ವರ್ಷ ಲಗ್ನಬಲಾ ಇಲ್ಲಂತ. ಸಾಹೇಬರಿಗೆ ಇದನ್ನ ನಾನೇ ತಿಳಿಸಿದ್ದೆ. ಇಲ್ಲದಿದ್ದರ ರಂಗಕ್ಕವರು ಎಂದೋ ಬಂದು, ಶಕೂನ್ನ ನಿಮ್ಮ ಉಡ್ಯಾಗ ಹಾಕಿ ಹೋಗವರಿದ್ದರು. ದಾದಾನ್ನ ಈ ವಿಷಯದಾಗ ಅವರು ಕೇಳೂದಿಲ್ಲ ಸುದ್ದೇ. ಏನ ಮಾತ-ಕಥೀ ಆಡೂದದ, ಅದನ್ನ ಕಾಕಾ ಅವರ ಜೋಡೀನೇ ಆಡಿ ಮುಗಿಸಿಗೋಬೇಕಂತ ಹೇಳಿ ಇಟ್ಟೇನಿ. ಅವರೂ ಅದಕ್ಕ ಕಬೂಲಾಗ್ಯಾರ. ಈಗ ಅದರದೇನು ಅವಸರ ಇಲ್ಲ ಸೋನಕ್ಕಾ, ಅವಸರ ಇರದಿದ್ದರೂ, ಒಂದು ಅಗತ್ಯದ ಮಾತು ನಿಮ್ಮ ಕಿಂವೀ ಮ್ಯಾಲ ಇಡಬೇಕಂತ, ನಾ ಮುಂಬೈಯಿಂದ ಇಲ್ಲೀ ತನಕಾ ಧಾವಿಸಿ ಬಂದೀನಿ. ನನ್ನ ಮಾತು ನೀವು ನಡಸತೀರಿ ಅನೂ ಖಾತ್ರೀ ನನಗ ಅದ.

ಸೋನಕ್ಕಾ, ನನಗ-ದಾದಾಗ, ನನಗ-ಸಾಹೇಬರಿಗೆ ರಗಡ ಸಂಬಂಧ

ಬಂದsದ. ಭಾಳ ವಿಷಯದ ಚರ್ಚಾನೂ ಮಾಡೇವು. ದಾದಾ ನಿಮಗ ಕೊಟ್ಟ ಅಪವಾದದಾಗ ಹುರಳಿಲ್ಲಾ ಅನ್ನೂದು, ನನಗ ಠಾಂವಿಕಿತ್ತು. ಅದರ ದಶಿಂದ ದಾದಾ ಅವರ ಜೋಡೀ, ವಾದಮಾಡಿದೆ. ಡಾವ್ ಮಾಡಿದೆ. ಅವರು ಅದಕ್ಕ ಹಣೇಲಿಲ್ಲಾ. ಬಸವಂತೀ ಕಿವಿಗೆ ಅವರ ಭಾನಗಡೀ ಮುಟ್ಟಿಸಿದೆ. ಒಂದ ರೀತಿ ಯಿಂದ ಅಕಿನ್ನ ಅವರಿಂದ ಅಲಗನs ಮಾಡಿಬಿಟ್ಟೆ. ಸಾಹೇಬರಿಗೆ-ರಂಗಕ್ಕಾಪರಿಗೆ ಮಾತ್ರ ಇದರ ವಾಸನೀ ಹತ್ತಧಾಂಗ ಇಲ್ಲೀತನಕಾನೂ ಸಂಬಾಳಿಸಿಗೊಂಡು ಬಂದೀನಿ. ಸೋನಕ್ಕಾ, ಈ ನಾಟಕಾ ಇನ್ ಮುಂದs ನಡೀಲಾರದು ಅಂತ ಅನಸ ಲಿಕ್ಕೆ ಹತ್ತಿತ್ತು. ನಾರಪ್ಪ ಹೇಳಿದ ಒಂದ ವರಷದ ವಾಯದೇನೂ ಮುಗದsದ. ಶಕೂನ ದಶಿಂದ, ಸಾಹೇಬರು-ರಂಗಕ್ಕಾ, ಖಾತ್ರೀಲೇನs ನಿಮ್ಮ ಕಡೇ ಬರೂ ಸಂಭವ ಅದs. ನೀವು-ಕಾಕಾ, ಈ ಸುದ್ದೀ ಮುಚ್ಚಿ ಇಡೂದು ಶಕ್ಯನs ಇಲ್ಲಾ. ಸಾಹೇಬರು, ನಿಮ್ಮನ್ನ ತಂಗೀ ಹಾಂಗ ಅಂತ ಭಾವಿಸಿಕೊಂಡಾರ. ಈ ಸುದ್ದೀ ಕೇಳಿ ಅವರ ಜೀವನದ ಮ್ಯಾಲs ಎಂಥಾ ಪರಿಣಾಮ ಆದೀತನೂ ಕಲ್ಪನಾ ನಿಮಗೂ ಅದs. ಅವರ ಕೂಸಿನಂಥಾ ಮನಸ್ಸು ಇದರಿಂದ ವಿಲಿವಿಲಿ ಒದ್ದ್ಯಾಡಿ ಸಾಯತದ. ಅದರ ಝಳಾ ಎಲ್ಲಾರಿಗೂ ಬಡೀತದ. ನನ್ನಿಂದ ಇಂಥಾ ಪ್ರಸಂಗ ಬಂತಲಾ ಅಂತs ನೀವೂ ಸಣ್ಣ ಆಗತೀರಿ. ನೀವು ನವದರ – ಸಣ್ಣ ಆದರ ವಿಶ್ಯಾನೂ ನವೀತಾನ. ಅಭ್ಯಾಸಾ – ಕಲೀಯೂದು, ಎಲ್ಲಾ ಮುಗೀತು ಅಂತಾನ.

ಸೋನಕ್ಕಾ, ವಿಶ್ಯಾ ನಿಮ್ಮ ದಶಿಂದ ಕಲೀಲಿಕ್ಕೆ ಹತ್ಯಾನ. 'ಕ್ಲಾಸ್' ಬಂದರ ತಾಯೀಗೆ ಎಂಥಾ ಅಭಿಮಾನ ಅನಸ್ತದ – ಏನ ಆನಂದ ಆಗತsದ. ಅಂತs, ಜೀವದ ಗಂಧಕೊರಡ ಮಾಡಿ ಅಭ್ಯಾಸ ನಡಿಸ್ಯಾನ. ಇನ್ನ ಆರ ತಿಂಗಳವಾಗ ಅವನ ಪರೀಕ್ಷಾ ಮುಗೀತದ. ಅಂವಾ ಗೆದ್ದಿರತಾನ. ನಿಮಗ ಅಭಿಮಾನ ಅನಸೂ ರೀತೀಲೇ ಗೆದ್ದಿರತಾನ. ಬರೇ ಒಂದ ಕ್ಲಾಸೇ ಯಾಕs. ಪೈಲಾ ನಂಬರ ಬಂದು ನಿಮಗ ಕೀರ್ತಿ ತರತಾನ. ಅದರ ಖಾತ್ರೀ ಅದs ಎಲ್ಲಾರಿಗೂ. ಆದರ ಈ ಆರ ತಿಂಗಳ ಮಾತ್ರ ಸುಸೂತ್ರ ದಾಟಬೇಕು. ಸೋನಕ್ಕಾ, ಅದರ ಭಾರ ನಿಮ್ಮದು. ಸಾಹೇಬರಿಗೆ ಸುದ್ದೀ ತಿಳಿಸಿದರೂ, ಅದರ ಪರಿಣಾಮ ಅನಿಷ್ಟ ಆಗಧಾಂಗ ನೋಡಿ ಕೊಂಬೂ ಭಾರಾ, ನಿಮ್ಮ ಮ್ಯಾಲs, ಕಾಕಾ ಅವರ ಮ್ಯಾಲನs ಅದs. ವಿಶ್ಯಾನ್ನ ದಶಿಂದ ನೀವಷ್ಟು ಮಾಡಬೇಕು."

ಸೋನಕ್ಕನ ಕಣ್ಣಿಂದ ಟಪಟಪ ನೀರುದುರತೊಡಗಿದವು. ಸೆರಗಿನ ತುದಿ

ಯಿಂದ ಒರೆಸಿಕೊಳ್ಳುತ್ತ —

"ದಾದಲ್ಯಾ, ವಿಶ್ಯಾನ ಈ ಸಂಕಟಾ ನನ್ನಿಂದ ಬಂತು. ಸಕ್ಕೋತ-ಕೆಲಕೋತ ಕುಶಾಲೀಯಿಂದ ಕಲಿಯೂ ವಯಸ್ಸಿನ್ಯಾಗ, ನಂದs ದೃಷ್ಟಿ ಆಧಾಂಗ, ಅವನ ಬೆಳವಣಿಗಿ-ಹುರುಪಾ ಮುರಟಲಿಕ್ಕೆ ಹತ್ತಿತು. ಬಾಡಿಕೋತನs ನಡದಾನ. ನನಗ ಬಂದ ಅಪವಾದ ಅಳಸದೇ ಅಂವಾ ಏನು ಸುಖೀ ಆಗೂದಿಲ್ಲಾ. ನಿಮ್ಮ ಸಾಹೇಬರು ಇನ್‌ಕಾರ ಮಾಡಿದರೂ ಅಂವೇನು ಸುಖೀ ಆಗೂದಿಲ್ಲಾ. ಇವರು ಬಂದು, ತಪ್ಪಾತು ಅಂತs ಕಾಕಾ ಅವರ ಕಾಲ ಹಿಡಕೊಂಡು ಕ್ಷಮಾ ಕೇಳದ ಹೊರ್ತು ಅಂವಗೇನು ಸಮಾಧಾನ ಆಗೂದಿಲ್ಲಾ. ಅಂವನ ಹಟಾ ಎಂಥಾದ್ದು ಅನೂದರ ಠಾಂವಿಕಿ ನನಗ ಅದs ದಾದಲ್ಯಾ. ಅಂವಾ ಕಲಿಯೂದೂ ನನ್ನ ದಶಿಂದನs. ಅದೂ ನನಗ ಗೊತ್ತ ಅದs. ನಂದೇನು ಉಳದವ ದಾದಲ್ಯಾ? ಇಂದೇ ಕಣ್ಣ ಮುಚ್ಚಿದರೂ ನಡೀತದ. ಕೂತಲ್ಲೇ ಜೀವಾ ನೀಗೂವಪ್ಪು ಹತೋಟಿ ಬಂದದ ನನಗ ಜೀವದ ಮ್ಯಾಲs. ಆದರ ಆಶಾ ಭಾಳ ಕೆಟ್ಟದು, ದಾದಲ್ಯಾ. ನನಗ ಇವರ ಜೋಡೀ ಸಂಸಾರ ಮಾಡೇನನೂ ಆಶಾ ಉಳದಿಲ್ಲಾ. ನಂದೂ ಅನೂ ಸುಖದ ಆಶಾ ಉಳದಿಲ್ಲಾ. ಆದರ ಖೋಡಿ ಜೀವಕ್ಕ. ವಿಶ್ಯಾ ಡಾಕ್ಟರ ಆದದ್ದು ನೋಡಬೇಕು – ಅಂವಾ 'ಫಸ್ಟ್‌ಕ್ಲಾಸ್' ಬಂದದ್ದನ್ನ ನೋಡಬೇಕು – ವಸೂನ ಕೈಯಾಗ ಅವನ್ನಿಷ್ಟು ಕೊಡಬೇಕು, ಅಲ್ಲಿಂದ ಕಣ್ ಮುಚ್ಚಬೇಕು ಅನ್ನೊ ಆಶಾ ಹೊಕ್ಕದ. ನಂದಿಷ್ಟು ಆಶಾ ಪೂರ್ಣ ಆಗದಿದ್ದರ, ದಾದಲ್ಯಾ ನಾನೂ ಸುಖೀ ಆಗೂದಿಲ್ಲಾ – ವಿಶ್ಯಾನೂ ಸುಖೀ ಆಗೂದಿಲ್ಲಾ. ನಾ ಸತ್ತರೂ. ನನ್ನ ಆತ್ಮಾ ಇಲ್ಲೇ ಘಟಮಳಸಿಗೋತ ಇರತದ. ಆಶಾ ಕೆಟ್ಟ ಆದರೂ ಆಗಲಿ – ನನ್ನ ವಿಶ್ಯಾ ಸುಖೀ ಆದರ ಸಾಕಂತ ನಾನೂ ನಿರ್ಧಾರ ಮಾಡಕೊಂಡೀನಿ. ಅವನ ಕಲಿಯೂದು ಮುಗಿಯೂ ತನಕಾ – ಅವನ ತಲೀಮ್ಯಾಲ ಇಷ್ಟು ಅಕ್ಷತಾ ಬೀಳೂ ತನಕಾ, ಏನ ಸಂಕಟ ಬಂದರೂ ನುಂಗಿಕೊಂಡು ಇರಬೇಕಂತ ಠರಾಸೀನಿ. ನಾ ಬದಕೂದರಾಗಿನ ಸುಖಾ ಏನ ಅದs ಅನ್ನೂದರ ಠಾಂವಿಕಿ ನನಗ ಅದs. ವಿಶ್ಯಾನ ಸುಖದ್ದಂಶಿಂದ ನಾ ಬದಕಬೇಕಂದರ, ಸುರ್‍ಯಾನ ಸುಖದ್ದಶಿಂದ ಸಾಯಬೇಕನ್ನೂದೂ ಅಷ್ಟs ಅಗತ್ಯದ್ದಾಗೇದ……"

ಸ್ಟೋನಕ್ಕ ಇನ್ನೂ ಮಾತಾಡುವವರಿದ್ದರು. ಸುರ್‍ಯಾ ಮರೆಗೆ ನಿಂತು ನಮ್ಮ ಮಾತು ಕೇಳಿರಬೇಕು. ನಾವು ಕುಳಿತಲ್ಲಿಗೇ ಬರುತ್ತ ಹೇಳಿದ:

"ತಾಯೀ, ವಿಶ್ವಾ-ಸುರ್ಯಾನ ನಡುವ, ನೀನೇ ಯಾಕ ಭೇದ ಮಾಡತೀ? ವಿಶ್ವಾ-ಸುರ್ಯಾ ಅಂದರ ನನಗ ರಾಮ-ಲಕ್ಷ್ಮಣರಿದ್ಧಾಂಗ ಅಂತs ನೀನೇ ಹೇಳತಿ. ವಿಶ್ವ್ಯಾನ ದಶಿಂದ ಬದಕೂದು – ಸುರ್ಯಾನ ದಶಿಂದ ಸಾಯೂದು, ಈ ಭೇದದ ಭಾಷಾ ಯಾಕ ವಾಪರಸತೀ? ಬದುಕೂದೇ ಇದ್ದರ ಇಬ್ಬರ ದಶಿಂದೂ ಬದುಕು. ನೀ ಸಾಯೂದನ್ನ ನೋಡೂದಕ್ಕ ನಾವಿಬ್ಬರೂ ಜೀವಂತ ಇರೂದಿಲ್ಲಾ ಅನ್ನೂದರ ಕಲ್ಪನಾ ನಿನಗ ಅದs. ನೀ ಸುಖೀ ಆಗಲಿ, ನಿನ್ನ ವ್ಯಥಾ ಕಡಿಮಿ ಆಗಲಿ ಅನ್ನೂದರ ದಶಿಂದ ನಮ್ಮ ಧಡಪಡ ನಡದsದ. ತಾಯೀ, ನಿನಗ ಅಪವಾದ ಇಲ್ಲಾ. ಅದರ ಲೇಪನೂ ಇಲ್ಲಾ. ನಿನ್ನ ಆತ್ಮನs ಅದಕ್ಕ ಸಾಕ್ಷೀ ಅದs. ವಿಶ್ವಾ ಅದಕ್ಕ ಸಾಕ್ಷೀ ಇದ್ದಾನ. ಸುರ್ಯಾಗ ನಿಮ್ಮ ಸಾಕ್ಷೀಕಿಂತಾ ಬ್ಯಾರೇ ಸಾಕ್ಷೀದು ಅಗತ್ಯ ಇಲ್ಲಾ. ಇನ್ನ, ಈ ಮಾತು ಯಾರಿಗೆ ಪಟಾಸಬೇಕಾಗೇದ? ಜಗತ್ತಿಗೆ ಅಂತೀಯೇನು? ತಾಯೀ ಬಾಲಾ ಇಂದೇ ಡೊಂಕ ಆಗಿಲ್ಲಾ. ಬ್ರಹ್ಮಸೃಷ್ಟೀ ನಡದಾಗೇ ಏನೋ ಗಡ್ಬಡಾಗೇದ. ಇದೇ ಜಗತ್ತು ಸೀತಾಮಾಯಿಗೆ ಅಪವಾದ ಕೊಡೂ ಮುಂದ, ಹೌಹಾರಿ ಚೀರಿತ್ತು. ಆಕೀ ಬೆಂಕ್ಯಾಗಿಂದ ಲೇಪ ಇಲ್ಲದೆ ಬಂದಳು. ಚೀರಿದ ಬಾಯೀನೇ ಉಘೋ ಉಘೋ ನಡಿಸಿದೂ. ಉಕ್ಕಿನ ಊದಗೊಳಿವ್ಯಾಗ ಹಾಕಿದರ ಡೊಂಕ ಬಾಲಾ ಎಂದಾರ ಸರಳ ಆದೀತೇನು? ಅಗ್ನಿದಿವ್ಯದ್ದೂ ಈ ಜಗತ್ತಿಗೆ ಖಾತ್ರೀ ಇಲ್ಲಾ. ಸೀತಾಮಾಯಿ ಹುತಾಶನಗ ವರೀಲೀ ಹಚ್ಚಿದ್ರೂ ಹಚ್ಚಿರಬೇಕು ಅಲ್ಲಿಕ್ಕೆ ಹಿಂದ-ಮುಂದ ನೋಡೂದಿಲ್ಲಾ ಜನರು. ನಿನ್ನ ಹರಲೀ ಸುದ್ದಿ ಗೊತ್ತಾದರ ನಮ್ಮ ಗತೀ ಏನು ಅನ್ನೂ ಅಳಕ ನಿನಗ.

ಶಂಕರಕಾಕಾಗ ಪತ್ರಾ ಬರದು, ದಾದಾ ಏನ ಸಾಧಿಸಿದಾ? ಎಲ್ಲಾ ಸುದ್ದಿ ಗೊತ್ತ ಇದ್ದೂ, ಮನೀತನಕಾ ಮಗಳ್ನ ಕರಕೊಂಡು ಬಂದು ನಿಶ್ಚ್ಯಾ ಹಾಕೊಂಡು ಹೋದರು. ನಾಲಾಯಖಿ ಯಾರದಾತು? ದಾದಾಸಂಥವರ ಮುಳ್ಳ ಎಬ್ಬಲಿಕ್ಕೆ, ಮತ್ತ ಎಲ್ಲ್ಯರs, ಘಟ್ಟಿಉಕ್ಕಿನ ಸೂಜಿ – ಚಿಮಟಿಗಿ, ನಿರ್ಮಾಣ ಆಗೇ ಇರತಾವ. ರಾವಣನ್ನ ನಿರ್ಮಾಣ ಮಾಡಿದವಗ. ರಾಮನ್ನ ನಿರ್ಮಾಣ ಮಾಡೂ ಜವಾಬ್ದಾರೀ – ದಖ್ಖಲ್ ಇದ್ದs ಇರತದ. ನಿನಕಿಂತಾ ಅಂವಗ ಅದರ ಕಾಳಜೀ ಜಾಸ್ತ ಇರತದ.

ತಾಯೀ, ನಿನಗ ಚಿಂತೀ ಅಂದರ, ಅನ್ನಾ-ನೀರಿನ್ಹಾಂಗ ಆಗೇದ. ಬದಕಿದರ ಅದೇ ಬೆಂಕಿ ತಿಂದು, ಕುಡದು ಬದಕಬೇಕಂತಿ. ಇಷ್ಟ ದಿನಾ ವಿಶ್ವ್ಯಾನ ಚಿಂತಿ ಇತ್ತು.

ಆದು ಮುಗೀತು ಅನ್ನೂದರಾಗ ನಂದು ಸುರೂ ಆತು. ನಿನ್ನ ಚಿಂತಿ – ಅದು ಬ್ಯಾರೇದವರಿಗೆ ತಿಳೀಬಾರದು ಅನ್ನೊ ಕಾಳಜೀ ಎರಡೂ ನಿನ್ನ ಹಣ್ಣ ಮಾಡಲಿಕ್ಕೆ ಹತ್ಯಾವ. ನಿನ್ನ ನೋಡಿ ಏನ ಸಂಕಟಾಗತದ ತಾಯೀ? ಯಾರ ಮುಂದ ಹೇಳಲಿ. ಯಾರ ಮುಂದ ಬಿಡಲಿ ಅನೂ ಹಾಂಗ ಆಗತದ. ವಿಶ್ಯಾಗ ವಸೂ ಇದ್ದಾಳ. ದಾವಲ್ಯಾ ಇದ್ದಾನ. ದಸ್ತಗೀರ್ಯಾ ಇದ್ದಾನ. ಇಲ್ಲೆ ಬಂದರ ನೀ ಇದ್ದೀ – ಕಾಕಾ ಇದ್ದಾರ. ಬಸವಂತಿ ಇದ್ದಾಳ. ನನಗ ತಾಯೀ. ಎಲ್ಲಾರೂ ಇದ್ದೂ ಅನಾಥ ಆಗೀನಿ. ಸುರ್ಯಾ ಚಾಪಟ ಇದ್ದಾನ – ಹುಡಗಾಟಿಕಿ ಇನಾ ಹೋಗಿಲ್ಲಾ ಅಂತಽ ಎಲ್ಲಾರೂ ನಗೀಪ್ಯಾಲ ಹಾಕತೀರಿ. ನನ್ನ ಹೊಟ್ಟ್ಯಾಗಿನ ಸಂಕಟಾ ನಿಮಗ ತಿಳೀವಲ್ಲದಾಗೇದ. ತಾಯೀ. ಇಂದಽ ಒಂದು ಕಡೀ ಮಾತ ಹೇಳತೀನಿ. ನಿನಗ ನನ್ನ ದಶಿಂದ ಪ್ರೀತಿ ಇದ್ದರ, ಅಂತಃಕರಣ ಇದ್ದರ – ನನ್ನ ಆಣೀ ಹಾಕಿ ಹೇಳತೀನಿ. ನೀ ಸಾಯೂ ಭಾಷಾ ಬಿಡದಿದ್ದರ – ವ್ಯರ್ಥ ಚಿಂತೀ-ವ್ಯಸನಾ ಬಿಡದಿದ್ದರ – ಆಗದೀ ನಿನ್ನ ಕಣ್ ಮುಂದೇ, ಈ ಮನ್ಯಾಗಿಂದ ಸುರ್ಯಾನ ಹೆಣಾ ಹೋಗದಿದ್ದರ ನೋಡು.”

“ಸುರ್ಯಾ, ಸುರ್ಯಾ... ಸುರ್ಯಾ. ಓಳತನ್ನು. ಅಭದ್ರ ಮಾತಾಡಬ್ಯಾಡಾ. ದೀಪಾ ಹಚ್ಚೂ ಪ್ಯಾಳ್ಯಾದಾಗ ಅಭದ್ರ ಮಾತಾಡಬ್ಯಾಡಾ. ಸುರ್ಯಾ, ನಿನ್ನ ಸಾಕ್ಷೀ ಆಗಿ – ವಿಶ್ಯಾನ ಸಾಕ್ಷೀ ಆಗಿ, ಹೇಳತೀನಿ: ನಾ ಸಾಯೂ ಭಾಷಾ ಆಡೂದಿಲ್ಲಾ. ಚಿಂತೀ ಹಚಿಗೊಂಬೂದಿಲ್ಲಾ. ನನ್ನ ಸುರ್ಯಾನ ದಶಿಂದ ನಾ ನಕ್ಕೋತ್ನಽ ಇರತೀನಿ. ಬದಕತೀನಿ ಸುರ್ಯಾ, ನಿನ್ನ ದಶಿಂದ ಬದಕತೀನಿ. ವಿಶ್ಯಾನ ದಶಿಂದ ಬದಕತೀನಿ. ನನ್ನ ಸುರ್ಯಾ, ವಿಶ್ಯಾ ಸುಖೀ ಆಗಲ್ಯಂತ ನಾ ಎಲ್ಲಾ ಮರೀತಿನಿ. ನಿನ್ನ ತಾಯೀ ಸುಳ್ಳ ಆಡೂದಿಲ್ಲಾ – ವಂಚನಾ ಮಾಡೂದಿಲ್ಲಾ ಅನ್ನೂ ಖಾತ್ರೀ ನಿನಗ ಅದಽ. ನನ್ನ ಸುರ್ಯಾಗ ತನ್ನ ತಾಯೀ ಮಾತಿನ್ಯಾಗ ವಿಶ್ವಾಸ ಅದಽ ಅನ್ನೂ ಖಾತ್ರೀ ನನಗ ಅದಽ. ಏಳ ಸುರ್ಯಾ, ಹುಚ್ಚನ್ಹಾಂಗ ಹಾಂಗ ಅಳಬಾರದು. ದೊಡ್ಡಾಂವಾದಿ. ಆಫೀಸರ ಆದಿ. ಹೀಂಗ ಮುಳುಮುಳು ಅತ್ತರ ಹ್ಯಾಂಗ ನೋಡು?”

ಆ ದೊಡ್ಡವನಾದ ಆಫೀಸರನನ್ನು ಸೋನಕ್ಕ ಎದೆಗವಚಿಕೊಂಡು ಸೆರಗಿನಿಂದ ಕಣ್ಣೊರಸಿದರು. ಬೆನ್ನು-ನೆತ್ತಿ ಸವರಿ ಚುಕ್ಕು ಬಡಿಯುತೊಡಗಿದರು. ಸುರೇಶ ಕೂಸಿನಂತೆ ನಿಃಶಬ್ದಸ್ತಬ್ಧನಾಗಿ ಆ ಮಾತಾಯಿಯ ಮಡಿಲಲ್ಲಿ ಮಲಗಿದ್ದ.

ಸುರ್ಯಾ ಸೋನಕ್ಕನನ್ನು ಗೆದ್ದು ವಿಜಯವನ್ನು ಸಂಪಾದಿಸಿದ. ದಾವಲ್ಯಾನ

ದಾರಿಯನ್ನು ಬಹಳಷ್ಟು ಸುಗಮವಾಗಿಸಿದ. ವಿಶ್ಯಾನ ವಿಜಯ-ವೀಥಿಗೆ ಹಡದಿಯನ್ನು ಹಾಸಿದ.

"ದಾದಲ್ಯಾ, ಬಸವಂತಿ ಬಂದ್ಲು ನೋಡಪಾ, ನೀ ಬಂದ ತಪಾಸ ಹತ್ತಿ. ನಿನ್ನ ಕಾಮಣ್ಣನ ಪೋತೀ ತೋರಸು. ಸಮಾಧಾನ ಆಗಲಿ. ಅಯ್ಯs, ಇದೇಸ ಸೋನಾ, ಸುರ್ಯಾನ್ನ ಕೂಸಿನ್ಹಾಂಗ ತೊಡೀ ಮ್ಯಾಲ ಹಾಕ್ಕೊಂಡು ಕೂತೀ? ಸುರ್ಯಾ, ಕಡವ ಆದಿ; ಇನಾ ನಿನ್ನ ಅಜ್ಜ್ಯಾಹೋಗವಲ್ದು. ತಾ ನಿನ್ನ ಮುದಿಗೂಸಿನ್ನ ಇಕಡೆ. ಅಪ್ಪ ಚಾ-ಪಾಣೀ ಬಗೀಹರಸ್ತೀನಿ. ಕಚೇರೀ ಬಿಟ್ಟ ಬಂದಾವಾ ಅರಿವೀ ಸುದ್ದೇ ಬದ್ಲಾಸಿಲ್ಲಾ. ಚಾಹಕ್ಕ ಈಗ ಬಂದಾನು, ಇನ್ನೊಂದ ಘಳಿಗ್ಗಿ ಬಂದಾನು ಅಂತs ನಾನು ಚಹಾ ಇಳಿಸಿಗೊಂಡು ಕೂತೀನಿ. ನೀ ಇಲ್ಲೆ ಮುಂಗಡೀ ಕೂಸಿನ್ಹಾಂಗ ಸೋನಾನ ತೊಡೀ ಮ್ಯಾಲ ಮಲಗೀದಿ. ಏನ ಛಂದ ಕಾಣಸ್ತದ ತಗೀ ಸುರ್ಯಾ ನಿನಗ? ಮುದಕ ಆಗತs ಬಂದಿ. ಇನಾ ಅಕಲ ಬರಲೊಲ್ಲದು. ಕಿಶಿ ಕಿಶಿ ನಗತೀ ಏನು? ನನ್ನ ನೋಡೂತ್ಲೇ ಅಂತೂ ಮುದ್ದಾಂ ಮಾಡತೀ. ಖೋಡಿ ವಿಶ್ಯಾಗೂ ಇದs ಚಟಾ. ಚೌದಾ ವರ್ಷದ ಕಡವ ಆದರೂ ಕಾಕೂನ ಮುಸಿಕಿನ್ಯಾಗ ಮಲಗಿದರs ನಿದ್ದಿ ಬರೂದು. ನೀ ಯಾರ್ನ ಹೋತೀ?"

ಕೋಣೆಯೊಳಗೆ ಬಂದು ಗಿರಿಜಾ ದೀಪಹಚ್ಚಿದಾಗ, ಅವಳಿಗೆ ತಾಯಿ-ಮಗನ ಈ ವಾತ್ಸಲ್ಯಚಿತ್ರ ಕಂಡಿತು. ಅದರಿಂದ ಪುಲಕಿತಳಾದ ಗಿರಿಜಾ ನುಡಿದಳು. ಬಸವಂತಿ ಅವಳ ಬೆನ್ನಿಗೇ ಇದ್ದಳು. ಸೋನಕ್ಕನ ತೊಡೆಯ ಮೇಲೆ ಒರಗಿದ ಸುರ್ಯಾ ಎದ್ದು ನಿಂತು —

"ಬಸವಂತೀ, ನಾ ಯಾರ್ನ ಹೋತೀನ್ಯಂತ, ಈ ಏಳ ಮಕ್ಕಳ ತಾಯಿ, ಕೇಳಿದ್ಲಲಾ? ತಾ ಯಾರ್ನ ಹೋತಾಳ ಕೇಳು? ನಾ ವಿಶ್ಯಾನ್ನ ಹೋತಿದ್ದರ, ತಾ ಕಾಕೂನ್ನ ಹೋತಾಳ. ನಿನಗ ಗೊತ್ತ ಇರಲಿಕ್ಕಿಲ್ಲಾ ಗಿರಿಜಾ, ಇಡೀ ಹಿಂದುಸ್ತಾನಕ್ಕ ಒಬ್ಬಾಕೀನೇ 'ಫ್ಲಾರೆನ್ಸ ನಾಯಿಟಂಗೇಲ್' ಅನ್ನೂದು. ನಾ ಹುಟ್ಟಿದಾಗ, ತಾಯೀ ಬಾಣಂತ್ಯನಕ್ಕಂತ, ಸಾಂಗ್ಲೀಗೆ ಬಂದು ಧ್ವಜಾ ಹಾಕಿದಕೀ ವರ್ಷ ಆದರೂ ಜಾಗಾ ಬಿಡಲಿಲ್ಲಾ. ಇಡೀ ವರ್ಷ ನನ್ನ ಎತ್ತಿ ಆಡಿಸ್ಯಾಳ. ತೊಟ್ಟಿಲಾಗ ಸುದ್ದೇ ಮಲಗಿಸಿಗೊಡತಿದ್ದಿಲ್ಲಂತs. ನನಗ ಅಜ್ಜಾ ಕಲಿಸಿದಕೀ ತಾನs. ನನ್ನ ಚಹಾ-ಪಾಣೀ ಆತೇನಂತ ಯಾರರ ಕೇಳಿದ್ರೇನು ನೋಡು? ತಾನs ಹುಡಿಕಿಕೊಂಡು ಬಂದಳು, ತನ್ನ ಅಜ್ಜ್ಯಾದ ಕೂಸಿನ್ನ! ಗಿರಿಜಾ, ನಂದೂ-ನಿಂದೂ ಜಮಾಸಿಧಾಂಗ ಉಳದವರ

ಜೋಡೀ ಜಮಾಸೂದಿಲ್ಲ ನೋಡು. ನಾನು, ವರ್ಷದ ಕೂಸ ಇದ್ದಾಗ ಏನೋ ಮಾತಾ ಮಾಡೀದಿ. ಅದಕಂದಲ್ಲೇ ನಿನ್ನ ನೋಡೂತ್ಲೇ ಪುಕೀ ಬರತದ."

"ಬಾ ನಮ್ಮಪ್ಪಾ, ಹುಕೀ ಬಂದ ಕೈಲೇ ಚಾ ಬಗೀಹರಸ ಬಾ. ಆರಿ ಅಂಗಾರ ಆಗಲಿಕ್ಕ ಹತ್ತೇದ. ನನ್ನ ಮುಂದ ಕೂತು, ಅಳವಳ್ಳ ಸುದ್ದೀ ಮಾತಾಡಿಕೋತ ಚಹಾ ಕುಡಿಯೂದರಾಗಿನ ಮಜಾ, ನಿನಗ ನಾಕ ಮಂದ್ಯಾಗ ಬರೂದಿಲ್ಲಾ."

ಗಿರಿಜಾ-ಸುರ್‍ಯಾರಲ್ಲಿಯ ಸಲಿಗೆಯೇ ಅಷ್ಟು ಮಜೇಶೀರ ಇತ್ತು. ಗಿರಿಜಾನ ಮನೆಯ ದಿಡ್ಡಿಯಲ್ಲಿ ಒಂದು ಏಳು ಮಕ್ಕಳ ತಾಯಿಯ ಶಿಲಾಪ್ರತಿಮೆ ಇತ್ತು. ಅದು ಯಾವ ದೇವತೆಯೋ ಭಗವಂತನೇ ಬಲ್ಲ! ಆದರೂ ಅದಕ್ಕೆ ಎಣ್ಣೆ-ನೀರು ಆಗುತ್ತಿತ್ತು; ಹರಿದ್ರಾ-ಕುಂಕುಮವಾಗುತ್ತಿತ್ತು. ಗೋವಿಂದಭಟ್ಟ ಸಿಟ್ಟಿಗೆ ಬಂದಾಗ ಗಿರಿಜಾನ ವ್ಯಕ್ತಿವಿಲಾಸವಾದ ಸೂಲಗಿತ್ತಿ ಅಭಿದಾನ ಬಿಟ್ಟು,

"ಆ ಏಳ ಮಕ್ಕಳ ತಾಯೀ – ಗಿರಿಜಾ ಇದ್ದಾಳಲಾ"

ಎಂದು ಗರ್ಜಿಸುತ್ತಿದ್ದ. ವಾಡೆಯಲ್ಲಿ ಅವನ ಈ ಗರ್ಜನೆ ಪ್ರತಿಧ್ವನಿಸುತ್ತಿತ್ತು. ಉಳಿದವರಿಗೆ ಈ ಅಭಿದಾನ ಅಷ್ಟು ಅಗತ್ಯದ್ದೆನಿಸುತ್ತಿದ್ದಿಲ್ಲ. ಆದರೆ ಗಿರಿಜಾನ ತೊಡೆಯ ಮೇಲೆ ಆಡಿ ಬೆಳೆದ ಸುರ್‍ಯಾನಿಗೆ ಅದರಲ್ಲಿಯ ಮೋಜು ಹಿಡಿದಿತ್ತು. ಅವನೊಬ್ಬನೇ ಗಿರಿಜಾನಿಗೆ – ಅಗದೀ ಖುಷಿಯಲ್ಲಿ ಬಂದನೆಂದರೆ "ಏ ತಾ" (ಏಳು ಮಕ್ಕಳ ತಾಯಿಯ 'ಶೊರ್ಟ್ ಫಾರ್ಮ್') ಎಂದು ಅನ್ನುತ್ತಿದ್ದ. ಬಂಜೆಯಾಗಿ ಬಂದ ಗಿರಿಜಾ ಸಪ್ತ ಅಪತ್ಯದ ಫುಕ್ಕಟೆ ಅಭಿದಾನದಿಂದ ಖುಷಿಯಾಗುತ್ತಿದ್ದಳು.

ಸುರ್‍ಯಾನ ಜನ್ಮವೇಳೆಯಲ್ಲಿ ಸೋನಕ್ಕನಿಗೆ ತುಂಬ ತೊಂದರೆಯಾಯಿತು. ಸುರ್‍ಯಾ ಹೊಯ್-ಹಾಲಿನ ಮೇಲೆಯೇ ಬೆಳೆಯಬೇಕಾಯಿತು. ಸುರೇಶ ಒಂದು-ಒಂದೂವರೆ ವರುಷದವನಾಗುವ ತನಕ ಗಿರಿಜಾನ ರಕ್ಷೆಯಲ್ಲಿಯೇ ಬೆಳೆದ. ಗಿರಿಜಾ ಬಾಣಂತಿತನಕ್ಕೆ ಸಾಂಗಲಿಗೆ ಬಂದಾಕೆ, ಸೋನಕ್ಕನ ಕೂಡ ಮುಂಬೈ-ಪುಣೆಯ ಪ್ರಯಾಣ ಮಾಡಿ ಬಂದಿದ್ದಳು. ಆಗ ಅವಳ ಜೀವನಕ್ಕೆ ಸುರ್‍ಯಾ ಆಗಲದಂತೆ ಅಂಟಿಕೊಂಡುಬಿಟ್ಟಿದ್ದ.

"ಕಾಕಾ, 'ಏ ತಾ'ನ ಹೆಸರಲೇ ಎರಡ ಜಮೀನ ಮಾಡ್ಯಾರ. ಒಂದು ಮಜಬೂತ ಮನೀ ಮಾಡ್ಯಾರ. ವಿಶ್ಯಾ, ಅದು ಯಾರಿಗಾಗೂದಂತ ಮಾಡೀ? ನನ್ನ ಲಗ್ಗನದಾಗ ಇನಾಮೀ-ಪತ್ರಾ ಮಾಡಾಕಿದ್ದಾಳ ಗಿರಿಜಾ. ಸುರ್‍ಯಾನ್ಸ ಅದರ ಉಪಭೋಗಕ್ಕ ಏಕಮೇವ ಅಧಿಕಾರೀ ಅಂತ್ಸ ಕಾಜಗಾ ಮಾಡಾಕಿದ್ದಾಳ. ಹೌದ

ಅಲ್ಲೋ 'ಏ ತಾ'?"

ಗಿರಿಜಾನನ್ನು ಸುರ್ಯಾ ಸದಾ ಕೆಣಕುತ್ತಿದ್ದ.

"ಏಶ್ಯಾ. ನನ್ನ ಸಣ್ಣ ಯಜಮಾನಾ ಹ್ಯಾಂಗ ಠೀಕ ಟಿಪಕಾಸಿಕೊಂಡು ಕೂತಾನ ನೋಡು, ನನ್ನ ಆಸ್ತೀ ವ್ಯಾಲs? ಈ ಜವರಂದೇನು ರಿಣಾ (ಋಣ) ತಿಂದೀನ್ಯೇ ನಾ? ನನ್ನ ಹೊಲದ ಉತ್ಪನ್ನೆಲ್ಲಾ, ಪೈ-ಪಾವ ಆಣೇ ಎಣಿಸಿ, ಮಜಬೂತ ಆಗಿ ಪೆಟಿಗ್ಯಾಗ ಇಟ್ಟಿದ್ದೆ. ಹೆಗ್ಗಣ ಹತ್ತಿಧಾಂಗ ಹತ್ತಿ. ಅವನ್ನ ಎಬ್ಬಿಸಿದಾ. ನನಗ ನೌಕರೀ ಆಗಲಿ 'ಏ ತಾ', ನಿಂದೆಲ್ಲಾ ಬಡ್ತೀ ಸಕಟ ನಿಕಾಲ ಮಾಡತೀನಿ ಅಂತs ಹಾಡತಿದ್ದಾ. ನೌಕ್ರೀ ಆಗಿ ವರ್ಷ ಆತು. ನಾ ಏನು ಕುಡ್ಡ ಕವಡೀ ಕಂಡಿಲ್ಲಾ. ನಿನ್ನ ಹೆಸರಲೇ ಬ್ಯಾಂಕಿನ್ಯಾಗ ಇಡತೀನಿ, ಈ ಕಾಗದ ವ್ಯಾಲ ಬಟ್ಟ ಒತ್ತೂ ಅಂತs, ಹೆಬ್ಬಟ್ಟಿಗೆ ಮಸೀ ಹಚ್ಚಿ, ಬಿಳೀ ಕಾಗದಾ ಕರೀ ಮಾಡಕೊಂಡು ಹೋದಾ. ಏನ ಹೊಲಾ-ಮನೀ ತನ್ನ ಹೆಸರಲೇ ಮಾಡಕೊಂಡನೋ ಏನೋ ಯಾರಿಗಿ ಠಾವಿಕಿ? ಕಾಕಾ-ಸೋನಾಗ ಹೇಳಬ್ಯಾಡಂತ ತಾಕೀತ ಬ್ಯಾರೇ ಮಾಡ್ಯಾನ. ಅವನ ಲಗ್ಗಂದಾಗ ಹುಂಡಾನರs ಬರಲಿ. ವಸೂಲ ಮಾಡದs ಬಿಡತೀನೇನು ನೋಡು. 'ಏ ತಾ'ನ ಕೈ ತೋರಸ್ತೀನಿ."

ಗಿರಿಜಾ ಕೈ ತೋರಿಸಲಿಲ್ಲ. ಸುರ್ಯಾ ಅದನ್ನು ನೋಡಲಿಲ್ಲ. ಅವಳ ಧಮಕಿಯಲ್ಲಿಯ ವಾತ್ಸಲ್ಯದಾಳ ಸುರ್ಯಾನಿಗೆ ಗೊತ್ತಿತ್ತು. ಸುರ್ಯಾನ ಸಲಿಗೆಯ ಆಳ ಗಿರಿಜಾನಿಗೆ ವಿದಿತವಿತ್ತು. ಅಂತೇ ಇಬ್ಬರದೂ ಅಷ್ಟು ಜಮಾಸಿತ್ತು. ಪುಣೆಗೆ ಬಂದ ಮೇಲಂತೂ ಅದಕ್ಕೆ ಮಹಾಪೂರವೇ ಬಂದಿತ್ತು.

ಸುರ್ಯಾ ಅರಿವೆ ಬದಲಿಸಿ, ಚಹ ಕುಡಿಯಲೆಂದು ಹೋದ. ನಾನು-ಸೋನಕ್ಕ, ಬಸವಂತಿ ಮಾತಾಡುತ್ತ ಕುಳಿತೆವು.

ರಾತ್ರಿಯ ಎಂಟಕ್ಕೆ ಬಸವಂತಿಯನ್ನು ಕಳಿಸಲಿಕ್ಕೆಂದು ನಾನು-ಸುರ್ಯಾ ಇಬ್ಬರೂ ಹೋದೆವು. ನಾನು ರಾತ್ರಿಯ ಮುಕ್ಕಾಮನ್ನು ಬಸವಂತಿಯಲ್ಲೇ ಹಾಕಿದೆ.

ಊಟದ ಪಂಕ್ತಿಗೆ ದಾದಲ್ಯಾ ಉಳಿಯಲಿಲ್ಲವೆಂದು ಕಾಕಾ ಚಡಪಡಿಸಿದರಂತೆ. ದಾದಲ್ಯಾ ಉಣ್ಣುವದನ್ನು ನೋಡಿದರೆ ಕಾಕಾನಿಗೆ ಹುಕೀ ಬಂದುಬಿಡುತ್ತದೆ. ನನ್ನಷ್ಟು ವಯಸ್ಸಿನವರಿದ್ದಾಗ ತಾವು ತೋರಿಸಿದ ಕಂಠತ್ರಾಣದ ಮಹತಿಯನ್ನು ಸಾರುತ್ತಾರೆ. ಗೋವಿಂದಭಟ್ಟ ಈ ಬಾಬತ್ತಿನಲ್ಲಿ ತೀರಾ ಬಾದ ಗಿರಾಕಿ ಎಂದು

ಹೇಳುತ್ತಾರೆ. ದಾದಲ್ಯಾನ ಹುಷಾರಿಯ ಬಗ್ಗೆ ಅವರಿಗೆ ಇರುವ ಅಭಿಮಾನ ಅವನ ಕಂಠತ್ರಾಣದಲ್ಲಿಯ ಸಾಮರ್ಥ್ಯದ ಬಗ್ಗೆಯೂ ಇದೆ.

"ದಾದಲ್ಯಾನ ಹಾಂಗs ಕಲ್ಲ ತಿಂದೂ ಕರಗಿಸಿಗೊಂಡೇನು ಅನ್ನೊ ಶಕ್ತೀ ಬೇಕು. ನಮ್ಮ ವಿಶ್ಯಾ-ಸುರ್ಯಾ ಆಗದೀ ಬಾದಾ. ಒಂದ ಛಕ್ಕರ‍್ಯಾಗs ಲಟಪಟಾ ಸುರೂ ಮಾಡತಾವ."
ಎಂದು ತಮ್ಮ ನೇಹಮಿಯ ಶರಾ ಹೊಡೆಯುತ್ತಾರೆ. ಇಂದು ದಾದಲ್ಯಾ ಅವರ ತಾರೀಫಿನಿಂದ ಪಾರಾಗಿದ್ದ. ಅಂತೇ ಅವರಿಗೆ ಹಳಹಳಿಯಾಗಿರಬೇಕು.

ಬಸವಂತಿಯ ಕಡೆಗೆ ಸುರೇಶ ಮೇಲಿಂದ ಮೇಲೆ ಹೋಗಿ ಬರುತ್ತಿದ್ದ. ಇದು ಶ್ಯಾಮರಾಯನಿಗೆ ಗೊತ್ತಾಗಿದ್ದರೆ ಆಗುವ ಹಾನಿ ಏನೂ ಇರಲಿಲ್ಲ. ಅವನಾದರೂ ಯಾಕೆ ಎಂದು ಕೇಳುವದೂ ಶಕ್ಯವಿರಲಿಲ್ಲ. ಶ್ಯಾಮರಾಯನಿಗೆ ಸುರೇಶ ಹತ್ತಿರ ಬಂದಷ್ಟು – ಹತ್ತಿರವಾದಷ್ಟು ಬೇಕೇಬೇಕಾಗಿತ್ತು. ಅವನು ತನ್ನ ವ್ಯವಸಾಯದ ವೃದ್ಧಿ-ವಿಕಾಸಕ್ಕೆ ಸುರೇಶನನ್ನು ಹೂಣಿಸುವ ಹಂಚಿಕೆ ಹಾಕಿದ್ದ. ಸೋನಕ್ಕನ ಕೂಡ ಅವನದು ಬಿಘಡಾಯಿಸಿರದಿದ್ದರೆ, ಎಲ್ಲವೂ ಬಂಗಾರವೇ ಆಗಬಹುದಾಗಿತ್ತು. ಅವನು ತಾಸೇ, ನಿಂತ ಕಾಲ ಮೇಲೆ ಶಕೂನನ್ನು ಸುರೇಶನಿಗೆ ತಂದುಕೊಳ್ಳಬಹುದಾಗಿತ್ತು.ಸಾಹೇಬರ ಕೂಡ ಬೀಗತನದ ಸಂಬಂಧ ಜೋಡಿಸಿಕೊಳ್ಳಬಹುದಾಗಿತ್ತು. ಈಗ ಅವನಿಗೆ ಈ ನಾತೆಯು ಅಮೃತ, ವಿಷದಂತೆ ಜಾಲೀಮಾಗಿ ಬಾಧಿಸುತ್ತಿತ್ತು. ಸಂಬಂಧ ಕನಸು-ಮನಸಿನಲ್ಲಿಯೂ ಬೇಡವಾಗಿತ್ತು. ಅವನು ದಿನ ಹಾಕುತ್ತ ನಡೆದ ಕಾಯಕ ನಮಗೂ ಇಂದಿನ ಪರಿಸ್ಥಿತಿಯಲ್ಲಿ ಅನುಕೂಲವೇ ಆಯಿತು. ಸುರೇಶ ಇನ್ನಷ್ಟು ಸರಿದು, ಶ್ಯಾಮರಾಯನಿಗೆ, ತೋರಿಕೆಗಾದರೂ ಹತ್ತುಗಡೆಯ ಸಾಮಿಪ್ಯ ಬಂದಿರುವ ಆಭಾಸ ಮೂಡಿಸಿದ್ದರೆ ಸಾಕಾಗಿತ್ತು.

ಶ್ಯಾಮರಾಯನ ಕೆಲಸದ ಭಾರವನ್ನು ಹೊರುವ ವಿಷಯ ತನಗೆ ಪಟಾಯಿಸಿದೆ, ಆ ಬಗ್ಗೆ ವಿಚಾರ ನಡಿಸಿದ್ದೇನೆ – ಖಚಿತ ಅಭಿಪ್ರಾಯ ತಿಳಿಸುತ್ತೇನೆ, ಎಂದು ಬರಿಯ ಛೂಬಾಣ ಬಿಟ್ಟು, ಶ್ಯಾಮರಾಯನನ್ನು ಉತ್ಸುಕನನ್ನಾಗಿ ಮಾಡಿದ್ದರೂ ನಡೆಯುತ್ತಿತ್ತು. ಇದರಿಂದ ಶ್ಯಾಮರಾಯನಿಗೆ ಊರ ಮೇಲಿನ ಧ್ಯಾಸ ಹಾರುತ್ತಿತ್ತು. ಅಲ್ಲಿ ಸ್ಥಾಯಿಯಾಗಿ ನಿಂತು ಆಸ್ತಿ-ಪಾಸ್ತಿಯನ್ನು ಬೆಳೆಸುವದರ ಮೇಲೆ ಅವನಿಗೆ ಅಷ್ಟು ಆಸಕ್ತಿ ಉಳಿಯುತ್ತಿರಲಿಲ್ಲ. ಊರಲ್ಲಿಯ ಇಂದಿನ ಅವನ ವಾಸ್ತವ್ಯ ಗಾಳಿಯಾಡದ ಮನೆಯಲ್ಲಿ ಹೊಗೆ ಅಡರಿದಂತಿತ್ತು. ರಾವಜೀಕಾಕಾನ ಗಾಳಿ ಬೀಸಿ

ಬಂದು, ಅವರು ಪಾಡೆಯ ತಮ್ಮ ನಿರಂತರ ಪೀಠದಲ್ಲಿ ಸ್ಥಾಯಿಯಾದರೆ, ಈ ಪೊಗೆ ಹೇಳಹೆಸರಿಲ್ಲದೆ ಕರಗುತ್ತಿತ್ತು. ಈ ಬಗ್ಗೆ ಅವನಿಗೂ ಖಾತ್ರೀ ಇತ್ತು. ರಾವಜೀಕಾಕಾ ಊರಿಗೆ ಬಂದರೆ – ಅವನು ತನ್ನ ಕಾಮಗಿರಿಯ ದೇಖರಖಿಯ ದೃಷ್ಟಿಯಿಂದ ಬೆಳಗಾಂವಿಯಲ್ಲಿ ಹಲ್ಲೀವಸ್ತೀ – ಪುಣೆಯಲ್ಲಿ ಕಾಯಂ ತರೀಕ ಬಿಡಾರ ನಿರ್ಮಿಸಿಕೊಳ್ಳಲಿದ್ದ. ಸುರೇಶ ತನ್ನ ಮಾತು ನಡೆಸಿದ – ತನ್ನ ಕಾಮಗಿರಿಯ ಭಾರ ವಹಿಸಿದ – ಎಲ್ಲವೂ ಸುರಳೀತವಾಗಿ ಸಾಗೀತು ಎಂಬ ಧೈರ್ಯ ಅವನಿಗೆ ಬಂದರೆ – ಅವನೂ ಸುರೇಶನ ಮಾತಿಗೆ ನಕಾರ ಹೇಳದೆ – ಹೇಳಬಾರದು – ಎಂಬ ಭಾವನೆ ಕದಾಚಿತ್--ಕ್ವಚಿತ್–ಶ್ಯಾಮರಾಯನಲ್ಲಿ ಸುಳಿದರೆ... ಅವನು ವಿನಮ್ರನಾಗಿ, ಕಾಕಾ-ಸೋನಕ್ಕ ಅವರ ಕ್ಷಮೆಯನ್ನು ಯಾಚಿಸುವ ಸಂಭವವಿತ್ತು. ಇದು ಅಶಕ್ಯ ವೆಂದರೂ ಅಪೇಕ್ಷಿತವಾಗಿತ್ತು; ಅಪೇಕ್ಷಾರ್ಹವಾಗಿತ್ತು. ಈ ಅಪೇಕ್ಷಾಪೂರ್ತಿಯ ವಿಷಯದಲ್ಲಿ ದಾದಲ್ಯಾನಿಗೆ ಇನ್ನೂ ಅದಮನೀಯ ವಿಶ್ವಾಸವಿತ್ತು. ಕಾರಣ, ಅವನ ಕೈಯಲ್ಲಿ – ಬಿಗಿದ ಮುಟಿಗೆಯಲ್ಲಿ ಶ್ಯಾಮರಾಯನ ಜೀವ-ನಳಿಯಂತಿದ್ದ ಪತ್ರವಿತ್ತು. ಅದರ ಬಲದ ಮೇಲಿಂದ ಅವನು ಶ್ಯಾಮರಾಯನನ್ನು ಬದುಕಿ ಸುವ – ಮುಣುಗಿಸುವ ಸಾಮರ್ಥ್ಯ ಪಡೆದಿದ್ದ. ವಿಶ್ವಾಸನ ಪರೀಕ್ಷೆ ಮುಗಿದ ದಿನವೇ ಅವನು ಶ್ಯಾಮರಾಯನನ್ನು ಗಾಠಾಯಿಸಿ, ಸುರೇಶ-ಶಕೂನ ಸಂಬಂಧಕ್ಕೆ ಸಮ್ಮತಿ ಕೊಡಲು, ಕಾಕಾ-ಸೋನಕ್ಕ ಅವರ ಕ್ಷಮೆಯನ್ನು ಯಾಚಿಸಲು ಆಹ್ವಾನ ಕೊಡಲಿದ್ದ. ಆರು ತಿಂಗಳು ಅದರ ಅವಸರವಿರಲಿಲ್ಲ. ಈ ಸಂಬಂಧ ಜೋಡಿಕೆಯ ಬಾಬತ್ತಿನಲ್ಲಿ ದಾದಲ್ಯಾ ಆರು ತಿಂಗಳ ಅವಧಿ ಕೇಳಿದರೆ, ಶ್ಯಾಮರಾಯ ಆರು ವರುಷದ ಅವಧಿ ಕೊಡಲೂ ಸಿದ್ಧನಾಗುತ್ತಿದ್ದ. ಅವನು ಈ ಆರು ತಿಂಗಳ ಅವಧಿ ಯಲ್ಲಿ ಯಾವ ಕಿಲಾಪ-ಕಂತ್ರಾಟ ಮಾಡದೆ ತನ್ನ ಮಟ್ಟಿಗೆ ತಾನಿದ್ದರೆ ಅಷ್ಟೇ ಸಾಕಾ ಗಿತ್ತು. ಅವನು ಊರು – ಬೆಳಗಾಂವಿ ಬಿಟ್ಟು, ಪುಣೆಗೆ ಬಂದು ಧ್ವಜ ಹಾಕಿದರೂ ಸಾಕೆಂದು ದಾದಲ್ಯಾ ಧೇನಿಸಿದ.

16726

ಬಸವಂತಿ ಈಗ ಅಷ್ಟಿಷ್ಟು ಸುರೇಶನನ್ನು ತಿದ್ದಿ-ತೀಡಿದ ವಿಷಯ ಶ್ಯಾಮ ರಾಯನಿಗೆ ಅವಗತವಾಗಿತ್ತು. ಸುರೇಶ ಮೇಲಿಂದ ಮೇಲೆ ಬಂಗಲೆಗೆ ಬರುವ – ತನ್ನ ತಬ್ಬೇತ್, ಕಾಮಗಿರಿಯ ವಿಷಯ ವಿಚಾರಿಸುತ್ತಿರುವ ಬಾತಮಿ, ಬಸವಂತಿಯ ಮುಖಾಂತರ ಅವನಿಗೆ ವಿದಿತವಾಗಿತ್ತು. ಶ್ಯಾಮರಾಯನೂ ಒಂದೆರಡು ಸಲ, ಸುರೇಶನ ಆಫೀಸಿಗೆ ಹೋಗಿ ಅವನಿಗೆ ಭೆಟ್ಟಿಯಾಗಿ, ಕುಶಾಲಿ ವಿಚಾರಿಸಿದ್ದ.

ತನ್ನ ವ್ಯಾಪಕ ಕಾಮಗಿರಿಯ ಕಥನ ಮಾಡಿದ್ದ. ಸಹಜವಾಗಿ, ಸತೀಶ-ಕಿಶೋರರ ಅಭ್ಯಾಸದ ಮಾತು ತೆಗೆದಿದ್ದ. ಸುರೇಶನ ವಿಶ್ವಾಸವನ್ನು ಸಂಪಾದಿಸುವ ಜೇತಿಸಿಂದ ಕಾಕಾ ಅವರ ಬಗ್ಗೆ, ಗಿರಿಜಾ-ರಮಾಕಕ್ಕಿಯರ ಬಗ್ಗೆ ಕೇಳಿದ್ದ. ಸುರೇಶನೂ ಮುದ್ದಾಂ ಅವನಿಗೆ ಸಾಹೇಬರ, ರಂಗಕ್ಕನ, ಶಕೂನ ಬಗ್ಗೆ ಕೇಳಿದ್ದ. ಶ್ಯಾಮರಾಯನಿಗೆ ಈ ಜೋಜು ಔಡಲೆಣ್ಣೆಯಾದರೂ, ಅವನು ಸರಬತ್ ಕುಡಿದವರ ಆವಿರ್ಭಾವದಿಂದ ಸಾಹೇಬ ಆ್ಯಂಡ ಕಂಪನಿಯ ಕುಶಾಲೀ ತಿಳಿಸಿದ್ದ.

"ಸುರ್ಯಾ, ಶಕೂಂದು ಏನ ಮಾಡಿದ್ಯೆಪಾ? ಭಾರೀ ಗಂಟ ಬಿದ್ದಾರ"

ಎಂದು ಸಾಹೇಬರು ಗಂಟುಬಿದ್ದಿರದಿದ್ದರೂ, ಆ ಕಗ್ಗಂಟನ್ನು ತಾನೇ ಜೋಡಿಸಿ ಕೊಂಡು ಕೇಳಿದ್ದ. ಸುರೇಶ ತೀರ ನಿರ್ಲಿಪ್ತನಂತೆ —

"ನಾ ಅಷ್ಟೇನು 'ಸೀರಿಯಸ್' ಆಗಿ ಆ ವಿಚಾರ ಮಾಡಿಲ್ಲ ದಾದಾ. ಅಂಥಾ ದೇನು ಅವಸರ ಈಗs? ನೋಡಲಿಕ್ಕೆ ಬಂದೀತು ಸಾಪಕಾಶ."

ಎಂದು ಸಾವಕಾಶವಾಗಿ ಎಳೆದೆಳೆದು ಹೇಳಿ, ಶ್ಯಾಮರಾಯನನ್ನು, ಸೋಲಿಗರು ಆನೆಯನ್ನು ಕುಳಿಗೆ ಎಳೆದು ತರುವಂತೆ ತಂದಿದ್ದ.

ಸುರೇಶನ ಮಾತಿನಲ್ಲಿಯ ಮಾರ್ದವತೆಯಿಂದ ಶ್ಯಾಮರಾಯ ಏಕದಮ್ ಬೇಭಾನನಾಗದಿದ್ದರೂ ಖಚಿತವಾಗಿಯೂ ಖುಷಿಯಾಗಿದ್ದ ಕಾಯಾಸವನ್ನು ಬಸ ವಂತಿಯು ಕಟ್ಟಿದ್ದಳು. ತಾನು ಪುಣೆಯಲ್ಲಿ ನಿಂತು ಖಾಲೀ ಮೆಯ್ಯುತ್ತಿರುವದಿಲ್ಲ ವೆಂಬ ಭಾಸವನ್ನು ಅವನಿಗೆ ಮಾಡಿಕೊಟ್ಟಿದ್ದಳು. ಶ್ಯಾಮರಾಯ ಪುಣೆಯಲ್ಲಿರು ವಾಗ, ಒಂದು ಸಲ, ಸುರೇಶನನ್ನು ಮುದ್ದಾಂ ಬಂಗಲೆಗೆ ಬರಮಾಡಿಕೊಂಡು, ತನ್ನ ವಚಕದಲ್ಲಿ ಸುರೇಶನ ಮಿಕವನ್ನು ಬಂದೋಬಸ್ತಾಗಿ ಹಿಡಿದ ನಿದರ್ಶನವನ್ನು ಶ್ಯಾಮರಾಯನಿಗೇ ಮಾಡಿಕೊಟ್ಟಿದ್ದಳು. ಬಸವಂತಿ ತನ್ನ ವಿಶ್ವಾಸವನ್ನು ಕಳೆದು ಕೊಂಡಳೆಂದು ತಾನು ಭಾವಿಸಿದ್ದು ತಪ್ಪಾಗಿತ್ತೆಂದು, ಶ್ಯಾಮರಾಯನೇ ಖುದ್ದಾಗಿ ಅವಳಿಗೆ ಹೇಳಿದನಂತೆ. ಈ ಖುಷಿಯಲ್ಲಿ ಅವಳಿಗೆ ಒಂದು ಗುಂಡಿನ-ಟಿಕ್ಕೆ ಮಾಡಿಸ ಲೆಂದು ಬೇಕಾದಷ್ಟು ವಿನವಿಸಿಕೊಂಡರೂ ಅವಳು ಒಪ್ಪದೆ —

"ಸುರೇಶನ ಮದಿವ್ಯಾಗ ನನ್ನ ಭಂಗಾರದಲೇ ಮಾಡಸೀರ್ಯಂತ; ಈಗೇನು ಕಾರ್ಯಾನs ಕಾರಣs? ಏನೈತಿ? ರೊಕ್ಕ ಹೆಚ್ಚ ಆಗಿದ್ದರ ತರ್ರಿ ಇಕಡೆ. ಹ್ಯಾಂಗ ಜ್ವಾಪಾನ ಮಾಡೂದು ಅನ್ನೂದನ್ನ ಕಲತೀರ್ಯಂತ ನನ್ನ ಕಡಿಂದ."

ಎಂದು ಹೇಳಿ ಶ್ಯಾಮರಾಯನ ವಿನಂತಿಯನ್ನು ವಿನಮ್ರವಾಗಿ ಅಮಾನ್ಯ ಮಾಡಿ.

ಅವನ ವಿಶ್ವಾಸದ ಅಟ್ಟಾಲಿಕೆಯು ಹತ್ತು ಮೆಟ್ಟಿಲುಗಳನ್ನು ಏಕದಮ್ ಏರಿದ್ದಳು.

ಬಸವಂತಿ ಖಾತ್ರೀಯಿಂದ ಸುರೇಶನನ್ನು ಪಳಗಿಸಿ ತನ್ನ ಅಂಕಿತದಲ್ಲಿ ತರುವವರಲ್ಲಿ ಸಂದೇಹವಿಲ್ಲವೆಂದು ಶ್ಯಾಮರಾಯ ಬಲವಾಗಿ ನಂಬಿರಬೇಕು. ಅವನ ಈ ನಂಬಿಕೆಯು ಭ್ರಮೆಯು ದಟ್ಟ ಕಣ್ಣ ಪರೆ ಬಂದು, ಗಿರಾಕಿ ಅನಾಮತ್ತಾಗಿ ಬಲೆಯ ಆಳವಿನಲ್ಲಿ ಬಂದ ಖಾತ್ರೀ ಬಸವಂತಿಗೆ ಬಂದಿತ್ತು.

"ನಿನ್ನ ಜೋಡೀ ದಾದಲ್ಯಾ ಒಬ್ಬ ಕೂಡಿದ್ದಾ ಅಂದರs ಬಸವಂತೀ, ಸುರ್‍ಯಾ ಹಾಂ-ಹಾಂ. ಅನ್ನೂದರಾಗ ಕೈಯಾಗ ಸಿಕ್ಕಬಿಡತಿದ್ದಾ. ಅವನ್ನಿಷ್ಟು ಬೆಳಗಾಂವೀ ಆಫೀಸಿನ ಮಾಲಕನ್ನ ಮಾಡಿ, ನಿಶ್ಚಿಂತೀಯಿಂದ ನಿನ್ನ ಜೋಡೀ ಪುಣೇದಾಗ ನಿಂತಬಿಡತಿದ್ದೆ ನೋಡು. ದಾದಲ್ಯಾ ನಿನ್ನ ಪರೇಕ ಅಂಜಿ ಇಲ್ಲೆ ನಿಂದರಲಿಕ್ಕೆ ಒಲ್ಲೆ ಅಂದಾ. ಬಸವಂತಿ ಏನು ಅಸನರಿ ಹೆಣ್ಣ ಅಲ್ಲಾ ದಾದಲ್ಯಾ, ನೀ ಏನು ಅದರ ಕಾಳಜೀ ಮಾಡಬ್ಯಾಡಾ ಅಂತs ಚಾಲವರದೆ. ಧೈರ್‍ಯಾ ಆಗಲಿಲ್ಲ ಅಂವಗ: ನಿನ್ನ ಚಮಕs ಹಾಂಗ ಅದs ಬಸವಂತೀ. ನನಗೂ ಅಂಜಿಕಿ ಬರತದ ನಿನ್ನ ಸನೇಕ ಬರಬೇಕಂದರ. ವಯಸ್ಸಾದ ಇಮನೇ-ವರಾ – ಎಳೀ ಹರೇದ ಹೆಣತೀ ಸಂಬಂಧ ಧಾಂಗ ಆಗೇದ ನಂದೂ – ನಿಂದೂ ಜೋಡೀ ಅಂದರ. ಸಣ್ಣ ಹೇಣತೀ ಮ್ಯಾಲ ಜೀವ ಭಾಳಾ ಮುದುಕ ಗಂಡಂದರಿಗೆ."

ಶ್ಯಾಮರಾಯನಿಗೆ ತನ್ನ-ಬಸವಂತಿಯ ನಡುವಿನ ವಯಸ್ಸಿನ ಅವಳ, ಉಕ್ಕುವ ತಾರುಣ್ಯದ – ಹರೆಯದ, ದೀಪ್ತಿಮಂತ ಚೆಲುವಿಕೆಯ, ತನ್ನ ಇಳಿ ವಯಸ್ಸಿನ – ಗಳಿತೋತ್ಸಾಹದ ಕಲ್ಪನೆ ಬಂದೇ ಈ ರೀತಿಯಾಗಿ ಆಡಿರಬೇಕು. ಬಸವಂತಿ ತನ್ನಲ್ಲಿಯ ಹರೆ, ಉತ್ಸಾಹ, ಹಮುಹಮಿಕೆಗೆ ಒಲಿದು ಬಂದಿರದೆ, ಕೇವಲ ತನ್ನ ಕುಬೇರ-ಸಂಪತ್ತಿಗೆ ಆಕರ್ಷಿತಳಾಗಿ ಬಂದಿದ್ದಾಳೆಂಬ ಕಲ್ಪನೆ ಈ ಮುಂಚೆ ಶ್ಯಾಮರಾಯನಿಗೆ ಬಂದು ಹೋಗಿತ್ತು. ಆ ಸಂಪತ್ತಿನಲ್ಲಿಯ ಒಂದು ತುಕಡಿಯಷ್ಟು ಭಾಗವನ್ನು ಒಗೆದು ಬಸವಂತಿಯ ಮೈಯನ್ನು ಖರೀದಿ ಮಾಡಿದ್ದ ಆಢ್ಯತೆ ಅವನಿಗೆ ಬಂದಿತ್ತು. ಮಾಲ್ಕೀ ಹಕ್ಕನ್ನು ಮನಬಂದಂತೆ ಭೋಗಿಸುವ ಜಾಗೀರಿ ತನಗಿರುವ ಧೈರ್ಯವಿತ್ತು. ಆ ಧೈರ್ಯದ ಬಲದ ಮೇಲೆ ಅವನು ಧಿಂಗಣ ಗುಣಿತ ಹಾಕುವ ಯೋಚನೆಯನ್ನು ಮಾಡಿರಬೇಕು. ಆದರೆ ಬಸವಂತಿ ಬೀದಿಯ ಬಸವಿಯಂತೆ ಬರದೆ ವಾಸವದತ್ತೆಯಂತೆ ಬಂದು ಕಣ್ಣು ಕುಕ್ಕಿಸಿದ್ದರಿಂದ,ಅವನ ಆ ಆಮಿಷ, ಪ್ರಲೋಭ, ಕಾಯದಿಚ್ಛೆ ಅಪೂರ್ತವಾಗಿಯೇ ಉಳಿಯಿತೋ ಏನೋ?

ಒಮ್ಮೆ ಧೈರ್ಯಮಾಡಿ, ಬಸವಂತಿ ಸಿಟ್ಟಿಗೆ ಬರದಂತೆ ಆಣೆ-ಸೂರೆ ಹಾಕಿ, ಖಟ್ಟಿಗೆ ಹಚ್ಚಿ ಕೇಳಿಯೇಬಿಟ್ಟಿದ್ದೆ. ಬಸವಂತಿ ಅದಕ್ಕೆ ತನ್ನ ಅವ್ಯಾಜ-ಮನೋಹರ-ನಗೆಯನ್ನು ಅರಳಿಸಿ —

"ಯಾಕ ದಾದಲ್ಯಾ, ಭಾಳ ಭಾಳ ಕೇಳಾಕ ಹತ್ತೀ. ನಿಂದೇನರಽ ಮನಸ್ಸ ಕುಂತೈತೇನು ನನ್ನ ಮ್ಯಾಗ? ಸಣ್ಣಾವ ಇದ್ದಾಗನ್ಽ ಕಣ್ಣ ಹೊಡದಿದ್ದಿ. ಈಗ, ಬಸವಂತಿ ಕೈಯಾಗನ್ಽ ಸಿಕ್ಕಾಳ, ಎಳಕೋಬಾರದ್ಯಾಕ ಅನೂ ಇಚಾರ ಬಂದೈತೇನು? ಹಾಗ ಇದ್ದರ ಹೇಳು. ಇಂದಽ ಅವರಿಗಿ ಸೋಡಚೀಟೀ ಕುಡತೀನಿ. ದಾದಲ್ಯಾ, ಇವರ್ನ ಕೂಡಾಗಽ ಠಾಂವಿಕಿತ್ತು; ನಂದೂ ಎಮ್ಮೀ ಯಾಪಾರ ಆಗೂದಂತ. ಸಾದಾ ಪಟಾಸಿ ಯಾಪಾರ ಆಗೂದು ಬ್ಯಾರೇ. ಕಟಕರಿಗೆ ಎಮ್ಮೀ ಹಚ್ಚೂದು ಬ್ಯಾರೇ. ನನಗ ತಾಂವ ಇರಲಿಲ್ಲಂತ ಕಟಕರ ಅಂಗಳದಾಗ ಬಂದ ನಿಂತನಿ. ಕಟಕರಂವಗ ಹಿಂಡೂ ಎಮ್ಮಿನೂ ಆಟಽ ಹಾರೂ ಕ್ವಾಣನೂ ಆಟಽ. ಮೈ-ಕೈ ಮುಟ್ಟಿ ನೋಡತಾನು, ಖಂಡಾ-ಮಾಸಾ ಹೊಂಟೀತಿಲ್ಲೋ ಅಂತಽ. ಹಾಗಾತು ನಂದು. ಬಸವಂತೀ ಮೈ, ಆಕೀ ಬಣ್ಣಾ ಆಟಽ ಕಂಡಿತು ಇವರಿಗೆ. ತಾನಽ ಮನೀ ಬಾಕಲಿಗೆ ಬಂದೈತಿ ಎಮ್ಮಿ. ಜರಾ ಮೇದು ಸಾದ ಆಗಲೀ ಅಂತಽ ಸಡ್ಲ ಬಿಟ್ಟರು. ಸಡ್ಲ ಬಿಡಾಗ ಜರಾ ತಪ್ಪ ಮಾಡಿದ್ದರು. ಸೋಸಕ್ಕವರಿಗಿ ಜಡ್ಡ ಜಡಾಸೈತಿ. ಹುಡಗೂರ್ನ ನೋಡಕೊಳ್ಳಾಕ ಯಾರರಽ ವಿಶ್ವಾಸದವರು ಬೇಕು. ಬಸವಂತಿ ಈ ಕೆಲಸಕ್ಕ ನೆಟ್ಟಗಿದ್ದಾಳಂತಽ ಅವರಽ ಹೇಳಿದ್ದರು. ಹಿಂದಾಗಿಡಿಸಿ ಬಣ್ಣಾನಽ ಬದ್ಲಾಸಿದರು. ನನ್ನ ಕಾಗೀ ಕಣ್ಣಿಗಿ ಅವರ ಬದಲಾಸಿದ ಬಣ್ಣ ಬಿತ್ತು. ಅವರ ಸುರೂಪ ತಿಳೀತು. ಆವರ ಜೋಡೀ ಜೀಂವಾ-ಮನಸ್ಸು ಹ್ಯಾಗ ಬೆರತೀತ ಹೇಳ ದಾದಲ್ಯಾ? ಜಗ್ಗಿದರ ಯಾಕ ಅಲ್ಲಿಲ್ಲಾ. ಹಿಡಕಿದರ ಬಿಡರಿ ಅಲ್ಲಿಲ್ಲಾ. ಅವರಿಗೆ, ನಾ ಭಾರೀ ಸಾದ ಆದ್ನೀ ಅಂತ ಅನಿಸಿರಬೇಕು. ನಾನು ಮನಸ ಕೊಂದು ತೊಗಲ ಮಾರಿದ್ದು ಅವರಿಗೆ ಹೊಳೀನಽ ಇಲ್ಲಾಽ. ತಿಳಿಸಾಕ ರಗಽಡ ಧಡಪಡಿಸಿದ್ನಿ. ಅವರಿಗೆ ನನ್ನ ಮನಸಿಂದು ಅಗತ್ಯನಽ ಇರಲಿಲ್ಲಾ. ಒಂದ ಹೆಣ್ಣ ಕಟಗೊಂಡು, ಮಾಡಿಕೊಂಡ ಹೇಣತೀ ಎದೀ ಮ್ಯಾಗ ನಡಿಯೂದಾಟಽ ಜಿದ್ದ ಇತ್ತು. ಹಾಗಂತ ಬಾಯಿಲೇನೂ ಅಂದ ತೋರಸ್ತಾರ. ಹೊಗದೆಶಿ ಇಲ್ಲದಕ ತೊಗಲ ಮಾರಿದ್ನೆಲಾ ಅಂತಽ ಸಂಕಟಾಕ್ಕೈತಿ. ಏನ ಸಂಕಟಾಗಿ ಏನ ಮಾಡೂದೈತಿ? ತಿಪ್ಪಿ ಅನೂದು ಗೊತ್ತ ಇದ್ದೂ ನಡದ ಬಂದೀನಿ. ಅಂಗಾಲಿಗೆ ಹೇಸಿಕಿ ಹತ್ತಿದರ ಹಳಹಳಸಬೇಕ ಯಾಕಽ? ಹತ್ತಿದಾಟು

ಹಚ್ಚಿಹೋತು. ಇನ್ನ ಮುಂದನರ್ರ ನೋಡಿ ಕಾಲ ಇಡೂಣಂತ ಜರಾ ಜಪ್ಪಿಸಿ ಕಾಲ ಹಾಕಾಕ ಹತ್ತೇನಿ. ಅವರಿಗೂ ಜರಾ ಇದರ ಧಾಸ್ತೀ ಕುಘ್ಘಾಂಗ ಕಾಣತೈತಿ. ಘೂರ ಘೂರನ್ರ ಇರತಾರ್ರ."

ತನ್ನ-ಶ್ಯಾಮರಾಯರ ದೈಹಿಕ ಸಂಬಂಧ ಬಂದ ವಿಷಯವನ್ನು ಪರ್ಯಾಯ ವಾಗಿ ಬಸವಂತಿ ವಿವರಿಸಿದ್ದಳು. ಜಾರಿದ ಕಾಲನ್ನು ಎತ್ತಿ ಜಾಗರೂಕತೆಯಿಂದ ನೇರ ದಾರಿಯಲ್ಲಿ ನಡೆಯುತ್ತಿದ್ದುದನ್ನು ಹೇಳಿದ್ದಳು. ಅದು ಮಾತ್ರ ಸತ್ಯವಾಗಿತ್ತು. ಶ್ಯಾಮರಾಯನ ಭಾನಗಡಿಗೆ–ಅವನು ಸೋನಕ್ಕನನ್ನು ಒಗೆತನಗೇಡಿ ಮಾಡಿದ ಪ್ರಕರಣಕ್ಕೆ ಸುರಂಗ ಹಚ್ಚಿ, ಅದನ್ನು ಸ್ಫೋಟ ಮಾಡಿದ ದಿನದಿಂದ, ಬಸವಂತಿ ಶ್ಯಾಮರಾಯನಿಂದ ಮನಸಾ ದೂರವಾಗಿಬಿಟ್ಟಿದ್ದಳು. ಅವನನ್ನು ನೀರಲ್ಲಿ ನೋಡ ತೊಡಗಿದ್ದಳು.

ಶ್ಯಾಮರಾಯನ ಕಳೆದುಕೊಂಡ ವಿಶ್ವಾಸವನ್ನು ಮರಳಿ ಸಂಪಾದಿಸುವದಕ್ಕೆ ಅವಳು ಸುರೇಶನನ್ನು ತಿದ್ದಿ ತೀಡುತ್ತಿದ್ದಿಲ್ಲ. ಆ ವಿಶ್ವಾಸ-ಸಂಪಾದನೆಯ ಅಗತ್ಯವೂ ಅವಳಿಗುಳಿದಿರಲಿಲ್ಲ. ಅವಳು ಕಾಕಾ-ಸೋನಕ್ಕರ ವಿಶ್ವಾಸವನ್ನು ಸಂಪಾದಿಸಿದ್ದಳು. ವಿಶ್ವಾಸನನ್ನು ಘನ ವಿಶ್ವಾಸದಲ್ಲಿ ತೆಗೆದುಕೊಂಡಿದ್ದಳು. ಸುರೇಶ ಅವಳಿಗೆ ಸಾದಾ ಗಿದ್ದ. ದಾದಲ್ಯಾನಂತೂ ಅವಳನ್ನು ನೆರಳಾಗಿ ಹಿಂಬಾಲಿಸುವ ವಚನಬದ್ಧನಾಗಿದ್ದ. ಬಸವಂತಿಗೆ ಶ್ಯಾಮರಾಯನ ವಿಶ್ವಾಸ-ದಾನದ ಅಗತ್ಯ ಆವಶ್ಯಕತೆ ಇರಲಿಲ್ಲ.

ಒಂದು ಕ್ಷಣದ ಕಣ್-ತಪ್ಪಿನಿಂದಾಗಿ ಕಾಲು ಜಾರಿ, ಅವಳು ಶ್ಯಾಮರಾಯ ನಿಗೆ ಸರ್ವಾರ್ಪಣ ಮಾಡಿದ್ದಳು. ಆ ತಪ್ಪಿಗೆ ಪರಿಹಾರ-ಪ್ರಾಯಶ್ಚಿತ್ತವಿಲ್ಲವೆಂದು ಅವನನ್ನು ನೆಚ್ಚಿ ನಿಂತಿದ್ದಳು. ಈ ನೆಚ್ಚಿಕೆಯಲ್ಲಿ ಅವಳಿಗೆ ಸ್ವರಕ್ಷಣೆಯ ಆಶೆ ಇರಲಿಲ್ಲ. ಅವನನ್ನು ನಂಬಿ ಬದುಕುವ–ಅವನ ನಂಬಿಕೆಯ ಮೇಲೆ ಬಾಳುವ ಮನೀಷೆ ಇರಲಿಲ್ಲ. ಆತ್ಮಾರ್ಪಣ ಮಾಡಿದಾಗಿನ ಮನೋಭಾವ ಇನ್ನೂ ಜಾಗೃತವಿದ್ದ ಪ್ರಯುಕ್ತ ತಾನು ಅಂಧತನದಿಂದ ಅನುಸಯಿಸಿದ ವ್ಯಕ್ತಿಯ ಮಂಗಲ ಕ್ಷಣಕ್ಕೆ ತನ್ನ ಪಾವನಮನೋಭಾವದ ಪುಣ್ಯವೆರೆಯುತ್ತಿದ್ದಳು. ಸೋನಕ್ಕ-ಶ್ಯಾಮರಾಯರ ಹರಿದ ಜೀವನದ ಎಳೆಯನ್ನು ಜೋಡಿಸುವಲ್ಲಿ, ಎಂಥ ನಾಟಕ ಮಾಡಬೇಕಾದ ಪ್ರಸಂಗ ಬಂದರೂ ಅದರಲ್ಲಿ ಬಹುರೂಪಿ ಪಾತ್ರಧಾರಣೆಯ ನಟನಾ-ಸಾಮರ್ಥ್ಯ ವನ್ನು ತೋರಿಸಲು ಸಿದ್ಧಳಾಗಿದ್ದಳು.

ಸುರೇಶನಂಥ ವಜ್ರ-ಕಠಿಣ-ಶಿಲೆಯೂ ಅವಳ ಕೈಯಲ್ಲಿ ಮೃದು ಮೇಣ

ವಾಗಿ ಆ ರೂವಾರಿಯ ಬೆರಳ ಸ್ಪರ್ಶಕ್ಕೆ ಒಲಿದು ವಾಂಛಿತ ರೂಪ. ಆಕಾರ ಧರಿಸ ತೊಡಗಿತ್ತು. ಶ್ಯಾಮರಾಯ ಪಶ್ಚಾತ್ತಾಪ ಪ್ರಕಟಿಸಿ, ಸೋನಕ್ಕನನ್ನು ಆದರಿಸಿದರೆ. ಬಸವಂತಿ ಸುರೇಶನನ್ನು ಒಲಿಸಿ. ಆನನು ಶ್ಯಾಮರಾಯನ ಕಾರ್ಯಭಾರ ಹೊರುವ ಅವನ ಕಾಮಗಿರಿ ಕೆಲಸವನ್ನು ಮುಂದರಿಸುವ ಜವಾಬುದಾರಿ ವಹಿಸುವ ಯೋಜನೆಗೆ ಖಚಿತವಾಗಿ ಒಪ್ಪಿಸುತ್ತಿದ್ದಳು. ಆವಳ ಗೃಹೀತ ಕಾರ್ಯದಲ್ಲಿಯ ಉದ್ದೇಶ ಅಷ್ಟು ಪ್ರಖರವಾಗಿತ್ತು. ಅದರ ಸಾಧನೆಗೆ ಪಠಿಸುವ ಮಾತು. ಮಂತ್ರಪ್ರೂತವಾಗಿರುತ್ತಿತ್ತು.

ಸುರೇಶ-ಬಸವಂತಿಯರ ಮಾತಿಗ ಒಲಿದು. ಶ್ಯಾಮರಾಯ ಸೋನಕ್ಕನನ್ನು ಕೂಡುವದಕ್ಕೆ ಒಪ್ಪಿದರೆ – ಒಪ್ಪಿಗೆಯನ್ನು ಆಚರಣೆಗಿಳಿಸಿದರೆ – ಸುರೇಶನು ಶ್ಯಾಮರಾಯನ ಹೇಳಿಕೆಯಂತೆ ನಡೆಯಲು ಕಬೂಲಾಗುವ ಸಂಭವವಿತ್ತು. ಸೋನಕ್ಕನ ಸುಖದ ದೃಷ್ಟಿಯಿಂದ ಅವನು ಕಬೂಲಾಗುತ್ತಿದ್ದನೆಂಬ ಖಾತ್ರೀ ಇತ್ತು. ಆದರೆ ಸುರೇಶ ಒಪ್ಪಿಯೂ ಶ್ಯಾಮರಾಯ ನಕಾರಿಸಿದರೆ ಮಾತ್ರ, ಬಸವಂತಿ ಶ್ಯಾಮರಾಯನ ಮೇಲೆ ಈರ್ಷೆಯ ಹಿಲಾಲು ಭಿರಕಾಯಿಸುವ ಸಂಭವವಿತ್ತು. ವಿಫಲಮನೋರಥಳಾದ – ಅವಮಾನಿತಳಾದ ಅಭಿಮಾನಧನ-ಸಿಂಹಿಣಿಗೆ. ಶ್ಯಾಮರಾಯನ ಗಂಟಲಪರುಪ ಕಾಯಕವಷ್ಟೇ ಕಾಣಬಹುದಾಗಿತ್ತು. ಅವಳು ಶ್ಯಾಮರಾಯನ ಆಸುವಿನಾಪ್ರೋಷಣೆಯನ್ನು ತೆಗೆದುಕೊಳ್ಳಲು ಅನುಮಾನಿಸುತ್ತಿರಲಿಲ್ಲ. ಅವಳ ಕಣ್ಣಿಗೆ ಸೋನಕ್ಕ, ಕಾಕಾ, ವಿಶ್ವಾಸ, ಸುರೇಶ ಯಾರೂ ಕಾಣುತ್ತಿರಲಿಲ್ಲ. ಶ್ಯಾಮರಾಯನ ಮೂಕಬಲಿ ಅಷ್ಟೇ ಕಾಣಬಹುದಾಗಿತ್ತು. ಶ್ಯಾಮರಾಯ ಅವಳನ್ನು ಅಂದು ಘಸಾಸಿಸಿದ, ಇಂದು ಮತ್ತೆ ಪಂಚಿಸಿದ ಕಿಚ್ಚು ಮರುಕಳಿಸಿ ಅಗ್ನಿಶಿಖೆ ಕಡೆದು ಅದರಲ್ಲಿಯೇ ಅವನ ಚಿತಾಭಸ್ಮವಾಗಬಹುದಾಗಿತ್ತು.

ಸುರೇಶ ನಮ್ಮ ಕೂಡ ತಾಸರ್ಧ ತಾಸು ಇದ್ದು ಬಂಗಲೆಗೆ ಹಿಂದಿರುಗಿ ಹೋದ ನಂತರ ಬಸವಂತಿ ಅಡುಗೆಯ ತಯಾರಿ ನಡೆಸಿದಳು. ಅಡುಗೆ-ಊಟ ಮುಗಿಸುವ ತನಕ ಪುಣೆಯಲ್ಲಿಯ ತನ್ನ ಕಾಮಗಿರಿಯ, ಶ್ಯಾಮರಾಯನ ಹಾಲ್ ಚಾಲಿಯ ವರದಿ ಒಪ್ಪಿಸಿದಳು. ಅವಳ ವರದಿಯ ಬೆನ್ನೇರಿ ನನ್ನ ವಿಚಾರ-ಭಾವ-ಯಂತ್ರದ ಭ್ರಮಂತಿ ನಡೆದಿತ್ತು.

ನಮ್ಮ ಊಟವಾದ ಮೇಲೆ ಖಾದರನಿಗೂ ಬಡಿಸಿದ್ದಾಯಿತು. ಅವನೂ ಹದಿನೈದು-ಇಪ್ಪತ್ತು ಗಳಿಗೆಯಲ್ಲಿ ಊಟ ಬಗೆಹರಿಸಿಕೊಂಡು. ನಾವು ಕುಳಿತಲ್ಲಿಗೆ

ಬಂದು, ಕೈ ಕೈ ಮುಸೆಯುತ್ತ ದೇಶಾಪರೀ ನಗೆಯನ್ನು ನಗುತ್ತ —

"ದಾದಲ್ಯಾ ಭಡಜೀ, ಸಿಗರೇಟ-ಪಾನ ಏನರs ಬೇಕಾಗಿದ್ದರ ಈಗs ಹೇಳರಿ. ಅಂಗಡಿ ಬಂದ ಆಗೂದ್ರಾಗ ತಂದ ಕೊಡತೀನಿ."

ಎಂದು ಕೋಟು. ಟೊಪ್ಪಿಗೆ ಏರಿಸಿಕೊಳ್ಳುತ್ತಲೇ ಕೇಳಿದ.

"ಸಿನೇಮಾಕ್ಕ ಏನರs ಹೋಗೂ ಬೇತು ಅದs ಕಾಣಸ್ತದ ಖಾದರs? ಅದs ತಯಾರೀಯಿಂದs ಬಂದೀದಿ. ನಿಮ್ಮ ಬಡೇ ಸಾಬರದು – ಟಿನ್ ತುಂಬೇ ಭರಪೂರ ಸಿಗರೇಟ ಅವs. ಬೆಳತನಕಾ ಸೇದಿದರೂ ಮುಗಿಯೂದಿಲ್ಲಾ. ನೀ ಬೇಕಾದರ ಸಿನೇಮಾಕ್ಕ ಹೋಗಿ ಬಾ. ತಿಕೀಟಿನ ರೊಕ್ಕಾ – ಅಚ್ಛಾ – ನಂದಪಾ." ನಾನು.

"ಹೇಃ. ಈ ಸಿನೇಮಾಕ್ಕ ರೊಕ್ಕ ಇಲ್ಲ ಬಿಡರಿ. ರೊಕ್ಕಾ ಅಂತೂ ತಗೀರಿ. ಅದೇ ರೊಕ್ಕದಲೇ ನಿಮ್ಮ ಹೆಸರ ಹೇಳಿ ಚಾ ಕುಡೀತೀನಿ. ಇಂದ ಮಸ್ತ ಕವಾಲಿ ಅವs ಏನ್ರೀ. ನೀವು ಹ್ಯಾಂಗೂ ಸಣ್ಣ ಬಾಯೀಸಾಬರ ಜೋಡಿಗೆ ಇದ್ದೀರಿ. ಕಾಳಜೀ ಇಲ್ಲಾ. ನಾ ಅಷ್ಟು ಕವಾಲಿ ಕೇಳಲಿಕ್ಕೆ ಹೋಗಬೇಕಂತೀನಿ. ಹೋಗಂದರ ಹೋಗತೀನಿ."

ಅವನು ಹೋಗುವದೇ ನನಗೆ ಬೇಕಾಗಿತ್ತು. ಚಹಕ್ಕೆಂದು ಅವನ ಕೈಯಲ್ಲಿ ಒಂದು ಶುಭ್ರ ಹಾಕಿ ಅವನನ್ನು ಹೊತ್ತುಹಾಕಿದೆ.

"ನಾನು-ನೀನು ಇಬ್ಬರs ಅದೀವಿ. ಜ್ವಾಕಿ ಆಂ ದಾದಲ್ಯಾ !"

ಬಸವಂತಿ ನಗುತ್ತ ಹೇಳಿದಳು.

ಒಂದು ರಾತ್ರಿ ವಾಡೆಯಲ್ಲಿ ನಾನು ಬಸವಂತಿಯ ತೊಡೆಯ ಮೇಲೆ ಮುಗ್ಧ ಮಗುವಿನಂತೆ ಮಲಗಿ ಕಳೆದಿದ್ದೆ.ಆವಳ ಜೀವನ-ಕತೆಯನ್ನು ಮಲಗಿಕೊಂಡು ಪರಮಾದರದಿಂದ ಕೇಳಿದ್ದೆ. ನನಗೆ ಬಸವಂತಿಯ ಹರೆಯದ ಝುಲ್ಲು ಅಂದೇ ಹಾರಿತ್ತು. ಅವಳ ಕಾಯದಾಸೆಗೆ ನಾನು ಬಯಸಿದ್ದರೆ, ಅಂದೇ ಹೇಳುತ್ತಿದ್ದೆ: ಬಸವಂತೀ, ಶ್ಯಾಮರಾಯರನ್ನ ಬಿಟ್ಟ ಬಾ: ನಿನ್ನ ಮ್ಯಾಲ ಜೀವಾ ನಿವಾಳಿಸಿ ಒಗಿತೀನಿ ಅಂತ. ಅವಳಿಗೆ ಎರಡು ಭಕ್ಕರಿ – ಎರಡು ಭಾಂಡು ಕೊಡುವ ತಾಕತ್ತು ನನ್ನಲ್ಲಿತ್ತು. ಶ್ಯಾಮರಾಯ ನನ್ನನ್ನು ಬಸವಂತಿಯ ಕಾವಲಿಗೆ, ದೇಖರಖಿಗೆ ನಿಯಮಿಸಲು ಒಂಟಿಗಾಲ ಮೇಲೆ ಸಿದ್ಧನಿದ್ದ. ಬೇಲಿಯೇ ಎದ್ದು ಹೊಲವನ್ನು ಮೆಯ್ಯಲಿಕ್ಕೆ ಯಾರ ಅಡ್ಡಿ-ಆತಂಕ, ಅಡಿ-ತಡೆಯೂ ಇರಲಿಲ್ಲ.

ಹೊಲ ಮೆಯ್ಯುವ ಬಾಬತ್ತಿನಲ್ಲಿ ದಾದಲ್ಯಾ, ದಾದಲ್ಯಾನೇ. ಬಸವಂತಿ ಬಸವಂತಿಯೇ! ಒಂದು ಉತ್ತರಧ್ರುವ – ಒಂದು ದಕ್ಷಿಣಧ್ರುವ. ಅವೆರಡರಲ್ಲಿಯ ಅಂತರ ಅನಂತಾನಂತವಾಗಿದ್ದರೂ, ಎರಡೂ ಒಂದಕ್ಕೊಂದು ವಿಚಿತ್ರ ರೀತಿಯಲ್ಲಿ ಕುಣಿಕೆಗೊಂಡಿದ್ದವು. ಜೀವ-ಜೀವದ ತಳಕುಹಾಕಿಕೊಂಡಿದ್ದವು.

ಬಸವಂತಿ ಅಲಗರ್ಜಿ ಹೊರಟಿದ್ದರೆ – ಅವಳಿಗೆ ಅಂದಿನ ಅಖಂಡ ರಾತ್ರಿ ದಾದಲ್ಯಾನನ್ನು ತೊಡೆಯ ಮೇಲೆ ಒರಗಿಸಿಕೊಂಡು ಕೂಡುವ ತಾಕತ್ತು ಆಗುತ್ತಿರಲಿಲ್ಲ. ಅವಳ ತಾಕತ್ತು ಥಳಮಳಿಸಿದ್ದರೆ – ತಾಯ್ತನದ ವಾತ್ಸಲ್ಯದಿಂದ ಚಾಚಿದ ತೊಡೆ – ರಂಗವಿಲಾಸದ ಮಂಚಕವಾಗಬಹುದಿತ್ತು. ಶಿವ-ಮಂಗಳೆಗೆ ರತಿ-ವಸನದ ಸೆರಗೂ ತಾಕಿರಲಿಲ್ಲ. ಅವಳ ಹರೆ – ನನ್ನ ಹರೆ ಎದೆಗೆ ಎದೆ ಅನಿಸದೆ – ಹೆಗಲಿಗೆ ಹೆಗಲು ಹಚ್ಚಿ ನಿಂತಿದ್ದವು. ಒಂದರ ಕೊರಳಲ್ಲಿ ಒಂದು ಕೈ ಹಾಕಿ ಸೋದರ-ಸೋದರಿ ವಾತ್ಸಲ್ಯದಿಂದ ಕುಣಿಕೆ ಹಾಕಿಕೊಂಡಿದ್ದವು. ಬಸವಂತಿಯ ತಾರುಣ್ಯದಲ್ಲಿ ಜೀವೋನ್ಮಾದಕ ಮಾದಕ-ಪೇಯವೂ ಇದೆ; ಕರಳು ತಂಪಾಗಿಸುವ ಹಿಮಖಂಡ-ಶರಬತ್ತೂ ಇದೆ. ಬಸವಂತಿಯ ಮಾದಕ-ಪೇಯವನ್ನು ಕುಡಿಯುವ ಗಂಡಸರು ಇನ್ನೂ ಹುಟ್ಟಬೇಕಾಗಿದೆ. ಶ್ಯಾಮರಾಯ ಬರಿಯ ನೀರು ಗುಟುಕರಿಸಿ, ಸೆರೆಯನ್ನು ಕುಡಿದ ಮದ ತೋರಿಸುತ್ತಿದ್ದ. ಬಸವಂತಿಯ ಹರೆಯದ ಸೆರೆಯನ್ನು ಕುಡಿಯುವ ತಾಕತ್ತು ಯಾರಲ್ಲಾದರೂ ಇದ್ದುದೇ ಆಗಿದ್ದರೆ – ಅದು ದಾದಲ್ಯಾನಲ್ಲಿತ್ತು. ಅಂಥ ಒಂದು ಗಡಸು ಗಂಡಸುತನ ಅವನಲ್ಲಿತ್ತು. ಆ ಸೆರೆಯನ್ನು ಉಂಟಿಸುವ ಹೆಣ್ಣು ಎದೆ ಬಸವಂತಿಯಲ್ಲಿತ್ತು. ಅದು ಇದ್ದ ಬಗ್ಗೆ ಇಬ್ಬರಿಗೂ ಖಾತ್ರಿ ಆಗಿತ್ತು. ಆದರೆ ಈ ಜನ್ಮದಲ್ಲಿ ಆ ಮಾದಕ-ಪಾನದ ಭೋಗ–ಯೋಗ ಇಬ್ಬರಿಗೂ ಇರಲಿಲ್ಲ.

ಈ ಭಾಗ್ಯದ ಬಾಬತ್ತಿನಲ್ಲಿ ಇಬ್ಬರೂ ಸೋತು ಗೆದ್ದಿದ್ದವು.

"ಈ ಜನಮದಾಗ ಇಬ್ಬರಿಗೂ ಅದರ ಸುಖಾ ಇಲ್ಲ ದಾದಲ್ಯಾ" ಎಂದು ಬಸವಂತಿ ನುಡಿದಾಗ ಆ ದನಿಯಲ್ಲಿ ಗೆಲುವಿನ. ಹಮುಹಮಿಕೆಯ ಠೇಂಕಾರ ವಿರಲಿಲ್ಲ. ಸೋತ ಸತ್ವದ ಮಂದಾಕ್ರಾಂತವಿತ್ತು. ಅವಳ ಜೀವನದ ವೀಣೆಯನ್ನು ಒಂದು ಸಲ ಮೀಟಿ ಈ ಮಂದಾಕ್ರಾಂತಕ್ಕೆ ವಾಚ್ಯತೆಯನ್ನು ಮೂಡಿಸಿದ್ದೆ. ಅಂದು ಅವಳು ತನ್ನ ನಗೆಯ ಮಂದಾರವರಳಿಸಿ ಹೇಳಿದ್ದಳು :

"ಯಾಕ ದಾದಲ್ಯಾ, ನನ್ನ ಕೈ ಹಿಡೀಬೇಕು ಅನೂ ವಿಚಾರ ಬಂದದೇನು? ಹಾಗಿದ್ದರ ಹೇಳು. ಇಂದs ಅವರಿಗೆ ಸೋಡಚೀಟಿ ಕೊಡತೀನಿ. ನಿನಗೂ ಸೆರೇ

ಕುಡಿಯೂ ಹುಕೀ ಬಂಧಾಂಗ ಕಾಣತೈತಿ. ನೀನs ಹೇಳಿದ್ದೆಲ್ಲಾ ದಾದಲ್ಯಾ: ಇಬ್ಬರೂ ಸೋತ ಗೆದ್ದಾವ್ರಂತs. ಗತೀ ಇಲ್ಲದs ಸರಬತ್ ಕುಡದವರಂತs. ಈಟರಾಗs ಅದರ ಸೆಪ್ಪ ಹಾರಿತೇನು? ಸರಬತ್ ಕುಡದೇವು ದಾದಲ್ಯಾ; ಅದು ಅಮರೂತ ಆದರೂ ದಕ್ಕಿಸಿಗೋಬೇಕು. ಇಸಾ ಆದರೂ ದಕ್ಕಿಸಿಗೋಬೇಕು. ಶಿವಾ ಬರೇ ಗಂಟಲದಾಗನs ಅದನ್ನ ಹಿಡದಾ. ನಾವು ಎದ್ಯಾಗ ಹಿಡಕೊಂಡು ಬದಕೂದನ್ನ ಕಲೀಬೇಕು. ನನ್ನ ಮನಸನ್ನ ತಿಳಕೊಂಬೂ ಗಂಡಸರು ಸಿಗಲಿಲ್ಲಂತ ಸಂಕಟಪಡತಿದ್ನಿ. ಅಂದ ವಾಡೇದಾಗ ಅಂಥಾ ಗಂಡಸಾ ಸಿಕ್ಕಾ. ಆಟ್ರೊತ್ತಿಗೆ ಮೈ ಮಾರಾಟ ಆಗಿಹೋಗಿತ್ತು. ಒಬ್ಬರ ಎಂಜಲಾ, ನನ್ನ ಮನಸ್ಸ ಗೆದ್ದ ಗಂಡಸಿಗ ಕೊಡಾಕ ಜೀಂವಾ ಒಪಗೋಳಲಿಲ್ಲಾ. ಒಮ್ಮೆ ಮೈ ಹೊಲಸ ಆದರ ಅದನ್ನ ಮತ್ತ ಮತ್ತ ಅದs ಕಲಕ-ನೀರಾಗ ಬುಚಕಳಸೂದು ಠೀಕಲ್ಲಾ. ನೀ ಮನಸ ತಿಳ ಕೊಂಡ ದಿನಾನs ಈ ಬುಚಕಳಸೂ ವ್ಯಾರೇ ಬಿಟ್ಟೆನಿ. ಅಂದಿನಿಂದ ಇಂದಿನ ತನಕಾ ಅವರ್ನ ಸನೇಕ ಹಾಯಗೊಟ್ಟಿಲ್ಲಾ. ಬಸವಂತಿನ್ನ ಅಕ್ಕಂತ ತಿಳದು, ನೀ ನನಗ, ಸೋನಕ್ಕ ಅವರ ಸುದ್ದೀ ಹೇಳಿದಿ. ಸೋನಕ್ಕವರದು – ಇವರದು ನಾತೇ ಜೋಡ ಸಾಕ ಧಡಪಡಸು ಅಂದೀ. ನಾ ಒಪಗೊಂಡಿದ್ನಿ ದಾದಲ್ಯಾ. ಒಪಗೊಂಬಾಗ ಎಡ್ಡ ಮನಸಲೆ ಒಪಗೊಂಡಿದ್ನಿ.ಒಂದು ಸೋನಕ್ಕ ಅವರ ದಶಿಂದ.ಒಂದು ನಿನ್ನ ದಶಿಂದ; ನನ್ನ ಮನಸ್ಸ ತಿಳಕೊಂಡ ಗಂಡಸಿನ ದಶಿಂದ. ಇವರು ನನ್ನ ಘಸಾಸ್ವಾರ ಅನೂದ್ನ ನಿನ್ನ ಬಾಯ್ಲೇ ಕೇಳಿದ ದಿನಾನs. ನಾ ಅವರ್ನ ಹೆಬ್ಬಳ್ಳಿ ಚಿಮ್ಮಿದ್ನಿ. ಮನಾವಕೊಂಡ ಹೇಣತಿನ್ನ ಆಳಾಕ ಬರದ ಗಂಡಸಾ, ಇಟಗೊಂಡ ಹೆಣ್ಣನ್ನ ಏನ ಆಳತೈತ್ಯಂತ, ಅಂದs ಅವರ್ನ ಮನಸಿನ್ಯಾಗಿಂದ ಬಿಸ್ಯಾಡಿ ಒಗದ್ನಿ. ಹೊಟ್ಟಿಗೀಟು ಅನ್ನಾ ಕೊಡತಾರ – ಮೈ ಮುಚ್ಚಾಕ ಅರಿಬೀ ಕೊಡತಾರು, ಇವರ್ನ ಹ್ಯಾಂಗ ಬಿಡಲೀ ಅಂತ, ಒಮ್ಮೆ ಇಚಾರ ಬಂದು ಬೆಳತನಾ ಢೇನಿಸಿದಿನಿ. ಇವರು ನನ್ನೂ ಘಸಾಸ್ವಾರ. ನನ್ನ ಕಟಿಗೊಂಡು, ಒಂದ ಹೆಣ್ಣ ಜೀಂವದ ಎದೀ ಮ್ಯಾಲ ನನ್ನ ನಡಸೂ ಇಚಾ ರನೂ ಮಾಡ್ಯಾರ. ಹೀಗ ಮಾಡತಾರ ಅನೂದು ತಿಳಿದಿದ್ದರ, ನನ್ನ ಕಾಲು ಜಾರತನs ಇರಲಿಲ್ಲಾ. ಕಾಲ ಜಾರಿ, ಮುಳ್ಳ ಮುರದದ. ಮುರದ ಮುಳ್ಳಾ ಮುಳ್ಳಲೇನs ಎಬ್ಬಬೇಕಂತ ಗಟ್ಟಿ-ಮಾಡಿಕೊಂಡಿನಿ. ನಾ ಜರಾ ಧೈರ್ಯಾದ್ಲೇ ಮಾತಾಡಿದರ ರಟ್ಟ್ಯಾಗಿನ ರಕ್ತಾ ಚಿಮ್ಮಿಸಿದರು. ಇನಾ ಜರಾ ಮುಂದ ಹೋಗಿದ್ದರ ರಣಕತ್ಲನs ಆಗತಿತ್ತು. ಅಂದ ಆಗಲಿಲ್ಲ ದಾದಲ್ಯಾ ರಣಕತ್ಲಾ. ಮುಂದ ಆಗದs

ಹೋಗಾಂಗಿಲ್ಲಾ. ಅಂದ ಚಿಮ್ಮಿದ ನೆತ್ತರಲೇನs ನನ್ನ ಹಸರ ಹಣೇಗಿ ಟಿಕಳೀ ಹಚಿಗೊಂಡೀನಿ. ಅಂದಿನ ಸುಟೂ ಯಾಕೋ ಕುದ್ದಾಟ ನಡದೈತಿ ದಾದಲ್ಯಾ. ಎದ್ಯಾಗಿನ ನೆತ್ತರಾ ಎಸರ ಬಂದು ಕುದ್ಯಾಕ ಹತ್ತೈತಿ. ಏಸರs ಚಕಮಕಿ ಹಾರಿದರ ಅದು ಅವರಿಗೆ ನನಗs ಹಾರಬೇಕು.

ನನ್ನ ಶೆರೇದ ಮಾತಾ, ನೀ ಇಂದ ಹೇಳದs ಅಂದ ರಾತ್ರೀ ಹೇಳಿದ್ದರ ವಾಡೇದಾಗ ನಾ ನಿನ್ನ ಹಾಸಿಗೀ ಮ್ಯಾಲ ಕುಂತ ರಾತ್ರೀ ಹೇಳಿದ್ದರ, ದಾದಲ್ಯಾ ನನಗ ಶೆರೇವ ಅಮಲಿನs ಏರತಿತ್ತು. ಅಂದs ನನ್ನ ಮನಸ್ಸಾ ನಿನ್ನ ತಾಬೇದಾರಿ ಆಗಿತ್ತು. ನೀ ಹ್ಯಾಂಗ ಹಿಡದಿದ್ದರೂ, ಹ್ಯಾಂಗ ಹಿಚಿಕಿದ್ದರೂ ಕಣಕಧಾಂಗ ನಾದತಿತ್ತು. ನಿನ್ನ ಹೆಗಲಿಗೆ ಹೆಗಲ ಹಚ್ಚದ ಎದೀಗಿ ಎದೀ ಆನಿಸಿ ನಿಂದರತಿದ್ನಿ. ಸೋನಕ್ಕ ಅವರ ಧಾವತೀ ಹಚ್ಚಿದಿ ದಾದಲ್ಯಾ. ನನಗ ಶೆರೇದ ಮದಾ ಏರಲಿಲ್ಲಾ. ಸರಬತ್ ಕುಡದು ಥಣ್ಣಗಾದ್ನಿ. ಸೋನಕ್ಕ ಅವರ ಧಾಪತ್ಯಾಗ ನಾ ಉಳ್ಯಾಕಿಲ್ಲ ದಾದಲ್ಯಾ. ಮೊದಲ ಕಡತಾ ನನಗs ಕುಂತೀತಂತ ಅನಸಾಕ ಹತ್ತೈತಿ. ನಾ ಮೊದಲ ತೆಲೀ ಒಡ್ಡತೇನಿ. ನೀ ನನ್ನ ಬೆನ್ನಾ ಬೆನ್ನ ಬಾ. ಶೆರೇದ ಆಶಾ ಮುಂದಿನ ಜನಮದಾಗ ಸಿಕ್ಕೀತ ನಮಗ. ಸೋನಕ್ಕನ ದಶಿಂದ ಅಣ್ಣಾ-ತಂಗಿ ನಾತೇ ಜೋಡಿಸಿಕೊಂಡೇವು. ಜೀವಕ ತಳಕಹಾಕಿಕೊಂಡೇವು. ಕುಣಿಕಿ ಬಿಚ್ಚಧಾಂಗ ತಳಕಬಿದ್ದೈತಿ. ನನ್ನ ಮನಸ ಇಡಾಕ ತಾವನs ಕಾಣಸಿರಲಿಲ್ಲಾ. ನಿನಗs ಅದು ಕಾಣಿಸ್ತ್ಯ. ನೀ ಕಣ್ಣ ಮುಚ್ಚಿ ಬೇಡಿದ್ಲಿ. ನಾ ಕಣ್ಣ ತಗದs ಅದನ್ನ ನಿನಗ ಕೊಟ್ಟಿದ್ನಿ. ಬಸವಂತಿ ಮನಸ್ಸ ಕೊಟ್ಟ ರಾತ್ರೀ ನಿನಗ ಇತ್ತ ದಾದಲ್ಯಾ. ಬಸವಂತಿಗೆ ತನ್ನ ಮನಸ್ಸು ಶಾಬೂತಾಗಿ ಕುಂತ ಜಾಗಾದ್ದು ಠಾಂವಿಕಿತ್ತು. ದಾದಲ್ಯಾ ಇದ್ದಲ್ಲಿ ಬಸವಂತಿ ಹಪಾಪಿಸಿ ಬರತಾಳ. ಬಸವಂತಿ ಇದ್ದಲ್ಲೆ ದಾದಲ್ಯಾ ಧಾವಿಸಿ ಬರತಾನು. ಯಾಕ ಧಾವಸ್ತೇವು ಅನೂದು ಇಬ್ಬರಿಗೂ ಗೊತ್ತ ಐತಿ. ಇಬ್ಬರ ಮನಸ್ಸಿನ್ಯಾಗೂ ಈ ಮಾತಾ ಮರಕಳಸತಿತ್ತು. ಇಂದ ಹೊರಬಿದ್ದು ಪಾಡ ಆತು. ಅಗದೀ ಝುಲ್ಲ ಬಿಟ್ಟು ಇರಾಕ ಸೆಟ್ಟಗಾತು. ಆ ಝುಲ್ಲಿ ಬಿಡಸಾಕ ನಮ್ಮ ಕೈಗೆ ಶೆರೇ ಬರಲಿಲ್ಲಾ. ಸರಬತ್ ಬಂತು. ಶೆರೇದ ಮದಾ ಏರೂ ಕಾಲಾ ಇನಾ ಬಂದಿಲ್ಲಂತ ಹೇಳಿಧಾಂಗ ಆತು. ನಾವು ಸೋತ ಗೆದ್ದಾವ್ರಂತ ಏನ ಹೇಳಿದಿ ಅದು ಅಗದೀ ಖರೇ ದಾದಲ್ಯಾ. ಸೋನಕ್ಕವರ ನೆರೀ ಹರಪದ್ದು ಜೋಡಿಸ್ತ್ಯಂದರ ನಮ್ಮ ಕಾರ್ಯಾ ಆತು. ನಮ್ಮ ಕೆಲಸಾ ಬಗೀಹರೀತು. ಅದೂ ಮುಗಿಯೂದರಾಗs ನಾವು ಈ ಲೋಕಾ ಬಿಟ್ಟು ಅಗಲಬೇಕು. ಅಗಲ

ದ್ದದಿರ ಇಬ್ಬರಿಗನೂ ಸುಖಾ ಇಲ್ಲ ದಾದಲ್ಯಾ."
ಬಸವಂತಿಯು ವಜ್ರಹೃದಯುವನ್ನು ಭೇದಿಸಿ ಬಂದಂತಿತ್ತು, ಈ ಜೀವ-ವೀಣಾ ಕ್ವಣಿತ!

ನಮಗೆ ಅಗಲಿಕೆಯೂ ಇರಲಿಲ್ಲ. ಅಗಲಿಕೆಯ ನಂತರದ ಸುಖವೂ ಇರಲಿಲ್ಲ. ಪಂತರ ಮನೆಯ ಅನ್ನ-ನೀರಿನಿಂದ ನಮ್ಮ ಪಿಂಡ ಬದುಕುತ್ತಿದ್ದವು. ಆ ಋಣ ಪರಿಹಾರಕ್ಕೆ ನಾವಿಬ್ಬರೂ ಜೀವ ನಿವಾಳಿಸಿ – ಸುಖವನ್ನು ನಿವಾಳಿಸಿ ಒಗೆದಿದ್ದೆವು. ಒಂದು ಕಡೆಗೆ ಜಮೆಯಾಗಬೇಕಾದರೆ ಇನ್ನೊಂದು ಕಡೆಗೆ ಖರ್ಚೀ ಬೀಳದೆ ಗತಿ ಇರುವಂತಿಲ್ಲ. ಈಗ ನಮ್ಮ ಸುಖ ಖರ್ಚೀ ಬಿದ್ದರೂ, ಅಡ್ಡಿ ಇರಲಿಲ್ಲ. ಅದರಿಂದ ಸೋನಕ್ಕ-ವಿಶ್ವಾಸ ಸುಖಿಯಾಗುತ್ತಿದ್ದರು. ರಾವಜೀಕಾಕಾ ಸಮಾಧಾನರಾಗುತ್ತಿದ್ದರು. ಆ ಸುಖ-ಸಂತಸ ಕಂಡು ನಮ್ಮ ಜೀವ ಧನ್ಯವಾಗುತ್ತಿದ್ದವು. ಇಂಥ ಸಮಾಧಾನ ಬರುವದು ಸಣ್ಣ ಮಾತಲ್ಲ.

"ವಾಡೇದಾಗ ಅಂದ ರಾತ್ರೀ, ನೀ ತೊಡೀ ಮ್ಯಾಲ ಮಲಗಿದ ದಿನಾನೇ ನಾ ಒಂದು ಅಧಿಕಾರ ಕಳಕೊಂಡಿದ್ನಿ. ಯಾಕ? ಏನು? ಅಂತ ಕೇಳೂ ಅಧಿಕಾರನ್ಸ ನೀನ್ಸ ಕಸಗೊಂಡಿದ್ದಿ ದಾದಲ್ಯಾ. ಕಸಗೊಂಡಿದ್ದು ಗೊತ್ತ ಇದ್ದೂ ಕವಡಗಂಟತನಾ ಮಾಡಿ ಮುಚ್ಚಿ ಇಟಗೊಂಡಿದ್ವಿ. ನಾ ಅಗಳ್ಯಾಡಿಸಿದ್ನ್ಯಂತ ಬಾಯಿ ಬಿಟ್ಟೆ. ನಿನ್ನ ಗತ್ತಾ ಯಾರಿಗೆ ಗೊತ್ತ ಆಗದಿದ್ರೂ ನನಗ ಗೊತ್ತ ಆಗತೈತಿ. ನನ್ನ ಕೈಯ ಗಾಯ ನೋಡಾಕ, ವಿಶ್ವಾಸ ಚಟ್ಟನ್ಸ ನನ್ನ ಕೈ ತನ್ನ ಕೈಯಾಗ ತಗೊಂಡಾ. ಆಗ ನನಗೂ ಏನ ಅನಸಲಿಲ್ಲಾ. ಅಂವಗೂ ಏನ ಅನಸಲಿಲ್ಲಾ. ಇಬ್ಬರ ಮನಸೂ ಜಳಾ ಜಳಾ ಬೆಳಗೂ ಕನಡಿ ಹಾಂಗ ಇದ್ದೂ. ನನ್ನ-ನಿನ್ನ ಕನಡೀ ಮಾರಿಗಿ ಜರಾ ಕಾಡಿಗಿ ಅಂಟಿತ್ತ ದಾದಲ್ಯಾ. ಅದಕಂದಲ್ಲೇ ನೀ ಧೂರ ಧೂರ ಸರೀತಿದ್ದಿ. ನನ್ನ ಹರೇದ್ದು ಝುಲ್ಲ ಹಾರಿದ್ದರೂ ಅದು ವಿಷಾ ಕುಡದು ಬಿಟ್ಟ ಝುಲ್ಲಿನ್ಹಾಂಗ ಇತ್ತು. ವಿಷಾ ಕುಡದದ್ದನ್ನ ಇಂದ ಇಬ್ಬರೂ ಹೇಳಿಕೊಂಡೇವು. ಕನಡೀ ಮ್ಯಾಲಿನ ಕಾಡಿಗಿ ಅಳಿಸಿತು. ಇಬ್ಬರ ಮಾರೀನೂ ಚಕಾ ಚಕಾ ಕಾಣಸಾಕ ಹತ್ತಿದೂ. ಖರೇ ಝುಲ್ಲು ಇಂದ ಬಿಟ್ಟಿತು. ತಪ್ಪಿ ಏನರ್ರ ಶೆರೇ ಕುಡದಿದ್ದರ ಅದರಾಗೂ ಸುಕಾ ಇರತಿತ್ತು. ಆದರ ಆ ಸುಕದಾಗ ಮಬ್ಬ ಇರತಿತ್ತು. ಇಂದ ಸರಬತ್ ಕುಡದೇವು. ಕಳ್ಳಾ ಘನ ತಂಪ ಆಗ್ಯಾವು. ಜುಣುಜುಣು ಅಂತಾವು. ಈ ಜನುಮದಾಗ ಆ ತನುವಾ ಆರಿಗುಡೂಣು ಬ್ಯಾಡಾ. ನಾನೂ ನೀನೂ ತೊಗಲ ಸುಕದ ನಾಯಿಗೋಳು ಅಲ್ಲಾ. ನಮ್ಮ ಸುಕಾ ಯುದರಾಗ

ಇತ್ತೂ ಅನೂದು ಗೊತ್ತಇತ್ತು. ಅಂದರೂ ಅದನ್ನ ಸುಟ್ಟ ಕರಕ ಮಾಡಿದೇವು. ಆದರ ಅಂಗಾರಾ ಮೈಗೆ ಬಡಕೊಳಲ್ದೇ ಮನಸ್ಸಿಗೆ ಹಚಿಗೊಂಡೇವು. ಮುಂದಿನ ಜನುಮುದಾಗ ಮೈಗೂ ಹಚಿಗೋತೇವಂತ್ಸ ಬೇಡಕೊಂಡ ಬರೂಣು. ಈ ಜನಮಾ ನೀಗೂ ತನಕಾ ಮೈ-ಸುಕಾ ಇಬ್ಬರೂ ಬಿಟ್ಟಬಿಡೂಣು. ಆಟರ ಪೂರ್ತೇ ಬಾವಾ-ಬೈರಾಗಿ ಹಾಂಗ ಇರೂಣು."

"ದಾದಲ್ಯಾ, ನಾವು ಬಾವಾ-ಬೈರಾಗಿ ಹಾಂಗ ಇರೂಣಂದಿನಿ. ಹಾಂಗ ಇರದಿದ್ದರ ನಮುಗ ಸೋನಕ್ಕವರ ಸಂಕಟಾ ತಿಳ್ಯಾಂಗಿಲ್ಲಾ. ಮನಸ್ಯಾ ತನ್ನ ಸುಖಾ ಮರತರನ್ಸ ಬ್ಯಾರೇದವರ ಸುಕಾ-ದುಃಖಾ ಏನೈತಿ ಅನೂದ್ನ ತಿಳಕೊಂತಾನ. ನಮ್ಮ ಸುಖದ ಪರೀ ಹರೀದ್ಸ ಸೋನಕ್ಕವರ ದುಕ್ಕದ ಆಳಾ ನಮುಗ ಅsಟು ತಿಳ್ಯಾಂಗಿಲ್ಲಾ. ಖಟ್ಟಿಗೆ ಹಚ್ಚಿ ಇವರ್ನ ಕೇಳೇಬಿಡತೀನಿ. ಸೋನಕ್ಕ ಅವರ ಜೋಡೀ ಸಂಸಾರ ಮಾಡಾಕ ಕಬೂಲ ಆಗತೀರ್ಯೋ ಇಲ್ಯೋ ಅಂತ್ಸ? ನಾ ಕೇಳೂದಾಟ್ಸ ಪುರಸತ್ತಿಗಿ ಕಿಡೀನ್ಸ ಹಾರತೈತಿ! ಮಾಡ ಕೂಡಾಕ ಹತ್ತೈತಿ. ಮುಗಲ ಗದ್ದರಸಾಕ ಹತ್ತೈತಿ! ಮಿಂಚ ಚಮಕಾಸೂದರಾಗ್ಸ ಸಿಡ್ಲ ಬಿದ್ದ್ಸ ಬೀಳತೈತಿ! ಬಸವಂತೀನ್ಸ ಮೊದಲ ಎದೀ ಒಡ್ಡತಾಳ. ನೋಡತಿರೂ ದಾದಲ್ಯಾ, ಯಾರು ಮುಂಚ್ಯಾಕ ಕಣ್ಣ ಮುಚ್ಚತಾರ ಅನೂದನ್ನ. ನಾ ಕಣ್ಣ ಮುಚ್ಚಿದರ ನೀನು ಭಾಳ ದಿನಾ ತಡದ ನಿಂದರ ಬ್ಯಾಡಾ.ನನ್ನ ಬೆನ್ನಿಗೇ ಬಾ.ಏನ ತಡಕೊಂಡರೂ ನಿನ್ನ ಬಿಟ್ಟ ಇರೂದ್ನ ತಡಕೋಳಾಕ ಆಗಾಕಿಲ್ಲ ನನಗ. ನೀ ಬರದಿದ್ದರ ಹಡಳ ಆಗ್ಯರ್ಸ ನಿನ್ನ ಬೆನ್ನ ಹತ್ತತೇನಿಲ್ಲ ನೋಡು. ಹಡಳೀ ಜೋಡಿ ಸಂಸಾರ ಮಾಡಬೇಕಾದೀತು ಹಾರೂರಂವಗ."

ಬಸವಂತಿ ಅಚಾನಕವಾಗಿ ವಿಚಿತ್ರ ರೀತಿಯಲ್ಲಿ ಭವಿಷ್ಯವನ್ನು ವದಿಸಿದ್ದಳು. ಮೋಡ ಕಲೆತು, ಗುಡುಗು ಗದ್ದರಿಸಿ, ಮಿಂಚು ಚಮಕಿಸಿ, ಸಿಡಿಲು ಸಿಡಿಯುವ ಮಾತು ಹೇಳಿದ್ದಳು. ಅದಕ್ಕೆ ತನ್ನದೇ ಪ್ರಥಮ ಬಲಿಯೆಂದು ಸಾರಿದ್ದಳು. ಶ್ಯಾಮ ರಾಯನನ್ನು ಅವಳು ಗಾತಾಯಿಸಿ ಒಗೆತನ ಹೊಂದಿಸಿಕೊಳ್ಳುವ ಮಾತು ಎತ್ತಿದ್ದರೆ ಎತ್ತಿದರೆ – ಕದಾಚಿತ್ ಇಂಥ ಭಯಾನಕ ಪ್ರಸಂಗ ಬರದೆ ಹೋಗುತ್ತಿರಲಿಲ್ಲ.

ಬಸವಂತಿ ತಟ್ಟನೇ ಈ ಮಾತನ್ನು ಖಟ್ಟಿಗೆ ಹಚ್ಚದೆ ನಿದಾನವಾಗಿ ಹೆಜ್ಜೆ ಇಡುವದರಲ್ಲಿ – ಇಡುವದರಿಂದ ಲಾಭವಿತ್ತು. ಶ್ಯಾಮರಾಯನಿಗೆ ಇನ್ನೂ ತನ್ನ ಸುರೇಶನ ಆಶೆ ಬಿಟ್ಟಿರಲಿಲ್ಲ. ಅವನನ್ನು ಪಳಗಿಸಿ, ತನ್ನ ಕಂತ್ರಾಟ ಕಾರ್ಯಕ್ಕೆ ಹೂಣಿ ಸುವ ಸಂಬಂಧದಲ್ಲಿ ಅವನು ಇನ್ನೂ ವಿಫಲ-ಮನೋರಥನಾಗಿರಲಿಲ್ಲ. ಅವನನ್ನು

ಪಳಗಿಸಿ, ತನ್ನ ದಾರಿಯನ್ನ ಸುಗಮ ಮಾಡುವದರಲ್ಲಿ ಬಸವಂತಿ ನೆರವಾದಾಳೆಂಬ ಭಿಸ್ತು ಅವನಲ್ಲಿ ಇನ್ನೂ ಅದಮನೀಯವಾಗಿತ್ತು.

ಸುರೇಶ ತನ್ನ ಕಾಠಿಣ್ಯವನ್ನು ಕರಗಿಸಿ, ಒಂದಿಷ್ಟು ಮೃದುವಾಗಿರುವ ಲಕ್ಷಣ ತೋರಿಸಿದ್ದರೂ ಸದ್ಯಕ್ಕೆ ಸಾಕಾಗಬಹುದಿತ್ತು. ವಿಶ್ವಾಸನ ಪರೀಕ್ಷೆ ಮುಗಿಯುವ ತನಕ ಈ ಗೊಂದಲ ರಾಡಿ ಎಬ್ಬಿಸದಿದ್ದರೆ ಸಾಕಾಗಿತ್ತು.

ಅವಸರ ಕೈ ತೊಳೆದುಕೊಂಡು ಬೆನ್ನು ಹತ್ತಿದವರ ಬಳಗವೇ ಕಣ್ಣೆದುರು ಕಟ್ಟಿತು.

ಸುರೇಶನಿಗೆ ಶಕೂನ ಅವಸರ ಹಿಡಿದಿತ್ತು. ಬವಸಂತಿಗೆ ಸೋನಕ್ಕನ ಒಗೆತನ ಜೋಡಿಸುವ ಅವಸರದ ಧ್ಯಾಸ ತೊಡಗಿತ್ತು. ಸಾಹೇಬರಿಗೆ ಮಗಳ ಕಲ್ಯಾಣದ ಚಿಂತೆಯ ಅವಸರ ಹತ್ತಿತ್ತು. ಅವಸರದ ಅಗತ್ಯ ನನಗೆ-ಶ್ಯಾಮರಾಯನಿಗೆ ಇಬ್ಬರಿಗೇ ಇರಲಿಲ್ಲ. ಭವಿಷ್ಯ-ಮಂಗಳದ ಕಾರಣವಾಗಿ ನನಗೆ ಈ ಅವಸರ ಬೇಕಾಗಿರಲಿಲ್ಲ. ಶ್ಯಾಮರಾಯನಿಗೆ ತನ್ನ ಸ್ವಾರ್ಥ-ಸಾಧಕತ್ವದ ಕಾರಣವಾಗಿ ಈ ಗಡಿಬಿಡಿಯ ಅಗತ್ಯವಿರಲಿಲ್ಲ.

ನಾವು ಇಲ್ಲಿಯ ವರೆಗೂ ಮುಂದೂಡುತ್ತ ಬಂದ ಶಕೂನ ಲಗ್ನದ ವಿಷಯ ಇನ್ನು ಬಹಳ ದಿನ ತಡೆದು ನಿಲ್ಲುವ ಸಂಭವವಿರಲಿಲ್ಲ. ಸಾಹೇಬರು ಉತಾವಿಳರಾಗಿ ಪುಣೆ-ಮುಂಬೈಗೆ ಧಾವಿಸಿ ಈ ವಿಷಯಕ್ಕೆ ವಾಚ್ಯತೆ ಮೂಡಿಸುತ್ತಿದ್ದರು. ಕಾಕಾ-ಸೋನಕ್ಕ ಅವರಲ್ಲಿ ತಮ್ಮ ನಿವೇದನೆಯನ್ನು ಮಂಡಿಸುತ್ತಿದ್ದರು. ಶ್ಯಾಮರಾಯನನ್ನು ಗಾತಾಯಿಸುತ್ತಿದ್ದರು. ಬಹಳ ದಿನಗಳಿಂದ ಮುಚ್ಚಿಟ್ಟ ಗೌಪ್ಯ ಸ್ಫೋಟವಾಗುತ್ತಿತ್ತು. ಮೊದಲಿನಿಂದಲೂ ಹಿರಿಯರೆಂಬುವರೆಲ್ಲ ಈ ಕಂತ್ರಾಟದ ವಲಯದಾಚೆಗಿದ್ದರು. ಇಂದು ಅವರೆಲ್ಲ ಈ ಕುಲಾಲ-ಚಕ್ರದಲ್ಲಿ ಬರುತ್ತಿದ್ದರು. ಕದ್ದು-ಮುಚ್ಚಿ ನಡೆದ ಕಂತ್ರಾಟ ಬಯಲಿನಲ್ಲಿ ಅಂಗಾತ ಬೀಳುತ್ತಿತ್ತು.

ವಿಶ್ವಾಸ-ತುಳಸಿಯರ ಪ್ರಕರಣವು ಇನ್ನೂ ಬಹಳ ಜನಕ್ಕೆ ಅವಿದಿತವಾಗಿಯೇ ಇತ್ತು. ಕಾಕಾ-ಗಿರಿಜಾರ ಕಾಲ ಬೇರೆ. ಶ್ಯಾಮರಾಯ-ಬಸವಂತಿಯರ ಪ್ರಕರಣ ಕೂಡಿದ ಪ್ರಸಂಗ ಬೇರೆ. ಇಂದು ವಿಶ್ವಾಸ-ತುಳಸಿಯರ ಮಿಲನದ ಅರ್ಥವನ್ನು ಜಗತ್ತು ಹೇಗೆ ಮಾಡಿಕೊಂಡೀತೆಂಬುದೂ ಚಿಂತನೀಯವಾಗಿತ್ತು. ಮುಂಬೈಯ ವಿರಾಟ-ಜೀವನ-ಸಾಗರದಲ್ಲಿ ತುಳಸಿ-ವಿಶ್ವಾಸ ದರಿಯಾಮೆ ಖಸ್‌ಖಸ್. ಆದರೆ ನಾಳೆ ಅವರು ಪುಣೆಗೆ, ಸಾಂಗಲಿಗೆ, ಊರಿಗೆ ಬಂದರೆ...... ಬಂದೇ ಬರಬೇಕು.

ಬಾದಶಾಹೀ ಘಾಟಿನಲ್ಲಿ ಜೀವನವನ್ನು ತೇದ ರಾವಜೀಕಾಕಾ ದಿಲ್‌ದಾರ್ ಆಗಿ "ವಿಶ್ಯಾ ನನ್ನ ಹೋತಾನ – ಇಬ್ಬರ್ನ ಆಳೂ ಕುವ್ವತ್ತ ಇದ್ದಾಂವ ಇದ್ದಾನ" ಎಂದು ಪುಷಾರಕೀ ಹೊಡೆಯುವದರಲ್ಲಿ ಸಂದೇಹವಿರಲಿಲ್ಲ. ಆದರೆ ಸೋನಕ್ಕ ಇದನ್ನು ಸಹಜಾಸಹಜೀ ದಕ್ಕಿಸಿಗೊಂಡಾರೆಂದು ಅನ್ನಿಸದು. ಏಚು-ಪೇಚು, ಸುಳ್ಳು-ಸೊಟ್ಟು ಅರಿಯದ ವಿಶ್ವಾಸ, ನಾಳೆ ಇದರ ಗುಪಿತ-ಸ್ಫೋಟ ಮಾಡಿದರೆ, ಅವನಿಗೆ ಕಾಕಾನ ಭಯವಿಲ್ಲ. ಇದ್ದ ಅಳುಕು ಸೋನಕ್ಕ ಅವರದು. ಅವರೇನಾದರೂ ಇದರಿಂದ ರವಷ್ಟು ಅಳುಕಿದರೂ ಸಾಕು – ವಿಶ್ವಾಸ ಖಲಾಸ್ ಆದಂತೆ!

ನಾಕಾರು ತಿಂಗಳುಗಳ ಅವಧಿಯಲ್ಲಿ ಇದೂ ಪ್ರಸಂಗ ಧುತ್ತೆಂದು ಎದ್ದು ನಿಲ್ಲುತ್ತಿತ್ತು. ಅಷ್ಟರಲ್ಲಿ ಬಸವಂತಿಯೂ ಶ್ಯಾಮರಾಯನನ್ನು ಕೆದಕುತ್ತಿದ್ದಳು. ಸಾಹೇಬರು ಸುರೇಶ-ಶಕೂರ ಸಮಸ್ಯೆ ಎಬ್ಬಿಸುತ್ತಿದ್ದರು.

ದಿನ ಹಾಕುತ್ತ ನಡೆದ, ನನ್ನ ಕಾಯಕದ ಕಳಸ ಮುರಿದುಬೀಳುತ್ತಿತ್ತು. ಅಡಿಪಾಯ ಗಟ್ಟಿಮುಟ್ಟಿರದೆ ಕಟ್ಟಿದ ಕಟ್ಟಡ ಅನಾಮತ್ತಾಗಿ ಕುಸಿಯುತ್ತಿತ್ತು.

ಈ ವಿಚಾರವನ್ನು ನಾನು ಬಸವಂತಿಯ ಮುಂದೆ ಇಟ್ಟು —

"ಬಸವಂತೀ, ಸುರೇಶ ಖಟಪಿಟಿ ಮಾಡಿ ಶ್ಯಾಮರಾಯನ್ನ ಒಲಿಸಿಗೋಬೇಕು. ಶ್ಯಾಮರಾಯಂದು, ಸೋನಕ್ಕಂದು ಸಂಬಂಧ ಜೋಡಿಸಬೇಕು. ಸುರೇಶನ ಖಟಪಿಟಿ ಖೋತಾ ಆದರ, ನೀನs ತಯಾರ ಆಗಬೇಕು. ಕತ್ತರಿ ಬದಲೀ ಕತ್ತಿ ಹಾರ್‍ಯಾಡತಾವ. ನೀ ಬಿದ್ದೀ ಅಂದರ ನಿನ್ನ ಬೆನ್ನಿಗೆ ಭಾಳ ಹೆಣಾ ಬೀಳತಾವ." ಎಂದೆ.

"ಹಬ್ಬ ಹಸಾ – ಗೋದಿ ತುಸಾ ಅಂದರ ನಡ್ಯಾಂಗಿಲ್ಲ ದಾದಲ್ಯಾ. ಛೆಂದಾನ ಮನೀ ಕಟ್ಟಬೇಕಾದರ, ಕಲ್ಲ ಒಡ್ಯಾಕಬೇಕು. ಚಾಣೀ ಹಿಡ್ಯಾಕಬೇಕು. ಕಲ್ಲಿಗಿ ಪೆಟ್ಟ ಹತ್ತ್ಯೈತಿ ಅಂತ ಬಿಟ್ಟರ ಮನೀ ಆಗ್ಯಾಂಗಿಲ್ಲಾ. ಕಲ್ಲ ಉಳಿಸಿಕೊಂಡು ಮನೀ ಕಟ್ಟ್ಯೊ ಜೇತ ನಡದೈತಿ ನಿಂದು. ಹುಡುಗರ ಕಟ್ಟಿದ ಗುಬ್ಬೀ ಗೂಡಾ ಬಲ ಬರಾ ಆದರ ತಾಸ ನಿಂತೀತು – ಎರಡ ತಾಸ ನಿಂತೀತು. ಮುಂದರs ಮುರದ ಬೀಳೂ ದಸs. ತುಳಸಿನ್ನ ಕೂಡಿದ ಕಥೀ ಹೇಳಾಗ ವಿಶ್ವಾಸ ಅಂದಿದ್ದಾ: ಬಸವಂತೀ ಅವಸರ ಕೈ ತೊಳಕೊಂಡು ಬೆನ್ನ ಹತ್ತೇದ ನೋಡು. ನನಗ ಯಾಕೋ ಅವಸರs ಫಮುಂದ ಮುಂದ ಸುಗಸಾಕ ಪತ್ತೈತ್ಯಂತ. ದಾದಲ್ಯಾ, ನೀ ಆಚ್ಯಾರೆಪ್ಪಾ, ನಿನಗ ಪೂಜೇದಾಟs ಅವಸರ ಇರತೈತಿ. ಉಳದ ಬಾಬತ್ಯಾಗ ಆಂವೀ ನಡಿಗಿ ನಿಂದು.

ವಿಶ್ವಾಸನ ಅವಸರ್‍ಯ ನನಗ ಪಾಡ ಕಾಣತೈತಿ. ಕಾಕಾ-ಸೋನಕ್ಕ ಅವರ ಮುಂದ, ಸಾಬರು ತಮ್ಮ ಮಗಳ ಸುದ್ದೀ ತಗದರ ಏನಾಕ್ಕದಂತೀ? ವಸೂನ ಅಪ್ಪಾ ಈ ಹರಲಿಗೆ ಹ್ಯಾಂಗ ಕಿಮ್ಮತ್ತ ಕೊಡಲಿಲ್ಲಾ ಹಾಂಗ ನಿನ್ನ ಸಾಬರೂ ಕೊಡದಿದ್ದರ? ಅವರ ಮನಸ್ಯ ಜಳಜಳಾ ಇರಾಗ ಅವರಿಗ್ಯಾತಕ್ಕ ಅಳಕಾ? ಬ್ಯಾಡಾ, ಮನಸ್ಸಿಗೇ ಹಚಿಗೊಂಡರನ್ನು; ಏನಾಗಬೇಕಾಗೇದ? ಶಕೂ-ಸುರೇಶಂದು ಜಮಾಸೈತಿ. ಏನಾದರೂ ಅದೇನು ಬಿಘಡಾಸಾಂಗಿಲ್ಲಾ. ವಸೂಂದಂತೂ ಭಾಡಿಗೀನ್ಯ ಬಗೀಹರದೈತಿ. ಇವರ್‍ನ್ಯ ನಾನ್ಯ ತಡವತೀನಿ. ಕೇಳಿದರ್‍ಯ ಪಾಡ ಆತು. ಇಲ್ಲದಿರಕ, ಬೆಳಗಾಂವಿ ಸಾಬರ ತಾವಲಿ ನಾನ್ಯ ಹೋಗತೀನಿ. ಸೋನಕ್ಕನ್ನ ಇವರ್‍ಯ ಒಗತಾನಗೇಡಿ ಮಾಡಿದವರು. ಅವರ ಜೀಂವಾ ಅರ್‍ಯಾಕ್ಯ ನನ್ನ ಇಟಗೊಂಡು ಮಜಾ ಮಾಡಾಕ ಹತ್ತಿದವರು. ನನ್ನೂ ಘಸಾಸ್ಯಾರ. ನಿಮ್ಮನ್ನೂ ಘಸಾಸಲಾಕ ಹತ್ತ್ಯಾರ. ಸೋನಕ್ಕ ವರದೂ ತೆಪ್ಪಿಲ್ಲಾ. ನಿಮಗೂ ಅದರ ಪಾಪ ಇಲ್ಲಾ. ಎಲ್ಲಾದಕೂ ಇವರ್‍ಯ ಕಾರಣಂತ, ನಾನ್ಯ ಅವರಿಗಿ ಅಡ್ಡಬೀಳತೀನಿ. ನನ್ನ ಮಾತಿನ ಮ್ಯಾಲ್ಯ ಅವರದು ಖಾತ್ರೀಲೇನ್ಯ ವಿಶ್ವಾಸ ಕುಂಡರತೈತಿ. ಇವರದ್ಯ ನಾಲಾಯಖೀ ಆಗತೈತಿ. ನೆಲಾ ಎದ್ದ ಬಡ್ಯಾಕ ಹತ್ತಿತಂದರ ಗಮಜ ತಾನ್ಯ ಇಳೀತೈತಿ.

ನಿನಗ ಸುಳ್ಳ್ಯ ಎಲ್ಲಾರನೂ ಬದಕಸೂ ಆಶಾ ಹತ್ತೈತಿ ದಾದಲ್ಯಾ. ಸಾಯೂದಂದರ ಇಷ್ಟ್ಯಾಕ ಜೀಂವಾ ಅಳಕತೈತಿ. ಸಾಬರೂ ಬದಕಬೇಕು. ಇವರೂ ಬದಕಬೇಕು. ನಾನು-ಸೋನಕ್ಕನೂ ಬದಕಬೇಕು ಅಂದರ ಸಾಯಬೇಕ್ಯಾರು? ಸಾವೂ ಗಿರಾಕಿನ್ನ ಬ್ಯಾರೇ ತಯಾರ ಮಾಡೀದೇನು? ಯಾವದೋ ಜಾತ್ಯಾಗ ಪರ್ದಿಷ್ಟ ಐತ್ಯಂತ: ಮನ್ಯಾಗ ಯಾರರ ಸತ್ತರ, ಹೆಣದ ಮುಂದ ಅಳಾಕ್ಯ, ಕೂಲೀ ಅಳಾವರ್‍ನ್ನ ಹಚ್ಚೂದು. ಹಾಗ ಏನರ್‍ಯ ಜಮಾಸೀ ಏನು? ದಾದಲ್ಯಾ, ಹೊಟ್ಟಿ ನಮ್ಮದ್ಯ ಕಡ್ಯಾಕ ಹತ್ತೈತಿ; ಬ್ಯಾರೇದವರು ಅಜಿವಾನ ಮುಕ್ಕಿದರ ಏನ ಫಾಯದೇ?

ಬದಕಿಸ್ತೀನಿ, ಬದಕಿಸ್ತೀನಿ ಅಂತ್ಯ, ನೀ ಎಲ್ಲಾರನೂ ಕೊಲ್ಯಾಕ ಹಚ್ಚೀ! ಕೊಳತದ್ದರ ಕಳಕ ನಾತಾನ್ಯ ಎದ್ದೈತಿ. ಇನಾ ನಿನ್ನ ಮೂಗಿಗೆ ಅದರ ಹೊಲಸ ನಾತಾ ಬಡಧಾಂಗ ಕಾಣೂದಿಲ್ಲಾ. ನನ್ನ ಜೀಂವಾ ಗುದಮರಸಾಕ ಹತ್ತೈತಿ! ಬ್ಯಾಸಿಗ್ಯಾಗ ಮೈ ಬೆಂಪತರ, ನಾ ನಾಕ ಬ್ಯಾರೇ ಮೈತೊಕ್ಕೊಂಬೂ ಜಾತಿ. ನನಗ ಈ ನಾತ ತಡ್ಯಾಂಗಿಲ್ಲ ದಾದಲ್ಯಾ. ಈ ಸಾರೇ ಅವರು ಊರಲಿಂದ ಬರಲಿ, ನಾನ್ಯ

ಎದರ ನಿಂತು ಕೇಳಿಬಿಡತೀನಿ. ಭಾಳ ಆದರ ಇಲ್ಲೀದ ನಸ್ನ ಹಕಲಾಸ್ಯಾರು. ನೆಟ್ಟಗs ಬೆಳಗಾಂವೀ ದಾರೀ ಹಿಡೀತೀನಿ. ಇದ್ದ ಹಕೀಕತ್ತ ಸಾಬರಿಗೆ ಹೇಳಿ, ಇವರು ಬಂಗಲೇಕ ಬರದ್ಹಾಂಗ ಮಾಡತೀನಿ. ಊರಿಗೆ ಹೋಗಿ ವಾಡೇ ತಾಬೇದಾಗ ತಗೊಂತೀನಿ. ಅದರದೂ ಇವರಿಗೆ ಬಾಕಲಾ ಬಂವ ಮಾಡಸ್ತೀನಿ. ನಿನ್ನ ಕಾಕಾ ಅವರದು ಬಂದೂಕ ಹಾರೂದೂ ಬ್ಯಾಡಾ. ರಾಜಪ್ಪಾ, ಶಿವ್ಯಾ ಕೊಡಲೀ ಮಸಿ ಯೂದೂ ಬ್ಯಾಡಾ. ಬಸವಂತಿ ಕಣ್ಣ ತಗದರ ಸಾಕು, ಹಿಲಾಲ ಹಚ್ಚಿದಾಂಗ ಆಗ ತೈತಿ. ಎದೀ ಇದ್ದ ಗಂಡಸಾ ಬರಲಿ ನನ್ನ ಎದರಿಗಿ. ಕುಮುಕ ತೋರಸಲಿ. ದಾದಲ್ಯಾ, ನಿಮ್ಮ ದಾರೀ ನೋಡಾಕ ನನಗ ಸವಡ ಇಲ್ಲಾ. ಏನ ಮಾಡಬೇಕು ಅನ್ನೂದ್ನ ನಾ ಘಟ್ಟಿ ಮಾಡಿಕೊಂಡೀನಿ ದಾದಲ್ಯಾ. ನೀ ಹೀಂಗ ಯಾಕ ಮಾಡಿದಿ ಬಸವಂತೀ ಅಂತ ಕೇಳಬ್ಯಾಡ ದಾದಲ್ಯಾ. ನನ್ನ ಆಣಿ ಐತಿ ನಿನಗ. ಯಾಕ ಹೀಂಗ ಮಾಡಿದೆ ಅಂತs ಹೇಳೂ ಕಾಲ ಬಂದಾಗ ಹೇಳತೀನಿ. ನಿನಗ ಒಬ್ಬಗs ಹೇಳತೀನಿ. ಬಸವಂತಿಗೆ ನಿನ್ನ ಬಿಟ್ಟರ ಬ್ಯಾರೇದವರ ವಿಶ್ವಾಸ ಇಲ್ಲಾ.

ಬೆಳಕ ಹರ್‍ಯಾಕ ಬಂತ ದಾದಲ್ಯಾ. ಬೆಳ್ಳೀ ಚಿಕ್ಕಿ ಎಲ್ಲಿಗಿ ಇಳದ ಬಂತ ನೋಡು. ನೀ ಜರಾ ಅಡ್ಡಾಗ ಇನ್ನs. ನಾ ಮೈ-ಕೈ ಬಗೀಹರಿಸಿ ಇನ್ ತಾಸಲೇ ಎಬ್ಬಸ್ತೀನಿ. ಮಲಕೋ ಏಳು ದಾದಲ್ಯಾ... ನಾನs ಮಲಗಸಬೇಕೇನು ನಿನ್ನs? ನನ್ನ ಬಾಯ್ಲೇನs ಆಡಸಬೇಕು ಅನೂದು ಹಟಾ ನಿಂದು. ಸುರೇಶ ನಿನ್ನೆ ಮಲಗಿದ್ದನಲಾ ಸೋನಕ್ಕ ಅವರ ತೊಡೀ ಮ್ಯಾಲs. ನಿನಗೂ ಅದs ಚಟಾ. ಯಾರ ಸಿಕ್ಕಿದ್ದಿಲ್ಲ ನಿನಗ. ನನ್ನ ಜೋಡಿಸಿಕೊಂಡಿ ಜೀಂವಕ್ಕ. ಬಾ ಕೂಸs, ನನಗ್ಯಾಂಗ ಹರದೀತು ನಿನ್ನ ಪರ್‍ಲಾ."

ನಾನು ಕುಳಿತ ಕೋಚಿನ ಮೇಲೆ – ನನ್ನ ಬದಿಗೆ ಬಂದು ಕುಳಿತು ಬಸವಂತಿ, ತನ್ನ ತೊಡೆಯ ಮೇಲೆ ನನ್ನ ತಲೆಯಿಟ್ಟುಕೊಂಡು, ಚುಕ್ಕು ಬಡಿಯುತ್ತ, ಮೆಲು ದನಿಯಲ್ಲಿ:

ಹೆಣ್ಣೀನ ಜನುಮಕ ಅಣ್ಣ-ತಮ್ಮರು ಬೇಕು ।
ಬೆನ್ನ ಕಟ್ಟುವರು ಸಭೆಯೊಳಗ । ಸಾವಿರ ।
ಹೊನ್ನ ಕಟ್ಟುವರು ಉಡಿಯೊಳಗ ॥

ಸರದಾರ ಬರುವಾಗ ಸುರದಾಪ ಮಲ್ಲೀಗಿ ।
ಧೊರಿ ನನ್ನ ತಮ್ಮ ಬರುವಾಗ । ಯಾಲಕ್ಕಿ ।
ಗೊನಿ ಬಾಗಿ ಹಾಲ ಸುರದಾವ ॥

ಬಾವೂಲಿ ಇಟಗೊಂಡು ಕಾವೂಲಿ ತಿದ್ದುವ ।
ಗಾಳಿ ಬಂದತ್ತ ಬಳಕುವ । ನನ ತಮ್ಮ ।
ಬಾಳಿಯೆಲಿಗಿಂತ ಬಲು ಚೆಲುವ ॥

ಹಾಡಿನಲ್ಲಿ ಹೃದಯವನ್ನೇ ಹರಿಬಿಟ್ಟು ನನಗೆ ನಿದ್ರೆಯ ಮುಸಕನ್ನು ಎಳೆಯತೊಡಗಿದಳು ಬಸವಂತಿ. ಮಂಗಲ-ಪ್ರಭಾತಕ್ಕೆ ಸ್ವಾಗತದ ಶ್ರೀಕಾರ ಹೇಳ ತೊಡಗಿದ್ದಳು.

## ಹದಿನೈದು

ನಾನು ಮುಂಬೈಗೆ ಮರಳಿ ಬಂದು ಒಂದು ತಿಂಗಳಾಗಿತ್ತು ಅಷ್ಟೇ. ನಡುವೆ ಒಂದೆರಡು ಸಲ ವಿಶ್ವಾಸನನ್ನು ಕಾಣಲಿಕ್ಕೆ ಹೋದಾಗ ಸಹಜಾಸಹಜೀ ಅವನಿಗೆ ಪುಣೆಯಲ್ಲಿಯ ವಾರ್ತೆ ತಿಳಿಸಿ ಇಟ್ಟಿದ್ದೆ. ಅವನ ಪರೀಕ್ಷೆ ಮುಗಿಯುವ ವರೆಗೆ, ಎಲ್ಲ ಭಾನಗಡಿಯನ್ನು ನಿಭಾಸಿಕೊಂಡು ಹೋಗುವ ಬಗ್ಗೆ, ಬಸವಂತಿಯು ಕೊಟ್ಟ ಭರವಸೆ – ಪ್ರಸಂಗ ಬಂದರೆ ತಾನೇ ಅಧ್ವರ್ಯುವಾಗಿ ಮುಂದೆ ಸಾಗಿ ಹೋಗಿ ಸರ್ವ ಭಾರವನ್ನೂ ವಹಿಸುವ ಬಗ್ಗೆ ಕೊಟ್ಟ ಆಶ್ವಾಸನದ ವರದಿಯನ್ನು ಒಪ್ಪಿಸಿದ್ದೆ. ತನ್ನ ಅಭ್ಯಾಸ-ಸಾಧನೆಯಲ್ಲಿ ನಿಮಗ್ನನಾದ ವಿಶ್ವಾಸ – "ಮಮ ಕಿಂಚಿನ್ನ ದಹ್ಯತಿ" ಧರ್ತಿಯಲ್ಲಿ ನನ್ನ ವರದಿಯನ್ನು ಕುರಿತು ಅಷ್ಟು ಆಸ್ಥೆ ವಹಿಸಿದಂತೆ ಕಾಣಲಿಲ್ಲ. ಅವನು ಆಸಕ್ತಿ ವಹಿಸಬೇಕೆಂದು ನನಗೂ ಇಚ್ಛೆ ಇರಲಿಲ್ಲ.

ವಿಶ್ವಾಸ-ಸುರೇಶರ ಕಲ್ಯಾಣದ ದೃಷ್ಟಿಯಿಂದ, ಏನೆಲ್ಲ ಸಂಕಟಗಳನ್ನು ಧರಿತ್ರಿಯಂತೆ ಧಾರಣ ಮಾಡುತ್ತೇನೆಂದು ಸೋನಕ್ಕ ವಚನ ಕೊಟ್ಟಿದ್ದರು; ಅವರ ಸುಖ-ಸಂತಸಕ್ಕಾಗಿ ತಾವು ಸುಖಿ-ಸಮಾಧಾನಿಯಾಗುತ್ತೇನೆಂದು ಹೇಳಿದ್ದರು. ಅದನ್ನು ನಾನು ವಿಶ್ವಾಸನಿಗೆ ಹೇಳಿದೆ. ಆದರಿಂದಲೂ ಅವನು ಅಷ್ಟು ಸಮಾಧಾನಿ ಯಾದಂತೆ ಕಾಣಲಿಲ್ಲ.

"ದಾದಲ್ಯಾ. ಈ ಬಾಬತ್ತ್ಯಾಗs ತಾಯೀ ಮಾತಿನ ಮ್ಯಾಲ ನಂದು ಅಷ್ಟೇನೂ ವಿಶ್ವಾಸ ಇಲ್ಲಾ. ಆಕೀ ಸಮಾಧಾನಾ – ಆಕೀ ನಗೀ ಅಂದರ ಏನಂದೀ? ಅಳೂ ನುಂಗಿ ನಕ್ಕ ನಗೀ ಅದು. ಕ್ವಿನಾಯ್ನಕ್ಕ ಸಕ್ಕರಿ ಲೇಪ ಮಾಡಿಧಾಂಗ! ಆಕೀಗೆ ಸಮಾಧಾನ ಬಂದ್ಯದ ಅನ್ನೂದು ಭ್ರಮಾ; ಬಂದೀತು ಅನ್ನೂದೂ ಭ್ರಮಾ. ದಾದಲ್ಯಾ, ಶಾಕುಂತಲ ನಾಟಕಾ ನೀನೂ ಓದೀದಿ. ನಾನೂ ಓದೀನಿ. ಅದನ್ನ ಓದಿ ಮುಗಿಸಿದಾಗ ಒಂದು ಸಂಶಯಾ ಮನಸಿನ್ಯಾಗ ಉಳದಬಿಡತ್ಯದ. ಅದೇನಂದರ – ದುಷ್ಯಂತನ ಪುನರ್ಮಿಲನ ಆದ ಮ್ಯಾಲ, ಶಕುಂತಲಾನಲ್ಲೆ ಮುಂಚಿನ ಆಸ್ಥಾ ಉಳೀತೋ ಇಲ್ಲೋ ಅನ್ನೂದು. ಆಕಿನ್ನ ಬದಕಿಸಿದ್ದು ಭರತನಲ್ಲೀ ವಾತ್ಸಲ್ಯನs ಇರಬೇಕು. ಈ ವಾತ್ಸಲ್ಯದ ವಾಸನಾನs ತಾಯೀನ್ನೂ ಬದಕಿಸೀತು. ಆದರ ಆಕೀಗೆ ಸಮಾಧಾನ ಅನ್ನೂದು ಬರಲಿಕ್ಕಿಲ್ಲಾ. ಅದು ಬಂದರೂ ಅದಕ್ಕ ನಾನು ಸಮಾಧಾನ ಅನ್ನಲಾರೆ."

ವಿಶ್ವಾಸನ ಮಾತು ಶತಶಃ ಸತ್ಯವಾಗಿತ್ತು. ಅದರಲ್ಲಿ ಸಂಶಯವೇ ಇರ ಲಿಲ್ಲ. ಸೋನಕ್ಕ, ಪತಿ-ಪತ್ನಿ-ಸಂಸಾರ-ಸುಖ-ಪರಾಂಙ್ಮುಖರಾಗಿದ್ದರೆಂಬುವದರಲ್ಲಿ ಶಂಕೆಯೇ ಇರಲಿಲ್ಲ. ವಿಶ್ವಾಸ-ಸುರೇಶ, ಮೇಲಿಂದ ಮೇಲೆ ಅವರನ್ನು ದುಃಖ ವಿಮುಖರನ್ನಾಗಿ ಮಾಡುವ ಮಾತನಾಡುತ್ತಿದ್ದರು; ಆಣೆ-ಸೂರೆ ಹಾಕಿ ಅವರಿಂದ ವಚನ ತೆಗೆದುಕೊಳ್ಳುತ್ತಿದ್ದರು. ಅದರಿಂದಾಗಿ ಅವರ ನವೆತ ನಿಂತ ಭಾಸವಾಗು ತ್ತಿತ್ತು. ವಿಶ್ವಾಸ-ವಸೂರ ಸಾಖರಪುಡಾ ಆದ ಮೇಲೆ ಅವರಿಗೆ ಒಂದಿನಿಸು ಸಮಾ ಧಾನ ಬಂದಿತ್ತು. ಆದರೆ ಸುರೇಶನ ಮದುವೆಯ ಪ್ರಶ್ನೆ ಅವರನ್ನು ಚಿಟುಕು ಮುಳ್ಳಾಡಿಸತೊಡಗಿತು. ತಮ್ಮ ಯಜಮಾನರೇ ಅದಕ್ಕೆ ಕಲ್ಲು ಹಾಕುತ್ತಿದ್ದ! – ಹೆಣ್ಣಿನ ಕಡೆಯವರು – ಕನ್ಯೆ ಮದುವೆಯ ಮಾತಿಗೆ ಒಪ್ಪಿದ್ದರೂ, ಮಾತು-ಕತೆಗೆ ಬರದೆ ದಿನ ದೂಡುತ್ತಿರುವ ವಿಷಯ ಅವರನ್ನು ಕಾಡಿಸತೊಡಗಿತ್ತು. ಆ ಕಾಟದ ಮೂಲ ಕಾರಣ, ತಾವೇ ಎಂಬ ಮೂಲಭೂತ ತತ್ವಕ್ಕೆ ಅವರು ಮತ್ತೆ ತಿರುಗಿ,

ಒಳಗೊಳಗೇ ನವೆಯುತೊಡಗಿದ್ದರು. ಅವರು ಸುರೇಶನಿಗೆ ಕೊಟ್ಟ ವಚನದಲ್ಲಿ ಸ್ವ-ಸಮಾಧಾನಕ್ಕಿಂತ ಮಗನ ವಾತ್ಸಲ್ಯದ ನಿಸ್ವಾರ್ಥವೇ ಅಧಿಕವಾಗಿತ್ತು. ಅದರ ಅರ್ಥ ವಿಶ್ವಾಸನಿಗಾಗಿತ್ತು. ಬಸವಂತಿಗೂ ಆಗಿತ್ತು. ಅಂತೇ ಅವಳೂ ವಿಶ್ವಾಸನಂತೆ ಅವಸರ ಬೆನ್ನುಹತ್ತಿದ ಮಾತನ್ನು ಆಡಿದ್ದಳು. ಬಸವಂತಿ-ವಿಶ್ವಾಸ ಇಬ್ಬರೂ ಈ ಬಗ್ಗೆ ಚರ್ಚಿಸಿರಬೇಕು. ಅವರಿಗೆ ಅಂತ್ಯದ ದರ್ಶನ ಘಟಿಸಿರಬೇಕು. ಅವರಿಗೆ "ಅವಸರ"ದಲ್ಲಿಯ ಆಸ್ಥೆಗಿಂತ ಕರ್ತವ್ಯವನ್ನು ಮಾಡಿ ಮುಗಿಸುವ ಮನೀಷೆ ತೀವ್ರ ವಾಗಿತ್ತು. ಈ ತೀವ್ರ-ಧಾವನ-ಪಣಕ್ಕೆ ನಿಲ್ಲುವ ಪ್ರಥಮ ಮಾನವನ್ನು ಬಸವಂತಿ ಪಡೆದುಕೊಂಡಂತಿತ್ತು. ವಿಶ್ವಾಸನನ್ನು ಮುದ್ದಾಂ ಅವಳು ತಾನಾಗಿಯೇ ಹಿಂದೆ ಸರಿಸಿರಬೇಕು.

ದಾದಲ್ಯಾನಿಗೆ ಬಸವಂತಿಯನ್ನು ಹಿಂಬಾಲಿಸದೆ ಗತಿಯಿರಲಿಲ್ಲ. ಅವಳ ಅಂಗರಕ್ಷೆಯ ಕಾರಣದಿಂದ – ವಿಶ್ವಾಸನ ಕ್ಷೇಮದೃಷ್ಟಿಯ ಕಾರಣದಿಂದ, ದಾದಲ್ಯಾ ನಿಗೆ ಬಸವಂತಿಯನ್ನು ಹಿಂಬಾಲಿಸದೆ ಗತಿ ಇರಲಿಲ್ಲ.

ಸುರೇಶನಿಂದ ಕಾಗದ ಬರದೆ ತಿಂಗಳ ಮೇಲಾಗಿತ್ತು. ಪುಣೆಯಲ್ಲಿಯ ಹಾಲ್‌ಚಾಲೀ ತಿಳಿಯಲು ಮಾರ್ಗವೇ ಇರಲಿಲ್ಲ. ಶ್ಯಾಮರಾಯ ಖಚಿತವಾಗಿ ಪುಣೆಗೆ ಬಂದು ಹೋಗಿರುವ ಸಂಭವವಿತ್ತು. ಅವನ-ಸುರೇಶನ ಭೆಟ್ಟಿಯಾಗಿರುವ ಸಂಭವವಿತ್ತು. ಏನಾದರೂ ಮಾತು-ಕತೆ ಆಗಿರಬಹುದಾಗಿತ್ತು. ಬಸವಂತಿ ಉತಾ ವಿಳಳಾಗಿ ಎಲ್ಲಿ ಶಕೂನ ಮದುವೆಯ ಸುದ್ದಿ, ಸೋನಕ್ಕನ ಪ್ರಕರಣವನ್ನು ಕೆದಕಿ ದ್ದಳೋ ಏನೋ? ಅದರಂತೆ ಶಕೂ-ಸಾಹೇಬರಿಂದೂ ಕಾಗದ ಬಂದಿರಲಿಲ್ಲ. ಖಾಸಗೀ ಪತ್ರವ್ಯವಹಾರಕ್ಕೆ – ಖಾಸಾ ಜನರಿಗೆ ಕ್ಷೇಮಸಮಾಚಾರ ತಿಳಿಸುವದಕ್ಕೆ, ಸಾಹೇಬರು ಪ್ರತಿ ರವಿವಾರದ ಒಂದೆರಡು ಗಂಟೆಯ ಅಮೂಲ್ಯ ಕಾಲವನ್ನು ವೆಚ್ಚಿಸುತ್ತಿದ್ದರು. ಅವರ ಈ ನಿಯಮಿತತನಕ್ಕೂ ಏನೋ ಧಕ್ಕೆ ಬಂದಿರಬೇಕು, ಅವರಿಂದಲೂ ಕಾಗದವಿರಲಿಲ್ಲ. ನನ್ನ ಅಸ್ವಾಸ್ಥ್ಯತೆ ಹೆಚ್ಚಿತು. ಜೀವ ಚುಟಪುಟಿಸ ತೊಡಗಿತು. ಎಲ್ಲ 'ಆಲ್‌ಬೇಲ್' ಇದ್ದರೆ ವಿವಂಚನೆ ಇರುತ್ತಿರಲಿಲ್ಲ. ಆದರೆ 'ಆಲ್‌ಬೇಲ್' ಇಡುವ ಶಾಂತಿದೂತರು ಯಾರೂ ಇರಲೇ ಇಲ್ಲ. ಬಸವಂತಿಗೆ ಧಾವತಿ, ಅವಳ ಬೆನ್ನಿಗೆ ಸುರೇಶನಿಗೆ ಧಾವತಿ, – ಸಾಹೇಬರಂತೂ ತೀರಾ ಉತಾ ವಿಳರು. ಇಷ್ಟು ದಿನ ಅವರು ತಡೆದು ನಿಂತದ್ದೇ ಅಪರೂಪ. ಉತಾವಿಳತನದಲ್ಲಿ ಸಾಹೇಬರ ತಲೆಯನ್ನೇ ಮೆಟ್ಟುವ ಗರುಡ-ಭರಾರಿ ಸ್ವಭಾವದ ನಮ್ಮ ಗೋವಿಂದ

ಭಟ್ಟ ತನ್ನ ತ್ರೋಟಕ ಕಾರ್ಡಿನಲ್ಲಿ "ಇತ್ತ ಕಡೆಗೆ ಎಲ್ಲ ಕ್ಷೇಮವೆನ್ನಲಿಕ್ಕೆ ಅಡ್ಡಿಯಿಲ್ಲ" ಎಂಬ ಅಡ್ಡಗೋಡೆಯ ಮೇಲಿನ ದೀಪದಂತಹ ಭಾಷೆಯನ್ನು ವಾಪರಿಸುತ್ತಿದ್ದ; ಆದರಿಂದಲೂ ಏನೂ ಸೂಚ್ಯವಾಗುವಂತಿರಲಿಲ್ಲ. ಗೋವಿಂದಭಟ್ಟನಿಗೂ—ಬರವಣಿಗೆಗೂ ಬಹಳ ದೂರದ ನಾತೇ ಇರುವದರಿಂದ ಅವನ ಸೂಚ್ಯ ಬರವಣಿಗೆಯ ಅರ್ಥವನ್ನು ಕುರಿತು ವಿಚಾರಮಾಡುವ ಗರಜು ಅಷ್ಟಾಗಿ ಇರಲಿಲ್ಲ.

ದಾದಲ್ಯಾನಿಗೆ ಗಡಿಬಿಡಿ—ಧಾಂದಲೆಯಲ್ಲಿ ಅಚೂಕವಾಗಿ ದಾರಿ ಸಿಗುತ್ತಿತ್ತು. ಆದರೆ ಈ ಅಸಹ್ಯ ಶಾಂತಿ ಅವನ ಅಶಾಂತಿಗೆ ಕಾರಣವಾಯಿತು. ಅವನು ದಿಕ್ಕು ಕಾಣದೆ ನಿಂತಲ್ಲಿಯೇ ಪ್ರದಕ್ಷಿಣೆ ಹಾಕುವಂತಾಯಿತು.

ನನ್ನ ಈ ಅಶಾಂತಿಯ ಪ್ರಸ್ತಾಪವನ್ನು ತುಳಸಿಯ ಮುಂದೆ ಮಾಡಿದ್ದೆ. ತುಳಸಿ, ಬಸವಂತಿಯಂತೆಯೇ ಅವ್ಯಾಜ-ಮನೋಹರ-ನಗೆಯನ್ನು ನಕ್ಕು —

"ಬಸವಂತಿಗೆ, ರಾಜಾಗ ಅವಸರನ್ಸ ಧಾವತ್ಯಾಗಿ ಬೆನ್ನ ಹತ್ತೇದ. ನಿನಗ ಧಾವತೀನ್ಸ ಇಲ್ಲಲಾ ಅನ್ನೂ ಸಂಕಟಾ ಬೆನ್ನ ಹತ್ತೇದ. ಕಾರಭಾರ ಇದ್ದಿದ್ದಿಲ್ಲಂದರ ನಿನ್ನ ಜೀವಕ ಸಮಾಧಾನ್ಸ ಇರೂ ಹಾಂಗ ಕಾಣಸೂದಿಲ್ಲಾ. ಎಲ್ಲಾರಿಗೂ, ಪರೀಕ್ಷಾ, ಅಭ್ಯಾಸದ್ದು ಕಾಳಜೀ ಇರತದ. ನಿನಗೇನು ಆದರ ದರಜ್ಸ ಇದ್ಹಾಂಗ ಕಾಣಸೂದಿಲ್ಲಾ."

ಎಚ್ಚರಿಕೆಯ ಬಾಣ ಬಿಟ್ಟಿದ್ದಳು.

ವಿಶ್ವಾಸ ಅಭ್ಯಾಸ, ಪರೀಕ್ಷೆಗಾಗಿ ದೇಹದ ಗಂಧ-ಕೊರಡ ತೇಯುತ್ತಿದ್ದ. ಕದಾಚಿತ್ ನನ್ನ ಕೊರಡು ಸವೆದೀತೆಂಬ ಭೀತಿಯಿಂದ ನಾನು ಅದನ್ನು ಅನಾಮತ್ತಾಗಿ ಎತ್ತಿ ಪ್ಯಾಕ್-ಬಂದ್ ಮಾಡಿ ಇಟ್ಟಿದ್ದೆ. ತೀರಾ ನಿರ್ಲಿಪ್ತಭಾವದಿಂದ, ವಾರ ಪತ್ರಿಕೆಯ ಪುಟಗಳನ್ನು ತಿರುವಿ ಹಾಕುವ ಓದುಗನಂತೆ ನಾನು ಎಮ್.ಏ.ದ ಪುಸ್ತಕಗಳನ್ನು ಹಾತಾಳಿಸುತ್ತಿದ್ದೆ. ಸಾಂಗಲಿಯಲ್ಲಾಗಿದ್ದರೆ ವಸೂ ಗಿರಡಿ ತಿರುಗಿಸುತ್ತಿದ್ದಳು. ಇಲ್ಲಿ ಯಾರೂ ನನ್ನನ್ನು "ಯಾಕೆ?" ಎಂದು ಕೇಳುವವರೇ ಇದ್ದಿಲ್ಲ. ತಯ್ಯಬ್ಜಿಯವರ ಹುಡುಗರ ಟ್ಯೂಶನ್ ಸರಿಯಾಗಿ ನಡೆದಿತ್ತು. ಅವರು ಹಚ್ಚಿಕೊಟ್ಟ ಗುಜರಾಥೀ ಖಾನಾವಳಿಯ ಬಿಲ್ಲು ಕಡಿಮೆ ಪ್ರಮಾಣದಲ್ಲಿ ಬರುತ್ತಿತ್ತು. ಅವರೂ ಕೂಡ ದಾದಲ್ಯಾನನ್ನು "ಲಾಯಖ್ ಇಸಮು" ಸದರಿನಲ್ಲಿ ಒಗೆದು ನಿಶ್ಚಿಂತರಾಗಿದ್ದರು. ವಿಶ್ವಾಸನಿಗೆ ತನ್ನ ಪೈಲಾ ನಂಬರ ಜಾಗೀರಿಯ—ಸ್ಥಾನದ ಆಸ್ಥೆ, ಹವ್ಯಾಸವಿತ್ತು. ದಾದಲ್ಯಾನಿಗೆ ಅದರದೂ ಬೇಫಿಕೀರಿ. ಇಂಟರ್—ಬೀ.ಏ.

ದಲ್ಲಿ ಸುಷ್ಮನೇ ಕ್ಲಾಸು ಬಂದೆನೆಂದು ಈಗ ಪಳಹಳಿಸತೊಡಗಿದ.

ನಾನು ಇಲ್ಲಿಯ ವರೆಗೆ ಮಾಡುತ್ತ ಬಂದ ಕಂತ್ರಾಟಗಳು ಅಭ್ಯಾಸದ ಮೇಲಿನ ನನ್ನ ಲಕ್ಷ್ಯವನ್ನು ಸಂಪೂರ್ಣವಾಗಿ ಹಾರಿಸಿಬಿಟ್ಟವು. ಹಾಗೆ ನೋಡಿದರೆ ದಾದಲ್ಯಾ ನಿರ್ವೈರ ಪ್ರಾಣಿ. ಆದರೆ ಈಗ ಮಾತ್ರ ಅವನಿಗೆ – ಅಭ್ಯಾಸಕ್ಕೆ ಹಾವು ಮುಂಗಲಿಯ ದ್ವೇಷ ಮಸೆಯತೊಡಗಿತು. ಒಂದೆ ಪ್ರಥಮವರ್ಗದಲ್ಲಿ ಬಂದ ಮಾನ ವನ್ನು ಕಾಯ್ದುಕೊಳ್ಳಬೇಕೆಂದರೆ, ವಿಶ್ವಾಸನಂತೆ ಗಂಧಕೊರಡ ತೇಯದೆ ಗತಿ ಇರಲಿಲ್ಲ. ವಿಶ್ವಾಸನಿಗೆ ಸರ್ವವ್ಯಾಪವನ್ನೂ ನುಂಗಿ ನೀರು ಕುಡಿದು, ನಿಗ್ರಹದ ಲಗಾಮು ಕೈಯಲ್ಲಿ ಹಿಡಿದು. ನಿಶ್ಚಿತ ಗುರಿಯ ಕಡೆಗೆ ಧಾವಿಸುವ ತಾಕತ್ತು ಇತ್ತು. ನನಗೆ ನನ್ನ ತಾಕತ್ತಿನಲ್ಲಿಯ ಸಾಮರ್ಥ್ಯವೇ ಢಳಮಳಿಸತೊಡಗಿದ ಭಾಸವಾಗ ಹತ್ತಿತ್ತು. ಸರ್ವ ಶಕ್ತಿ. ಸರ್ವ ಸಾಮರ್ಥ್ಯವನ್ನು ಕೇಂದ್ರೀಕರಿಸಿ ನಾನು ಅಭ್ಯಾಸಕ್ಕೆ ಕೂಡುವದು ದೊಡ್ಡ ಮಾತಾಗಿರಲಿಲ್ಲ. ಹಾಗೆ ಗಂಧಕೊರಡ ತೇಯುವ ಬಾಬತ್ತಿ ನಲ್ಲಿ ನಾನು ವಿಶ್ವಾಸನನ್ನೂ ಮೂರು ಮಾರು ಹಿಂದೆ ಹಾಕುವ ಬಲ ಪಡೆದಿದ್ದೆ. ಆದರೆ ಈ ಬಲದ ವಿನಿಯೋಗ ಅನ್ಯ ಲಿಗಾಡಿಗೆ ಈಗ ಮೀಸಲಾಗಿತ್ತು. ವಿಶ್ವಾಸ ಕೇಳಿದ ಆರು ತಿಂಗಳ ಅವಧಿಯ ಪ್ರಜ್ಞೆ ನನಗೆ ಈಗ ಬರತೊಡಗಿತು. ಆ ಅವಧಿಯ ಅಗತ್ಯ ಈಗ ಅನ್ನಿಸತೊಡಗಿತ್ತು. ಈ ಅವಧಿಯನ್ನು ಕೇಳುವಾಗ ವಿಶ್ವಾಸ ಎರಡು ನಿಶ್ಚಿತ ಮಾತು ಹೇಳಿದ್ದ: ಒಂದು, ಅಭ್ಯಾಸ. ಇಲ್ಲ – ಇನ್ನೊಂದು. ಗೃಹಕೃತ್ಯದ ಸಮಸ್ಯಾಪರಿಹಾರ. ಅವನಿಗೆ ಬೆಂಗಾವಲಾಗಿ ನಿಂತು. ನಾವು ವಿಶ್ವಾಸನನ್ನು ಅಭ್ಯಾಸದ. ಪರೀಕ್ಷೆಯ ಸಾಧ್ಯಕ್ಕೆ ಮುಟ್ಟಿಸುವ ಭಾರ ಹೊತ್ತಿದ್ದೆವು. ಅದರಲ್ಲಿ ಅಧ್ವರ್ಯು ನಾನೇ ಆಗಿದ್ದೆ. ಆ ಅಧ್ವರ್ಯು-ವಿಳ್ಯವತ್ತುವಾಗ ನನ್ನ ಸ್ವಂತದ ವಿಚಾರ ಬಂದು ಹೋಗಿದ್ದರೂ. ಅದನ್ನು ಯಃಕಶ್ಚಿತ್ ಬಾಬಿನಲ್ಲಿ ದಬ್ಬಿ, ನಾನು ನಿಃಸ್ವಾರ್ಥದ – ತ್ಯಾಗದ ತುರಾಯಿಯನ್ನು ತಲೆಗೆ ಸಿಗಿಸಿಕೊಂಡ ಅಭಿಮಾನ ಪಟ್ಟಿದ್ದೆ. ಈಗ ತುರಾಯಿಯ ಮಾನವೂ ಮುಕ್ಕಾಗದೆ ಅಚ್ಚಳಿಯದಂತೆ ಉಳಿಯ ಬೇಕು – ನನ್ನ ಪ್ರಥಮ-ವರ್ಗದ ಮಾನವೂ ಶಾಬೂತಾಗಿರಬೇಕು – ದಾದಲ್ಯಾ ಈ ದ್ವಿಮುಖ ಸಾಹಸವನ್ನು ಸಾಧಿಸಬೇಕಾಗಿತ್ತು.

"ಯಾ ನಿಶಾ ಸರ್ವಭೂತಾನಾಂ ತಸ್ಯಾಂ ಜಾಗರ್ತಿ ಸಂಯಮಿ" ಧರ್ತಿ ಯಲ್ಲಿ ದಾದಲ್ಯಾ ರಾತ್ರಿಯನ್ನು ಅಭ್ಯಾಸಕ್ಕೆ. ಹಗಲನ್ನು ಕಿತಿಬಿಗೆ ಮೀಸಲಿರಿಸುವ ನಿರ್ಧಾರ ಮಾಡಿದ. ನಿರ್ಲಿಪ್ತಭಾವದಿಂದ ನಿರ್ಧಾರಕ್ಕೆ ಬಂದ. ನಡೆದಷ್ಟು ದಿನ

ನಡೆಯಿತು. ನಡೆಯದಿದ್ದರೆ ಇಲ್ಲ. ತನ್ನದೇನು ಭೀಷ್ಮನಿರ್ಧಾರವಲ್ಲ.

ತಳಮಳ, ಕಳವಳ ತಂತಾನೇ ನಿಂತಿತು. ನಿರ್ಧಾರಕ್ಕೆ ಬಂದು ನಿಂತ ದಾದಲ್ಯಾ ಸಲ್ಲಿ ಜೀವ-ನಾಡಿ ಪುನಃಶ್ಚ ಸ್ಪಂದಿಸತೊಡಗಿತು.

ನೂರಿನ್ನೂರು ಅಶ್ವಶಕ್ತಿಯ ಧಾವನಶಕ್ತಿ ಸಂಚಾರವಾದ ಧರ್ತಿಯಲ್ಲಿ ನಾನು ಅಭ್ಯಾಸಕ್ಕೆ ಮೊದಲುಮಾಡಿದೆ. ಹಿಂದೆ ಓದದೆ ಬಿಟ್ಟದ್ದು, ಮುಂದೆ ಓದ ಬೇಕಾದುದನ್ನು ಖೋಕಾದಲ್ಲಿ ತುಂಬತೊಡಗಿದೆ. ಹಿಡಿದಷ್ಟು ಹಿಡಿಯಿತು. ಹಿಡಿ ಯದ್ದು ಹೊರಗೆ ಚೆಲ್ಲಿತು. ಓದು – ನೋಟ್ಸ ತೆಗೆಯುವದು – ಟಿಪ್ಪಣಿ ಜೋಡಿಸಿ ಕೊಳ್ಳುವದು ಸಾಗೇ ಇತ್ತು. ಇದೇ ಧರ್ತಿಯಲ್ಲಿ ಮೂರು-ನಾಲ್ಕು ತಿಂಗಳು ದುಡಿದರೆ ಸಹಜಾಸಹಜೀ ದ್ವಿತೀಯ ಶ್ರೇಣಿಯಲ್ಲಿ ಬಂದು ನಿಂತೇನೆಂಬ ಭರವಸೆ ಬರತೊಡಗಿತು. ಭರವಸೆ ದೃಢವಾಗುತ್ತ ನಡೆದಂತೆ ಅಮಿತ ಉತ್ಸಾಹವೂ ಮೂಡ ತೊಡಗಿತು. ಈ ಭರವಸೆ ಅಮಿತ ಉತ್ಸಾಹದ ಧುಂದಿ ಏರತೊಡಗಿತು. ಇಂಥ ಧುಂದಿ ಏರಬೇಕಾದರೆ – ಏರುವ ಸಮಯದಲ್ಲಿ, ದಾದಲ್ಯಾ ನೇಮಕೀ ಕೆಲವು ಅವಿಸ್ಮರಣೀಯ ಪ್ರಸಂಗಗಳನ್ನು ನೆನಪಿಸಿಕೊಂಡು ಸಾಹಸ-ಸನ್ನದ್ಧನಾಗುತ್ತಾನೆ.

ಬೆಳಗಾಂವಿಯ ನಾಯಕ ವಕೀಲರಲ್ಲಿ ಗಂಟೆ ಬಡೆದ ಸ್ಮರಣೆ ಅವನಿಗೆ ಬರುತ್ತದೆ. ಗೋವಿಂದಭಟ್ಟನ ವಿಶಾಲ ಪರಿವಾರದ ನೆನಪಾಗುತ್ತಿದೆ. ರಾವಜೀ ಕಾಕಾ ಹೊಲಿಸಿಕೊಟ್ಟ ನಾಕು ಅಂಗಿ-ಚಣ್ಣದ ಸ್ಮೃತಿ ಮಿಂಚುತ್ತದೆ. ಪಂತಮಾಮಾ, ಬನೂಮಾಮಿ ಅಂಗೈಯಲ್ಲಿ ಹಿಡಿದು ಕೂಸಿನೋಪಾದಿಯಲ್ಲಿ ಬೆಳೆಸಿದ ಋಣ ಜಾಗರಿಸುತ್ತದೆ. ಸಾಹೇಬರು ಕೊಟ್ಟ ನೂರು ರೂಪಾಯಿ – ಎರಡು ಭಾಂಡಿನ ನೆನಪು ಚಿತ್ರಫಲಕದ ಮೇಲೆ ಮೂಡುತ್ತದೆ. ಎಸ್. ಈ. ಸಾಹೇಬರು 'ಇಂಟರ್-ವ್ಯೂ'ಗೆ ಹೊಲಿಸಿಕೊಟ್ಟ ಸೂಟಿನ, ಪಾಕೆಟ್-ಮನಿಯ ಸ್ಮೃತಿ ಮರುಕಳಿಸುತ್ತದೆ. ದಾದಲ್ಯಾನ ಚಿತ್ತ-ಚೈತನ್ಯ ಪುಲಕಿತವಾಗುತ್ತದೆ. ಇವರೆಲ್ಲರ ಋಣಪರಿಹಾರದ – ಅಖಂಡ ಜಾಗರದ ಪಂಚಧಾತುವಿನ ಜಾಗಟೆ ನಿನದಿಸುತ್ತದೆ. ದಾದಲ್ಯಾ ಸನ್ನದ್ಧ ನಾಗಲು ಇಷ್ಟು ಸಾಕಾಗುತ್ತದೆ. ಈಗ ದಾದಲ್ಯಾ ಈ ದೇವತಾ-ಸದೃಶ್ಯ ಪುಣ್ಯ ಜೀವಿಗಳ ಸ್ಮರಣಮಾತ್ರದಿಂದ ಜಾಗರಿಸಿ ಸನ್ನದ್ಧನಾಗಿದ್ದ. ಗಂಧಕೊರಡ ತೇಯ ತೊಡಗಿದ್ದ.

ಕೇವಲ ಒಂದೇ ಒಂದು ತಿಂಗಳು ಮಾತ್ರ ನಾನು ಈ ಬೇಭಾನಸ್ಥಿತಿಯಲ್ಲಿದ್ದೆ.

ಸಾಹೇಬರು ಸಮೀಪದಲ್ಲಿಯೇ ಮುಂಬೈ-ಪುಣೆಯ ಪ್ರಯಾಣ ಹೊರಡ

ಲಿರುವರೆಂದು ಶಕೂನಿಂದ ಕಾಗದ ಬಂದಿತು. ತನಗೂ ಮುಂಬೈಯಲ್ಲಿ ಒಂದಿಷ್ಟು ಜರೂರಿಯ ಕೆಲಸವಿದೆ – ಬರಲಿದ್ದೇನೆ ಎಂದು ಶ್ಯಾಮರಾಯನಿಂದಲೂ ಕಾಗದ ಬಂತು. ಶಕೂ ಸಾಹೇಬರ ಕೂಡ ಮುಂಬೈಗೆ ಬರುವವಳಿದ್ದಾಳೆ – ಆಗ ತಾನೂ ಎಂಟು ದಿನದ ರಜೆಯನ್ನು ಪಡೆದು ಮುಂಬೈಗೆ ಬರಲಿದ್ದೇನೆಂದು ಸುರೇಶ ತಿಳಿಸಿದ.

ಸಾಹೇಬ ಬ್ರುವರು ಪುಣೆಯಲ್ಲಿ ಇಳಿದು, ನಂತರ ಮುಂಬೈಗೆ ಬರಲಿದ್ದರೋ, ಅಥವಾ ಮುಂಬೈ ಯಾತ್ರೆಯನ್ನು ಮೊದಲು ಮುಗಿಸಿ ನಂತರ ಪುಣೆಗೆ ಪ್ರಯಾಣಿಸಲಿದ್ದರೋ ಎನ್ನುವದು ಶಕೂನಿಂದ ಬಂದ ಕಾಗದದಿಂದ ವಿದಿತವಾಗುವಂತಿರಲಿಲ್ಲ. ಸುರೇಶನ ಕಾಗದದಲ್ಲಿ ಅವರ ಪುಣೆಯ ಮುಕ್ಕಾಮಿನ ವಿಚಾರ ನಮೂದಿತವಾಗಿರಲಿಲ್ಲ.

ಮೂವರು ಮಾತಾಡಿಕೊಂಡಂತೆ ಮುಂಬೈ ಮುಕ್ಕಾಮಿನ ಬಗ್ಗೆ ಬರೆದಿದ್ದರು. ಶಕೂ-ಸುರೇಶರ ವಿನಾ ಅನ್ಯರು ಈ ಬಗ್ಗೆ ಮಾತಾಡಿಕೊಂಡಿರುವದು ಶಕ್ಯವಿರಲಿಲ್ಲ. ಶಕ್ಯವಿದ್ದರೂ ಅದರ ವಿವರ ನನಗೆ ಸಂಬಂಧಿತವಲ್ಲವೆಂದು ನಮೂದಿಸುವದನ್ನು ಬಿಟ್ಟಿರುವ ಸಂಭವವಿತ್ತು. ಕಾರಣ ಎಷ್ಟೋ ಕಾಮಗಿರಿ-ಕಂತ್ರಾಟದ ಟೆಂಡರುಗಳು ಸರಕಾರದಿಂದ ಮಾನ್ಯತೆ ಪಡೆಯಬೇಕಾಗಿರುವದರಿಂದ – ಅವಕ್ಕೆ ಬೇಗ ಮಾನ್ಯತೆ ದೊರಕಬೇಕೆಂಬ ಉದ್ದೇಶದಿಂದ, ಕಂತ್ರಾಟದಾರ ಶ್ಯಾಮರಾಯ ಅವನಿಂದ ಕೆಲಸ ಮಾಡಿಸಿಕೊಳ್ಳುವ ಸಾಹೇಬರು, ಇಬ್ಬರೂ ಮುಂಬೈಗೆ ಬರುವ ಶಕ್ಯತೆ ಇತ್ತು. ಇಂಥ ವಿಷಯ ನನ್ನ ಅವಗಾಹನೆಗೆ ಮೀರಿದ್ದೆಂದು ಭಾವಿಸಿದರೂ – ಸಹಜವಾಗಿಯಾದರೂ ಅದನ್ನು ನಮೂದಿಸಲು ಅಡ್ಡಿ ಇರಲಿಲ್ಲ; ಆದರೆ ಇಬ್ಬರ ಕಾಗದದಲ್ಲೂ ಆ ಬಗ್ಗೆ ಚಕಾರ ಶಬ್ದವಿರಲಿಲ್ಲ.

ಆದರೆ ಕಚೇರಿಯ ಕಾಮಗಿರಿಯ ಸಲುವಾಗಿ ಬರಲಿದ್ದಾರೆಂಬ ಬರೆಯಲಿಕ್ಕೆ ಶಕೂನಿಗೆ ಸಾಧ್ಯವಿತ್ತು; ಸಹಜವಿತ್ತು. ಅವಳೂ ಅದನ್ನು ಕುರಿತು ಬರೆದಿರಲಿಲ್ಲ. ಅವಳು ಬರೆದಿರಲಿಲ್ಲವೆಂದ ಮೇಲೆ – ಕದಾಚಿತ್ – ಅದು ಅವಳಿಗೇ ಸಂಬಂಧಿಸಿದ ವಿಷಯವಾಗಿದ್ದರೆ...... ಅದನ್ನು ತಾನೇ ಬಾಯಿ ಬಿಟ್ಟು ಹೇಳಲು ನಾಚಿರಬೇಕು. ನನ್ನಲ್ಲಿ ನಾಚುವ ಅವಶ್ಯಕತೆ ಇರಲಿಲ್ಲ. ಇದೇ ಕಾರಣದಿಂದ – ಅವರು ಬರುತ್ತಿದ್ದರೆ – ಅವರ ಬೆನ್ನಿಗೆ ಸುರೇಶ ಬರುವದು ಶಕ್ಯವಿರಲಿಲ್ಲ. ಆದರೆ ಈಗ ಅವನೂ ಬರಲಿದ್ದ.

ಶಕೂ ಬೆಳಗಾಂವಿಯಿಂದ ಬರೆದಿದ್ದಳು. ಶ್ಯಾಮರಾಯ ಪುಣೆಯಿಂದ ಬರೆ

ಓದ್ದ. ಅಂದರೆ ಅವನು ಈಗ ಪುಣೆಯಲ್ಲಿರುವದು ಖಚಿತ. ಆದರ ಸುರೇಶನ ಕಾಗದ ದಲ್ಲಿ ಇವರ ಬಗ್ಗೆ ಚಕಾರ ಶಬ್ದವೂ ಇರಲಿಲ್ಲ. ತಾನು ತುಳಸಿಯ ಮನೆಯಲ್ಲಿ ಇಳಿಯುತ್ತೇನೆ – ಅವಳಿಗೆ ಇದನ್ನು ತಿಳಿಸಿ ಇಡು ಎಂದಿಷ್ಟೇ ಸುರೇಶ ಬರೆದಿದ್ದ. ಸಾಹೇಬ-ಪ್ರಭೃತಿಗಳು ಎಲ್ಲಿ ಇಳಿಯುವರೆಂಬ ಬಗ್ಗೆ ಏನೂ ಪತ್ತೆ ಇರಲಿಲ್ಲ. ಶ್ಯಾಮರಾಯನೂ ತನ್ನ ವಾಸ್ತವ್ಯದ ಠಾಂವ್-ಠಿಕಾಣೆ ತಿಳಿಸಿರಲಿಲ್ಲ.

ಮೂರೂ ಪತ್ರಗಳು ಏಕಕಾಲಕ್ಕೆ ಬಂದವು. ನನ್ನ ಶಾಂತಿ ಕದಡಿತು. ಎದೆ ಯಲ್ಲಿ ಮೂರೂ ಕಾಗದಗಳ ಕಡೆಗೋಲು ಕಡೆಯತೊಡಗಿದವು. ಹೃದಯ ಮಂಥನಕ್ಕೆ ಭೀಕರವಾಗಿ ಮೊದಲಾಯಿತು.

ಸಾಹೇಬರು ತಮ್ಮ ಬರವಿನ ಕಾರಣವನ್ನು ತಿಳಿಸಿ ತಾವೇ ಖುದ್ದಾಗಿ ಬರೆದಿದ್ದರೆ – ಅದು, ಶಕೂ-ಸುರೇಶರ ಮದುವೆಯ ವಿಷಯಕ್ಕಿದ್ದರೆ – ಅವರ ಬರವನ್ನು ತಪ್ಪಿಸಲು ಅಥವಾ ಮುಂದೂಡಲು ಏನಾದರೂ ಡಾವು ಹಾಕಲು ಬರುತ್ತಿತ್ತು. ಆದರೆ ಅವರು ಸ್ವಂತ ಬರೆದಿರಲಿಲ್ಲ. ಶಕೂನೂ ಕಾರಣ ನಮೂದಿಸಿರ ಲಿಲ್ಲ. ಕಚೇರೀ ಕೆಲಸದ ನಿಮಿತ್ತ ಬಂದು ನಾಕು ದಿನ ಮುಂಬೈಯಲ್ಲಿ ನಿಲ್ಲುವ ಅವಕಾಶ ಸಿಗುತ್ತಿರುವಾಗ ಶಕೂನನ್ನು ಅವರು ಜೊತೆಗೆ ಕರೆದುಕೊಂಡು ಬರುವ ಸಂಭವವಿತ್ತು. ಇದರಲ್ಲಿ ಅಸಂಭಾವ್ಯವೇನೂ ಕಾಣುವಂತಿರಲಿಲ್ಲ. ಖಾಸಗೀ ಕೆಲಸದ ನಿಮಿತ್ತವಾಗಿಯಾಗಲೀ – ಕಚೇರೀ ಕೆಲಸದ ಸಲುವಾಗಿಯಾದರೂ ಆಗಲಿ ಈಗ ಮುಂಬೈಗೆ ಆಗಮಿಸಲಿರುವ ಸಾಹೇಬರಿಗೆ, ಬರಬೇಡಿರೆಂದು ತಿಳಿಸುವ ಅಧಿಕಾರ ನನಗೆ ಇರಲಿಲ್ಲ. ಶ್ಯಾಮರಾಯನಂತೂ ಸರ್ವತಂತ್ರ-ಸ್ವತಂತ್ರ. ಅವನ ಹಾಲ್ ಚಾಲೀ ನನಗೆ ಸಂಬಂಧಿಸಿದ ವಿಷಯವಲ್ಲ. ಅವನು ಒಬ್ಬನೇ ಬಂದಿದ್ದರೆ ಏನೂ ಅಡ್ಡಿ ಇರಲಿಲ್ಲ. ಅಷ್ಟಿಷ್ಟು ಬಾತಮೀ ತಿಳಿಯುತ್ತಿತ್ತು. ಅವನಂತೂ ವಿಶ್ವಾಸನಿಗೆ ಭೆಟ್ಟಿಯಾಗುವ ಶಕ್ಯತೆ ಇರಲಿಲ್ಲ. ಆ ಮಟ್ಟಿಗೆ ಅವನ ಬರವು ಬಿನ್-ಧೋಕಾದ್ದಿತ್ತು. ಸುರೇಶನದೂ ಅಷ್ಟೇ – ನಾಕೆಂಟು ದಿನ ನನಗೆ ವೇಳೆ ಹಾಕಲು ಅನುಕೂಲ. ಬಸವಂತಿಯ ಕುಶಾಲೀ ತಿಳಿಯುತ್ತಿತ್ತು. ಅವನ ಬರವೂ ಸ್ವಾಗತಾರ್ಹವಾಗಿತ್ತು.

ಸಂಕಟ ಉಪಸ್ಥಿತವಾಗಿತ್ತು ಸಾಹೇಬರ ಆಗಮನ-ವಾರ್ತೆಯಿಂದ!

ಸುರೇಶನಿಗಾದರೂ ವಿಶ್ವಾಸನ ಪರೀಕ್ಷೆಯ, ಅವನು ಅಭ್ಯಾಸದಲ್ಲಿ ತೊಡ ಗಿರುವ ವಿಷಯ ವಿದಿತವಿತ್ತು. ಅದರಲ್ಲಿ ಖಂಡ ಬೀಳಬಾರದೆಂದು ಅವನು ಸಾಹೇಬ ಬುವರಿಂದ ವಿಶ್ವಾಸನ ಮುಂದೆ ಮದುವೆಯ ಪ್ರಸ್ತಾಪವನ್ನು ತೆಗೆಸಿ

ಗೊಡುತ್ತಿರಲಿಲ್ಲ. ಆ ಬಗ್ಗೆ ಅವನನ್ನು ಗಟ್ಟಿಮಾಡುವದು ಶಕ್ಯವಿತ್ತು. ಆದರೆ ಎಲ್ಲರೂ ಜಮಾಯಿಸಿದಾಗ, ಸಹಜಾಸಹಜೀ ಸಾಹೇಬರು ಈ ಬಗ್ಗೆ ಮಾತಾಡದೆ ಇರುತ್ತಿರಲಿಲ್ಲ. ಖಚಿತವಾಗಿಯೂ ಮಾತನಾಡೇ ಆಡುತ್ತಿದ್ದರು. ಹಾಗೆ ಮಾಡ ಬೇಡಿರೆಂದು ನಾನಾಗಲೀ – ಸುರೇಶನಾಗಲೀ ಅವರಿಗೆ ಬಿನ್ನವಿಸುವದು ಅಯೋಗ್ಯ ವೆನಿಸುತ್ತಿತ್ತು. ಕೆಲಸದ ನಿಮಿತ್ತವಾಗಿ ಬರುವವರಿದ್ದರೆ ಅವರೂ – ಶ್ಯಾಮ ರಾಯನೂ ಕಚೇರಿಯಲ್ಲಿ ಕೂಡುತ್ತಿದ್ದರು. ಎಂದೋ ಹಿಂದೆ ನೋಡಿದ – ಈಗ ಬೆಳೆದು ದೊಡ್ಡವನಾದ, ನಾಳೆ ಡಾಕ್ಟರನಾಗಲಿರುವ ತಮ್ಮ ಚಿರಂಜೀವನನ್ನು ನೋಡಲೇಬೇಕೆಂದು ಸಾಹೇಬರು ಶ್ಯಾಮರಾಯನನ್ನು ಒತ್ತಾಯಪಡಿಸುತ್ತಿದ್ದರು. ಶ್ಯಾಮರಾಯ ಒಂದೆರಡು ಸಲ ಕದಾಚಿತ್ ತಪ್ಪಿಸಿಕೊಳ್ಳಲು ಯತ್ನಿಸಬಹು ದಾಗಿತ್ತು. ಆದರೆ ಅವನ ಈ ಮುಖ ತಪ್ಪಿಸುವ ಆಟ ಬಹಳ ಹೊತ್ತು ನಡೆಯು ತ್ತಿರಲಿಲ್ಲ.

ವಿಶ್ವಾಸನಿಗೆ ಮಾತ್ರ ಇದರ ಅಳುಕು ಯತ್‌ಕಿಂಚಿತ್ ಇರಲಿಲ್ಲ. ಅವನಿಗೆ ಮುಖ ತಪ್ಪಿಸಿ ಅಲೆಯುವ ಅಗತ್ಯವಿರಲಿಲ್ಲ. ಸಾಹೇಬರು ಭೆಟ್ಟಿಯಾದರೆ ಅವರ ಎದುರು ಅವನು ಸೋನಕ್ಕನ ಹರಲಿಯ ವಿಷಯವನ್ನು ಬಿಚ್ಚಿ, ಖಚಿತ ನಿಷ್ಕರ್ಷಕ್ಕೆ ಬರುವ ನಿರ್ಧಾರವನ್ನೇ ಮಾಡಿದ್ದ. ಈ ನಿಷ್ಕರ್ಷಕ್ಕೆ ಶ್ಯಾಮರಾಯನ ಉಪಸ್ಥಿತಿಯ ಅಗತ್ಯವೂ ಇರಲಿಲ್ಲ. ಬೇಕೆನಿಸಿದ್ದರೆ, ವಿಶ್ವಾಸ ಅವನನ್ನು ಎಳೆದು ತರುತ್ತಿದ್ದ. ಅಥವಾ ಅವನಿದ್ದಲ್ಲಿಗೇ ಹೋಗಿ ನಿರ್ಣಯಿಸುತ್ತಿದ್ದ.

ಶ್ಯಾಮರಾಯನಿಗೆ ಸದ್ಯಕ್ಕೆ. ತನ್ನ-ಸೋನಕ್ಕನ ಸಂಬಂಧ ಬಿಘಡಾಯಿಸಿದ ವಿಷಯ ಸ್ಫೋಟವಾಗುವದು ಬೇಡವಾಗಿತ್ತು. ಅದು ನನಗೆ ಗೊತ್ತಿತ್ತು. ಅವನನ್ನು ಮೊದಲು ಗಾಠಾಯಿಸಿ, ಎಲ್ಲ ವಿಷಯ ವಿದಿತಪಡಿಸಿ, ಅವನು ಸಾಹೇಬರನ್ನು ಕಾಣದಿರುವಂತೆ ಮಾಡಲಿಕ್ಕೆ ಬರುವಂತಿತ್ತು. ಈ ಅಸ್ತ್ರಪ್ರಯೋಗದಿಂದ ಶ್ಯಾಮ ರಾಯ-ಸಾಹೇಬರ ಭೆಟ್ಟಿ ತಪ್ಪುತ್ತಿತ್ತು. ವಿಶ್ವಾಸ ಶ್ಯಾಮರಾಯನನ್ನು ಖಟ್ಟಿಗೆ ಹಚ್ಚಿ ನಿರ್ಣಯಕ್ಕೆ ಬರುವದು ಮುಂದೆ ಬೀಳುತ್ತಿತ್ತು. ಸಾಹೇಬರು ತಾವಾಗಿಯೇ ವಿಶ್ವಾಸನ ಮುಂದೆ ಮದುವೆಯ ಪ್ರಸ್ತಾಪ ತೆಗೆದರೆ – ನಡುವೆಯೇ ಅಡ್ಡ ಬಾಯಿ ಹಾಕಿ, ರಾವಜೀಕಾಕಾ, ಸೋನಕ್ಕ ಇಬ್ಬರೂ ಹಿರಿಯರಿರುವಾಗ ಅದನ್ನು ಕುರಿತು ಅವರ ಮುಂದೆ ಪ್ರಸ್ತಾಪಿಸುವದೇ ಗೃಹಸ್ಥಿಕೆಗೆ – ಭೂಷಣ – ಎಂದು ಅಂದರೆ ಅದರ ಅರ್ಥ ವಿಶ್ವಾಸನಿಗಾಗುತ್ತಿತ್ತು. ಕಾಕಾ-ಸೋನಕ್ಕರ ಗೌರವದ – ಸ್ಥಾನ

ಮಾನವ ಪ್ರಜ್ಞೆಯಿಂದ ವಿಶ್ವಾಸ ಮಾತಿನಲ್ಲಿ ಮುಂದುವರಿಯುತ್ತಿರಲಿಲ್ಲ. ಸಾಹೇಬರೂ ಅದರ ಬಗ್ಗೆ ದೀರ್ಘಕ್ಕೆ ಹೋಗುವ ಸಂಭವವಿರಲಿಲ್ಲ. ಅಂಕಿ-ಸಂಖ್ಯೆಯು ಚಮತ್ಕಾರವಾಗಿ ಉತ್ತರ ಕದಾಚಿತ್ ಬರಾಬರಿಯಾಗುವ ಆಶೆ ಮೂಡಿತು.

'ನ ಹಿ ಶ್ರಾಂತಸ್ಯ ಪ್ರಪತೆ ಸಖ್ಯಾಯ ದೇವಾಃ' – ಅಮೋಘ ವಚನ ನೆನಪಿಗೆ ಬಂತು. ಕಾಲು ಅಲುಗಾಡಿಸದೆ ಕುಳಿತಲ್ಲಿಯೇ ಪೊಳ ಹಾಕುವದರಿಂದ ಏನೂ ನಿಷ್ಪನ್ನವಾಗದೆಂದು ನೆಟ್ಟಗೆ ವಿಶ್ವಾಸನಲ್ಲಿಗೆ ಧಾವಿಸಿದೆ. ಅವನಿಗೆ, ನನಗೆ ಬಂದ ಕಾಗದಗಳ ಬಗ್ಗೆ ಏನೂ ಹೇಳಲಿಲ್ಲ. ಕ್ಷೇಮ-ಸಮಾಚಾರ ತಿಳಿದುಕೊಂಡಂತೆ ಮಾಡಿದೆ. ಅವನಿಗೆ ಯಾರಿಂದಲೂ ಕಾಗದ ಬಂದ ವಾಸನೆ ಹತ್ತಲಿಲ್ಲ. ತನಖಿಸಿ, ಹಿಚಿಕಿ ನೋಡಿದೆ. ಯಾರು ಬರುವ – ಬರುತ್ತೇವೆಂದು ಬರೆದ ಕಾಗದ ಅವನಿಗೆ ಬಂದಿರಲಿಲ್ಲ. ಅವನ ನಿರೋಪ ತೆಗೆದುಕೊಂಡವನೇ ತುಳಸಿಯಲ್ಲಿಗೆ ಓಡಿದೆ. ಹತ್ತು-ಹದಿನೈದು ದಿನಗಳಿಂದ ಕಣ್ಣಿಗೆ ಬೀಳದಿದ್ದ ನಾನು, ಅಚಾನಕವಾಗಿ ಮೂಡಿದ್ದನ್ನು ನೋಡಿ, ಧೋಂಡೂಬಾಯಿ —

"ತುಳಸೀ, ನನಗ ಯಾಕೋ ಅಂಜಿಕೀನ ಬರತದ ನೋಡು! ಈಗ ಬಂದದ್ದು ದಾದಲ್ಯಾನ ಭೂತನ್ನ ಇರಬೇಕಂತ ಅನಸ್ತದ. ವಿಶ್ವಾಸ ಮೊನ್ನೇ ಹೇಳಿದ್ನಲ್ಲs, ದಾದಲ್ಯಾ ಖಲಾಸ ಆದಂತs. ಏನೋ ಅವ್ವಾ, ಈಗ ಬಂದಾವಾ ದಾದಲ್ಯಾನs ಅನೂ ವಿಶ್ವಾಸ ಕೂಡವಲ್ದು ನನಗ. ದಾದಲ್ಯಾ, ನೀ ದೆವ್ವ ಆದದ್ದs ಖರೇ ಇದ್ದರ ಹೇಳ ನಮ್ಮಪ್ಪಾ, ಯಾತರಿಂದ ತೃಪ್ತ ಆಗತೀ ಅನೂದನ್ನ. ಕುರೀ-ಕೋಳಿ ಏನ ಬೇಕು ಅದನ್ನ ಕೇಳು? ಇಲ್ಲ ಅನೂದಿಲ್ಲಾ. ಹೀಂಗ ಅಚಾನಕ ಬಂದು ನಮ್ಮನ್ನ ಕಾಡಬ್ಯಾಡ ಮಾರಾಯಾ"

ಕೈಮುಗಿಯುತ್ತ ಹೇಳಿದಳು.

"ಈಗಂತೂ ಚಹಾ ಕೊಡಿರಿ. ರಾತ್ರೀ ಚಮುಚಮೀತ ಊಟದ ತಯಾರಿ ಇಡರಿ. ರಾತ್ರೀ ಅಡಿಗಿ ಆಗೂ ತನಕಾ ನಿಮ್ಮ ತುಳಸಿನ್ನ ನನ್ನ ಜೋಡೀ ಅಡ್ಡ್ಯಾಡಲಿಕ್ಕೆ ಕಳಿಸಿಕೊಡಿರಿ. ಅಂದರ ದಾದಲ್ಯಾನ ದೆವ್ವಾ ತೃಪ್ತ ಆಗತದ. ಇಲ್ಲದಿದ್ದರ ಜಪ್ಪೀ ಅಂದರೂ ಈ ಜಾಗಾ ಬಿಟ್ಟು ಹಲಾಸೂದಿಲ್ಲಾ. ಧೋಂಡೂಬಾಯೀ, ನಿಮ್ಮನ್ನs ಈ ಜಾಗಾ ಬಿಡಸ್ತsದ ನೋಡರಿ. ಹುಷಾರ್!"

ದಾದಲ್ಯಾನ ಭೂತ ತನ್ನ ಬೇಡಿಕೆಯನ್ನು ಮಂಡಿಸಿತು.

"ಅಃ, ದೆವ್ವ ಹಾರೂರದಲ್ಲೇನು? ಅದಕs ಭಾಳ ಅಳ್ಳಕದ. ಒಂದ ಕುರೀ,

ಎರಡ ಕೋಳಿನ್ಹೂ ದಕ್ಕಿಸಿಗೊಂಬೂ ತ್ರಾಣ ಇಲ್ಲ ಅದಕs. ಸಾದಾ ಪಿಟ್ಲs-ಭಾತದ ಮ್ಯಾಲ ಬಗೀಹರಿಸಿಗೊಂಡು ಹೋಗತದ. ಯಾಕ ದಾದಲ್ಯಾ, ನಿನಗೇನು ಅಭ್ಯಾಸ-ಗಿಭ್ಯಾಸ ಇಲ್ಲೇನಂತ ಅಂದ ಅಂದರs, ನನ್ನ ಮರಿಯುಊವಷ್ಟು ಜೋರಲೇ ಅಭ್ಯಾಸ ಸುರೂ ಮಾಡೀ ಏನು? ರಾಜಾ ಸುದ್ದೇ, ಝುಕ್ಕಿಸಿದ ನಿನ್ನ ಮುಂದs. ಹದನೈದ ದಿನದಾಗ ಅಂವಾ ಎರಡ ಮೂರ ಸಾರೇ ಬಂದ ಹೋದಾ. ನಿಂದು ಪತ್ತೇಸರs ಅದs ಏನು? ಪುಣೇ-ಸಾಂಗಲಿಗೇಸರ ಹೊಡದಿದ್ದೇನು ಗಾಡೀ? ನಿನಗ ಸೂರಾ ಎಂಟು ಭಾನಗಡೀ ಕೊಳ್ಳಿಗೆ. ಕೂತು ಮಾತಾಡ ದೆವ್ವಾs ನಿಧ್ವಾsನಾಗಿ."

ತುಳಸಿ ಹೇಳಿದಳು.

ದಾದಲ್ಯಾನ ದೆವ್ವ ನಿಧಾನವಾಗಿ ಕೂತು ಮಾತನಾಡುವ ಬೇತಿಸಿಂದಲೇ ಬಂದಿತ್ತು. ತುಳಸಿ-ಧೋಂಡೂಬಾಯಿಯ ಸ್ವಾಗತ, ನಿದ್ದೆ ಬಂದವನನ್ನು ಕುತಸಿಯು ಗಾದಿ ಕೈಮಾಡಿ ಕರೆದಂತಾಯಿತು.

ನಾನು ಚಹ ಬಗೆಹರಿಸಿ – ಊಟದ ಔತಣ ಸ್ವೀಕರಿಸಿ ತುಳಸಿಯನ್ನು ಕರೆದು ಕೊಂಡು ಚೌಪಾಟಿಯ ಕಡೆಗೆ ನಡೆದೆ.

ದಾರಿಯುದ್ದಕ್ಕೂ ಎರಡು ಬಾಯಿ ನಿರಂತರ ವಟಗುಡುತ್ತ ನಡೆದಿದ್ದವು. ನಾನು, ಆದೇ ವಿಶ್ವಾಸನನ್ನು ಕಂಡು ಬಂದ ವಿಷಯ ತಿಳಿಸಿದೆ. ತುಳಸಿಯಿಂದ ಅವನ ಅಭ್ಯಾಸ ಸರಾಗವಾಗಿ ನಡೆದ ವಿಷಯ ತಿಳಿಯಿತು. 'ಫಸ್ಟ್-ಕ್ಲಾಸ್' ಬರುವ ಧೈರ್ಯ ಬಂದ ಮಾತನ್ನು ವಿಶ್ವಾಸ ತನ್ನ ತುಳಸಿಗೆ ಖಾತ್ರೀಲಾಯಖಾಗಿ ಹೇಳಿದ್ದ. ತುಳಸಿ, ಅಭಿಮಾನದಿಂದ ತನ್ನ ಯಜಮಾನನ ಯಶೋವಿಲಾಸದ ವರ್ಣನೆ ಮಾಡಿದಳು. ಕಾಕಾ, ಸೋನಕ್ಕ, ಪಂತಮಾಮಾ ಎಲ್ಲರೂ ಅವನನ್ನು ಆಶೀರ್ವದಿಸಿ ಪತ್ರ ಬರೆದ ವಿಷಯ ತಿಳಿಸಿದಳು. ನಾನು ಎಲ್ಲವನ್ನೂ ಕೇಳಿಕೊಂಡು —

"ಅದು ಆತ ತುಳಸೀ. ವಿಶ್ಯಾನ ಸಾಂಗಲೀ ಚಿಡಿಯಾ ಏನಂತದs? ಏನರs ಬಾತಮೀ? ವಿಶ್ಯಾ ಅಗದೀ ಖಾಸ್ ಅಂತs ನಿನ್ನ ಕಿಂವ್ಯಾಗ ಹೇಳಿರಬೇಕಲ್ಲಾ?" ವಸೂನ ಸುದ್ದಿಯನ್ನು ಕುರಿತು ಕೇಳಿದೆ.

"ಸಾಂಗಲೀ ಚಿಡಿಯಾ ನಿನ್ನ ಹಾಂಗ ಅಲ್ಲಾ, ದಾದಲ್ಯಾ. ಹದನೈದ ದಿನಾ ಆದರೂ ಜೀವದ ಗೆಳ್ಯಾಗ ನೀ ಭೆಟ್ಟಿ ಆಗೂದಿಲ್ಲಾ. ಆದರ ವಾರದಾಗ ಎರಡ ಸಾರೇ ಪತ್ರದ ರೂಪದಲೇ ಅವನ ಚಿಡಿಯಾ ಕಣ್ಣ ಇದರಿಗೆ ಬಂದ ನಿಂದರತದ.

ರಾಜಾಗ ಪುರಪ ಕೊಡಲಿಕ್ಕೆ ನಾಕ ಕೈ ಅವ್ಪ ಈಗs. ಎರಡು ಸಾಂಗ್ಲ್ಯಾಗ. ಎರಡು ಮುಂಬೈಯಾಗ. ನಿನ್ನ ಕೈ ಮಾತ್ರ ಎಲ್ಲ್ಯೋ ಕಟ್ಟ್ಯಾವ. ದಾದಲ್ಯಾ, ನಿನಗ ಮಾತ್ರ ರಾಜಾನ ಥ್ವಾಸ ಹಾರೇದ."

ತುಳಸಿ ತಿವಿದು ಹೇಳಿದಳು.

"ತುಳಸೀ, ವಿಶ್ಯಾಗs ಲಕ್ಷ್ಮೀ-ಸರಸ್ವತೀ ಹಾಂಗ ಎರಡ ಗಿರಾಕಿ ಆಜೂ-ಬಾಜೂದಾಗ ಇರೂ ಮುಂದ, ನಂದ್ಯಾಕ ನಡವ ಲುಡುಬುಡೂ ಅಂತs, ನಾ ಮೆಲ್ಲಕ ಬಾಜೂಕ ಆಗೀನಿ. ಅನಕಾತ ನಾನೂ ಒಂದಿಷ್ಟು ಧೂರ ನಿಂದರಬೇಕಂತ ಮಾಡಿದ್ದೆ. ಜಮಾಸಲಿಲ್ಲ ತುಳಸೀ. ಮತ್ತ ನಾಟ್ಯಕ ಸುರೂ ಆತು. ಅದರ ನಾಂದೀ ನಿನ್ನ ಮುಂದ ಹಾಡಬೇಕಂತನs ಬಂದೀನಿ. ನಿಧಾನಾಗಿ ಕೂತು ಮಾತಾಡಲಿಕ್ಕೆ ನೆಟ್ಟಗ ಆಗಲೀ ಅಂತs ನಿನ್ನ ಕರಕೊಂಡು ಮನೀಯಿಂದ ಹೊರಬಿದ್ದೆ. ಸುರೇಶ ಬರಾಂವ ಇದ್ದಾನ ತುಳಸೀ ನಿನ್ನ ಮನೀಗೆ. ಎಂಟ ದಿನಾ ಮುಕ್ಕಾಂ ಅದs ಅವಂದು

"ಆಂs..."

ತುಳಸಿ.

"ಆಂs ಇಲ್ಲಾ ಊಂ ಇಲ್ಲಾ. ಅವನ ಪತ್ರ ಬಂದಿದ್ದಲ್ಲ ಅಂದರ ನಾ ಎಲ್ಲೆ ನಿನ್ನ ಕಡೇ ಬರತಿದ್ದೆ, ಧೋಂಡೂಬಾಯೀ ಕಡಿಂದ ದಾದಲ್ಯಾನ ದೆವ್ವ ಬಂತಂತ ಎಲ್ಲೆ ಅನಿಸಿಗೋತಿದ್ದೆ. ಸುರೇಶ ಅಂದರ ದೆವ್ವಿನ ಅಪ್ಪ ಅನ್ನೂದು, ಅಂವಾ ಬಂದ ಮ್ಯಾಲ ನಿನಗ ತಿಳೀತದ. ಅವನ ಮುಂದ ದಾದಲ್ಯಾ ಯಾ ಗಿಡದ ತೊಪ್ಪಲಾ."

ನಾನು ತುಳಸಿಗೆ ಮೂರು ಪತ್ರದ ವಿಷಯ ಕಥನಮಾಡಿದೆ. ಸುರೇಶನ ವಾಸ್ತವ್ಯದ ವ್ಯವಸ್ಥೆ ಇಡಲು ತಿಳಿಸಿದೆ. ನನ್ನನ್ನು ಕಾಡುತ್ತಿದ್ದ ಸಮಸ್ಯೆಯನ್ನು ಅವಳ ಮುಂದೆ ಚಾಚಿದೆ.

"ನೀನಾಗೇ ಈ ಸುದ್ದೀ ಸಾಹೇಬರ ಮುಂದ ತಗೀಬ್ಯಾಡಂತ ರಾಜಾಗ ಹೇಳಿ ನೋಡತೀನಿ. ಆದರ ಭಾಳ ಆಶಾ ಏನ ಇಲ್ಲಾ ದಾದಲ್ಯಾ. ಅವನ ಎದೀ ಒಳಗ ಅದೇ ಕುದೀ ಅದs. ಥ್ವಾಡೇ ಮುಚ್ಚಳಾ ಸರಿಸಿದರೂ ಸಾಕು, ಎಸರ ಉಕ್ಕಿ ಹೊರಗ ಛೆಲ್ಲತದ. ನನ್ನ ಮಾತೂ ನಡಸ್ಯಾನು ಅನ್ನೂ ಭರೋಸ ಇಲ್ಲ ನನಗ. ಅಂವಗ – ಸಾಹೇಬರಿಗೆ ಭೆಟ್ಟಿ ಆಗಧಾಂಗ ಏನರs ಡಾವ ಮಾಡೂದು ಠೀಕ ಕಾಣಸ್ತದ. ಆದರ ಹಾಂಗ ಮಾಡೂದು ನನಗ ಛೆಂದ ಕಾಣಸೂದಿಲ್ಲಾ. ಒಮ್ಮೆ ಇಲ್ಲ ಒಮ್ಮೆನರs ಇದು ಹೊರಬೀಳೂದs. ಈಗ ಆಗೂ ಪರಿಣಾಮಾ ನಾಳೆನರs

ಆಗೂದೇನs. ಅಂದ ಏನರ ಅದನ್ನ ತಪ್ಪಸೂ ಹಾಂಗ ಇದ್ದೀ ಏನು? ಇದರದೆಲ್ಲಾ ಹಕೀಕತ್ತು ನೀ ಮುಂಚೇನs ಸಾಹೇಬರಿಗೆ ಹೇಳಿದ್ದೀ ಅಂದರ ಠೀಕ ಆಗತಿತ್ತು. ಸಮಜಾಸಿ ಹೇಳಲಿಕ್ಕೆ ಆಗ ವ್ಯಾಳ್ಯಾ ಇತ್ತು. ಸಾಹೇಬರು ಯಾ ಕೆಲಸಕ್ಕಂತ ಬಂದರೂ ರಾಜಾಗ ಭೆಟ್ಟಿ ಆಗದs ಇರೂದಿಲ್ಲಾ. ಭೆಟ್ಟಿ ಆಗದs ಇರೂ ಅಂಥಾದು ಅವರಿಗೇನಾಗೇದ ಹೇಳು? ರಾಜಾಗರs ಯಾತರ ದರಜು? ಅವನೂ ಭೆಟ್ಟಿ ಆಗಲಿಕ್ಕೆ ಅಂಜೂದಿಲ್ಲಾ. ತಮ್ಮ ಮುಂದ ಬೆಳದ ಹುಡಗಾ ಅಂತs ಅವರು ಆನಂದ ಹಚ್ಚಿಗೊಂಬಾವರು. ಹಾಂಗs ಸೋನಕ್ಕ ಅವರ ಕುಶಾಲೀ ಕೇಳಾವ್ರು. ಎಲ್ಲಾ ಸಹಜಾಸಹಜೀ ಮಾತನೇ ಆಗತಾವ. ಅವರು ಇದನ್ನೆಲ್ಲಾ ಕೇಳಾಗ. ರಾಜಾ ಸುಮ್ಮ ಇರೂದು ತಪ್ಪ ಆಗತದ. ಅದನ್ನ ಮುಚ್ಚಿ ಇಟಗೊಂಬೂ ಪಾಪಾನರೇ ಅಂವಾ ಯಾಕ ಮಾಡಬೇಕು? ವರ್ಷ-ದೀಡ ವರ್ಷಾ ನೀವೂ ಢಕ ಲಾಸಿಗೋತ ಬಂದ ಮಾತಾ ಇಂದ ಖಟ್ಟಿಗೆ ಹಚ್ಚಲಿಕ್ಕೆ ಬಂದ್ವದ. ಇನ್ನ ಆರು ತಿಂಗಳೂ ಹೋಗಿಗೊಡಧಾಂಗ ಆಗಿ ನಿಂತ್ವದ. ಅಂದಮ್ಯಾಲs ಅದಕ್ಕ ವ್ಯಾಳ್ಯಾನs ಬಂಧಾಂಗ ಆಗೇದ. ನೀ ಗಜಮು ನಿಂತರೂ ಅದು ತಪ್ಸೂ ಲಕ್ಷಣ ಇಲ್ಲಾ."

ಅಂದಿನ ಸಾವನ್ನು ಇಂದಿನ ವರೆಗೆ ಢಕಲಾಯಿಸುತ್ತ ಬಂದದ್ದು ಸತ್ಯ. ಅಂದೇ ಸಾಯಬೇಕೆಂದಿದ್ದರೆ ಒಂದಲ್ಲ ನೂರು ದಾರಿ ತೆರವಿದ್ದವು. ವಿಶ್ವಾಸ ತಾನಾಗಿಯೇ ಹೋಗಿ ಸಾಹೇಬರನ್ನು ಕೇಳಲಿಕ್ಕೆ ಬರುತ್ತಿತ್ತು. ಸಾಹೇಬರ ಸಹವಾಸದಲ್ಲಿ, ಅವರ ಆತ್ಯಂತಿಕ ವಿಶ್ವಾಸದವನಂತೆ – ಅವರ ನೆರಳಾಗಿ ಕಳೆದ ನನಗೇ ಈ ಮಾತನ್ನು ಬಯಲುಮಾಡಲು ಬರುವಂತಿತ್ತು. ಸುರೇಶ-ಶಕೂರ ಪ್ರಕರಣ ತನಗೆ ಎಷ್ಟೇ ಕಹಿ ರಸವಾಗಿದ್ದರೂ ಅದನ್ನು ಅರಿತು ಬಲ್ಲ – ಅದನ್ನು ನುಂಗದೆ – ಉಗುಳದೆ ಗಂಟಲಲ್ಲಿ ಧರಿಸಿಕೊಂಡ, ಶ್ಯಾಮರಾಯನೂ ಉತಾವಿಳನಾಗಿ ಇದಕ್ಕೆ ವಾಚ್ಯತೆ ಮೂಡಿಸಿರಲಿಲ್ಲ. ಅದರ ಗುಪಿತ-ಸ್ಫೋಟಕ್ಕೆ ಯಾಕೋ ಹಿಂಜರಿಯುತ್ತಿದ್ದ. ಕಾಲ ಬಂದಾಗ ಹೇಳಿದರಾಯಿತೆಂದು ರಾವಜೀಕಾಕಾ ನಿರ್ಧಾಸ್ತರಾಗಿದ್ದರು. ಸಾವನ್ನು ಮುಂದೂಡಲು ಪ್ರತ್ಯಕ್ಷ-ಅಪ್ರತ್ಯಕ್ಷವಾಗಿ ಎಲ್ಲರೂ ಸಮಾನ ಭಾಗಿಯಾಗಿದ್ದರು. ದಿನ ಹಾಕುತ್ತ ಬಂದದ್ದರಲ್ಲಿ ಏನೂ ಹಾನಿ ಇರಲಿಲ್ಲ. ಹೀಗೆಯೇ ಇನ್ನೂ ನಾಲ್ಕಾರು ತಿಂಗಳು ಮುಂದೆ ಹೋಗಿದ್ದರೆ ಇದಕ್ಕೂ ಹೆಚ್ಚಿನ ಲಾಭವಿತ್ತು. ಮೃತ್ಯುಭೀತಿ ಅಳಿಸಿ ನಾವೇ ಮೃತ್ಯುಂಜಯರಾಗುತ್ತಿದ್ದೆವು!

ಶ್ಯಾಮರಾಯನನ್ನು ಸಹಜವಾಗಿ ಹಣ್ಣಿಗೆ ತರುವ ಸಬಲ ಪುರಾವೆ ನನ್ನಲ್ಲಿದ್ದ

ಗಯಾಜಿನ ಮೇಲಿಂದ ನಾನು ಏನೇನೋ ಹಾವು ಮಾಡಿ. ದಿನ ಹಾಕುತ್ತ ಬಂದಿದ್ದೆ. ಅವರ ಭರವಸೆ ಇನ್ನೂ ನನ್ನಲ್ಲಿ ಅವಮನೀಯುವಾಗಿತ್ತು. ಶ್ಯಾಮರಾಯನ ಪತ್ರ ನನ್ನಲ್ಲಿ ಮಜಬೂತಾಗಿತ್ತು. ಆ ಜಾದೂ-ಕಡ್ಡಿಯನ್ನು ಈಗ ಬತ್ತಳಿಕೆಯಿಂದ ಹಿರಿದರೆ ...

ಸಾಹೇಬರು ಮುಂಬೈಗೆ ಬರುವ ಮುಂಚೆಯೇ ನಾನೇ ಬೆಳಗಾಂವಿಗೆ ಧಾವಿಸಿ ಹೋಗಿ, ಅವರನ್ನು ವಿಶ್ವಾಸದಲ್ಲಿ ತೆಗೆದುಕೊಂಡು, ಅವರಿಗೆ ಇದ್ದ ಸಂಗತಿಯನ್ನು ನಿವೇದಿಸಿ, ಅವರೆದುರು ಈ ಪತ್ರದ ಪುರಾವೆಯನ್ನು ಚಾಚಿದರೆ...

ಬಹಳಷ್ಟು ಸಾಧಿಸುವಂತಿತ್ತು. ಮಾತು ಇನ್ನೂ ನನ್ನ ತಲೆಯಲ್ಲಿ ನುಲಿಯುತ್ತಿತ್ತು. ನಾನು —

"ತುಳಸೀ, ಹ್ಯಾಂಗರ ಆಗಲಿ. ಸಾಹೇಬರದು-ವಿಶ್ವಾಸಂದು ಭೆಟ್ಟಿ ತಪ್ಪಿದರ ನಾಕಾರ ತಿಂಗಳು ಸಾವು ಮುಂದ ಹೋಗತದ. ಅಷ್ಟು ಆತಂದ್ರ ನಾವು ಅರ್ಧಾಗೆದ್ಹಾಂಗ."
ಹೇಳಿದೆ.

"ಭೆಟ್ಟಿ ಆಗೂದು ತಪ್ಪೂದಿಲ್ಲ ದಾದಲ್ಯಾ. ನಿಮ್ಮ ಕಂತ್ರಾಟದ ಕಲ್ಪನಾ ಇರದೇ ಸಾಹೇಬರು ಸಹಜಾಸಹಜೀ ರಾಜಾಗ ಭೆಟ್ಟಿ ಆಗತಾರ. ಶಕೂಗು ತನ್ನ ಭಾವನ್ನ ನೋಡೂ ಆಶಾ ಇರತದ. ಅದನ್ನ ತಪ್ಪಸಬ್ಯಾಡ ದಾದಲ್ಯಾ. ಸಾಹೇಬರು ಬರೂದಕ್ಕ ಇನ್ನಾ ಅವಧೀ ಇದ್ದರ, ನೀನೇ ಒಮ್ಮೆ ಬೆಳಗಾಂವಿಗೆ ಹೋಗಿ ಅವರ್ನ ಭೆಟ್ಟಿ ಆಗೂದು ಠೀಕಾ. ಅವರು ಮದಿವೀ ಮಾತಿನ ದಲಿಂದ ಬರತಿದ್ದರ, ಅವರ್ನ ಪರಭಾರೇ ಪುಣೇಕ್ಕ ಕರಕೊಂಡು ಹೋಗಿ ಕಾಕಾ-ಸೋನಕ್ಕ ಅವರ ಭೆಟ್ಟೀ ಮಾಡಸು. ಅಲ್ಲೆ ಬಸವಂತೀನೂ ಇರತಾಳ. ನಿನಗ ಜರೂರಿ ಬಿದ್ದರ ಸಹಾಯ ಮಾಡತಾಳ. ಹಿರ್ಯಾರು – ಹಿರ್ಯಾರು ಮಾತಾಡಿಧಾಂಗೂ ಆಗತದ. ಎಂಟ ದಿನದಾಗ ಅಂದರ ಎಲ್ಲಾ ಮಾತನೂ ಬಗೀಹರೀತದ. ಪುಣೇದಾಗ ಸಾಹೇಬರಿಗೆ ಸೋನಕ್ಕ ಅವರ ಸುದ್ದಿ ತಿಳೀದೇ ಹೋಗೂದಿಲ್ಲಾ. ಅಲ್ಲೇ ಶ್ಯಾಮರಾಯರೂ ಇದ್ದಾರ. ಅವರ್ನ ಸಮುಕ್ಷಮದಾಗ ಭೆಟ್ಟೀ ಮಾಡಿ, ಈ ಪರಲೀ ಉಲಗಡಾ ಮಾಡಲಿಕ್ಕೆ ಅನಕೂಲನs ಆಗತದ. ಬಸವಂತೀದು ಜೀವಂತ ಸಾಕ್ಷೀನs ಅದs. ರಾಜಾಗ ಇದರ ಪತ್ತೇ ಇಲ್ಲದ ಒಂದ ಕಂತ್ರಾಟಾ ತಂತಾನs ಬಿಡತsದ. ದಾದಲ್ಯಾ, ನಿನಗ ಪಟಾಸ್ತದೇನು ಈ ವಿಚಾರಾ?"

ತುಳಸಿ ಕೇಳಿದಳು.

ನನ್ನ-ತುಳಸಿಯ ವಿಚಾರದಲ್ಲಿ ಸಾಮ್ಯವಿತ್ತು. ನಾನು ಮೇಲುಕು ಹಾಕಿದ ವಿಚಾರವನ್ನು ಅವಳು ಅಕ್ಷರಶಃ ಸ್ಪಷ್ಟಪಡಿಸಿದ್ದಳು. ಆದರೆ ಅವಳ ವಿಚಾರಕ್ಕೆ ಇದ್ದ ಹರಿತ, ನನ್ನ ವಿಚಾರಕ್ಕೆ ಇರಲಿಲ್ಲ. ಅದು ಇನ್ನೂ ನೀತಿನೀತಿಯ ನೇಣು ಸಿಕ್ಕಿಸಿ ಕೊಂಡು ಲಟಪಟಿಸುವಂತಿತ್ತು.

"ನಿನ್ನ ವಿಚಾರ ಪಟಾಸಿತನ್ನು ತುಳಸೀ. ಆದರ ವಿಶ್ವಾಸ ಹೇಳೂ ಮಾತಾ ಕಾಕಾ-ಸೋನಕ್ಕಾ ಅವರು ಹೇಳದs ಇರೂದಿಲ್ಲಾ. ಅದರ ಪರಿಣಾಮಾ ಇಲ್ಲೆ ಆಗೂದs ಅಲ್ಲೆ ಆದರs, ಸಾಹೇಬರು ಈ ಅಪವಾದಾ ಸಹಜಾಸಹಜೀ ಸಹನ ಮಾಡಿಕೊಂಡಾರಂತ ನನಗೇನು ಭರೋಸ ಇಲ್ಲಾ. ಅಲ್ಲದೇ, ಸಾಹೇಬರು-ಸೋನಕ್ಕಾ ಅವರ ಸಮಕ್ಷಮದಾಗ, ಶ್ಯಾಮರಾಯರು ಎಬಡಾಸಬಡಾ ಬಾಯಿ ಬಿಟ್ಟರ ಅದರದೂ ಕೆಟ್ಟ ಪರಿಣಾಮಾ ಎಲ್ಲಾರ ಮ್ಯಾಲೂ ಆಗತದ."

"ಆದರ ಶ್ಯಾಮರಾಯರ ಮ್ಯಾಲ ಯಾರದೂ ವಿಶ್ವಾಸನs ಕೂಡೂ ದಿಲ್ಲಲಾ. ಸೋನಕ್ಕ ಅವರ ಜಡ್ಡಿನ ಕಾರಣ ಹೇಳಿ ತನ್ನ ಘಸಾಸ್ಯಾರಂತ ಹೇಳಲಿಕ್ಕೆ ಬಸವಂತಿ ಇರತಾಳ. ಸಾಹೇಬರ ಮುಂದೂ ಅವರು ಸೋನಕ್ಕನ ಜಡ್ಡಿನ ವಿಷಯ ಹೇಳ್ಯಾರ. ಎಲ್ಲಾದಕಿಂತಾ ಹೆಚ್ಚಂದಂದರ, ಬಸವಂತೀ ಸಾಕ್ಷೀ! ಆಕೀ ಮುಂದ ಬಂದರ ಶ್ಯಾಮರಾಯರಿಗೆ ಮಾರೀನೇ ಉಳಿಯೂದಿಲ್ಲಾ. ಅವರ ಸುಳ್ಳಿನ ಕಥೀ ಕಡಕೊಂಡು ಬೀಳತದ. ನಾ ಹೇಳಿಧಾಂಗ ಮಾಡತಿದ್ದರ ನೋಡ ದಾದಲ್ಯಾ. ನೀ ಇಂದೇ ರಾತ್ರೀ ಗಾಡಿಗೆ ಪುಣೇಕ್ಕ ಹೋಗಿ ಬಸವಂತಿಗೆ ಭೆಟ್ಟಿ ಆಗು. ಆಕೀಗೆ ಎಲ್ಲಾ ಹಕೀಕತ್ತು ತಿಳಸು. ಅಲ್ಲಿಂದ ಬೆಳಗಾಂವಿಗೆ ಹೋಗಿ ಸಾಹೇಬರನ ಗಾಠಾಸು. ಜರೂರ ಅನಿಸಿದರ ನಿನ್ನ ಜೋಡಿಗೆ ಬಸವಂತಿನ್ನ, ಸುರೇಶನ್ನ ಇಬ್ಬರ್ನೂ ಕರ ಕೊಂಡು ಹೋಗು. ಬಸವಂತಿ ನಿನ್ನ ಜೋಡೀ ಈ ಕೆಲಸದ್ದಶಿಂದ ಬರೂದಾದರ, ಆಕೀ ಶ್ಯಾಮರಾಯರ ಪರಲ ಹರಕೊಂಡೇ ಬರಬೇಕಾಗತದ. ಮುಂದ ಆಕೀ ಕಾಳಜೀ ನನಗ ಹತ್ತಿತು. ಬೆಳಗಾಂವೀ ಕೆಲಸಾ ಬಗೀಹರಿಸಿ ನೆಟ್ಟಗ ಇಲ್ಲಿಗೇ ಬಂದ ಬಿಡರಿ. ರಾಜಾ ಕೊಡೂ ಒಂದ ಭಕ್ಕರ್ಯಾಗ, ಅತ್ತೀ-ಸೊಸೀ ಅರ್ಧಾ ಅರ್ಧಾ ತಿಂದ ಬದಕತೇವು. ಆಕೀ ನನಗ ಭಾರ ಅಲ್ಲಾ; ನಾ ಆಕೀಗೆ ಭಾರ ಅಲ್ಲಾ. ಇದರದೂ ವಿಶ್ವಾಸಗ ಪತ್ತೇ ಹಚ್ಚಿಗೊಡಬಾರದಂದರ, ಬಸವಂತಿನ್ನ, ಆಈನ್ನ ಊರಿಗೆ ಕಳಿಸಿ ಬಿಡೂಣು. ಆರ ತಿಂಗಳಾ ರಘೂ ಬಂದು ಇರತಾನ ನನ್ನ ಜೋಡಿಗೆ."

ತುಳಸಿಯ ವಿಚಾರ ಸಂಪೂರ್ಣ ಪಟಾಸದಿದ್ದರೂ ಸಾವನ್ನು ನಾಳೆ ಹಾಕುವ ರೀತಿಯಿಂದ ಠೀಕ ಎನಿಸಿತು. ನಾನು, ತುಳಸಿ, ಟ್ಯಾಕ್ಸೀ ಮಾಡಿಕೊಂಡು ನೇರವಾಗಿ ತಯ್ಯಬ್ಜೀ ಅವರಲ್ಲಿ ಹೋದೆವು. ಗೋವಿಂದಭಟ್ಟ ಅಜಾರಿ ಇದ್ದ ಕಾಗದ ನನ್ನ ಗೆಳೆಯನ ವಿಳಾಸಕ್ಕೆ ಬಂದಿದೆ; ನಾನು ರಾತ್ರಿಯ ಗಾಡಿಯಿಂದ ಊರಿಗೆ ಹೋಗಲೇ ಬೇಕೆಂಬ ಸುಳ್ಳು ನೆವ ಹೇಳಿ, ನಾಕಾರು ಅರಿವೆ-ಅಂಚಡಿಗಳನ್ನು ಒಂದು ಕೈಚೀಲ ದಲ್ಲಿ ತುರುಕಿಕೊಂಡು ಅಲ್ಲಿಂದ ಜಾರಿದೆ. ತುಳಸಿಯ ಮನೆಯಲ್ಲಿ ರಾತ್ರಿಯ ಊಟ ಬಗೆಹರಿಸಿ ಮದ್ರಾಸ್ ಮೇಲ್ ಗಾಠಾಸಿದೆ.

ಪುಣೆಯಲ್ಲಿ ಎಲ್ಲಿ ಇಳಿಯುವದೆಂಬ ಬಗ್ಗೆ ವಿಚಾರವನ್ನೇನೂ ಮಾಡಿರಲಿಲ್ಲ. ಗಾಡಿಯಲ್ಲಿ ಕುಳಿತ ನಂತರ ಅದರ ಸಮಸ್ಯೆ ತಲೆ ತಿನ್ನತೊಡಗಿತು.

ಶ್ಯಾಮರಾಯ ಪುಣೆಯಲ್ಲಿಯೇ ಇದ್ದ. ಅಪರಾತ್ರಿಯಲ್ಲಿ ಹೋಗಿ ಅವನ ಮನೆಯ ಬಾಗಿಲನ್ನು ಬಡಿದು ಎಬ್ಬಿಸುವದು ಅಷ್ಟು ಸೂಕ್ತ ಕಾಣಲಿಲ್ಲ. ಇಂಥ ಅವೇಳೆಯಲ್ಲಿ ಬಂದ ಕಾರಣವೇನೆಂದು ಅವನು ಕೇಳುವ ಶಕ್ಯತೆ ಇತ್ತು. ಬಸ ವಂತಿಯ ಕಡೆಗೆ ನನ್ನ ಕೆಲಸವಿದ್ದದ್ದು ನಿಜ; ಆದರೆ ಅದು ಶ್ಯಾಮರಾಯನ ಅಪ ರೋಕ್ಷದಲ್ಲಿ ಆಗಬೇಕಾಗಿತ್ತು. ಅವನ ಸಮಕ್ಷಮದಲ್ಲಿ ಮಾತನಾಡುವದಂತೂ ತೀರ ಅಶಕ್ಯವಾಗಿತ್ತು. ಸುಳ್ಳು ನೆವ ಕಾಕಾ ಅವರಲ್ಲಿ ದಕ್ಕುವಂತೆ ಶ್ಯಾಮರಾಯನಲ್ಲಿ ದಕ್ಕು ತ್ತಿರಲಿಲ್ಲ. ಅವನು ಒಂದಲ್ಲ ಹತ್ತೂ ರೀತಿಯಲ್ಲಿ 'ಕ್ರಾಸ್' ಮಾಡಿದ್ದರೆ ನಾನು ಖಲಾಸ್ ಆಗುತ್ತಿದ್ದೆ. ಶ್ಯಾಮರಾಯ ಅಸನರಿ ಪ್ರಾಣಿಯೂ ಅಲ್ಲ. ಅವನಿಗೆ ಹಾದಲ್ಯಾನ ಅಡ್ಡಗೆರೆ ಗೊತ್ತಿತ್ತು. ಇಂಥ ಅಪರಾತ್ರಿಯಲ್ಲಿ ನಾನು ಬಂದಿರುವದರ ಕಾರಣವನ್ನು ಅವನು ಖಟ್ಟಿಗೆ ಹಚ್ಚದೆ ಬಿಡುತ್ತಿರಲಿಲ್ಲ. ಏನೋ ನೀರಾಡುತ್ತಿರು ವುದರ ಸುಳಿವು ಅವನಿಗೆ ಹತ್ತದೆ ಹೋಗುತ್ತಿರಲಿಲ್ಲ. ಬೇರೆ ಎಲ್ಲಿಯಾದರೂ ಇಳಿದು, ನಾಕಾರು ತಾಸು ಹೊತ್ತೇರಿದ ನಂತರ ಅವನ ಬಂಗಲಿಗೆ ಹೋಗಿ – ನಾನು ಪುಣೆಗೆ ಬಂದು ಎರಡು ದಿನವಾಯಿತು; ನಿಮ್ಮ ಕಾಗದ ನನಗೆ ಮುಟ್ಟಿಲ್ಲ – ನೀವು ಮುಂಬೈಗೆ ಬರುವ ಮಜಕೂರು ನನಗೆ ಅವಿದಿತವೆಂದಿದ್ದರೆ ನಡೆಯುತ್ತಿತ್ತು. ಸುಳ್ಳು ಪಚನಕ್ಕೆ ಜಡ. ಆದರೆ ಗಂಟಲ ಕೆಳಗೆ ಲೀಲಾಜಾಲವಾಗಿ ಇಳಿಸಬಹುದು. ತಾಕತ್ ಇದ್ದವರು ಮಸಾಲೀ ಕರಿಗಡಬಿನಂತೆ ಅದನ್ನು ದಕ್ಕಿಸಿಕೊಳ್ಳುವದೂ ಶಕ್ಯ ಇದೆ. ಅದು ನನಗೂ ದಕ್ಕೀತೆನುವ ಖಾತ್ರೀ ಇತ್ತು.

ಶ್ಯಾಮರಾಯನಲ್ಲಿ ಹೋಗುವದಾದರೆ ಮರುದಿನ ಮಧ್ಯಾಹ್ನ ಅಥವಾ

ಇಳಿಹೊತ್ತಿನ ವೇಳೆಗೇ ಹೋಗುವದೆಂದು ಠರಾಯಿಸಿದೆ.

ಉಳಿದದ್ದು ಕಾಕಾ ಅವರ ಮನೆ. ಅಲ್ಲಿ ನನಗೆ ಸದಾ-ಸರ್ವದಾ-ಕಾಲ ಸ್ವಾಗತ ಕಾದಿರುತ್ತದೆ. ನನ್ನ ಆಗಮನದ ಕಾರಣಕ್ಕೆ 'ಇನ್‌ಕಮ್ ಟ್ಯಾಕ್ಸ್ ಆಫೀಸಿ'ನಲ್ಲಿಯ ನನ್ನ ಸಂದರ್ಶನದ 'ರಿಜರ್ವ್ ಫಂಡ್' ಇನ್ನೂ ಶಾಬೂತಾಗಿತ್ತು. ಮತ್ತೆ ಆ ಬಗ್ಗೆ ಪ್ರಯುತ್ನಿಸಲು ಬಂದಿದ್ದೇನೆಂದು ಕಾಕಾ ಅವರಿಗೆ ಹೇಳಿದರೆ. ಅವರು ‹ಆಗಲಿ, 'ಶುಭಾಸ್ತೇ ಪಂಥಾನಃಸ್ಸಂತು' ಎಂದು ಆಶೀರ್ವದಿಸುತ್ತಿದ್ದರು. ಕಾಕಾ ಅಷ್ಟು ಕಾರಣ-ಕಿಲಾಪದ ಜಾತಿಯಲ್ಲ. ಅಲ್ಲದೆ ದಾದಲ್ಯಾ ಅಂದರೆ ಅವರಿಗೆ ಧರ್ಮರಾಯನ ತುಕಡಿ ಇದ್ದಂತೆ. ಪೈ-ಪಾವು ಆಣೆಯಷ್ಟೂ ನರಕ-ದರ್ಶನ ಮಾಡಿಕೊಳ್ಳುವ ಸುಳ್ಳು' ತಗಲು ಅವನಲ್ಲಿ ಇರದ ಖಾತ್ರೀ ಅವರಿಗಿತ್ತು.

ಕಾಕಾ ಅವರಲ್ಲಿಗೇ ನೇರ ಟಾಂಗಾ ಹೊಡಿಸುವ ನಿರ್ಧಾರವಾಯಿತು.

ಇನ್ನು ಪುಣೆಯಲ್ಲಿ ಮಾಡುವ ಕಿತಬಿ ಏನು ?

ಸುರೇಶ-ಬಸವಂತಿಯರನ್ನು ಕಂಡು ಮಾತನಾಡಿದ ಮೇಲೆ ಮುಂದಿನ ವಿಚಾರ – ಅಲ್ಲಿಯ ವರೆಗೆ ವ್ಯರ್ಥ ವಿವಂಚನೆಯಲ್ಲಿ ತಲೆ ಕೆಡಿಸಿಕೊಳ್ಳುವದು ಬೇಡ ವೆಂದು, ನಾನು ಮಡಿಚಿದ ಕಾಲು ಸಡಲಿಸಿ ಸರಳವಾಗಿ ಅಡ್ಡಾದೆ. ಪುಣೆಯ ಸ್ಟೇಶನ್ನಿನಲ್ಲಿ ಹೇಗೂ ಗದ್ದಲವಿದ್ದೇ ಇರುತ್ತದೆ. ಜಾಗರ ತಂತಾನೇ ಬರುತ್ತಿದೆ ಎಂಬ ಭರವಸೆಯಂತೂ ಇತ್ತು. ಮನೆಗೆ ಹೋದ ಮೇಲೆ ಸುರೇಶ ನನ್ನನ್ನು ಮಲಗ ಬಿಡದಿರುವ ಖಾತ್ರಿಯೂ ಇತ್ತು.

ಇನ್ನು ನಿದ್ರೆ-ವಿಶ್ರಾಂತಿ ಅಟ್ಟಿಸಲಿದ್ದವು. ಇದೇ ಮೂರು ತಾಸಿನ ನಿದ್ರೆಯೇ ಕಡೆಯದಾಗಬಹುದಾಗಿತ್ತು. ತಿಕೀಟು ಕೊಂಡು ರೇಲ್ವೆಯಲ್ಲಿ ಜಾಗವನ್ನೇ ಖರೀದಿ ಮಾಡಿದ್ದೆ. ನನ್ನ ಜಾಗೀರಿಯ ಜಾಗದಲ್ಲಿ ಯಾರ-ಯಾವ ಆತಂಕವಿಲ್ಲದೆ ಪವಡಿಸಿದೆ.

ಜಾಗ ನನ್ನ ಜಾಗೀರಿಯದಾಗಿದ್ದರೂ ನಿದ್ರೆ ನನ್ನ ತೈನಾತಿಯ ಆಳಾಗಿರಲಿಲ್ಲ. ವಿಶ್ವಾಸನಿಗೆ ಅದು ಒಲಿದಂತೆ – ಮಿಸುಕದೆ ಮುಸುಕಿನಲ್ಲಿ ನುಸುಳುವಂತೆ ನನಗೆ ಸಾದಾಗಿರಲಿಲ್ಲ. ಅಲ್ಲದೆ ತುಳಸಿ-ನಾನು ಮಾತಾಡಿ – ಚರ್ಚಿಸಿದ ನಂತರ ತುಳಸಿಯು ಹೇಳಿದ ವಿಚಾರವನ್ನು ಕುರಿತು ನಿಧಾನವಾಗಿ ಆಲೋಚಿಸಲು ನನಗೆ ಅವಕಾಶವೇ ದೊರೆತಿರಲಿಲ್ಲ. ನಾನು ಪುಣೆಗೆ, ಬೆಳಗಾಂವಿಗೆ ಹೋದ ಬಗ್ಗೆ, ನನಗೆ ಬಂದ ಕಾಗದ ಗಳ ಬಗ್ಗೆ ಏನೂ ಚಕಾರ ಶಬ್ದವೆತ್ತಿ, ವಿಶ್ವಾಸನ ಸ್ವಾಸ್ಥ್ಯವನ್ನು ಕದಡಿಸಬೇಡ ವೆಂದು ತುಳಸಿಗೆ ಬಜಾಯಿಸಿದ್ದೆ. ಧೋಂಡೂಬಾಯಿಗೆ ಈ ಹಕೀಕತ್ತು ತಿಳಿಸುವ

ಅಗತ್ಯವಿರಲಿಲ್ಲ. ತಯ್ಯಬ್ಜೀ ಅವರಲ್ಲಿ ಗೋವಿಂದಭಟ್ಟನ ಆಕಸ್ಮಿಕ ಅಜಾರಿಯ ಸುಳಿಗೆಯನ್ನು ಬಿಟ್ಟಂತೆ, ಧೋಂಡೂಬಾಯಿಗೆ ನನಗೆ 'ಇನ್‌ಕಮ್-ಟ್ಯಾಕ್ಸ್ ಆಫೀಸಿ'ನಲ್ಲಿ 'ಇನ್‌ಟರ್‌ವ್ಯೂ'ಗೆ ಕರೆ ಬಂದಿರುವ ಕಾರಣ ಹೇಳಿದ್ದೆ. ವಿಶ್ವಾಸನ ಬಗ್ಗೆ ನಿಶ್ಚಿಂತನಾಗಿರುವಂತೆ ತುಳಸಿ ಆಶ್ವಾಸನ ಕೊಟ್ಟಿದ್ದಳು.

ಪುಣೆಯಲ್ಲಿ ಕಾಕಾ ಅವರನ್ನು ಏಕಾಂತವಾಗಿ ಕಂಡು ಈ ವಿಷಯುವನ್ನು ತಿಳಿಸಿದರೆ ಹೇಗೆ? ಎಂಬ ವಿಚಾರ ಸುಳಿಯುತೊಡಗಿತು. ಸಣ್ಣವರ ವಲಯು ದಲ್ಲಿಯೇ ಸುತ್ತುತ್ತಿದ್ದ ವಿಷಯುವನ್ನು ಹಿರಿಯರ ಹವಾಲ್ತೀ ಮಾಡಿದರೆ, ನಿಧಾನ ಅವರ ಕಿವಿಯ ಮೇಲೆ ಇಟ್ಟರೆ ಏನೂ ಪ್ರಮಾದವಾಗುವಂತಿರಲಿಲ್ಲ. ವಿಶ್ವಾಸನ ಅಭ್ಯಾಸ-ಪರೀಕ್ಷೆ ಸುಗಮವಾಗಿ ನಡೆದು ಮುಗಿಯಬೇಕೆಂಬ ಮನೀಷೆಯಿಂದ ರಾವಜೀಕಾಕಾ, ಸಾಹೇಬರನ್ನು ಕಂಡಾಗ ಅವರ ಮುಂದೆ ಇದರ ಪ್ರಸ್ತಾಪವನ್ನು ಹಿರಿಯರೆಂಬ ಅಧಿಕಾರವಾಣಿಯಿಂದ ಮಾಡಿ, ತಮ್ಮ ಸೊಸೆ ಹಾಗೂ ಸಾಹೇಬರು ಇಬ್ಬರೂ ನಿಷ್ಪಾಪರಿದ್ದ ನಿರ್ಣಾಯಕ ಅಭಿಪ್ರಾಯವನ್ನು ಕೊಟ್ಟರೆ, ಕದಾಚಿತ್ ಸಾಹೇಬರು, ಶ್ಯಾಮರಾಯನು ಕೊಟ್ಟ ಅಪವಾದವನ್ನು ಸಹಿಸಬಹುದಾಗಿತ್ತು. ರಾವಜೀಕಾಕಾ ಈ ಮಾತನ್ನು ಸಾಹೇಬರ ಮುಂದೆ ವಿವರಿಸುವ ರೀತಿಯಲ್ಲಿ, ಮನೆತನದ ಹಿರಿಯ-ಕರ್ತಾಪುರುಷ – ತನ್ನ ಮನೆತನದ, ಅಂತಸ್ತಿನ ಮಾನದಿಂದ ಮಾತನಾಡುವ ಜವಾಬುದಾರಿ ಇರತಿತ್ತು. ನಾನು-ಸುರೇಶ, ಇದೇ ಮಾತನ್ನು ಸುತ್‌ಸುತ್ತರಿದು ಹೇಳುವ ರೀತಿಯಲ್ಲಿ ಏನೋ ಕಂತ್ರಾಟದ ವಾಸ ಬಡಿಯು ವಂತಿರುತ್ತಿತ್ತು. ಕಾಕಾ ಅವರ ಹೇಳಿಕೆಗೆ ಬಸವಂತಿಯ ಸಾಕ್ಷಿಯ ಅಗತ್ಯ ಬೇಕಿರ ಲಿಲ್ಲ. ಈ ವಿಷಯ-ನಿವೇದನ-ಪ್ರಕರಣದಲ್ಲಿ ಅವಳ ಪಾತ್ರ ನಾಟ್ಯವಾಡಬೇಕೆಂದು ಕಾಕಾ ಅವರು ಬಯಸುತ್ತಿರಲಿಲ್ಲ. ತಮ್ಮ ನಿಲುಮೆಯ ರೀತಿಯನ್ನು ಸ್ಪಷ್ಟವಾಗಿ ನಿವೇದಿಸುತ್ತಿದ್ದರು. ತಮ್ಮ ಮಗನ ಆರೋಪದಲ್ಲಿ ತಥ್ಯವಿಲ್ಲವೆಂದು ಸಾರುತ್ತಿದ್ದರು. ಕಾಕಾ, ಬೆಳಕು-ಕತ್ತಲೆಯ ಕಣ್ಣು-ಮುಚ್ಚಾಟವಾಡುತ್ತಿರಲಿಲ್ಲ. ಅದರ ಪರಿಣಾಮ ವನ್ನು ಕುರಿತು ಮೀನ-ಮೇಷ ಮಾಡುತ್ತಿರಲಿಲ್ಲ. ಎಲ್ಲದರ ಹೀನ ಪರಿಣಾಮಕ್ಕೆ ಶ್ಯಾಮರಾಯನೇ ಮೂಲ ಕಾರಣನೆಂಬ ಮಾತು ಅವರಲ್ಲಿ ದೃಢವಾಗಿತ್ತು. ಅವರ ಶಾಪ-ತಾಪಕ್ಕೆ ಅವನ ತಲೆಯೇ ಹೊಣೆಯೆಂಬ ಖಾತ್ರೀ ಅವರಿಗಿತ್ತು. ಅವರು ಬದುಕಿದ್ದೂ ಆ ಒಂದು ನಿಶ್ಚಿಂತಿಯಿಂದಲೇ.

ಈ ಭಾನಗಡಿಯಲ್ಲಿ ವಿಶ್ವಾಸನ ಕೋರ್ಸು ಸಂಪೂರ್ಣವಾಗದಿದ್ದರೆ ಕಾಕಾ

ಹಳಹಳಿಸದೆ ಇರುತ್ತಿರಲಿಲ್ಲ. ದೀರ್ಘ ನಿಶ್ವಾಸದೊಂದಿಗೆ —

"ಅದೂ ಶ್ರೀಹರೀ ಇಚ್ಛಾ"

ಎಂದು ಅದರ ಭಾರವನ್ನೂ ಶ್ರೀಹರಿಯ ಮೇಲೆಯೇ ಹಾಕುತ್ತಿದ್ದರು. ಸಾಹೇಬರಿಗೆ ಅಪವಾದ-ಶಾಪ ಬಡಿದು ಅವರು ನಿಶ್ಚೇಷ್ಟರಾದರೂ ಅದರ ಪಾಪವನ್ನು ಶ್ಯಾಮ ರಾಯನ ಉಡಿಯಲ್ಲಿ ಕಟ್ಟಿ. ಈ ಘಟನೆಯ ಲೀಲೆ ಶ್ರೀಹರಿಯ ಇಚ್ಛೆಯೆಂದೇ ಕಾಕಾ ನಿಸ್ತಬ್ಧ-ಜಡವಾಗುತ್ತಿದ್ದರು. ಪರಿಣಾಮದ ಅಂತ್ಯ ಅವರ ಕಣ್ಣಿಗೆ ಕಟ್ಟಿರ ಬೇಕು. ಅದನ್ನು ತಪ್ಪಿಸುವ ಸಾಮರ್ಥ್ಯವೀಗ ತಮ್ಮಲ್ಲಿ ಉಳಿದಿಲ್ಲವೆಂಬ ನಂಬಿಕೆ ಅವರಲ್ಲಿ ದೃಢವಾಗಿರಬೇಕು. ಪಗಡೆಯಾಟದಲ್ಲಿ ಹತ್ತು ಕಡೆಗೆ ಕಾಯಿ ಸಿಕ್ಕಾಗ ಒಂದು ಸತ್ತರೂ ಅಷ್ಟೇ – ಹತ್ತು ಸತ್ತರೂ ಅಷ್ಟೇ ಎನ್ನುವ ಮನೋಭಾವ ಅವರಲ್ಲಿ ಮೂಡಿದ ಶಂಕೆ ನನ್ನಲ್ಲಿ ಗಟ್ಟಿಗೊಳ್ಳತೊಡಗಿತ್ತು.

ಸಾಹೇಬರು ಈ ಅಪವಾದದ ವಿಷಯವನ್ನು ಲಘುವಾಗಿ ಭಾವಿಸಿದರೂ, ಶ್ಯಾಮರಾಯ-ಸೋನಕ್ಕರ ಸಂಸಾರ ಹೊಂದುತ್ತಿರಲಿಲ್ಲ. ಹೊಂದಿದರೂ ಅದರಿಂದ ಸೋನಕ್ಕ ಸುಖಿಯಾಗುತ್ತಿರಲಿಲ್ಲ. ಶ್ಯಾಮರಾಯ ಯಾರಿಗೂ ಸುಖ ಕೊಡಲು ಹುಟ್ಟಿಬಂದ ಪ್ರಾಣಿಯಲ್ಲವೆಂಬ ನಿರ್ಧಾರಕ್ಕೆ ಕಾಕಾ ಬಂದಂತಿತ್ತು.

ತಮ್ಮ-ಗಿರಿಜಾನ ಪ್ರಕರಣವನ್ನು ಕುರಿತು ಬಹಳ ಓದೆ ಶ್ಯಾಮರಾಯ ಲಘುವಾಗಿ ಮಾತಾಡಿದಾಗ – ರಾಧಾಕಾಕೂನ ಮರಣಾನಂತರ ಆಸ್ತಿಯ ವಿಚಾರ ದಲ್ಲಿ ಅಪನಂಬಿಕೆ ತೋರಿದಾಗ – ಪುಣೆಯ ಮನೆಯಲ್ಲಿ ತಾವು ಇರದಂತೆ ಡಾವು ಮಾಡಿದಾಗ – ಸೋನಕ್ಕನನ್ನು ಅಗತಿಕಳನ್ನಾಗಿ ಮಾಡಿ ಆರೋಪ ಹೊರಿಸಿದಾಗ, ತಮ್ಮ ಜೀವಮಾನದಲ್ಲಿಯೆ ವಾಡೆಯ ಕಬ್ಜಾ ತೆಗೆದುಕೊಂಡು ಅಲ್ಲಿ ಪ್ರತಿಷ್ಠಿತ ನಾಗಲು ಬಯಸಿದಾಗ, ಅವರು ಶ್ಯಾಮರಾಯನ ಯೋಗ್ಯತೆಯನ್ನು ಅಳೆದಿದ್ದರು. ಅವನ ಕ್ಷುಲ್ಲಕತನವನ್ನೂ ಮನಸಾರೆ ಉಂಡಿದ್ದರು. ವಿಶ್ವಾಸ-ವಸೂರ ಸಂಬಂಧ ಮುರಿಯಲು, ಸುರೇಶ-ಶಕೂರ ಸಂಬಂಧ ಹೊಂದುಗೂಡದಂತೆ ಕ್ಲೃಪ್ತಿ ನಡೆಸಲು ಶ್ಯಾಮರಾಯ ಮಾಡಿದ – ಮಾಡುತ್ತಿದ್ದ ಹೀನ-ಕೃತ್ಯ ಅವರಿಗೆ ವಿದಿತವಿದ್ದವು. ನಾವು ಇವನ್ನು ಆಡಿ, ಚರ್ಚಿಸುತ್ತಿದ್ದೆವು. ಕಾಕಾ ಮನದಲ್ಲಿಯೇ ಮೆಲುಕುಹಾಕುತ್ತಿರ ಬೇಕು. ತಾವು ಊರಿಗೆ ಹೋಗಿ ನಿಂತರೆ, ಇದೇ ಮಾತನ್ನು ಹಗಲು-ರಾತ್ರಿ ಆಡಿ, ಗಂಟಲ ಕಸರತ್ತು ಮಾಡಬೇಕಾಗುತ್ತಿತ್ತೆಂದು ಅವರಿಗೆಂದೊ ಖಚಿತವಾಗಿರಬೇಕು. ಅಂತೇ ಅವರು, ಕಣ್ಣಿನಿಂದ ಎಲ್ಲ ನಾಟಕ ನೋಡುತ್ತಿದ್ದರು; ಕಿವಿಯಿಂದ ಎಲ್ಲ

ಮಾತನ್ನೂ ಕೇಳುತ್ತಿದ್ದರು: ಆದರೆ ನಾಲಗೆಯನ್ನು ಮಾತ್ರ ಅಂಕಿತದಲ್ಲಿ ಇಟ್ಟು ಕೊಂಡು ಅಂತರಂಗದಲ್ಲಿ ಕುದಿಯುತ್ತಿದ್ದರು; ಅಸರಂತ ತಳಮಳಿಸುತ್ತಿದ್ದರು. ಸೋನಕ್ಕ-ಹುಡುಗರ ಕ್ಷೇಮದೃಷ್ಟಿಯಿಂದ ಆತ್ಮದಹನ ಮಾಡಿಕೊಳ್ಳುತ್ತಿದ್ದರು. ತಮ್ಮ ದಹನದ ಝಳ ಅನ್ಯರಿಗೆ ತಾಕದಂತೆ ಹಿಮವತ್ ಪಿಂಡವಾಗಿ ತಣ್ಣಗಿದ್ದರು.

ಕಾಕಾ ವಿಶಾಲಮನಸ್ಕರಾಗಿ ನಾನಿಡುವ ವಿಚಾರವನ್ನು ಕೇಳಿಕೊಂಡಾರೆಂಬ ಭರವಸೆ ನನಗೆ ಬಲವಾಗಿತ್ತು. ಅವರಿಗೇ ನನ್ನ ವಿಚಾರವನ್ನು ತಿಳಿಸುವ ನಿರ್ಧಾರ ಮಾಡಿಕೊಂಡೆ. ಅವರ ಹೇಳಿಕೆಯಂತೆ ನಡೆಯುವದೆಂದು – ಅದರಿಂದ ಕ್ಷೇಮ ಕಾರೀ ಪರಿಣಾಮ ಹೊರಬೀಳಬಹುದೆಂದು ಭಾವಿಸಿದೆ.

ಸುರೇಶನಿಗೆ, ಸಾಹೇಬರ ಮುಂಬೈ ಪ್ರಯಾಣದ ತಾರೀಖು ಗೊತ್ತಿರುವ ಸಂಭವವಿತ್ತು. ಪುಣೆಯಲ್ಲಿ ನನ್ನ ರಾಯಭಾರಕ್ಕೆ ಹೆಚ್ಚು ವೇಳೆ ಹಿಡಿದರೆ – ಅಷ್ಟ ರಲ್ಲಿಯೇ ಸಾಹೇಬರು ಮುಂಬೈಗೆ ಬರುವಂತಿದ್ದರೆ ಮಾತ್ರ ನಾನು ಮುಂಬೈಗೆ ಧಾವಿಸುವದು ಅಗತ್ಯವಿತ್ತು. ಮುಂಬೈಯಲ್ಲಿ ಅವರನ್ನು ನೆರಳಿನಂತೆ ಓಂಬಾಲಿಸಿ. ವಿಶ್ವಾಸನ ಮುಂದೆ ಅವರು ಇಲ್ಲದ ರಗಳೆಯ ಮಾತುಗಳನ್ನು ಬಿಚ್ಚಿದರೆ ಅದನ್ನು ಕುಡಿಯಲ್ಲಿಯೇ ಚಿವುಟುವದು ತೀರ ಅವಶ್ಯಕವಾಗಿತ್ತು. ವಿಶ್ವಾಸನನ್ನು ನಿಗ್ರಹಿ ಸುವ ಭಾರವನ್ನು ತುಳಸಿ ಹೊತ್ತಿದ್ದಳು. ಸಾಹೇಬರನ್ನು ನಾನು ಸಂಬಾಳಿಸ ಬೇಕಾಗಿತ್ತು. ರಾವಜೀಕಾಕಾ ಅವರೇ ಪಂತಕುಟುಂಬದ ಹಿರಿಯರು. ಕರ್ತಾ ಪುರುಷರು. ಏನಾದರೂ ಮಾತು-ಕತೆ ಆಡುವದಿದ್ದರೆ ಅವರ ಕೂಡ ಆಡಿಯೇ ಬಗೆಹರಿಸಿಕೊಳ್ಳುವದು ಗೃಹಸ್ಥಮಿಕೆಯೆಂದು ಹಿಂದೆಯೇ ನಾನು ಸಾಹೇಬರಿಗೆ ಸೂಚಿಸಿದ್ದೆ. ಆಗ ಶ್ಯಾಮರಾಯನನ್ನು ಅಲಕ್ಷಿಸಿರಿ ಎಂದು ಹೇಳುವ ಪ್ರಸಂಗ ಬಂದಿತ್ತು. ಇಂದು ವಿಶ್ವಾಸನನ್ನು ಅಲಕ್ಷಿಸಿರಿ ಎಂದು ಹೇಳುವ ಪ್ರಸಂಗ ಬಂದಿತು. ಸಾಹೇಬರು ಹಾಗೆ ಅಲಕ್ಷಿಸಿದರ ಬಂಗಾರವಾದಂತಾಗುತ್ತಿತ್ತು.

ಸಾಹೇಬರು ತಮ್ಮ ಮಗಳು – ಭಾವೀ ಅಳಿಯ ಸಮೇತರಾಗಿ ಮುಂಬೈಗೆ ಬಂದಿರುವಾಗ, ವಿಶ್ವಾಸ ತಾನಾಗಿಯೇ ಹೋಗಿ ಅವರನ್ನು ಕಾಣದಿರುತ್ತಿರಲಿಲ್ಲ. ಕಾಣುವದು ಅವನ ಇಜ್ಜತ್ತಿಗೆ ಯೋಗ್ಯವಾಗಿತ್ತು. ಯದಾಕದಾಚಿತ್ ಅವನಿಂದ ಭೆಟ್ಟಿ ವಿಲಂಬವಾಗಿದ್ದರೆ – ಸಾಹೇಬರು ತಾವಾಗಿಯೇ ಧಾವಿಸಿ ಹೋಗಿ ಅವನನ್ನು ಕಾಣುತ್ತಿದ್ದರು.

ಆದರೆ ಈ ಭೆಟ್ಟಿಯ ಯೋಗವನ್ನೇ ತಪ್ಪಿಸಿದರೆ? ಸುರೇಶನಿಗೆ ಅಗಾವು

ಸೂಚನೆ ಕೊಟ್ಟು, ಶಕೂನನ್ನು ಪುಣೆಯಲ್ಲಿಯೇ ಇಳಿಸಿಕೊಳ್ಳುವದು ಶಕ್ಯವಿತ್ತು. ಮಗಳು ಭಾವೀ ಅತ್ತೆಯ ಮನೆಯನ್ನು ಅಗಾವು ಪ್ರವೇಶಮಾಡುವ ಖುಷಿಯಿಂದ ಸಾಹೇಬರು ಇದಕ್ಕೆ ಸಕಾರ ಹೇಳುತ್ತಿರಲಿಲ್ಲ. ಶಕೂ ಪುಣೆಯಲ್ಲಿ ಇಳಿಯುತ್ತಿದ್ದಳು. ಸಾಹೇಬರು ಒಬ್ಬರೇ ಮುಂಬೈಗೆ ಬರುತ್ತಿದ್ದರು. ತಮ್ಮ ಮುಂಬೈ ಪ್ರಯಾಣದ ಕಾರಣವನ್ನು ಹೇಳುತ್ತಿದ್ದರು. ಸಮಯ ಸಾಧಿಸಿ ಅವರಿಗೆ ಶ್ಯಾಮರಾಯನ ಪತ್ರದ ವಿಷಯವನ್ನು ತಿಳಿಸಿದರೆ–ಇನ್ನೂ ನನ್ನಲ್ಲಿ ಶಾಬೂತಾಗಿದ್ದ ಆ ಪತ್ರವನ್ನು ಅವರ ಮುಂದೆ ಚಾಚಿದರೆ–ಅದರಿಂದ ಅವರು ತೀರ ನಿರುತ್ಸಾಹಿಯಾಗಿ, ಯಾರ ಭೆಟ್ಟಿ–ಯಾರ ಕೂಡ ಮಾತು-ಕತೆ ಇಲ್ಲದೆ ಬೆಳಗಾಂವಿಗೆ ಮರಳುವ ಸಂಭವವಿತ್ತು. ಶ್ಯಾಮರಾಯನ ಬಗ್ಗೆ ಅವರ ಮನಸ್ಸು ಕಲುಷಿತವಾಗುತ್ತಿತ್ತು. ಅದರಿಂದ ಯಾವ ಹಾನಿಯೂ ಇರಲಿಲ್ಲ. ಶ್ಯಾಮರಾಯ ಅವನತಿಯ ಮೆಟ್ಟಲುಗಳನ್ನು ಇಳಿಯುತ್ತಿದ್ದ. ಆ ಪತನದಿಂದ ಅವನು ಪಾರಾಗಬಯಸಿದರೆ ಅನ್ಯ ಗತಿಯಿಲ್ಲದೆ ಮತ್ತೆ ಸಾಹೇಬರಿಗೇ ಶರಣುಹೋಗುತ್ತಿದ್ದ. ಶರಣುಬರುವಷ್ಟು ಮೆತ್ತಗಾದರೂ ಆಗುತ್ತಿದ್ದ. ಸಾಹೇಬರಿಗೆ ಶ್ಯಾಮರಾಯನ ನೀಚತನ ತಿಳಿಯುತ್ತಿತ್ತು. ಅವನು ಕೊಟ್ಟ ಅಪವಾದವೂ ತಳಬುಡವಿಲ್ಲದ್ದೆಂದು ಖಾತ್ರೀ ಆಗಿ ಅದರ ವಿಪರೀತ ಪರಿಣಾಮ ತಪ್ಪುತ್ತಿತ್ತು. ನಾಕೆಂಟು ದಿನ ನಿಲ್ಲಲೆಂದು ಬಂದ ಶಕೂನನ್ನು ರಾವಜೀಕಾಕಾ - ಸೋನಕ್ಕ ಖುಷಿಯಿಂದ ಮನೆತುಂಬಿಸಿಕೊಂಡೇ ತಿರುಗಿ ಕಳಿಸುತ್ತಿದ್ದರು. ದಾದಲ್ಯಾನ ಕಂತ್ರಾಟ ಮುಗಿದು ಅವನ ರಾಯಭಾರ ಫಲಿಸುತ್ತಿತ್ತು.

ಇದೇ ವಿಚಾರ ನಡೆದಾಗ ನನಗೆ ಯಾವಾಗ ನಿದ್ರೆ ಹತ್ತಿತೋ ಏನೋ? ಪುಣೆಯ ಸ್ಟೇಶನ್ನದಲ್ಲಿಯ ಸಾವಿರ ಕಂಠದ ಕೂಗು, ಕಿರಿಚಾಟ, ಗಾಡಿಯ ಕರ್ಕಶ ಸಿಳ್ಳು–'ಶಂಟಿಂಗ್'ಗಾಡಿಗಳ ಧಡಪಡಾಟ, ನನ್ನನ್ನು ಬಡಿದೆಬ್ಬಿಸಿದವು. ಏಳಬೇಕೆನ್ನುವಾಗಲೇ ಯಾವನೋ ಪುಣ್ಯಾತ್ಮ ತನ್ನ ಮಣಭಾರದ ಹೊಲ್ಡಾಲನ್ನು ಕಿಟಕಿಯಿಂದ ಒಳಗೆ ನೂಕಿ ನನ್ನನ್ನು ಚಪ್ಪಟೆಮಾಡಿದ. ಅಂದಿನ ಗದ್ದಲ ವಿಪರೀತವಾಗಿತ್ತು. ಮುಂಬೈ-ಮದ್ರಾಸ ಮೇಲು. ಎಕ್ಸಪ್ರೆಸ್ಸು ಎರಡೂ ಅಂದು ಮೋಹರಮ್-ಉಗಾದಿ ಒಂದನ್ನೊಂದು ಅಪ್ಪಿಕೊಂಡಂತೆ ಪುಣೆಯ ಸ್ಟೇಶನ್ನಿನಲ್ಲಿಯೇ ಗಾಠಾಯಿಸಿದ್ದವು.

ಗದ್ದಲದಲ್ಲಿ ಹೇಗೋ ದಾರಿ ಬಿಡಿಸಿಕೊಂಡು ಮಹಾದ್ವಾರದಲ್ಲಿ ನಿಂತ ದ್ವಾರದೇವತಾ – ಟಿಕೆಟ್-ಕಲೆಕ್ಟರನ ಕೈಯಲ್ಲಿ ತಿಕೀಟು ತುರುಕಿ ಹೊರಗೆ ಬಂದು ನಿಂತು ಉಸಿರಾಡಿಸತೊಡಗಿದೆ. ಜಿಟಿಜಿಟಿ ಮಳೆಯಂತೂ ಹತ್ತಿಯೇ ಇತ್ತು.

ನನ್ನಂಥ ಸಡೇಸೋಟ ಗಿರಾಕಿಯ ಹತ್ತಿರ ಯಾವ ಟಾಂಗದವ ಸುಳಿಯಬೇಕು. ಅದರಲ್ಲಿಯೂ "ಪುಣೇರೀ ಟಾಂಗಾವಾಲಾ"ರೆಂದರೆ ಅಖಿಲ ಭಾರತ ಖ್ಯಾತಿಯ ಹರೇಮಿ ಗಿರಾಕಿಗಳು. ಮೂರು ಜನ ಕೂಡುವ ಟಾಂಗಾದಲ್ಲಿ ಆರು ಜನರ ಭರ್ತೀ ಆದ ಮೇಲೆ, ಒಂದು 'ಎಕ್ಸ್ಟ್ರಾ' ಗಿರಾಕಿಯೆಂದು ಕದಾಚಿತ್ ನನ್ನ ಕಡೆಗೆ ಕೃಪಾ-ದೃಷ್ಟಿಯನ್ನು ಹೊರಳಿಸಬಹುದಾಗಿತ್ತು. ಕದಾಚಿತ್ ಹಾಗೇ ಮಾತಾಡಿಸುವ ಇಸಮು ಒಲಿದೀತೇನೆಂಬ ಆಶೆಯಿಂದ ಆತುರನಾಗಿ ನಿಂತೆ. ಇಂಥ 'ಎಕ್ಸ್ಟ್ರಾ' ಗಿರಾಕಿಯ ಬಾಬತ್ತಿನಲ್ಲಿ ಇಬ್ಬರಿಗೂ ಫಾಯದೇ ಇರುತ್ತದೆ. ಇಂಥ ಗಿರಾಕಿ ಟಾಂಗಾದಲ್ಲಿ ಕೂತ-ನಿಂತ ವಿಚಾರ ಟಾಂಗಾವಾಲನ ಲಕ್ಷ್ಯದಲ್ಲಿ ಬರುವದಿಲ್ಲ. ಹನ್ನೆರಡಾಣೆಯಲ್ಲಿ ಕೂತರೂ ಅಷ್ಟೇ – ನಿಂತರೂ ಅಷ್ಟೇ ಮಂದಗತಿಯಲ್ಲಿ ಮುಂದಂತೂ ಸಾಗಿ ನಡೆದಿರುವೆನಲ್ಲ ಎಂಬ ಸಮಾಧಾನ ಗಿರಾಕಿಗೆ ಇರುತ್ತದೆ. ನಾನು ಒಬ್ಬನೇ ಪುಣೆಗೆ ಬರುವ ಪ್ರಸಂಗ ಬಂದಾಗಲೆಲ್ಲ ಇಂಥ ಸಂಧಿಯನ್ನೇ ಸಾಧಿಸುತ್ತಿರುತ್ತೇನೆ.

ಒಂದೆರಡು ಝುರುಕಿ ಸಿಗರೇಟು ಎಳೆಯುವದರಲ್ಲಿ 'ಎಕ್ಸ್ಟ್ರಾ' ಶೋಧಕ ಟಾಂಗಾವಾಲಾನ ಅವತಾರವಾಗಬಹುದೆಂದು, ಸಿಗರೇಟು ಹಚ್ಚಿ ಸ್ಟೇಶನ್ನಿನ ಹೊರ ವಲಯದಲ್ಲಿ ಚಾಟಿಗೆ ನಿಂತೆ. ಟಾಂಗಾ-ಸಾಲಿನ ತನಿಖೆಯನ್ನು ನಡೆಸಿದಾಗ ಸಹಜವಾಗಿ ನನ್ನ ದೃಷ್ಟಿ ಮೋಟಾರ-ವೀಥಿಯ ಕಡೆಗೆ ಜಾಚಿತು. ಈಗಿನಂತೆ ಆಗ ಟ್ಯಾಕ್ಸೀ-ರಿಕ್ಷಾಗಳ ವೀಥಿಯೋ ಎದ್ದು ನಿಂತಿರುತ್ತಿದ್ದಿಲ್ಲ. ಇನ್ನೂ ಟ್ಯಾಕ್ಸಿ ವ್ಯವಸಾಯ ಬೆಳೆಯದಿದ್ದ ಕಾಲವದು. ಖಾಸಗೀ ಗಾಡಿಗಳ ದಿಮಾಕು. ದೌಲತ್ತು ಇನ್ನೂ ಭರಾಟಿಯಲ್ಲಿತ್ತು. ಏನಿಲ್ಲೆಂದರೂ ಮೂವತ್ತು-ನಲವತ್ತು ಗಾಡಿಗಳು ಸಾಲುಗೊಂಡು ನಿಂತಿದ್ದವು. ಈ ಗಾಡಿಗಳ ಪರೇಡಿನ ತುತ್ತ ತುದಿಯಲ್ಲಿ. ನಮ್ಮ ಶ್ಯಾಮರಾಯನ ಹಳೆಯ ಫೋರ್ಡ್‌ಗಾಡಿಯೂ ವಿರಾಜಮಾನವಾಗಿರುವದು ಕಂಡಿತು. ಗಾಡಿಯಲ್ಲಿ ಯಾರೂ ಇರಲಿಲ್ಲ. ಬೀದಿಯ ದೀಪದ ಬೆಳಕು ಅರ್ಧ ಗಾಡಿಯಲ್ಲಿ ಚೆಲ್ಲಿತ್ತು. ಅದರ ರಥಿಕ ಖಾದರ್ ಆಜೂ-ಬಾಜೂದಲ್ಲಿ ಕಾಣುತ್ತಿರಲಿಲ್ಲ. ಶ್ಯಾಮರಾಯ ಪುಣೆಯಲ್ಲಿದ್ದ. ಅವನೇ ಏನಾದರೂ ಗಾಡಿಯನ್ನು ಹಕಲಾಯಿಸಿಕೊಂಡು ಬಂದಿರಬಹುದೇ? ಇಂಥ ಅಪರಾತ್ರಿಯಲ್ಲಿ ಏಕೆ ಬಂದಿರಬೇಕು? ಯಾರನ್ನು ಕಳಿಸಲಿಕ್ಕೆ – ಯಾರನ್ನು ಸ್ವಾಗತಿಸಲಿಕ್ಕೆ ಬಂದಿರಬೇಕು? ಪುಣೆಯ ಜನ ತೀರ ಅಗತ್ಯವಿದ್ದರೆ ಮಾತ್ರ ಈ ಅಪರಾತ್ರಿಯ ಗಾಡಿಯಿಂದ ಮುಂಬೈಗೆ ಹೋಗುತ್ತಾರೆ. ಶ್ಯಾಮರಾಯ ಮುಂಬೈಗೆ ಬರಲಿದ್ದ. ಅದು ನಿಜ. ಆದರೆ ಈ ಗಾಡಿಯನ್ನು ಏಕೆ ಒಡಿವ? ಬೆಳಗಿನ

ಯಾವ ಗಾಡಿಗೂ ಆರಾಮಾಗಿ ಹೋಗಬಹುದಾಗಿತ್ತು? ಹೇಗೂ ತನ್ನದೇ ಶಕಟ ಇದೆ. ಅದರಲ್ಲಿಯೇ ಮುಂಬೈಗೆ ಪ್ರಯಾಣಿಸಬಹುದಾಗಿತ್ತು. ಈಗ ಗಾಡಿಯಲ್ಲಿ ಶ್ಯಾಮರಾಯನೂ ಇಲ್ಲ; ಖಾದರನೂ ಇಲ್ಲ. ಅದೂ ನನ್ನಂತೆ ಏಕಾಂಗಿಯಾಗಿಯೇ ನಿಂತಿತ್ತು.

ಶ್ಯಾಮರಾಯನೂ ಇದೇ ಗಾಡಿಗೆ ಮುಂಬೈಗೆ ಹೋಗಿದ್ದರೆ, ಯಜಮಾನ ನನ್ನು ಕೂಡಿಸಿ ಬರಲಿಕ್ಕೆ ಕದಾಚಿತ್ ಖಾದರನು ಹೋಗಿರುವ ಸಂಭವವಿತ್ತು. ಶ್ಯಾಮರಾಯ ಮುಂಬೈಗೆ ಹೋಗಿದ್ದರೆ ನನಗೆ ಕಾಕಾ ಅವರಲ್ಲಿ ಹೋಗುವ ಜರೂರಿಯೇ ಇರಲಿಲ್ಲ. ಅಚಾನಕವಾಗಿ ಹೋಗಿ ಬಸವಂತಿಯನ್ನು ಚಕಿತಳನ್ನಾಗಿ ಮಾಡಬರುತ್ತಿತ್ತು.

ಸ್ಟೇಶನ್ನಿನ ಹೊರ ಆವಾರದ ಕಂಬಕ್ಕೆ ಆತು ನಿಂತುಕೊಂಡೇ ವಿಚಾರ ನಡೆಸಿದ್ದೆ. ಬರುವವರು ಬರುತ್ತಿದ್ದರು; ಹೋಗುವವರು ಹೋಗುತ್ತಿದ್ದರು. ಬರು-ಹೋಗುವವರಲ್ಲಿ ಶ್ಯಾಮರಾಯ, ಖಾದರ್ ಏನಾದರೂ ಕಂಡಾರೇನೆಂದು ನಿರೀಕ್ಷಿಸುತ್ತಿದ್ದೆ. ಮೋಟಾರಿನ ಕಡೆಗೆ ಖಾದರ್ ಒಬ್ಬನೇ ಹೋಗಿದ್ದರೆ ನೇರವಾಗಿ ಅವನ ಬೆನ್ನಿಗೆ ನಡೆದು – ಅವನಿಗಿಂತ ಮುಂಚಿತವಾಗಿಯೇ 'ಫ್ರಂಟ್-ಸೀಟಿ'ನಲ್ಲಿ ಸ್ಥಾನಾಪನ್ನನಾಗಬೇಕೆಂದು ಯೋಚಿಸುತ್ತಿದ್ದೆ. ನಾನು ಈ ಯೋಚನೆಯ ಹುದಲಿ ನಲ್ಲಿ ಇನ್ನೂ ತೊಳಲಾಡುತ್ತಿದ್ದೆ – ಒಂದು ಕಾಲು ಕಿತ್ತುತ್ತಿದ್ದೆ. ಇನ್ನೊಂದನ್ನು ಎತ್ತುತ್ತಿದ್ದೆ. ಕಿತ್ತಿದ-ಎತ್ತಿದ ಭಾಸ ಎಷ್ಟೋ ಅಷ್ಟೇ ಮುಂದಿನ ಪ್ರಗತಿಯೇ ಇರಲಿಲ್ಲ. ಶ್ಯಾಮರಾಯ – ಇಲ್ಲ – ಖಾದರ್ ಬಂದರೆ ಆ ಒಂದು ಹುಲ್ಲಿನ ಆಸರೆ ಯನ್ನೇ ನೆಚ್ಚಿ ಈ ಹುದಲಿನಿಂದ ನೆಗೆಯಬಯಸುತ್ತಿದ್ದೆ. ಅವರು ಈಗ – ಇದೀಗ ಬಂದಾರೆನ್ನುವ ಭರವಸೆ ಬಲವಾಗತೊಡಗಿದಾಗಲೇ —

ಯಾರೋ ಹಿಂಬದಿಗೆ ನಿಂತು ಗಟ್ಟಿಯಾಗಿ ಎರಡೂ ಕಣ್ಣು ಮುಚ್ಚಿದರು. ಉಕ್ಕುವ ನಗೆಯನ್ನು ಅದುಮಿ ಹಿಡಿದು ಇನ್ನೊಂದು ವ್ಯಕ್ತಿ ಬದಿಗೆ ನಿಂತು ಪಿಸಿಪಿಸಿ ನಗುವುದು ಕೇಳಿಸಿತು. ಕಣ್ಣು ಮುಚ್ಚಿದ ಕೈ ಗಂಡಸಿನದು. ನಗುವ ಮುಸಿ ಮುಸಿ – ಅಸ್ಪಷ್ಟ ದನಿ ಹೆಂಗಸಿನದು. ಮುಕ್ತಕಂಠದಿಂದ ಆ ವ್ಯಕ್ತಿ ನಕ್ಕಿದ್ದರೆ – ಖಾತ್ರೀ ಲಾಯಖ್ಖಾಗಿ ಈ ನಗೆ ಇಂಥವರದೇ ಎಂದು ಹೇಳುತ್ತಿದ್ದೆ. ಪಿಸಿಪಿಸಿಯು ಅರ್ಥ ಅಗಮ್ಯವಾಗಿತ್ತು. ಕಣ್ಣು ಮುಚ್ಚಿದ ಕೈಯ ಸ್ಪಷ್ಟ ಪರಿಚಯವಾಗದಿದ್ದರೂ, ಕಣ್ಣು ಮುಚ್ಚಿದ ವ್ಯಕ್ತಿ ಹಾಕಿಕೊಂಡ ಫುಲ್-ಶರ್ಟಿನ ಪರೀಟ ಘಡಿಯ ಡಬಲ್ ಕಪ್ಪಿನ

ಚರಚರ ಕೊರೆತ ನನ್ನ ಗಲ್ಲಕ್ಕಾಗತೊಡಗಿತು. ಮೈಗೆ ಮೈ ಮಸೆಯುವ ಆ ವ್ಯಕ್ತಿಯ ಗುರುತು ಸಿಕ್ಕಂತಾಯಿತು. ಕೋಟಿಗೆ ಸಿಂಪಡಿಸಿದ – ತಲೆಗೆ ನವುರಾಗಿ ಹಚ್ಚಿದ ಮಂದ-ಸುಗಂಧ ಸೂಸಿ-ತೇಲಿ ಆ ವ್ಯಕ್ತಿಯ ಪರಿಚಯವನ್ನು ಸಾರತೊಡಗಿತು. ಗಂಧ-ಮಾದನ-ಪರ್ವತದ ಸುಗಂಧದಲ್ಲಿ ಮಿಂದು ಬಂದ ಐಟಿನಿಂದ, ಛಂದದಿಂದ ಮೆರೆಯುವ ಇಂಥ ರಸಿಕ-ರಾಜತ್ವ ಸುರೇಶನ ವಿನಾ ಅನ್ಯರಿಗೆ ಬರುವದು ಅಶಕ್ಯವೇ ಇತ್ತು.

"ಮಗನs, ನಿಮ್ಮ ಅಪ್ಪನ ನಾಡೀನs ಹಿಡದೀನ್ಯಂತs. ನೀ ಯಾ ಗಿಡದ ತೊಪ್ಪಲ ನನಗs. ದಾದಲ್ಯಾ ಮೂಸಿ ನೋಡಿ, ಕಣ್ಣ ಮುಚ್ಚಿದ ಚಂದ್ರಾಮ ಯಾರು ಅನೂದನ್ನ ಹೇಳತಾನ ಬೇಕಾರ. ಶಕುಂತಲಾಪಹರಣದ ದುಷ್ಯಂತ ಹೌದಲ್ಲೋ ?"

ನನ್ನ ಕಣ್ ಮುಚ್ಚಿದ ಕೈಯ ಬಂಧ ಸಡಿಲುಬಿತ್ತು. ಆದರೆ ಆ ನೀಳ ಕೈ ನನ್ನ ಬೆನ್ನ ಮೇಲೆ ಬಲವಾಗಿ ಗುದ್ದಿ ಕುತ್ತಿಗೆಯ ಚಂಡನ್ನು ಅಲಗದ್ ಹಿಡಿದು ಅಲ್ಲಾಡಿಸುತ್ತ—

"ದಾದಲ್ಯಾ ಚೋದೀಕೇ, ಗೆದ್ದಿ ಮಗನs. ಒಂದೇ ಹೊಡತಕ್ಕ ಎರಡು ಹಣ್ಣ ಬಿಡಿವಿದಿ. ನಕ್ಕು ಘಾತಾ ಮಾಡಿತು ನಿನ್ನ ಚಿಡೀಯಾ. ನೀ ಗಜಮ್ ನಿಂತಿಮ್ರೂ ನಿನಗ ಗೊತ್ತ ಆಗತಿದ್ದಿಲ್ಲಾ. ಯಾರು ನಿನ್ನ ಕಣ್ಣ ಮುಚ್ಚಿದವರೂ ಅನೂದು. ದಾದಲ್ಯಾ, ರಾತ್ರೀ – ಅಪರಾತ್ರೀ ವ್ಯಾಳ್ಯಾ – ಗೀಳ್ಯಾ ಏನ ಇಲ್ಲೇನು ನಿನಗs ? ಪುಣೇ – ಮುಂಬೈ ಅಂದರ ಅಡಿಗೀಮನಿ – ಪಡಸಾಲೀ ಅಧಾಂಗ ಆಗೇದ. ತಿಕೀಟರ್s ತಗೀತೀಯೋ ಇಲ್ಲೋ ? ಏನು ಪಾಸನs ತಗದೀಯೋ ? ಈಗ್ಯಾಕ ಅಕಸ್ಮಾತ್ ಆಗಮನ ಆತು ತಮ್ಮದು ? ಮನೀಗೆ ಹೋಗದೇ ಇಲ್ಲೇ ಯಾಕ ಘುಟಮಳಸಲಿಕ್ಕೆ ಹತ್ತೀದಿ ? ರಾತ್ರೀ ಎಲ್ಲಾ ಸ್ಟೇಶನ್ನದಾಗs ಮುಕ್ಕಾಂ ಮಾಡೂ ಬೇತ ಇತ್ತೇನು ?"

ಸುರೇಶನ ಮಾತು ಇನ್ನೂ ಮುಗಿದಿರಲಿಲ್ಲ. ಬಾದರ್ ಮೋಟರ ಗಾಡಿಯನ್ನು ನಾವು ನಿಂತಲ್ಲಿ ತಂದು ನಿಲ್ಲಿಸಿ —

"ಚಲೋ ಸುರೇಶಭಾಯ್. ಡೇರ ಹುಯೇ ನೈ. ಬಹುತ ಥಂಡೀ ಹೈ. ಏಕ ಸಿಂಗಲ್ ಚಾ ಪೀಕು ಆಯೇ. ಅರೇ ಏ ಕ್ಯಾ ? ಏ ಭಡಜೀ ಕಬ್ ಆಯೇ ? ಕಭೀ ದೇಖೋ ಕಿದರ್ ದೇಖೋ ಹಜರೀಚ. ಕ್ಯಾ ಭಡಜೀ, ಕಿದರಸೇ ಆಯೇ ?

ಹಾಂ. ಮುಂಬೈ ಮೇಲಭೀ ಆಯಾ ಹೈ. ಬರಾಬರ್. ಆಪ್ ಬಂಬೈಸೀಜ ಆಯೇ. ಹಮಾರಾ ಛೋಟಾ ಡಾಕ್ಟರಸಾಬ ಕೈಸಾ ಹೈ? ಸಬ್‌ಕುಛ್ ಆರಾಮ ಹಾಯೇ ಹೈ? ಚಲೋ ಚಲೋ. ಬರಸಾದ ಜೋರಸಿ ಆಯೆ. ಗಾಡೀಮೆ ಬೈಠೋ." ನಮ್ಮನ್ನ ಗಾಡಿಯಲ್ಲಿ ತುರುಕಿ ಗಾಡಿಯನ್ನು ಇಸ್ಟಾರ್ಟ್ ಮಾಡಿದ.

"ಸುರ್ಯಾ, ಇದೇನೋ? ನಿನ್ನ ಮೈನಾ ಸಹಿತ ಇಂಥಾ ಅಪರಾತ್ರ್ಯಾಗ ಸ್ಟೇಶನ್‌ಮ್ಯಾಲ ಒಮ್ಮೆಲೆ ಅವತಾರಮಾಡಿದಿ? ನಮಸ್ಕಾರ್ರೀ...ಶಕುಂತಲಾಬಾಯೀ ಯುವರ್‍s, ಪಿಸಿಪಿಸಿ ಅಷ್ಟs ನಕ್ಕಿದ್ರಿ. ಇನ್ನ ನಗರ್‍ರ್ಯಲಾ ಬಾಯ್ತುಂಬೇ. ದಾದಲ್ಯಾನ ಕಣ್ಣ ಪಾರಣೇ ಮಾಡರಿ. ಮುಂಬೈಗೆ ಬರತೀನಿ ಅಂತs ಪತ್ರಾ ಬರೆಯೂದು. ಪುಣೇದಿಂದs ಮುಂಬೈಗೆ ರಾಮ್‌ರಾಮ ಹೇಳೂದು. ಲಕ್ಷ್ಮಣ-ಗೆರೀನ ಕೊರವದ ಇಲ್ಲೆ. ಮುಂದ ಹೆಜ್ಜಿ ಹ್ಯಾಂಗ ಇಟ್ಟೀರಿ? ಸುರ್ಯಾ. ಪುಣೇ ಸ್ಟೇಶನ್ನಮ್ಯಾಲs ನಿನ್ನ ಗಾಠಾಸಾಂವಾ – ಇಲ್ಲೇ ಇಳಿಸಿಗೊಂಬಾವಾ ಅನ್ನೂ ಕನಸs ಬಿದ್ದಿತ್ತು ನನಗ..."

"ನಾವು ಎರಡ ದಿನಾ ಅರಾಮ ಇದ್ದೇವಂದರ ಅದೂ ನಿನಗ ಸಹನ ಆಗಲಿಲ್ಲ ಕಾಣಸ್ತದ. ಕನಸಿನ್ಯಾಗ ಸುದ್ದೇ ನಮ್ಮದೇ ಧ್ಯಾಸಾ. ಅಂತೇ ರಾತ್ರೀ ಗಾಡಿಗೆ ಧಾವಿಸಿ ಬಂದೀದಿ. ಸುರೇಶ, ನಾ ಗಾಡೀ ಇಳಿಯೂದಕಿಂತಾ ಮುಂಚೆ 'ಪ್ಲ್ಯಾಟ್‌ಫಾರ್ಮಿ'ನ ಮ್ಯಾಲs ದಾದಲ್ಯಾನ್ನ ನೋಡಿದ್ದರ ಥೇಟ ಮುಂಬೈಗೇ ಹೋಗಿಬಿಡತಿದ್ದೆ." ನನ್ನ ಮಾತನ್ನು ಅರ್ಧದಲ್ಲಿ ತುಂಡರಿಸಿ ಶಕೂ ಹೇಳಿದಳು.

"ಸುರ್ಯಾನು ನಿನ್ನ ಬೆನ್ನ ಹತ್ತತಿದ್ದಾ. ನಾ ಮಾತ್ರ ಇಲ್ಲೆ ಒಬ್ಬನೇ ಕಾಕಾನ ಕೈಯಾಗ ಸಿಕ್ಕು ಜಬ್ಬ ಆಗೂದೇನು ತಪ್ಪತಿದ್ದಿಲ್ಲಾ. ನೀವು ಮುಂಬೈಗೆ ಹೋದದ್ದು ತಿಳದಿದ್ದರ, ನಾಳೆ ಮುಂಜಾನೀ 'ಲೋಕಲ್'ಗೆ ನಾನೂ ಹೊಂಟೇಬಿಡತಿದ್ದೆ. ನಾ ಬರದಿದ್ದರ ಮುಂಬೈಯಾಗ ನಿಮ್ಮ ಸರ್ಕಸ್‌s ನಡೀತಿದ್ದಿಲ್ಲಾ. ನಿಮ್ಮ ಕಂಪನಿ ದಿವಾಳೀ ಎದ್ದು ತಿರಿಗಿ ಪುಣೇಕ್ಕ ಬರಬೇಕಾಗತಿತ್ತು. ಅಂತೂ ಸುರ್ಯಾ, 'ಯದ್ ಭಾವಸಿ ತದ್ ಭವತಿ' ಅಂತಾರ ನೋಡು, ಅದೇನು ಸುಳ್ಳ ಅಲ್ಲಾ. ನಿಮ್ಮ ಇಬ್ಬರದೂ ಸ್ಟೇಶನ್‌ಮ್ಯಾಲs ಭೆಟ್ಟಿ ಆಗೂದಂದರ ಸೋಳಾ ಆಣೇ ನನ್ನ ಮನೀಷಾ ಪೂರ್ತಿ ಆತು. ಗಾಡೀಯೊಳಗ ಒಂದs ವಿಚಾರ ನಡದಿತ್ತು: ರಾವಜೀ ಕಾಕಾ ಕದಾಚಿತ್ ಮನಿತುಂಬಿಸಿಗೊಂಡರೂ ತುಂಬಿಸಿಗೊಂಡಾರು ಅನ್ನೂದು. ಅಗದೀ ಖರೇ ಬಂತು ವಿಚಾರಾ. ಸಾಹೇಬರು ಬರಲಿಲ್ಲ್ಯಾಕ?"

"ಅವರಿಗೆ ಒಂದೆರಡ ದಿನಾ ಅಗದೀ ಜರೂರಿ ಕೆಲಸ ಅದs ಸೆಕ್ರೆಟರಿಯೇಟದಾಗ.

ಅದನ್ನ ಮುಗಿಸಿಕೊಂಡವರs ಪುಣೇಕ್ಕ ಬರತೀನ್ಯಂತ ಹೇಳ್ಯಾರ. ಎಸ್.ಈ. ಪ್ರೋಸ್ಟಿಗೆ 'ಕಾಂಪಿಟೀಶನ್' ನಡದsದ ದಾದಲ್ಯಾ. 'ಚೀಫ್ ಇಂಜಿನಿಯರ್'ರು ಅವರ್ನ ಮುದ್ದಾಂ ಕರಸಿಗೊಂಡಾರ."

ಶಕೂ.

"ಸುರ್ಯಾ, ದಾದಾನ ಮುಕ್ಕಾಮೂ ಪುಣೇದಾಗs ಅದs. ಏನಂತಾರ?"

ನಾನು.

"ದಾದಾ ಇಂದ ಮಧ್ಯಾಹ್ನ ಗಾಡಿಗೇ ಮುಂಬೈಗೆ ಹೋದನಂತ. ಸಂಜೀ ಮುಂದ ಬಸವಂತಿ ಹೇಳಿದಳು. ಅದಕೇ ಗಾಡೀ ಸಿಕ್ಕಿತು."

ಸುರೇಶ.

"ಹಾಂಗಿದ್ದರ ಸುರ್ಯಾ, ನಾ ಬಸವಂತಿಯಲ್ಲೇ ಹೋಗತೀನಿ. ಅಗದೀ ಜರೂರಿ ಕೆಲಸ ಅದs. ಕಾಕಾ ಕೇಳಿದರ ಹೇಳು: ಬಸವಂತಿ ಅಗದೀ ಆಗ್ರಹ ಮಾಡಿ ದಾದಲ್ಯಾನ್ನ ಅಲ್ಲೇ ನಿಂದರಿಸಿಗೊಂಡಳಂತ. ನಾಳೆ ಮುಂಜಾನೇಳೂತ್ಲೇ ಬರತೀನಿ."

ನಾನು.

"ಮತ್ತೇನರs ಭಾನಗಡಿ ಎಬ್ಬಿಸೀ ಏನು ದಾದಲ್ಯಾ? ಜರೂರಿ ಕೆಲಸದ ವ್ಯಾಲ ಬಂದೀ ಅನ್ನೂದಂತೂ ನಿನ್ನ ಅಪರಾತ್ರೀ ಆಗಮನನs ಹೇಳಿತು. ವಿಶ್ಯಾ ಏನಂತಾನ? ನಾ ಬರೂದನ್ನ ತುಳಸಿಗೆ ಹೇಳಿ ಇಟ್ಟೀ ಏನು? ಬರೂದರ 'ನೆಸೆಸಿಟಿ' ಉಳೀಲಿಲ್ಲಾ. ನಾಳೆ ಮಾತಾಡೂನಂತ ದಾದಲ್ಯಾ, ಅದರ ದಶಿಂದ, ಮುಂಜಾನೆ ಅಗದೀ ಲಗೂನೇ ಬಾ."

ಸುರೇಶ.

ಮೋಟಾರು ನಿಂತ ಸಪ್ಪಳ ಕೇಳಿ, ಶ್ಯಾಮರಾಯನ ಮನೆಯ ಮುಂದಿನ ದೀಪ ಹತ್ತಿತು. ಬಸವಂತಿ ದಾರಿ ಕಾಯುತ್ತಿರಬೇಕು. ಬಾಗಿಲು ತೆರೆದು ಅವಳು ಹೊರಬರುವದಕ್ಕೂ, ನಾನು —

"ಬಸವಂತೀ, ನಿನ್ನ ಸಣ್ ಸೊಸೀ ಬಂದಾಳ. ಕದ್ಲಾರತೀನರೇ ತಗೊಂಡ ಬಾ. ಅಪರಾತ್ರ್ಯಾಗ ಬುತ್ತೀ ಎಲ್ಲೀದ ತರತೀ? ಬಿಸ್ಕೀಟ ಇದ್ದರ ನಿವಾಳಿಸಿ ಒಗೀ." ಮೋಟಾರಿನಿಂದ ಒಂದೇ ಜಿಗಿತ ಜಿಗಿದು ಒಳಗೆ ಧಾವಿಸುತ್ತ ಹೇಳಿದೆ.

"ದಾದಲ್ಯಾ... ದಾದಲ್ಯಾ... ನೀ... ನೀನೂ ಬಂದ್ಯಾ? ಆರತೀ ನಿನಗೂ ಮಾಡತೀನಿ ನಿಂದರು. ಒಳಗ ಬಂದಗಿಂದೀ?"

ಬಸವಂತಿ ನಗನಗುತ್ತ, ಒಳಗೆ ಬರುತ್ತಿದ್ದ ಸುರೇಶ-ಶಕೂರ ಮೇಲೆ ಸಿಜವಾಗಿಯೇ ಬುತ್ತಿ ನಿವಾಳಿಸಿ ಒಗೆಯುತ್ತ ಹೇಳಿದಳು:

"ಬಾ ಶಕೂ, ಬಾ ಸುರೇಶ. ಚಾ ಕುಡದs ಹೋಗೀರ್ಯಂತs. ಒಳಗ ನಡೀರಿ. ಅಡಿಗೀಮನೀಗೆ. ಅಲ್ಲೇ ಕೂಡೂಣಂತ. ನಿಗಿನಿಗಿ ಕೆಂಡ ಅದs ಒಲ್ಯಾಗ. ಜರಾ ಕಾಸಿಗೊಂಡ್ಹಾಂಗೂ ಆಗತದ. ಸಿಳ್ಳ ಅಂತ ಗಾಳೀನೂ ಬಿಟ್ಟsದ. ಪರ್ಯಾಗಿನಿಂದ ಮಳೀ ಬಿಟ್ಟಿದ್ದರ ಆಣಿ."

"ಬಸವಂತೀ, ನಿನ್ನ ಐತಿ, ಕ್ಯಾಸಿ, ಏಕದಮ್ ಕಮೀ ಆಗ್ಯಾವಲಾ. ಸುರ್‍ಯಾಸ ಶಿಕೋಣೇ ಠೀಕ ನಡಧಾಂಗ ಕಾಣಸ್ತದ?"
ನಾನು.

"ನಿನಗ ಚಾಲವರದು ಹೇಳಿತ್ತಲ್ಲಾ, ನನ್ನ ತಿದ್ದಿ ತೀಡು ಅಂತs. ಗಮಜಲೆ ಮುಂಬೈಕ ಹೋದೀ. ಹೋದದ್ದು ನೆಟ್ಟಗಸs ಆತು. ನನ್ನ ಇಲ್ಲದಿದ್ದರ ಜೀವಾ ಅರೀದನs ಬಿಡತಿದ್ದಿಲ್ಲಾ. ಬಸವಂತಿ ಅಂದರ ಭಾರೀ ಶೋಕಾ – ಫಾಳೀನs ತುಂಬ್ಯಾಂಗ ಇಲ್ಲಂತ ಖಾದರನ ಮುಂದ ಸುದ್ದೇ ಹೇಳತಿದ್ದಿ. ಸುರೇಶ, ದಾದಲ್ಯಾಗ ಸಾವನs ಇಲ್ಲ ನೋಡು. ನೀ ಠೇಶನಕ್ಕ ಹೊಂಟಾಗs ನಾವು ಅವನ್ನ ನೆನಸಿದ್ದೇವು. ದೆವ್ವಿನ್ಹಾಂಗ ಬಂದು ಹಜರನs ಆದಾ!"

"ಬಸವಂತೀ, ನಾನು ಬರೇ ಹಜರೀ ಹಾಕಲಿಕ್ಕೇ ಬಂದಿಲ್ಲಾ. ಪುಣೇದಾಗ ಕಾಯಂತರೀಕ ಮುಕ್ಕಾಂ ಠೋಕಾಸಲಿಕ್ಕೇ ಬಂದೀನಿ. 'ಇನ್‌ಕಮ್ ಟ್ಯಾಕ್ಸ' ಆಫೀಸದಾಗ ವರ್ಣೀ ಹತ್ತೇದ. ಇನ್ನೂ ನಿನಗ ಠಾಂವಿಕ ಆಧಾಂಗ ಇಲ್ಲಾ."
ನಾನು.

"ಬುರಡೀ ಹೊಡೀಬ್ಯಾಡ ದಾದಲ್ಯಾ. ನಿನಗ ಜೋಶಿ ದಾದಲ್ಯಾ ಅನ್ನೂದರ ಬದಲೀ, ಬುರಡೀ ದಾದಲ್ಯಾ ಅಂತ ಹೆಸರ ಇದ್ದರ ಠೀಕ ಆಗತಿತ್ತು. ಪುಣೇದಾಗ ಕಾಯಂ ಮುಕ್ಕಾಂ ಮಾಡಲಿಕ್ಕೆ ಬರಾಂವಾ, ಹಾಸಿಗಿ - ಹೊದಿಕಿ ಇಲ್ಲದೇ ಬರತಿದ್ದೇನು? ಎರಡ ದಿನಾ ಎಲ್ಲಪ್ಪನ ಜಾತ್ರಿಗೆ ಹೋಗೂವವರು ಸುದ್ದೇ ಒಂದ ಬಣ್ಣದ ಟ್ರಂಕ ಒಯ್ಯತಿರತಾರ. ಒಂದ ಕೈಚೀಲದಾಗ ನಾಕ ಅರಿವೀ ತುರಿಕಿಕೊಂಡು ಬಂದಾನ; ಪ್ಯಾಲ ಗಮಜ ಹೇಳತಾನ: 'ಇನ್‌ಕಮ್ ಟ್ಯಾಕ್ಸ'ದಾಗ ವರ್ಣೀ ಹತ್ತೇದಂತ. ನೀ ನೌಕರೀ ಮಾಡತಿಯಾ ದಾದಲ್ಯಾ? ಶಕ್ಯನs ಇಲ್ಲಾ. ವಿಶ್ಯಾ ಡಾಕ್ಟರ ಆದಾಗ ನೀ ಕಂಪಾಂವುಂಡರ್ ಆಗೂದs ಖರೇ. ನಿನಗ ನೌಕರಿ ಜವಾಸಿದರ ಅಲ್ಲೇ

ಜಮಾಸಬೇಕು. ಗಣಪತಿ ಪೂಜಿ – soda-bicarb mixtureದ ತೀರ್ಥಾ ಅಷ್ಟs ಮಸ್ತ ಜಮಾಸ್ತದ ನೋಡು ನಿನಗ."
ಸುರೇಶ.

"ಸುರ್‍ಯಾ, ಇಷ್ಟ ಜಮಾಸಿದರ, ದಿನಾ ನೂರ ಪ್ರದಕ್ಷಿಣೆ ಹಾಕತೀನಿ ಗಣಪತಿ ಗುಡೀಗೆ. 'ಧನ್ಯಹೋ ಪ್ರದಕ್ಷಿಣಾ' ಅಂತs ಹಾಡಿಕೋತ. ಲಗೂ ಜಾಗಾ ಬಿಡೂ ಇನ್ನ ಸುರ್‍ಯಾ. ತಡಾ ಯಾಕ ಆತು ಅಂತs ಕಾಕಾ ಕೇಳಿದರ, ಅಪರಾತ್ರ್ಯಾಗ ತಾತ್ಯಾ ಸಾಹೇಬರು ಭೆಟ್ಟಿ ಆದ ಬುರಡಿ ನಡಿಯೂ ಹಾಂಗಿಲ್ಲಾ. ಕಾಕಾ ಇನ್ನೂ ನಿನ್ನ ಪರಾತ ಬರೂ ಹಾದೀ ನೋಡತಿರಬೇಕು. ಬಸವಂತಿ ಮಸೀತುಂಬಿಸಿಗೊಂಡ್ಲಂತ ಪೇಳು. ಇದೂ ನಿಂದs ಮನಿ. ಬಿನ್-ಬೊಬಾಟದಲೇ ಎಲ್ಲಾ ಬಗೀಹರದದ. ಸೋನಕ್ಕಾ ನನಗ ಅಂತಿದ್ದರು: ದಾದಲ್ಯಾ, ನಿನ್ನ ಕಂತ್ರಾಟನs ತಿಳಿಯೂ ಹಾಂಗಿಲ್ಲ ಅಂತ. ಯಜಮಾನರು 'ಏ ಕ್ಲಾಸ್ ಕಾಂಟ್ರಾಕ್ಟರ್ – ಪಿ.ಡಬ್ಲ್ಯು.ಡಿ.' ಯೊಳಗ. 'ಏ' ಕಂತ್ರಾಟದಾರರು ಅನ್ಯ ವಿಷಯದಾಗ. ಇಬ್ಬರೂ ಮಕ್ಕಳು – 'ಏ' ಕ್ಲಾಸಕಿಂತಾ ಪ್ಯಾಲಿಂದ ಏನರs ಕ್ಲಾಸ ಇದ್ದರ – ಆ ಕ್ಲಾಸಿನ ಕಂತ್ರಾಟದಾರರು. ಇದೂ ಮಾತ್ರ ಸೋನಕ್ಕ ಅವರಿಗೆ ತಿಳಧಾಂಗ ಕಾಣಸೂದಿಲ್ಲಾ. ನಿಂದೂ ಶಕೂಂದೂ ಜಮಾಸಿದ್ದರ ಕಂತ್ರಾಟಾ ನನ್ನ ಕೊಳ್ಳಿಗೆ ಕಟ್ಟಿದರು. ಸುರ್‍ಯಾ ಅಂದರ ಬಾಯಾಗ ಬಟ್ಟ ಇಟ್ಟರೂ ಕಡೀಲಾರದೆ ಚೀಪೂ ಪ್ರಾಣೀ ಅಂತನs ಅವರಿಗೆ ಖಾತ್ರೀ. ನಾ ಬಂದದ್ದು ಅವರಿಗೆ ತಿಳೀಲಿ – ದಾದಲ್ಯಾ ಏನೋ ಕಂತ್ರಾಟ ತಗೊಂಡs ಬಂದಿರಬೇಕು ಅಂತs. ಆಂತಾರಿಲ್ಲೋ ನೋಡು. ಶಕೂ ಇಲ್ಲೆ ಇಳಿಯೂದಕ್ಕ, ನಾ ಬರೂದಕ್ಕ ಗಂಟನೂ ಹಾಂಗೇ ಬಿದ್ದsದ."

ನಮ್ಮ ಜಪ ಮುಗಿಯಿತು. ಖಾದರನಿಗೂ ಕೊಟ್ಟದ್ದಾಯಿತು. ಸುರೇಶ-ಶಕೂ ಅವರನ್ನು ಬಾಗಿಲ ವರೆಗೆ ಮುಟ್ಟಿಸಿ ಬಂದು, ನಾನು-ಬಸವಂತಿ ನಡುಮನೆಯಲ್ಲಿ ಹಾಕಿದ ಎದುರು-ಬದುರು ಕೋಚಿನ ಮೇಲೆ ಮಂಡಿಸಿದೆವು. ಬಸವಂತಿ ಮಾತನಾಡದೆ ಬರೇ ಮುಗುಳುನಗೆಯನ್ನು ಮಿಂಚಿಸುತ್ತಿದ್ದಳು. ನಾನೂ ಪ್ರತಿಸಾತ್ ಮಾಡುತ್ತಿದ್ದೆ.

"ಇವರು ಇಲ್ಲದ ಹೊತ್ತಿನ್ಯಾಗ ಬಂದು ಹಜರ ಆಗೂ ಡಾವು ನೀ ಶಿಸ್ತ ಸಾಧಿಸೀದಿ ದಾದಲ್ಯಾ."
ಬಸವಂತಿ ಮನಸೋಕ್ತವಾಗಿ ನಕ್ಕು ಹೇಳಿದಳು.

"ಶ್ಯಾಮರಾಯ ಇಲ್ಲದಾಗ ನನ್ನ ನೆನಿಸಿಗೊಂಬೂ ಹಾವು ನಿನಗೂ ಏಸ್ತ ಸಾಧಿಸೇದ ಬಸವಂತೀ. ಆರು ತಾಸ ರಾತ್ರ್ಯಾಗ ನೆನಸು, ಬಂದು ಹಜರ ಆಗತೀನೋ ಇಲ್ಲೋ ನೋಡು. ದ್ರೌಪದೀ ಕಣ್ಣ ಮುಚ್ಚಿ ಒಮ್ಮೇ ಮನಸಿನ್ಯಾಗ "ಕೃಷ್ಣಾs" ಅಂದಳು. ದ್ವಾರಕಾಡಿಂದ ಸ್ವಾರೀ ಮಿಂಚಿನ ಹೆಗಲೇರಿ ಬಂತು. ದಾಧಲ್ಯಾ ಕೃಷ್ಣ ಆಗಲಾರ ಬಸವಂತೀ. ಆದರ ನನ್ನ ಬಸವಂತಿ ದಾದಲ್ಯಾ ಅನಾಗs, ಖಾತ್ರೀಲೇನs "ಕೃಷ್ಣಾs" ಅಂದ ಆರ್ತಭಾವನಾ ತಂದಿರತಾಳ. ನೀನು ನನ್ನ ನೆನಸಿದ್ದಿಲ್ಲೋ ಖರೇ ಹೇಳು ಬಸವಂತೀ?"

"ಅಗದೀ ಖರೇ ದಾದಲ್ಯಾ. ನಿನ್ನ ಜರೂರಿ ಭಾಳ ಇತ್ತ ನನಗ. ಸುರೇಶನ್ನ ಕರಿಸಿ ಹೇಳಬೇಕಂದರ, ಇವರು ನಾಕ ದಿನಾ ಮನೀ ಬಿಟ್ಟು ಅಗಳ್ಯಾಡಲಿಲ್ಲಾ. ಊರಿಂದನೂ ಬರೂ ವಾಸ ಇಲ್ಲದs ಬಂದು ಧಡಕಾಸಿದರು. ಏನೋ ಬರಿಯೂದು – ಕಾಗದಾ ಕೂಡಸೂದು ಅದs ಕಂತ್ರಾಟದಾಗನs ಇದ್ದರು. ಇವರ ಜೋಡೀ ನಮ್ಮ ಬಸಗೋಂಡಾ – ಬಾಗವಾನ ನಬೀಸಾಬನೂ ಇದ್ದರು. ಏನ ನಡದೈತಿ ಕಂತ್ರಾಟಂತ ಇವರಿಗೆ ಕೇಳಿದರ – ಹೆಂಗಸಿಗೆ ಏನ ಮಾಡೂದು ಅದರ ಕಾರಭಾರ ತಗೊಂಡು ಅಂದರು. ಜರಾ ಸಂಶ್ಯಾ ಬಂತು. ಖಾದರ್ ಅಲ್ಲೇ ಓಡ್ಯಾಡ ತಿದ್ದಾ. ಅಂವಗೇನರ ಠಾಂವಿಕಿರಬೇಕಂತ ಅವನ್ನs ಖಟ್ಟಿಗೆ ಹಚ್ಚಿ ಕೇಳಿದೆ. ಶಕೂನ ಅಪ್ಪಾ ಅವರ ಮ್ಯಾಲs ಯಾರೋ ಅರ್ಜೀ ಮಾಡಿದ್ದರು. ಅದರ ತಪಾಸಣೀ ನಡದೈತಿ; ಅದಕಂತನs ಈ ಕಂತ್ರಾಟದಾರ ಮುಂದಿನ್ನ ಸಾಕ್ಷೀಗಿ ಕರಸ್ಯಾರು; ಇವರೆಲ್ಲಾ ನಾಳೆ ಮುಂಬೈಕ ಹೋಗವರು ಅಂತ ಹೇಳಿದಾ. ನಿನಗೆಲ್ಲಾ ಇದರ ಕತೀ ಗೊತ್ತ ಇತ್ತು. ಇವರೇ ಅರ್ಜೀ ಮಾಡಿದವರು ಅನೂದು ಠಾಂವಿಕಿತ್ತು. ನೀ ಏನರs ಗಡಿಬಿಡಿ ಮಾಡದs ಬಿಡೂಅಂವಾ ಅಲ್ಲಂತs ನಿನ್ನ ನೆನಿಸಿಗೊಂಡಿದ್ದೆ. ಇವರು ಮುಂಬೈಕ ಹೋಗೂತ್ಲೇ ಸುರೇಶನ್ನ ಕರಿಸಿ ಅಂವಗ ಇದನ್ನ ಹೇಳಿದೆ. ಅಂವಾ ಇಲ್ಲಿ ಕುಂತ್ಯsನ ನಿನಗ ಪತ್ರಾ ಬರದು ಹಾಕಿದಾ. ನಿನ್ನ ಕರಿಸಿಗೊಂಡು ಜರೂರ ಭೆಟ್ಟಿ ಆಗರ್ಯಂತ ದೊಡ್ಡ ಸಾಬರಿಗೂ ಹೇಳತೀನಿ ಅಂದಿದ್ದಾ. ರೇಶನ್ನ ಮ್ಯಾಲs ಅವರಿಗೆ ಹೇಳಿರಬೇಕು. ಇಂದs ನಿನಗ ಕಾಗದ ಮುಟ್ಟಬೇಕಾಗಿತ್ತು. ಮುಟ್ಟಲಿಲ್ಲೇನ ದಾದಲ್ಯಾ?"

"ಬಸವಂತೀ, ನಾ ಮುಂಜಾನಿಂದೂ ಮನೀ ಕಡೆಗೆ ಹಾದಿರಲೇ ಇಲ್ಲಾ. ವಿಶ್ವಾಸ-ತುಳಸೀ ಕಡೆ ಹೋಗಿದ್ದೆ. ಸಂಜೀ ಮುಂದ ವಿಳಕ್ಕ ಹೋಗಿ, ನನ್ನೂ ನಾಕ

ಆರಿವೀ ಅಷ್ಟು ತಗೊಂಡು ಬಂದೆ. ಪತ್ರ ಬಂದಿದ್ದರ ತಯ್ಯಬ್ಜೀ ಅವರ ಮನೀ ಯವರು ಕೊಡದs ಇರತಿದ್ದಿಲ್ಲಾ. ನಿನ್ನಿನಿಂದ ಗಾಡೀ ಬ್ಯಾರೇ ಲೇಟ ಆಗಲಿಕ್ಕೆ ಹತ್ಯಾವ. ಇಂದ ಏನರs ಆ ಪತ್ರಾ ಮುಂಬೈ ಮುಟ್ಟತದ. ಬಸವಂತೀ, ನಾನು ಮುಂಜಾನೀ ಲೋಕಲ್ಲಿಗೆ ಮುಂಬೈಗೆ ಹೊಂಡತೀನಿ. ಶ್ಯಾಮರಾಯನs ಅರ್ಜಿ ಮಾಡಿಸಿರಬೇಕು. ಅಂವಗ – ಸಾಹೇಬರಿಗೆ ನೆಟ್ಟಗಿಲ್ಲಾ ಅನೂದಕ್ಕ ನನ್ನ ಕಡೇ ಲೇಖೀ ಸಾಕ್ಷೀ ಅದs. ಅದನ್ನ ಯಾರ ಮುಂದ ಹಿಡದರೂ ಸಾಕು – ಶ್ಯಾಮ ರಾಯ ಖಲಾಸನs ಆಗತಾನ. ನಾನು ನಾಳೆ ಗಾಡೀ ಇಳದವನs ಸಾಹೇಬರ ಕಡೆಗೆ ಓಡತೀನಿ. ಹಾಲ್‌ಚಾಲೀ ನೋಡಕೊಂಡು ಈ ಪತ್ರದ ವಿಷಯಾ ಅವರ ಮುಂದ ಹೇಳತೀನಿ. ಸಾಹೇಬರು ಎಲ್ಲೆ ಇಳೀತಾರ ಅನ್ನೂದರ ದಶಿಂದ ಸುರೇಶ ಏನರs ಹೇಳ್ಯಾನೇನು?"

"ಸಾಹೇಬರು ಇಂಥಾ ಠಿಕಾಣೇದಾಗ ಇಳೀತಾರ, ನೀ ಅವರ್ನ ಅಲ್ಲೆ ಭೆಟ್ಟಿ ಆಗು ಹೋಗಿ, ಅಂತ ನಿನಗ ಬರದೀನ್ಯಂತ ಹೇಳತಿದ್ದಾ. ಇವರು – ಬಸಗೋಂಡಾ ಬಂದಿರೂದ್ನೂ ಬರದಿದ್ದಾ. ನೀ ಮುಂಜಾನೀ ಗಾಡಿಗೆ ಹೋಗೂದು ಠೀಕ ಕಾಣತದ ದಾದಲ್ಯಾ. ದಾದಲ್ಯಾ, ನೀ ನನ್ನ ಕಡೀ ಭೆಟ್ಟಿಗೆ ಬಂದಿ ಕಾಣತದ. ಇವರ ಪತ್ರದ ಭಾನಗಡೀ ಹೊರಗ ಹಾಕಿದ್ಯಂದರ, ಇವರ್‍ಯಾಂಗ ಇನ್ನ, ನಿನ್ನ ಇಲ್ಲೆ ಬರ ಗೊಡತಾರ? ನನ್ನರ ಇಲ್ಲೆ ಇಡತಾರೋ ಇಲ್ಲೋ ಸಂಶ್ಯಾನs ಅದs. ಬಸವಂತಿ-ದಾದಲ್ಯಾ ಕೂಡಿ ದಗಾ ಕೊಡಲಿಕ್ಕೆ ಹತ್ಯಾರ ಅನೂದು ಅವರಿಗೆ ಠಾಂವಿಕ್ಯಾಗತದ. ನಾನು ನೀನು ಘೂರ ಆಗತೇವ ದಾದಲ್ಯಾ. ಸುರೇಶನ ಕಡಿಂದ ಪತ್ರಾ ಬರಸಿದಾಗಿನ ಸುಟೂ ಇದೇ ಚುಚ್ಚಾಕ ಹತ್ತೈತಿ, ಭಾಳ ಸಂಕಟಾಬಿಟ್ಟೆ ದಾದಲ್ಯಾ. ಆಡಾದ್ರs ಏರವಾದೇವಲಾ ಅಂತ ಕಳ್ಳಿಗೆ ಬರೀ ಕೊಟ್ಟಹಾಂಗ ಆತು. ನೀ ಬಂದಿರದಿದ್ದರ ನಾನs ಮುಂಜಾನೀ ಗಾಡಿಗೆ ಮುಂಬೈಕ ಬಂದಬಿಡತಿದ್ದೆ. ಸುರೇಶನ ಕಡಿಂದ ತಾರ ಕೊಡಸ್ತಿದ್ದಿ – ಠೇಶನ್ನಕ್ಕ ಬಾ ಅಂತs. ದಾದಲ್ಯಾ, ನನ್ನ-ನಿನ್ನ ಜೊಡೀ ಮುರದ ಬೀಳ್ವಾಂಗ ಕಾಣತ್ತೈತಿ, ಈ ಧಾವತ್ಯಾಗ! ಸಾಹೇಬರು ಬದಕತಾರ. ಇವರಿಗನರs ಏನ ಧಾಡಿ ಆಗಬೇಕಾಗೈತಿ! ಸಾಬರ ದಶಿಂದ ಏನರs ಬರದೀರಿ. ಇಂಥಾ ಭಾನಗಡೀ ಯಾಕ ಮಾಡಾಕ ಹತ್ತೀರಿ ಅಂತs, ನಾನs ತಡೀಲಾರದ ಕೇಳಿದೆ. ಗಮಜಲೇನs ಉತ್ತರಾ ಕೊಟ್ಟರು. ನಾ ಯಾರಸೂ ನಾಲಸ್ತೀ ಮಾಡಾಕ ಬರದಿಲ್ಲಾ. ಇದ್ದ ಖಾತಮೀ ಇದ್ದಾಂಗ ಬರದೀನಿ. ನನ್ನ ಮಗ್ಗs ಅವರ ಮಗಳ್ನs ಕೊಡಾಕ ತಯಾ

ರಾಗ್ಯಾರ. ಅಂಥಾವರ ದಶಿಂದ ಬರೀಬೇಕಾದರ ನನಗೆಷ್ಟು ತ್ರಾಸ ಆಗಿರಬೇಕ ನೋಡರೀ ಅಂತs ಹೇಳತೀನಿ ಅಂತಿದ್ರು. ಇವರು ಏನ ಹೇಳಾಕೂ ಹೇಸವರಲ್ಲಾ. ಪ್ಯಾಮ್ಯಾಲ ಒಮ್ಮೆಲೆ ಪ್ರಸಂಗ ಗುದರಾಸತೈತಿ ಅಂದರ ತಮ್ಮದು-ಸೋನಕ್ಕಪರದು ಸಂಸಾರ ಮುರದದ್ದಕ್ಕ ಈ ಸಾಬರs ಕಾರಣಂತ ಹೇಳಾಕೂ ಹಿಂದ-ಮುಂದ ನೋಡವರಲ್ಲಾ. ಸುರೇಶಾ. ಶಕೂನ್ನ ಬಿಟ್ಟು ಬ್ಯಾರೇದವರನ್ನ ಮದಿವಿ ಆಗೂದಿಲ್ಲ ಅನೂದು ಇವರಿಗೆ ತಿಳದೈತಿ. ಪುಣೇದಾಗ ನಿನ್ನ ಇಟ್ಟು ಫ್ರಕ್ಕಟ ಮೆಯ್ಸಿದೆ. ಹಾಕಿದ ಅನ್ನಕ್ಕ ದಗಾ ಕೊಟ್ಟ ಅಂತs ಮೊನ್ನೇನs ಅಂದಾರ. ನಾ ಸುರೇಶನ್ನ ತಿದ್ದಲಿಲ್ಲಾ ಅನೂದು ಅವರಿಗೆ ಸಂಕಟ ಹತ್ತ್ಯೆತಿ. ಈ ತಿದ್ದೂದು ಆಟಾ ನನಗ ಜಮಾಸ ತಿದ್ದಿಲ್ಲ ದಾದಲ್ಯಾ. ಅವರ ಮೋತೀಮ್ಯಾಲನs ಹೇಳಿದ್ನಿ: ನಿಮಗ ತೊಗಲ ಮಾರಿ ಸೋತೀನಿ. ಅದರ ಪುಂಡೀ-ಪಲ್ಯಾ ಬೇಕಾರ ಮಾಡರಿ. ಉಳದ ಭಾನಗಡೀ ನನಗ ಹಚ್ಚಬ್ಯಾಡರಿ ಅಂತs. ಮುಂಬೈ ಲಿಗಾಡ ಇಷ್ಟ ಬಗೀಹರೀಲಿ. ನೋಡತೀನಿ ನಿನ್ನs ಅಂತ ಹೇಳಿ ಹೋಗ್ಯಾರ. ಅವರು ತಿರಿಗಿ ಬಂದ ಮ್ಯಾಲ ಚಕಮಕಿ ಹಾರತೈತಿ ದಾದಲ್ಯಾ. ಬರೇ, ಹಸಿಗುಂಡ ಹಾರಾಂಗ ಕಾಣೂದಿಲ್ಲಾ. ಈಗ ಯಾಳ್ಯಾ ಬಂತು ದಾದಲ್ಯಾ. ಜರಾ ಹುಷ್ಯಾರ್‍ಯಾಗ ಇರು. ಇಂದ ನಿನ್ನ ಸನಿಸಿದಾಗ ಬಂದ ಹಾಂಗ. ಮತ್ತ ನಾ ಕರದಾಗ ಬರೂ ತಯಾರ್‍ಯಾಗ ಇರೂ...ನೀ ಇದ್ದರ ನನಗ ಹತ್ತ ಗಂಡಸರ ಬಲಾ ಬರತೈತಿ. ಸಾವೂದಕೂ ಹುಕೀ ಬರತೈತಿ. ಬದಕೂದಕೂ ಹುಕೀ ಬರsತೆತಿ. ಲಗ್ಗನs ಸಾಯೂಣು ದಾದಲ್ಯಾ. ಜೀಂವಾ ಭಾಳ ಗುದಮುರಸಾಕ ಹತ್ತ್ಯೆತಿ. ನಾವು ಸತ್ತರ ಎರಡ ಭಾನಗಡೀ ಜೀಂವಾ ಬಲೀ ಕೊಟ್ಟ ಹಾಂಗ ಆಗತೈತಿ. ಉಳದವರ ದಾರಿ ಮೋಕಳೀಕ ಆಗತೈತಿ ..."

ಬಸವಂತಿಯ ಮಾತು ಇನ್ನೂ ಮುಗಿದಿರಲಿಲ್ಲ. ನಾನು ನಡುವೆಯೇ ಬಾಯಿ ಹಾಕಿದೆ:

"ಬಸವಂತೀ, ನಿಂದೂ ಶ್ಯಾಮರಾಯಂದೂ ಏನೋ ಭಾರೀ ತಿಕ್ಕ್ಯಾಟ ಆಧಾಂಗ ಕಾಣಸ್ತದ. ಇನಾ ಆ ಕುದೀಲೇನs ಮಾತಾಡ್ತಿ. ಕಿಚ್ಚು ಇನಾ ನಿಗಿ ನಿಗೀನs ಅದs. ಏನರs ಆತು?"

"ಎಲ್ಲಾ ಆತ, ದಾದಲ್ಯಾ. ತೊಗಲ ಮಾರಾಟದವರು ತಮ್ಮ ಜಂಬಾ ಭಾಳ ಹೇಳಕೋಬಾರದು. ನಂದು-ನಿಂದೂ ಹ್ಯಾಂಗೋ ಮನಸ್ಸು ಹಣಕೊಂಡಿದ್ದೂ. ಪ್ಯೆ ಬಚಾವ್ ಮಾಡಕೊಂಡಿದ್ದೇವು. ಅದಕ ಬ್ಯಾರೇದವರ ಸಾಕ್ಷೀ ಜರೂರೀನ

ಇದ್ದಿದ್ದಿಲ್ಲಾ. ಮುನ್ನೆ ಅವರು ಬಂದಾಗ ಸುರೇಶನ್ನ ತಿಪ್ಪೂದರ ಮಟಂದ ಕೇಳಿದರು. ಸಾಬರದು-ಸೋನಕ್ಕನವರದು ಸಂಬಂಧಾ ತಿಳಿಸಿ. ಶಕೂನ ದಶೀದ ಅವನ ಮನಸ್ಸ ಕೆಡಸು ಅಂತ ಹೇಳಿದರು. ಆದು ನನಗ ಜಮಾಸು ಛಂದೇ ಅಲ್ಲಂದೆ. ಹೇಳಾಗ ಜರಾ ನಾಲಿಗಿ ಸೈಲ ಬಿತ್ತು. ದಾದಲ್ಯಾ ಹೇಳಿದರ ಈ ಮಾತ ನಡಸಲಿಲ್ಲಾ : ಇನ್ನ ನಿಮ್ಮ ಮಾತೇನು ನಡಸ್ತೀನಿ ಅಂದಿನಿ. ನೆತ್ತರs ಕುದ್ಯಾಂಗ ಆತ ಅವರಿಗೆ. ದಾದಲ್ಯಾ ಬಂದಿದ್ನೇನ ಇಲ್ಲೆ? ಎಂದ ಬಂದಿದ್ದಾ ? ಅಂತ ಕೇಳಿದರು. ಬರಲಿಕ್ಕೆ ಪರವಾನಗಿ ನೀವs ಕೊಟ್ಟೀರಿ ನನ್ನೇನ ಕೇಳತೀರಿ ಅಂದಿನಿ. ಬರಲಿಕ್ಕ ಪರವಾನಗಿ ಕೊಟ್ಟರ ಮಲಗಲಿಕ್ಕೆ ಪರವಾನಗಿ ನೀನs ತಗದೀ ಕಾಣಸ್ತದ ಅಂದರು. ವಾಡೇದಾಗ ನೀನೂ-ದಾದಲ್ಯಾ ದಿನಾ ರಾತ್ರೀ ಜಮಾಸತಿದ್ದರ್ಯಂತಲಾ. ತಮ್ಮಾಜಿ ನಿಮ್ಮ ಪಾಳತೀ ಮ್ಯಾಲ ಇದ್ದಾ. ನನಗ ಎಲ್ಲಾ ಠಾಂವಿಕ್ಯಾಗೇದ. ನೀನು-ದಾದಲ್ಯಾ ಇದನ್ನ ಒಪಗೊಂಡರಿ ಠೀಕ ಆತು. ಇಲದಿದ್ದರ ನಿನ್ನ-ಅವನ್ನ ಕೂಡೇ ಒಂದೇ ಸಿದಗಿಮ್ಯಾಲ ಮಲಗಿಸಿ ಸುಡಸ್ತೀನಿ. ಊರಿಗೆ ಊರೇ ನೆರದ ನೋಡಲಿ. ನಾ ಒಬ್ಬನೇ ಸಾಕಾಗಲಿಲ್ಲೇನು? ಬೀದ್ಯಾಗಿನ ಹೆಣ್ಣನಾಯಿಗಿ. ಊರಾಗಿನ ಗಂಡ ನಾಯೆಲ್ಲಾ ಮಿಂಡರs ಅಂದರು. ನನಗೂ ಸಿಟ್ಟ್ ತಡೀಲಿಲ್ಲಾ. ಒಂದs ನಾಯಿನ್ನ ನಂಬಬೇಕಂತ ಬಂದಿನಿ. ಆ ನಾಯಿ ಮಾಡಿಕೊಂಡ ಹೇಣತಿಗಿ ದಗಾ ಕೊಟ್ಟು, ಇಂದ ನನ್ನ ಮೂಸಿ ನೋಡಿತು ನಾಳೆ ಬ್ಯಾರೇದವರನೂ ಮೂಸೂದು. ನಿಮ್ಮ ಎಲೀ ನೋಡಕೋರಿ. ತಿಪ್ಪಿ ಆಗ್ಯೆತಿ. ಮಂದೀ ಎಲೀಮ್ಯಾಲಿನ ಸೂಣಾ ಝಾಡಿಸ ಬ್ಯಾಡರಿ ಅಂದಿನಿ. ದಾದಲ್ಯಾ, ಸೋನಕ್ಕ ಅವರಿಗೆ ಅಂದ ಎಲ್ಲಾ ಮಾತೂ ಮತ್ತ ನನಗ ಬಂದೂ. ಇಂದ ದಾದಲ್ಯಾನ್ನ ನೋಡಿದಿ. ಅವನ ಜೋಡೀ ಮಲಗಿದಿ. ನಾಳೆ, ಸುರೇಶ-ವಿಶ್ಯಾನ್ನ ಕರೀಲಿಕ್ಕೆ ಹಿಂದ-ಮುಂದ ನೋಡಾಕ್ಯಲ್ಲಾ. ಇವರೂ ಸಾಕಾಗದಿದ್ದರ ಖಾದರನನ್ನೂ ಕರ್‍ಯಾಕಿ ಅಂದರು. ಪುಣೇದಾಗ ನಿಂತು ನನ್ನ ಅನ್ನಾ ತಿಂತೀದಿ...ಮುಂದೀ ಮುಗ್ಗಲದಾಗ ಭೆಚ್ಚಗ ಮಲಕೋತಿ. ವಾಡೇದಾಗಿನ ಕೋಲೀ ಕ್ವಾಣ್ಯಾಗ ಒಯ್ದು ಒಗೀತೀನಿ. ಯಾರ ಬರತಾರ ನೋಡತೀನಿ, ನಿನ್ನ ಜೋಡೀ ಮಜಾ ಮಾಡಲಿಕ್ಕೆ ಅಂದರು. ಏನ ಅನೂದ್ನ ಉಳಿಸ್ಯಾರ ದಾದಲ್ಯಾ? ಅವರು ಅಂದರಂತ ನಾ ಅಳಕಿಲ್ಲ ದಾದಲ್ಯಾ. ಮುಂಬೈಯಾಗ ನಿನಗ ಭೆಟ್ಟಿ ಆಗಿ, ಊರ ಕಡೇ ಬಾ; ಜರೂರಿ ಕೆಲಸ ಅದs. ಬಸವಂತೀನೂ ಬರತಾಳ ಅಂದರೂ ಅಂದಾರು. ಏನ ಠರಾಸ್ತೀ ದಾದಲ್ಯಾ?"

"ಒಂದೇ ಸಿದಗೀವಪ್ಪಾ ಮಲಗೂದನ್ನ! ಒಂದ ಕಡೇ ಶ್ಯಾಮರಾಯನ ಚಿತಾ ಉರೀತಿರಬೇಕು. ಒಂದ ಕಡೆ ನಮ್ಮ ಇಬ್ಬರದೂ ಉರೀತಿರಬೇಕು. ನೆರವ ಮುಂದೀ ಕಣ್ಣು ಕುಕ್ಕಿರಬೇಕು. ಬಸವಂತೀ, ವ್ಯಾಳ್ಯಾ ಬಂತು ಅಂದೀ. ಅಗದೀ ಖರೇ. ನಾನು-ನೀನು ಸುಡೂವಾಗರ ಒಂದ ಆಗೂ ವ್ಯಾಳ್ಯಾ ಬಂತು. ಶ್ಯಾಮರಾಯಾ ನಮ್ಮನ್ನ ಅಗಲಿಸಲಿಲ್ಲಾ. ತೀರಾ ಸನೇಕ ತಂದಾ. ಒಬ್ಬರನ ಒಬ್ಬರು ಬಿಡಧಾಂಗ ಮಾಡಿದಾ. ಈ ಧಡಪಡದಾಗಿಂದ ಗೆದ್ದೇವು ಬಸವಂತೀ. ಶ್ಯಾಮರಾಯಾ ಮುಂಬೈ ಯಿಂದ ಬರೂವಾಗ ಖಪಳಾಸೇ ಬರತಾನ. ನಿನ್ನ ಅಲಗದ್ ಎತ್ತಿ ಊರಿಗೆ ಒಯ್ಯ ತಾನ. ತಕರಾರ ಮಾಡಬ್ಯಾಡ. ಬಸವಂತೀ, ಸರ್‍ವಳ ಅವನ ಜೋಡೀ ಹೋಗಿ ವಾಡೇದಾಗ ನಿಂತಬಿಡೂ. ಮುಂಬೈ ಕೆಲಸಾ ಬಗೀಹರಿಸಿದವನs ನಾನೂ ನೆಟ್ಟಗ ಊರಿಗೆ ಬಂದಬಿಡತೀನಿ. ಕಲಿಯೂದು-ನವಕರೀ ಆಶಾ ಎಲ್ಲಾ ಮುಗೀತು ಬಸವಂತೀ. ರಾಚಪ್ಪಗ ಒಂದ ಪತ್ರಾ ಬರೀಬೇಕು ಬಸವಂತಿ. ನಾಳಿನ ಟಪಾಲಿಗೇ ಹೋಗಲಿ ಅದು. ನಾ ಬರೂದು ತಡಾ ಆದರ, ನಿನ್ನ ಮ್ಯಾಲs ಒಂದಿಷ್ಟು ನಜರ ಇರಲಿ ಅಂತs ಅಂವಗ ತಿಳಸೂದು ರೀಕಾ."

"ರಾಚಪ್ಪಣ್ಣಾ ಇಲ್ಲೇ ಅದಾನ ದಾದಲ್ಯಾ. ನಾಳೆ-ನಾಡದ ಊರಿಗೆ ಪೋಗಾಂವ ಅದಾನ. ಅಂವಾ ಬಂದೂ ನಾಕಾರ ದಿನಾ ಆಗತs ಬಂತು. ಕಾಕಾ ಅವರ ಕಡೇ ಜರೂರಿ ಕೆಲಸ ಇತ್ತಂತ ಬಂದಾನ. ಮನ್ನಿನ ದಿನಾ ದೀಪಾ ಹಚ್ಚೂ ಯಾಳ್ಯಾಕ್ಕ, ಇವರಿಗೆ, ರಾಚಪ್ಪಣ್ಣಗ ಕೈಗೆ ಕೈ ಹತ್ತೂ ಪರಸಂಗನs ಬಂದಿತ್ತು. ಕಾಕಾ ಅವರ ದೇಖತ್ತs ಇಬ್ಬರೂ ಕತ್ತಿ ಕಟ್ಟಿದರು. ಅದರದೂ ದೊಡ್ಡ ಕತೀನs ಐತಿ ದಾದಲ್ಯಾ. ನಾಳೆ ನೀ ಕಾಕಾ ಅವರಲ್ಲಿ ಹೋದಿ ಅಂದರ ರಾಚಪ್ಪಣ್ಣನs ಅದರ ಸುದ್ದಿ ಹೇಳತಾನ ನಿನಗ. ನನ್ನ ಕಾಳಜೀ ಮಾಡುದರ ದಶಿಂದ ನೀ ಯಾರಿಗೂ ಏನೂ ಹೇಳಬ್ಯಾಡಾ. ನನ್ನ ಮೈಗೆ ಕೈ ಹಚ್ಚೂ ಕುವ್ವತ್ತು ಯಾರಿಗೂ ಆಗಾಣಿಲ್ಲಾ. ಇನಾ ಇವರ ದಶಿಂದ ಜೀಂವಾ ಮುರಗತಿತ್ತಂತ ಅಂದೀಟು ರಕ್ತಾ ಬಸದನಿ. ಇಂದ ನನ್ನ ಎದರ ನಿಂದರೂ ಕುವ್ವತ್ತು ಇಲ್ಲ ಅವರಿಗೆ. ಬಸವಂತಿಗೆ - ಸೋನಕ್ಕ ಅವರಿಗೆ ಭಾಳ ಅಂತರ್‍ಮೈತಿ ದಾದಲ್ಯಾ. ಕೆಟ್ಟ ಮಾತ ಆಡಿದ ನಾಲಿಗೀ, ಬಸವಂತಿ ಸೀಳದs ಬಿಡಾಕ್ಯಲ್ಲಾ. ಅಳೂದು ನನ್ನ ಜಲಮುಕs ಹತ್ತಿಲ್ಲಾ. ಆ ವ್ಹಾರೇ ಹಾರೂರದು. ಐದಾರ ವರಸದ ಸನೇಕ ಬಂತು. ಕಾಕಾ ಅವರ್‍ನ ವಾಡೇಕ ತರೂದು ಆಗಲಿಲ್ಲ ನಿಮ್ಮ ಕಡಿಂದ. ಸೋನಕ್ಕವರ ಸೆರೀ ಬಿಡಸೂದು

ಸಾಧಸಲಿಲ್ಲಾ. ತಿಂಗಳನೂದರಾಗ, ಕಾಕಾ-ಸೋನಕ್ಕಪರು ವಾಡೇದಾಗ ಬಂದ ಸಿಂವರದಿದ್ದರ ನನ್ನ ಹೆಸರ ತಗೀಬ್ಯಾಡಾ. ಕಾಕಾ ನನ್ನ ಮಗಳಂತ ಕರದಾಗs ಪೇಳೀನಿ–ವಾಡೇದ ಝುಲ್ಲ ಬಿಡರ್‍ಯಂತ. ನನಗ ಗರಜ ಬಿದ್ದರ ನಿನ್ನ ಕರಿಸಿಗೊಂತೀನಿ ದಾವಲ್ಯಾ. ಅಂವಸರದಲೇ ಬರಬ್ಯಾಡಾ. ವಿಶ್ವಾಸನ ಕಾಳಜೀ ಮಾಡಾಕ ಒಬ್ಬರು ಬೇಕು. ಅಂವಗ ಏನೂ ಪತ್ತೆ ಹತ್ತಧಾಂಗ ಎಲ್ಲಾ ಮಾಡೂಣು. ಊರಾಗ ರಾಚಪ್ಪಣ್ಣ ಇರತಾನು. ಗೌಡರು, ಅಪನವರೂ ಆದಾರು. ನನಗ ಯಾತರದೂ ಝುಲ್ಲ ಇಲ್ಲಾ. ನೀ ಮುಂಬೈದಾಗನs ಇರು. ನಾಕ ತಿಂಗಳಾ ವಿಶ್ವಾಸನ್ನ ಸಂಬಾಳಸು. ಅವನ ಆಶಾದ್ಲೇನs ಸೋನಕ್ಕ ಬದಕ್ಯಾರ. ಇಷ್ಟ ಛಾನಗಡೀ ಮಾಡೂದೆಲ್ಲಾ ಅವರ ದಶಿಂದ. ನಾನು-ನೀನು ಬಾವಾ-ಬೈರಾಗಿಗೋಳು. ನಮಗೇನು ದೇಶಾ ಆಳೂದೈತಿ? ಏನ ಸಂಸಾರ ಮಾಡೂದೈತಿ? ಅದರ ಆಶಾನs ನಮಗ ಉಳದಿಲ್ಲ ದಾದಲ್ಯಾ. ಲಿಗಾಡದಾಗs ನಮ್ಮ ಜನಮ ಹೋಗೂದು..."

"ಬಸವಂತೀ, ಬಸವಂತೀ ನೀ ನಿರ್ವಿಣ್ಣಾಗಿ ಆಶಾ ಉಳದಿಲ್ಲ ಅಂತs ಸಂಕಟ ಬಿಡಬ್ಯಾಡಾ. ನನ್ನ ಆಶಾ ನಿನಗ – ನಿನ್ನ ಆಶಾ ನನಗ ಎಂದೂ ಬಿಟ್ಟದ್ದಲ್ಲಾ. ಏನ ಮಾಡಿದರೂ ಆ ಆಶಾ ಕಮರಧಾಂಗ ಅದs. ಇಬ್ಬರ ಮನಸಿನ್ಯಾಗೂ ಅದೂ ಚಿಗೀಲಿಕ್ಕೆ ಹತ್ತೇದ. ನೀ ಸುಮ್ಮನೇ ಅದನ್ನ ಅಂಗಾಲಲೇ ಒತ್ತಿ ನೆತ್ತೀ ಕುಕ್ಕ ಬೇಕಂತ ಧಡಪಡಸ್ತೀ. ನಾ ಮಾತ್ರ, ಆ ಆಗೀನ್ನ ನನ್ನ ಕೈಲೇ ಚಿಂವಟಲಾರೆ. ನೀ ನೆನಸಿದಾಗ ನಾ ಬರತೀನಿ. ನಿನ್ನ ಧನೀ ನನಗ ಕೇಳಸ್ತದ. ಇಬ್ಬರ ಸಂಕಟೂ ಒಮ್ಮೆ ಮುಗದಬಿಡಲಿ ಬಸವಂತಿ. ನಿನಗ ಧೈರ್‍ಯಾ ಆಗದಿದ್ದರ ನಾನೇ ಅದಕ್ಕ ಏದೀ ಮಾಡತೀನಿ. ಸಂಕಟಾ ನೀಗೂ ಈರ್ಷಾದಿಂದ, ಬಸವಂತೀ, ಇಂದಿನಿಂದ ಎಲ್ಲಾ ಬಾಬತ್ಯಾಗೂ ನಾ ಅಟಕೇಪಾರ ಆದೆ. ನನ್ನ ಬಸವಂತೀ ಜನ್ಮಾನ ವ್ಯರ್ಥ ಆಗಿ ಗೊಡೂದಿಲ್ಲಾ. ಅದರ ಪಾಪಾ-ಪುಣ್ಯಾ ಏನರs ಇದ್ದರ ಅದು ನನಗs ಇರಲಿ" ಎಂದು ನುಡಿದವನೇ ಚಟ್ಟನೆದ್ದು ಬಸವಂತಿಯ ಕೈಯನ್ನು ಕೈಯಲ್ಲಿ ತೆಗೆದುಕೊಂಡೆ. ಶೀರ ಬದಿಗೆ ಸರಿದು ಎದೆಗೆ ಎದೆ ಆನಿಸಲಿದ್ದೆ. ಮುಖಕ್ಕೆ ಮುಖವಾನಿಸಿ ತುಟಿಗೆ ತುಟಿ ಮೇಳವಿಸಲಿದ್ದೆ. ನನ್ನ ಆಶಯದ ಅರ್ಥಮಾಡಿಕೊಂಡು ಬಸವಂತಿ, ಮೃದುವಾಗಿ. ತನ್ನ ತೋಳನ್ನು ನನಗೆ ಸುತ್ತು ಹಾಕಿ, ಬದಿಯಲ್ಲಿ ಕೂಡಿಸಿಕೊಂಡು, ನನ್ನ ಕೈಬೆರಳನ್ನು ನೀವುತ್ತ, ಅವ್ಯಾಜ-ಮನೋಹರ-ನಗೆ ನಕ್ಕು —

"ದಾದಲ್ಯಾ... ದಾದಲ್ಯಾ, ಜರಾ ದಮ್ಮ ತಿನ್ನು...ಈ ಜನಮದಾಗ ಆ

ಸುಕಾ ನಿನಗ-ನನಗ ಇಲ್ಲ ಅಂದೀನಿ. ಅದರ ಆಶಾ ಬ್ಯಾಡ ದಾದಲ್ಯಾ. ಇದರ ಮುದಾ ಇಳದರ ನಿನಗ ಕೆಟ್ಟ ಅನಿಸೀತು. ನಿನ್ನ ನೋಡಿದಾಗ ನನಗೂ ಹೀಂಗಽ ಅನಸತೈತಿ. ಅದರೇನ ಮಾಡಲಿ? ಮೈ ಮಾರೀನಿ ನಾಯಿಗಿ! ಎಂಜಲಾ ನನ್ನ ದೇವರಿಗೆ ಕೊಡಾಕ ಮನಸ್ಸು ಅಳಕತೈತಿ. ಮನಸ್ಸ ಕೊಟ್ಟ್ಯಾಕೀಗಿ, ಮೈ ಕೊಡೂದೇನು ಜಡಾ ಹೊಕ್ಕಿದ್ದಿಲ್ಲಾ. ಈ ಜನಮದಾಗ ಅದನ್ನೇಟು ನಿಗಾ ಇಟಗೊಂಬೂಣು ದಾದಲ್ಯಾ. ಒಂದಽ ಕೈಲಿ ಚಪ್ಪಾಳಿ ಆಗ್ಹಾಂಗಿಲ್ಲಾ. ಪಾಪಾ-ಪುಣ್ಯಾ ನನಗಽ ಇರಲಿ ಅಂದೀ. ನನಗೂ ಅದರ ಶಕಾ ಬಡೀದಽ ಹೋಗಾಣೇಲ್ಲಾ. ನನ್ನ ದಾದಲ್ಯಾ, ಪಾಪ ಮಾಡಬಾರದಂತ ನಾ ತಡವಿದ್ನಿ. ನಿನ್ನ ಪಾಪಾ-ಪುಣ್ಯಾದ ಕಾಳಜೀನೂ ನಾನಽ ಮಾಡಬೇಕಾಗತೈತಿ. ನಿನ್ನ ತಡದ್ನೀ ಅಂತಽ ಸಿಟ್ಟಿಗೆ ಬರಬ್ಯಾಡ ದಾದಲ್ಯಾ. ನಿನಗ ಸಂಕಟಾಗೂದು ನೋಡಿ, ನನ್ನ ಕಳ್ಳು ಮರಗತೈತಿ. ಆದರ ಏನ ಮಾಢಾಂಗ ಅದೀನಿ? ಆದಕ್ಕಽ. ಜರಾ ಗಡಾನಽ ಸಾಯೂ ತಯಾರ್ಯಾಗ ಇರೂ ಅಂದಿನಿ. ಈಗ ನೀನು ಕೈಯಾಗ ಕೈ ಹಾಕಿಧಾಂಗ, ಸಾವೂ ಮುಂದ ಸುದ್ದೇ ಹೀಂಗ ಹೊಂದಿ ಕೊಂಡು ಸಾವೂಣು. ಮುಂದಿನ ಜನಮದಾಗ ಈ ಕೈ ಅಗಲಸಬ್ಯಾಡಂತ ಬೇಡಿ ಕೊಂಡು ಸಾವೂಣು. ಭಾಳ ದಿನಾ ಉಳದಿಲ್ಲ ದಾದಲ್ಯಾ. ಇರೂ ಮಟಾ ಮನಸ ಮುಡಚೆಟ್ಟ ಆಗಿಗೂಡೂಣು ಬ್ಯಾಡಾ.



"ಕಾಕಾ ಅವರು ನನ್ನ ಮನಿತುಂಬಿಸಿಗೊಂಡಾರ. ವಿಶ್ವಾಸಗ, ಸುರೇಶಗ ನಾ ತಾಯೀ ಸಮಾನಂತ ಹೇಳೀನಿ. ಅದನ್ನ ನಡಸಬೇಕ ದಾದಲ್ಯಾ. ಶಕೂ ಬಂದಾಗ ನೀನಽ ಅಂದಿ ದಾದಲ್ಯಾ: ಬಸವಂತೀ ಸಣ್ಣ ಸೊಸಿ ಬಂದಾಳ, ಬುತ್ತೀ ನಿವಾಳಿಸಿ ಒಗೀ ಅಂತಽ. ಮರತೇನ ದಾದಲ್ಯಾ? ನಾಯಿ ಭಕಾಸಿತ್ತು: ಅದು ಖರೇ ಅಲ್ಲ ಅನೂದು ನನಗ-ನಿನಗ ಇಬ್ಬರಿಗೂ ಠಾಂವಿಕಿತ್ತು. ನಾಯಿ ಭಕಾಸಿದ್ದನ್ನ ಖರೇ ಮಾಡಬ್ಯಾಡ ದಾದಲ್ಯಾ. ನಮ್ಮದೂ ಅದರ ಪಾಡಽ ಆಗ್ಹಾಂಗ ಮಾಡಬ್ಯಾಡಾ.

ಐದ ಬಡ್ಯಾಕ ಬಂತ ದಾದಲ್ಯಾ. ನಾ ಈಟು ನೀರ ಕಾಸ್ತೀನಿ. ಜಳಕಾ ಮಾಡೇ ಹೋಗು. ಇಡೀ ರಾತ್ರೀ ನಿದ್ದಿ ಆಗಿಲ್ಲ ನಿನಗ. ಜಳಕಾ ಮಾಡಿದ್ಯಂದರ ಮೈ ಜರಾ ತರತರೀತ ಇರತದ. ನಿನ್ನ ಜಳಕ ಬಗೀಹರಿಯೂದರಾಗ ತಿನ್ನಾಕೂ ಮಾಡತೀನಿ. ಮುಂಬೈಯಾಗ ಇನ್ನ ಯಾವಾಗ ಊಟಾ ಕಾಣಾವನೋ ಏನೋ? ಸಾಬರ ಭೆಟ್ಟಿ ಆದರ ಮಾತಿನ್ಯಾಗ ಹೊತ್ತ ಹೊಳ್ಳತೈತಿ. ನೀರ ಕಾಯೂದರಾಗ ಚಾ ಮಾಡತೀನಿ. ಚಾ ಕುಡದೀ ಅಂದರ ನಿದ್ದಿ ಹಾರತೈತಿ. ಅಡಿಗೀ ಮನೀಗಿನೇ ನಡೀ.

ಅಲ್ಲೇ ಕೂಂಡ್ರೂಣಂತ ಮಾತಾಡಿಕೊಂತ."

ಇಬ್ಬರೂ ಅಡುಗೆಯ ಮನೆಗೆ ನಡೆದೆವು. ಬಸವಂತಿ ಎದುರು-ಬದರು ಎರಡು ಮಣೆ ಹಾಕಿದಳು. ನಡುವೆ ಸ್ಟೋ ಇಟ್ಟು, ಸ್ಪಿರಿಟಿನಲ್ಲಿ ಕಕ್ಕಡವನ್ನು ಅದ್ದಿ ಹೊತ್ತಿಸಿದಳು.

"ದಾದಲ್ಯಾ. ನೀ ಟೋ ಹೊತ್ತಸು. ನಾ ಕೈಕಾಲ ಮಾರೀ ತೊಳಕೊಂಡು ಬರತೀನಿ"

ಎಂದು ಹೇಳಿ ಬಚ್ಚಲಮನೆಗೆ ನಡೆದಳು.

ಹೊತ್ತಿ ಉರಿಯುತ್ತಿರುವ ಕಕ್ಕಡವನ್ನು ತದೇಕ ದೃಷ್ಟಿಯಿಂದ ನೋಡುತ್ತ. ಮಡಿಚಿದ ಕಾಲನ್ನು ಕೈ ಸುತ್ತಿನ ಬಿಗಿತದಲ್ಲಿ ಬಂಧಿಸಿ, ನಾನು ಮಣೆಯ ಮೇಲೆ ಕುಳಿತದ್ದು ಎಷ್ಟೋ ಅಷ್ಟೇ!

ಏಕಧಾರೆಯಾಗಿ ಹೊತ್ತಿದ ಅಗ್ನಿಶಿಖೆಯಲ್ಲಿ ನನ್ನ ದೃಷ್ಟಿ ನೆಟ್ಟಿತ್ತು. ಆ ಶಿಖೆಯ ಅಂಗೈಯಿಂದ ಅಗ್ನಿಕನ್ಯೆ – ಬಸವಂತಿ ಏಳುತ್ತಿದ್ದ ಭಾಸವಾಯಿತು. ಶ್ವೇತ ವಸನಧಾರೆಯಾಗಿ. ಸ್ವರ್ಣಕಾಂತಿಮಯಿಯಾಗಿ. ಅವ್ಯಾಜ-ಮನೋಹರ-ಮೃದು ಮಂದಹಾಸ-ವದನಳಾಗಿ, ನಯನ-ದೀಪ್ತಿಯಲ್ಲಿ ಕಾರುಣ್ಯದ ನಂದಾದೀಪ ಬೆಳಗಿಸಿ. ಬಸವಂತಿ ಅಗ್ನಿ-ಗರ್ಭದಿಂದ ಹಿಮರಾಜಕನ್ಯೆಯಂತೆ ಏಳುತ್ತಿದ್ದಳು. ಈ ಕನ್ಯೆಯ ಸಾರಸರ್ವಸ್ವವನ್ನು ಒಂದೇ ಗುಟುಕಿನಲ್ಲಿ ಆಪೋಷಣೆ ತೆಗೆದುಕೊಳ್ಳಲು ದಾದಲ್ಯಾ ಧಾವಿಸುತ್ತಿದ್ದ. ಆ ಕನ್ಯೆಯ ನಗೆ, ಕಾರುಣ್ಯ-ದೀಪ್ತಿ-ನಯನ "ತಡೆ. ದಾದಲ್ಯಾ" ಎಂದು ಸೂಚಿಸಲು ಮೃದುವಾಗಿ ಎತ್ತಿದ ಕರ-ಕಮಲ-ಭಂಗಿ, ದಾದಲ್ಯಾನನ್ನು, ನಿಂತಲ್ಲಿ ಶಿಲಾಪ್ರತಿಮೆಯನ್ನಾಗಿ ಮಾಡಿದ್ದವು. ಬಸವಂತಿ ನಿಗ್ರಹದ ಪರಮ-ಸೀಮಾ-ವಿಹಾರಿಯಾಗಿ ಚಿರಂತನ ಅಮರಿಯಾದಳು. ದಾದಲ್ಯಾನನ್ನು ಬದುಕಿಸಿ – ಕೊಂದಳು.

ಪಾಪ-ಪುಣ್ಯದ ಅಭೇದ್ಯ ಭಿತ್ತಿಯನ್ನು ದಾದಲ್ಯಾ ಬಸವಂತಿಗಾಗಿ ಲೀಲಾಜಾಲವಾಗಿ ನೆಗೆಯುತ್ತಿದ್ದ. ಅವಳಿಗಾಗಿ ಎಂಥ ರೌರವನರಕದಲ್ಲಿಯೂ ಜನ್ಮ ಜನ್ಮಾಂತರ ಕೊಳೆಯಲು ಸಿದ್ಧನಿದ್ದ. ಯಾರೂ ಕಾಣದ ಸ್ವರ್ಗ-ನರಕದ ಸುಖ-ದುಃಖವನ್ನು ನಿರ್ಲಕ್ಷಿಸಿ. ಇಂದಿನ ಸುಖಕ್ಕೆ ಜೀವ ನಿವಾಳಿಸಿ ಒಗೆಯಲು ಸಿದ್ಧನಾಗಿದ್ದ. ಬಸವಂತಿ ಆ ಕಲ್ಪನೆಯ ನರಕವನ್ನು ತಪ್ಪಿಸಿ. ಈಗ ಪ್ರತ್ಯಕ್ಷ – ಜೀವಂತ ನರಕದ ಅನುಭೋಗಕ್ಕೆ ನನ್ನನ್ನು ದೂಡಿದ್ದಳು. ಬಸವಂತಿ ದಾದಲ್ಯಾನನ್ನು ಓಲೈಸಿ ಕೊಂದಿದ್ದಳು. ಬಸವಂತಿಯ ದಾದಲ್ಯಾ ಸತ್ತು ಬದುಕಿದ್ದ.

"ಕಲ್ಲ ಕುಂಥಾಂಗ ಹಂಗs ಕುಂತೀಯುಲಾ ದಾದಲ್ಯಾ ಟೋದ ಮುಂದ? ಕಕ್ಕಡ ಆರಿ ಅಂಗಾರಾಗ್ಯೈತಿ! ಇನಾ ಬಸವಂತೀ ಮುಬ್ಬ ಬಿಟ್ಟಿಲ್ಲೇನು ತಲ್ಯಾಗಿಂದು? ಜರಾ ಪಂಪ ಮಾಡು. ಹೊತ್ತದಿದ್ದರ ಕಕ್ಕಡಾ ಎದ್ದಿ ಇಡೂ ಎಣ್ಯಾಗ. ಟೋ ಹೊತ್ತ ಸಾಕ ನೆರವು ಆಗೂದು ಆಗವಲ್ಲದು. ಇನ್ನ ನೀ ಏನ ಬರತೀ ನನ್ನ ಹಿಂಬಾಲಾ? ಮಾರೀ ತೊಳಕೊಂಡ ಬಾ. ನಿದ್ದಿ ಹಾರತ್ತೈತಿ."

"ನಿದ್ದಿ-ನೀರಡಕಿ ಎಲ್ಲಾ, ನಿನ್ನ ಮಾರೀ ನೋಡಿದರs ಸಾಕು. ಹಾರಿ ಹೋಗ ತಾವ. ಸಾಯೂ ತನಕಾ, ಇನ್ನs ನಿದ್ದಿ-ನೀರಡಕಿ ಆಶಾ ಉಳೀಲಿಲ್ಲ ಬಸವಂತಿ. ದಾದಲ್ಯಾನ್ನ ಬಚಾವ್ ಮಾಡಿದ ಗಮಜ ಬಂತ ನಿನಗ. ಆದರ ಖರೇನs ಇಂದ ನಿನ್ನ ದಾದಲ್ಯಾ ಸತ್ತಾ."

"ದಾದಲ್ಯಾ. ಕಾಶೀಬಾರೀಕಾಯಿ ನೋಡಾಕನs ಛಂದಾ. ಕಡದರ ಹುಳಕನs ಹೊಂಡೂದು. ಈ ಜನಮುದಾಗ ನಾ ಹಂಗ ಅದೀನಿ. ಒಳಗಿನ ಟೊಕರಾ ನಿನ್ನ ಬಾಯ್ಗಿ ಬೀಳೂದು ಬ್ಯಾಡಂತ ಬೇಡಕೋತೀನಿ. ನನ್ನ ದಾದಲ್ಯಾಗ ಹುಳಕಕಾಯೀ ನಾ ಕೊಡ್ಬಾಂಗಿಲ್ಲಾ. ಜೋರ ಮಾಡಿ ಅವನs ನಾ ಕಡದೇನಂತ ಹಟಾ ಹೂಡಿದರ ನಿನಗೇನು ಅದು ಜಡಾ ಹೋಗ್ಬಾಂಗಿಲ್ಲಾ. ನಿನಗ ಬಸವಂತಿ ಮೈಯನs ಬೇಕಾಗಿದ್ದರ ನಡೀ, ಇನಾ ಮುನಾರ ವ್ಯಾಳ್ಯಾ ಐತಿ. ಮುದಾ ಇಳದ ಮ್ಯಾಲ ಹಳಹಳಿಸಿ ಮರಗಬ್ಯಾಡ ಮತ್ತs. ನೀ ಅಟಕೇಪಾರ ಅಧಾಂಗ, ಬಸವಂತೀನೂ ಕೈಗೆ ಹತ್ತದs ಮರೀ ಆಗತಾಳ. ಸಾಯೂ ಮಟಾ ಹಲಬಿದರೂ ಬರ್ಬಾಂಗಿಲ್ಲಾ. ದಾದಲ್ಯಾನ ಧ್ಯಾಸಾ ಇಂದs ಬಿಟ್ಟು ನಡೀತಾಳ. ನನ್ನ, ನಾಯೀ ಮಾಡೂ ಇರಾದೆ ಇದ್ದರ ಹೇಳ ದಾದಲ್ಯಾ? ಕುಂಬಾರಗ ಗಡಿಗೀ ಮಾಡಾಕ ನಾಕ ದಿನಾ ಹಿಡೀತೈತಿ. ಒಡ್ಯಾವಗs ಪಟ ಹೊತ್ತ ಹತ್ತಬೇಕಾಗತೈತಿ! ಸಣ್ಣ ಹಳ್ಳ ಒಗದರೂ ಸಾಕು ಅರ-ಪಾರ ಭೋಕ ಬೀಳತ್ತೈತಿ. ಬಸವಂತಿ ಒಡಕ ಮಡಿಕಿ ಅನಸಬೇಕಾಗಿದ್ದರ ನಡೀ. ಕಾಕಾ ಅವರ ಸೊಸ್ತ್ಯೆನಾ, ಸೋನಕ್ಕವರ ತಂಗಿತನಾ, ವಿಶ್ವಾಸ-ಸುರೇಶರ ತಾಯ್ತನಾ ಎಲ್ಲಾ ಹರಕೊಂಡು ನಿನ್ನ ಖುಷೀ ಮಾಡತೀನಿ. ತಮ್ಮನ್ಹಾಂಗ. ಬಸವಂತೀ ತೊಡೀಮ್ಯಾಲ ತಲೀ ಇಟಗೊಂಡು ಮಲಗಿದ್ದಿ. ಅಕ್ಕನ್ಹಾಂಗ ನಾನೂ ಚುಕ್ಕು ಬಡದು ಮಲಗಸಿದ್ದೆ. ಇಂದ ತೊಡೀ ಬದ್ಲ ಮಾಡೂ ಹುಕೀ ಬಂದೈತಿ ನಿನಗ. ಸತ್ತ ನನ್ನ ತಮ್ಮಾ ದಾದಲ್ಯಾನ ಮ್ಯಾಗ ಮನಸ ನಿವಾಳಿಸಿ ಒಗೀತೀನಿ. ಅವನ ದೆವ್ವ ಆದ ದಾದಲ್ಯಾಗ ಮೈ ಒಡ್ಡತೀನಿ. ತೊಗಲ ನೆಕ್ಕಿ ಅವನ ಜೀಂವಾ

ಖುಷೀ ಆಗತಿದ್ದರ ಆಗಲಿ."

ಸೋಸಿದ ಚಹಕ್ಕೆ ಹಾಲು ಬೆರೆಸುತ್ತ ಬಸವಂತಿ– ಮಾತು ಮತ್ತೆ ಮುಂದರಿಸಿದಳು:

"ಬಿರಸ ಮಾತ ಆಡಿದೆ ದಾದಲ್ಯಾ. ನಿನ್ನ ಕಣ್ಣಾಗ ನೀರ ತುಳಕಾಕನs ಹತ್ತ್ಯಾವ. ಭಾಳ ಮನಸ್ಸಿಗೆ ಹಚಿಗೊಂಡೇನ ದಾದಲ್ಯಾ? ಮಾತಾಡಾಕ ಹತ್ತಿದರ ನನಗ ನಾಲ್ಗೀ ಮ್ಯಾಲ ನಿಗಾನ ಉಳ್ಯಾಂಗಿಲ್ಲಾ. ಕೆಟ್ಟ ಮಾತ ಆಡಿ ನಿನ್ನ ಅಳಿಸಿದ್ನಿ. ನಿನ್ನ ಅಕ್ಕನ ಮಾತಾ ಈಟೂ ದಕ್ಕಿಸಿಬೊಂಬೂದಿಲ್ಲೇನು? ದಾದಲ್ಯಾ, ಬ್ಯಾರೇ ಮವರ ಆಗಿದ್ದರ ನಾ ಯಾಕ ಹೀಂಗ ಆಡತಿದ್ನಿ? ನೀ ನನ್ನಾವಂತ, ನನ್ನ ಮನಸ್ಸಿನ ಧಣ್ಯಾ ಅಂತs ಆಡಿದಿನಿ. ಅಕ್ಕ ಅಂತs, ನಿನ್ನ ಭಾರಾ ಹೊರತೀನಿ ಬಸವಂತೀ ಅಂದಿದ್ದಿ. ಅಕ್ಕಾ ಜರಾ ಸಿಟ್ಟಲೇ ಆಡಿದರ ಅಳಕೊಂತ ಕುಂತಿ. ಹೀಗs ಹೊರತೀ ಏನ ನನ್ನ ಭಾರಾ? ಮಾರೀನೂ ನಾನs ತೊಳಸಲೇನು? ನಡೀ ಹಂಗಾರ."

ಬಸವಂತಿ ಚಟ್ಟನೆದ್ದು ಸೀರೆಯ ಸೆರಗಿನಿಂದ ನನ್ನ ಕಣ್ಣೊರಸಿ, ಕೈ ಹಿಡಿದು ಎಬ್ಬಿಸಿದಳು. ನಾನು ಬಸವಂತಿಯ ಎರಡೂ ಹೆಗಲ ಮೇಲೆ ಕೈಯಿರಿಸಿ, ಮುಖಾ ಮುಖಿಯಾಗಿ —

"ಬಸವಂತೀ, ನೀ ಕೆಟ್ಟ ಮಾತಾಡಿದೀ ಅಂತs ನನಗ ಅಳೂ ಬರಲಿಲ್ಲಾ. ಬಸವಂತೀ – ನನ್ನ ಅಕ್ಕಾ – ದಾದಲ್ಯಾನ್ನ ಬದಕಿಸಿದಳು – ಕೊಲ್ಲಲಿಲ್ಲಂತ ಅಳೂ ಬಂತು. ನನ್ನ ಎದೀನs ಕರಿಗಿ ನಿನ್ನ ಪಾದಾ ತೊಳೀತಿತ್ತು. ನಿನ್ನ ತಮ್ಮಾ ಸಾಯಲಿಲ್ಲ ಬಸವಂತಿ, ಖರೇ ಬದಕಿದಾ. ಬಸವಂತಿ ತನ್ನ ತೇಜ ಕೊಟ್ಟು ಅವನ್ನ ಬದಕಿಸಿದಳು. ನಿನ್ನ ಪುಣ್ಯಾನs ನನ್ನ ಬದಕಿಸ್ತ್ಯು, ಬಸವಂತೀ!"

"ನೀ ಬದಕಿದ್ದು ಖರೇ ಇದ್ದರ ಎರಡ ಕಪ್ಪ ಚಾ ಐತಿ. ನೀ ಒಬ್ಬನs ಕುಡೀ ಬೇಕ ನೋಡು ಅವನ್ನ. ಸುಳ್ಳಾ ನನ್ನ ಮುಂದ ಖಪ್ಪಸಾಂಗಿಲ್ಲಾ."

ನಾನು ಮೋರೆ ತೊಳೆದುಕೊಂಡು ಒರೆಸಿಕೊಳ್ಳಲೆಂದು ನ್ಯಾಪ್‌ಕಿನ್ ಹುಡುಕುತ್ತಿದ್ದೆ. ಕೂಸಿನಂತೆ ನನ್ನನ್ನು ಬರಸೆಳೆದು, ಬಸವಂತಿ ತನ್ನ ಸೀರೆಯ ಸೆರಗಿನಿಂದ ಮುಖ ಒರಿಸಿ —

"ದಾದಲ್ಯಾ, ಇನ್ ಮಾತಾಡಿದೀ ಅಂದರ ನನ್ನ ಆಣಿ ಐತಿ. ಚಾ ಕುಡದು. ಎರಡ ಬೀಡೀ ಸೇದೂದ್ರಾಗ ನೀರ ಕಾಯ್ತಾವ. ಜಳಕಾ ಬಗೀಹರಿಸಿ ತಯಾರಾಗು. ನಾನು ಇಷ್ಟ ತಿನ್ನಾಕ ಮಾಡಿ, ಮೈ ತೊಳಕೊಂತೀನಿ. ಅಕ್ಕಾ-ತಮ್ಮಾ ಕಡೇ ಫಳಾರ ಮಾಡೂಣಂತ. ಮತ್ತ ಎಂದ ಕೂಡತೇವೋ ಯಾರಿಗ್ಗೊತ್ತು? ನಾನೂ ಠೇಶನಕ

ಬರತೀನಿ ಕಳಸಾಕ. ದಾದಲ್ಯಾ, ಖಾದರ್ ರಾತ್ರೀ ಬರಲೇ ಇಲ್ಲಲಾ? ಸುರೇಶ ಅವರ್ನ ಇಳಸಾಕ ಹೋದಾಂವಾ ಅಕಡೇ ಹೋದಾ. ತಿರಿಗಿ ಬಂದಿದ್ನಂದ್ರ ಸಪ್ಪಳಾಗ ತಿತ್ತು. ಮಾತಿನ್ಯಾಗ ನಮಗೂ ಅವನ ಧ್ಯಾಸ ಹಾರಿತು. ಕಾಕಾ ಅವರ ಮನ್ಯಾಗಸ್ಸ ನಿಂತನೋ ಏನೋ? ಹಾಂಗ ನಿಂದ್ರಾವಲ್ಲ ಅಂವಾ. ನಾವೂ ಬಾಕಲಾ ಹಾಕೊಂಡು ಕುಂತಿದ್ದೇವು. ಯಾಕ ಎಬ್ಬಿಸಬೇಕಂತ ಗಿರಾಜನಾಗs ಮಲಗಿದನೋ ಏನೋ?"

"ನಾ ತಪಾಸ ತಗೀತೀನಿ ಬಸವಂತಿ. ನೀ ಮೈ-ಕೈ ಬಗೀಹರಸು. ಖಾದರ್ ಬಂದಿರದಿದ್ದರ ನಮಗ ಟಾಂಗಾದಾಗ ಹೋಗಬೇಕಾಗತದ. ಲಗೂನs ಹೊರಡ ಬೇಕು."

ನಾನು ಖಾದರನ ತಪಾಸಿಗೆಂದು ತಲೆಬಾಗಿಲು ತೆರೆದು ಹೊರಗೆ ಬಂದೆ. ಇನ್ನೂ ಕತ್ತಲೆ ಹರಿದಿರಲಿಲ್ಲ. ಮಳೆಯೂ ಜಿಟಿಜಿಟಿ ಹಿಡಿದಿತ್ತು. ಹೊರ ಬಾಗಿಲಿ ನಲ್ಲಿಯ ದೀಪ ಹೊತ್ತಿಸಿದೆ. ಗ್ಯಾರೇಜಿನಲ್ಲಿ ಗಾಡಿ ಇರಲಿಲ್ಲ. ಪಡಸಾಲೆಯ ಮುಂದಿನ ಪೋರ್ಚಿನಲ್ಲಿ ಖಾದರನ ಮಡಿಚಿಟ್ಟ ಹಾಸಿಗೆ ಇದ್ದಲ್ಲಿಯೇ ಹಾಗೇ ಇತ್ತು. ಖಾದರ್. ರಾತ್ರಿಯಲ್ಲಿ ಮರಳಿ ಬಂದಿಲ್ಲ ಖಾತ್ರಿಯಾಯಿತು.

ಗಾಡಿ ಕಾಕಾ ಅವರಲ್ಲಿಯೇ ಉಳಿದಿರುವ ಬಗ್ಗೆ ಸಂಶಯ ಉಳಿದಿರಲಿಲ್ಲ. ಆದರೆ ಅಲ್ಲೇಕೆ ಉಳಿಯಿತೆಂಬ ಬಗ್ಗೆ ಸಂಶಯ ಮೂಡತೊಡಗಿತು. ಅಲ್ಲಿ ಗ್ಯಾರೇಜ ಇರದಿದ್ದರೂ ಗಾಡಿಯನ್ನು ಬಿಡಲು ಜಾಗವಿತ್ತು. ಆ ಮನೆಯ ಪೂರ್ವದ ಪಾಲಿಕ ಹಮಣೆ ಬಿಡಲು. ಬಾಗಿಲಿಲ್ಲದ ಮೂರು ಗೋಡೆಯ – ಆ ಗೋಡೆಯ ಮೇಲೆ ಪತ್ರೀ ಹಾಕಿದ ಒಂದು ಕಚ್ಚಾ ಕೋಣೆ ಕಟ್ಟಿಸಿದ್ದ. ಅಲ್ಲಿ ಗಾಡಿಯನ್ನು ಬಿಡಲು ಬರುವಂತಿತ್ತು. ಅನುಕೂಲತೆಗಿಂತ. ಗಾಡಿ ಅಲ್ಲೇಕೆ ಉಳಿಯಿತೆಂಬ ವಿಚಾರ ನನ್ನ ತಲೆ ತಿನ್ನತೊಡಗಿತು.

ಸಾಹೇಬರ ಅರ್ಜೀ ಪ್ರಕರಣದ ತಪಾಸು ನಡೆದಾಗ ತಾವು ಅಲ್ಲಿರುವದು ನಟ್ಟಿಗೆಂದು, ಬೆಳಗಿನ ಗಾಡಿಗೆ ಹೊರಡುವ ಬೇತಿನಿಂದ, ಸುರೇಶ-ಶಕೂ ಗಾಡಿ ಯನ್ನು ನಿಲ್ಲಿಸಿಕೊಂಡಿದ್ದರೆ? ಆ ಬಗ್ಗೆ ನನ್ನ-ಸುರೇಶನ ಮಾತುಕತೆಯಾಗಿರಲಿಲ್ಲ. ನಿನ್ನೆ ರಾತ್ರಿ, ಇಬ್ಬರೂ ಕೂಡಿದ್ದರೂ, ತಾನು ಮುಂಬೈಗೆ ನನ್ನ ವಿಳಾಸಕ್ಕೆ ಬರೆದ ಕಾಗದದ ಬಗ್ಗೆ ಸುರೇಶ ಏನೂ ಹೇಳಿರಲಿಲ್ಲ. ಅದನ್ನು ಕುರಿತು ನನ್ನ ಕೂಡ ಮಾತ ನಾಡಿ, ನನ್ನನ್ನು ಜರೂರ ಮುಂಬೈಗೆ ಕಳಿಸುವ ಬೇತು ಮಾಡಿ, ಬೇಗನೆ ಎದ್ದು ಬರಲು ಅನುಕೂಲವಾಗಲೆಂದ ಗಾಡಿಯನ್ನು ನಿಲ್ಲಿಸಿಕೊಂಡಿದ್ದರೆ – ಹಾಗಿರುವ

ಸಂಭವವಿತ್ತು. ಏನೇ ಆದರೂ ಅವರು ಪರಭಾರೆ ಸ್ಟೇಶನ್ನಿಗೆ ಹೋಗುತ್ತಿರಲಿಲ್ಲ. ಇಲ್ಲಿ ಬಂದೇ ಹೋಗುತ್ತಿದ್ದರು. ಅವರು ಬರುವ ದಾರಿಯನ್ನು ಕಾಯದೆ, ನಾನು-ಬಸವಂತಿ ಇಬ್ಬರೂ ಸ್ಟೇಶನ್ನಿಗೆ ಹೋಗಿಬಿಟ್ಟರೆ ಅವರಿಗೆ ಪಂಚೇತಿಗಿಡುವ ಸಂಭವವಿತ್ತು. ಬಸವಂತಿಯನ್ನು ಮನೆಯಲ್ಲಿ ಬಿಟ್ಟು ನಾನೊಬ್ಬನೇ ಸ್ಟೇಶನ್ನಿಗೆ ಹೋಗುವದು ಸೂಕ್ತವೆನಿಸತೊಡಗಿತು. ಅಂದರೆ ಗಾಡಿಯೂ ತಪ್ಪುತ್ತಿರಲಿಲ್ಲ. ಸುರೇಶನಿಗೆ ನಾನು ಹೋದದ್ದರ ಕಾರಣವೂ ತಿಳಿಯುತ್ತಿತ್ತು. ವೇಳೆ ಇದ್ದರೆ ಎಲ್ಲರೂ ಕೂಡಿಯೇ ಸ್ಟೇಶನ್ನಿಗೆ ಬರುತ್ತಿದ್ದರು.

ಇನ್ನೂ ಒಂದೆರಡು ತಾಸು ರಾತ್ರಿ ಇದ್ದಾಗ ನಾನೇ ಕಾಕಾ ಅವರಲ್ಲಿ ಹೋಗಿದ್ದರೆ ನೆಟ್ಟಗಾಗುತ್ತಿತ್ತೇನೋ ಎಂದೆನಿಸತೊಡಗಿತು. ಅವರಿಗೆ ನನ್ನ ಆಗಮನ–ತ್ವರಿತ ನಿರ್ಗಮನದ ತ್ರೋಟಕ ವರದಿ ಮಾಡಲು ಬರುತ್ತಿತ್ತು. ಪುಣೆಗೆ ಬಂದೂ ಅವರನ್ನು ಕಾಣದೆ ಹೋದೆನೆಂಬ ಶಬ್ದವೂ ಬರುತ್ತಿರಲಿಲ್ಲ. ಸಾಹೇಬರು ಮುಂಬೈಯಲ್ಲಿ ಇಳಿಯುವ ಠಿಕಾಣಿ ಗೊತ್ತಾಗಿರದಿದ್ದರೆ. ನಾನು ಸುರೇಶನನ್ನು ಕಾಣಲು ಹೋಗಲೇಬೇಕಾಗುತ್ತಿತ್ತು. ಬಸವಂತಿ ಅವರ ಠಾವ-ಠಿಕಾಣೆನ ಅಚೂಕ ವರದಿ ಮಾಡಿದ್ದಳು. ಪುಣೆಯ ನೀರು ಬಲು ಬೇಗ ಬಸವಂತಿಗೆ ಮಾನಿಸಿತ್ತು. ಹೊಟೇಲಿನ ಹೆಸರು-ವಿಳಿ ತಪ್ಪದೆ ಲಕ್ಷ್ಯದಲ್ಲಿ ಉಳಿಯುತ್ತಿದ್ದವು.

"ಶ್ಯಾಮರಾಯ ಎಲ್ಲೆ ಇಳೀತಾನ ಬಸವಂತೀ, ಏನರs ಪತ್ತೇ ಅದs ಏನು ?" ಎಂದು ನಾನು ಕೇಳಿದ್ದಕ್ಕೆ. ಬಸವಂತಿ —

"ದೊಡ್ಡ ಕಚೇರ್ಯಾಗ ಇವರ ದೋಸ್ತ ಅದಾರಂತ ಯಾರೋ! ಅವರ ಮನೀ ಹಾದರದಾಗ ಐತ್ಯಂತ. ಇವರು ಅಲ್ಲೇ ಇಳ್ಯಾವರು. ನಮ್ಮ ಬಸಗೋಂಡಾ, ನಬೀಸಾಬಾ, ಅಲ್ಲೇ ಸನೇದಾಗ ಒಂದ ಗುಜರಾತೀ ಲಾಜ್ ಐತ್ಯಂತ. ಅದರಾಗ ಉಳ್ಯಾವ್ರು."

ಎಂದು ವರದಿ ಮಾಡಿದ್ದಳು. ದೊಡ್ಡ ಕಚೇರಿ ಅಂದರೆ ಪಿ.ಡಬ್ಲ್ಯು.ಡಿ. ಸೇಕ್ರಟರೀಏಟ್. ಅವಳಿಗೆ ಅನ್ನಲಿಕ್ಕೆ ಅವಘಡವಾಗಬಹುದೆಂದು, ಖಾದರ್, ತನ್ನ ಶಬ್ದಕೋಶದಿಂದ ಈ ಸುಟಸುಟೀತ ಅರ್ಥ ತೆಗೆದು ಅವಳಿಗೆ ನಿವೇದಿಸಿದ್ದ. ನಾಕಾರು ಬುಕ್ ಕಲಿತು – ನೂರಾರು ಶಹರಗಳನ್ನು ಅಲೆದು. ತುಳಸಿ, ತನ್ನ ಭಾಷೆ. ವಾಣಿ ಎರಡನ್ನೂ ತಿದ್ದಿಕೊಂಡಿದ್ದಳು. ಅವಳಷ್ಟು ಸಂಸ್ಕಾರ ಬಸವಂತಿಗೆ ಆಗಿದ್ದರೆ. ಬಸವಂತಿ ಹಾರೂರನ್ನು ಝುಕ್ಕಿಸಿಬಿಡುವ ತಾಕತ್ತು ಪಡೆಯುತ್ತಿದ್ದಳು. ಹಳ್ಳಿಯ ಊರ

ಕುಲಕರ್ಣಿ-ಜೋಯಿಸರ ಮನೆಯಲ್ಲಿ ಅವಳ ಬಾಲ್ಯ ಕಳೆದಿತ್ತು. ಅದು ಮಡಿ-ಮೈಲಿಗೆಯು, ಪಾಪ-ಪುಣ್ಯದ ಸಂಸ್ಕಾರ ವಿಶೇಷವಾಗಿ ಅವಳ ಬಾಳನ್ನು ತಿದ್ದಿತ್ತು. ಆದರೆ ಅವಳ ಮಾತಿನ ಚಮಕು, ನೀತಿಯ ನಿಷ್ಠೆಯನ್ನು ಯಾವ ವೈದಿಕ ಬ್ರಾಹ್ಮಣನೂ ಅವಳ ಗಂಟಲಲ್ಲಿ ತುರುಕಿರಲಾರ. ಅದು ಬಸವಂತಿಯಲ್ಲಿ ದೈವ ದತ್ತವಾಗಿತ್ತು. ಬಸವಂತಿಯ ಜನ್ಮಮುಹೂರ್ತದಲ್ಲಿ–ಕದಾಚಿತ್ ರಾಧಾಕಾಕೂ ಸೂಲಗಿತ್ತಿಯಾಗಿ ಹೋಗಿರುವ ಸಂಭವವಿತ್ತು. ಅಪತ್ಯರೂಪದಲ್ಲಿ ಲೀಲಾ ವಿಲೋಲವಾಗಿ ಪವಡಿಸಿದ ಬಸವಂತಿ, ತನ್ನ ಬಟ್ಟಗಣ್ಣು ಬಿಟ್ಟು ಕಾಕೂನನ್ನು ನೋಡಿರಬೇಕು. ಕಾಕೂ ಈ ಕೂಸಿನ ರೂಪಕ್ಕೆ, ಚೆಲುವಿಗೆ ಒಲಿದಿರುವ ಸಂಭವ ವಿತ್ತು. ದುರ್ದೈವದಿಂದ ಅವರಿಗೆ ಹೆಣ್ಣುಸಂತಾನವಾಗಿರಲಿಲ್ಲ. ಹೆಂಗೂಸನ್ನು ಕಂಡಾಗ ಅವರ ಅಂತಃಕರಣದ ದಶ-ಶತ-ಸಹಸ್ರ ದಳ ಬಿರಿಯುತ್ತಿತ್ತು. ಹೆಣ್ಣು ಸಂತಾನದ ಭಾಗ್ಯವಿರದ ಅವರು, ಬಸವಂತಿಯಂಥ ಕನ್ಯಾರತ್ನವನ್ನು ಕಣ್ತುಂಬ ನೋಡಿರಬೇಕು. ಏನೋ ವಿಚಾರ ಬಂದು —

ನಾನು ಚಟ್ಟನೆ ಒಳಗೆ ಅಡುಗೆಯ ಮನೆಗೇ ನಡೆದೆ. ಬಸವಂತಿ ಮೈ-ಕೈ ಮುಗಿಸಿ ಸೀರೆ ಉಟ್ಟುಕೊಳ್ಳುತ್ತಿದ್ದಳು. ಅರೆಮೈ ತೆಗೆದದ್ದು ಹಾಗೇ ಇತ್ತು. ನಾನು ನೇರವಾಗಿ ಬಸವಂತಿಯ ಬಳಿಗೆ ಹೋಗಿ —

"ಬಸವಂತೀ, ನಿನಗ ರಾಧಾಕಾಕೂನ ಗುರುತು ಇತ್ತೇನು? ಅವರ್ನ ಏಸರ ನೋಡಿದ್ದರ ನೆನಪ ಅದs ಏನು?"
ಎಂದು ಕೇಳಿದೆ.

"ದಾದಲ್ಯಾ, ಸೀರೀ ಉಟಗೊಂಬಾಗರ ಜರಾ ಸರದು ಧೂರ ನಿಂದರಲಾ? ಮೈಗೇ ಅಡರಾಕ ಬರತೀದಿ. ರಾಧಾಕಾಕೂಂದು ಯಾಕ ನೆಪ್ಪ ಆತು? ನಿನಕಿಂತಾ ನಾನು ಎಂಟ ವರ್ಸದಲೇ ದೊಡ್ಡಾಕಿ. ಅವರ್ನ ನೋಡಿಕೊಂತನs ಬೆಳದ್ನಿ. ನಮ್ಮ ಅವ್ವಾ ನನ್ನ ಹೊಟ್ಟೀಲಿದ್ಲು. ದಿನಾ ತುಂಬಿದ್ದೂ. ಒಂದs ಸವನs ಮಳೀ ಹತ್ತಿ ನಮ್ಮ ಮನೀ ಮೂರ ತಾವಲಿ ಬಿದ್ದು ನಿಕಾಲಾಗಿತ್ತು. ಬಾಣತಿ ಆದರ ಹ್ಯಾಂಗ ಮಾಡೂದಂತ, ನಮ್ಮ ಅಪ್ಪಾ ಚಿಂತ್ಯಾಗನs ಕುಂತಿದ್ದಾ. ರಾಚಪ್ಪಣ್ಣಂದೂ ನಮ್ಮದು ನಾತೇ. ರಾಚಪ್ಪಣ್ಣನ ದೊಡ್ಡಪ್ಪಾ ಆಗ ವಾಡೇದ ದೇಖರಖೀ ಮಾಡ ತಿದ್ದರು. ನಮ್ಮ ಅವ್ವನ್ನ ಅನಾಮತಾ ಹೆಗಲ ಮ್ಯಾಲ ಕುಂಡರಿಸಿಗೊಂಡು ಗಣಪತಿ ಗುಡೀ ಪೌಳ್ಯಾಗ ಒಯ್ದು ಮಲಗಿಸಿದನಂತ. ಅಲ್ಲೇ ಬಾಣತ್ಯಾದ್ಲು ನಮ್ಮ ಅವ್ವಾ.

ಕಾಕೂ ಅವರsು ಎದರ ನಿಂತು ಬಾಣತ್ಯಾನಾ ಮಾಡಿದರು. ಮಳೆಗಾಲ ಮುಗದ ಮ್ಯಾಲ ನಮ್ಮ ಅವ್ವಾ ಮನೀಗೆ ಬಂದ್ಲಂತ. ನಾ ಕಾಕಾ ಅವರ ಮನೀಗೆ ಹೋದ ದಿನಾನsು ಈ ಸುದ್ದೀ ಮಾತಾಡೇವು. ಗಿರಿಜಾಗ, ರಮಾಕಕ್ಕಿಗಿ ಎಲ್ಲಾ ಠಾಂವಿಕ್ಯದ· ಕಾಕೂ ಅಂಪರ ಊರಿಗೇ ಲಕ್ಷ್ಮೀ ಅನೂ ಮಾತಾ ಠಾಂವಿಕ್ಯದೋ ಇಲ್ಲೋ ದಾದಲ್ಯಾ? ಆ ತಾಯೀ ಪಾದಧೂಳೀ ಬಿದ್ದ ಮನೀ ಭಂಗಾರ ಆಗತಿತ್ತು. ಗಿರಿಜಾ, ಆ ತಾಯೀ ಪುಣ್ಯಾದ್ಲೇ ಸುಕಾ ಕಂಡಳು. ಅಂತಾ ಸುಕದ ಆಶಾ ನನಗ ಇರಲಿಲ್ಲ ದಾದಲ್ಯಾ. ಆದರ ಜೀಂವಕಷ್ಟ ಧಾವತೀ ತಪ್ಪಲಿ ಅಂತsು ಇವರ್ನ ಕೂಡಿದೆ. ಇವರ್ನ ಕೂಡಾಗ ಕಾಕೂನ ನೆಪ್ಪ ಬಂದೇ ಜೀಂವಕ ಪೈನ ಅನಿಸಿತ್ತು. ಆ ತಾಯಿ ಕಾದಾಳು ಅನೂ ಭರೋಸ ಬಂದಿತ್ತು ಜೀಂವಕ. ದಾದಲ್ಯಾ, ಮಾಯಿನಗಿಡಕ, ಬೇಯಿನ ಕಾಯಿ ಬಿಟ್ಟಾಂಗ ಇವರು ಹೊಂಟರು. ದಾದಲ್ಯಾ, ಖಾದರನ್ನ ನೋಡಾಕಂತ ಹೋದಾಂವಾ. ರಾಧಾಕಾಕೂ ಅವರ್ನ ನೆನಿಸಿಗೊಂಡು ಯಾಕ ಬಂದೀ? ಈಗ್ಯಾಕ ನೆಪ್ಪ ತಗದಿದ್ದಿ ಅವರದು?"

"ಬಸವಂತೀ, ನೀ ನನ್ನ ತಲ್ಯಾಗಿನ ಮಬ್ಬ ಇಳಸಾಗ, ನಿನ್ನ ಕಣ್ಣಾಗ ಕಣ್ಣಿಟ್ಟು ನೋಡತಿದ್ದೆ. ಆದರ ಬೆಳಕನsು ಪುಟ್ಟಪೂರಾ ಕುಡದಬಿಟ್ಟೆ. ನಿನ್ನ ನಗೀ, ಮಾತಿನ ಚಮಕಾ, ಸೀರೀ ಸೆರಗಲೆ ಮಾರೀ ಒರಸೂ ಅಂತಃಕರಣಾ. ಬಸವಂತೀ, ನಿನಗ ಫುಕ್ಕಟಾಗಿ ಬಂದಿಲ್ಲಂತ ಅನಿಸ್ತೈ. ರಾಧಾಕಾಕೂನ ಎಲ್ಲಾ ತೇಜನೂ ನಿನ್ನಲ್ಲೆ ಅದsು ಅನೂ ಭಾಸ ಆಗಲಿಕ್ಕೆ ಹತ್ತಿತು. ಅವಕ್ಕ ಕೇಳಿದ. ನಾ ಝಳಕಾ ಮಾಡತೀನಿ ಬಸವಂತಿ. ಹೊರಗ ಗಾಡೀನೂ ಇಲ್ಲಾ. ಖಾದರನೂ ಇಲ್ಲಾ. ರಾತ್ರೀ ಅಂವಾ, ಕಾಕಾ ಅವರಲ್ಲೇ ಮುಕ್ಕಾಂ ಹಾಕಿಧಾಂಗ ಕಾಣಸ್ತದ. ಈಗ ಬಂದರೂ ಬಂದಾನು. ನಮ್ಮ ಫರಾಳ ಬಗೀಹರಿಯೂದರಾಗ ಅಂವಾ ಬಂದಾ ಠೀಕಾತು. ಇಲ್ಲದಿದ್ದರ ನಾ ಒಬ್ಬನೇ ಸ್ಟೇಶನಕ್ಕ ಹೋಗತೀನಿ. ನೀ ಇಲ್ಲೇ ಇರೂ. ಇಬ್ಬರೂ ಹೋದೇವಂದರ ಅವರಿಗೆ ದಿಗಲು ಆಗಿರಬಾರದು. ಹೊತ್ತ ಇದ್ದರ ನೀವೆಲ್ಲಾರೂ ಕೂಡಿಕೊಂಡು ಸ್ಟೇಶನ್ನಕ್ಕ ಬಂದಬಿಡರಿ."

"ಅದsು ವಾಜಿಮಿ ದಾದಲ್ಯಾ. ಕೀಲಿ ಬಿದ್ದ ಬಾಕಲಾ ನೋಡಿ. ಹೊತ್ತ ಹೋಂಡೂದರಾಗ. ಪಕ್ಕಿ ಎಲ್ಲೋ ಹಾರಿಹೋದೂ ಅಂದಿರಬಾರದು"

ಬಸವಂತಿ ನಗುತ್ತ ಹೇಳಿದಳು.

ನನ್ನ ಕಾಕಸ್ನಾನವೂ ಮುಗಿಯಿತು. ನಂತರ ಇಬ್ಬರ ಫರಾಳವೂ ಮುಗಿಯಿತು.

ಆದರೂ ಗಾಡಿಯು ಪತ್ತೇ ಇಲ್ಲ. ಮೋಟರಿನ ದಾರಿಕಾಯುತ್ತ ನಿಂತರೆ ಖಚಿತವಾಗಿ ಗಾಡಿ ತಪ್ಪುತ್ತಿತ್ತು. ಅರ್ಧ ಸೇದಿದ ಸಿಗರೇಟನ್ನು ಬಿಸಾಡಿ, ಬಸವಂತಿಯ ಬಳಿಗೆ ಹೋಗಿ, ಅವಳ ಎರಡೂ ಕೈಯನ್ನು ನನ್ನ ಕೈಯಲ್ಲಿ ತೆಗೆದುಕೊಂಡು, ಕಣ್ಣಿಗೊತ್ತಿ ಕೊಂಡು ಹೇಳಿದೆ:

"ಬಸವಂತೀ, ಹೊರಡತೀನಿ ಇನ್ನs."

"ಹೋಗಿ ಬರತೀನಿ ಅನ್ನು ದಾದಲ್ಯಾ."

"ಇಲ್ಲೆ ಬರಲಿಕ್ಕಿಲ್ಲ ಬಸವಂತೀ. ಇನ್ನ ಇಬ್ಬರದೂ ಭೆಟ್ಟಿ ಆದರ ಊರಾಗೇ ಆಗೂದು."

"ವಾಡೇದಾಗ ಅನ್ನು ದಾದಲ್ಯಾ. ನೆಟ್ಟಗ ಬಸವಂತೀ ವಾಡೇಕ್ಕs ಬಾ. ಬ್ಯಾಡ ಅನೂ ಛಾತೀ ಯಾರಿಗೂ ಆಗ್ಬಾಂಗಿಲ್ಲಾ. ನಂದೂ ಈ ಮನೀ ರಿಣಾ ಮುಗೀತ ಬಂದೈತಿ. ಛಾಳ ಆದರ ಇಲ್ಲಿ ಎಂಟ ದಿನಾ ನಿಂತೇನು. ಆದೂ ನೇಮ ದ್ದಲ್ಲಾ. ನೀ ಮುಂಬೈಲಿಂದ ಸಾಬರ ಜೋಡಿ ತಿರಿಗಿ ಬಂದರೂ ನಮ್ಮ ಭೆಟ್ಟಿ ಇಲ್ಲಿ ಆಗೂದಿಲ್ಲಾ. ಇವರು ನಿನ್ನ ಮ್ಯಾಲ ಕತ್ತೀ ಮಸದs ಬರತಾರು. ನಾನೂ ಕುಡ ಗೋಲಕ ನೀರ ಉಣಸಬೇಕಾಗತೈತಿ. ಅದಕ ವಾಡೇನs ಠೀಕ ತಾವಲಿ. ಕುಡಗೋಲ ಬೀಸಾಕ ಐಸ-ಫೈಸ ಜಾಗ ಐತಿ ಅಲ್ಲೆ. ಮುಂಬೈಯಾಗ ಜರಾ ಜಪ್ಪಿಸಿ ಇರೂ ದಾದಲ್ಯಾ. ಇವರದೇನು ಅಲ್ಲಿ ಅಂಜಿಕಿಲ್ಲ ನಿನಗ. ವಿಶ್ವಾಸನ್ನs ಸಂಬಾಳಸು. ತುಳಸಿಗಿ ಹೇಳು: ಬಸವಂತಿ ನಿನ್ನ ನೆನಸಿದಲಂತ. ಸಾಬರಿಗಿ, ವಿಶ್ವಾಸಗ ಭೆಟ್ಟೀ ಮಾಡಿಸಿಗೊಡಬ್ಯಾಡ ದಾದಲ್ಯಾ. ಹೀಂಗ್ಯಾಕ ಮಾಡಿದೀ ಅಂತs ಅಂವಾ ಕೇಳಿದರ ನನ್ನ ಹೆಸರ ಹೇಳು. ಬಸವಂತೀ ತನ್ನ ಆಣೀ ಹಾಕಿದ್ಲಂತ ಹೇಳು. ಅಂವಗ ನನ್ನ ಮನಸ್ಸು ಗೊತ್ತಾಗತೈತಿ. ಸೋನಕ್ಕವರಕಿಂತಾ ನನ್ನ ಮುಂದs, ಅಂವಾ ಮನಸ ಬಿಚ್ಚಿ ಮಾತಾಡತಾನ. ಅಲ್ಲೆ ಜರಾ ಗಡಿಬಿಡಿ ಆದರ – ಆಗ್ಬಾಂಗ ಕಾಣಿಸಿದರ, ನನ್ನ ಕಳಸಂತ ಸುರೇಶಗ ತಾರ ಕಳಸು. ನಾ ಬಂದು ಎಲ್ಲಾ ಜೋಕಮೀ ತಗೋತೀನಿ ಮೈಮ್ಯಾಲ. ಇಳೀಲಾಕ ನನಗ ತುಳಸೀ ಮನೀ ಐತಿ. ನನಗೂ ಆರೇ ಮಾತಾಡಾಕ ಬರತೈತಿ. ಜಡಾ ಹೋಗ್ಬಾಂಗಿಲ್ಲಾ. ವಿಶ್ವಾಸ ಅಟಾಪಿಸಿದರ ನನಗ ಅಟಾಪಸಬೇಕು. ಜರೂರ ತಿಳಸ ದಾದಲ್ಯಾ. ಅಲ್ಲೀ ಸುದ್ದೀ ಫೋನ್‌ದಾಗ ಮಾತಾಡ್ತಾರಂತಲಾ, ಲಗ್ಗನs ಜವಾಸ್ತಿದ್ದರ ಸುರೇಶನ ಜೋಡೀ ಮಾತಾಡಿಬಿಡೂ. ಹೊಂಡ ದಾದಲ್ಯಾ ಇನ್ನs. ಹೊತ್ತ ಆಗಾಕ ಹತ್ತ್ಯಾ. ಗಾಡೀ ಬರ್ಬಾಂಗ ಕಾಣೂದಿಲ್ಲಾ. ಬಂದರ,

ನಾನೂ ನಿನ್ನ ಬೆನ್ನಿಗೆ ಶೇಶನ್ನಕ್ಕ ಬರತೀನಿ"

ಬಿಡಲಾರದ ಮನಸ್ಸಿನಿಂದ ಬಸವಂತಿಯನ್ನು ಅಗಲಿ, ನಾನು ಮನೆಯ ಗೇಟು ದಾಟಿ ಬೀದಿಗಿಳಿದೆ. ನಾನು ಮರೆಯಾಗುವವರೆಗೂ ಬಸವಂತಿ ಗೇಟಿನಲ್ಲಿ ನಿಂತು ನನ್ನನ್ನು ನೋಡುತ್ತಿದ್ದಳು. ನಾನೂ ತಿರುಗಿ ತಿರುಗಿ ಅವಳನ್ನು ನೋಡುತ್ತಿದ್ದೆ. ದೂರದ ಮೂಲೆಯಲ್ಲಿ ಹೊರಳಿ ನಾನು ಮರೆಯಾಗಲಿದ್ದೆ. ಬಸವಂತಿ ಕೈ ಎತ್ತಿ ಹೋಗಿ ಬಾ ಎಂದು ಸೂಚಿಸಿದಳು. ನಾನೂ ಕೈ ಎತ್ತಿ ಪ್ರತಿಸಾದ ಮಾಡಿದೆ. ಒಬ್ಬರಿಗೊಬ್ಬರು ಮರೆಯಾದೆವು.

ದಾರಿಯಲ್ಲಿ ಸಿಕ್ಕ ಒಂದು ಟಾಂಗಾ ಹತ್ತಿ ನಾನು ಸ್ಟೇಶನ್ನಿಗೆ ನಡೆದೆ.

ಬಸವಂತಿ ನನ್ನನ್ನು ಜಾಗರಿಸಿ ಕರ್ತವ್ಯದ ಅರಿವು ಮೂಡಿಸಿದ್ದಳೆಂದು ನಾನು ಮುಂಬೈಗೆ ನಡೆದಿದ್ದೆ. ನನಗೆ ಮುಂಬೈ ಆಶೆ ಅಳಿದಿತ್ತು. ಸಾಹೇಬರ ಕ್ಷೇಮಚಿಂತನೆ ಜೀಡವಾಗಿತ್ತು. ಶ್ಯಾಮರಾಯನ ಪತನದ ಸೂತಕ ನನ್ನನ್ನು ಮುಟ್ಟಿದಂತಿತ್ತು. "ತೇನ ವಿನಾ – ತೇನ ವಿನಾ" ಎನ್ನುವಂತೆ ಬಸವಂತಿಯ ವಿನಾ ನನ್ನ ಜೀವನವೇ ಬರಜಾದವಾಗುವಂತೆ ಇತ್ತು. ಓದು, ಅಭ್ಯಾಸ, ಪರೀಕ್ಷೆಯ ಸಂಭ್ರಮವೂ ಅಳಿದಿತ್ತು. ಬಸವಂತಿಯ ಸ್ವರ್ಗ-ನರಕ, ಪಾಪ-ಪುಣ್ಯದ ಕಲ್ಪನೆ ನನಗೆ ತೀರ ಪ್ರತಿಗಾಮಿಯೆನಿಸತೊಡಗಿತು. ಮೀಸಲು ಮುರಿದ ಮೈಯನ್ನು ನನಗೆ ನಿವೇದಿಸಲು ಬಸವಂತಿ ಅಳುಕುತ್ತಿದ್ದ ನೀತಿಗೆ ನಾನು ರೋಸಿದೆ. ಶ್ಯಾಮರಾಯನನ್ನು ಕೂಡುವದಕ್ಕಿಂತ ಮುಂಚೆ ಬಸವಂತಿ ಸಂಸಾರವನ್ನು ಮಾಡಿದ್ದಳು. ಒಬ್ಬ ಗಂಡನ ಹೆಂಡತಿಯಾಗಿದ್ದಳು. ಆಗಲೇ ಅವಳ ಮೈಯ ಮೀಸಲು ಮುರಿದಿತ್ತು......ಮುರಿದಿರಬೇಕು. ಅದನ್ನೇ ಅವಳು ಶ್ಯಾಮರಾಯನಿಗೆ ಎಡೆ ತೋರಿಸಿದ್ದಳು. ಆಗ ಅವಳ ಮನಸ್ಸು ಅಳುಕಿರಲಿಲ್ಲ. ದಾದಲ್ಯಾನಿಗೆ ಅರ್ಪಿಸಬೇಕಾದಾಗ ಮಾತ್ರ ಅದು ಎಂಜಲಾಗಿ, ಹುಳುಕ ಬೋರೇಕಾಯಿಯಾಗಿ ಅವಳಿಗೆ ಕಂಡಿತು. ಯಾಕೆ?... ಯಾಕೆ?...

ಬಸವಂತಿಯನ್ನು ಜಗ್ಗಿದ್ದರೆ ಅವಳು ನಕಾರ ಹೇಳುತ್ತಿರಲಿಲ್ಲ. ಅದೇಕೆ? ಅವಳೇ ಧೈರ್ಯವಾಗಿ ಹೇಳಿದಳಲ್ಲ "ದಾದಲ್ಯಾ, ಮದಾ ಇಳಿಸಿಗೊಂಬೂ ಹುಕೀ ಇದ್ದರ ಒಂದ ಕೈ ನೋಡಿಬಿಡೂ" ಎಂದು. ದಾದಲ್ಯಾ ಅವಳ ಆವ್ಹಾನವನ್ನು ಸ್ವೀಕರಿಸುವ ಎದೆ ಮಾಡಲಿಲ್ಲ. ಆಗ ನಾಯಿಯಂತೆ ಬಾಲ ಮುಗಚಿಕೊಂಡು ಅವನತಮುಖನಾಗಿ ಕುಳಿತ. ಅವಳ ಅಗ್ನಿತೇಜದ ತಾರೀಫು ನಡೆಸಿದ. ದಿವಾಭೀತನಾಗಿ ಕಣ್ಣುಮುಚ್ಚಿ ತಣ್ಣಗಾದ.

ಅಂದು ರಾತ್ರಿ. ವಾಡೆಯಲ್ಲಿ ಬಸವಂತಿ ಹೇಳಿದ್ದಳು: "ದಾದಲ್ಯಾ, ನನ್ನ ಮನಸ್ಸು ನಿನಗ ಒಬ್ಬಗರs ತಿಳೀತು. ಇನಾ ತನಕಾ ಯಾರಿಗೂ ಅದರ ಅರ್ಥ ಆಗಿದ್ದಿಲ್ಲಾ" ಅಂತ. ಕದಾಚಿತ್, ಅಂದೇ ಬಸವಂತಿ, ಒಳಗೇ ತನ್ನ ಮನಸ್ಸನ್ನರಿತ ದಾದಲ್ಯಾನಿಗೆ ಅದರ ನೈವೇದ್ಯ ಒಪ್ಪಿಸಿರಬೇಕು. ದಾದಲ್ಯಾ ಅಂದು ಆ ನೈವೇದ್ಯ ಸ್ವೀಕರಿಸಿದ್ದ. ಆ ಅರ್ಪಣೆಯಲ್ಲಿ – ಆ ಸ್ವೀಕಾರದಲ್ಲಿ ಮಹೋನ್ನತಿ ಇತ್ತು. ದಿವ್ಯ ಮನೋಭಾವವಿತ್ತು. ಬಸವಂತಿ ಅಂದಿನಿಂದ ಅದರ ಮಡಿಯನ್ನು ಕಾಯುತ್ತ ಬಂದಿದ್ದಳು. ಆ ಪಾವಿತ್ರ್ಯದ ಸಾಮರ್ಥ್ಯವೇ ಅವಳಿಗೆ ರಕ್ಷೆಯಾಗಿತ್ತು. ಆ ರಕ್ಷೆಯ ಬಲದಿಂದ ಅವಳು ದಾದಲ್ಯಾನನ್ನು ದೈಹಿಕ ಕೇಳಿ-ಭೋಗಕ್ಕೆ ಆಹ್ವಾನಿಸಿದ್ದಳು. ಆದರೆ ತೊಗಲ ತೀಟಕ್ಕೆ ಹಪಾಪಿಸಿದ ದಾದಲ್ಯಾ, ಬಸವಂತಿಯ ಕರೆಗೆ ಓ ಕೊಡುವ ಸಾಮರ್ಥ್ಯ ಕಳೆದುಕೊಂಡಿದ್ದ. ಬಸವಂತಿಯ ನೇತ್ರದೀಪ್ತಿಯಿಂದ ದಾದಲ್ಯಾನ ಚರ್ಮದಾಮಿಷ ಭಸ್ಮೀಭೂತವಾಗಿತ್ತು.

ಕುಬೇರ-ವಿಭವ ಸೂರೆ ಮಾಡಿ ಶ್ಯಾಮರಾಯ ಬಸವಂತಿಯ ಮನಸ್ಸನ್ನು ಗೆದೆಯಲಿಲ್ಲ. ಎರಡು ಭಾಂಡು – ಎರಡು ರೊಟ್ಟಿಗೆ ಚರ್ಮವೇಷ್ಟಿತ ಅಸ್ಥಿಪಂಜರ ಪಡೆದಿದ್ದ. ಅವನ ಯೋಗ್ಯತೆಗೆ ಸರಿಯಾದ ಪ್ರತಿಫಲ ಅವನಿಗೆ ದೊರಕಿತ್ತು. ಆದರೆ ಬಸವಂತಿ, ತಾನಾಗಿಯೇ ಪರಮ-ಮಂಗಲ, ಅನುಪಮ-ದಿವ್ಯವಾದ ಮನಸ್ಸನ್ನು ದಾದಲ್ಯಾನಿಗೆ ಭಕ್ತಿಪುರಸ್ಸರವಾಗಿ ಅರ್ಪಿಸಿದ್ದಳು. ಆ ಅರ್ಪಣೆಯಲ್ಲಿಯ ದೈವಿಕತೆ ಅವಳಿಗೆ ಅರ್ಥವಾದಂತೆ ದಾದಲ್ಯಾನಿಗೆ ಅರ್ಥವಾಗಲಿಲ್ಲ. ದಾದಲ್ಯಾನ ಕಣ್ಣಪರೆಯನ್ನು ಹರಿಯಲೆಂದು, ಬಸವಂತಿ ಮೈ ನೆಕ್ಕಿಬಿಡುವಂತೆ ಆಹ್ವಾನಿಸಿ ಅಂಜನವೆಸೆದಿದ್ದಳು. ಅವಳ ಅಂಜನ-ಸಿಂಚನದಿಂದ ದಾದಲ್ಯಾನ ಭ್ರಮನಿರಸನವಾಗಿತ್ತು. ಮೈಮೂಸುವ ಮದವಳಿದಿತ್ತು.

ಸೋನಕ್ಕನ ಮಂಗಲಕ್ಕಾಗಿ, ವಿಶ್ವಾಸನ ಯಶಸ್ಸಿಗಾಗಿ, ಪಂತಕುಟುಂಬದ ಕ್ಷೇಮಕ್ಕಾಗಿ, ತಾನು ಬದ್ಧಕಂಕಣನಾದ – ಚಾಪಹಸ್ತನಾದ ಪ್ರಜ್ಞೆ ದಾದಲ್ಯಾನಿಗೆ ಬರತೊಡಗಿತು. ಸಾಗರದ ಸಾಕ್ಷಿಯಾಗಿ, ವಿಶ್ವಾಸ-ತುಳಸಿಯರ ಸಮಕ್ಷಮದಲ್ಲಿ, ಜೀವ ಪಣಕ್ಕಿಟ್ಟು, ಸೆಣಸುವ ಪಣವನ್ನು ಹೊತ್ತ ಪ್ರಜ್ಞೆ ಅವನಲ್ಲಿ ಜಾಗರಿಸಿತು. ಗೋವಿಂದಭಟ್ಟನ ಜಡ್ಡಿನ ಕಾರಣ ಸಾರಿ ಅಪರಾತ್ರಿಯಲ್ಲಿ ತಾನು ಪುಣೆಗೆ ಬಂದದ್ದು ಬಸವಂತಿಯ ಮೈ ನೆಕ್ಕಲಿಕ್ಕಲ್ಲ – ಮದಭಾರವಿಳಿಸಿಕೊಳ್ಳಲಿಕ್ಕಲ್ಲವೆಂಬ ಅರಿವು ಮೂಡಿತು. ತನ್ನ ಹೀನಮಾನಸವನ್ನು ಅರಿತೇ ಬಸವಂತಿ ಹೇಳಿರಬೇಕು:

"ನಾನ್ಯ ಬೇಕಾರ ಮುಂಬೈಕ ಬರತೀನಿ. ವಿಶ್ವಾಸ ಅಟಾಪಿಸಿದರ ನನಗ್ಯ ಅಟಾಪಿಸಬೇಕು." ದಾದಲ್ಯಾ ನಿನ್ನ ಲಘುತ್ವ, ಕ್ಷುಲ್ಲಕತ್ವ ಬಸವಂತಿಗೆ ಆಗಿರಬೇಕು.

"ವದಲ್ಯಾ, ನೀ ನನ್ನ ಬೆನ್ನಿಗಿದ್ದರ ನನಗ ಹತ್ತ ಮಂದಿ ಗಂಡಸರ ಬಲಾ ಇದ್ದ್ಹಾಂಗ"

ಎಂದು ಅವಳು ನುಡಿದಾಗ ನಿನ್ನ ಹೀನಮಾನಸದ ಕವಾಟ ತೆಗೆದಂತಿರಲಿಲ್ಲ. ಅಲ್ಲಿಯ ನರಕದ ದೃಶ್ಯ ಅವಳ ಕಣ್ಣಿಗೆ ಕಂಡಿರಲಿಕ್ಕಿಲ್ಲ. ನೀನು – ದಾದಲ್ಯಾ. ಅದರ ದರ್ಶನ ಮಾಡಿಸಿ ಬಸವಂತಿಯ ದೃಷ್ಟಿಯಲ್ಲಿ ಎಂಥ ಕ್ಷುಲ್ಲಕ ಕೀಟವಾಗಿ ಕಂಡೆ. ನಿನ್ನ ಪಣ, ನಿನ್ನ ಪ್ರತಿಜ್ಞೆ, ನಿನ್ನ ತ್ಯಾಗದ ಜಂಬ, ನಿನ್ನ ಚಾಪಸಾಮರ್ಥ್ಯ ಎಲ್ಲಿ ಅಳಿದಿದ್ದವು? ಶಕೂ ಜ್ಞಾನದಾನಮಾಡೆಂದು ಬಂದಾಗ ಹೀನವೃತಿಯ ದಾನ ಮಾಡಿದ್ದೆ. ಅದರ ಕ್ಷಾಲನದ ಸಮಯದಲ್ಲಿ ವೀರಪ್ರತಿಜ್ಞೆ ಮಾಡಿದ್ದೆ. ನಿನ್ನನ್ನು ಕೂಸಿನಂತೆ ತೊಡೆಯ ಮೇಲೆ ಹಾಕಿಕೊಂಡು ಅಂತಃಕರಣದ ಧಾರೆ ಹಿಡಿದು. ವಾತ್ಸಲ್ಯದ ಸೆರಗು ಹೊಚ್ಚಿದ ಬಸವಂತಿಯ ತಾಯ್ತುತನದಲ್ಲಿ ನೀನು ಏನು ಕಂಡೆ? ಯಾಕೆ ಕಂಡೆ? ಬಸವಂತಿ, ಈ ಕರಿಕೆ-ಕಳ್ಳಿಯನ್ನು ಬೇರುಮಟ್ಟ ಕಿತ್ತೆಸೆದುಬಿಟ್ಟಿದ್ದಾಳೆ. ಮುಂದಿನ ಜನ್ಮದಲ್ಲಿ, ಪ್ರೀತಿಪಾರಿಜಾತವನ್ನು ಹಚ್ಚಲು ಇಂದು ಎದೆಯನ್ನು ಹಸನ ಮಾಡಿಕೊಂಡಿದ್ದಾಳೆ. ಆದರೆ ನಿನ್ನ ಎದೆಯಲ್ಲಿ ಇನ್ನೂ ರಟಗಳ್ಳಿಯ ಖಾಂಡವವೇ ಬೆಳೆದುನಿಂತಿದೆ. ಇದರ ಸಮೂಲ ನಾಶಕ್ಕೆ – ಮಹಾದಹನಕ್ಕೆ ಪಾರ್ಥನನ್ನು ಆವ್ಹಾನಿಸು. ಅದರ ಅಂತ್ಯಕ್ಕೆ ಅವನನ್ನು ಪ್ರಾರ್ಥಿಸು.

ಸ್ಟೇಶನ್ನು ಬಂದಿತೆಂದು ಟಾಂಗಾದವನು ಹೇಳಿದಾಗ, ನಾನು ಈ ಲೋಕಕ್ಕೆ ಮರಳಿದೆ. ಅವನಿಗೆ ಬಾಡಿಗೆಯ ಹಣ ಕೊಟ್ಟು ತಿಕೀಟ ಆಫೀಸಿನ ಕಡೆಗೆ ಹೆಜ್ಜೆ ಹಾಕಿದೆ.

"ದಾದಲ್ಯಾಭಡಜೀ.... ಓ ದಾದಲ್ಯಾಭಡಜೀ.... ಎಲ್ಲೆ ಹೋಗತೀರಿ. ನಿಂದರ್ರಿ. ನಿಮ್ಮ ತಿಕೀಟ ನಾವು ತಗದೇವು. ಯಾ ದಾರೀಲೇ ಬಂದರಿ ಸ್ಟೇಶನ್ನಕ್ಕ? ದಾರ್‍ಯಾಗೆಲ್ಲ್ಯೂ ಕೂಡಲೇ ಇಲ್ಲಲಾ?"

ಖಾದರ್ ಕೂಗಿ ಹೇಳಿದ್ದು ಕೇಳಿಸಿತು.

"ಅರೇ ಮೀಯಾ. ನೀ ಯಾವಾಗ ಬಂದೀ? ಸುರೇಶ, ಬಸವಂತಿ ಬಂದಾರೇನು? ನಾ ಹೋಗೂದು ಅವಗ್ಹ್ಯಾಂಗ ತಿಳೀತು? ಖಾದರ್, ಇಡೀ ರಾತ್ರೀ ನಿನ್ನ ಪತ್ತೇನ್ಯ ಇಲ್ಲಾ. ಎಲ್ಲೆ ಕಾಕಾ ಅವರಲ್ಲೆ ನಿಂತೇನು?"

"ಘನ ತಿಪಲಾತ ಬರ್ರಿ ನಿನ್ನೆ. ಇಡೀ ರಾತ್ರೀ ಗುದ್ಯಾಡಿದಿನಿ ಗಾಡೀ ಜೋಡೀ. ಸುರೇಶಸಾಬರ ಬಂಗಲೇಕ ಇನಾ ಹತ್ತ ಮಾರ ಇರೂದಕ ಗಾಡೀ ಪಂಕ್ಚರಾತು. ಇದರವ್ವನ ಮಳೀ ಒಂದು ಟಿಪಕಾಸಿಗೊಂಡು ಕೂತಿತ್ತು. ಒಂದs ಸವನs ಹೊಡ್ಯಾಕ ಹತ್ತಿತು. ಅಪರಾತ್ರ್ಯಾಗ ಯಾರ ಈ ಹಾದೀ ಹೆಣಾ ಮುಂದ ಫಕಲಾಸಲಿಕ್ಕ ಬರಾವ್ರು? ಕಾಕಾ ಅವರ ಮನ್ಯಾಗಿಂದs ಒಂದು ತಾಡಪತ್ರೀ ತಂದು ಹೆಣದ ಮ್ಯಾಲ ಹೊಚ್ಚಿ ನಾನೂ ಕೂತಿನಿ, ಅದರ ಜೋಡೀ. ನಾಕ ಬಡದಾಗ ಜರಾ ಮಳೀ ಹೊರಪಾತು. ಪಂಕ್ಚರ ತಗದು ಹಾದಿಗೆ ಹತ್ತಬೇಕಾದರ ಆರ ಬಡೀತು. ಅಷ್ಟ ಹೊತ್ತಿಗೆ ಸುರೇಶಸಾಬರೂ ಬಂದರು. ನಾವು ಬಂಗಲೇಕ ಬರೂದಕ ನೀವು ಸ್ಟೇಶನಕ್ಕ ಹೋದದ್ದು ತಿಳೀತು. ಮನೀಗೆ ಕೀಲೀ ಜಡದವರs ನೆಟ್ಟಗ ಹೀಂಗs ಬಂದೇವು. ನಿಮಗ ತಡಾ ಆಗಬಾರದಂತ ತಿಕೀಟನೂ ತಗದ ಇಟ್ಟೇವು. ನಡೀರಿ ಒಳಗ. ಸುರೇಶಸಾಬರು – ಸಣ್ಣಬಾಯೀ ದಾರೀ ಕಾಯ್ತಾರ ನಿಮ್ಮದು."

ಸುರೇಶ, ಬಸವಂತಿ ದಾರಿ ಕಾಯುತ್ತ ಗಾಡಿಯಲ್ಲಿ ನನ್ನ ಜಾಗ ನಿರ್ಧರಿಸಿ ಕುಳಿತಿದ್ದರು. ನನ್ನನ್ನು ನೋಡಿದ ಕೂಡಲೇ ಸುರೇಶ —

"ದಾದಲ್ಯಾ, ಟಾಂಗಾದಾಗ ಬಂದ್ಯೋ, ಏನ ಎಕ್ಕಾದಾಗ ಬಂದ್ಯೋ? ಮಗನs, ಗಾಡೀ ಸೆಡೂಲ್ಡ ಟಾಯಿಮ್‌ಕ್ಕ ಬಿಡತಿರತದ ಅನ್ನೂದು ಠಾಂವಿಕ್ಯಾದ ಇಲ್ಲೋ? ನಿತ್ಯಾವಳೀ ಪೂಜೇಮನೀಗೆ ಬೇಕಾದಾಗ ಹೋಧಾಂಗಂತ ತಿಳದೇನು? ರಾತ್ರೀ ನಮ್ಮ ಜೋಡೀ ಬಂದಿದ್ದ್ಯಂದರ ಠೀಕ ಆಗತಿತ್ತು. ಗಾಡೀ ದಬ್ಬಲಿಕ್ಕ ಖಾದರಗ ಒಂದ ಗಿರಾಕಿನ್ಯರs ಸಿಗತಿತ್ತು. ನೀ ಭಡಜೀ ಬಚ್ಚಾ – ಇಂಥಾ ಲಿಗಾಡದಾಗ ಸಿಗಾಪನs? ಇದ್ನೋಡ ದಾದಲ್ಯಾ, ನೀ ಮುಂಬೈಯಾಗ ಏನ ಮಾಡಬೇಕೂ ಅನೂದನ್ನ ಬಸವಂತಿ ಹ್ಯಾಂಗೂ ಹೇಳೇ ಇದ್ದಾಳ. ನೆಟ್ಟಗs ಸೆಕ್ರುಟರೀ ಏಟಕ್ಕs ಹೋಗು. ಸಾಹೇಬರು ಅಲ್ಲೇ ಸಿಗತಾರ. ಆ ಪತ್ರದ್ದು ಏನ ಭಾನಗಡೀ ದಾದಲ್ಯಾ? ಈಗ ಬಸವಂತಿ ಹೇಳಿದಳಂತ ತಿಳೀತು. ನಮಗೇನು ಅದರಾಗಿನ ಸುದ್ದೀನs ಹೇಳಿದ್ದಿಲ್ಲಾ? ನಿನ್ನ ಹತೀಲಿದ್ದ 'ಪ್ರೂಫ್'ಊ ಏನ 'ಜೆನ್ಯೂಯಿನ್' ಹೌದೋ ಅಲ್ಲೋ ನೋಡ ಮತ್ತs? ದಾದಾನ್ನು ಹಜಾರ ಕಂತ್ರಾಟಾ ತಮ್ಮಾ, ತಮ್ಮಾಜೀ ಕಡಿಂದ ಬರೆಸಿದ್ರೂ ಬರೆಸಿರುವಂವಾ."

"ಸುರ್ಯಾ, ಇದ್ನೋಡು. ನಿಮ್ಮ ದಾದಾನ ಹಸ್ತಾಕ್ಷರಾ. ಸ್ವದಸ್ತೂರ ಖುದ್ದ –

ಎಸ್. ಜಿ. ಪಂತ ಅನ್ನೂ ಸಹೀ."

ಶ್ಯಾಮರಾಯನ ಕಾಗದವನ್ನು ನಾನು ಸುರೇಶನ ಕೈಯಲ್ಲಿಟ್ಟೆ. ಅದನ್ನು ನೋಡಿ ಬಸವಂತಿ —

"ದಾದಲ್ಯಾ. ಈ ಪಾಕೀಟಾ ಬಾವರನ ಕಡಿಂದ ಟಪಾಲದಾಗ ಹಾಕಸಂತ, ಇವರು ನನ್ನ ಕಡೀ ಕೊಟ್ಟಿದ್ದರು. ಅಂದ ಬಾದರಾ ಹರ್‍ಯಾಗೆದ್ದು ಹೋದಾಂವಾ ಸಂಜೀಕಡೀ ಬಂದಾ. ಮರದಿನಾ ಟಪಾಲದಾಗ ಹಾಕಿಸಿದರಾತಂತ, ನಾನs ಮೇಜಿನ ಖಾನೇದಾಗ ಇಟ್ಟಿದ್ದೆ. ಮರದಿನಾನs ನೀನು ವಿಶ್ವಾಸನ್ನ ಕರಕೊಂಡು ಬಂದಿದ್ದಿ. ನೆನಪ ಐತೇನು? ನಿನಗ ಹ್ಯಾಂಗ ಸಿಕ್ಕಿತು ಈ ಕಾಗದಾ? ಇದು ಟಪಾಲದಾಗ ಬಿದ್ದಿರಬೇಕಂತs ಇವರ ಭರೋಸಾ. ಇದರಾಗs ಐತೇನು ಇವರ ಜೀಂವಾ? ನಾನೂ-ವಿಶ್ವಾಸ ದವಾಖಾನಿಗೆ ಹೋದಾಗ, ನೀ ಮನೀ ಹುಡಿಕಿದಿ ಕಾಣತದ? ಅದಕಂದಲ್ಲೇ ಗಮಜಲೆ ಹೇಳತಿದ್ದಿ – ಇವರ್ನ ಗಜಮು ನಿಂದರಸ್ತೀನ್ಯಂತ."

ಬಸವಂತಿ ಇನ್ನೂ ಮಾತಾಡುವವಳಿದ್ದಳು. ಸುರೇಶ ಪತ್ರವನ್ನು ಓದಿ ಮುಗಿಸಿ, ತೀರಾ ಹುಕಿಯಲ್ಲಿ ಬಂದು —

"ಮಸ್ತ 'ಪ್ರೂಫ್' ಅದs ದಾದಲ್ಯಾ. ದಾದಾ ತನ್ನ 'ಡೆಥ್-ವಾರಂಟ್'ಕ್ಕ ತಾನೇ ಸಹಿ ಮಾಡ್ಯಾನ. ಸಾಹೇಬರು ಈ 'ಏನ್‌ಕ್ವಾಯರಿ'ಯ ಪ್ರಕರಣದಾಗಿಂದ ಪಾರಾದರು. ಅವರು ಈ ಪತ್ರಾ ಚೀಫ ಇಂಜಿನಿಯರ ಮುಂದ ಹಿಡದರ ಸಾಕು, ಅವರಿಗೆ ಇಜಾ ಆಗೂದು ತಪ್ಪೀತು. ದಾದಾ 'ಬ್ಲ್ಯಾಕ್‌ಲಿಸ್ಟಿ'ನ್ಯಾಗೂ ಬಿದ್ದಾನು. ಆದರ ದಾದಲ್ಯಾ, ಸಾಹೇಬರು ಈ ಪತ್ರಾ ನೋಡಿದರs ಅರೆಜೀವಿ ಆಗತಾರ. ಅವರಿಗೆ ದಾದಾ ದಗಾ ಕೊಟ್ಟ 'ಶಾಕ್' ಕೂಡತದ. ಅವರ ಸ್ವಭಾವಾ ನನಕಿಂತಾ ನಿನಗ ಹೆಚ್ಚಿಗೆ ಗೊತ್ತ ಅದs. ಎಂಥಾ ಹೆಣ್ಣಗರಳಿನವರು ಅನೂದು ಠಾಂವಿಕ್ಯದ. ಪ್ರಸಂಗ ತಮಗ ತೀರಾ 'unfavourable' ಅದs ಅಂತ ತಿಳದರೂ, ಅದರಾಗಿಂದ ಪಾರಾಗಲಿಕ್ಕೆ, ಅವರು ಈ ಪತ್ರದ ಉಪಯೋಗ ಮಾಡಿಕೊಂಬೂದಿಲ್ಲಾ. ದಾದಾಗೇ ಈ ಪತ್ರಾ ತೋರಿಸಿ, ಅವನ ಎದರಿಗೇನs ಇದನ್ನ ಹರದು ಹಾಕ್ಯಾರು. ಏನೇ ಆದರೂ ದಾದಾಗ ಈ ಪತ್ರದ ಸುದ್ದಿ ತಿಳೀತದ. ಈ ಪತ್ರ ನಿನ್ನ ಕೈಗೆ ಬರ ಬೇಕಾದರ, ಬಸವಂತಿ ತನಗ ದಗಾ ಕೊಟ್ಟು, ನಿನಗ ಸಾಮೀಲಾಗ್ಯಾಳ ಅನೂ ಖಾತ್ರೀ ಆಗತದ ಅಂವಗ. ಸಾಹೇಬರ ಮ್ಯಾಲಿನ ಸಿಟ್ಟು ನಿಮ್ಮ ಮ್ಯಾಲ ತಿರಗತದ. ಸಾಹೇಬರು, ನೀನು, ಬಸವಂತಿ ಮೂರೂ ಮುಂದಿಗೂ ಅವನ ಸೇಡಿನ ಝಳಾ

ಬಡೀದs ಪೋಗೂದಿಲ್ಲಾ. ಮೊದಲ ಅಮುತಿ ಬಸವಂತಿ ಆಗತಾಳ. ಈ 'ಪ್ರೂಫೂ' ಅಪ್ಪುತಸೂ ಅದs: ವಿಷಾನೂ ಅದs. ಹ್ಯಾಂಗ ಮಾಡೂದಿನ್ನ ದಾದಲ್ಯಾ ?"

"ಈ ಪತ್ರಾ ಯಾರಿಗೆ ಬರದಿದ್ದರು. ಅವರಿಗೆ ಇದು ಮುಟ್ಟಿದ್ದರ ಪತ್ತೇ, ಇವರಿಗ್ಯಾಂಗ ಆಗಿಲ್ಲಾ. ಸುರೇಶ? ಪತ್ರಾ ಬರದು ಅವರೇನು ಸುಮ್ಮ ಕೂಡೂ ಜಾತಿ ಅಲ್ಲಾ."
ಬಸವಂತಿ ಕೇಳಿದಳು.

"ನಿನ್ನ ನಶೀಬ ಬಸವಂತೀ. ನೀ ಇಷ್ಟ ದಿನಾ ಹೆಚ್ಚ ಬದಕಿದ್ದು. ದಾದಾ, ಈ ಪತ್ರಾ, ಸೇಕ್ರುಟರೀಏಟದಾಗಿನ ಅವನ ಗೆಳ್ಯಾರಿಗೆ ಬರದದ್ದು. ಅವರೂ ಅಲ್ಲೆ ದೊಡ್ಡ ಹುದ್ದೇದಾಗ ಇದ್ದಾರ. ಅವರು ನಡವ ಎರಡ ತಿಂಗಳಾ ರಜದ ಮ್ಯಾಲ ಇದ್ದರು. ಈ ಪತ್ರದ ತಾರೀಖು ನೋಡಿದರ, ಸುಮಸುಮಾರು ಅದೇ ತಾರೀಖಿನ ಹೊತ್ತಿ ಗೇನs. ಈ ಸೆಕ್ರುಟರಿ ಅವರು ರಜಾದ ಮ್ಯಾಲ ಹೋಗಿರಬೇಕು. ಅವರು ರಜಾ ತಗೊಂಡ ಸುದ್ದೀ ಊರಾಗಿಲ್ಲದ ಸುದ್ದಿ, ಕದಾಚಿತ್ ದಾದಾಗ ಗೊತ್ತಾಗಿರಲಿಕ್ಕಿಲ್ಲ. ಮ್ಯಾಲ ಇದನ್ನ ಅಂವಾ, ಅವರ ಮನೀ ಪತ್ತೇದ ಮ್ಯಾಲs ಬರದಿದ್ದಾ. ದಾದಾ ಇಷ್ಟು ಅಜಾಗರೂಕ ಆಗಿ ಕೆಲಸಾ ಮಾಡೂವಂವಾ ಅಲ್ಲಾ. ಏನೋ ವ್ಯಾಳ್ಯಾ ಅಂವಗ ಸಮಾ ಇದ್ಧಾಂಗ ಕಾಣಲಿಲ್ಲಾ. ಅಂದಲ್ಲೇ ಈ ಪತ್ರಾ ದಾದಲ್ಯಾನ ಕೈಗೆ ಬಿದ್ದsದ. ದಾದಾ ಈಗ ಹ್ಯಾಂಗೂ ಈ ತಮ್ಮ ಗೆಳ್ಯಾರ ಮನ್ಯಾಗನs ಇಳದಾನಲಾ. ಅವರ ಜೋಡೀ, ಮಾತಾಡುವಾಗರs, ಸಹಜಾಸಹಜೀ ಈ ಪತ್ರದ ಪ್ರಸ್ತಾಪ ಹೊಂಡತದ. ಆಗ ಪತ್ರ ಮುಟ್ಟಿಲ್ಲನೂದು ತಿಳದು ಅಂವಗೂ ಪಂಚೇತಿಗಿಡತದ. ಮ್ಯಾಲ ಸಾಹೇಬರೇನರs ಇದರ ದಶಿಂದ ಮಾತಾಡಿದರ, ಪತ್ರಾ 'ಪ್ರೊಡ್ಯೂಸ್' ಮಾಡಿದರ ಅವನ ಪಿತ್ತs ಖವಳಸ್ತದ. ಪತ್ರದ ವಿಷಯ ಬಾಜೂಕ ಉಳದು, ದಾದಾ, ಸಾಹೇಬರ ಎದರಿಗೆ ತಾಯೀ ಸಂಬಂಧೀ ಬಾಯಿಬಿಡತಾನ. ಸಾಹೇಬರಿಗೆ ಇದರದೂ ಘನ 'ಶಾ:ಕ್' ಕೂಡತದ. ದಾದಾ ಸಹೀಸಲಾಮತ್ ಪಾರಬೀಳತಾನ. ಅಲ್ಲೆ ಸಾಹೇಬರನ ಅರಜೀಂವಿ ಮಾಡಿ ಬಂದಿರತಾನ. ಇಲ್ಲೆ ಬಸವಂತೀ ಬಲೀಗೆ ಆಸುರಸ್ತಾನ. ಅಗದೀ ವಿಷಮ ವ್ಯಾಳ್ಯಾ ಬಂತ ದಾದಲ್ಯಾ."

"ಬಸವಂತೀ, ವ್ಯಾಳ್ಯಾ ಬಂತು ತಯ್ಯಾರಾಗಿರು ದಾದಲ್ಯಾ ಅಂದಿದ್ದಿ. ಇಬ್ಬರ ತಯಾರೀನೂ ಅದs. ವ್ಯಾಳ್ಯಾನೂ ಬಂದsದ. ಮೊದಲ ತಲೀ ನಮ್ಮದೇ ಹಾರಲಿ. ಹೀಂಗ ಮಾಡೂಣು ಸುರ್ಯಾ: ಸಾಹೇಬರ ಬದಲೀ ದಾದಾನ್ನs ಮೊದಲ

ಗಾತಾಸ್ತೀನಿ. ಹ್ಯಾಂಗೂ ಅಂವಾ ನನ್ನ ಮ್ಯಾಲ್ಯ ಕತ್ತೀ ಮಸದೇ ಹೋಗ್ಯಾನ. ಊರಾಗ ಮಂದಿನ್ನ ನೆರಿಸಿ, ನನ್ನ-ಬಸವಂತಿನ್ನ ಕೂಡೇ ಸುಡಸೂ ಪಣಾ ಪುಕಾರಿ ಸ್ಯಾನ. ಮುಂಬೈ ಏನು ನಮ್ಮ ಊರ ಅಲ್ಲಾ. ಅಲ್ಲೇನು ಅವನ ಆಟ ನಡಿಯೂದಿಲ್ಲಾ. ಅಂವಗ ಭೆಟ್ಟಿ ಆಗಿ ಹೇಳಿ ನೋಡತೀನಿ. ಈ ಪತ್ರಾ ಇನ್ನೂ ನನ್ನ ಕೈಯಾಗದ. ದಾದಾನ ಬಾಜೂನ ಈ 'ಕೇಸಿ'ನಾಗ ಅಲಗರ್ಜೀ ಆಗೇದ. ಈ ಖಾನಗಡೀಯೊಳಗಿಂದ ಅಂವಾ ಪಾರಬೀಳಬೇಕಂದರ ಸಾಹೇಬರಿಗೆ 'ಫೆವ್ಹರಬಲ್' ಆಗಿ ಸಾಕ್ಷೀ ಹೇಳಬೇಕು. ಇಲ್ಲಾ ಅಂದರ 'ಬ್ಲ್ಯಾಕ್-ಲಿಸ್ಟ್' ನ್ಯಾಗ ಬೀಳಬೇಕು. ಅಂವಾ ಕಬೂಲಾದಾ ಠೀಕ ಆತು. ಇಲ್ಲದಿದ್ದರ ಈ ಪತ್ರಾ ಸಾಹೇಬರ ಹವಾಲ್ತೀ ಮಾಡತೀನಿ ಅಂತ್ಯ ಧಮಕಿ ತೋರಸ್ತೀನಿ. ಈ ಲೇಖೀ-ಸಾಕ್ಷಿ ಅಂವನ್ನ ಹಣ್ಣನೇ ಮಾಡಿರತವ. ತಾನೇ ನರವಸ್ ಬೀಳತಾನ. ಸಾಹೇಬರಿಗೂ ಧಕ್ಕಿ ಆಗೂದಿಲ್ಲಾ. ಏನ ಶಕಾ ಬಡಕೋತದ ಅದು ನನಗ-ಬಸವಂತಿಗೆ ಇಬ್ಬರಿಗೇ. ನಮ್ಮ ತಯಾರೀ ರಾತ್ರೀನೇ ಆಗೇದ. ದಾದಾ ಕತ್ತೀ ಬೀಸೂ ಕಲಾ ಕಲ್ತೀಲ್ಲಾ. ಕೂದ್ಲದ್ಲೇ ಕುತ್ತಿಗಿ ಕೊಯ್ಯ್ಯೂದರಾಗ ತರಬೇತ ಇರಬೇಕು. ಸೋನಕ್ಕನ್ನ ಸಣ್ಣ ಮಾಡಿಧಾಂಗ, ಬಸವಂತಿನ್ನೂ ಸಣ್ಣಾಗಿ ಅರದಾನು. ಸೇಡಿನ ಡಾವ್ ಹಾಕಿಕೋತ ದಿನಾ ಹಾಕತಾನ. ಊರಾಗ ನಿಂತು ಆಕೀ ಜೀವಾ ಹಿಂಡತಾನ. ಆಕಿನ್ನ ಬಚಾವ್ ಮಾಡೂದು ಈಗ ಮುಖ್ಯ ಅದ್ಯ."

"ನನ್ನ ಕಾಳಜೀ ಬಿಡೂ ದಾದಲ್ಯಾ. ನನ್ನ ಕೂದಲಿಗೆ ಕೈ ಹಚ್ಚೂ ತಾಕತ್ತು ಅವರಿಗೆ ಆಗ್ಯಾಂಗಿಲ್ಲಾ. ನಿಮಕಿಂತಾ ನಾ ಖಂಬೀರ ಅದೀನಿ. ನನ್ನ ಡಾವ್ ತಯಾರಾಗಿ ಭಾಳ ದಿನಾ ಆತು. ನೀನು ವಿಶ್ವಾಸಂದು-ಸಾಬರದು ಅಷ್ಟ ಕಾಳಜೀ ಮಾಡು. ನನ್ನ ಝುಲ್ಲ ಬಿಡು"
ಬಸವಂತಿ ಉತ್ತರಿಸಿದಳು.

"ಸುರ್ಯಾ, ದಾದಾಗ-ರಾಜಪ್ಪಗ ಭಾರೀ ವಾದಿಸ್ಯಾಟ ಆತಂತಲಾ? ಈ ಖಾಸಗಡೀಯೊಳಗ ಅದನ್ನ ಕೇಳೂದೇ ಆಗಲಿಲ್ಲಾ. ಬಸವಂತೀನೂ ಅದರ ದಶಿಂದ ಅರಗಚ್ಚಿ ಹೇಳಿದಳು. ರಾಜಪ್ಪ ಖಿವಳಾಸಿದ್ದೇನು ಕೆಟ್ಟ ಆಗಲಿಲ್ಲಾ ಸುರ್ಯಾ. ದ್ಯಾವಾಗ ಊರಾಗರೇ ಒಂದು ಕಿತಬೀ ಮಾಡಲಿಕ್ಕೆ ನಿವಾಂತ ಸ್ಥಾನ ಇತ್ತು. ನಾಗರ ಹಾಂವಿನ್ಯಾಂಗ ಹೆಡೀ ಬಿಚ್ಚಿ ಅನಿರ್ಬಂಧ ಹರದಾಟಕ್ಕ ಮೋಕಳೀಕ ಠಿಕಾಣಿ ಇತ್ತು. ಇಂದ ಗರುಡನ ಅವತಾರ ಆತ ಅಲ್ಲೇ. ಬರೇ ಗೆರೀ ತೋರಿಸಿಗೋತ ಇದ್ದರೂ

ಸಾಕು. ಹಾವು ಹುತ್ತಿನ್ಯಾಗs ಬಿಟ್ಟಿರತದ. ನಿರ್ವಿಣ್ಣಾಗಿ ..."
ನನ್ನ ಮಾತು ಇನ್ನೂ ಮುಗಿದಿರಲಿಲ್ಲ. ಕೊನೆಯ ಗಂಟೆ ಬಾರಿಸಿ ಗಾಡಿಯು ಸಿಳ್ಳು ನಿನದಿಸಿತು. ಬಸವಂತೀ-ಸುರೇಶ ಅವಸರದಿಂದ ಇಳಿದು ನನ್ನ ನಿರೋಪ ತೆಗೆದು ಕೊಂಡರು. ಗಾಡಿ ನಿಧಾನವಾಗಿ ಮುಂದೆ ಸರಿಯಿತು. ಇಬ್ಬರೂ ಕೈ ಎತ್ತಿ ನನಗೆ ನಿರೋಪ ಕೊಡುತ್ತಿದ್ದರು. ನಾನೂ ಕೈ ಬೀಸುತ್ತಿದ್ದೆ. ಅವರ ಎತ್ತಿದ ಕೈ, ನನ್ನ ಬೆನ್ನಿಗೆ ಬಲವಾಗಿದ್ದ ಸಾಕ್ಷಿ ಸಾರುವಂತಿದ್ದವು.

"ಸುರ್ಯಾ, ಬಸವಂತಿನ್ನ ಸಂಬಾಳಿಸು......"
ಎಂದು ನಾನು ಹೇಳುತ್ತಿದ್ದಂತೆ ಗಾಡಿ ಧೃತಗತಿಯಿಂದ ಮುಂದೆ ಮುಂದೆ ಧಾವಿಸಿತು. ಬಸವಂತಿ-ಸುರೇಶ ಕಣ್ಮರೆಯಾದರು. ದಾದಲ್ಯಾ ಒಂಟಿಯಾಗಿ – ಅಕೇಲಾ ಆಗಿ ಪ್ರಯಾಣರತನಾದ.

ದಾದಲ್ಯಾ ಈಗೂ ಅಷ್ಟೇ – ಆಗೂ ಅಷ್ಟೇ. ಮಾನವನೇನು – ಪಶು-ಪ್ರಾಣಿ ಏನು – ಜೀವಧಾರಣ ಮಾಡಿ ಬಂದ ಸಜೀವ ವಸ್ತು ಒಂದು ದಿನ ಅಕೇಲಾ ಆಗಿಯೇ ಪ್ರಯಾಣರತವಾಗಲೇಬೇಕು. ಯಾರೂ ಬರುವದಿಲ್ಲ ದಾದಲ್ಯಾ... ಯಾರೂ ಬರುವದಿಲ್ಲ...ಬರುವದಿಲ್ಲ...?ಅದೇಕೆ...?ಬರುತ್ತಾರೆ...ಬಂದಿದ್ದರಲ್ಲ ಸತ್ಯವಾನನ ಸಾವಿತ್ರೀ ನಡೆದಳಲ್ಲ ಅವನ ಬೆನ್ನಿಗೇ. ಧರ್ಮರಾಯನ ಶ್ವಾನ ನಡೆಯಿತಲ್ಲ ಅವನ ಬೆನ್ನಿಗೇ. ಬಸವಂತಿ ಬಂದಾಳೇನು? ಬಂದಾಳು... ಬಂದಾಳು, ದಾವಲ್ಯಾ, ಖಚಿತವಾಗಿ ಬಸವಂತಿ ನಿನ್ನ ಬೆನ್ನಿಗೆ ಬಂದಾಳು. ಬೆನ್ನಿಗೇಕೆ? ಶ್ಯಾಮರಾಯ ಇಬ್ಬರನ್ನೂ ಒಂದೇ ಚಿತೆಯ ಮೇಲೆ ಮಲಗಿಸುವ ಪಣ ಪುಕಾರಿಸಿದ್ದಾನೆ. ಅವನು ಹಾಗೆ ಮಾಡಿದ್ದೇ ಆದರೆ, ಬಸವಂತಿ ಬರೇ ಬೆನ್ನಿಗೇ ಬರದೆ, ಕೈಯಲ್ಲಿ ಕೈ ಹಾಕಿ, ನಿನ್ನ ಬದಿಬದಿಗೇ – ಜೊತೆಜೊತೆಗೇ ನಡೆದು ಬಂದಾಳು...

ಬಸವಂತಿಗೆ ಸೋನಕ್ಕ-ವಿಶ್ವಾಸರ ಕಲ್ಯಾಣದ ಧ್ಯಾಸ ಹತ್ತಿದಷ್ಟೇ, ಸಾಯುವ ಅವಸರದ ಧ್ಯಾಸವೂ ಹತ್ತಿದೆ. ಬಸವಂತಿಗೆ ಅಕಾಲದಲ್ಲಿ ಅವಸಾನದ ಧ್ಯಾಸವೇಕೆ ಹತ್ತಿರಬೇಕು? ಹಾಗೆ ನೋಡಿದರೆ ಬಸವಂತಿ ಕಂಚಿನ ಪ್ರತಿಮೆಯಂತೆ ಖಣಖಣಿತವಾಗಿದ್ದಾಳೆ. ಕಷ್ಟ-ಕಾರ್ಪಣ್ಯ, ಅವಮಾನ-ಅವಹೇಳನ ಬಂದರೂ ಅದನ್ನು ಒಂದೇ ಗುಟುಕಿನಲ್ಲಿ ಆಪೋಷಿಸಿ, ಏನೂ ಘಟಿಸದಂತೆ ಅವ್ಯಾಜ-ಮನೋಹರ-ನಗೆ ಬೀರುತ್ತಾಳೆ. ಹೀಗಿದ್ದೂ ಅವಳಿಗೆ ಸಾವಿನ, ಅಕಾಲ-ಮೃತ್ಯುವಿನ ಮನೋರಮ-ಸಂಭ್ರಮ ಕಾಣುವ ಧ್ಯಾಸ ತೊಡಗಿದೆ. ಯಾಕಿರಬೇಕು? ಯಾಕಿರಬೇಕು?

ಆ ಮೈಗೆ–ಆ ಚೆಲುವಿಗೆ ತೊಗಲೆನ್ನದೆ ಅವಳು ಅಡುವದೇ ಇಲ್ಲ. ಮೈತುಂಬ ಅರಳಿದ ಮಂದಾರನಗೆಯು ಚೆಲುವು ಅವಳಿಗೆ ಮಸಣದಲ್ಲಿ ಜೋತು ಬಿದ್ದ ಕಣಗಿಲದಂತೆ ಕಾಣುತ್ತದೆ. ಯಾಕಿರಬೇಕು ? ಈ ಅಭಾವ-ವೈರಾಗ್ಯ ಅವಳನ್ನು ಏಕೆ ತುಡಿಯುತ್ತಿರಬೇಕು ?

ಸೃಷ್ಟಿ-ನಿಯಮದಂತೆ ಬಸವಂತಿಯು ಮೈ ಅರಳಿದೆ. ಚಿಗುರಿಟ್ಟು, ಪಲ್ಲವಿಸಿ, ಹೂತು-ಕಾತಿದೆ. ಆದರೆ ಅವಳ ಮನಸ್ಸು ? ಅದು ಸೃಷ್ಟಿಯು ತಾಬೇದಾರೀ ವಸ್ತುವಲ್ಲ. ಬಸವಂತಿಯು ಮಾಲ್ಕೀ ಹಕ್ಕು ಅದರ ಮೇಲಿದೆ. ಬಸವಂತಿ ಅದನ್ನು ಅರಳಿಸಿ ನೋಡಿದಳು. ಅದರ ಕಂಪನ್ನು ಮೂಸಿ ಮೋದಿಸುವ ರಸಿಕ-ಜೀವನ ಅವಳ ಪಾಲಿಗೆ ಇಲ್ಲದಾಯಿತು. ಆ ಸ್ವರ್ಗೀಯ ಆಮೋದವನ್ನು ಸ್ವೀಕರಿಸಿ ಅವಳನ್ನು ಧನ್ಯವಾಗಿಸುವ ರಸಿಕ-ಜೀವದ ಅಭಾವವೇ ಅವಳನ್ನು ಎದುರಿಸಿತು. ಬಸವಂತಿ. ಆ ಕಲಿಕೆಯ ಪಕಳೆಗಳನ್ನು ಅರಳಿಸಲಿಲ್ಲ. ಶ್ಯಾಮರಾಯನಲ್ಲಿ ಆ ಗಗನಮಲ್ಲಿಗೆಯನ್ನು ಮೂಸುವ ಯೋಗ್ಯತೆ ಇರಲಿಲ್ಲ. ರಸಿಕ-ರಾಜತ್ವವಿರಲಿಲ್ಲ. ದಾದಲ್ಯಾ, ಆಗಸದ ಹಂದರಕ್ಕೇ ಕೈಚಾಚಿ ಆ ಕಲಿಕೆಯನ್ನು ತನ್ನೆಡೆಗೆ ಬಾಗಿಸಿಕೊಂಡಿದ್ದ. ಬಸವಂತಿಗೆ ತನ್ನ ಮಂದಾರವರಳಿದ ಧನ್ಯತೆ ಬಂದಿತು. ಜೀವ-ಸಾರ್ಥಕ್ಯ ಬಂದಿತು. ಅದನ್ನವಳು ತನ್ನ ದೇವರ ಪಾದಕ್ಕೆ ಒಪ್ಪಿಸಿದಳು. ಮನ ಒಪ್ಪಿಸಿದರೂ ಮೈಯ್ಯ ನೈವೇದ್ಯ ತೋರಿಸುವ ಭಾಗ್ಯ ಅವಳಿಗಿರಲಿಲ್ಲ. ಯಾರೋ ಬಾಡಿಸಿಕೊಂಡು ಉಳಿದ ಎಂಜಲ-ತಟ್ಟೆಯಲ್ಲಿಯ ಎಡೆಯನ್ನು ಅವಳು ತನ್ನ ದೇವರ ಮುಂದೆ ಚಾಚಲು ಹಿಂಜರಿದಳು. ಆ ಉಚ್ಛಿಷ್ಟವನ್ನು ಬಿಸಾಡಲೆಂದು ಅವಳ ಧಾವನ ನಡೆದಿರಬೇಕು. ಮೃತ್ಯು-ಸ್ವಾಗತದ ಧ್ಯಾಸ ಹತ್ತಿರಬೇಕು.

ಇಂದು ನಿಜವಾಗಿ ದಾದಲ್ಯಾನಿಗೆ ಬಸವಂತಿಯು ದರ್ಶನ ಘಟಿಸಿತು. ಇಂದು ನಿಜವಾಗಿ ಅವನಲ್ಲಿ ಬಸವಂತಿಯು ಪರಕಾಯಪ್ರವೇಶವಾಯಿತು. ದಾದಲ್ಯಾ-ಬಸವಂತಿಯು ಜೀವ-ಸಂಗಮವಾಯಿತು. ಪ್ರೀತಿ-ಜಲ, ತೀರ್ಥದ ಸ್ವರೂಪ ಧಾರಣ ಮಾಡಿತು. ದಾದಲ್ಯಾ-ಬಸವಂತಿಯರ ಜೀವ-ಜಾಹ್ನವಿ-ತೀರ್ಥಕ್ಕೆ ಪೂರ ಬಂತು... ಮಹಾಪೂರ ಬಂತು.

ದಾದಲ್ಯಾ ಧನ್ಯತೆಯ ಉಸಿರ್ಗರೆದ.

ಬಸವಂತಿ ತನ್ನ ಝುಲ್ಲ ಬಿಡಲು ಹೇಳಿದ್ದಳು. ತನ್ನ ಸಾವು ಎಂದೋ ಸಿದ್ಧವಾದ ಮಾತಿಗೆ ವಾಚ್ಯತೆ ಮೂಡಿಸಿದ್ದಳು. ಬಸವಂತಿ ಏನೋ ಪವಾಡ ಮಾಡ

ಲಿದ್ದಳು. ಕಣ್ಣು ಕುಕ್ಕಿಸುವ ಪವಾಡ ಮಾಡಲಿದ್ದಳು. ಯಾರ ನೆರವಿನ ಅಗತ್ಯವನ್ನೂ ಕೋರದೆ ಏನೋ ಮಾಡಲಿದ್ದಳು.

“ದಾದಲ್ಯಾ, ವಿಶ್ವಾಸನ್ನ ಸಂಬಾಳಸು”

ಎಂದು ಅಸರಂತ ಹಾಡುತ್ತಿದ್ದಳು. ಅವನು ತನಗೇ ಆಟಾಪಿಸುವನೆಂದು ಕಣಿ ಸಾರಿದ್ದಳು. ತುಳಸಿಯ ಹಕೀಕತ್ತನ್ನು ವಿಶ್ವಾಸ ಅವಳಿಗೇ ನಿವೇದಿಸಿದ್ದ. ಆಗಲೇ ತುಳಸಿಯನ್ನು ಅವಳ ಉಡಿಯಲ್ಲಿ ಹಾಕಿದ್ದನೋ ಏನೋ? ಬಸವಂತಿ-ವಿಶ್ವಾಸ ಕೂಡಿಯೇ ಏನೋ ಡಾವು ಮಾಡಿಕೊಂಡಿರಬೇಕು. ಅವಳ ಮೈ ನೆಕ್ಕುವ ಆಶೆಗೆ ಬಿದ್ದು ನಾನು ಆ ವಿಷಯದ ವಿಚಾರಮಾಡಲು ಮರೆತಿದ್ದೆ. ಅಂದು ವಿಶ್ವಾಸ ಬಸವಂತಿಯ ಕೈಯನ್ನು ಲಟ್ಟನೆ ತನ್ನ ಕೈಯಲ್ಲಿ ತೆಗೆದುಕೊಂಡು ಬ್ಯಾಂಡೇಜ ಬಿಡಿಸಿದಾಗಲೇ ಅವಳಿಗೆ ಅವನಲ್ಲಿ ಮಗನ ವಾತ್ಸಲ್ಯ ಮೂಡಿತ್ತು. ಅವನನ್ನೇ ದಿಟ್ಟಿಸಿ ನೋಡುತ್ತಿದ್ದ ಬಸವಂತಿಯ ಕಣ್ಣಿನಿಂದ ಮಾತೃವಾತ್ಸಲ್ಯದ ಧಾರೆ ಇಟ್ಟಿತ್ತು. ಆ ತಾಯಿಯ ಹೃದಯಪೀಠದಲ್ಲಿ ವಿಶ್ವಾಸ. ಲೀಲಾವಿಲೋಲ-ಶಿಶುವಾಗಿ ಪವಡಿಸಿದ. ಬಸವಂತಿ ಮಹಾಶಿಶುವಿನ ತಾಯಿತನ ಪಡೆದಳು. ಅಂದಿನಿಂದ ಆ ಶಿಶುವಿನ ಕ್ಷೇಮಕ್ಕೆ ಹಂಬಲಿಸತೊಡಗಿದಳು. ತನಗೊಲಿದ ನನ್ನನ್ನು ಅದರ ಕ್ಷೇಮಕ್ಕೆ ಬೆಂಗಾವಲಾಗಿ ನಿಲ್ಲಿಸಿದಳು. ಅದರ ನೆನಪನ್ನು ಒಂದಲ್ಲ – ಹತ್ತು ಸಲ ಮಾಡಿಕೊಟ್ಟಳು. ತನ್ನ – ನನ್ನ ಕಾಯವಳಿದರೂ ಅವಳ ಕಣ್ಣುಮಣಿಯಾದ ಕೂಸು ಬದುಕಲೆಂದು ಬಯಸಿದಳು.

ಈಗ ಮತ್ತೆ ಬಸವಂತಿ ತನ್ನ ಪ್ರಭಾ-ಮುದ್ರೆಯೊತ್ತುವ ಡಾವಿನ ಕಣಿಯನ್ನು ಸಾರಿದ್ದಳು. ಬಸವಂತಿ ಏನು ಮಾಡಲಿದ್ದಳು? ವಿಶ್ವಾಸನ ಭಾರವನ್ನು ವಹಿಸ ಹೇಳಿದ್ದಳು. ಅವನು ಆಟಾಪಿಸದಿದ್ದರೆ ತಿಳಿಸು – ತಾನು ಬರುತ್ತೇನೆ ಎಂದಿದ್ದಳು. ಅವನನ್ನು ಆಟಾಪಿಸುವ ಭಾರವನ್ನು ತುಳಸಿ ಹೊತ್ತಿದ್ದಳು. ಹಾಗೆ ಮಾತನ್ನೂ ಕೊಟ್ಟಿದ್ದಳು. ವಿಶ್ವಾಸ ಬಸವಂತಿಯ ಮಾತಿಗೆ ಒಲಿಯುವಂತೆ ತುಳಸಿಯ ಮಾತಿಗೂ ಒಲಿಯುವ ಸಂಭವವಿತ್ತು. ಬಸವಂತಿಯಲ್ಲಿ ಅವನಿಗೆ ತಾಯ್ತನದ ಸಮ್ಯಗ್‌ದರ್ಶನವಾದಂತೆ, ತುಳಸಿಯಲ್ಲಿ ಊರ್ಮಿಳಾ-ಪ್ರೇಮಿಕೆಯ ದರ್ಶನವಾಗಿತ್ತು. ತುಳಸಿಯ ಯಾವ ಯಾಚನೆಯನ್ನೂ ವಿಶ್ವಾಸ ಅಮಾನ್ಯಮಾಡುವಂತಿರಲಿಲ್ಲ. ಈಗ ವಿಶ್ವಾಸನ ಕಾಳಜಿಯ ಭಾರ ಅಷ್ಟಾಗಿ ಉಳಿದಿರಲಿಲ್ಲ. ನಾನೇ ಧಾವಿಸಬೇಕಾದ ಪ್ರಸಂಗವೂ ಇರಲಿಲ್ಲ. ತುಳಸಿ ಆ ಭಾರವನ್ನು ಹೊರಲು

ಸನ್ನದ್ಧಳಾಗಿದ್ದಳು.

ಹಾಗಿದ್ದರೆ ಬಸವಂತಿ ಮತ್ತೇನು ಮಾಡಲಿದ್ದಳು? ಸುರೇಶನ ಮದುವೆಯ ಸಮಸ್ಯೆಯೂ ಈಗ ಉಳಿದಿರಲಿಲ್ಲ. ಸೋನಕ್ಕ-ಶ್ಯಾಮರಾಯರ ಪ್ರತಿಕ್ರಿಯೆ ಏನೇ ಆದರೂ ಶಕೂ-ಸುರೇಶ ಅಗಲದಂತೆ ಹೆಣೆದುಕೊಂಡಿದ್ದರು. ಪ್ರತಿಕ್ರಿಯೆಯ ಪರಿಣಾಮವನ್ನು ರಾವಜೀಕಾಕಾ ಊಹಿಸಿದ್ದರು. ಅದನ್ನು ತಪ್ಪಿಸುವ ಸಾಮರ್ಥ್ಯ ತಮ್ಮ ಕುತ್ತಲ್ಲವೆಂದು ಅವರ ದೃಢ ಗ್ರಹಿಕೆಯಾಗಿತ್ತು. ವಿಧಿಯ ವಿಕಟವಿಲಾಸ ವನ್ನು ಅವರು ತಡೆಯಲು ಅಸಮರ್ಥರಾಗಿದ್ದರು. ಆ ಪ್ರತಿಕ್ರಿಯೆಗೆ – ಸುರೇಶ-ಶಕೂರ ಮದುವೆಗೆ ಅವರು ತಳಕು ಹಾಕಿ, ಆ ಸಂಬಂಧ ವಿಗಡಿಸಲು ಅವರು ನೀರು-ಬೂದಿ ಎರಚುವ ಲಘುಮಾನಸರಾಗಿರಲಿಲ್ಲ. ಇದರ ಬಗ್ಗೆಯೂ ಬಸವಂತಿ ಧಡಪಡಿಸುವ ಕಾರಣವಿರಲಿಲ್ಲ.

ಕಾಕಾ-ಸೋನಕ್ಕ: ಉಳಿದವರಿಬ್ಬರು. ಅಂದ ಹಾಗೆ, ಬಸವಂತಿ ಪುಣೆಗೆ ಬಂದು ನಿಂತ ನಂತರ ತಾನು, ಕಾಕಾ-ಸೋನಕ್ಕ ಅವರನ್ನು ಕಂಡು ಅವರ ಪಾದ ಧೂಳಿಯನ್ನು ಶಿರೋಧಾರಣ ಮಾಡಿದ ನಂತರ ಆ ಜೀವದ್ವಯದ ಆಂತರಿಕ ಮಿಡಿತವನ್ನು – ನವೆತವನ್ನು ಅರ್ಥಮಾಡಿಕೊಂಡಿರಬೇಕು. ರಾವಜೀಕಾಕಾ ಅಂತಃ ಕರಣ ಉಕ್ಕಿ ಬಂದು —

"ಬಸವಂತೀ, ಈ ಮನೀ ನಿನಗ ಹೊರಗಿಂದಲ್ಲಾ. ಶ್ಯಾಮನಲ್ಲಿ ಇರೂದು ಬ್ಯಾಡಾ; ಇಲ್ಲೇ ಬಂದಬಿಡೂ"

ಎಂದಾಗ, ಬಸವಂತಿ —

"ಕಾಕಾ, ಈ ಮನೀ. ನೀವು, ಸೋನಕ್ಕಾ ಯಾರೂ ನನಗ ಹೊರಗಿನವ ರಲ್ಲಾ. ಕಾಕಾ ಅಂತ ನಾ ಒದರಿದಾಗ, ಬಸವಂತೀ ಅಂತ ಕರೆಯೂ ತಂದೀ ಸಮಾನ ನಿಮ್ಮನ್ನ ಪಡೆದ್ನಿ. ಅಕ್ಕನ ಸಮಾನ ಸೋನಕ್ಕನ್ನ ಪಡದನಿ. ಮುತ್ತಿನಂಥಾ ನಾಕ ಮಕ್ಕಳ ಭಾಗ್ಯಾ ಬಂತು. ನನಗೇನು ಕಮ್ಮ ಆಗೇದ ಕಾಕಾ. ವಾಡೇದಾಗ ನಿಂತಾಗ ಇದs ವಿಚಾರದಿಂದs ಅದನ್ನ ನಿಗಾ ಇಟ್ಟನಿ"

ಎಂದಿದ್ದಳು. ಬಸವಂತಿಯ ಹಾದಿನ ವಿಚಾರ ಈಗ, ಕಾಕಾ-ಸೋನಕ್ಕ. ವಾಡೆಯ ಸುತ್ತು ಸುಳಿಯುತ್ತಿರಬಹುದೇ? ಸೋನಕ್ಕನ ಸಮಸ್ಯೆ ಬಿಡದೆ. ಕಾಕಾ ನಿರಂಬಳ ರಾಗರು. ಅವರು ನಿರಂಬಳರಾಗದೆ ವಾಡೆಯಲ್ಲಿ ಪ್ರತಿಷ್ಠಿತರಾಗರು. ಸೋನಕ್ಕನ ಸಮಸ್ಯೆ ಬಿಡಿಸುವ. ಕಾಕಾ ಅವರನ್ನು ಚಿಂತಾವಿಮುಕ್ತಮಾಡುವ. ವಾಡೆಯಲ್ಲಿ

ಮತ್ತೆ ಜೀವನಾಡಿ ಆಡುವಂತೆ ಮಾಡುವ ಏನೋ ಡಾವು ಬಸವಂತಿ ನಡೆಸಿರಬೇಕು. ಬಸವಂತಿ ಏಕಾಂಗಿಯಾಗಿ ಇದನ್ನು ನಿರ್ವಹಿಸುವ ಮಾತು ಮಿಂಚಿಸಿದ್ದಳು.

"ನನ್ನ ಝುಲ್ಲ ಬಿಡೂ ದಾದಲ್ಯಾ. ಅಗತ್ಯ ಬಿದ್ದರ. ರಾಜಪ್ಪಣ್ಣ ಇರತಾನು. ಅಪನವರೂ ಇರತಾರ. ಗೌಡರೂ ಇರತಾರ"

ಎಂದಿದ್ದಳು. ಅದೂ ಅಗತ್ಯಬಿದ್ದರೆ. ಅಂದರೆ......? ಇವರ ನೆರವಿಲ್ಲದೆ ಬಸವಂತಿ ಊರಲ್ಲಿ ಏನು ಮಾಡಲಿದ್ದಳು? ವಾಡೆಯಲ್ಲಿ ಏನು ಪ್ರಕರಣ ಎಬ್ಬಿಸಲಿದ್ದಳು? ನಿನ್ನೆ ರಾತ್ರಿ ಇದನ್ನು ಅವಳು ಸೂಚ್ಯವಾಗಿ ಅಂದಿದ್ದ ಜ್ಞಾಪಕವಾಯಿತು. ಬಸವಂತಿಯ ತೊಗಲ ತಂದ್ರಿಯಲ್ಲಿದ್ದ ದಾದಲ್ಯಾ. ಅವಳ ಡಾವಿನ ವಿಚಾರವನ್ನು – ಅದರ ವಿವರವನ್ನು ಕೇಳಿಕೊಳ್ಳುವಷ್ಟು ಪ್ರಜ್ಞೆ ಪಡೆದಿರಲಿಲ್ಲ. ಆ ವಿಸ್ಮೃತಿಯ ಶಲ್ಯ ಈಗ ಕಟುವಾಗಿ. ತೀಕ್ಷ್ಣವಾಗಿ ಅವನನ್ನು ಇರಿಯತೊಡಗಿತು.

ನನ್ನ ವಿಚಾರಚಕ್ರದ ವಿದ್ಯುತ್‌ಭ್ರಮಣ, ಗಾಡಿ ದಾದರ ತಲುಪಿದಾಗ ನಿಂತಿತು. ಕರ್ಜತ್-ಕಲ್ಯಾಣ-ಠಾಣಾ ಯಾವಾಗ ಹಿಂದೆ ಬಿದ್ದುಹೋದವೋ ತಿಳಿಯಲೇ ಇಲ್ಲ. ಕಿಸೆಯಲ್ಲಿಯ ಸಿಗರೇಟಿನ ಪಾಕೀಟು ಮುಕ್ಕಾಗದಂತೆ ಇತ್ತು. ಗಾಡಿಯಲ್ಲಿಯ ಸಹಪ್ರವಾಸಿಗರು. ಬೀಡಿ-ಸಿಗರೇಟು-ತಂಬಾಕದ ಬಾರು ಮಾಡಿ, ಎಬ್ಬಿಸಿದ ಯಾವ ವಾಸನೆಯೂ ನನಗೆ ಬಡಿದಿರಲಿಲ್ಲ. ಚಹದ ಚಟ ಚಿಟುಕಾಡಿಸಿರಲಿಲ್ಲ. ಬಸವಂತಿಯ ಧ್ಯಾಸದಲ್ಲಿ ದಾದಲ್ಯಾ ಬೇಭಾನನಾಗಿದ್ದ. ನಾನು ಕುಳಿತ ಡಬ್ಬಿ ದಾದರದಲ್ಲಿ ರಿಕಾಮಿಯಾಯಿತು. ಕೂಗುವ-ಕಿರಚುವ ನೂರು ಕಂಠಗಳನ್ನು ಯಾರೋ ಏಕದಮ್ ಹಿಚಿಕಿ ಉಸಿರುಗಟ್ಟಿಸಿದ ನಿಃಸಬ್ಧ ಶಾಂತಿ ಬಂತು. ಹೊರಗೆ ಸ್ಟೇಶನ್ನಿನ ಮೇಲೆ ಸಾವಿರ ಕಂಠದ ಕೂಗು ಕೇಳುತ್ತಿತ್ತು. ಡಬ್ಬಿಯಲ್ಲಿಯ ನಿಃಶಬ್ದ-ಜಡತೆ, ಪ್ಲಾಟ್‌ಫಾರ್ಮಿನ ಮೇಲಿನ ಭೀಮಭಯಂಕರ ಗದ್ದಲ ನನ್ನನ್ನು ಆ ಲೋಕದಿಂದ ಈ ಲೋಕಕ್ಕೆ ಇಳಿಸಿದವು. ದಾದರದಿಂದ ವ್ಹಿ. ಟಿ. ಎಷ್ಟು ದೂರದ ದಾರಿ? ನಾನು ವ್ಹಿ.ಟೀ.ಗೆ ಇಳಿಯಬೇಕು.

ವ್ಹಿ.ಟೀ.ಗೇ ಯಾಕೆ? ಇನ್ನು ಈ ವಿಚಾರಕ್ಕೆ ಅವಕಾಶವಿರಲಿಲ್ಲ. ಸಾಹೇಬರಿಗೆ ಭೆಟ್ಟಿಯಾಗಿ. ಅವರ 'ಎನ್‌ಕ್ವಾಯರಿ'ಗೆ ಅನುಕೂಲವಾಗಲೆಂದು ಶ್ಯಾಮರಾಯನ ಮರಣ-ಸನದನ್ನು ಅವರಿಗೆ ಸಾದರಪಡಿಸಬೇಕೇ? ಅಥವಾ ಶ್ಯಾಮರಾಯನನ್ನೇ ಗಾಠಾಯಿಸಬೇಕೇ? ಅವನಿಗೆ ಈ ಪತ್ರದ ಗೌಪ್ಯಸ್ಫೋಟನದ ಭೀತಿಯನ್ನು ಹಾಕಿ ನೋಡಬೇಕೇ? ಅವನೂ ಕದಾಚಿತ್ ಸೇಕ್ರಟರಿಏಟಕ್ಕೆ ಬಂದಿರುವ

ಸಂಭವವಿರುತ್ತಿತ್ತು. ಸಾಹೇಬರ ತಪಾಸಣೀ ನಡೆದಾಗ ಅವನು ರಿಕಾಮೀ ಇರುವ ಸಂಭವವಿತ್ತು. ಅವನೇ ನನ್ನನ್ನು ತಡವಿದರೆ? ತಟ್ಟನೆ ಏನೆಂದು ಉತ್ತರಿಸುವದು? ನಿನ್ನೆಯೇ ಅವನು ಮುಂಬೈಗೆ ಬಂದಿದ್ದ. ಕದಾಚಿತ್ ತಯ್ಯಬ್ಜೀ ಅವರ ಮನೆಗೆ ಫೋನು ಮಾಡಿ ನನ್ನ ಬಗ್ಗೆ ವಿಚಾರಿಸಿರುವ ಸಂಭವವಿತ್ತು. ಅವರು ನನ್ನ ನಿರ್ಗಮನದ ಕಾರಣವನ್ನು ಹೇಳಿರಬಹುದಿತ್ತು. ಇಂದು ನಾನು ಅವನ ಮುಂದೆ ಧುತ್ತೆಂದು ಹೋಗಿ ನಿಂತರೆ, ಗೋವಿಂದಭಟ್ಟನ ಜಡ್ಡಿನ ಕಾರಣ ತೀರಾ ಬನಾವಟ್ ಬಾತಮೀಯೆಂದು ಅವನಿಗೆ ವಿದಿತವಾಗುತ್ತಿತ್ತು. ಸುಳ್ಳು ನೆವ ಹೇಳಿ ಮುಂಬೈ ಬಿಟ್ಟುಹೋಗಿ ಒಂದೇ ರಾತ್ರಿಯಲ್ಲಿ ಹಿಂದಿರುಗಿ ಬಂದು ಮತ್ತೆ ಹಜರ್ ಆಗಬೇಕಾದರೆ ದಾದಲ್ಯಾ ಖಚಿತವಾಗಿ ಪುಣೆಗೆ ಪ್ರಯಾಣಿಸಿ ಬಂದಿರಬೇಕೆಂಬ ಸಂಶಯ ಅವನಿಗೆ ಬಾರದಿರುತ್ತಿರಲಿಲ್ಲ; ಅಥವಾ ತಾನು ಬರುವ ಆಗಾವು ಸೂಚನೆ ಕೊಟ್ಟದ್ದು ಗೊತ್ತಿದ್ದೂ – ಮೋರೆ ತಪ್ಪಿಸಲು ಈ ಡಾವು ಮಾಡಿರಬೇಕೆಂಬ ಕಲ್ಪನೆ ಮಿಂಚದೆ ಇರುತ್ತಿರಲಿಲ್ಲ. ಸಾಹೇಬರ ಸುತ್ತು ಸುತ್ತು ನಾನು ಅಲೆಯುವದನ್ನು ಕಂಡರೆ, ತನ್ನ ಆಗಮನದ ಆಗಾವು ಬಾತಮೀ ನನಗೆ ತಿಳಿದಿರುವಂತೆ. ಸಾಹೇಬರದೂ ತಿಳಿದಿರಬೇಕೆಂಬ ದೃಢ ಭಾವ ಮೂಡುತ್ತಿತ್ತು. ಶ್ಯಾಮರಾಯ ಖಟ್ಟಿಗೆ ಹಚ್ಚಿ ಕಿಲಾಪಿಸದೆ ಬಿಡುತ್ತಿರಲಿಲ್ಲ. ಸಾಹೇಬರಿಂದ ನನ್ನನ್ನು ಅಗಲಿಸಿ ಬಾತಮೀ ಹೊರಡಿಸಲು ಯತ್ನಿಸದಿರುತ್ತಿರಲಿಲ್ಲ.

ಪುಣೆಯ ಸ್ಟೇಶನ್ನಿನ ಮೇಲೆ. ಸುರೇಶ-ಬಸವಂತಿಯರ ಎದುರು. ಮುಂಬೈಯಲ್ಲಿ ಏನೇನೋ ಮಾಡುತ್ತೇನೆಂದು ಜಂಬಕೊಚ್ಚಿದ ಯಾವ ಮಾತೂ ನೆರವಿಗೆ ಬರದೆ. ಅನಿರ್ಣೀತ ಸ್ಥಿತಿಯಲ್ಲಿ ನಾನು ಡೋಲಾಯಿಸತೊಡಗಿದೆ. ಹೊತ್ತು ನೋಡಿದೆ. ಹತ್ತೂವರೆಯಾಗಿ ಹೋಗಿತ್ತು. ವ್ಹಿ.ಟಿ.ಯಲ್ಲಿ ಇಳಿದವನೇ ನೇರವಾಗಿ ಸಾಹೇಬರಿಳಿದ ಹೊಟೇಲಿಗೆ ಹೋದರೆ ಹೇಗೆ? ಕದಾಚಿತ್ ಅವರ ಭೆಟ್ಟಿ ಅಲ್ಲೇ ಆದರೆ? ಅಷ್ಟು ಭರವಸೆ ಇರಲಿಲ್ಲ. ಅವರು ಯಾವತ್ತು ಸೀ.ಈ. ಅವರನ್ನು ಕಾಣಬೇಕೆಂದು ತಿಳಿಸಲಾಗಿತ್ತೋ ಏನೋ? ಅದರ ಬಗ್ಗೆಯೂ ನನಗೆ ಏನೂ ಗೊತ್ತಿರಲಿಲ್ಲ. ಸೋಕ್ಷ-ಮೋಕ್ಷ ಏನೇ ಆಗಲಿ, ಒಮ್ಮೆ ಅವರು ಇಳಿದುಕೊಂಡ ಹೊಟೇಲಿಗೇ ಹೋಗಿ ನೋಡಿಕೊಂಡು ಬರುವದೇ ಸಮವೆಂದು ಠರಾಯಿಸಿದೆ.

ಅಲ್ಲಿ ಅವರು ಭೆಟ್ಟಿಯಾಗದಿದ್ದರೆ ಥೇಟ ಸೇಕ್ರಟರಿಏಟಿಗೇ ಧಾವಿಸುವದು. ಅಲ್ಲೇ ಅವರನ್ನು ಗಾಠಾಯಿಸುವದು. ರಾಗ-ರಂಗ ನೋಡಿಕೊಂಡು ಗಾಳ ಬೀಸುವದು. ನನ್ನನ್ನು ಕಂಡ ಕೂಡಲೇ ಅವರ ಹೃದಯ-ಪುಟ ಪೂರಾ ತೆರೆದು ಇದ್ದು-

ಬಿದ್ದುದನ್ನು ಹೇಳಿ ಹಾಡಿಕೊಳ್ಳುತ್ತಿರುವ ವಿಷಯದಲ್ಲಿ ಸಂಶಯವಿರಲಿಲ್ಲ. ಆಗ ಅವರ ಧೈರ್ಯ-ಸ್ಥೈರ್ಯ ಅಜಮಾಯಿಸಿ ನೋಡುವದು. ತೀರ ಗಳಿತಾವಸಾನರಾದಂತೆ ಕಂಡರೆ, ಪತ್ರದ ವಿಷಯ ಎತ್ತುವದು. ಇದರ ಬಲದಿಂದ ಸಾಹೇಬರಂತೂ ಪಾರು ಬೀಳುತ್ತಿದ್ದರು. ಶ್ಯಾಮರಾಯ ಪೇಚಿನಲ್ಲಿ ಬರುತ್ತಿದ್ದ. ಅವನ ಕೋಪ ಕೆದಕುತ್ತಿತ್ತು. ಅದರ ಕಿಚ್ಚು ನನಗೆ-ಬಸವಂತಿಗೆ ರಾಚುತ್ತಿತ್ತು. ಅದರ ಆಪೋಷಣೆಗೆ ಇಬ್ಬರದೂ ಸಿದ್ಧತೆ ಇತ್ತು.

ಶ್ಯಾಮರಾಯ ಸಿಂತಲ್ಲಿಯೇ ಕಾಳರಾತ್ರಿಯಾಗಿ ನಮ್ಮನ್ನು ನುಂಗುತ್ತಿದ್ದಿಲ್ಲ. ಸೇಡಿನ ಕತ್ತಿಯನ್ನು ಝಳಪಿಸುತ್ತಿರಲಿಲ್ಲ. ನಾಕು ದಿನದ ಅವಧಿಯಲ್ಲಿ ಅವನೇನೂ ಜಗತ್ತನ್ನೇ ಬುಡಮೇಲು ಮಾಡುತ್ತಿರಲಿಲ್ಲ. ನಾಕು ದಿನದ ಅವಕಾಶ ಸಿಕ್ಕರೆ, ದಾದಲ್ಯಾ ಶ್ಯಾಮರಾಯನಿಗೇ ಮೃತ್ಯುಭಯಂಕರನಾಗುತ್ತಿದ್ದ. ಸಾಹೇಬರಿಗೆ ಪುಣೆಯ ದಾರಿ ತೋರಿಸಿ, ತಾನು ಬಸವಂತಿಯ ಬೆಂಗಾವಲಿಗೆ ಊರಿಗೆ ಧಾವಿಸುತ್ತಿದ್ದ. ದಾದಲ್ಯಾ-ಬಸವಂತಿಯರ ಯಮಳ-ಯುತಿಯನ್ನು ಶ್ಯಾಮರಾಯ ಎದುರಿಸಿ ಬದುಕುವದು ಕಠಿಣವಿತ್ತು.

ಆದರೆ ಶ್ಯಾಮರಾಯನ ಭಾನಗಡಿಯ ಕಥೆ ಸೇಕ್ರೆಟರೀಏಟಿನಲ್ಲಿಯ ಅಧಿಕಾರೀ ವೃಂದಕ್ಕೆ ವಿದಿತವಾದರೆ, ಅದರ ಕರಾಳ ಛಾಯೆ ಸುರೇಶನನ್ನು ಆವರಿಸುವ, ಆವರಿಸಬಹುದೆಂಬ ಭೀತಿಯನ್ನು ಸುರೇಶ ವ್ಯಕ್ತಪಡಿಸಿದ್ದ. ರಾವಜೀಕಾಕಾ ಅವರ ಮಾನಧನ ಮೊಮ್ಮಗನಿಗೆ, ಅಭಿಮಾನಧನಿ ಸೋನಕ್ಕನ ಮಗನಿಗೆ, ಹೀನಮಾನಸ ಶ್ಯಾಮರಾಯನ ಕೃಷ್ಣಛಾಯೆ ತುಡುಕುವ ಕಲ್ಪನೆಯೇ ಅಸಹ್ಯವಾಗಿತ್ತು. ಸಾಹೇಬರೆದುರೂ ಅವನ ನಾಲಸ್ತಿಯಾಗುವ ಭೀತಿ ಇತ್ತು. ಆಂಗ್ಲ ತಳಿಯ ಸೀ.ಈ. ಖವಳಿಸಿದರೆ, ಶ್ಯಾಮರಾಯನನ್ನು ನೆಲಕ್ಕೆ ಮಟ್ಟಿಬಿಡುತ್ತಿದ್ದರು. ಅವನ ಕೂಡ, ಅವನ ದೋಸ್ತರೂ ಖತಮ್ ಆಗುತ್ತಿದ್ದರು. ತಮ್ಮ ಕಚೇರಿಯಲ್ಲಿ ತಮ್ಮ ಬೆನ್ನಿಗೆ ಇಂಥ ಭಾನಗಡಿಯ ನಾಟಕ ನಡೆಸುವ ಜನವಿದ್ದುದನ್ನು ಕಂಡು ಅವರು ರೋಸದೆ ಇರುತ್ತಿರಲಿಲ್ಲ. ಸುರೇಶನ ಕಳವಳವನ್ನು ಅನುಲಕ್ಷಿಸಿ ಪತ್ರದ ಗುಪಿತವನ್ನು ಸಾಹೇಬರಿಗೆ ನಿವೇದಿಸದಿದ್ದರೆ, ಅವರು ಬಚಾವಾಗುವದು ಬಿಗಿಯಿತ್ತು. ಶ್ಯಾಮರಾಯ ಖೊಟ್ಟಿ ಸಾಕ್ಷಿ-ಪುರಾವೆಗಳನ್ನು ಪೋಣಿಸಿ ಅವರನ್ನು ತೊಂದರೆಯಲ್ಲಿ ತರುತ್ತಿದ್ದ. ತಾನು ಸಹಿಸಲಾಮತ್ ಪಾರುಬೀಳುತ್ತಿದ್ದ. ಸಾಹೇಬರಿಗೆ ಪರಮಾವಧಿ ಶಿಕ್ಷೆಯೆಂದು ಬೆಳಗಾಂವಿಯಿಂದ ಬದಲಿಯಂತೂ ಆಗೇ ಆಗುತ್ತಿತ್ತು. ಅವರು ಎಸ್.ಈ. ಆಗುವ

ಕೈಗೆ ಬಂದ ಘನ ಕ್ಷಣ ಅವರ ನೌಕರಿಯ ಅವಧಿಯಲ್ಲಿಯೇ ಮತ್ತೆ ಉದಿಸುತ್ತಿರಲಿಲ್ಲ. ಅವರು ಕಾಯಿ ಮುಗ್ಗಿಯಾದಂತಾಗಿ ಉಳಿದುಬಿಡುತ್ತಿದ್ದರು. ಯಾವ ಅನ್ಯಾಯ, ಯಾವ ಅಕೃತ್ಯ ಮಾಡದೆಯೂ ಘನ ಅನ್ಯಾಯಕ್ಕೆ ಬಲಿಯಾಗುತ್ತಿದ್ದರು. ತಮ್ಮ ಇಡೀ ಜೀವಮಾನದುದ್ದ ನವೆಯುತ್ತಿದ್ದರು.

ಶ್ಯಾಮರಾಯ ತಮ್ಮ ಎದುರು ಸಾಕ್ಷಿ ಸಾರಲು ಬಂದಿರುವ ವಿಷಯ ಸಾಹೇಬರಿಗೆ ಅವಗತವಿದ್ದಂತೆ ಕಾಣಲಿಲ್ಲ. ಹಿಂದೆ ಈ ಅರ್ಜಿಯ ನಿಕಾಲೆಯನ್ನು ಮಾಡುವಾಗ. ಬೆಳಗಾಂವಿಯಲ್ಲಿಯ ನಮ್ಮ ನಿವೃತ್ತ ಎಸ್.ಈ.ಸಾಹೇಬರು ಶ್ಯಾಮರಾಯನಿಂದ ಲೇಖೀ ಜವಾಬು ಪಡೆದುಕೊಂಡು ಇಟ್ಟಿದ್ದರು. ಅದು ಸಾಹೇಬರಿಗೆ ಗೊತ್ತಿತ್ತು. ಅದನ್ನು ಎಸ್.ಈ. ಸಾಹೇಬರು ಆಫೀಸಿನ ರೆಕಾರ್ಡಿನಲ್ಲಿ ಮಡಗಿಸಿದ್ದರೋ, ಏನು ತಮ್ಮ ಖಾಸಗೀ ಫಾಯಲಿನಲ್ಲಿ ಸೇರಿಸಿದ್ದರೋ ತಿಳಿಯು ವಂತಿರಲಿಲ್ಲ. ಹಿಂದಿನ ಎಸ್.ಈ. ಸಾಹೇಬರು ತಮ್ಮ ಮೂಕೀ ಅರ್ಜಿಗೆ ನೀರು ಹಚ್ಚಿದರು. ಇಂದು ಅವರು ಹೊರಟು ಹೋಗಿದ್ದಾರೆ. ಮತ್ತೆ ನಾಕು ಅರ್ಜೀ ಒಗೆಸಿದರಾಯಿತೆಂದು, ಶ್ಯಾಮರಾಯ ಹೊಸ ಅರ್ಜಿಯ ಸರವನ್ನೇ ಸರಕಾರಕ್ಕೆ ಕಳಿಸಿರುವ ಶಕ್ಯತೆ ಇತ್ತು. ಹಿಂದಿನ ಎಸ್.ಈ. ಸಾಹೇಬರು ತಮ್ಮ ಮೇಲೆ ಒತ್ತಾಯ ತಂದ ಕಾರಣ ನಿರುಪಾಯವಾಗಿ ತಾವು ಹಾಗೆ ಬರೆದುಕೊಟ್ಟೆವೆಂದು. ಅನ್ಯ ಕಂತ್ರಾಟದಾರರಿಂದ ಹೇಳಿಸಲು ಶ್ಯಾಮರಾಯ ಆಸಿಮಿಸಿ ನೋಡುತ್ತಿರಲಿಲ್ಲ. ಈ ಅಶಿಕ್ಷಿತ-ಕಂತ್ರಾಟದಾರ-ಮಂಡಳಿ ಗಾಳಿ ಬೀಸಿದತ್ತ ಹೊರಳುವ ಜಾತಿ.

"ಇಂಗ್ರೇಜ್ಯಾಗ ಬರದ ಮಜಕೂರಾ ನಮಗೇನು ತಿಳಿಯೂದರಿ? ನಿನಗೇನು ಇಜಾ ಆಗ್ಯಾಂಗಿಲ್ಲಾ. ಇಲ್ಲೆ ಸಹೀ ಮಾಡು ಅಂದರು. ಇಲ್ಲಂತ ಅಲ್ಲಾಕ ಹ್ಯಾಂಗ ಬರತೈತ್ರೀ? ದಿನಾ ಬೆಳಗಾದರ. ಕೆಲಸಕಂತ ಅವರ ಕಚೇರೀ ಬಾಕಲದಾಗ ಹೋಗಿ ನಿಂದರಾವರು. ಸಹಿ ಮಾಡೂ ಅನೂತ್ಲೇ. ಮಾಡಿದೇವ್ರೀ"
ಎಂದೇ ಖಚಿತವಾಗಿ ತರಾವಿಕ ಉತ್ತರ ಕೊಡುತ್ತಿದ್ದರು. ಅಥವಾ ಹಾಗೆ ಉತ್ತರ ಕೊಡಲಿಕ್ಕೆ ಶ್ಯಾಮರಾಯ ಅವರನ್ನು ತರಬೇತಿ ಮಾಡಿದ್ದರೂ ಮಾಡಿರಬಹು ದಾಗಿತ್ತು. ಹಿಂದಿನ ಅರ್ಜಿಯ ನಿಕಾಲೆಯಾಗಿ ಬಹಳವಾದರೆ ಒಂದು-ಒಂದೂವರೆ ವರುಷವಾಗಿರಬೇಕು ಅಷ್ಟೇ. ಮತ್ತೆ ಹೊಸ ಅರ್ಜಿಗಳ ನಾಯಿಛತ್ತ್ರಿಗೆ ಎದ್ದದ್ದು ಸರಕಾರಕ್ಕೂ ತಲೆಶೂಲೆಯಾಗುತ್ತಿತ್ತು. ಮೇಲಿಂದ ಮೇಲೆ ಈ ನಿಗ್ಗರ ಬೇಡ ವೆಂದು ಅವರು ಸಾಹೇಬರನ್ನೇ ಬೆಳಗಾಂವಿಯಿಂದ ಉತ್ಥಾಪಿಸುವ ಸಂಭವವಿತ್ತು.

ಸಾಹೇಬರಿಗೆ ಬೆಳಗಾಂವಿಯಲ್ಲಿ ಜಾಗೀರಿ ಇರಲಿಲ್ಲ. ಹೇಗೆ ಬಿಟ್ಟು ಹೋಗಲಿ ಎನ್ನುವ ದುಃಖವೂ ಇರಲಿಲ್ಲ. ಗುಜರಾಥ-ಮಹಾರಾಷ್ಟ್ರ ಅಲೆದು ಬಂದವರಿಗೆ ಇನ್ನೊಂದು ಊರಿಗೆ ಬದಲಿಯಾದರೆ ಏಕೆ ಕೆಡುಕೆನಿಸೀತು? ಆದರೆ ಈ ಬದಲೀ ಸಹಜಾಸಹಜೀ ಆಗುತ್ತಿರಲಿಲ್ಲ. ಇತಿಹಾಸದ ಪಾನನ್ನು ಬೆನ್ನಿಗೆ ಹಚ್ಚಿಕೊಂಡು ಆಗುತ್ತಿತ್ತು. ಆ ಪಾನಿನ ಬಾಲಾಗಸಿ ಸಾಹೇಬರಿಗೆ ಬೇಡವಾಗಿತ್ತು.

ಶ್ಯಾಮರಾಯನೇ ಈ ಭಾನಗಡಿಯ ಬುಡದಲ್ಲಿದ್ದಾನೆಂದು ಸಾಹೇಬರಿಗೆ ತಿಳಿದರೆ ಅವರು ಬಾಲಾಗಸೀ ಸಹಿತ ಬೇರೆ ಕಡೆಗೆ ಧಾವಿಸುತ್ತಿದ್ದರು. ಯಾಕಂದರೆ, ಅವರ-ಶ್ಯಾಮರಾಯನ ಋಣಾನುಬಂಧ ಇಂದಿನದಲ್ಲ. ಶ್ಯಾಮರಾಯನೂ ಅವರ ಕೂಡ ನವಕರಿಯಲ್ಲಿದ್ದಾಗ–ಅದನ್ನು ಬಿಟ್ಟು ಹೊಸತಾಗಿ ಕಂತ್ರಾಟ-ಧಂದೇ ಮೊದಲು ಮಾಡಿದಾಗ ಇಬ್ಬರಲ್ಲೂ ಏನೇನು ಪತ್ರವ್ಯವಹಾರ ಚಾಂದೀ-ಖುರಾಕು ವ್ಯವಹಾರ ಸಾಗಿತ್ತೋ ಯಾರು ಬಲ್ಲರು? ಅದನ್ನು ಈಗ ಶ್ಯಾಮರಾಯ ಸಾಕ್ಷಿ ಯೆಂದು ಮುಂದೆ ಚಾಚಿಸಲೆತ್ನಿಸಿದರೆ? ಬರೇ ಬದಲಿಯ ಮೇಲಿಂದಲೇ ಈ ಪ್ರಕರಣ ಬಗೆಹರಿದರೆ ಅವರಿಗೆ ಸಾಕುಸಾಕಾಗುತ್ತಿತ್ತು.

ಗಾಡಿ ನಿಂತಿತು. ವ್ಹಿ.ಟೀ. ಬಂದಿತು. ದಾದಲ್ಯಾನಿಗೆ ಗಾಡಿ ಬಿಟ್ಟು ಇಳಿಯದೆ ಗತಿಯೇ ಇರಲಿಲ್ಲ. ಗಾಡಿ ಅಂತ್ಯಗುರಿಗೆ ಬಂದು ಧಡಕಾಯಿಸಿದರೂ, ದಾದಲ್ಯಾ ವಿಚಾರದ ಅಂತರಾಳದಲ್ಲಿಯೇ ಜೀಕುತ್ತಿದ್ದ. ಬಾಸ್ಕೆಟ್‌ಬಾಲಿನಂತೆ ಬರೇ ಕೈ ಯಿಂದ ಕೈಗೆ ನೆಗೆದಾಡುತ್ತಿದ್ದ. ರಿಂಗಿನಲ್ಲಿ ಬೀಳುವ ಯಾವ ಆಶೆಯೂ ಅವನಲ್ಲಿ ಉಳಿದಿರಲಿಲ್ಲ. ಬಾವುಂಡರಿ ರೇಖೆಯನ್ನು ಬಿಟ್ಟು ಬೀಳಬೇಕು. ಇಲ್ಲವೇ ಬರೇ ಗಾಳಿ ಯಲ್ಲಿ ಕೈಯಿಂದ ಕೈಗೆ ಹಾರಾಡಬೇಕು.

ಯಾವುದೇ ರಿಂಗಿನಲ್ಲಿ ಬಿದ್ದರೂ ಅಂತಿಮ ಗತಿಯನ್ನು ಮುಟ್ಟೇನಲ್ಲವೆಂದು ನಾನು ಸಾಹೇಬರಿಳಿದ ಹೊಟೇಲಿನ ಕಡೆಗೆ ಝಪ ಝಪ ಹೆಜ್ಜೆ ಹಾಕತೊಡಗಿದೆ.

ಸಾಹೇಬರು ಇಳಿದುಕೊಂಡ ಹೊಟೇಲು ಸ್ಟೇಶನ್ನಿನಿಂದ ಅಷ್ಟೇನೂ ದೂರ ವಾಗಿರಲಿಲ್ಲ. ನಿಧಾನವಾಗಿ ನಡೆದುಕೊಂಡು ಬಂದರೆ ಹತ್ತು ಮಿನೀಟಿನ ಹಾದಿ. ನಾನೀಗ ಓಡುವ ಧರ್ತಿಯಿಂದಲೇ ಧಾವಿಸುತ್ತಿದ್ದೆ. ಐದು ಮಿನೀಟಿನ ಅವಧಿಯಲ್ಲಿ ಹೊಟೇಲಿನ ಮಹಾದ್ವಾರದ ಸಮ್ಮುಖದಲ್ಲಿ ಬಂದು ನಿಂತೆ. ಕೆಳ ಮಜಲಿನ ಹೊರ ಬಾಗಿಲದಲ್ಲಿಯೇ ಇದ್ದ ಮ್ಯಾನೇಜರನನ್ನು ವಿಚಾರಿಸಿ ಸಾಹೇಬರ ಠಾಂವ-ಠಿಕಾಣ ತಿಳಿದುಕೊಂಡೆ. ಅವರು ನಾಲ್ಕನೇ ಮಜಲಿನ ೩೦ ನಂ. ಕೋಣೆಯಲ್ಲಿದ್ದ ಪತ್ತೇ

ಹತ್ತಿತು. ಮ್ಯಾನೇಜರನಿಂದ ಅನತಿದೂರದಲ್ಲಿ, ಲಿಫ್ಟ್, ಏರಿಳಿಯುವ ಜಾಗವಿತ್ತು. ಅಲ್ಲಿಗೇ ನಡೆದೆ. ಆದರೆ 'ಲಿಫ್ಟ್ ಔಟ್ ಆಫ್ ಆರ್ಡರ್' ಎಂದು ಬರೆದ ಹೊತ್ತ ಪಾಟಿ. ನನಗೆ ಲಿಫ್ಟಾರೋಹಣದ ಯೋಗವಿರದ ಸಂದೇಶ ಸಾರುತ್ತ ನಿಂತಿತ್ತು. ನಿರುಪಾಯನಾಗಿ, ಆ ದರಿದ್ರ ಹೊಟೇಲನ್ನು ಶಪಿಸುತ್ತ ನಾಲ್ಕನೇ ಮಜಲಿನ ಆಕಾಶಗಮನೋದ್ಯಮಕ್ಕೆ ನಡೆದೆ. ಸ್ಟೇಶನ್ನಿನಿಂದ ಧಾವಿಸಿ ಬಂದಿದ್ದೆ. ಈಗ ಸ್ವರ್ಗಾರೋಹಣ ನಡೆಸಿದೆ. ಧಾಪು ಹತ್ತಿ ಜೀವ ಕೆಳಗೆ-ಮೇಲೆ ಆಗತೊಡಗಿತು. ಹೇಗೋ ಬಂದು ೩೦ ನಂಬರಿನ ಮುಂದೆ ಮಾಡಿದ ಕೋಣೆಯ ಬಾಗಿಲು ಗುದ್ದಿದೆ.

"Yes. Come in please."

ಸ್ವಾಗತ-ಕರೆ ಬಂತು. ಆದು ಸಾಹೇಬರದೇ ದನಿ. ಅವರು ಕೋಣೆಯಲ್ಲಿ ಇದ್ದಾರೆ. ಸೇಕ್ರಟರೀಏಟಿಗೆ ಹೋಗಿಲ್ಲ. ದಾದಲ್ಯಾ ಧಡಾರನೇ ಬಾಗಿಲನ್ನು ನೂಕಿ ಕೋಣೆಯಲ್ಲಿ ನುಗ್ಗಿದ. ದಾದಲ್ಯಾ-ಸಾಹೇಬರು ಮುಖಾಮುಖಿಯಾದರು.

"Come in come in ದಾದಲ್ಯಾ... I am so happy. ಆಂs. you have come ದಾದಲ್ಯಾ. I never expected you so early. ಆಂs. It is good you have come. I badly needed you ಆಂs.... ಏನಂದಿ ದಾದಲ್ಯಾ? ಮುಂಬೈಯಾಗ ದಿಶಾಭೂಲ ಆಗತದೇನಪಾ. ಇಂದ ಇಲ್ಲಿ ಇದ್ದ ರಸ್ತೇ ನಾಳೆ ಇಲ್ಲಾ. ಈ ರಸ್ತೇದಿಂದ ಆ ರಸ್ತೇಕ್ಕ ಹೋಗೂದಾದರ, ಕೈಯಾಗ ಜೀವಾನs ಹಿಡಕೊಂಡು ಹೋಗಬೇಕು. ಇಂದ ಮುಂಜಾನೆ ಒಂದಿಷ್ಟು ಕೆಲಸ ಇತ್ತಂತ ಹೊರಗ ಹೋಗಿದ್ದೆ. ರಸ್ತೇ 'ಕ್ರಾ:ಸ್' ಮಾಡುವಾಗ, ಅಗದೀ 'ಟ್ಯಾಕ್ಸೀ' ಬಾಯಿಗೇ ಬಿದ್ದಿದ್ದೆ. ಹ್ಯಾಂಗೋ ಬಚಾವಾದೆ ... it was a miraculous escape. ನೀ ಬಂದಿ. ಇನ್ನ ಝುಲ್ಲು ಬಿಟ್ಟಿತು ದಾದಲ್ಯಾ. Bombay is fast developing on London - New York lines. ಹತ್ತ ವರ್ಷ ಸಾಕ ದಾದಲ್ಯಾ... it will be number one city in India... ಏನಂತೀ?"

ಸಾಹೇಬರು ಭಾರೀ ಖುಷಿಯಲ್ಲಿದ್ದರು. ಅವರ "ಏನಂತೀ"ಗೆ ನಾನು ಏನೂ ಅನ್ನದ ಸ್ಥಿತಿಯಲ್ಲಿದ್ದೆ. ಲಂಡನ್ನ-ನ್ಯೂಯಾರ್ಕ ಇಬ್ಬರೂ ಚಿತ್ರದಲ್ಲಿ ನೋಡಿದ್ದು ಎಷ್ಟೋ ಅಷ್ಟೇ. ನನ್ನ ಭೌಗೋಲಿಕ ಜ್ಞಾನ, ಸಾಹೇಬರ ಜ್ಞಾನಕ್ಕಿಂತ ತಾಜಾ ತರತರೀತ ಇದ್ದರೂ, ನಾನು ಇವುಗಳ ಬೆಳವಣಿಗೆಯ – 'ಡೆವ್ಹೆಲಪ್‌ಮೆಂಟ್'ದ ವಿಚಾರವನ್ನು ಮಾಡಿರಲಿಲ್ಲ. ಈ ಪಟ್ಟಣಗಳಲ್ಲಿ ನಾನು ಸ್ಥಾಯಿಯಾಗಿ ನಿಲ್ಲುವ

ಅವಕಾಶವೂ ಇರಲಿಲ್ಲ. ನಾನು ಇನ್ನೂ ಲಂಡನ್-ನ್ಯೂಯಾರ್ಕ ಶಹರುಗಳ ಬೆಳವಣಿಗೆಯ ತಂದ್ರಿಯಲ್ಲಿಯೇ ನಿಂತಿರುವದನ್ನು ನೋಡಿ, ಸಾಹೇಬರು —

"ಅರೇ ದಾದಲ್ಯಾ, ನಿಂತ್ಯಾಕಽ? ಕೂಡಂತ ಹೇಳಬೇಕೇನು? Be homely; ಇದೇನ ದಾದಲ್ಯಾ? ಕೈಯಾಗ ಚೀಲ ಯಾತರದು? ಅರಿವೀ-ತುರುಕೀಯಲಾ? ಊರಿಗೇನರಽ ಹೊಂಟ ನಿಂತೇನು ಮತ್ತಽ? ಸುರೇಶ ಹೇಳಿದಾ – ನಾ ಬರೂವದನ್ನ ನಿನಗ ತಿಳಿಸೀನ್ಯಂತ. ನಾ ಇಕಡೆ ಬರೂದಕ್ಕ – ನೀ ಬ್ಯಾರೇ ಕಡೇ ಹೊರಡೂದಕ್ಕ ಗಂಟ ಬಿತ್ತೇನು ಮತ್ತಽ? ಎಕಡೆ ಪ್ರಯಾಣ ದಾದಲ್ಯಾ?"

"ಇದೇ ಗಾಡೀ ಇಳದವನೇ ನಿಮ್ಮ ಕಡೇನ ಬಂದೆ. ನಿಮ್ಮನ್ನ ಇದರಗೊಳ್ಳಲಿಕ್ಕೆ ಪುಣೇಕ್ಕಽ ಹೋಗಿದ್ದೆ. ಪುಣೇದ ಸ್ಟೇಶನ್ನ ಮ್ಯಾಲ, ನಂದೂ-ನಿಮ್ಮದೂ ಚುಕಾಮುಕೀ ಆತು. ಶಕೂ-ಸುರೇಶ ಸ್ಟೇಶನ್ ಮ್ಯಾಲಽ ಭೆಟ್ಟಿ ಆದರು......"

ನನ್ನ ಮಾತು ಇನ್ನೂ ಮುಗಿದಿರಲಿಲ್ಲ. ಸಾಹೇಬರು ಏನೋ ಹುಕಿಯಲ್ಲಿ ಬಂದವರಂತೆ – ಕೈತಟ್ಟಿ ಚಪ್ಪಾಳೆ ಇಕ್ಕುತ್ತ —

"Oh! then it is very fine. You did meet ಶಕೂ on the station. ಅಲ್ಲಪಾ ರಾತ್ರೀ ಗಾಡಿಗೆ ಹೋದಾಂವಾ, ಮತ್ತ್ಯಾಕ ಬೆಳಗ ಅನೂದರಾಗ 'right about-turn' ಮಾಡಿದಿ? ನಂದೇನು, ಹ್ಯಾಂಗರ ನಡೀತಿತ್ತು. ಫೋನ್ ಮಾಡಿ ವಿಶ್ವಾಸನ್ನ ಕರಿಸಿಗೋತಿದ್ದೆ. ಹ್ಯಾಂಗೂ ಹೋದಾಂವಾ ಹೋಗಿದ್ದಿ. ಎರಡ ದಿನಾ ಇದ್ದ ಬರಬೇಕಾಗಿತ್ತೋ ಇಲ್ಲೋ? ಇಲ್ಲೀ ಕೆಲಸ ಬಗೀಹರದ ಮ್ಯಾಲಽ ನಾನೂ ಪುಣೇಕ್ಕಽ ಬರಾಂವ ಇದ್ದೆ. ಶಕೂಗ ರಗಽಡ ಹೇಳಿದೆ. ಮುಂಬೈ ಮಜಾ ನೋಡಾಕ್ಯಂತ ನಡೀ ಅಂತಽ. ಸುರೇಶ ಅಲ್ಲಿದ್ದಾಗ ಇಲ್ಲೇನು ಮಜಾ ಬರಬೇಕು ಹೇಳು ಆಕೀಗೆ? ಹಾಂ... ದಾದಲ್ಯಾ, ಈ ಸಾರೆ ಪುಣೇದಾಗ ನಾಕ ದಿನಾ ನಿಂದರೂ ಬೇತಲೇನಽ ಬಂದೀನಿ. ಮುಕ್ಕಾಮಂತೂ ಕಾಕಾಸಾಹೇಬರಲ್ಲೇ ಹಾಕೂದು. ಸೋನಕ್ಕನ ಮನೀ ನನಗೇನು ಹೊರಗಿಂದಲ್ಲಾ. ಶಕೂನ ದಶಿಂದ ಅಷ್ಟು ಮಾತ-ಕಥೀ ಆಡಿ ಮುಗಿಸೇಬಿಡೂದಂತ ಠರಾಸೀನಿ. ಅರೇ ದಾದಲ್ಯಾ, ಮಾತಿನ್ಯಾಗ ಮರತೇಬಿಟ್ಟೆ. ಇನ್ನಾ ನಿಂದು ಕೈಕಾಲ ಮಾರಿ ಸುದ್ದೇ ಆಧಾಂಗ ಕಾಣಲಿಲ್ಲಾ. ಅಷ್ಟ ಬಗೀಹರಸು... I shall order tea for you. ನಾ ಊಟಕ್ಕನಽ ಕೂಡಾಂವ ಇದ್ದೆ. ಒಂದ ಘಂಟೇಕ್ಕ ಸೇಕ್ರಟರೀಏಟಕ್ಕ ಹೋಗಬೇಕು. ದಾದಲ್ಯಾ, ಮತ್ತ ಮೂಕೀ ಅರ್ಜೀ ಶುಕ್ಲಕಾಷ್ಮಽ ಬೆನ್ನಿಗೆ ಹತ್ತೇದ. ಘನ ಹೇಸಿ ಮಂದ್ಯಪಾ. ನಾನಾ ಥರದ

ಅರ್ಜೀ. ನಾನಾ ಥರದ 'ಎಲಿಗೇಶನ್'...ಹೇಸಿಕಿ ಇಟ್ಟಿತಪಾ. ಎಸ್.ಈ. ಆಗೂದು ಬ್ಯಾಡಾ. ಈ 'ಪ್ರಮೋಶನ್' ಬ್ಯಾಡಾ. ಏನೂ ಬ್ಯಾಡಾ ಅಂತs ಅನಿಸಿಬಿಟ್ಟsದ. ಎಲ್ಲ್ಯರ ಬ್ಯಾರೇ ಕಡೇ ಬದಲೀ ಮಾಡಿದರಂದರ ಅಗದೀ ಖುಷೀಯಿಂದ ಹೋಗತೇನಿ ನೋಡು. ಶಕೂನ ಲಗ್ನ ಠರಾವಾದರ ನಾ ಏನು ಬೆಳಗಾಂವ್ಯಾಗ ಮಾಡೂದಿಲ್ಲಾ. ಒಂದ ಇತ್ತು ಒಂದ ಇಲ್ಲಾ – ಪ್ರಣೇದಾಗs ಅಕ್ಕೀಕಾಳ ಹಾಕಿಬಿಡತೇನಿ. ಬೆಳಗಾಂವಿ ಸೋಬತೀನs ಬ್ಯಾಡಾ ಅಂತs ಅನಿಸಿಬಿಟ್ಟsದ."

ಸಾಹೇಬರ ಊಟ ಬಡಿಸಿಕೊಂಡು ಹೊಟೇಲಿನ ಹುಡುಗ ಬಂದ. ಅವನಿಗೆ ಚಹ ತರಲು ತಿಳಿಸಿ ಸಾಹೇಬರು ಊಟಕ್ಕೆ ಕುಳಿತರು. ನಾನು ಮುಖಮಾರ್ಜನ ಮುಗಿಸಿಕೊಂಡು ಬಂದೆ. ಅವರ ಊಟದ ರುಚಿ ಕೆಡಿಸಬಾರದೆಂದು, ನಾನು ಅರ್ಜಿಯ ಪ್ರಕರಣದ ಮಾತು ತೆಗೆಯದೆ —

"ನಮ್ಮ ರಂಗಕ್ಕವರು ಆರಾಮ ಇದ್ದಾರಿಲ್ಲೋ? ಶೋಮರೇಮಾದಾ ಏನಂತಾರ? ನೀವು ಮಾತ್ರ ನಾಕಾರ ತಿಂಗಳದಾಗ ಅಗದೀ ಇಳಧಾಂಗ ಆಗೇದ. ತಬ್ಯೇತ ಠೀಕ ಇದ್ದಿದಿಲ್ಲೇನು? ಶಕೂನಿಂದ ಮೂರ-ನಾಕ ಕಾಗದ ಬಂದಿದ್ದು. ನಿಮ್ಮ ಪ್ರಕೃತೀ ದಶಿಂದ ಏನೂ ಬರದಿರಲೇ ಇಲ್ಲಲಾ?"
ದೇಶಾವರಿಯ ಭಾಷೆಯಲ್ಲಿ ಪ್ರಸ್ತಾಪಮಾಡಿದೆ. ಆದರೆ ಸಾಹೇಬರ ತಲೆಯಲ್ಲಿ ಇನ್ನೂ ಆ ಮೂಕೀ ಅರ್ಜಿಯು. ಬೆಳಗಾಂವಿಯ ವಾತಾವರಣದ ಗುಂಗು ಗುಂಯಿ ಗುಡುತ್ತಿರಬೇಕು. ನನ್ನ ದೇಶಾವರೀ ಭಾಷೆಯಿಂದ ಅವರ ತಂದ್ರಿಗೆ ಧಕ್ಕೆ ತಗಲಿದಂತೆ ಕಾಣಲಿಲ್ಲ. ಆಗಲೇ ಅರಗಚ್ಚಿಯಾಗಿ ಆಡಿದ ಮಾತಿನ ಜಾಡನ್ನು ಓಡಿದು ಅವರು —"ದಾದಲ್ಯಾ, ಈ ಸಾರೇ ಬಂದ ಮೂಕೀ ಅರ್ಜೀ ಘನಿ ಥ್ವಾಡೇ ಬ್ಯಾರೇ ಆಗೇದ. ಇಂಜಿನರ್‌ಸಾಹೇಬರು ಬರೇ 'ಕರಪ್ಟ' ಅಷ್ಟೇ ಇಲ್ಲಾ: 'first-rate womaniser' ಇದ್ದಾರಂತ ಅಪಶ್ರುತಿ ಕೂಡಿಸ್ಯಾರ. ಇದರ ಮ್ಯಾಲs ಹೆಚ್ಚಿನ 'ಸ್ಟ್ರೆಸ್' ಕೊಟ್ಟಾರ. ರೊಕ್ಕಾ ತಿನ್ನಾಂವಾ ಪಾವತೀ ಕೊಡತಿರೂದಿಲ್ಲ ದಾದಲ್ಯಾ. ನನ್ನ 'ಕರಪ್ಶನ್' ಏನ 'ಪ್ರೂವ್' ಮಾಡೂವವರು? ಅದನ್ನೂ ಮಾಡ್ಯಾರಂತ ತ್ರಿಳೀ. ಆದರ ನಾನು 'ವೂಮನ್ಯಾಜರ್' ಇದ್ದೇನಿ ಅನೂದಕ್ಕ ಏನ ಸಾಕ್ಷೀ ಅದ? ಯಾ ಹೆಣ್ಣಮಗಳ್ನ ನಾ ಕೆಡಿಸೇನಿ? ಎಂದ ಅಂಥಾ ರಾಡ್ಯಾಗ ಕಾಲ ಇಟ್ಟೇನಿ? ನನಗ ಏನೇನು ಗೋಪಾಳ ಕೊಟ್ಟಾರ ಅನ್ನೂದನ್ನ ವಿಲೇವಾರ, ತಾರೀಖು, ತಿಥೀ ಹಾಕಿ ನಮೂದ ಮಾಡ್ಯಾರ. ಜರೀ ರೇಶಿಮಿ ಕಾಠದ ಸೀರಿ ಇಲ್ಲದೇ ಶ್ಯಾಮರಾಯಾ

ನಮ್ಮ ಬಂಗಲೇಕ ಹೋಗತಿದ್ದಿಲ್ಲಾ. ಇಂಥಾ ತಾರೀಖಿನ ದಿನಾ, ಅಮುಖ ಬೆಳಗಾಂವೀ ಅಂಗಡ್ಯಾಗ ಅಂವಾ ಸೀರೀ ಖರೀದೀ ಮಾಡಿದ್ದಾ. ನಮ್ಮ ಮನೀ ಅಂವರ ಜವಳೀ ಅಂಗಡ್ಯಾಗೇದ ಇಷ್ಟ ಅರಿವೀ-ಅಂಚಡೀ ವಸ್ತ್ರಾ-ಒಡವಿ ಸಹಜಾ ಸಹಜೀ ಯಾರೂ ಕೊಳ್ಳತಿರೂದಿಲ್ಲಾ ಅಂತ್ಯ ಅರ್ಜೀ ಒಳಗ ನಮೂದ ಆಗೇದ. ಶ್ಯಾಮರಾಯನ ವಿರುದ್ಧ ಪಾರ್ಟೀ ಮಂದೀನೇ ಅವನ ಪಾಳತೀ ಮ್ಯಾಲ ಇದ್ದು ಹೀಂಗ ಅರ್ಜಿ ಮಾಡಿರಬೇಕು. ಒಂದ ವ್ಯಾಳ್ಯಾ ಇದು ಖರೇ ಅಂತೂ ತಿಳೀ. ಆವರ ನಾನು 'ಪೂಮನ್ಯಾಜರ್' ಅಸೂದಕ್ಕ ಏನರ್‍ಯ ಸಾಕ್ಷೀ ಬೇಕಾದಾವಲಾ? ಅದನ್ನ ಸುದ್ದೇ 'ಪ್ರೂವ್ಹ್' ಮಾಡತೇವು ಅಂದಾರ. ಶ್ಯಾಮರಾಯ-ನಬೀಸಾಬ, ಬಸಗೋಂಡಾ ಇವರು 'ಏಕ್ಸ್-ಇಂಜಿನಿಯರ್' ಅವರ ಅಗದೀ ವಶೀಲಿಯ ಕಂಟ್ರಾಕ್ಟರು. ಅವರ್ನ 'ಥ್ರೆಟನ್' ಮಾಡಿದರ ಎಲ್ಲಾ ಹೊರಬೀಳತದ ಅಂತನೂ ಬರದಾರ. ಅವರ್‍ನೂ 'ಏನ್‌ಕ್ವಾಯರಿ' ದಶಿಂದ ಕರಸ್ಯಾರಂತ. ಹದನೈದು-ಇಪ್ಪತ್ತು ದಿನಾ ಆತು. ಶ್ಯಾಮರಾಯಾ ಕೈಗೇ ಹತ್ತಲಿಲ್ಲಾ. ಊರಿಗೆ ಎರಡ-ಮೂರ ಸಾರೇ ಹೇಳಿ ಕಳಿಸಿದೆ. ಸಾಂಗಲೀಗೆ ಹೋಗ್ಯಾರಂತ ಬಾತಮೀ ಬಂತು. ಅವರಿಗೂ ಈ ಅರ್ಜೀ ಬಾತಮೀ ತಿಳಧಾಂಗ ಇಲ್ಲಾ. ಇದರ ವಾಸನಿ ಬಡದಿದ್ದರ ಅವರೇನು ನನಗ ತಿಳಸದೆ ಇರತಿದ್ದಿಲ್ಲಾ. ಬಸಗೋಂಡಾ-ನಬೀಸಾಬಾ ಅವರ್ನ ಕರಿಸಿ ಕೇಳಿದರ ಇಬ್ಬರೂ ಕಿಂವೀಮ್ಯಾಲ ಕೈ ಇಟಗೊಂಡರು. ಅರ್ಜೀ ಮಾಡಿದವರನ ಉದ್ಧಾರ ಮಾಡಿದರು. ಇವರೆಲ್ಲಾರನೂ ಸಾಕ್ಷೀಗೆ ಕರಸ್ಯಾರ. ಶ್ಯಾಮರಾಯರು ಎಲ್ಲೆ ಇಳದಾರ ಅಸೂದು ಹ್ಯಾಂಗ ಪತ್ತೇ ಆಗಬೇಕು? ಅವರ ಸಾಕ್ಷೀ ಎಂದ ಅದ್ಯ ಅಸ್ನೂದು ಸೇಕ್ರೆಟರಿಏಟಕ್ಕ ಹೋದಮ್ಯಾಲ ತಿಳದೀತನ್ನು."

"ಪುಣೇ ಸ್ಟೇಶನ್ನ ಮ್ಯಾಲ್ಯ ಸುರೇಶ ನಿಮಗ ಏನೂ ಹೇಳಲಿಲ್ಲೇನು? ಅಂವಗ ಶ್ಯಾಮರಾಯರ ಹಾಲ್‌ಚಾಲೀ ಗೊತ್ತಿರೂ ಸಂಭವಿತ್ತು."

"ನಾ ದಾವಲ್ಯಾಗ ಕಾಗದಾ ಬರದೀನಿ. ಅಂವಾ ಬಂದು ಜರೂರ ನಿಮ್ಮ ಭೆಟ್ಟಿ ಆಗತಾನಂತ ಇಷ್ಟೇ ಹೇಳಿದಾ. ಶ್ಯಾಮರಾಯರ ಹೆಸರಾ ಅರ್ಜೀ ಒಳಗ ನಮೂದ ಆಗೇದ. ಅರ್ಜೀ ವಿಷಯಾ ಅರ್ಥಾತ್ 'ಆಫೀಸಿಯಲ್ ಸಿಕ್ರೆಟ್' ಅದ್ಯ. ಅವರಿಗೆ ಅದರ ವಾಸನೀನೂ ಇರೂ ಶಕ್ಯತಾ ಇಲ್ಲಾ. ಸಾಕ್ಷೀದಶಿಂದ ಅವರಿಗೆ ಮೋಘಮ್ 'ಮೆಮೊ' ಹೋಗಿರಬೇಕು. ಶ್ಯಾಮರಾಯರ್‍ಯ ಆಗಲಿ – ಉಳದವರ್‍ಯ ಆಗಲಿ, ನನ್ನ ವಿರುದ್ಧ ಹೇಳೂದಂತೂ ಶಕ್ಯನ್ಯ ಇಲ್ಲಾ. ಒಟ್ಟ ನಾಕೆಂಟ ಮಂದಿ

ಕಂತ್ರಾಟದಾರರಿಗೆ 'ಮೆಮೊ' ಬಂದಾವಂತ ಸುದ್ದಿ ಹತ್ತಿತು. ಎಲ್ಲಾರೂ ಸಾಕ್ಷೀಗೆ ಬಂದಾರನೂ ಭರೋಸ ಇಲ್ಲಾ. ಬಂದರೂ ನನಗ 'ಫೆವ್ಹರೆಬಲ್' ಆಗೂ ರೀತೀ ಕೇನs ಸಾಕ್ಷೀ ಹೇಳತಾರ. ಆ ಖಾತ್ರೀ ಅದs ದಾದಲ್ಯಾ ನನಗ."

ಸಾಹೇಬರು ಇನ್ನೂ ಕತ್ತಲೆಯಲ್ಲಿಯೇ ಇದ್ದರು. ಅವರಿಗೆ ಶ್ಯಾಮರಾಯ ಆ್ಯಂಡ್ ಕೋ.ದ ಭಿಸ್ತು ಬಲವಾಗಿತ್ತು. ಶ್ಯಾಮರಾಯನಿಗೆ ಹೇಳಿಕಳಿಸಿದ್ದರೂ. ಅವನು ಸಾಹೇಬರ ಮುಖವನ್ನು ತಪ್ಪಿಸಿ ಅಲೆಯುತ್ತಿರುವವರಲ್ಲಿಯ ಡಾವು ಇನ್ನೂ ಅವರಿಗೆ ವಿದಿತವಾದಂತಿರಲಿಲ್ಲ. ಎಸ್.ಈ. ಅವರ ಮುಂದೆ ನಡೆದ ವಿಚಾರಣೆ ತಮಗೆ ಅನಕೂಲವಾದಂತೆ ಇಲ್ಲಿಯೂ ಆಗಬಹುದೆಂಬ ಭರವಸೆ ಅವರಿಗೆ ಬಲವಾದಂತೆ ಕಾಣುತ್ತಿತ್ತು. ತಮಗೆ ಆರೋಪಿಸಿದ 'ಪ್ರೂಮನ್ಶೈಜರ್' ಆರೋಪ ತಥ್ಯರಹಿತವಾದದ್ದರ ಬಗ್ಗೆ ಅವರಿಗಿರುವ ಖಾತ್ರೀ ಭದ್ರವಾಗಿತ್ತು. ಆ ಬಲವನ್ನು ನೆಚ್ಚಿ ಅವರು ಅನ್ಯ ಆರೋಪಗಳನ್ನು ಲಘುವಾಗಿ ಭಾವಿಸಿದ್ದರು. ಒಂದು ಸಿದ್ಧವಾಗದಿದ್ದರೆ ಉಳಿದ ಆರೋಪಗಳ ಹುಡೆಯೂ ಮುರಿದುಬೀಳುವದೆಂದು ಅವರು ಭಾವಿಸಿದಂತಿತ್ತು. ಈ ಭಾವನೆಯ ದೃಢತೆಗೆ ಸಾಹೇಬರ ವ್ಯಾವಹಾರಿಕ ಅನುಭವ-ಶೂನ್ಯತೆಯಷ್ಟೇ ಅವರ ಬಾಲಿಶ-ಮನೋವೃತ್ತಿಯೂ ಕಾರಣವಾಗಿತ್ತು. ಸಾಹೇಬರು ಈ ಬಾಬತ್ತಿನಲ್ಲಿ ಏಕಾಕ್ಷಿಯಾಗಿದ್ದರು. ಹಸಿರು ಕಂಡು ಹರ್ಷಿಸುತ್ತಿದ್ದರು. ಆದರೆ ಹಸಿರಿನ ಬುಡದಲ್ಲಿಯ ಹಾವಸೆಯನ್ನು – ಅದರ ಬುಡದಲ್ಲಿ ಅಡಗಿದ ಮಿಡಿನಾಗರವನ್ನು ಕಾಣುವ ನೋಟ ಅವರಿಗಿರಲಿಲ್ಲ. ಮೂಕೀ ಅರ್ಜಿಗಳ ಬುಡದಲ್ಲಿ ಮಡಗಿದ ಶ್ಯಾಮರಾಯನ ವಿಷದಂತಿ-ನಾಗರದ ಕಲ್ಪನೆ ಅವರಿಗಿದ್ದಿರಲಿಲ್ಲ. 'ಎನ್‌ಕ್ವಾಯರಿ' ಸಮಯದಲ್ಲಿ ಅವರು ಶ್ಯಾಮರಾಯನನ್ನು ಏರುಗಟ್ಟಿಕೊಂಡು ಮಾತಾಡುವ ಸಂಭವವೇ ಇತ್ತು. ಅವನ ತಾರೀಫು ಮಾಡಲೂ ಅವರು ಆಸಿಮಿಸಿ ನೋಡುತ್ತಿರಲಿಲ್ಲ. ಇದರ ಲಾಭ ಪಡೆದು ಶ್ಯಾಮರಾಯ ಬಸಗೋಂಡ, ನಬೀಸಾಬರನ್ನು, ಸಾಧ್ಯವಿದ್ದರೆ ಅನ್ಯ ಕಂತ್ರಾಟದಾರರನ್ನು ಅಡ್ಡದಾರಿಗೆಳೆದು ಸಾಹೇಬರ ಎದುರು ಹೇಳಿಕೆಯನ್ನು ಕೊಡಿಸಿ, ತಾನು ಮಾತ್ರ ಸಹಿಸಲಾಮತ್ ಪಾರಾಗುವ ಬೇತನ್ನು ಸಾಧಿಸಬಹುದಾಗಿತ್ತು.

ಊರಿನಿಂದ ನೇರವಾಗಿ ಪುಣೆಗೆ ಬಂದಿದ್ದರೂ, ಶ್ಯಾಮರಾಯ ತಾನು ಸಾಂಗಲಿಗೆ ಹೋಗಿರುವ ಖೊಟ್ಟಿ ಬಾತಮಿಯನ್ನು ಸಾಹೇಬರಿಗೆ ಮುಟ್ಟಿಸುವ ಮುಂಜಾಗ್ರತೆ ವಹಿಸಿದ್ದ. ಸಾಂಗಲಿಗೆ ಹೋಗಿದ್ದಾರೆಂದು ತಿಳಿದರೆ, ಅವರಿಗೆ

ಸಂಶಯವೂ ಬರುತ್ತಿದ್ದಿಲ್ಲ. ಮಾವ-ಅಳಿಯನ ಸಂಬಂಧದ ಗಂಧ ಹದಗೆಟ್ಟ ವಿಷಯ ಸಾಹೇಬರಿಗೆ ಅವಿದಿತವಿತ್ತು. ಶ್ಯಾಮರಾಯನ ಈ ಸುಳ್ಳಿನ ಗುಳಿಗೆ ಸಹಜವಾಗಿ ಸಾಹೇಬರ ಗಂಟಲಲ್ಲಿ ಇಳಿದುಬಿಟ್ಟಿತ್ತು.

"ಅಲೀಕಡೇ, ನಿಮಗ-ಶ್ಯಾಮರಾಯರಿಗೆ ಶಕೂನ ಮದವೀ ಸಂಬಂಧೀ ಮಾತಾಡೂ ಪ್ರಸಂಗೇನರ್ರ ಬಂದಿತ್ತೇನು? ಶ್ಯಾಮರಾಯರು ಏನಂತಿದ್ದರು ನಿಮ್ಮ ಮಾತಿಗೆ?"

ನಾನು ಕೇಳಿದೆ.

"ಹತ್ತ ಸಾರೆ ಭೆಟ್ಟಿ ಆಗಿತ್ತು ದಾದಲ್ಯಾ. ಯಾಕ್ರ? ನಾನೇ ಹೇಳಿದ್ನೆಲಾ. ಶ್ಯಾಮರಾವ್, ನೀವು ಬರೇ ಮಮ ಅನೂದು ಅಷ್ಟ್ರ ಬಾಕೀ. ಎಲ್ಲಾ ಠರಾಸಿ ಧಾಂಗ ಆಗೇದ. ಇನಾ ನಿಮ್ಮ ಹಿರ್ಯಾರಿದ್ದಾರ. ಅವರಿಷ್ಟು 'ಯೆಸ್' ಅಂದರ ಬಗೀಹರೀತು. ಅವರ್ನ ಭೆಟ್ಟಿ ಆಗೂದರ ದಶಿಂದ ಪುಣೇಕ್ಕ ಹೋಗೂ ವಿಚಾರ ಮಾಡೀನಿ. ನೀವು ಬರೂದು ಜರೂರೀ ಅದ್ರ. ನಿಮ್ಮಿಂದ ನಕಾರ ಬರೂದಂತೂ ಧೂರಸ್ರ, ಏನ್ರ್ಯಪಾ. ಅಂತ್ರ ಭೆಟ್ಟಿ ಆದಾಗೊಮ್ಮೆ ಹೇಳೀನಿ. ಶ್ಯಾಮರಾಯರು ಹಾಂಗ ಸರಳಹೃದಯೀ. ಹಿರ್ಯಾರು-ಕಿರ್ಯಾರು, ಅನೂ ಗೌರವ ಇಟಗೊಂಡಾರ. ಅವರ ತಂದೀಯವರನ 'ಕನ್‌ಸಲ್ಟ್' ಮಾಡೂದು ಅನೂತ್ಲೇ, 'ಯೆಸ್-ನೋ' ಎರಡೂ ಅಲ್ಲಿಲ್ಲಾ. ಆ ಭಾರಾ ಹಿರ್ಯಾರ ಮ್ಯಾಲ ಹಾಕ್ಯಾರಂತ್ರ ನಿರ್ಧಾಸ್ತಾಗಿ ಇದ್ದಾರ. ಇಂಥಾ ವೃತ್ತೀ ಈಗಿನ 'ಜನರೇಶನ್ನ'ದಾಗ ಉಳದಿಲ್ಲ ದಾದಲ್ಯಾ. ಇಂದ ಕುಟುಂಬ-ಜೀವನಾ ಯಾಕ ವಿಸಖಳಿತ ಆಕ್ಸೋತ ನಡದ್ರದಂದೀ? ಹಿರ್ಯಾರಲ್ಲೀ ಗೌರವ ಕಡಿಮಿ ಆಗಲಿಕ್ಕೆ ಹತ್ತೇದಂತ. ಅವರು ಕುಟುಂಬದ ಕಲ್ಯಾಣ ಮಾಡ್ಯಾರಿಲ್ಲೋ ಅನೂ ಅಭರೋಸ ಹುಟ್ಟೇದಂತ...we belong to this decaying ಅನ್ನೂ dying ಅನ್ನ ... golden age ... ಏನಪಾ. ನಾವು ಅಂಥಾ 'ಯೇಜ್' ದವರು ಅಂತ್ರ ಹೇಳಿಕೊಳ್ಳಲಿಕ್ಕೆ ಅಭಿಮಾನ ಯಾಕ ಅನಸಬಾರದು ಹೇಳು? 'ಆ:ಲ್ ರೈಟ್' ನಿಂದೇನ 'ಪ್ರೋಗ್ರ್ಯಾಮ್' ದಾದಲ್ಯಾ? ಇಕಾ, ಸ್ನಾನಾ-ಊಟಾ ಇಲ್ಲೇ ಬಗೀಹರಸು. ತಾಸೆರಡ ತಾಸು ವಿಶ್ರಾಂತೀ ತಗೋ. ಪ್ರವಾಸದಾಗ ಹೈರಾಣ ಆಗಿರಬೇಕು. ರಾತ್ರೀ ನಿದ್ದೀನೂ ಆಗಿರಲಿಕ್ಕಿಲ್ಲಾ. ಅಂಧಾಂಗ ದಾದಲ್ಯಾ, ಮರತೇ ಹೋಗಿತ್ತ ನೋಡು ಕೇಳೂದು. ನೀ ಇಷ್ಟು ಅವಸರಲೇ ಪುಣೇಕ್ಕ ಯಾತರ ದಶಿಂದ ಹೋಗಿದ್ದಿ? ಲಗೇಚನ್ರ ತಿರಿಗಿ ಯಾಕ ಬಂದೀ? ಏನರ್ರ 'ಪ್ರೈವೇಟ್'




ಕೆಲಸ ಇತ್ತೇನು?"
ಸಾಹೇಬರು ಡ್ರೆಸ್ಸು ಮಾಡಿಕೊಳ್ಳುತ್ತಿದ್ದಂತೆ ಕೇಳಿದರು.

ಈ ಪ್ರಾಣಿಯ ವಿಚಿತ್ರ ವರ್ತನೆಯಿಂದ ನನಗೆ ಸಂತಾಪವೆನಿಸತೊಡಗಿತ್ತು. ಇದು ಬರೇ dying - decaying generation ಕ್ಕೆ ಸೇರಿದ್ದಲ್ಲ – already dead and gone generationಕ್ಕೆ ಸೇರಿದ್ದೆಂಬ ಖಾತ್ರೀ ಆಯಿತು. ತನ್ನ ವಿಚಾರಣೆಯ ಕಾಳಜೀ ಅದಕ್ಕೆ ಇರಲೇ ಇಲ್ಲ. ಶ್ಯಾಮರಾಯನ ತಾರೀಫು – ತನ್ನ ಸತ್ತ, ಸಾಯುತ್ತಿರುವ ಸ್ವರ್ಣಯುಗದ ಉಘೋ ಉಘೋ ನಡೆಸುವದರಲ್ಲಿಯೇ ಅದು ದಂಗಾಗಿತ್ತು. ಅದಕ್ಕೆ ನನ್ನ ಊಟದ, ವಿಶ್ರಾಂತಿಯ ವಿವಂಚನೆ ಹತ್ತಿತ್ತು. ವಿಚಾರಣೆಯಲ್ಲಿ ತಾನು ಅನಾಮತ್ತಾಗಿ ಚಿತ್‌ಪಟ್ಟವಾದರೆ ಅಖಂಡ ಜೀವಮಾನದುದ್ದ ಆಹಾರ-ನಿದ್ರಾ-ಸುಖ-ಪರಾಙ್ಮುಖಿಯಾಗಿ ವರವರ ಅಲೆಯಬೇಕಾದೀತಲ್ಲವೆಂಬ ಭೀತಿಯೂ ಸುಳಿದಿರಲಿಲ್ಲ. ಈ ವಿಕ್ಷಿಪ್ತ ವ್ಯಕ್ತಿಯ ವೃತ್ತಿವಿಲಾಸದಿಂದ ನನಗೆ ಕನಿಕರ-ಸಂತಾಪವೆನಿಸತೊಡಗಿತು. ಶ್ಯಾಮರಾಯನ ಬಗ್ಗೆ ನಿತಾಂತ-ಆದರ-ವಿಶ್ವಾಸವಿಟ್ಟುಕೊಂಡ ಸಾಹೇಬರಿಗೆ ಅವನ ಪತ್ರದ ಇತ್ಯರ್ಥವಾದರೆ ಅದರ ವಿಪರೀತ ಪರಿಣಾಮವಾಗದೆ ಹೋಗುತ್ತಿರಲಿಲ್ಲ. ಸಾಹೇಬರಂಥವರ ಮನಸ್ಸು ಸಲಿಲಸದೃಶ, ಯಾವ ಬಾಟ್ಲೀಯಲ್ಲಿ ಹಾಕಿದರೂ ಸಾಕು – ಆ ಆಕಾರ ಧಾರಣಮಾಡುವಂತಹದು. ಶ್ಯಾಮರಾಯ ಖಾತ್ರೀಯಿಂದ ಇದರ ಗೈರ ಫಾಯದೇ ತೆಗೆದುಕೊಂಡು ಅಂತಿಮ ತಂತು ಛೇದಿಸುತ್ತಿದ್ದ. ಸಾಹೇಬರನ್ನು ಅಲಗದ್ ಮೇಲಕ್ಕೆತ್ತಿ ಸಾವಿರಡಿಯ ಕಂದರದ ಆಳಕ್ಕೆ ಎಸೆಯುತ್ತಿದ್ದ. ಅವನೇ ತಮ್ಮ ಈ ಪತನಕ್ಕೆ ಕಾರಣನೆಂಬ ಕಲ್ಪನೆಯೂ ಅವರಿಗೆ ಬರುವಂತಿರಲಿಲ್ಲ. ಶ್ಯಾಮರಾಯನ ಮುಂದೆ ಸಾಹೇಬರು ಕೇವಲ ಬಟ್ಟು ಚೀಪುವ ಮುಂಗಡಿ ಕೂಸು. ಬಾಯಿಮಾತಿನಿಂದ ನಾನೇ ಆಗಲಿ, ಯಾರೇ ಆಗಲಿ, ಸಾಹೇಬರಿಗೆ ಶ್ಯಾಮರಾಯನ ಹೀನಮಾನಸದ ದರ್ಶನ ಮಾಡಿಸುವದು ಅಶಕ್ಯವಾಗಿತ್ತು. ಹಾಗೇನಾದರೂ ನಾನು ಹೇಳುವ ಎತ್ತುಗಡೆ ಮಾಡಿದ್ದರೆ, ಅವರ ಕೈ ಕಿವಿಗೆ ಹೋಗುತ್ತಿದ್ದವು. ನಾನು ಚಿತ್ರಿಸಿದ ಶ್ಯಾಮರಾಯನ ವಿಕೃತ-ಚಿತ್ರವನ್ನು ನೋಡಲಾರದೆ ಅವರ ಕಣ್ಣು ತಂತಾನೇ ಮುಚ್ಚುತ್ತಿದ್ದವು. ಸಾಹೇಬರ ಬಾಯಿ "ಶಾಂತಂ ಪಾಪಂ"ದ ಗಾಯತ್ರಿಯನ್ನು ನುಡಿಸುತ್ತಿತ್ತು. ಸಾಹೇಬರಿಗೆ ಅವಸಾನದ ಸಮಾಧಿ ಹತ್ತುತ್ತಿತ್ತು.

ಇದನ್ನು ತಪ್ಪಿಸಲು – ಶ್ಯಾಮರಾಯನ ಸ್ವರೂಪದ ಸಮ್ಯಗ್‌ದರ್ಶನವನ್ನು

ಮಾಡಿಸಲು – ಅವನ ಇತಿಹಾಸವನ್ನು ತೋಂಡೀ-ಪ್ರೋಕ್ಷಮಾಡದೆ ಅವನ ಲೇಖೀ ಪುರಾವೆಯಾದ ಪತ್ರವನ್ನು ಸಾಹೇಬರಿಗೆ ಸಾದರಪಡಿಸಿದರೆ ...

ಅದರ ಆಕಸ್ಮಿಕ ಆಘಾತವನ್ನು ಸಹಿಸುವ ತ್ರಾಣವೂ ಅವರಲ್ಲಿ ಇರಲಿಲ್ಲ. ದಾದಲ್ಯಾ ಕೈಯಾರೆ ಸಾಹೇಬರ ಅವಸಾನ ಪೂರ್ತಿಮಾಡುತ್ತಿದ್ದ. ಆ ಕಾಗದವನ್ನು ನೋಡಿಯೇ ಅವರು ತಣ್ಣಗಾಗುತ್ತಿದ್ದರು. ಹೊಟೇಲಿನ ಪಾವಟಣಿಗೆಗಳನ್ನು ಇಳಿಯುತ್ತಿರಲಿಲ್ಲ. ನಾಕು ಜನ ಸೇರಿ ಅವರ ಕಳೇಬರವನ್ನು ಕೆಳಗಿಳಿಸುವ ಪ್ರಸಂಗ ಬರುತ್ತಿತ್ತು. ಅದರ ಶಾಪ-ತಾಪ, ರಂಗಕ್ಕ, ಸೋನಕ್ಕ. ಶಕೂ, ಸುರೇಶರಿಗೆ ತಟ್ಟದೆ ಇರುತ್ತಿರಲಿಲ್ಲ. ವಿಶ್ವಾಸ, ಕಾಕಾ ಅದರಿಂದ ವಿಚಲಿತರಾಗದೆ ಇರುತ್ತಿರಲಿಲ್ಲ. ಪತ್ರದ ಗೌಪ್ಯಸ್ಫೋಟ ಬಹಳ ಜನದ ಬಲಿ ಕೊಳ್ಳುತ್ತಿತ್ತು. ಶ್ಯಾಮರಾಯನ ಕೂದಲೂ ಕೊಂಕುತ್ತಿರಲಿಲ್ಲ.

"ದಾದಲ್ಯಾ, ವ್ಯಾಳ್ಯಾ ಆಗತ್ಯ ಬಂತು. ನಾ ಹೊಂಡತೀನಿ! ನಾಲ್ಕು-ನಾಲ್ಕೂ ವರಿ ಸುಮಾರಿಗೆ ತಿರಿಗಿ ಬರತೀನಿ. ಅಲ್ಲೀ ತನಕಾ ಬೇಕಾರ ನೀ ಇಲ್ಲೇ ಇರೂ. ನಾ ಬಂದ ಮ್ಯಾಲ ಮುಂದಿನ 'ಪ್ರೊಗ್ರ್ಯಾಮ್' ಠರಾಸೂಣಂತ. ವಿಶ್ವಾಸನ ಕಡೇನೂ ಹೋಗಿ ಬರೂಣಂತ. ಅಂವನ್ನೇ ಇಲ್ಲಿಗೆ ಕರಸೂದು ಬ್ಯಾಡಾ. ವ್ಯರ್ಥ ಅವನ ಅಭ್ಯಾಸದಾಗ ಅಡಥ್ಳ ಆಗೂದು. ಅಂವಗೂ ಸುಮ್ಮನೇ ಧಾವತಿ. ಬ್ಯಾಸರೆನಿಸಿ ದರ ಬೇಕಾರ ನೀ ಒಂದು ರಾವುಂಡ್ ಹೊಡದ ಬಾ; but you must be here before four ಅಂ. ತಿಳೀತೇನು?"

ಕಾಗದ-ಪತ್ರವಿದ್ದ 'ಲೆದರ್ ಕೇಸ್' ಎತ್ತಿಕೊಂಡು ಸಾಹೇಬರು ಹೊರಟರು.

"ಎರಡ-ಮೂರರ ಸುಮಾರಕ್ಕ ನಾನೇ ಸೇಕ್ರುಟರಿಏಟದ ಕಡೇ ಬರತೀನಿ. ನನಗೂ ಅಲ್ಲೆ ಒಂದಿಬ್ಬರು ಗೆಳ್ಯಾರ ಇದ್ದಾರ. ಇಲ್ಲೆ ಕೂಡೂದೇ ಅಲ್ಲೇ, ನಿಮ್ಮ ದಾರೀ ನೋಡಿಕೋತ ಕೂತರಾತು. ನಿಮ್ಮದು ಏನರ್ರ 'ಟೈಪು-ಗೀಯ್ಪು' ಮಾಡೂದಿದ್ದರ ನಾನೇ ಮಾಡೂದು ಠೀಕಾ."

"ಹಾಂಗೇ ಮಾಡ ದಾದಲ್ಯಾ. ನನಗ ಒಂದಕ್ಕ 'ಅಪಾಂಟ್‌ಮೆಂಟ್' ಅದs. ಚೀಫ್ ಇಂಜಿನಿಯರ್ ಸಾಹೇಬರು ಬರೂದೂ ಅಷ್ಟ ಹೊತ್ತಿಗೇನs. ಒಂದೆರಡು 'ಟೆಕ್ನಿಕಲ್ ಪೇಪರ್ರೂ' ಅವs. ಅದರದಶಿಂದನೂ 'ಡಿಸ್ಕಶನ್' ಅದs. 'ಏನ್‌ಕ್ವಾಯರೀ'ದೂ ಅಂಥಾದೇನು 'ಸೀರಿಯೆಸ್ ಕಾ:ಜ್' ಅಲ್ಲಾ. 'ಏನ್‌ಕ್ವಾಯರಿ' ಮಾಡಿದೇವು ಅನೂ ನಾಟಕಾ ಮಾಡೂವವರು. ಮೂಕೀ ಅರ್ಜೀ ಹಣೇಬರಾನ ಇಷ್ಟು.

It all depends on the contractor's statement. ಅವರ ಸ್ಟೇಟ್‌ಮೆಂಟ್ ತಗೊಂಡರಂದರ ಬಗೀಹರೀತು. ಅವರು ದಗಾ ಕೊಡಲಿಕ್ಕಿಲ್ಲಂತs ಧೈರ್ಯಾ ಅದs ನನಗ. 'ಆಲ್‌ರೈಟ್' ದಾದಲ್ಯಾ, ನಾ ಹೋಗತೀನಿ ಇನ್ನs."
ಇಷ್ಟು ಹೇಳಿ ಸಾಹೇಬರು ಹೋಗಿಯೇಬಿಟ್ಟರು.

ಎಲ್ಲ ಕಂತ್ರಾಟದಾರರು ಅವರ ಕೈಬಿಟ್ಟು ದಗಾ ಕೊಟ್ಟ ಕಲ್ಪನೆ ಇನ್ನೂ ಅವರಿಗೆ ಬಂದಿರಲಿಲ್ಲ. ಬರುವ ಸಂಭವವೂ ಇರಲಿಲ್ಲ. ನಾನು ಪುಣೆಗೆ ಏಕೆ ಹೋದದ್ದು ಎಂದು ಅವರೇ ಕೇಳಿದ್ದರು. ನಾನು ತಟ್ಟನೇ ಉತ್ತರಿಸದೆ ನನ್ನ ತಂದ್ರಿಯಲ್ಲಿಯೇ ಉಳಿದಿದ್ದೆ. ನಾನು ಉತ್ತರವನ್ನೇಕೆ ಕೊಡಲಿಲ್ಲವೆಂದು ವಿಚಾರಿಸಿ ತಿಳಿದು ಕೊಳ್ಳುವಷ್ಟು ವ್ಯವಧಾನ, ಕಿಲಾಪ, ಕೌಟಿಲ್ಯನೀತಿ ಅವರಲ್ಲಿ ಇರಲಿಲ್ಲ. ಸಾಹೇಬರು ಕೂಸು-ಹೃದಯಿ ಎನ್ನಬೇಕೋ—ತೀರ ಮಳ್ಳ ಗಿರಾಕಿ ಎನ್ನಬೇಕೋ ನನಗೊಂದೂ ಹೊಳೆಯದಾಯಿತು.

ಸಾಹೇಬರೆದುರು ಪತ್ರದ ಗುಪಿತಸ್ಫೋಟ ಮಾಡುವದು ತೀರ ಅಶಕ್ಯ ವೆನಿಸತೊಡಗಿತು. ಶ್ಯಾಮರಾಯನ ಸ್ವಹಸ್ತಾರ ಖುದ್ದ ಲಿಖಿತ, ಸಾಕ್ಷಿ-ಪತ್ರವನ್ನು ನೋಡಿ ಅವರು ಅಕಾಲ-ಮೃತ್ಯು-ಮುಖಿಯಾಗುತ್ತಿದ್ದರೆಂಬ ಖಾತ್ರೀ ನನಗಾಯಿತು. ಶ್ಯಾಮರಾಯನ ಪತ್ರವನ್ನು ನೋಡಿ ಆ ಜೀವ ವಿಲಿವಿಲಿ ಒದ್ದಾಡಿ. ಸಹಸ್ರ ಕೆಂಜಗ ಕಡಿದ ನೋವಿನಿಂದ ನರಳಿ ನರಳಿ ಅಸು ನೀಗುವದು ತೀರ ಅಸಹ್ಯ ವೆನಿಸತೊಡಗಿತು. ಈ ಸುಮ-ಕೋಮಲ ಜೀವನಕ್ಕೆ, ಪತ್ರದರ್ಶನದಿಂದ ಘಾಲಾ ಪ್ರಯೋಗವಾಗುತ್ತಿತ್ತು. ಆ ಪತ್ರದರ್ಶನ ಮಾಡಿಸಿದ ದಾದಲ್ಯಾನಿಗೆ ಘಾಲಾ ಪ್ರಯೋಗದ ಮಹಾ ಪಾಪ ತಟ್ಟುತ್ತಿತ್ತು.

ಅದನ್ನು ಅವರಿಗೆ ತೋರಿಸುವದರಲ್ಲಿ ಅರ್ಥವಿರಲಿಲ್ಲ. ಶ್ಯಾಮರಾಯನನ್ನು ಗಾಠಾಯಿಸಿ ಅವನಿಗೆ ಈ ಪತ್ರದ ಇತ್ಯರ್ಥವನ್ನು ಮೊರಡಿಸುವೆನೆಂದು ಭೀತಿ ಹಾಕುವ ಒಂದೇ ದಾರಿ ಉಳಿಯಿತು. ಶ್ಯಾಮರಾಯ ಮತ್ತು ಕಂ. ಸಾಕ್ಷಿಯ ಹೊತ್ತಿನಲ್ಲಿ. ಅರ್ಜಿಯಲ್ಲಿ ನಮೂದಿತವಾದ ಆರೋಪಗಳ ಇನ್‌ಕಾರ ಮಾಡದಿದ್ದರೂ. ಆ ಬಗ್ಗೆ ತಮ್ಮ ಅಜ್ಞಾನ ವ್ಯಕ್ತಮಾಡಿದರೆ. ಸಾಹೇಬರಿಗೆ ಏನೂ ಧಕ್ಕೆ ತಟ್ಟುತ್ತಿರಲಿಲ್ಲ. ಬಹಳವಾದರೆ ಬೆಳಗಾಂವಿಯಿಂದ ಬದಲಿಯಾಗುತ್ತಿತ್ತು. ಸಾಹೇಬರಿಗೂ ಅದೇ ಬೇಕಾಗಿತ್ತು. ಶ್ಯಾಮರಾಯ ಬಹಳವಾದರೆ ನನ್ನ ಮೇಲೆ ದವಡಿ ಕಚ್ಚಿ ಹಲ್ಲು ಕಡಿಯುತ್ತಿದ್ದ. ಮುಂಬೈಯಂಥ ಪರಸ್ಥಳದಲ್ಲಿ ಅವನು ನನ್ನ ಕೂದಲು

ಕೊಂಕಿಸುವ ಸಾಹಸಕ್ಕೆ ಹೋಗುತ್ತಿದ್ದಿಲ್ಲ. ಇಲ್ಲಿ, ಕದಾಚಿತ್ ನನ್ನ ಕರಾರುಗಳಿಗೆ ಒಪ್ಪಿ, ಅರ್ಜಿಯ ಬಗ್ಗೆ ಅಜ್ಞಾನ ವ್ಯಕ್ತಪಡಿಸಿ, ಕಾಲಪ್ಪಳಿಸುತ್ತ ಪುಣೆಯ ದಾರಿ ಹಿಡಿಯುತ್ತಿದ್ದ. ಪತ್ರ ನನ್ನ ಕೈ ಸೇರಿದ ಬಗ್ಗೆ ಬಸವಂತಿಯನ್ನು ತಿವಿಯುತ್ತಿದ್ದ. ಬಸವಂತಿಯ ಆ ಕಿಚ್ಚು ಇವನು ಕೆದಕುವ ನಿರೀಕ್ಷೆಯಲ್ಲಿಯೇ ಇತ್ತು. ಭಗ್ಗನೇ ಹೊತ್ತಿ ಅದೂ ರಾಚುತ್ತಿತ್ತು. ರಾಚಿದ ಬೆಂಕಿಗೆ ಶ್ಯಾಮರಾಯ ಕೈಚಾಚುವ ಸಾಹಸ ಮಾಡುತ್ತಿದ್ದಿಲ್ಲ. ಅದರ ಮೇಲೆ ಮಣ್ಣು-ಬೂದಿ ಎರಚಿ ಅದನ್ನು ಸತ್ವಹೀನ ಮಾಡಲು ಧಡಪಡಿಸುತ್ತಿದ್ದ. ಸದ್ಯ. ದಾದಲ್ಯಾನಿಗೆ ಬೇಕಾದದ್ದೂ ಅಷ್ಟೇ! ಇಂದಿನ ಸಾವು ತಪ್ಪುತ್ತಿತ್ತು. ಹೋಗುಹೋಗುವಾಗ ತನ್ನ ವಿಷ-ಕೊಂಡಿಯ ಹೊಡೆತ ಕೊಟ್ಟಿದ್ದರೆ – ಅದರ ಹೊಡೆತವನ್ನು ಸಹಿಸಲಿಕ್ಕೆ. ನಾನು-ಬಸವಂತಿ ಇಬ್ಬರೂ ತಯಾರಾಗಿಯೇ ನಿಂತಿದ್ದೆವು.

ಶ್ಯಾಮರಾಯನೂ ತನ್ನ ಕಂಪೂ ಸಹಿತ ಸೇಕ್ರೇಟರೀಏಟಿಗೆ ಬಂದಿರುವ ಸಂಭವವಿತ್ತು. ಅವನನ್ನು ಅಲ್ಲಿ ಗಾಠಾಯಿಸಿ ಯಾವುದಾದರೊಂದು ಹೊಟೇಲಿನ ಮೂಲೆಯಲ್ಲಿಯ ಟೇಬಲ್ ಹಿಡಿದು ಪತ್ರದ ಪ್ರಸ್ತಾಪ ತೆಗೆಯುವ ನಿರ್ಧಾರ ಮಾಡಿದೆ.

ಹನ್ನೆರಡೂವರೆಯಾಗಿತ್ತು. ಊಟದ ಉಸಾಬರಿ ಬಿಟ್ಟು, ಸೇಕ್ರೇಟರಿಏಟದ ದಾರಿಯಲ್ಲಿಯ ಒಂದು ಹೊಟೇಲಿನಲ್ಲಿ ಎರಡು ಬ್ರೆಡ್ಡಿನ ತುಕಡಿ – ಕಪ್ಪು ಚಹದ ಭರತಿ ಹಾಕಿ, ಸಿಗರೇಟು ಹಚ್ಚಿಕೊಂಡು ಝಪಝಪ ಹೆಜ್ಜೆ ಹಾಕಿದೆ.

. ಪಿ.ಡಬ್ಲ್ಯು.ಡಿ. ಸೇಕ್ರೇಟರಿಏಟದಲ್ಲಿ ತಯ್ಯಬ್ಜಿ ಅವರ ಆಪ್ತ ಸ್ವಕೀಯನೊಬ್ಬ ಗಣ್ಯ ಹುದ್ದೆಯಲ್ಲಿದ್ದ. ಅವನೂ ನಿತ್ಯ ತಯ್ಯಬ್ಜಿ ಅವರಲ್ಲಿ ಬರುತ್ತಿದ್ದ ಕಾರಣ, ನನ್ನ-ಅವನ ನಿಕಟ ಪರಿಚಯವಾಗಿತ್ತು. ಪ್ರತಿ ರವಿವಾರ, ತಯ್ಯಬ್ಜೀ ಅವರ ಮಕ್ಕಳ ಕೂಡ, ಇವನ ಮನೆಯಲ್ಲಿ ಮುರಗೀ, ಬಿರಿಯಾಣೀ ಪಂಕ್ತಿಯಾಗುತ್ತಿತ್ತು. ಊಟ ಮುಗಿದ ಮೇಲೆ. ತ್ರಿಶುಪರ್ಣದ ಅಡ್ಡೆ ಕೂಡಿದಾಗ. ನನ್ನ ಕೈಚಳಕ ತೋರಿಸಿ, ಇವನನ್ನು ಚಕಿತಗೊಳಿಸಿದ್ದೆ. ಇಂಥ ಜನ. ಆಟದಲ್ಲಿ ಸರಿಸಮಾನ ಹುದ್ದರಿಗಳನ್ನು ಕಂಡರೆ ಬೆಹೋಷರಾಗುತ್ತಾರೆ. ಬಹಳ ಬೇಗ ಜಿಗರ್-ದೋಸ್ತರಾಗುತ್ತಾರೆ. ಈ ವ್ಯಕ್ತಿಯೂ ಬಲು ಬೇಗ ನನ್ನ ಹೃದಯ ಸೆಳೆದಿದ್ದ. ತಾನೂ ನನ್ನ ಸಮೀಪಸ್ಥನಾಗಿದ್ದ.

ಒಂದು ವರ್ಷ ನಾನೂ ಎಸ್.ಈ. ಆಫೀಸಿನಲ್ಲಿ ತೆಗೆದಿದ್ದೆ. ಪಿ.ಡಬ್ಲ್ಯು.ಡಿ ಯಲ್ಲಿಯ ಸುಖ-ದುಃಖ ಅನುಭವಿಸಿದ್ದೆ. ಆ ಸ್ಮೃತಿ ಇನ್ನೂ ಹಸಿರು ಮುರಿಯು

ತ್ತಿರುವಾಗಲೇ ನಿವೃತ್ತಿಪೂರ್ವದ ರಜೆಯ ಮೇಲೆ ಹೊರಟ ಎಸ್.ಈ. ಸಾಹೇಬರು. ತಮ್ಮ ವಸ್ತುವೆಂದು ನನ್ನನ್ನು ಶಿಫಾರಸು ಸಹಿತ ತಯ್ಯಬ್ಜೀ ಅವರ ಹವಾಲ್ತೀ ಮಾಡಿದ್ದರು. ಅದನ್ನು ನನ್ನ ಈ ಮಿತ್ರ ಪ್ರತ್ಯಕ್ಷದರ್ಶಿಯಾಗಿ ನೋಡಿದ್ದ. ನನ್ನ ಬಗ್ಗೆ ಗೌರವ-ಆದರ ಅಂಕುರಿಸಲು ಇದೂ ಕಾರಣವಾಗಿರುವ ಸಂಭವವಿತ್ತು. ಇದೆಲ್ಲಕ್ಕೂ ಕಲಶಪ್ರಾಯವಾಗಿ, ದಾದಲ್ಯಾ ದೋಸ್ತೀ ಜಮಾಯಿಸಿಕೊಳ್ಳುತ್ತಿರುವ ಖುಬಿ ಅಸಾಮಾನ್ಯವಾಗಿತ್ತು.

"ಮಾಸ್ತರಜೀ. ಎಂ.ಎ.,ಎಲ್‌ಎಲ್.ಬಿ. ಏನ ಮಾಡತೀ ? ಸೇಕ್ರೆಟರೀಪಟಕ್ಕ ಬಂದಬಿಡೂ. ನಿನ್ನ ಪಗಾರಾ, ಟ್ಯೂಶನ್-ಫೀ ಕೂಡಿದರ ರಗಡ ಬರತದ. ಲಗೂ ಬೀಬೀನ್ನ ಕಟಿಗೋ. ತಯ್ಯಬ್ಜೀ ಅವರಿಗೆ ಹೇಳೂದಷ್ಟೇ ಪುರಸತ್ತು. ನಿನಗ ತಮ್ಮ 'ಔಟ್-ಹೌಸ್'ದಾಗ ಒಂದ ಬ್ಲಾಕ್ ಕೊಡತಾರ. ಬ್ರಿಜ್ ಅಡ್ಡೇ ಹಾಕಲಿಕ್ಕೆ ಠೀಕ ಆಗತದ."
ಎಂದು ಸದಾ ಹಾಡುತ್ತಿದ್ದ. ನಾನು ಟ್ಯೂಶನ್ನದ ಕೂಡ, ಆಗೀಗ ತಯ್ಯಬ್ಜೀಯವರ ವ್ಯವಹಾರಕ್ಕೆ ಸಂಬಂಧಿಸಿದ ಕಾಗದ-ಪತ್ರಗಳ ಟಾಯಪಿಂಗ-ಪತ್ರವ್ಯವಹಾರವನ್ನೂ ಮಾಡುತ್ತಿದ್ದೆ. ಮುದಕ ತಯ್ಯಬ್ಜೀಯವರು ನನ್ನ ಮೇಲೆ ಭಾರೀ ಖುಷಿ ಇದ್ದರು. ಅದರಿಂದಾಗಿ ಅವರ ಆಪ್ತಸ್ವಕೀಯನಾದ ಈ ವ್ಯಕ್ತಿ ನನ್ನಲ್ಲಿ ಬಹಳ ವಿಶ್ವಾಸವುಳ್ಳವನಾಗಿದ್ದ. ಈಗ ಅವನಲ್ಲಿ ಹೋಗಿ ಸಾಹೇಬರ 'ಎನ್‌ಕ್ವಾಯರಿ' ಮುಗಿಯುವವರೆಗೂ ಮುಕ್ಕಾಂ ಹಾಕಲು ಬರುತ್ತಿತ್ತು. ಅವನ ಕೋಣೆಯಲ್ಲಿ ಕುಳಿತು, ಚಹಾ-ಸಿಗರೇಟು ಮುಗಿಸುತ್ತ ಶ್ಯಾಮರಾಯನನ್ನು ಅಲ್ಲಿಯೇ ಕರೆಸಿ. ನನ್ನ ಪರಿಚಯ-ಪ್ರತಿಷ್ಠೆಯ ಪ್ರದರ್ಶನ ಮಾಡಲೂ ಅನುಕೂಲವಾಗುತ್ತಿತ್ತು.

ನಾನು ನೇರವಾಗಿ ಶೇಡಜೀ ಅವರಲ್ಲಿಗೇ ಹೋದೆ. ಹತ್ತೆಂಟು ದಿನಗಳಿಂದ ಇಬ್ಬರ ಭೆಟ್ಟಿಯೂ ಆಗಿರಲಿಲ್ಲ. ಗಿರಾಕಿ ಬಹಳೇ ಉತಾವಿಳವಾಗಿತ್ತು. ಮಾಸ್ತರಜೀ ಮಾಸ್ತರಜೀ ಎನ್ನುತ್ತಲೇ ನನ್ನ ಚಂಪೀ ಮಾಡಿ, ಎರಡು ಡೋಜು ಚಹವನ್ನು ಗಂಟಲ ಕೆಳಗೆ ಇಳಿಸಿತು. ಸಿಗರೇಟ ಧ್ವಂಸವಂತೂ ನಿರಾತಂಕವಾಗಿ ಒಂದೇ ಸವನೆ ನಡೆದಿತ್ತು.

"ನನ್ನೆ ಫಜೀತಿ ಆತ ಶೇಡಜೀ. ನಮ್ಮ 'ಫಾದರ್ ಸಿಕ್' ಇದ್ದಾರಂತ ಕಾಗದ ಬಂತು. ಗಡಿಬಿಡಿಯಿಂದ ಊರಿಗೆ ಹೊಂಟೆ. ಪುಣೇ ಸ್ಟೇಶನ್ನ ಪ್ಲ್ಯಾಟ್ಸ ನನ್ನ ದೋಸ್ತ ಆಟಕಾಸಿದಾ. ಜಪ್ತ ಸುಳ್ಳಾ, ಎಲ್ಲಾ ಸುಳ್ಳಾ. ಇಳೀ ಮಗನ್ಸ ಪುಣೇದಾಗ

ಅಂತ ಇಳಿಸಿಗೊಂಡುಬಿಟ್ಟಾ. ಹೀಂಗ ಡಾವ್ ಮಾಡಿದಾ. ಅವಂದೊಂದು ಅರ್ಜಂಟ್ ಕೆಲಸನೂ ಇತ್ತು. ಅಷ್ಟ ಕೆಲಸದ ವಿಚಾರ ಕೇಳಿಕೊಂಡವನs ತಿರಿಗಿ ಬಂದೆ. ಇನಾ ಮನೀ ಕಡೇನೂ ಹೋಗಿಲ್ಲಾ. ತಯ್ಯಬ್ಜೀ ಅವರಿಗೆ ನಾ ಊರಿಗೆ ಹೋಗೀನ್ಯಂತs ಕಲ್ಪನಾ" .

"ಅರೇ ಮಾಸ್ಟರಜೀ, ಫಿರ್ ಖಾನಾ-ಬೀನಾ ಹುಯೇ ಕ್ಯಾ ನಹೀ? ಆಪ್ ಕಬ್ ಆಯೇ? ಏ ಸಬ್ ಮುಝ್ಕೋ ಮಾಲೂಮ್ ನಹೀ...come on. Let us go to that bloody ಇರಾಣೀ and have sumptuous tiffin." ಎಂದು ಜೋರುಮಾಡಿದ.

"ಥ್ಯಾಂಕ್ಸ್ ಶೇಡಜೀ. ಇದೇ ಊಟಾ ಮುಗಿಸಿ ಬಂದೀನಿ. ಇಷ್ಟ ವ್ಯಾಳ್ಯಾ ನಾ ಎಂದರs ಉಪಾಸ ಕೂತೇನೇನು? ಮತ್ತೇನ ಸುದ್ದಿ? ಎಂಟ ದಿನದ ಮ್ಯಾಲ ಆತು. ತಮ್ಮ ದರ್ಶನ ಆಗದs? ತಬೀಯತ್ ತೋ ಠೀಕ ಹಾಯೇ ನಹೀ?" ಟಿಫಿನ್ನಿನ ಉಸಾಬರಿಯನ್ನು ಮರೆಸುತ್ತ ನಾನು ಕೇಳಿದೆ.

"ಅರೇ ಬಾಬಾ, I am quite O.K, ಮಾಸ್ಟರಜೀ...I am damn tired of this bloody work...ಏ ಸಬ್ thankless task ಹೈ...since last eight days we are made to sit in the office till six, you know? scribbling...scribbling ... scribbling ... nothing doing ಹಾಂ... ಮಾಸ್ಟರಜೀ there is news for you. ನಿಮ್ಮ ಬೆಳಗಾಂವಿ ಈ.ಈ. ಬಂದಾರ. ಠಾಂವಿಕಿಲ್ಲೇನು? 'ಪ್ರಾಜೆಕ್ಟ್ಸ್'ಕ್ಕ ಸಂಬಂಧಿಸಿದ ಕಾಗದಾ ತಗೊಂಡು ಅಂಡರ್ ಸೇಕ್ರುಟರೀ ಕಡೇ ಹೋಗ್ಯಾರ some technical points are to be discussed with the C.E....ಇದೆಲ್ಲಾ 'ರುಟೀನ್ ಕೋರ್ಸ್' ದಾಗಿಂದು. ಅವರು ಬಂದಿರೂ ಮುಖ್ಯ ಕಾರಣಂದರ...ಅವರ ವಿರುದ್ಧ 'ಎಲಿಗೇಶನ್' ಮಾಡಿದ ಮೂಕೀ ಅರ್ಜೀ ಬಂದಿದ್ದೂ. ಅದರದು 'ಏನ್‌ಕ್ವಾಯರಿ' ಅದs."

"ಹಿಂದಕೂ ಇಂಥಾ ಅರ್ಜೀ ಬಂದದ್ದರ ದಶಿಂದ ನಾ ನಿಮಗೆ ಹೇಳಿದ್ನೆಲಾ. ನಮ್ಮ ಬೆಳಗಾಂವೀ ಎಸ್.ಈ. ಅವರು ಅದಕ್ಕ ಹ್ಯಾಂಗ ನೀರ ಹಚ್ಚಿದರು ಅದನ್ನೂ ಹೇಳಿದ್ದೆ."

"Yes......yes. ಮಾಸ್ಟರಜೀ. ನೀ ಒಮ್ಮೆ ಏನೋ ಹೇಳಿದ್ದಿ. ಓ, that bloody bugger......our under-secretary ... I tell you...he is a

headless fellow... ವಿನಾಕಾರಣ ಅಂವಾ ಇದರಾಗ 'ಇಂಟರೆಸ್ಟ್' ತಗೊಂಡಾನs. annoymous application ಇದ್ದೂ. straight way record ಮಾಡಿದ್ದರ ಯಾರ ಕೇಳತಿದ್ದರು? ಸೀ. ಈ. ಯಾಕಂತ ಕೇಳತಿರಲಿಲ್ಲಾ...there are govt. orders to that effect... ಆದರ ನಮ್ಮ ಯು. ಎಸ್. ಇಷ್ಟ 'ಇಂಟರೆಸ್ಟ್' ತಗೋಬೇಕಾದರ ಏನರs ಭಾನಗಡೀ ಇರಬೇಕು. ನಿಮ್ಮ ಮೊದಲಿನ ಬಾಸ್‌ಗs ಅಂವಗ ಮುಂಚಿನಿಂದೂ ಆಗೂದಿಲ್ಲಾ ಅನ್ನೂದೂ ಒಂದ ಕಾರಣ ಅದ. ನಾಕ ದಿನದಾಗ ಏನ ಘಡಾವೋಡೀ ಆಗೇದಂದೀ ಮಾಸ್ತರಜೀ? ಮೊದಲ annonymous application ಬಂದೂ. ನಿನ್ನೆ ಅನೂದರಾಗ, ಅವೇ ಅರ್ಜೀ–ಸಹೀ ನಿಶಾ ಬಂದಾನ... I am sure ಮಾಸ್ತರಜೀ...that bloody-fool is at the bottom of all this mischief...ಈ ಸಹೀ-ನಿಶಾ ಅರ್ಜೀಗೆ ಅವಂದೇ 'ಇನ್‌ಸ್ಪಿಗೇಶನ್' ಇರೂ ಸಂಭವ ಅದs. ಈ ಅಪ್ಲಿಕೇಶನ್ನೂ ಇನಾ ಸಿ.ಈ. ಕಡೇ ಹೋಗಿಲ್ಲಾ. ಇಂದ 'ಪುಟ್-ಅಪ್' ಮಾಡೂ ವಿಚಾರ ಅದs."

"'ಸಿಗ್ನೇಚರ್ಸ್' ಯಾರೂ ಅನೂದು ನಿಮಗ ಠಾಂವಿಕಿರಬೇಕಲಾ?"

"Yes...yes. ಮಾಸ್ತರಜೀ. ಅಂಡರ್-ಸೇಕ್ರಟರೀ ಅವನ್ನ ನನಗ ತೋರಿಸ್ಯಾನ. ಕೇಸ್-ಪೇಪರಿನ ಜೋಡೀ 'ಪುಟಪ್' ಮಾಡಲಿಕ್ಕೆ ಹೇಳ್ಯಾನ. ನನಗ ನಿಮ್ಮ ಕಡೆಯುವರದು ಸರ್‌ನೇಮ್ ಅಲ್ಲಿಕ್ಕೆ ಜಮಾಸೂದಿಲ್ಲಾ... there is one mr. Baban ... ಇನ್ನೊಂದು something like ಟ್ಯಾಪೀ ... ಟ್ಯಾಪೀ. or some nonsense......perhaps you might be knowing these people."

"Oh yes, I know them thoroughly well. ಒಂದಕ ಇಂಥಾದೇ ಅರ್ಜೀ ಬಂದಾಗ ಇವರೇ. ಅದರಾಗಿನ 'ಎಲಿಗೇಶನ್' ಎಲ್ಲಾ ಸುಳ್ಳಂತs 'ರಿಟನ್ ಸ್ಟೇಟ್‌ಮೆಂಟ್' ಕೊಟ್ಟಿದ್ದರು. ಈಗ ತಾವೇ ಅಂಥಾ ಅರ್ಜೀಗೆ ಸಹಿ ಮಾಡಿ ಕಳಸ್ಯಾರ. ಶೇಡಜೀ. ಈಗ ನೀವು ಅಂದ್ರ್ಯಲಾ. ನಿಮ್ಮ 'ಯು.ಎಸ್.ಗೆ ಈ ಕೇಸಿನ್ಯಾಗ ಏನೋ 'ಇಂಟ್ರೆಸ್ಟ್' ಅಂತ. ಅದೇ ರೀತೀ. ನನಗೂ ನನ್ನ ಮೊದ್ಲಿನ 'ಬಾಸ್'ನ ವಶಿಂದ 'ಇಂಟ್ರೆಸ್ಟ್' ಇರೂದು ಸಹಜೀಕ ಅಲ್ಲೇನು? ಖರೇ ಅಂದರ. ನಿಮ್ಮ ದೋಸ್ತೀ ಫಾಯಿದೇ ಈ ಕೆಲಸದ್ದುಶಿಂದ ತಗೊಂಬೂ ಇಚ್ಛಾ ನನಗ ಇಲ್ಲಾ. ಅದೇ ರೀತೀ ನೀವೂ 'ಆಫೀಸಿಯೆಲ್ ಸಿಕ್ರೆಟ್' ಏನರs ಇದ್ದರ ಅದನ್ನ ನನಗ 'ಡಿಸ್‌ಕ್ಲೋಜ್' ಮಾಡೂದು ಬ್ಯಾಡಾ. ಅದರ. ಇಡೀ ಈ 'ಕೇಸ್'ನs 'ಟಾರ್ಪೆಡೊ' ಮಾಡೂ

ವಂಥಾ ಮಸ್ತ 'ಪ್ರೂಫ್' ಅದs ನನ್ನ ಕಡೇ. ಅದನ್ನ 'ಡಿಸ್‌ಕ್ಲೋಜ್' ಮಾಡೂದ ರಿಂದ ಖಾತ್ರೀಲೇನs ನಿಮ್ಮ 'ಯು.ಎಸ್. ಖಲಾಸ್ ಆಗತಾನ. ನನ್ನ 'ಬಾಸ್'ನೂ ಪಾರ ಬೀಳತಾನ...just see whether you can do something for me in this case...ಅಷ್ಟs ಹೇಳಿಕೊಂಬೂದದs ನನಗ."

"Come on ಮಾಸ್ತರಜೀ. ಏನ 'ಪ್ರೂಫ್' ಅದs ಲಗೂನೇ ತಗೀ. ಯು.ಎಸ್.ನ್ನ ಹಾರಸೂ ಹಾಂಗ ಇದ್ದರ I will take lead in the matter; bloody-fool, let him go to dogs...ಜಲ್ದೀ ಕರೋ....'ಪ್ರೂಫ್' ಕ್ಯಾ ಹೈ ಬೋಲೋ..."

"On one condition ಶೇಡಜೀ. ನಮ್ಮ 'ಬಾಸ್'ಗ ಇದರಾಗಿನ ಒಂದ ಅಕ್ಷರೂ ತಿಳದಿರಬಾರದು. ನಾಳಿನ ದಿವಸ ಸಾಕ್ಷೀಗೆ ಬರೂವವರೊಳಗ, ಎಸ್. ಜಿ. ಪಂತ ಅಂತs ಒಬ್ಬ ಕಂಟ್ರಾಕ್ಟರ ಇರಬೇಕು. ಅವರ ಎದರಿಗೆ, ನಿಮ್ಮ ಯು. ಎಸ್.ನ ಎದರಿಗೆ ಇಷ್ಟೇ ಇದನ್ನ ಓಡೀಬೇಕು. ಟ್ಯಾಪೀ – ಬಾಗವಾನ ಇಬ್ಬರೂ 'ಸಿಂಪ್ಲಿ ಪಪೆಟ್ಸ್' ಈ ಪಂತನ ಕೈಯಾಗ. ತಾಂವು ಏನ ಬರದೇವನ್ನೂದೂ ತಿಳೀದಷ್ಟು ಮಡ್ಡ ಇದ್ದಾರ ಇವರು. ಇದನ್ನ ಬರೆಸಿದಂವಾ ಪಂತ ಅನ್ನೂದು, ನನ್ನ 'ಪ್ರೂಫ್' ನೋಡಿದ ಮ್ಯಾಲ ತಾನೇ ಗೊತ್ತಾಗತದ"

ನಾನು ಇನ್ನೂ ಮಾತು ಮುಗಿಸಿರಲಿಲ್ಲ. ಸಿ.ಈ. ಅವರಿಂದ ಬುಲಾವಣೆ ಬಂದಿತೆಂದು ಶೇಡಜೀ ಚಟ್ಟನೇ ಎದ್ದು ಅವರ ಆಫೀಸ್-ರೂಮಿಗೆ ನಡೆದ.

ತ್ಯಾಪೀ ಬಸಗೋಂಡ, ನಬೀಸಾಬ ಇಬ್ಬರೂ ಸಾಹೇಬರಿಗೆ ದಗಾ ಕೊಟ್ಟಿದ್ದರು. ಅವರ ಲೇಖೀ ಅರ್ಜೀ ಮುಂಬೈಗೆ ಬಂದ ಮೇಲೆ ಸಿದ್ಧವಾಗಿ ಯು.ಎಸ್.ನ ಕಡೆಗೆ ಬಂದಿದ್ದವು. ಮೂಕೀ ಅರ್ಜಿಯು ಪರಿಣಾಮ ಅಷ್ಟಾಗಲಿಕ್ಕಿಲ್ಲವೆಂದು ಶ್ಯಾಮ ರಾಯನ ದೋಸ್ತ – ಯು.ಎಸ್. ಸೂಚಿಸಿರಬೇಕು. ಶ್ಯಾಮರಾಯನ ಹೇಳಿಕೆಯಂತೆ ಅರ್ಜೀ ತಯಾರಾಗಿ, ಬಸಗೋಂಡ, ನಬೀಸಾಬನ ಸಹಿಯಿಂದ ಭೂಷಿತ ವಾಗಿ ಕಚೇರಿಗೆ ಬಂದಿರಬೇಕು. ಇಂಥ ಸಹಿ-ನಿಶಾ ಅರ್ಜೀ ಮುಂಚಿತವಾಗಿ ಹೋದರೆ, ಅವುಗಳ ಧಾರಕರ ಪತ್ತೇ ಸಾಹೇಬರಿಗೆ ಹತ್ತುವ ಸಂಭವವೆಂದು. ಶ್ಯಾಮರಾಯ ಯೋಚಿಸಿರಬೇಕು. ಅಂತೇ ಮುದ್ದಾಂ ಅವನ್ನು ಮುಂಬೈ ಮುಕ್ಕಾಮಿನಿಂದಲೇ ಕೊಡಿಸಿರಬೇಕು. ಇದರಲ್ಲಿ ಅಸಂಭಾವ್ಯವೇನೂ ಇರಲಿಲ್ಲ. ಇಂಥ ಕ್ಲೃಪ್ತಿಯಲ್ಲಿ ಶ್ಯಾಮರಾಯ ಎತ್ತಿದ ಕೈ.

ಸಾಹೇಬರ ಲಂಚಗುಳಿತನದ ಬಗ್ಗೆ ಇವರು ಸಾದರಪಡಿಸುವ ಸಾಕ್ಷಿ ಎಂದರೆ ಪರಕಜಿಂವ ಮಾರವಾಡಿಯಲ್ಲಿ ಶ್ಯಾಮರಾಯ ಅರಿವೆಗಳನ್ನು ಖರೀದಿ ಮಾಡಿದ ಬಿಲ್ಲುಗಳು. ಆ ಅರಿವೆಯ ಖರೀದಿಯ ತಾರೀಖಿನ ಬಿಲ್ಲುಗಳಿಗೆ – ಶ್ಯಾಮರಾಯನ ಕಂತ್ರಾಟ ಕೆಲಸದ ಬಿಲ್ಲುಗಳು ಸಿದ್ಧವಾಗಿ, ಚೆಕ್ಕು ಹರಿದ ತಾರೀಖಿಗೆ, ಒಂದೆರಡು ದಿನ ಅಂತರವಿದ್ದವು. ಇಂಥವೇ ಅನ್ಯ ವಸ್ತುಗಳ, ಬೇರೆ ಅಂಗಡಿಯ ಬಿಲ್ಲುಗಳೂ ಇದ್ದಿರಬಹುದಾಗಿತ್ತು. ಶ್ಯಾಮರಾಯನ ಸ್ವಾರೀ ಅಸರಂತ ಮುಂಬೈ-ಪುಣೆಯ ಪ್ರಯಾಣದಲ್ಲಿ ಇರುತ್ತಿದ್ದರೂ – ಅಲ್ಲಿ ಇಲ್ಲಿಗಿಂತ ಸೋವೀದರದಲ್ಲಿ ಮಾಲು ಸಿಗುತ್ತಿದ್ದರೂ, ಶ್ಯಾಮರಾಯ ಮುದ್ದಾಂ ಬೆಳಗಾಂವಿಯಲ್ಲಿಯ ಖರೀದಿ ಬಿಲ್ಲುಗಳನ್ನೇ ಪಡೆದಿದ್ದ. ಅವನ ಕುಟುಂಬ – ಇತರ ಮಂಡಳಿ, ಬೆಳಗಾಂವಿಯಲ್ಲಿ ಇರಲಿಲ್ಲ. ಕಾಶಿಯಿಂದ ಜನ ಗಂಗೋದಕ ತರುತ್ತಾರೆ. ಕಾಶಿಗೇ ಯಾರೂ ಗಂಗೋದಕ ಒಯ್ಯುವದಿಲ್ಲ. ಬೆಳಗಾಂವಿಯಿಂದ ಪುಣೆಗೆ ಸಾಮಾನು ಒಯ್ಯುವದು ಕೇವಲ ಅಪವಾದ. ಬೆಣ್ಣೆ – ಬಹಳವಾದರೆ ಮನೆಯ ಕಾಯಿ-ಪಲ್ಯೆ – ಕದಾಚಿತ್ ಒಂದು ಪಹಾಪೂರೀ ಸೀರೆ ಒಯ್ಯಬಹುದಾಗಿತ್ತು. ಆದರೆ ಪುಣೆಯಲ್ಲಿ ಒಂದಕ್ಕೆ ದೊರಕುವ ಸರಕನ್ನು, ಎರಡಷ್ಟು ಕೊಟ್ಟು ಬೆಳಗಾಂವಿಯಲ್ಲಿ ಖರೀದಿ ಮಾಡಿ ಯಾರೂ ಅದನ್ನು ಪುಣೆಗೆ ಒಯ್ಯುವ ಮಾತು ಹಾಸ್ಯಾಸ್ಪದವಾಗಿತ್ತು. ಶ್ಯಾಮರಾಯನ ಈ ಖರೀದಿಯ – ಇಂಥ ಖರೀದಿಯ ಬಿಲ್ಲಿಗೆ, ತನ್ನ ಕಾಮಗಿರಿಯ ಬಿಲ್ಲಿಗೆ ತಳಕು ಹಾಕುವ ಡಾವನ್ನು ಬಹಳ ದಿನಗಳಿಂದ ಯೋಚಿಸಿಕೊಂಡಿರಬೇಕು. ಅವನು ಸೀರೆ-ಖಣ-ಇನ್ನಿತರ ಚೀಜ ವಸ್ತುಗಳನ್ನು ಅರ್ಪಿಸಿ ಬಿಲ್ಲು ಮಾಡಿಸಿಕೊಂಡದ್ದನ್ನು ನಾನು ನೋಡಿದ್ದೆ. ಇಡೀ ಪಿ.ಡಬ್ಲ್ಯು.ಡಿ.ಯಲ್ಲಿಯೇ ಯಾರೂ ಧರ್ಮರಾಜನ ತುಕಡಿ ಇರಲಿಲ್ಲ. ಪಿಂಚಣಿಯ ಘಾಜೆಗಟ್ಟೆಯನ್ನು ಸಮೀಪಿಸುತ್ತ ಬಂದ ಒಬ್ಬ ಹೆಡ್‌ಕಾರ್ಕೂನ – ಒಬ್ಬ 'ಎಕ್ಸಿಕೂಟಿವ್ ಇಂಜಿನಿಯರ್', ತಮ್ಮ ಸಂತಾನಪ್ರೀಯ ಕುಟುಂಬ-ಸಂಸಾರ-ಜೀವನ ಸುಗಮವಾಗಲೆಂದು, ಬೀಸುವ ಕಲ್ಲು, ಅಸೆಯುವ ಕಲ್ಲು, ಒರಳು ಮಾಡಿಸಿಕೊಳ್ಳಲೂ ಅನುಮಾನಿಸಲಿಲ್ಲವೆಂದು ಖುದ್ದ ಶ್ಯಾಮರಾಯನೇ ಹೇಳಿದ್ದ. ಇನ್ನು ಸೀರೆ-ಖಣ-ಭಂಗಾರದ ಒಂದೆರಡು ವಸ್ತ್ರ-ಒಡವೆಯ ಕಾಣಿಕೆಯನ್ನು ಸ್ವೀಕರಿಸದಿರುತ್ತಿದ್ದರೇ? ಯಾರು ಇಂಥ ಕಾಣಿಕೆ ಸ್ವೀಕರಿಸಿಲ್ಲ? ನಿಧಾನ ಸಾಹೇಬರು, ಕೊಟ್ಟಷ್ಟನ್ನು ತೆಗೆದುಕೊಂಡು, ಕೊಡದಿದ್ದರೆ, ಕೊಡಲಿಲ್ಲವೆಂದು ಕಾಡುವ ಜಾತಿಗೆ ಖಚಿತ ಸೇರಿರಲಿಲ್ಲ. ಹತ್ತು ತೆಗೆದುಕೊಂಡು ನೂರರ

ಕೆಲಸ ಮಾಡಿಕೊಟ್ಟಿದ್ದರು. ಶ್ಯಾಮರಾಯ, ಬಸಗೋಂಡ, ನಬೀಸಾಬರ ಬಾಬತ್ತಿನ ನಲ್ಲಂತೂ ಅವರು ತೀರ ದಿಲ್‌ದಾರ ಆಗಿದ್ದರು. ಶ್ಯಾಮರಾಯ, ಅವರಿಗೆ ಒಂದು ಚಿಕ್ಕಾಸು ಕೊಟ್ಟಿರದಿದ್ದರೂ ಯಾಕೆ ಎಂದು ಅವರು ಕೇಳುತ್ತಿರಲಿಲ್ಲ. ಅವನ ಕೂಡ ಬೀಗತನವನ್ನು ಬೆಳೆಸಿಕೊಳ್ಳುವ ಆಮಿಷದಿಂದ – ಅಂಥದೇ ಡಾವಿನಿಂದ ಅವರು, ಅವನ ಕಾಣಿಕೆಗೆ ನಕಾರ ಹೇಳುತ್ತಿದ್ದರೆಂತಲ್ಲ. ತಮ್ಮ – ಶ್ಯಾಮರಾಯನ ಪೂರ್ವ ಪರಿಚಯ – ಸ್ನೇಹದ ದೃಷ್ಟಿಯಿಂದ ಅವರು ಅವನಿಂದ ಏನೂ ಅಪೇಕ್ಷಿಸುತ್ತಿರ ಲಿಲ್ಲ. ಶ್ಯಾಮರಾಯ ಒಬ್ಬ ಗಣ್ಯ ಕಂತ್ರಾಟದಾರನೆಂದು ಪ್ರತಿಷ್ಠಿತನಾಗಲು, ಹಾಗೆ ನೋಡಿದರೆ, ಸಾಹೇಬರೇ ಅವನಿಗೆ ಅಪಾರ ಸಹಾಯ ಮಾಡಿದ್ದರು. ಒಂದಲ್ಲ – ಹತ್ತು ದೊಡ್ಡ ಕಾಮಗಿರಿ ಕೊಟ್ಟಿದ್ದರು. ಸರಿರಾತ್ರಿಯಲ್ಲಿ ಬಿಲ್ಲುಮಾಡಿಸಿ ಚೆಕ್ಕು ಕೊಟ್ಟಿದ್ದರು. ಅವನು ಮನೆಗೆ ಬಂದಾಗ ಬೆನ್ನಿಗೆ ಬಿದ್ದ ತಮ್ಮನನ್ನು ವಾತ್ಸಲ್ಯದಿಂದ ಆದರಿಸುವಂತೆ, ಆದರ-ಸತ್ಕಾರ ಮಾಡಿದ್ದರು. ತಾವು ಇಂದು ಪತನದ ತುತ್ತತುದಿಗೆ ನಿಂತಿದ್ದರೂ, ತಮ್ಮನ್ನು ಶ್ಯಾಮರಾಯನೇ ಆ ತುದಿಗೆ ದೂಡಿದ್ದರೂ, ಇನ್ನೂ ಅವನ ಬಗ್ಗೆ ನಿಶ್ಶಂಕರಾಗಿಯೇ ಇದ್ದರು. ಶ್ಯಾಮರಾಯ ಸರಳಹೃದಯಿಯೆಂದು ಸಾರಿಸಾರಿ ಹೇಳಿದ್ದರು.

ಅವರು ನೆಚ್ಚಿದ ಶ್ಯಾಮರಾಯನ ಎಮ್ಮೆ ಕೋಣ ಈಯುವ ಗಳಿಗೆ ಈಗ ಬಂದಿತ್ತು. ಈದಿತ್ತೆನ್ನಲೂ ಅಡ್ಡಿ ಇಲ್ಲ.

ಅರಿವೆ-ಅಂಚಡಿಯ, ಚೀಜ-ವಸ್ತುವಿನ ಕಾಣಿಕೆಯ ಪ್ರಶ್ನೆ ಬಂದಾಗ ಸಾಹೇ ಬರು ಬಾಯಿ ಮುಚ್ಚಿಕೊಂಡು ಸ್ತಬ್ಧರಾಗಿಬಿಡುತ್ತಾರೆಂದು ನನಗೆ ಖಾತ್ರೀ ಇತ್ತು. ಅಸತ್ಯ ವದಿಸಿ, ಇನ್‌ಕಾರ ಮಾಡುವದು ಮಹಾ ಪಾಪವೆಂದು – ಶ್ಯಾಮರಾಯ ಕೊಟ್ಟಿರುವದು – ತಾವು ಅದನ್ನು ಸ್ವೀಕರಿಸುವದು ಸತ್ಯವೆಂದು ಹೇಳಲು ಒಂಜರಿ ಯುತ್ತಿದ್ದಿಲ್ಲ. ಸಾಹೇಬರ ಪಿಂಡದಲ್ಲಿ ಸಾರಳ್ಯ – ಘನ ಮಡ್ಡತನ ಹಾಸುಹೊಕ್ಕಾಗಿ ಮೇಳವಿಸಿದ್ದವು. ಮೂರರಲ್ಲಿ ಮೈಯುಂಡ ಗುಣ ನೂರು ತುಂಬಿದರೂ ಅಳಿಯ ದಂತಿತ್ತು.

'ವೂಮನ್ನಾಯಜರ್' ಪ್ರಶ್ನೆ ಬಂದಾಗ ಯಾರೇನು ಹೇಳುವಂತಿತ್ತು? ಸಾಹೇ ಬರು ಆ ಜಾತಿಯಂತೂ ಅಲ್ಲವೇ ಅಲ್ಲ. ತಾವು 'ವೂಮನ್ನಾಯಜರ್' ಆಗಿ ಕೆಡಿಸಿದ ಹೆಣ್ಣುಗಳ ನಾಮಾವಳಿಯನ್ನು, ಸಾಕ್ಷೀದಾರರೇ ಹೇಳಲಿ ಎನ್ನುವಷ್ಟು ಧೈರ್ಯವೂ ಅವರಲ್ಲಿ ಬರುತ್ತಿರಲಿಲ್ಲ. ಅರ್ಜಿದಾರರಾದರೂ, ಯಾರ ಕಡೆಗೆ ಬೊಟ್ಟುಮಾಡಿ

ತೋರಿಸಲಿದ್ದರು. ಹಾದಿ-ಬೀದಿಯಲ್ಲಿಯ ಹೆಣ್ಣುಗಳ ಹೆಸರು ಹೇಳುವ ಶಕ್ಯತೆ ಇರಲಿಲ್ಲ. ಸಾಹೇಬರು ಒಂದು ಇಸಮನ್ನು 'ಕೀಪ್' ಎಂದು ಇಟ್ಟುಕೊಂಡಿದ್ದರೆ ಅದು ಅವರ ಖಾಸಗೀ ವಿಷಯವಾಗುತ್ತಿತ್ತು. ಸೀ.ಈ. ಅವರಿಗೆ ಅದರ ಬಗ್ಗೆ ಪ್ರಶ್ನಿಸುವ ಅಧಿಕಾರವೇ ಹುಟ್ಟುತ್ತಿದ್ದಿಲ್ಲ. ಕುರುಡು-ಚಿತ್ತಿಯ ಕಾಲದಲ್ಲಿ ಗಂಡು ನಾಯಿ ಹೆಣ್ಣುನಾಯಿಯನ್ನು ಹಾದಿ-ಬೀದಿಯಲ್ಲಿ ಅಟಕಾಯಿಸುವಂತೆ, ಸಾಹೇಬ ರೇಸು ಹರಾಪುರಿಗೆ ಬಿದ್ದು, ಮದವೇರಿ ಯಾರನ್ನೂ ಅಟಕಾಯಿಸಿರಲಿಲ್ಲ. ಸಾಹೇಬರ ಬಂಗಲೆಯ ಮುಂದೆ ಅಡಪು ಹತ್ತಿದ ನಾಯಿಯಂತೆ ನಿಲ್ಲುತ್ತಿದ್ದ ಬಸಗೊಂಡಾ-ನಬೀಸಾಬರಿಗೆ ಈ 'ವೂಮನ್ನ್ಯಾಜರ್'ದ ಭಾನಗಡಿ ಗಂಟಲ ತುತ್ತಾಗಿರಲಿಲ್ಲ.

ಸಾಹೇಬರು ಬೆಳಗಾಂವಿಗೆ ಇತ್ತೀಚಿಗೆ ಬಂದದ್ದು. ತತ್ಪೂರ್ವದಲ್ಲಿ ಗುಜರಾಥ-ಮಹಾರಾಷ್ಟ್ರದ ಅನೇಕ ಜಿಲ್ಹೆಗಳಲ್ಲಿ ಅಧಿಕಾರದ ಸ್ಥಾನದಲ್ಲಿದ್ದರು ತಾರುಣ್ಯದ ಹುಮ್ಮಸ್ಸಿನವರಿದ್ದರು. ನೇತ್ರಪಲ್ಲವಿ-ಕರಪಲ್ಲವಿಯ ಚಮತ್ಕಾರ ಮಾಡಿದ್ದರೆ, ವಜನದಾರ ಕಂತ್ರಾಟದಾರರು, ನಕ್ಷತ್ರದಂಥ ಹೆಣ್ಣುಗಳನ್ನು ತಂದು ಅವರ ದಾವಣಿಯಲ್ಲಿ ಬಿಗಿಯಬಹುದಾಗಿತ್ತು. ಆ ಸುಖಕ್ಕೆ ಸೋತಿದ್ದರೆ, ಈ ನಕ್ಷತ್ರಸಮ ಕಪಿಲೆಯರನ್ನು ಖುಷಿ ಬಂದಾಗ ಕರೆಯಬಹುದಾಗಿತ್ತು. ಆದರೆ ಶುಕಮುನಿಯ ಅಪರಾವತಾರವಾದ ಸಾಹೇಬರು ಈ ಬಾಬತ್ತಿನಲ್ಲಿ ಹದಿನಾರಾಣೆಯ ಖೋಟಾ ನಾಣ್ಯವಾಗಿದ್ದರು. ಆದರಿಂದಾಗಿ, ಸಾಹೇಬರ ಕಚ್ಚೆಹರಕುತನದ ಮಹಾತ್ಮ್ಯವನ್ನು ಸಾರುವ, ಬೊಟ್ಟುಮಾಡಿ ತೋರಿಸುವ ಒಂದೂ ಇಸಮು ಸಿಗುವ ಶಕ್ಯತೆ ಇರಲಿಲ್ಲ.

ದಾದಲ್ಯಾ ಸಾಹೇಬರ ಜೀವನೇತಿಹಾಸದ ಪುಟಗಳನ್ನು ಜಾಗರೂಕತೆಯಿಂದ ತಿರಿವಿ ಹಾಕತೊಡಗಿದ. ಬೆಳಗಾಂವಿಯ ಅವರ ಸಾನ್ನಿಧ್ಯದಲ್ಲಿ ಕಳೆದ ದಿನಗಳ ಅಥಾವೆ ತೆಗೆದುಕೊಂಡ. ಅವರ ಬಾಯಿಂದ – ರಂಗಕ್ಕನ ಬಾಯಿಂದ ಕೇಳಿದ ವಿಷಯದಲ್ಲಿ ತಪ್ಪಿಯೂ ಇಂಥ ಒಂದು ಮಾತು ನುಸುಳಿರಲಿಲ್ಲ. ರಂಗಕ್ಕನವರು, ಒಮ್ಮೆ ಶ್ಯಾಮರಾಯನ ಬಗ್ಗೆ ಕಿಲಾಪಿಸಿದ್ದರು. ಅವನು ಸೀರಿಯ ಖರೀದಿಯನ್ನು ಮಾಡಿದ – ಅವನ ಗಾಡಿಯಲ್ಲಿ ಯಾರೋ ಅಪರಿಚಿತ ಹೆಣ್ಣುಮಗಳಿದ್ದ ವಿಷಯವನ್ನು ಕುರಿತು, ಗಾಳ ಒಗೆದು ಮೀನವನ್ನು ಹಿಡಿಯಲೆತ್ನಿಸಿದ್ದರು. "ಹೆಂಗಸಿಗೆ ಬರೇ ಸಂಶ್ಯಾ – ಬರೇ ಅಪನಂಬಿಕಿ" ಎಂದು ಹೇಳಿ ತಾವು ಅದರಿಂದ ತೀರ ಅಲಿಪ್ತ

ರಾಗಿಯೇ ಉಳಿದಿದ್ದರು. ಶ್ಯಾಮರಾಯ ಪ್ರತಿ ರಾಮಾವತಾರ ಎಂದೇ ಭಾವಿಸಿದ್ದರು. ಇಂಥ ಬಾದ ಗಿರಾಕಿಯಾದ ಸಾಹೇಬರನ್ನು 'ವೂಮನ್ನಾಜರ್' ಎಂದು ಹೇಳುವ ಧಾರ್ಷ್ಟ್ಯ ಯಾರಿಗೆ ಬರಬೇಕು? ಯಾರು ಅವರ ಕಡೆಗೆ ಬೆರಳುಮಾಡಿ ತೋರಿಸಬೇಕು? ಇಂಥ ಸಾಹಸ ಯಾರಿಂದ ಸಾಧ್ಯ?......

ದಾವಲ್ಯಾನಿಗೆ ವಿದ್ಯುದಾಘಾತವಾದಂತಾಯಿತು. ಕಣ್ಣಿಗೆ ಕತ್ತಲಡರಿತು. ಯಾರೋ ಜೀವಮಣಿಯನ್ನು ಗಪ್‌ನೇ ಕೈಯಿಕ್ಕಿ ಹಿಚಿಕಿದಂತಾಯಿತು. ದಾವಲ್ಯಾನಿಗೆ ಉಸಿರುಗಟ್ಟಿತು.

ಶ್ಯಾಮರಾಯ...! ಶ್ಯಾಮರಾಯ...!! ದಗಾ ಕೊಟ್ಟರೆ ಅವನೇ ಕೊಡಬೇಕು! ಈ ರಾಡಿಯನ್ನು ಸ್ವಹಸ್ತದಿಂದ ಎತ್ತಿ ತನ್ನ ಮೋರೆಗೆ ತಾನೇ ಬಳಿದುಕೊಳ್ಳಬೇಕು! ಆ ರಾಡಿಲಿಪ್ತ-ವಿಕಾರ-ಮುಖವನ್ನು ಅನ್ಯರಿಗೆ ಅವನೇ ತೋರಿಸಬೇಕು! ಸಾಹೇಬರನ್ನು ಪಾತಾಳಖಾತಕ್ಕೆ ಕೆಡವಲು – ಅವರ ಮೇಲಿನ ತನ್ನ ಸೇಡು ತೀರಿಸಿಕೊಳ್ಳಲು, ಅವರಿಂದ ತನ್ನ ಸಂಸಾರ ಮುರಿಯಿತೆಂಬ ಅಪಾರ್ಥ ಮಾಡಿಕೊಂಡು ಅಡ್ಡದಾರಿಗೆ ಬಿದ್ದ ಶ್ಯಾಮರಾಯ, 'ವೂಮನ್ನಾಜರ್' ಅಪಾದನೆಯ ಸಾಕ್ಷಿ ಹೇಳಿದರೆ? ಹೀನಮಾನಸ ಶ್ಯಾಮರಾಯ ಯಾವ ಮಟ್ಟಕ್ಕೂ ಇಳಿಯುತ್ತಿದ್ದ. ತನ್ನ ಕೈಯಿಂದಲೇ ತನ್ನ ಸಂಸಾರಕ್ಕೆ – ಪಂತಕುಟುಂಬಕ್ಕೆ ಅದರ ವೈಭವಸಂಪನ್ನ ಚಾರಿತ್ರ್ಯಕ್ಕೆ ಕೊಳ್ಳಿಕೊಡುತ್ತಿದ್ದ. ಧುಳೆಯನ್ನು ಬಿಟ್ಟಾಗಿನಿಂದ ಅವನು ಸಾಹೇಬರಿಗೆ ರಾಹು-ಕೇತುವಾಗಿ ಅಡರಿದ್ದ. ಘಟಸರ್ಪವಾಗಿ ಹೆಡೆ ಮುಡಿಚಿಕೊಂಡು ಅವರ ಎದೆಯ ಕೆಲಬಲದಲ್ಲಿ ಸುತ್ತಿ ಸುಳಿದಿದ್ದ. ಈಗ ವಿಷದಂತಿಯನ್ನು ಮಸೆದಿದ್ದ. ಹೆಡೆಯನ್ನು ಬಿಚ್ಚಿದ್ದ. ಒಂದೇ ಹೊಡೆತದಲ್ಲಿ ಸರ್ವರ ಸತ್ವವನ್ನೂ ಹೀರಿ ನಂಜು ಬಿಡಲಿದ್ದ.

ಅವನ ಸಾಕ್ಷಿಯಲ್ಲಿಯ ಕರಾಳ ಅಸತ್ಯವನ್ನು ಕುರಿತು ಯಾರು ಏನು ತನಿಖೆ ನಡೆಸುವವರಿದ್ದರು? ಖುದ್ದ ಸಿ.ಈ. ಅವರಾದರೂ ಈ ಬಗ್ಗೆ ಏನು ಕೇಳುತ್ತಿದ್ದರು? ಈ ಬಗ್ಗೆ ಅವರು ಯಾರನ್ನು ಸಾಕ್ಷಿಗೆ ಕರೆಯುಬಹುದಾಗಿತ್ತು? ಶ್ಯಾಮರಾಯ ಸ್ವಯಂ – ತಾನೇ ತನ್ನ ಹೀನಮಾನಸ ಪ್ರಕಟಿಸಿರುತ್ತಿದ್ದ. ಸಿ.ಈ. ಅವರಿಗೆ ಸತ್ಯಾಸತ್ಯದ ಪರೀಕ್ಷೆ ಮಾಡಿರೆಂದು ಹೇಳುವ ಗರಜು ಯಾರಿಗಿರುತ್ತಿತ್ತು? ಸಿ.ಈ. ಅವರು ಈ ಮಾತನ್ನು ನಂಬುವ-ಬಿಡುವ ಪ್ರಶ್ನೆಯೇ ಉದ್ಭವಿಸುತ್ತಿರಲಿಲ್ಲ. ಶ್ಯಾಮರಾಯನನ್ನು ನೂರು ಟಕ್ಕೇ ನಂಬದಿದ್ದರೂ ಅಪನಂಬಿಕೆಗೆ ಆಸ್ಪದವಿರುತ್ತಿರ

ಲಿಲ್ಲ. ಅದೂ ಶ್ಯಾಮರಾಯ-ಸಾಹೇಬರ ಖಾಸಗೀ ವ್ಯವಹಾರವೆಂದು ಅವರು ಲಘುವಾಗಿ ಭಾವಿಸಿದರೂ, ಸಾಹೇಬರ ಬಗ್ಗೆ ಅನಾಸ್ಥೆ-ಅವಹೇಳನ ಹುಟ್ಟದಿರುತ್ತಿರಲಿಲ್ಲ. ಶ್ಯಾಮರಾಯನ ದೋಸ್ತ ಅಂಡರ್-ಸೇಕ್ರಟರಿ ಇದರ ಪಾಂಚಜನ್ಯ ಊದದಿರುತ್ತಿರಲಿಲ್ಲ. ಅದರ ನಾದ-ನಿನಾದ ಕರ್ಣೋಪಕರ್ಣವಾಗಿ ಸಾಗಿ, ಸುರೇಶನಿಗೂ ವಿದಿತವಾಗುತ್ತಿತ್ತು. 'ನಾಳೆ ಎಕ್ಸಿಕ್ಯೂಟಿವ್ ಇಂಜಿನಿಯರ್' ಆಗುವ ವ್ಯಕ್ತಿ ಇಂಥವನ ಮಗನೆಂದು ಸಿ.ಈ. ಅವರಿಗೂ ತಿಳಿಯುತ್ತಿತ್ತು. ಅವರು ಮುಖ ಕಿವುಚುತ್ತಿದ್ದರು. ಪಂತಕುಟುಂಬದ ಘನತೆ ಮುಖಾಳವಾಗುತ್ತಿತ್ತು. ಸೋನಕ್ಕನ ಧವಲ-ಕೀರ್ತಿ-ಕಲಶಕ್ಕೆ ನೇರವಾಗಿ ಗುರಿಯಿಟ್ಟು, ಶ್ಯಾಮರಾಯ ತನ್ನ ಕರಾಳ ದಂಡವನ್ನು ಬೀಸಲಿದ್ದ...

ಅಸಹಾಯನಂತೆ – ಕೈ ಮುಚ್ಚಿಕೊಂಡು ಕೂಡುವದರಲ್ಲಿ ಅರ್ಥವಿರಲಿಲ್ಲ. ಒರಸಿಗೆ ಒರಸು, ಹಾವಿಗೆ ಪ್ರತಿ ಹಾವು – ಅಸ್ತ್ರಕ್ಕೆ ಪ್ರತಿ ಅಸ್ತ್ರ ತೊಡದೆ ಅನ್ಯ ದಾರಿ ಇರಲಿಲ್ಲ. ಶ್ಯಾಮರಾಯನ ಎಲ್ಲ ಅಸ್ತ್ರ-ಶಸ್ತ್ರದ ವಿಷವನ್ನು ಹೀರುವ – ಹೀರಿ ವಿಜೃಂಭಿಸುವ – ಅವನ ತಲೆಯನ್ನೇ ತೆಗೆದು ಅಟ್ಟಹಾಸ ಮಾಡುವ – ವಿಜಯೋನ್ಮಾದದಿಂದ ಭೈರವನಾಟ್ಯವನ್ನು ಗೈಯುವ ಸಾಮರ್ಥ್ಯವನ್ನು ಪಡೆದ – ಒಂದು ಮಹಾ ಅಸ್ತ್ರ ದಾದಲ್ಯಾನ ಬಳಿಯಲ್ಲಿ ಶಾಬೂತಾಗಿತ್ತು. ಆ ಮಹಾರುದ್ರಾಸ್ತ್ರ ಬತ್ತಳಿಕೆಯಿಂದ ಹೊರಬಿದ್ದು – ಬಿಲ್ಲಿನ ಹೆದೆಯಲ್ಲಿ ಕೇವಲ ಪ್ರತಿಷ್ಠಿತವಾದರೇ ಸಾಕು – ಶ್ಯಾಮರಾಯ ಭೂಪತಿತನಾಗುತ್ತಿದ್ದ. ಅವನ ಗೆಳೆಯ ಅಂಡರ್-ಸೆಕ್ರೆಟರಿ ಗತಾವಸಾನವಾಗುತ್ತಿದ್ದ. ಶ್ಯಾಮರಾಯನ ನೆತ್ತಿಯನ್ನು ಮೆಟ್ಟಿ ನಿಂತು, ದಾದಲ್ಯಾ ಜಯನಾದ ಮಾಡುತ್ತಿದ್ದ.

ದಾದಲ್ಯಾ ಅಜೇಯ-ವೀರನ ಥರ್ತಿಯಿಂದ ಎದ್ದು ಶ್ಯಾಮರಾಯನನ್ನು ಗಾಠಾಯಿಸ ಹೊರಟ. ಶೇಡಜಿಯ ಕೋಣೆಯಿಂದ ಹೊರಗೆ ಕಾಲಿಡಲಿದ್ದ. ಅಷ್ಟರಲ್ಲಿ ಶೇಡಜೀಯೇ ಅವಸರ-ಅವಸರವಾಗಿ ಬಂದು —

"ಮಾಸ್ಟರಜೀ, your boss is with C.E. They are discussing some technical points. Enquiry ಇಂದ ಸೂರೂ ಆದೀತಂತ ಅನಸೂದಿಲ್ಲಾ. There are lot of urgent papers for disposal. ಇಂದs ಸಹಿ ಆಗಿ ಹೋಗಬೇಕು. Moreover C. E. has an appointment with some bloody ಮಹಾರಾಜಾ. He has to leave the office at 4. Excuse ಮಾಡs ಮಾಸ್ಟರಜೀ. I must hurry up with some urgent

papers. Please do come to my place in the evening. We shall discuss about your proof. ಅಚ್ಛಾ ಮಾಸ್ಟರಜೀ."

ಶೇಡಜೀ ಮಾತನಾಡುತ್ತಿದ್ದಂತೆಯೇ ತನಗೆ ಬೇಕಾದ ಕಾಗದಗಳನ್ನು ಸೇಫಿನಿಂದ ತೆಗೆದು ಸರ್ರನೆ ಕೋಣೆ ಬಿಟ್ಟು ಹೊರಬಿದ್ದ. ನನಗೂ ಅದೇ ಬೇಕಾಗಿತ್ತು.

ಇಂದು ವಿಚಾರಣೆ ಮುಂದುವರಿದು ನಾಳೆಗೆ ಬಿದ್ದರೆ, ಸಾಹೇಬರು ಪಾರಾದಂತೆ ಎಂದು ಭೇನಿಸಿ. ಶೇಡಜಿಯ ಕೋಣೆಯಿಂದ ಹೊರಬಿದ್ದೆ. ಕಾರಣ ನಾಳೆ-ನಾಡಿದ್ದು ಕಚೇರಿಗೆ ಯಾವುದೋ ಪಾರ್ಸಿ-ಮುಸ್ಲಿಮ್ ಹಬ್ಬದ ಪ್ರಯುಕ್ತ ಬಿಡುವಿತ್ತು. ಬಿಡುವಿನ ದಿನದಲ್ಲಿಯೂ ಕೂಡ, ಕಚೇರಿಗೆ ಅಂಟಿ ಸಿಲ್ಲಲು, ಚೀಫ್ ಇಂಜಿನಿಯರ್‌ಸಾಹೇಬರೇನು, ಅಡತಿಯ ಅಂಗಡಿಯಲ್ಲಿಯ ಹೆಡ್-ಮುನೀಮ ಅಲ್ಲ. ಅವರಿಗೆ ಸೂಟಿ ಎಂದರೆ ಸೂಟಿ. ಆಚೆಯ ನಾಡಿದ್ದು ಶನಿವಾರ... ಮತ್ತೆ ರವಿವಾರ. ಮುಂದಿನ ವಿಚಾರವೇಕೆ? ಈಗ ಎರಡು ದಿನದ – ನಲವತ್ತೆಂಟು ತಾಸಿನ ಮಹಾ ಅವಧಿ ನನ್ನ ತಾಬೆಯಲ್ಲಿ ಇತ್ತು. ಇಷ್ಟು ಅವಧಿ ದಾದಲ್ಯಾನಿಗೆ ಸಾಕಾಗಿತ್ತು.

ದಾದಲ್ಯಾ ಸೇಕ್ರುಟರಿಏಟಿನಲ್ಲಿಯ ಅಂಡರ್-ಸೆಕ್ರಟರಿಯ ಕೋಣೆಯ ಬಳಿ ಸುತ್ತಿ ಸುಳಿದ. ಅಲ್ಲಿ ಶ್ಯಾಮರಾಯ ಅ್ಯಂಡ ಕಂ. ಇಲ್ಲದಿರುವ ಖಾತ್ರೀ ಮಾಡಿಕೊಂಡ. ಯು.ಎಸ್.ನೂ ಕೂಡ, ಚೀಫ್‌ಇಂಜನಿಯರರ ಕೋಣೆಯಲ್ಲಿಯೇ ಇರುವ ಪತ್ತೇ ಪಟ್ಟಾವಾಲಾನಿಂದ ಆಯಿತು. ಜಾರ್ಜ ಎಡ್ವರ್ಡ ಸಾಹೇಬರ ಒಂದು ಚಕಚಕಿತ ರೂಪ್ಯಕ ಕೈಬಿಟ್ಟಿತು. ಅದನ್ನು ಸ್ವೀಕರಿಸಿದ ಮುದುಕ ಪಟ್ಟಾವಾಲಾ ಗೌರವದಿಂದ ದಾದಲ್ಯಾನಿಗೆ – ಈ ಸುದ್ದಿ ತಿಳಿಸಿದ. ಅಷ್ಟೇ ಬೇಕಾಗಿದ್ದ ನಾನು, ಸೇಕ್ರುಟರಿಏಟದ ಮಜಲನ್ನು ಸರಸರ ಇಳಿದು – ಕಟ್ಟಡದ ಮಹಾದ್ವಾರದಲ್ಲಿ ಬರುವದಕ್ಕೂ – ಶ್ಯಾಮರಾಯ ಅ್ಯಂಡ ಕೋ. ಬಾಡಿಗೆಯ ಟ್ಯಾಕ್ಸಿಯಲ್ಲಿ ವಿರಾಜಮಾನವಾಗಿ ಮಹಾದ್ವಾರ ಪ್ರವೇಶಿಸುವದಕ್ಕೂ ಗಂಟುಬಿತ್ತು. ಗಾಡಿ ಬಾಗಿಲಲ್ಲಿ ನಿಂತಿತು. ಒಳಗಿನ ತ್ರಿಕೂಟ ಕೆಳಗಿಳಿಯಿತು. ನನ್ನನ್ನು ನೋಡಿ, ಶ್ಯಾಮರಾಯ, ಬಸಗೋಂಡ-ನಬೀಸಾಬರ ಕಡೆಗೆ ಮುಖ ಮಾಡಿ, ಕಣ್ಣು ಹಿರಿ-ಕಿರಿದಾಗಿ ಸುತ್ತ ಕೊಂಕುನಗೆಯನ್ನು ನಕ್ಕು —

"ಅರೇ ದಾದಲ್ಯಾ, ಊರಿಗೇನು ಪುಷ್ಪಕವಿಮಾನದಾಗ ಹೋಗಿ ತಿರಿಗಿ ಬಂದೇನು? ನಿಮ್ಮ ಗೋವಿಂದಭಟ್ಟಾ ಇನಾ ಏನು ಜೀವಂತ ಇದ್ದಾನೋ – ಏನ ಟ್ಠಾಂ ಹೊಡದನೋ? ಮಗನ್ನ ತಯ್ಯಬ್ಜೀ ಅವರ ಮನ್ಯಾಗ ಭಂಪ ಹೊಡದು

ಎಲ್ಲೆ ಹೋಗಿದ್ದಿ? ಎರಡ ಭಾಂಡ ಕೊಡಿಸಿದ ಸಾಹೇಬರ ಜೆನ್ನ ಹತ್ತೀ ಕಾಣಸ್ತದ? ನಿಮ್ಮ ಸಾಹೇಬರ ಅಸ್ಥೀ-ಪಸ್ಥೀ ಏನರ‍್ಸ ಶಿಲ್ಲಕ ಉಳದಾವ್ವೋ ಏನ ಬರೇ ಬೂದಿನೇ ಕೈಗೆ ಹತ್ತದೋ?"

ಬೇಕಾದಷ್ಟು ಕಟುತೆ–ವಿಷ ತುಂಬಿ ತುಂಬಿ ವ್ಯಂಗ್ಯವಾಗಿ ಶ್ಯಾಮರಾಯ ಮಾತನಾಡಿದ. ಅವನ ಮಾತಿಗೆ ಖುಷಿಯಾಗಿ ಬಸಗೋಂಡ-ನಬೀಸಾಬರು ದೊಡ್ಡ ದಾಗಿ ನಕ್ಕರು. ದಾದಲ್ಯಾ ಇವರದೇ ಅಸ್ಥಿಸಂಚಯಕ್ಕೆ ಹೊರಟಿದ್ದ. ಅವರ ಮಾತು ನಗೆಯಿಂದ ವಿಚಲಿತನಾಗಲಿಲ್ಲ. ವಿನಮ್ರನಾಗಿಯೇ ಅವರ ಮಾತುಗಳ, ನಗೆಯ ನಂಜಿನ ಗುಟುಕು ಗುಟುಕರಿಸಿ —

"ದಾದಾ, ಗೋವಿಂದಭಟ್ಟಾ – ಸಾಹೇಬರ ಕ್ಷೇಮದ್ದಶಿಂದ ಸಾವಕಾಶ ಮಾತಾಡೂಣಂತ. ಅದಕೇನು ಅಂಥಾ ಅವಸರ ಇಲ್ಲ ಈಗ. ಅಗತ್ಯ ಇತ್ತು ನಿಮ್ಮ ಭೆಟ್ಟೀದು. ಅದಕಂತಲೇ ಪುಣೇದ ವಾರೀ ಮಾಡಿ ಬರೂ ಪ್ರಸಂಗ ಬಂತು. ಅಲ್ಲೇ ನಿಮ್ಮ ಭೆಟ್ಟಿ ಆಗಿದ್ದರ ಠೀಕಸ್ಸ ಆಗತಿತ್ತು. ನೀವು ಮುಂಬೈಗೆ ಬರೂ ತ್ರಾಸನೂ ತಪ್ಪತಿತ್ತು. ದಾದಾ, ಈಗ ನಿಮ್ಮ ಕಡೇನ‍್ಸ ಹೊಂಟಿದ್ದೆ. ನಿಮ್ಮ ಮುಕ್ಕಾಂ ಅರ್ಧಾ, ಅಂಡರ್-ಸೇಕ್ರಟರೀ ಅವರ ಕಡೆ...ಅರ್ಧಾ ತಾಂಬೇ-ಭುವನದಾಗ ಅದ‍್ಸ ಅನ್ನೂದು ತಿಳೀತು. ಇಲ್ಲೆ ಬಂದೀರ‍್ಯನೂ ಖಾತ್ರೀನೂ ಇತ್ತು. ಸೇಕ್ರಟರೀಏಟದ ಹೊರಗೇ ನಿಮ್ಮನ್ನ ಗಾಠಾಸೂದು ಠೀಕಂತ ನಿಮ್ಮ ದಾರೀ ನೋಡಿಕೋತ ಇಲ್ಲೇ ನಿಂದರೂ ಅಂಬಾ ಇದ್ದೆ. ಒಂದು ಖಾಸಗೀ ವಿಷಯದ್ದಶಿಂದ ನಿಮ್ಮ ಜೋಡೀ ಮಾತಾಡೂದದ: It is better to discuss it privately; just inform your friends to wait here till we return. ಅದಕ್ಕೇನು ಹೆಚ್ಚ ಹೊತ್ತು ಹಿಡಿಯೂದಿಲ್ಲಾ. ಜಾಸ್ತೀ ಜಾಸ್ತ ಅಂದರ ಪಂಧರಾ-ವೀಸ ಮಿನೀಟಾ. ಆ ಮೂಲ್ಯಾಗಿನ 'ಕ್ಯಾಫೇ ಇಲೈಟ್'ಕ್ಕ ಹೋಗೂಣು ನಡೀರಿ. ಮಾತಾಡಲಿಕ್ಕೂ ಠೀಕ ಆಗತದ."

ನಾನು ಧ್ವನಿಯಲ್ಲಿ ಏಕದಮ್ ಗಾಂಭೀರ್ಯ – ಆರ್ಜವತೆ ತಂದು ಮಾತಾಡಿ ದ್ದರಿಂದ, ಕೇವಲ ಅವನ ಭೆಟ್ಟಿಯ ಸಲುವಾಗಿ ಪುಣೆಯ ವರೆಗೂ ಪ್ರಯಾಣಿಸಿ ಬಂದೆನೆಂದು ಹೇಳಿದ್ದರಿಂದ, ಶ್ಯಾಮರಾಯ ತನ್ನ ಒರಟು-ಕೊಂಕುತನ ಬಿಟ್ಟು ಒಂದಿಷ್ಟು ಪ್ರೋಕ್ತನಂತಾದ. ದಾದಲ್ಯಾನ ಆಳ-ಅಳತೆ ಅಷ್ಟು ಅಲಕ್ಷಿತ ಸದರಿನಲ್ಲಿ ಬರುವಂತಹದಲ್ಲವೆಂಬ ಕಲ್ಪನೆಯೂ ಅವನಲ್ಲಿ ಮೂಡಿರಬೇಕು. ಅಥವಾ ಸಾಹೇ ಬರೇ ಏನಾದರೂ. ದಾದಲ್ಯಾನನ್ನು ತಮ್ಮ ಪರವಾಗಿ ಛೂ-ಬಿಟ್ಟು ಸಂಧಾನದ

ಪ್ರಸ್ತಾಪಕ್ಕೆ ಕಳಿಸಿದ್ದರೂ ಕಳಿಸಿರಬೇಕೆಂಬ ವಿಚಾರ ಅವನಿಗೆ ಬಂದಿರಬೇಕು. ಒಂದೆರಡು ನಿಮಿಷ ಸ್ತಬ್ಧನಾಗಿ ಏನು ಯೋಚಿಸಿದನೋ ಏನೋ – ಆದರೆ ನಿರ್ಣಯಕ್ಕೆ ಬಂದ ರೀತಿಯಲ್ಲಿ, ತನ್ನ ಸಹಕಾರಿಗಳಿಗೆ ಈಗ ಬರುತ್ತೇನೆ – ಹತ್ತು-ಹದಿನೈದು ಮಿನೀಟು ಇಲ್ಲೇ ಇಲ್ಲಿರೆಂದು ತಿಳಿಸಿ. ನನ್ನ ಜೊತೆಗೆ ಝಪಝಪ ಹೆಜ್ಜೆ ಹಾಕುತ್ತ 'ಕ್ಯಾಫೆ ಇಲೈಟ'ದ ಕಡೆಗೆ ನಡೆದ. ದಾರಿಯಲ್ಲಿ ಇಬ್ಬರೂ ಮೌನರಾಗಿದ್ದೆವು. ಹೊಟೇಲಿನ ಒಂದು ತೀರ ನಿರ್ಜನವಾದ ಮೂಲೆಯಲ್ಲಿ ಹೋಗಿ ಕುಳಿತೆವು. ಚಹ ಬಿಸ್ಕಿಟು ತರಲು ಹೇಳಿ ನಾನು ಕಿಸೆಯಲ್ಲಿಯ ಸಿಗರೇಟ್-ಪ್ಯಾಕ್ ತೆಗೆದು ಶ್ಯಾಮರಾಯನ ಮುಂದೆ ಸರಿಸಿದೆ.

"ದಾದಲ್ಯಾ"

ಚೇಳಿನ ಕೊಂಡಿಯ ಮೇಲೆ ತಪ್ಪಿ ಕಾಲು ಬಿದ್ದಾಗ – ಅದರ ವಿಷ-ಕೊಂಡಿಯ ದಂಶ ಸಟ್ಟನೇ ಆದ ನೋವಿನಿಂದ ಒದರುವ ಧರ್ತಿಯಲ್ಲಿ. ಶ್ಯಾಮರಾಯ. ನಾನು ಸರಿಸಿದ ಸಿಗರೇಟ್-ಪ್ಯಾಕ್‌ನ್ನು ನೋಡಿ ಒದರಿದ.

"'ಯೆಸ್ ಸ್ಸರ್' ತುಡುಗಲೇ ಸೇದೂ ದಿನಾ ಹೋಗಿ ಹಳೀ ಮಾತಾತು. ಕಷ್ಟ-ಮುಟ್ಟಿ ನಿಮ್ಮ ಜೋಡೀ ಏನ ವ್ಯವಹಾರಾ? ನಿಮ್ಮ ಜೋಡೀ ಕೂತು ಮಟನ್-ಭಾತ ಹೊಡದೀನಿ. ಸೂಪ ಸೂರಕೊಂಡೀನಿ. ಸಿಗರೇಟಿಗ್ಯಾಕ ಮತ್ತ ಛಿಡೇ ಮಾಡಲಿ? 'ಆ:ಲ್‌ರೈಟ್' ಚಹಾ ಬಂತು. ತಗೋರಿ. ಕುಡದs 'ಡಿಸ್ಕಶನ್'ಕ್ಕ ಕೂಡೂಣಂತ."

ಚಹ ಮುಗಿಯಿತು. ನಾನು ಸಿಗರೇಟ್ ಹಚ್ಚಿದೆ. ನನ್ನ ಮುಂದೆ ಸಿಗರೇಟು ಸೇದುವದು ಅಗೌರವವೆಂದು, ಶ್ಯಾಮರಾಯ ಭಾವಿಸಿರಬೇಕು. ತನ್ನ ಮುಂದಿನ ಹುಡುಗ ದಾದಲ್ಯಾ. ಬೇಲಾಶಕ್ ಸಿಗರೇಟು ಹಚ್ಚಿ, ಆಪ್ಯಾಯಮಾನವಾಗಿ ಹೊಗೆ ಬಿಡುತ್ತಿರುವನಲ್ಲವೆಂದು ಅವನು ಖಜೀಲನೂ ಆಗಿರಬೇಕು. ನಾನು ಮುದ್ದಾಂ, ಬೇಫಿಕೀರ-ವೃತ್ತಿಯನ್ನು ತೋರಿಸುವಂತೆ ವರ್ತಿಸತೊಡಗಿದೆ. ಜೀವದ ಹಂಗನ್ನೇ ಹರಿದುಕೊಂಡು ಮೃತ್ಯುವನ್ನು ಮುಖಾಮುಖಿಯಾಗಿ ಎದುರಿಸಿದಾಗ, ಅದನ್ನು ಚಿಲ್ಲರೆಯೆಂದು ಭಾವಿಸಿ ಅದರ ದರಜಿಲ್ಲದೆ ಸಾಗುವವರಂತಹ ಬೇಫಿಕೀರ-ವೃತ್ತಿ ನನ್ನಲ್ಲಿ ಮೂಡಿತ್ತು. ಶ್ಯಾಮರಾಯ ಕಟುವಾಗಿ ಮಾತಾಡಿ, ಲಘುವಾಗಿ ನಕ್ಕು, ನನ್ನನ್ನು ಕೆರಳಿಸಿರಲಿಲ್ಲ. ಗೋವಿಂದಭಟ್ಟನಿಗೆ ಮಸಣದ ದಾರಿ ತೋರಿಸಿ ನನ್ನನ್ನು ತಿವಿದಿರಲಿಲ್ಲ. ಅವನ ಮಾತಿಗೆ ಅಷ್ಟೇ ಗಮಜಿನಿಂದ – ಅಷ್ಟೇ ತೀಕ್ಷ್ಣವಾಗಿ –

ಉತ್ತರಿಸಬಲ್ಲ – ಆ ಉತ್ತರದ ಶರಾಘಾತದಿಂದಲೇ ಅವನನ್ನು ಭೂಪತಿತನನ್ನಾಗಿ ಮಾಡಬಲ್ಲ ಸಾಮರ್ಥ್ಯ ನನ್ನಲ್ಲಿತ್ತು.

"ನಿಮ್ಮ ಜೋಡೀ ಮಟನ್-ಭಾತ ಹೊಡದೀನಿ. ಸೂಪ ಸುರಕೊಂಡೀನಿ. ಅವ್ವಾಕ ದಾದಾ, ನೀವೇ ಅಂಥಾಂಗ, ಖಾಸ್ ನಿಮ್ಮ ಮಾಲ್ಕೀ-ಮಾಲು – ಬಸವಂತೀ ಜೋಡೀ ಮಜಾನೂ ಮಾಡೀನಿ. ಇನ್ನ ಸಿಗರೇಟ್ ಸೇದೂದಕ್ಕ ಯಾಕ ಅಂಜಲಿ?"

ಎಂದೇ ಕೇಳಬೇಕೆಂದು ಮಾಡಿದ್ದೆ. ಪತ್ರದ ಗುಪಿತವನ್ನು ಒಡೆದ ನಂತರ, ಶ್ಯಾಮರಾಯ ಖವಳಿಸಿ ಕತ್ತಿ ಹಿರಿಯುವ ಮೊದಲೇ, ಅಚಾನಕವಾಗಿ ಅವನ ಎದೆಗೆ ಈ ಭಾಲಾಪ್ರಯೋಗವನ್ನು ನಾನು ಮಾಡಬೇಕೆಂದು ಮಾಡಿದ್ದೆ. ಶ್ಯಾಮರಾಯನಂಥ ಸಮಯ-ಸಾಧಕ ಹೀನ-ಪಶುವಿಗೆ ಇಂಥ ಪ್ರಯೋಗವೇ ಯೋಗ್ಯವಾಗಿತ್ತು. ಡಾಮ-ಡೌಲಾಗಿ ಹೆಡೆ ಬಿಡಿಸಿ ಆಡುವ ನಾಗರದ ಮೋಹಕ-ವಿಲಾಸಕ್ಕೆ ಮಾರು ಹೋಗದೆ ಅದರ ವಿಷ-ಪೂತ-ಫಣೆಯಲ್ಲಿ ಆರುಪಾರಾಗುವಂತೆ ಭಾಲಾಪ್ರಯೋಗ ಮಾಡುವ ಮನೀಷೆ ನನಗೆ ಬಂದಿತ್ತು. ಆದರೆ ನನ್ನ ಅಂಗೈಯಲ್ಲಿಯ ಗರುಡನ ಗೆರೆಯ ದರ್ಶನದಿಂದ ಆ ನಾಗರದ ಬಿಚ್ಚಿದ ಹೆಡೆ ಮುಚ್ಚಿ ಮುಟಿಗೆಯಾಗುವಾಗ ಭಾಲೆಯ ಅಗತ್ಯ ಭಾಸವಾಗಲಿಲ್ಲ. ಶ್ಯಾಮರಾಯ ಇಷ್ಟು ಜೋರಿನಿಂದ – ಇಷ್ಟು ಲಘು-ಭಾವನೆಯಿಂದ ಮಾತಾಡಿದ್ದವ – ನಾನು "ಖಾಸಗೀ ಮಾತಾಡುವದಿದೆ, ಜಾಸ್ತೀ ಜಾಸ್ತ ಅಂದರ ಪಂಧರಾ ಮಿನೀಟಾ" ಎಂದಾಗ ಕುರಿಯಂತೆ ನನ್ನ ಬೆನ್ನಿಗೆ ಬಂದು. ನಾನು ಕೊಡಮಾಡಿದ ಕಪ್ಪು ಚಹ ಗುಟಕರಿಸಿ, ನಾನು ಬೇಘಾಮುನಂತೆ ಸಿಗರೇಟು ಮುಂದೆ ಚಾಚಿದಾಗ ಚಕಿತನಾಗಿ, 'ದಾದಲ್ಯಾ' ಎಂದಿಷ್ಟೇ ನುಡಿದು ತಣ್ಣಗಾಗಿದ್ದ. ಆ 'ದಾದಲ್ಯಾ' ಉದ್ಗಾರದಲ್ಲಿ ಪೂರ್ವದ ಕಟುತೆ ಇರಲಿಲ್ಲ. ಕೊಂಕು ಉಪಹಾಸವಿರಲಿಲ್ಲ. ಸೋತು ಸತ್ತವನ ಮಂದಾಕ್ರಾಂತದ ದೀನ ಮಿಡಿತವಿತ್ತು. "ಶ್ಯಾಮರಾವ್. ಬಸವಂತೀ ಜೋಡೀ ಮಜಾನೂ ಮಾಡೀನಿ" ಎಂದು ನಾನು ಮಾತು ಮಿಂಚಿಸಿದ್ದರೆ ಆ ವಿದ್ಯುತ್ತ-ಶಲಾಕೆ ಅವನ ಎದೆಯಲ್ಲಿ ಆರುಪಾರಾಗದೆ ಹೋಗದಿರುತ್ತಿರಲಿಲ್ಲ. ಒಂದೇ ಬೀಸಿನಲ್ಲಿ ಶ್ಯಾಮರಾಯನ ರುಂಡ-ದುಂಡವನ್ನು ಛೇದಿಸುವ ಮನಸ್ಸಾಗಲಿಲ್ಲ. ಅವನು ಸೋನಕ್ಕನನ್ನು ವಿಲಿವಿಲಿ ಒದ್ದಾಡಿಸಿದ್ದ. ನನ್ನ ಪ್ರಾಣ-ಸಖ ವಿಶ್ವಾಸಿಗೆ "ದುರ್ಬೀಜ"ನೆಂದು ಕಲಂಕಿತ ಅಭಿದಾನ ತೊಡಿಸಿದ್ದ. ನನ್ನ ಬಸವಂತಿಯ ತುಂಬಿದ ತೋಳಿಗೆ ಕತ್ತರಿ ಚುಚ್ಚಿ ನೆತ್ತರು ಚಿಮ್ಮಿಸಿದ್ದ.

ದಾದಲ್ಯಾನ ಕೂಡ ಮಜಾ ಮಾಡಿರಬೇಕೆಂದು ಆರೋಪಿಸಿದ್ದ. ನಾಳೆ ವಿಚಾರಣೆಯು ಸಮಯದಲ್ಲಿ ಘನ ಅನೃತ ವದಿಸಿ ಸೋಸಕ್ಕನ ಪಾವಿತ್ರ್ಯಕ್ಕೆ ತನ್ನ ಕೈಯಾರೆ ಮಸಿ ಒರೆಸಲಿದ್ದ. ಸಿಪ್ಪಾಪಿ ಸಾಹೇಬರ ಬಲಿ ಕೊಳ್ಳಲಿದ್ದ. ಅವನಿಗೂ ನರಕಯಾತನೆಯ ಭೋಗವನ್ನು ನಿಧಾನವಾಗಿ ನೆಕ್ಕಿಸುವ – ನೆಕ್ಕುವಾಗ ಚಾವಟೆ ಹಿಡಿದು ಬೆನ್ನು ಹತ್ತುವ ವಿಚಾರ ಬಂತು. ಅವನು ನಿಧಾನವಾಗಿ ಸಾಯುವ – ಸಾಯುವಾಗ ಪ್ರಾಣಾಂತಿಕವಾಗಿ ನರಳುವ – ನರಳುವಾಗ ತನ್ನ ಹೀನಮಾನಸದ ಪ್ರಲಾಪ ಮಾಡುವ – ದಗ್ಧಹೃದಯದಿಂದ ಆಕ್ರಂದಿಸುವ ಪಾಂಗು ನೋಡುವ – ನೋಡಿ ವಿಕಟಾಟ್ಟಹಾಸ ಮಾಡುವ ವಿಚಿತ್ರ ಆಸುರೀ-ಭಾವನೆ ನನ್ನಲ್ಲಿ ಮೂಡಿತು.

"ದಾದಾ. ಸಾಹೇಬರ ಪ್ರಕರಣದಾಗ ನಿಮ್ಮದೂ ಸಾಕ್ಷೀ ಅದs ಏನು? ಇದ್ದರ ಹೇಳರಿ? ಏನು ಹೇಳಾವ್ರಿದ್ದೀರಿ?"
ನಾನು ಕೇಳಿದೆ.

"ದಾದಲ್ಯಾ it is none of your business... ಈ ಭಾನಗಡೀ ನಿನ್ನ ತುತ್ತ ಅಲ್ಲಾ. ಸೇಕ್ರಟರೀಪಟದ ಬಾಗಲದಾಗ ನಿನ್ನ ನೋಡಿದ ಕೂಡಲೇ ಅನಿಸಿತು, ನೀ ಏನರs ಕಂತ್ರಾಟ ಮಾಡಲಿಕ್ಕೆ ಬಂದಿರಬೇಕಂತ. ಬೆಳಗಾಂವ್ಯಾಗ ನೀ ಭಾನಗಡೀ ಮಾಡಿ, ನಿಮ್ಮ ಸಾಹೇಬರನ ಪಾರ ಬಿಡವಿರಬೇಕು. ಇಲ್ಲೆ ಸಿ.ಈ. ಜೋಡೀ ಗಾಠ ಅದs. ಜೀವಂತ ಹೋಗಲಿ ನಿಮ್ಮ ಸಾಹೇಬಾ, ನೋಡತೀನಿ? ಅಲ್ಲೆ ಎಸ್.ಈನ್ನ ಬಗಲಾಗ ಒಗದಿದ್ದಾ ಅಂತs ಪಾರಬಿದ್ದಾ. ಇಲ್ಲಾ್ಯರ್ನ ಒಗೀತಾನ ಅನೂದನ್ನ ನೋಡತೀನಿ. ಆ ಊರ ಉಲ್ಲೂನ ಜೋಡೀ ಕಾಯಂ ತರೀಕ ಮಜಾ ಮಾಡಲಿಕ್ಕೆ ಮೋಕಳೀಕ ಆಗಲ್ಯಂತ ತನ್ನ ಮಗಳ್ನ ಸುರ್‍ಯಾಗ ಕೊಡೂ ಬೇತ ನಡಿಸ್ಯಾನ. ನಾನೂ ಥ್ವಾಡೇ ನಿರಾಗ ಮುಟಿಗೀ ಹೊಡಿಯೂದಿಲ್ಲಾ. ನಿನ್ನ ಸಾಹೇಬನ ಕಂತೀ ಕೂಡಸೂ 'ಆಪೊರ್ಚುನಿಟಿ' ನೋಡತಿದ್ದೆ. ನನ್ನ ಮ್ಯಾಲಿನ ಸಾಹೇಬಾ ಅಂತs ಸೈಲಬಿಟ್ಟಿದ್ದರ ಫಾಯದೇ ತಗೊಂಡು, ನನ್ನ ಜೀವನಾನs ಬರಬಾದ ಮಾಡಿದಾ. ನನ್ನ ಸಂಸಾರದಾಗ ವಿಷಾ ಹಿಂಡಿದಾ. ಇವನ್ನ ಏರಿಗಟಿಕೊಂಡು, ಆ ಉಲ್ಲೂ, ನನ್ನ ಹೆಸರ್ಲೇ ಹಚಿಗೊಂಡ ಕೂಕಮಾ ಸುದ್ದೇ ಅಳಿಸಿಗೊಂಡು ಮೋಕಳೀಕ ಆದಳು. ಆ ಕಿಚ್ಚು ಇನಾ ಧಗಧಗಸ್ತದ. ಇಕಿನ್ನ ಅಂಪಾ ಕೆಡಿಸಿದ ಸಾಕ್ಷೀ ನಾನೇ ಹೇಳತೀನಿ. ಅಕಿನ್ನ ನಾ ಬಿಟ್ಟೇನಿ ಅನ್ನೂದಕ್ಕ ಒಂದಲ್ಲ ಹತ್ತ ಸಾಕ್ಷೀ ಅವs. ಪ್ರಸಂಗ ಬಂದರ – ಬಸವಂತೀ ಕಡೇನೂ ಬಟ್ಟಮಾಡಿ ತೋರಿಸ್ತೀನಿ. ಪುಣೇದಾಗ ನಂದೇ ಮನೀ

ಹಿಡದು. ಒಂದ ಗಿರಾಕಿ ಇಟ್ಟಾನಂತ. ಮಾಡಿಕೊಂಡ ಹೇಣತೀನs ಉಲ್ಟಾ ಹೊಂಟಳು. ಬಸವಂತಿ ಅಂತೂ ಹೇಳೀ-ಕೇಳೀ ಬಾಜಾರಿ ಮಾಲು. ನಂದೇನು ಒಳೀ ಬೇಕಾಗೇದ, ಇಬ್ಬರೂ ಹಲಕಟ್ಟ ಇದ್ದಾರಂತ ಹೇಳಿದರ? ನಿನ್ನ ಛೂ-ಬಿಟ್ಟಾನ ಕಾಣಸ್ತದ ನಿಮ್ಮ ಸಾಹೇಬಾ? ಶ್ಯಾಮರಾಯನ್ನ ರಂಬಸು ದಾದಲ್ಯಾ ಅಂತs. ನಿಮ್ಮ ಅಪ್ಪನ ಅಡ್ಡಗೆರೀ ಗೊತ್ತ ಅವs ದಾದಲ್ಯಾ ನನಗ. ಮಗನs ನೀ ಯಾ ಗಿಡದ ತೊಪ್ಪಲ ನನಗ?"

"ದಾದಾ, ಸಾಹೇಬರೇನು ನನ್ನ 'go-between' (ಲಾಲೂ) ಧಂದೇಕ್ಕ ಕಳಿಸಿಲ್ಲಾ. ಮುಂದಿ ಕಳಿಸಿದರಂತ ದಾದಲ್ಯಾ ಬರೂ ಜಾತೀನೂ ಅಲ್ಲಾ. ನಮ್ಮ ಅಪ್ಪನ ಅಡ್ಡಗೆರೀ ನೀವು ಎಣಸೂ ಧಾವತೀ ಮಾಡಿರಬೇಕು. ಆದರೆ ದಾದಲ್ಯಾನ ಅಂಗೈಯಾಗಿನ ಗರುಡನ ಗೆರೀ ನೀವು ನೋಡಿಧಾಂಗ ಕಾಣಸೂದಿಲ್ಲಾ. ನಮ್ಮ ಸಾಹೇಬರನ 'ಎಕ್ಸ್‌ಪೋಜ್' ಮಾಡತೀನಿ ಅನೂ ಗಮಜ ಇದ್ದರ ಹೇಳರಿ. ನಿಮಗ, ನಿಮ್ಮ ದೋಸ್ತ ಯು.ಎಸ್.ಗೆ ನಾಳೆ ಸಂಜಿ ಅನೂದರಾಗ ನೀರ ಹಚ್ಚದಿದ್ದರ ಹೇಳರಿ. ನಿಮ್ಮನ್ನ 'ಬ್ಲ್ಯಾಕ್‌ಲಿಸ್ಟಿ'ನೊಳಗ ಹಾಕಸದೆ ಇದ್ದರ ನಾನೂ ಗೋವಿಂದ ಭಟ್ಟನ ಉತ್ತರದವನೇ ಅಲ್ಲಾ. ಹೋಗು ದಾದಲ್ಯಾ ಏನಾರೇ ಮಾಡಿ ಈ ಭಾನಗಡೀ ಬಗೀಹರಸೂ ಅಂತ ಸಾಹೇಬರು ಹೇಳಿದರ, ದಾದಲ್ಯಾ ಓಡಿಬರೂ ಜಾತಿ ಅಲ್ಲಾ. ನೀವೇ ನಿಮ್ಮದೇನೋ ಡಾವ್ ಸಾಧಿಸಿಗೊಳ್ಳಲಿಕ್ಕೆ, ಬಸವಂತೀ ಜೋಡೀ ಪುಣೇದ ಮನ್ಯಾಗ ಇರಲಿಕ್ಕೆ ಕೋರಾ ಕರಕರೀತ ಚೆಕ್ಕ ಕೊಟ್ಟಿದ್ದಿರಿ. ಬೆಳಗಾಂವೀ ಫರ್ಮದಾಗ ಚಾರ-ದೋನ ಆಣೇದ್ದು ಓಸೇದಾರಿನೂ ಕೊಡಲಿಕ್ಕೆ ಕಬೂಲಾಗಿದ್ದಿರಿ. ನಿಮ್ಮ ಎದ್ಯಾಗ ಹೊಕ್ಕು ಬೆನ್ನಾಗಿಂದ ಬಿರದ ಬರೂ ಎಲ್ಲಾ ಹಾವು ನನ್ನಲ್ಲ್ಯ ಇದ್ದೂ ಅಂತs ಪಾರಬಿದ್ದೆ. ದಾದಾ. ಮಂತರ ಮನೀ ಅನ್ನ ದಿಂದ ಈ ಪಿಂಡ ಬೆಳದದ. ಅವರಿಗೆ ಅನ್ಯಥಾ ಅನ್ಯಾಯ ಮಾಡಲಿಕ್ಕೆ ಬೆಳದಿಲ್ಲಾ. ನಿಮ್ಮ ಕಲ್ಯಾಣದ್ದೂ ನನಗ ಚಿಂತಿ ಇತ್ತು. ಅಂತೇ ಇಲ್ಲೀ ತನಕಾ ನಮತೇ-ಧೋರಣ ದಿಂದ ಬಂದೆ. ಅವರ ಪರಿವಿ ಇಲ್ಲದೇ ಮಾತಾಡಲಿಕ್ಕೆ ಹತ್ತೀರಿ. ರಾಜಪ್ಪಗ. ಕಾಕಾಗ. ಪಿಸ್ಯಾಗ ನಿಮ್ಮ ಕಂತೀ ಕೂಡಸಲಿಕ್ಕೆ ಹೊತ್ತ ಹಿಡೀತಿದ್ದಿಲ್ಲಾ. ಯಾರೂ ಅದಕ್ಕ ಮನಸ್ಸ ಮಾಡಲಿಲ್ಲಾ. ಬಸವಂತಿ ರಟ್ಟ್ಯಾಗಿನ ರಕ್ತಾ ಚಿಮ್ಮಿಸಿದ ಸುದ್ದಿ ಕಾಕಾ ಅವರಿಗೂ ತಾಕಿಕ್ಕದ. ಅವರ ಸೇಡು – ತಮ್ಮ ಮಗಳ ಸಮಾನ ಬಸವಂತೀ ಅಪಮಾನದ ಸೇಡು ಅವರು ರಕ್ತದಲೇನs ತಗೋತಿದ್ದರು. ಸಹಜ ನಿಮ್ಮ ಬ್ಯಾಟೀ

ಆಡಿ ಮೋಕಳೀಕ ಆಗತಿದ್ದರು. ಕಾಕಾ ನಮತೇ-ಧೋರಣ ಸ್ವೀಕರಿಸಿದರು. ಸೋನಕ್ಕನ ಕೂಕಮುದ ಪುಣ್ಯಾ ನಿಮ್ಮನ್ನ ಇಷ್ಟ ದಿನಾನರೇ ಬದಕಿಸ್ತ್ಯು. ಆದರ ದಾದಾ. ಇಂದ ವ್ಯಾಳ್ಯಾ ಬಂತು. ನಿಮ್ಮ ಘಟಿಕಾ ತುಂಬೂ ವ್ಯಾಳ್ಯಾ ಬಂತು. ನಾ ನಿಮ್ಮ ಪುರೋಹಿತಾ. ಮಂಗಳಾ-ಅಮಂಗಳಾ ಯಾವ ವ್ಯಾಳ್ಯಾಕ್ಕೂ ಅಗತ್ಯ ಇದ್ದಾಂವಾ. ಪೋಗಲಿ ಆ ಮಾತಾ. ಇದು ನೋಡರಿ ದಾದಾ. ನೀವು ನಿಮ್ಮ ದೋಸ್ತರಿಗೆ – 'ಅಂಡರ್ ಸೆಕ್ರೆಟರಿ'ಗೆ ಬರದ ಪತ್ರ ಅದs ನನ್ನ ಕಡೇ. ಸಾಹೇಬರ 'ಏನ್‌ಕ್ವಾಯರಿ' ನಡಿಯೂದಕಿಂತಾ ಮುಂಚೆ ನಾನೇ ಸಿ.ಈ. ಅವರ ಬಂಗಲೇಕ ಹೋಗತೀನಿ. ಅವರ ಇದರಿಗೆ ನಿಮ್ಮ ಪತ್ರಾ ಹಿಡೀತೀನಿ. ಹಿಂದಿನ ಎಸ್.ಈ. ಅವರು ಕೊಟ್ಟ ಸರ್ಟಿಫಿಕೇಟ್ ಅದs ನನ್ನ ಕಡೇ. ಸಿ.ಈ. ಅವರದು – ತಯ್ಯಬ್ಜೀ ಅವರದು ಘನ ಪರಿಚಯು ಅದs. ನಾ ಅವರ ಆಶ್ರಿತಾ – ಹಿಂದಿನ ಎಸ್.ಈ. ಅವರ ವಿಶ್ವಾಸದಾಗಿನವಾ ಅನ್ನೂದನ್ನ ನಾ ಹೇಳೂದು ಜರೂರೀನs ಬೀಳುದಿಲ್ಲಾ. ನನ್ನ ಮಾತಿನ ಮ್ಯಾಲ ವಿಶ್ವಾಸ ಕೂಡಲಿಕ್ಕೆ ಇಷ್ಟ ಪುರಾವೆ ಸಾಕಾಗತದ. ನಿಮ್ಮ ದಸ್ತೂರ ಖುದ್ದ 'ಡೆಥ್‌ವಾರಂಟ್'ದಿಂದ ಸಿ.ಈ. ಅವರ ಕಣ್ಣ ಪರಿ ಹರೀತದ. ಗಾಪ ಬೀಳತದ ನಿನಗ – ಅವರಿಗೆ. ನಮ್ಮ ಸಾಹೇಬರು ಪಾರಬೀಳತಾರ. ಗೋವಿಂದಭಟ್ಟನ್ನ ಸ್ಮಶಾನಕ್ಕ ಕಳಸೂ ವ್ಯರ್ಥ ಭಾಷಾ ಆಡಿದ್ದಿರಿ. ನಾಳೆ. ಅವನ ಮಗನs ನಿಮ್ಮ ತಿರಡೀ ಕಟ್ಟಿ ಸೋನಾಪುರಿಗೆ ಸಾಗಸೂ ಪ್ರಸಂಗ ಬರತದ."

"ಘಾತ ಆತ ದಾದಲ್ಯಾ... ಘಾತಾ ಮಾಡಿದಿ ಸೂಳೀಮಗನs. ಹುಚರಂಡಿ ಬಸವಂತಿ ದಗಾ ಕೊಟ್ಟಳು. ನಿಮ್ಮ ಇಬ್ಬರನೂ ಕೂಡೆ: ಸುಡಸಬೇಕಂತ ಮಾಡಿದ್ದೆ. ನಕ್ಕೋತ್ನ ನನ್ನ ಕುತ್ತಿಗಿ ಕೊಯ್ದಿರಿ. ಆ ರಂಡಿಗೆ ನಾ ಸಾಲಲಿಲ್ಲಾ. ನಿನಗ ಸಾಮೀಲಾಗಿ ನನ್ನ ಠಾರ ಮಾಡಿದಳು. ನನ್ನ ಡಾವನs ಕತ್ತರಿಸಿ ಬಿತ್ತು. ಇನ್ನ ಅಂದು ಆಡಿದರ ಏನ ಬರತದ? ಈ ಪತ್ರs ನನ್ನ ಠಾರ ಮಾಡಿತು. ನನ್ನ ಸಾಕ್ಷೀ-ಪುರಾವೇದಿಂದ ಏನ ಆಗಬೇಕಾಗೇದ? ನನ್ನ ದೋಸ್ತರು ಸತ್ತರೂ ಅಷ್ಟೇ-ಉಳಿದರೂ ಅಷ್ಟೇ. ತೋರಸು ದಾದಲ್ಯಾ ಆ ಪತ್ರಾ. ಸಿ.ಈ. ಅವರಿಗೆ. ಹೊಡೆಯೂ ಶಂಖಾ ಹೊಡದಬಿಡೂ ಅವರ ಮುಂದ! ಅದನ್ನ ಕೇಳಲಿಕ್ಕೆ ನಾ ಇಲ್ಲೆ ಇದ್ದರ ಹೌದಲ್ಲೋ? ಎಲ್ಲೆ ಹೋದೀ ಮಗನs. ನನ್ನ ಕೈಯಾಗಿಂದ ಪಾರಾಗಿ? ಕಾಳಾಪಾಣೀ ಆಗಲಿ – ಫಾಶೀ. ಆಗಲಿ, ನಿಂದೂ, ಆ ಲವಡೀದೂ ರಕ್ತಾ, ಹೀರದೆ ಬಿಡೂದಿಲ್ಲಾ. ಗೋವಿಂದಭಟ್ಟನ ಕೈಲೇನs ನಿನ್ನ ಚಿತಾ ಹೊತ್ತಸದೆ

ಬಿಡೂದಿಲ್ಲಾ. ಇಂದೇ ಆ ರಂಡಿನ್ನ ಒಯ್ದು ಒಗೀತೀನಿ ವಾಡೇದಾಗ... ಕೊಳ-ಕೊಳ ನೀರ-ನೀರ ಅನಿಸಿ ಕೊಲ್ತೀನಿ. ನನಗ ದಗಾ ಕೊಟ್ಟಾಳ. ನನ್ನ ಅನ್ನಕ್ಕ ತಿರಗಿ ಬಿದ್ದಾಳ. ನಿನ್ನs ಅಕಿನ್ನ ನುಂಗಿ ನೀರ ಕುಡೀದಿದ್ದರ ನಾನೂ ರಾವಜೀಕಾಕಾನ ಉತ್ತರದಂವಾ ಅಲ್ಲಾ."

"ನಿಮ್ಮ ಉತ್ತರಾ-ದಕ್ಷಿಣದಾಗ ತಥ್ಯ ಇಲ್ಲ ದಾದಾ. ಬಸವಂತಿಗೆ ಸುಮ್ಮನೇ ಯಾಕ ಅಪಶಬ್ದ ಅಡಿ ನಿಮ್ಮ ಬಾಯಿ ಘಟಾರ ಅನೂದನ್ನ ತೋರಸ್ತೀರಿ? ಈ ಪತ್ರ ನನ್ನ ಕೈಗೆ ಸಿಕ್ಕದ್ದು ಬಸವಂತೀ ಮಾರ್ಫತ್ ಅಲ್ಲಾ. ಖಾದರನ ಕಡಿಂದ ಇದನ್ನ ಟಪಾಲದಾಗ ಒಗಸಲಿಕ್ಕೆ ಕೊಟ್ಟಿದ್ದಿರಿ. ಅದೇ ಸುಮಾರಕ್ಕ ನಾನು ನಿಮ್ಮ ಬಂಗಲೇಕ್ಕ ಹೋಗಿದ್ದೆ. ಈ ಪತ್ರದ ವ್ಯಾಲಿನ ಪತ್ತೇ ನೋಡಿ ಅದನ್ನ ಹಾರಿಸಿದೆ. ನಿಮ್ಮ ಕೈ ಎಷ್ಟ ಧೂರ ಚಾಚತಾವ ಅನೂದರ ಕಲ್ಪನಾ ಇತ್ತ ನನಗ. ನಿಮ್ಮನ್ನ ಉಳಸಬೇಕು, ಸಾಹೇಬರನ ಉಳಸಬೇಕು ಅನ್ನೂ ಇರಾದೆಯಿಂದ ಇದನ್ನ ಶಾಬೂತಾಗಿ ಇಟ್ಟಿದ್ದೆ. ಇದರಾಗಿನ ಒಂದ ಅಕ್ಷರಾ – ಇದರ ಸುದ್ದಿ ಯಾರಿಗೂ ತಾಂವಿಕಿಲ್ಲಾ. ಇದರ ಫಾಯದೇ ಇಂದೇ ತಗೋಬೇಕಂದರ ನಿಮ್ಮ ಥೈಲೀ ಬಾಯೀ ಬಿಚ್ಚಸ್ತೀನಿ. ನಿಮ್ಮ ದೋಸ್ತಾ ತಾ ಬಚಾವಾಗೂದರ ದಶಿಂದ ನಿಮಗ ನೀರ ಹಚ್ಚತಾನ. ಬಸಗೋಂಡಾ-ನಬೀಸಾಬರ ಕಡಿಂದ ನೀವೇ ಸುಳ್ಳ ಅರ್ಜೀ ಬರಸೀರಿ ಅನೂದನ್ನ ಅಂವಾ ಸಿದ್ಧ ಮಾಡತಾನ. ಈ ಪತ್ರಾ ನನ್ನ ಕಡೇ ಇರೂ ತನಕಾ ನಿಮ್ಮ ದೋಸ್ತರಿಗೆ ಏನೂ ಧಕ್ಕಿ ಆಗೂದಿಲ್ಲಾ. ನಾಲಸ್ತೀ ಆಗತದ ನಿಮ್ಮದು. ಸಿ.ಈ. ಅವರ 'ಕಾನ್‌ಫಿಡೆನ್ಸಿಯಲ್ ಅಸಿಸ್ಟಂಟ್' ಶೇಡಜೀ ಇದ್ದಾರಲಾ ಅವರು ನನ್ನ ಜಿಗರ್-ದೋಸ್ತರು. ನಾಳೆ ಸಿ.ಈ. ಅವರ ಭೆಟ್ಟೀ ಮಾಡಸ್ತೀನಿ. ಈ ಪತ್ರದ ಉಲಗಡಾ ಅವರ ಮುಂದ ಮಾಡೂ ಅಂತs ಇದೇ ಈಗ ಹೇಳ್ಯಾರ – ಇದು ನೋಡರಿ, ನನ್ನ-ಬಸವಂತಿನ್ನ ಸುಡಸಲಿಕ್ಕೆ ಇನಾ ರಗsಡ ಅವಧಿ ಅದs. ಅದಕ್ಯಾಕ ನೀವು ವ್ಯರ್ಥ ಅವಸರಾ ಮಾಡಿಕೊಂಡು ಹೈರಾಣಾಗತೀರಿ? ನಿಮ್ಮ ದೋಸ್ತರನ ಪಾರ ಬಿಡವರಿ. ನೀವೂ ಬಚಾವ್ ಆಗರಿ. ಊರಿಗೆ ಹೋಗಿ ನಿಂತ ಪ್ಯಾಲಿs, ನಿಧಾನಾಗಿ ನಮ್ಮನ್ನ ಸುಡಸೂ ವಿಚಾರ ಮಾಡರಿ. ದಾದಲ್ಯಾನ ಚಿತಾಕ್ಕ ಅಗ್ನಿಸ್ಪರ್ಶಮಾಡಲಿಕ್ಕೆ ಗೋವಿಂದಭಟ್ಟಗ ಅಗಾವು ನೋಟೀಸ ಕೊಟ್ಟ ಇಡರಿ. ಬಸಗೋಂಡಾ-ನಬೀಸಾಬರ ಕಡಿಂದ 'ಎಪಾಲಜಿ' ಅರ್ಜೀ ಬರಸಿಸಿ – ಅವನ್ನ ನಿಮ್ಮ ದೋಸ್ತರ ಕಡೇ ಕೊಡರಿ. 'ಏನ್‌ಕ್ವಾಯರಿ' ತಾನೇ ನೆಸಿಗುಸಿಗೆ ಬೀಳತದ.

ನೀವೂ ಇಲ್ಲದ ಭಾನಗಡೀ ಇಲ್ಲದೆ ಊರ ಹಾದೀ ಓಡೀರಿ. ನಾಕ ಬಡಿಯೂದ ರೊಳಗ ನಿಮ್ಮ 'ಫೈನಲ್ ಡಿಶಿಶನ್' ತಿಳಸರಿ. ನಾನು ಶೇಡಜೀ ಆಫೀಸ್-ರೂಮಿ ನ್ಯಾಗ ಇರತೀನಿ. 'ಆ:ಲ್‌ರೈಟ್' ದಾದಾ. let us move now. I earnestly hope to hear something positive before 4."

ಶ್ಯಾಮರಾಯನ ಉತ್ತರದ ದಾರಿ ಕಾಯದೆ ನಾನು ಚಹದ ಲೆಕ್ಕವನ್ನು ಚುಕ್ತಾ ಮಾಡಿ ಸೇಕ್ರೆಟರೀಏಟದ ಕಡೆಗೆ ಧಾವಿಸಿದೆ. ಸತ್ತು-ಸೋತು-ಹೀನ-ದೀನ ನಾಗಿ ಶ್ಯಾಮರಾಯ ಕಾಲು ಎಳೆದು ಹಾಕುತ್ತ ನಿಧಾನವಾಗಿ ನನ್ನ ಬೆನ್ನಿಗೆ ಬರು ವದು ಕಂಡಿತು. ಅವನು ಸೋತು ನಡೆಯುವ ಧರ್ತಿಯಲ್ಲಿ. ಅವನತಮುಖನಾಗಿ ನಡೆದ ರೀತಿಯಲ್ಲಿ ಪರಾಜಿತನ ಅವಲಕ್ಷಣ-ಕಳೆ ನಿಚ್ಚಳವಾಗಿ ಮೂಡಿದ್ದಿತ್ತು. ದಾದಲ್ಯಾನಿಗೆ ಬೇಟೆ ಬಿದ್ದ ಧೈರ್ಯ ಬಂದಿತು. ಶೇಡಜೀ ಅವರ ಕೋಣೆಯಲ್ಲಿ ನನ್ನನ್ನು ಕಂಡು, ತನ್ನ ನಿರ್ಣಯದ ವರದಿ ಮಾಡಲು ಗಮಜಿನಿಂದ, ಆಢ್ಯತೆಯಿಂದ ಹೇಳಿದ್ದು ಸರಿಯಾಯಿತೆಂದು ಅನಿಸಿತು. ಪತ್ರ ಯಾರ ಕಣ್ಣಿಗೂ ಬೀಳದೆ ತನ್ನ ಪ್ರಭಾವ ತೋರಿಸಿತ್ತು. ಅಂದು ಕಿಶೆಯಲ್ಲಿ ಈ ಕಾಗದ ಒಗೆದು – ಶ್ಯಾಮರಾಯನ ತಿರಡಿಯನ್ನೇ ಅದರಲ್ಲಿ ಇಳಿಸಿದೆನೆಂದು ಭಾವಿಸಿದ್ದ ದಾದಲ್ಯಾನ ಜೀವಕ್ಕೆ ಧನ್ಯತೆ ಎನಿಸತೊಡಗಿತು.

ಸಾಹೇಬರು ಪಾರುಬಿದ್ದರು. ಯು.ಎಸ್. ಬಚಾವಾದ. ಶ್ಯಾಮರಾಯ 'ಬ್ಲ್ಯಾಕ್‌ಲಿಸ್ಟ್'ನಲ್ಲಿ ಬೀಳದೆ, ನನ್ನ-ಬಸನಂತಿಯ ಹವನ-ಕರ್ಮಕ್ಕೆ ಉದ್ಯುಕ್ತ ನಾಗಲು ಜೀವದಾನ ಪಡೆದ. ದಾದಲ್ಯಾ ಬಯಸಿದ್ದು ಫಲಿಸಿತು.

ಶ್ಯಾಮರಾಯ ನಾಕು ಗಂಟೆಯ ಹೊತ್ತಿಗೆ ಬಂದು ಕೊಡಲಿರುವ ಉತ್ತರದ ಇತ್ಯರ್ಥವಾಗಿತ್ತು. ಅವನು ನಾಕು ಗಂಟೆಯೊಳಗಾಗಿ. ತನ್ನ ದೋಸ್ತ ಯು.ಎಸ್.ನ ಕೂಡ ವಿಚಾರ-ವಾಟಾಘಾಟೀ ನಡಿಸಿ ನಿರ್ಣಯಕ್ಕೆ ಬರಬೇಕಾಗಿತ್ತು. ಸಹಿ-ನಿಶಾ ಸಿದ್ಧವಾಗಿ ಯು.ಎಸ್.ನ ಹತ್ತಿರವಿದ್ದ. ಬಸಗೊಂಡ-ನಬೀಸಾಬರ ಅರ್ಜಿಗಳನ್ನು ಹಿಂದಿರುಗಿ ಪಡೆಯಬೇಕಾಗಿತ್ತು. ಆರೋಪದ ಅರ್ಜಿಯ ಮೇಲೆ ಸಹಿಮಾಡಿದ ಕೈ, ಅವುಗಳ ಇನ್‌ಕಾರದ ಕಾಗದದ ಮೇಲೂ ನಿರಾತಂಕವಾಗಿ ಆಡಬೇಕಾಗಿತ್ತು. ಆ ಸೂತ್ರಚಾಲಕ ಶ್ಯಾಮರಾಯ, ಆ ಕೈಗಳನ್ನು ಕುಣಿಸಿ-ಮಣಿಸುವ ತಾಕತ್ತು ಪಡೆದಿದ್ದ. ಸಾಹೇಬರನ್ನು ಪೇಚಿನಲ್ಲಿ ತರುವ ಭಾನಗಡಿಯಲ್ಲಿ ಯು.ಎಸ್.ನದೂ ಕೈವಾಡವಿದ್ದಿರಬೇಕು. ಈಗ ತನ್ನದೇ ಬಚಾವು ಮಾಡಿಕೊಳ್ಳುವ ಪ್ರಸಂಗ ಬಂದಿತ್ತು.

ಅವನು ಕಣ್ಣುಮುಚ್ಚಿ ತಣ್ಣಗಿರುತ್ತಿರಲಿಲ್ಲ. ಸಾಹೇಬರ 'ಪ್ರೊಮೋಶನ್'ದ ಬಾಯಿಗೆ ಬೂಚು ಕೂಡಿಸಬೇಕೆಂದವನಿಗೆ. ತನ್ನ ತಳದ ಬೆಣೆಯೇ ಅಲಗರ್ಜಿಯಾಗಿ 'ಡಿಮೋಶನ್'ದ ದಾರಿಯಲ್ಲಿ ತಾನೇ ದಿನ ಕಂದಿಸಬೇಕಾದೀತಲ್ಲವೆಂಬ ಭೀತಿ ಬಾಧಿಸದೆ ಇರುತ್ತಿದ್ದಿಲ್ಲ. ಶೇಡಜೀ ಹೇಗೂ ನನಗೆ 'ಫೆವ್ಹರೇಬಲ್'ನಾಗಿದ್ದ. ಆಯುಗಾರನನ್ನು ಆಯುಗಾರ ಎಂದೂ ಸೇರುವದಿಲ್ಲವೆಂಬ ನ್ಯಾಯದಂತೆ, ಯು.ಎಸ್.ನಿಗೂ – ಶೇಡಜೀಗೂ ಎಣ್ಣೆ-ಶೀಗೆಯ ಸಂಬಂಧವಿತ್ತು. ಈ ಪತ್ರದ ವಿಷಯ ಶೇಡಜಿಗೆ ವಿದಿತವಾಗಿತ್ತು. ಅವನು ಆಕಾಶ-ಪಾತಾಳ ಒಂದುಮಾಡದೆ ಬಿಡುತ್ತಿದ್ದಿಲ್ಲ. ಇಲ್ಲಿಯ ವರೆಗೆ ನನ್ನ ಬಾಜೂ ಭದ್ರವಾಗಿತ್ತು.

ಆದರೆ ಸಿ.ಈ.ಯ ಸಮ್ಮುಖದಲ್ಲಿ ಈಗಾಗಲೇ ಹೋಗಿ ಮಂಡಿಸಿದ ನಮ್ಮ ಸಾಹೇಬರು – ಯು.ಎಸ್. ತಾಂತ್ರಿಕ-ಸ್ವರೂಪದ ಕಾಮಗಿರಿಗೆ ಸಂಬಂಧಿಸಿದ ಕಾಗದ-ಪತ್ರಗಳ ಚರ್ಚೆಯಲ್ಲಿದ್ದರು. ಅವು ಮುಗಿಯುವ ಪುರಸತ್ತಿಲ್ಲದೆ – ಯು.ಎಸ್. ಉತಾವಿಳನಾಗಿ. 'ಏನ್‌ಕ್ವಾಯರಿ'ಯ ವಿಷಯವನ್ನೆತ್ತಿದರೆ – ಸಹಿನಿಶಾ ಅರ್ಜಿಗಳನ್ನು ಸಿ.ಈ. ಅವರಿಗೆ ಸಾದರಪಡಿಸಿದರೆ ಮಾತ್ರ ಪ್ರಸಂಗ ಕೈಮೀರಿ ಹೋಗುವ ಸಂಭವವಿತ್ತು. ಇಂಥ ಅವಕಾಶವನ್ನು ಯು.ಎಸ್.ನಿಗೆ ಒದಗಿಸಿ ಕೊಡದೆ ಅವನ ಡಾವಿಗೆ ನೀರು ಹಚ್ಚುವ ಉದ್ಯಮಕ್ಕೆ ತೊಡಗದೆ ನನಗೆ ಅನ್ಯ ಮಾರ್ಗವೇ ಇರಲಿಲ್ಲ. ಅವನನ್ನು ಸಿ.ಈ. ಅವರ ಸಂಮುಖದಿಂದ ಉತ್ಥಾಪಿಸಬೇಕು. ಅವನಿಗೆ ಶ್ಯಾಮರಾಯನಿಗೆ ಭೆಟ್ಟಿ ಮಾಡಿಸಬೇಕು. 'ಏನ್‌ಕ್ವಾಯರಿ'ಯ ವಿಷಯವನ್ನು ಎತ್ತದಂತೆ ಶ್ಯಾಮರಾಯನಿಂದ ಅವನಿಗೆ ಹೇಳಿಸಬೇಕು. ಶ್ಯಾಮರಾಯ ನಿಧಾನ ಮಾಡಿದರೆ – ಹೈ-ಗೈ ಮಾಡಿದರೆ ಘಟ್ಟಿ ಕೆಡುವ ಭೀತಿ ಇತ್ತು.

ಶ್ಯಾಮರಾಯನ ಉಸಾಬರಿಯನ್ನು ಬಿಟ್ಟು. ಶೇಡಜಿಯನ್ನು ಓಡಿದರೆ ಈ ಕೆಲಸ ಚುಟುಕಿನಲ್ಲಿ ಸಾಧಿಸುತ್ತಿತ್ತು. ಶೇಡಜೀ. ಸಿ.ಈ. ಅವರ ಆಫೀಸ ಚೆಂಬರಿನಲ್ಲಿ ಅನಿರ್ಬಂಧವಾಗಿ ಹರಿದಾಡುತ್ತಿದ್ದ. ಅಲ್ಲಿ ಚರ್ಚೆ-ವಿಚಾರವಿನಿಮಯ ನಡೆದಾಗಲೂ ಅವನಿಗೆ ಒಳಗೆ ನುಸುಳುವ ಶಕ್ಯತೆ ಇತ್ತು. ಏನೋ ಕಾಗದವಿಡಲು. ಇಟ್ಟ ಕಾಗದ ತರಲು ಅವನು ಒಳಗೆ ಹೋದಂತೆ ಮಾಡಿ. ಯು.ಎಸ್.ನನ್ನು 'just a minute please' ಎಂದು ಹೊರಗೆ ತರುವದು ಸಾಧ್ಯವಿತ್ತು. ಒಂದು ಮಿನಿಟಿನ ಅವಧಿಯನ್ನು ಐದು ಮಿನೀಟಿಗೆ ಏರಿಸಿ – ಅಷ್ಟರಲ್ಲಿ ತ್ರೋಟಕವಾಗಿ ನಮ್ಮ ಆಶಯವನ್ನು ತಿಳಿಸಲು ಬರುತ್ತಿತ್ತು. ಇದು ಬರೇ ಬಿನ್-ಧೋಕಾದ್ದಿರದೆ – ಶ್ಯಾಮ

ರಾಯನ ರದಬದಲಿಯನ್ನೂ ಅಲಕ್ಷಿಸಬರುವಂತಿತ್ತು. ಯು.ಎಸ್.ನಿಗೆ ಅಚಾನಕ ವಾಗಿ ಪ್ರಸಂಗ ಮೈಮೇಲೆ ಬಂದ ಪ್ರತ್ಯಯ ಬಂದು ಅವನು ಶೂನ್ಯಮನಸ್ಕನಾಗಿ ಕುಳಿತ ಕುರ್ಚಿಯನ್ನು ಬಿಟ್ಟು ಏಳುವ ತಾಕತ್ತನ್ನೇ ಪಡೆಯುತ್ತಿರಲಿಲ್ಲ. ಶೇಡಜೀ ಅರ್ಜಂಟ್ ಕಾಗದಗಳ ಕಟ್ಟನ್ನು ಸಿ.ಈ. ಅವರ ಮುಂದೆ ಸರಿಸಿ ಸಹಿಯ ಸತ್ರ ನಡೆಸುತ್ತಿದ್ದ. ಮೂರರ ಅಂಕಿಯನ್ನು ತೋರಿಸುವ ಗಡಿಯಾರದ ಮುಳ್ಳು ಮೂರೂವರೆಗೆ ಧಾವಿಸುತ್ತಿತ್ತು. ನಾಕು ಘಂಟೆಗೆ ಯಾವದೋ ಸಂಸ್ಥಾನದ ನರೇಶನ ಕೂಡ ಸಿ.ಈ. ಅವರ 'ಅಪ್ಯಾಂಟ್‌ಮೆಂಟ್'. ಸಿ.ಈ. ಅದನ್ನು 'ಕೀಪಪ್' ಮಾಡಲು. ತಮ್ಮ ಕಾರ್ಯವನ್ನು ಅಳವಿನಲ್ಲಿ ತರುತ್ತಾರೆ. ನಾಕರ ಠಾಕೋಠಾಕ ಬಡಿತಕ್ಕೆ ಆಗಮಿಸುವ ನರೇಶನ ಕೂಡ. ಇಂದಿನ ರೇಸಿನಲ್ಲಿ, ಬರೋಡಾ – ಬಿಕಾನೇರ ಪ್ಲೇಟುಗಳಲ್ಲಿ ಯಾವ ನೀಲಾಶ್ವಕ್ಕೆ 'ಬೆಟ್' ಕಟ್ಟುವದೆಂಬ ಬಗ್ಗೆ ಚರ್ಚಿಸುವ ತಾಳ ಹಾಕುತ್ತಾರೆ. ಪಾಯಿಪಿನ ಝುರುಕಿ ಎಳೆದು ಧೂಮ್ರವಲಯ ರಚಿಸಿ ವಿಚಾರಮಗ್ನರಾಗುತ್ತಾರೆ. ಯಾರ 'ಏನ್‌ಕ್ವಾಯರಿ'ಯ – ಯಾವ ಟೆಕ್ನಿಕಲ್ ಪಾಯಿಂಟ್'ನ ವಿಷಯ ಅವರ ವಿಚಾರ ಸದರಿನಲ್ಲಿ ನಿಲ್ಲುವದಿಲ್ಲ.

ಮೂರೂ ನಲವತ್ತೈದು. ಹೊರಗೆ ಅವರ ಶಕಟದ ಪೌಂಡ್ರನಾದ ಕೇಳುತ್ತದೆ. ಅವರ ಮುಷ್ಟಮತಿ ತಾವು ಬಂದು ಹಜರ್ ಆದ ಸೂಚನೆಯನ್ನು ಹಾರ್ನವಾದನದಿಂದ ತಿಳಿಸುತ್ತಾರೆ. ಸಾಹೇಬರ ಭಾವಯಂತ್ರ – ಮುಷ್ಟಮ್ಮತಿ – ನರೇಶ ಪ್ರಭೃತಿ – ರೇಸಕೋರ್ಸಿನ ಸುತ್ತು ಭ್ರಮಂತಿ ನಡೆಸುತ್ತದೆ. ಅವರ ಮೂಡನ್ನು ಅರಿತು ಬಲ್ಲ ಶೇಡಜೀ ಸರಿಯಾದ ಕಾಗದ ಕಟ್ಟನ್ನು ಎತ್ತಿಕೊಂಡು – ಕಚೇರಿಗೆ ಮೂರು ದಿನ ಬಿಡುವಿದ್ದುದನ್ನು ಸೂಚಿಸುತ್ತಾನೆ. ನಿರಂಬಳರಾದ ಸಿ.ಈ. ನಮ್ಮ ಸಾಹೇಬರಿಗೆ ನಿರೋಪ ಕೊಡಲು, ಕೈ ಮುಂದೆ ಚಾಚುತ್ತಾರೆ. ಕೈ ಕೈ ಕುಲುಕಿ ಸಾಹೇಬರು ಹೊರಗೆ ಬರುತ್ತಾರೆ. 'ಏನ್‌ಕ್ವಾಯರಿ'ಯ ಪ್ರಕರಣ, ಕಾಗದಗಳ ಗಟ್ಟೆಯ ಬುಡದಲ್ಲಿ. ಮೂರು ದಿನದ ವಿಶ್ರಾಂತಿ ಸುಖಭೋಗಿಸಲು ಮುಷಗಿ ನಿಃಸ್ತಬ್ಧ-ಜಡವಾಗಿಬಿಡುತ್ತದೆ.

ಇಂಗ್ರೇಜಿ ಸಾಹೇಬರು ನಮ್ಮ ದೇಸೀ ಸಾಬರಂತೆ ತಿಪ್ಪೆ ಕೆದರುವ ಕೆಲಸವನ್ನು ಮಾಡುವದಿಲ್ಲ. ನಮ್ಮ ಸಾಬರು ಕಾಗದದ ತಿಪ್ಪೆ ಕೆದರುವಾಗ, ಸಾವಿರ ಕಿಲಾಪಗಳ ಒಂದು ಬಾಜೂ ಸಮವಾಗುವದರಲ್ಲಿ, ಇನ್ನೊಂದು ಬಾಜೂ ಕಾಗದದ ಢೀಗಿನಲ್ಲಿ ಸಿಕ್ಕು ಉಸಿರುಗಟ್ಟುವಂತೆ ಮಾಡುತ್ತಾರೆ. ಸಾಹೇಬ-ಸಾಬ, ಬಹಳ

ಅಂತರವಿದೆ: East and west shall never meet ... ಖರೇ ಆಜಂದ್ರಾರ್ಕ ಸತ್ಯಮಾತು – ನಿಧಾನ ಈ ಬಾಬತ್ತಿನಲ್ಲಿ.

ಶ್ಯಾಮರಾಯನನ್ನು ಬಿಟ್ಟು ನಾನು ನೇರವಾಗಿ ಶೇಡಜಿಯ ಕೋಣೆಗೇ ಬಂದಿದ್ದೆ. ಶೇಡಜೀ ಇನ್ನೂ ಸಿ.ಈ. ಅವರ ಚೇಂಬರಿನಲ್ಲಿಯೇ ಇದ್ದನೆಂದು ಕಾಣು ತ್ತದೆ. ಅವನಿಗಾಗಿ ದಾರಿಕಾಯುತ್ತ, ಒಂದರ ಮೇಲೆ ಒಂದು ಸಿಗರೇಟು ಬೂದಿ ಮಾಡುತ್ತ, ನಾನು ಸಾಹೇಬರ ವಿಚಾರಣೆ – ನನ್ನ ಪತ್ರದ ಗುಪಿತ-ಸ್ಫೋಟನ – ಶ್ಯಾಮರಾಯನ ಪ್ರತಿಕ್ರಿಯೆ. ಅದನ್ನೇ ಕುರಿತು ತ್ರೈರಾಶಿಕ – ಪಂಚರಾಶಿಕ ಹಾಕುತ್ತ ಕುಳಿತೆ. ಚದುರಂಗದ ಪಟ್ಟವನ್ನು ಹಾಸಿದ್ದೆ. ಆನೆ, ಕುದುರೆ, ಒಂಟೆ ವಜೀರರನ್ನು ಪಟ್ಟದ ಮೇಲೆ ಬಿಟ್ಟಿದ್ದೆ. ಒಮ್ಮೆ ಶ್ಯಾಮರಾಯನಾಗಿ. ಒಮ್ಮೆ ದಾವಲ್ಯಾ ಆಗಿ ಕಾಯಿ ಬಿಡುತ್ತಿದ್ದೆ. ದಿಗ್ಬಂಧನ ಮಾಡಿ, ಶ್ಯಾಮರಾಯನ ಕಾಯಿ ಯನ್ನು ಹಣ್ಣಿಗೆ ತಂದಿದ್ದೆ. ಈ ದುರ್ಗಮ-ವ್ಯೂಹದಿಂದ ಅವನು ಪಾರಾಗುವ ಲಕ್ಷಣಗಳು ಇಲ್ಲವೆಂಬ ಖಾತ್ರೀಯಾದ ಮೇಲೆ – ಸಂತಸದ, ವಿಜಯದ ಉಸಿರು ಬಿಟ್ಟು – ಗಡಿಯಾರದ ಕಡೆಗೆ ನೋಡಿದೆ. ಮೂರೂವರೆ ಗಂಟೆಯಾಗಿತ್ತು. ಶೇಡಜೀ ಗಾಗಿ ಕಾಯುತ್ತ ಕುಳಿತರೆ. ಅವನೂ ಬರಲಿಕ್ಕಿಲ್ಲ; ಯು.ಎಸ್.ನೂ. ಸಿ.ಈ. ಅವರ ಚೇಂಬರಿನಲ್ಲಿ ಕುಳಿತುಬಿಟ್ಟಾನು – ಶ್ಯಾಮರಾಯನೂ ನನ್ನಂತೆಯೇ ಯು.ಎಸ್.ನ ಕೋಣೆಯಲ್ಲಿ ಅವನ ಪ್ರತೀಕ್ಷೆಯಲ್ಲಿ ಕುಳಿತಾನು – ಎಂಬ ವಿಚಾರ ಬಂದು. ಶೇಡಜಿ ಯನ್ನು ಒಂದು ನಿಮಿಷ ಹೊರಗೆ ಕರೆಯಲು ಅವನ ಪಟ್ಟಾವಾಲಾನಿಗೆ ತಿಳಿಸಿದೆ. ನಮ್ಮ ಪಟ್ಟಾವಾಲರು. ಇಂಥ ನೇತ್ರಪಲ್ಲವಿ-ಕರಪಲ್ಲವಿಯ ವಿದ್ಯೆಯಲ್ಲಿ ಮಹಾ ಪ್ರವೀಣರು. ಅವರ ಕ್ಲೃಪ್ತಿ ನಾನಾ ರೀತಿ, ನಾನಾ ಬಗೆಯದಾಗಿರುತ್ತವೆ. ಕಣ್ಣು ಕೈಯ ಆಟ ಇನ್ನು ನಡೆಯುವದಿಲ್ಲವೆಂದು ತಿಳಿದಾಗ ಮತ್ತೆ ಏನೋ ಚಮತ್ಕಾರ ಮಾಡುತ್ತಾರೆ. ಚೇಂಬರಿನಲ್ಲಿ ಹಾಸಿದ ಜಮಖಾನೆಯ ಮಡಿಕೆಯನ್ನು ಸರಿ ಮಾಡುವ – ಬಿದ್ದ ಒಂದು ನೂಲಿನ ಎಳೆಯನ್ನು ಎತ್ತುವ ನೆವಮಾಡಿ. ಸಾಹೇಬರ ಟೇಬಲ್ಲಿನ ಬಳಿಸಾರುತ್ತಾರೆ. ಬಿದ್ದ ಫೈಲಿನ ರಾಶಿಯನ್ನು ಜೋಡಿಸುತ್ತಾರೆ. ಅವನ್ನು ಎತ್ತಿಕೊಳ್ಳಲೆಂದು ಬಾಗಿದಾಗ ಶೇಡಜೀಗೆ ಮೊಳಕೈ ಸ್ಪರ್ಶಮಾಡಿಸಿ. ಅವನು ಕೆಳಗೆ ನೋಡಿದಾಗ – ಕಣ್ಣಿನ ಚಮತ್ಕಾರ ಮಾಡಿ. ಅವನಿಗೆ ಹೊರಗೆ ಹೋಗಲು ಸನ್ನೆ ಮಾಡುತ್ತಾರೆ. ಪಟ್ಟಾವಾಲಾನ ಸನ್ನೆಯ ಅರ್ಥವನ್ನು. ಶೇಡಜೀ ಕಳೆದ ಇಪ್ಪತ್ತು ವರ್ಷದಿಂದ ಮಾಡಿಕೊಳ್ಳುತ್ತ ಬಂದಿದ್ದಾನೆ. ಅವರ ಕ್ಲೃಪ್ತಿ ಸದರಿನಲ್ಲಿ

ಇದೇನು "ಮಹಾ" ವಿಷಯವಲ್ಲ.

ಆದರೆ ಹೋದ ಎರಡೇ ನಿಮಿಷದಲ್ಲಿ ಪಟ್ಟಾವಾಲಾ ತಿರುಗಿ ಬಂದು ಹೇಳಿದ: 'ಶೇಡಜೀ' –ಯು.ಎಸ್. ಇಬ್ಬರೂ ಸಿ.ಈ ಅವರ ಚೇಂಬರಿನಲ್ಲಿ ಇಲ್ಲ. ಅವರಿಬ್ಬರೂ ಯು.ಎಸ್.ನ ಕೋಣೆಯಲ್ಲಿ ಇದ್ದಾರೆ. ಅವರ ಕೂಡ, ಯಾರೋ ಇನ್ನೊಬ್ಬ ಅಪರಿಚಿತರಿದ್ದಾರೆ. ಸಿ.ಈ. ಚೇಂಬರಿನಲ್ಲಿ, ಬೆಳಗಾಂವಿಯ ಈ.ಈ. ಮಾತ್ರ ಇರುವರು' ಎಂದು.

ಸಾಹೇಬರನ್ನು ಒಂಟಿಯಾಗಿ ಸಿ.ಈ. ಅವರ ಚೇಂಬರಿನಲ್ಲಿ ಬಿಟ್ಟು, ಯು.ಎಸ್. ಹಾಗೂ ಶೇಡಜೀ ಏಕೆ ಹೊರಗೆ ಹೋಗಿರಬೇಕು? ಆ ಅಪರಿಚಿತ ವ್ಯಕ್ತಿ ಕದಾಚಿತ್ ಶ್ಯಾಮರಾಯನೇ ಇದ್ದರೆ? ಶ್ಯಾಮರಾಯನ ಕೆಲಸ ಯು.ಎಸ್.ನ ಕಡೆಗಿತ್ತು. ಬಹಳವಾದರೆ ಅವನನ್ನು ಯು.ಎಸ್.ನನ್ನು ಗಾಠಾಯಿಸುತ್ತಿದ್ದ. ತನ್ನ ಪತ್ರದ ವಿಷಯವನ್ನು ಅವನಿಗೆ ತಿಳಿಸಿ, 'ಏನ್‌ಕ್ವಾಯರಿ'ಯ ಪ್ರಕರಣವನ್ನು ಎಬ್ಬಿಸದಿರುವಂತೆ ಬಿನ್ನವಿಸುತ್ತಿದ್ದ. ಆದರೆ ಶೇಡಜೀಯೂ ಅವರಲ್ಲಿ ಕೂಡಿದ್ದಾನೆ. ಆ ಅಪರಿಚಿತ ವ್ಯಕ್ತಿ ಶ್ಯಾಮರಾಯನಾಗಿರದಿದ್ದರೆ? ಶ್ಯಾಮರಾಯನಿಗೂ, ತನ್ನ ಸಹಕಾರಿಗಳ ಕೂಡ ವಿಚಾರವಿನಿಮಯವಿತ್ತು. ನಮ್ಮಿಬ್ಬರ ನಡುವೆ ಆದ ಮಾತಿನ ವಿವರ ತಿಳಿಸುವದಿತ್ತು. ಹಾಗೆ ತಿಳಿಸುವ ಅಗತ್ಯ ಅವನಿಗೆ ಅನ್ನಿಸದಿದ್ದರೂ – ತಾನೇ ಒಂದು ಹತ್ತು-ಹದಿನೈದು ಮಿನೀಟು ವಿಚಾರಮಾಡಿ ನಿರ್ಣಯಕ್ಕೆ ಬರಲು ಅವಧಿಯೂ ಬೇಕಿತ್ತು. ನಾನು ಅವನನ್ನು ಹೊಟೇಲಿನ ಬಾಗಿಲಲ್ಲಿ ಬಿಟ್ಟಾಗ, ಹೊತ್ತು ಮೂರರ ಸನಿಯಕ್ಕೆ ಬಂದಿತ್ತು. ಶೇಡಜಿಯ ಕೋಣೆಯಲ್ಲಿ ಕುಳಿತು ನಾನು ಕಳೆದ ವೇಳೆಯ ಕಲ್ಪನೆ ನನಗೇ ಇರಲಿಲ್ಲ. ಇಷ್ಟರಲ್ಲಿ ಶ್ಯಾಮರಾಯ ಖಚಿತ ನಿರ್ಣಯಕ್ಕೆ ಬಂದು, ಯು.ಎಸ್.ನನ್ನು ಕರೆಸಿಕೊಂಡು, ತನ್ನ ಅಂಬೋಣವನ್ನು ನಿವೇದಿಸಿದ್ದನೋ ಏನೋ? ಇಲ್ಲಿ ಕುಳಿತು ಈ ನೇತಿ-ನೇತಿಯ ತಾಳೆ ಹಾಕುವದ ಕಿಂತ, ಯು.ಎಸ್.ನ ಕೋಣೆಯ ಬಾಗಿಲಲ್ಲಿಯೇ ನಿಂತು, ಅವರು ಹೊರಗೆ ಬರುವ ಸಮಯವನ್ನಾದರೂ ಎದುರು ನೋಡಬೇಕು. ಇಲ್ಲ ಶೇಡಜಿಗೆ ಚೀಟ ಕಳಿಸಿ – ಯು.ಎಸ್.ನನ್ನು ಅವನ ಕೋಣೆಯಲ್ಲಿಯೇ ಗಾಠಾಯಿಸಬೇಕು. ಶ್ಯಾಮರಾಯನ ರದಬದಲಿಯ ದಾರಿಕಾಯುವ ತೊಂದರೆ ಖಚಿತ ತಪ್ಪುತ್ತಿತ್ತು. ನಾನೇ ಅವನಿಗಿಂತ ಮುಂಚಿತವಾಗಿ ಹೋಗಿ, ಯು.ಎಸ್.ನನ್ನು ಗಾಠಾಯಿಸಿ, ಅವನ ಪತ್ರ ಪ್ರಕರಣದ ಮೇಲೆ ಬೆಳಕು ಚೆಲ್ಲಿದರೆ, ನನ್ನ ದಾರಿ ನಿರಂಬಳವಾಗುತ್ತಿತ್ತು. ಸಾಹೇಬ

ರನ್ನು ಚಟ್ಟನೆ ಎಬ್ಬಿಸಿಕೊಂಡು, ಸೇಕ್ರೆಟರೀಏಟಿನಿಂದ ನಿಸಟಲು ಬರುತ್ತಿತ್ತು. ಶ್ಯಾಮರಾಯನ ನಿರ್ಣಯವನ್ನು ಕೇಳಲು ನಾಕರ ವರೆಗೆ ದಾರಿಕಾಯುವ ದದಾತಿ ತಪ್ಪುತ್ತಿತ್ತು.

ನಾನು ಶೇಡಜಿಯ ಕೋಣೆಯನ್ನು ಬಿಟ್ಟು ಎದ್ದೆ. ಯು.ಎಸ್.ನ ಕೋಣೆಯ ದಾರಿ ಹಿಡಿದೆ. 'ಕಾರಿಡಾರಿ'ನ ಒಂದು ಮೂಲೆಯಲ್ಲಿ ಹೊರಳಿ – ಹತ್ತು ಹೆಜ್ಜೆ ಹೋದರೆ ಸಾಕು. ಯು.ಎಸ್.ನ ಕೋಣೆ. 'ಕಾರಿಡಾರಿ'ನ ಕಲ್ಲಿನ ಕಟಾಂಜನದ ಮೂಲೆಯಲ್ಲಿ ಬಸಗೋಂಡ, ನಬೀಸಾಬ ಈರನ ಮುಂದೆ ಬೀರನಂತೆ ನಿಂತಿದ್ದರು. ಅವರನ್ನು ನೋಡಿ ನಾನು —

"ಯಾಕ ಬಸಗೋಂಡಾ, ಇಬ್ಬರೇ ನಿಂತೀರಿ. ಯಜಮಾನರೆಲ್ಲೇ? ನಿಮ್ಮ ಜೋಡೀನೇ ಇದ್ದರಲಾ ಅಗಾಳೇ?"
ಎಂದು ಕೇಳಿದೆ.

"ದಾದಲ್ಯಾ, ಶ್ಯಾಮರಾಯರು ಸೇಕಟ್ರೀಸಾಬರ ಕ್ವಾಣ್ಯಾಗ ಕುಂತಾರ. ನಮಗ ಇಲ್ಲೇ ನಿಂದರಾಕ ತಿಳಸ್ಯಾರ."
ಎಂದು ನಬೀಸಾಬ ಉತ್ತರಿಸಿದ.

ಕಾಗದದ ತುಂಡೊಂದರ ಮೇಲೆ ನನ್ನ ಹೆಸರು ಗೀಚಿ, ಅದನ್ನು ಶೇಡಜಿಗೆ ಕೊಡುವಂತೆ. ಯು.ಎಸ್.ನ ಪಟ್ಟಾವಾಲಾನಿಗೆ ತಿಳಿಸಿದೆ. ಎರಡು ನಿಮಿಷದಲ್ಲಿ ಪಟ್ಟಾವಾಲಾ ತಿರುಗಿ ಬಂದ. ಐದು ನಿಮಿಷದಲ್ಲಿ ಶೇಡಜೀ ಬರುತ್ತಾರೆ. ಜರೂರ, ಅವರ ಕೋಣೆಯಲ್ಲಿ ಕೂಡಬೇಕಾಗಿ ಹೇಳಿದ್ದಾರೆಂದು ತಿಳಿಸಿದ. ಮತ್ತೆ, 'ಓ ಲಕ್ಷ್ಮಣಾ' ಎಂದು – ಗತಿಯಿಲ್ಲದೆ ಶೇಡಜಿಯ ಕೋಣೆಯ ದಾರಿ ಹಿಡಿದೆ. ದಾರಿಯಲ್ಲಿ ಮತ್ತೆ ಬಸಗೋಂಡ, ನಬೀಸಾಬ ಯುತಿ ಗಂಟುಬಿತ್ತು. ಅನುನಯದ ದನಿಯಲ್ಲಿ ಬಸಗೋಂಡ ಕೇಳಿದ :

"ಏನ ನಡದೈತಿ ದಾದಲ್ಯಾ ಒಳಗs.? ಏನರs ಪತ್ತೇ?"

"ನಿಮ್ಮ ಯಜಮಾನರದು ಕತ್ತಲ್ ನಡದ್ವದ. ಅವರು ನಿಕಾಲ್ ಆದ ಮ್ಯಾಲ ನಿಮ್ಮನ್ನು ಒಯ್ಯುತಾರ ಒಳಗ. ಇದೇ ನಂದೂ – ನಿಮ್ಮದು ಕಡೀ ಭೆಟ್ಟಿ. ತಿಳೀತೇನು?"
ಎಂದು ಮುದ್ದಾಂ ಹೇಳಿದೆ. ಅವರಿಗೆ ಬವಳಿ ಬರಲಿಲ್ಲ. ನನ್ನ ಪುಣ್ಯ.

ನಾನು ಶೇಡಜಿಯ ಕೋಣೆಯಲ್ಲಿ ಕುಳಿತು ಐದಾರು ಮಿನೀಟು ಆಗಿರ

ಬೇಕು. ಪಟ್ಟೇವಾಲಾ ಫಾಯಲಿನ ಕಟ್ಟುಗಳನ್ನು. ಸಿ.ಈ. ಅವರ ಕೋಣೆಯಿಂದ ತರತೊಡಗಿದ. ಚೀಫ್ ಇಂಜಿನಿಯರ್ ಸಾಹೇಬರು ತಾಕೋತಾಕ ನಾಲ್ಕಕ್ಕೆ ಹೋದ ರೆಂದು ತಿಳಿಸಿದ. ಸಿ.ಈ. ಅವರ ಕೋಣೆಯಲ್ಲಿ. ಶೇಡಜೀ ಹಾಗೂ ಬೆಳಗಾಂವಿಯ ಈ.ಈ. ಇದ್ದಾರೆಂದೂ ಹೇಳಿದ. ಅಂದರೆ ಶೇಡಜೀ ನನ್ನ ಚೀಟಿ ಮುಟ್ಟಿದ ಕೂಡಲೇ ಅವಸರದಿಂದ ಸಿ.ಈ. ಅವರ ಕಡೆಗೆ ಹೋಗಿರಬೇಕು. ಅವರು ಕಚೇರಿ ಬಿಟ್ಟು ಹೊರಡುವಾಗ. ಅವನು ಅಲ್ಲಿರಲೇಬೇಕಾಗಿತ್ತು. 'ಕಾನ್‌ಫಿಡೆನ್ಸಿಯಲ್' ಕಾಗದಗಳನ್ನು ಜೋಡಿಸಿ ಜೋಕೆಯಾಗಿ ಇಡುವದು – ಅವರ ಆದೇಶ ಏನಾ ದರೂ ಇದ್ದರೆ ಅದನ್ನು 'ಟಿಪ್-ಟೋ' ನಿಂತು ಕೇಳುವದು, ಕರ್ತವ್ಯದ ಮುಖ್ಯ ಭಾಗ. ಹೊತ್ತು ನಾಕರ ಸಮೀಪಕ್ಕೆ ಬಂದದ್ದರಿಂದ, ಕದಾಚಿತ್ ಅವನು ತನ್ನ ಕೋಣೆಗೆ ಬರದೆ ನೇರವಾಗಿ ಸಿ.ಈ.ಯವರ ಕೋಣೆಯ ಕಡೆಗೇ ಹೋಗಿರಬೇಕು.

ಅನತಿದೂರದಲ್ಲಿ ಸೇಡಜಿಯ ದನಿ ಕೇಳಿದಂತಾಯಿತು. ಅವನು ಯಾರ ಕೂಡೋ ಮಾತನಾಡುತ್ತ ಬರುತ್ತಿದ್ದ. ದನಿ ಕೇಳಿಬರುವ ದಿಕ್ಕಿಗೆ – ಕೋಣೆಯ ಪ್ರವೇಶದ್ವಾರದ ಕಡೆಗೆ ಹೊರಳಿ ನೋಡಿದೆ. ಶೇಡಜೀ – ನಮ್ಮ ಸಾಹೇಬರು ತೀರ ಬಾಗಿಲ ಬಳಿ ಬಂದರು.

"ಎಕ್ಸ್‌ಕ್ಯೂಜ್' ಹಂ ಮಾಸ್ಟರಜೀ, ಬಹೂತ ಟಾಯಿಮ್ ಲಗೇ. ಪ ದೇಖೋ ಮಾಸ್ಟರಜೀ...I have brought your Saheb safe. ಅಬ್ ತೋ ಸಿ.ಈ. ಬಹೂತ ಖುಷೀಮೇ ಥಾ. 'ಏನ್‌ಕ್ವಾಯರೀ' ಕಾ ಬಾತೀಚ ನಹೀ ನಿಕಲೇ. Let us see what will happen on Monday ಕಿಸ್‌ಲಿಯೇ ಕಲ್‌ಕೀ ಬಾತ. ಕ್ಯಾ ಮಾಸ್ಟರಜೀ ? ಕಲ್ ಕಾ ವೇಲ ಆಪಕಾ ಹೈ. you see ಮಾಸ್ಟರಜೀ, you are surely coming to my place at 7?"

"ಜರೂರ ಬರತೀನಿ ಶೇಡಜೀ... at seven sharp—ಸಾಹೇಬರ ಕೆಲಸ ಮುಗದಿದ್ದರ ನಾ ಇಷ್ಟು ಅವರ್ನ ಕರಕೊಂಡು ಹೋಗತೀನಿ. ಅವರೂ ಅಷ್ಟು ವಿಶ್ರಾಂತೀ ತಗೋಳ್ಳೀ. ಯಾರರs ನನ್ನ ಕೇಳಿಕೋತ ಬಂದರ – please direct him to Hotel Green Room No. 30. 4th floor. Excuse ಹಂ for the trouble."

"ಅರೇ ಕ್ಯಾ 'ಟ್ರಬಲ್' ಕೀ ಬಾತ ಹೈ ಛೋಡೋ ಯಾರ್. whom you are expecting ಮಾಸ್ಟರಜೀ ? ಕುಛ್ ಪತಾ ದಿಯೇಗಾ"

ನಾನು ಸನ್ನೆಮಾಡಿದೆ. ಎಡಗಣ್ಣು ಚಿಂವುಗಣ್ಣಾದುದನ್ನು ಕಂಡು, ಶೇಡಜೀ, ಸಾಹೇಬರ ಸಮಕ್ಷಮದಲ್ಲಿ ನಾನು ನಿರೀಕ್ಷಿಸುತ್ತಿದ್ದ ವ್ಯಕ್ತಿಯ ನಾಮನಿರ್ದೇಶ ಮಾಡಲು ಅನುಮಾನಿಸುತ್ತಿದ್ದರ ಅರ್ಥಮಾಡಿಕೊಂಡು —

"ಅಚ್ಛಾ. ಅಚ್ಛಾ. ಮಾಸ್ತರಜೀ ಸಮಝಮೇ ಆಯೇ. ಕುಛ್ ಹರಗೀಜ ನಹೀ"

ಎಂದು ನಗುತ್ತ ನನ್ನ-ಸಾಹೇಬರ ಕೈಕುಲುಕಿಸಿ ನಿರೋಪ ಕೊಟ್ಟ. ನಮ್ಮನ್ನು ತನ್ನ ಕೋಣೆಯ ಬಾಗಿಲ ವರೆಗೆ ಕಳಿಸಬಂದವರಂತೆ ಮಾಡಿ, ನನ್ನನ್ನು ಜಗ್ಗಿ ನಿಲ್ಲಿಸಿ, ಕೈ ಅದಮುತ್ತ ಪಿಸುದನಿಯಲ್ಲಿ —

"ಮಾಸ್ತರಜೀ ... you have nicely trapped the U.S. He is in a fix now. ಸಬ್ ಕುಛ್ ಬೋಲೇಂಗೇ... ಸಾತ ಬಜೇಕೂ definitely ತುಮಪ್ ಆಪ್..."

ಹೇಳಿದ.

ಸೇಕ್ರೆಟರೀಏಟದ ಹೊರಬಾಗಿಲಲ್ಲಿ ನಾವು ಬಂದಾಗ, ಸಾಹೇಬರು ಕೈಗಡಿಯಾರ ನೋಡಿಕೊಂಡು —

"ದಾದಲ್ಯಾ, ಸವ್ವಾ-ಚಾರಿ ಆತೂ"

ಎಂದರು.

ನಾನು ಶ್ಯಾಮರಾಯನಿಗೆ ಕೊಟ್ಟ ಅವಧಿ ಮುಗಿದು ಹದಿನೈದು ಮಿನೀಟು ಹೆಚ್ಚಾಗಿತ್ತು. ಶ್ಯಾಮರಾಯನ ಸುಳಿವು ಅಲ್ಲೆಲ್ಲಿಯೂ ಕಾಣಲಿಲ್ಲ. ನನಗೆ ಅವನ ನಿರ್ಣಾಯಕ ಅಭಿಪ್ರಾಯದ ಅಗತ್ಯ ಅಷ್ಟಾಗಿ ಉಳಿದಿರಲಿಲ್ಲ. ಶೇಡಜೀ 'I have brought him safe' ಎಂದು ಹೇಳಿದಾಗ – 'U. S. in a fix' ಎಂದು ಸೂಚಿಸಿದಾಗ ಶ್ಯಾಮರಾಯ ತಿಳಿಸಲಿರುವ ಅಭಿಪ್ರಾಯದ ಇತ್ಯರ್ಥವಾಗಿತ್ತು. 'ಐನ್‌ಕ್ವಾಯರಿ' ನಡೆಯಲಿಲ್ಲವೆಂದು ಸಾಹೇಬರು ಖುಷಿಯೂ ಆಗಿರಲಿಲ್ಲ – ಯಾಕೆ ನಡೆಯಲಿಲ್ಲವೆಂದು ವಿಚಾರಮಗ್ನರೂ ಆದಂತೆ ಕಾಣಲಿಲ್ಲ. ಯಥಾಪ್ರಕಾರ ನಿರ್ಲಿಪ್ತ ಮನೋಭಾವರೇ ಆಗಿದ್ದರು. ನಾನು ಉತಾವಿಳನಾಗಿ —

"ಐನ್‌ಕ್ವಾಯರಿ ನಡೀತೇನು ಸಾಹೇಬರs? ಸಿ.ಈ. ಏನ ಅಂದರು?"

ಎಂದೂ ಕೇಳಿದೆ.

"'ಐನ್‌ಕ್ವಾಯರಿ'. 'ಅಫೀಸಿಯಲ್' ಆಗಿ ನಡೀಲೇ ಇಲ್ಲ ನೋಡು ದಾದಲ್ಯಾ.

ಸಹ್ಯಜ ಸಿ.ಈ. ಮಾತಿಗೆ ಮಾತ ಬಂದು, ನಿಮ್ಮ ದಸೆಂದ ಭಾಳ ಗದಿಬಿಡಿ ನಡವದ್ಯಲಾ. ಮೂಕೀ ಅರ್ಜೀ ಬಂದಾವ. ನಿಮ್ಮ ಒಬ್ಬರ ವಿರುದ್ಧನ್ಯ ಅಲ್ಲಾ. ಬ್ಯಾರೇ ಡಿವ್ಹಿಜನ್ನದ 'excutive engineer' ದಶಿಂದನೂ ಇದೇ ರೀತಿ ಅರ್ಜೀ ಬಂದಾವ. ಯು.ಎಸ್.ಗ ಹೇಳೀನಿ. ಸೋಮವಾರ ದಿನಾ 'ಪುಟಪ್' ಮಾಡೂಂತ. ನಿಮ್ಮ ಅಂಬೋಣ ಅಂದ ತಿಳಸರಿ ಅಂತ ಹೇಳಿ ಅಲ್ಲಿಗೇ ಮಾತ ನಿಂದರಸಿದರು. ನನ್ನ ಎದರಿಗೇನ್ಯ, ಯು.ಎಸ್.ನೂ ಕೂತಿದ್ದಾ. ಸೋಮವಾರ ಅನೂತ್ಲೇ ಅಂವಾ ಯಾಕೋ ಜುಳುಬುಳು ನಡಿಸಿದಾ. ನಿಮ್ಮ ಶೇಡಜೀ ಸಟ್ಟನೇ ನಡುವೇ ಬಾಯಿ ಹಾಕಿ 'yes sir, your office note to that effect is with me.' ಅಂದು. 'ಕೇಸ್-ಪೇಪರಿ'ನ ವ್ಯಾಲ ಏನೋ ಒಂದು ಕೆಂಪ ಪೆನ್ಸಿಲ್ಲೇ ಬರದ ಚೀಟಿ ಇತ್ತು. ಅದನ್ನ ಯು.ಎಸ್.ನ ಮುಂದ ಸರಿಸದಾ. ಯು.ಎಸ್. ಅದನ್ನ ನೋಡಿ ಸುಮ್ಮನೇ ಕೂತಾ. ಮತ್ತ ನಮ್ಮ ಮಾತು 'ಟೆಕ್ನಿಕಲ್' ವಿಷಯದ ಕಡೇ ನಡೀತು. ಆದರ ದಾದಲ್ಯಾ, 'ಎನ್‌ಕ್ವಾಯರಿ' ಇಂದ ನಡದಿದ್ದರೂ ಅಷ್ಟೇ – ಸೋಮವಾರ ದಿನ ನಡದರೂ ಅಷ್ಟೇ! ನಾನು ಒಂದ ಘಟ್ಟಿ ಮಾಡಿಕೊಂಡೀನಿ. ಏನಂದರ, ಇದ್ದ ಮಾತು ಇದ್ದ್ಹಾಂಗ ಒಪಿಗೊಂಡುಬಿಡೂದು. ಮೂಕೀ ಅರ್ಜೀ ಒಳಗ, ನಾ 'ಕರಪ್ಟ್' ಇದ್ದದ್ದನ್ನ ನಮೂದ ಮಾಡ್ಯಾರ. ಆದರ ಇನ್‌ಕಾರ ಯಾವ ಬಾಯಲೇ ಮಾಡಲಿ ದಾದಲ್ಯಾ? ಪ್ರಮಾಣದಾಗ ಥ್ವಾಡೇ ಹೆಚ್ಚು, ಥ್ವಾಡೇ ಕಡಿಮಿ ಆಗಿರಬೇಕು. ಆದರ ತಿಂದದ್ದೇನು ಸುಳ್ಳ ಅಲ್ಲ್ಯ. ನಮ್ಮ ಡಿವ್ಹಿಜನ್ನದಾಗ ಹತ್ತ-ಹದನೈದ ಮಂದಿ ಕಂತ್ರಾಟದಾರರು ಇದ್ದಾರ. ಆದರ ಏನರ್ಯ ಗೋಪಾಳ ಕೊಟ್ಟಿದ್ದರ – ನಾ ತಿಂದಿದ್ದರ ಅದು ಒಬ್ಬ ಶ್ಯಾಮರಾಯರಿಂದ. ಅದೂ ಅವರು ಸ್ವಖುಷಿಯಿಂದ ಕೊಟ್ಟದ್ದು – ನಾನು ಸ್ವಸಂತೋಷದಿಂದ ಸ್ವೀಕರಿಸಿದ್ದು. ಅವರಿಗೆ ಕೊಟ್ಟೆನಲಾ ಅನ್ನೂ ಹೊಟ್ಟಿಕಡತ ಇದ್ದಿದ್ದಿಲ್ಲಾ. ಅವಾ, ಅವರು ಇಷ್ಟೇ ಕೊಟ್ಟರಲಾ ಅನ್ನೂ ಸಂಕಟ ನನಗ ಇದ್ದಿದ್ದಿಲ್ಲಾ. ಪರಸ್ಪರಂ ಭಾವಯಂತಃ ವ್ಯವಹಾರ ಇತ್ತು. ಆದರ ಅದು 'ಕರಪ್ಶನ್' ಅನ್ನೂದೇನು ಸುಳ್ಳ ಅಲ್ಲಾ. ಅದಕ್ಕೂ ನಾ ಆಸ್ಪದ ಕೊಟ್ಟಿರದಿದ್ದರ ಈ ಶಕಾ ನನಗ ಬಡೀತನೇ ಇರಲಿಲ್ಲಾ. ನಾನು 'ಪ್ರೂಮನ್ಯಾಜರ್' ಅಲ್ಲಾ ಅನ್ನೂ 'ಎಲಿಗೇಶನ್' ಎಷ್ಟ ಧೈರ್ಯಾದಿಂದ 'ರಿಫ್ಯೂಟ್' ಮಾಡತಿದ್ದೆ, ಮಾಡತೀನಿ – ಅಷ್ಟೇ ಧೈರ್ಯಾದಿಂದ ಇದನ್ನೂ ನಾಕಾರಸತಿದ್ದೆ. ಏನ ಮಾಡೂದು ದಾದಲ್ಯಾ? ದೊಡ್ಡ ದೊಡ್ಡ ದೇವಸ್ಥಾನದ ಬಾಗಲದಾಗ, ಮರೀ ದೇವರದೂ ಒಂದ ಹಿಂಡ್ಯ

ಇರತಾವ. ಅವಕೂ ಭಕ್ತರು ಇರತಾರ. ಕರುಣಾದಿಂದ ಜೂರ-ಜಾರ ಹೂವಾ-ಮುತ್ರಾಕ್ಷತೀ ಒಗದು, ಒಂದು ಕುಡ್ಡ ದೀಪಾ ಹಚ್ಚತಾರ. ಒಂದು ಊದಿನಕಡ್ಡಿ ಚುಚ್ಚತಾರ. ಗೋಪಾಳದ ಬಾಬತ್ಯಾಗ, ನಾನೂ ಈ ಚಿಲ್ಲರ ದೇವತಾನ ಸದರಿನ್ಯಾಗ ಬರೂವಂಥಾ. ಇಂದ ಮಾತ್ರ, ಆ ಭಕ್ತರು ಹಚ್ಚಿದ ಕುಡ್ಡದೀಪದ ಬೆಳಕs ಬಿತ್ತು ನೋಡು ದಾದಲ್ಯಾ. ಅದರ ಫಲಭೋಗ ಉಣಬೇಕಾತು. ಯಾರೋ, ನನಗ. ಶ್ಯಾಮರಾಯರಿಗೆ ಆಗದವರು, ಅವರ ಪಾಳತೀ ಮ್ಯಾಲs ಇದ್ದು, ಅವರು ನಮ್ಮ ಬಂಗಲೇಕ ಬಂದಾಗ, ತಂದ ಸೀರೀ, ಖಣಾ ಇತರ ಸಾಮಾನದ್ದು ಯಾದೀನs ಕೊಟ್ಟಾರ. ಅಗದೀ ಒಳಗಿನವರೇ ಶ್ಯಾಮರಾಯರ್ನ ಫಸಾಸಿಸಿರಬೇಕು. ಪಾಪಾ. ನನ್ನ ದಶಿಂದ ಅವರೂ ಕಂತ್ರಾಟದಾಗ ಸಿಕ್ಕಾಂಗ ಆಗೇದ. ನಾಳೆ ಸೋಮವಾರ ಅವರೂ ಸಾಕ್ಷೀಗೆ ಬಂದಾರು. ಇಂದೇ ಬರಬೇಕಾಗಿತ್ತು. ಇಲ್ಲಿಗೆ ಬಂದಿದ್ದರೂ, ಅವರಿಗೆ ಮೋತೀ ತೋರಸಧಾಂಗ ಆಗಿರಬೇಕು. ಯಾರ್ನ ನಂಬಬೇಕು, ಯಾರ್ನ ಬಿಡಬೇಕು ಅನ್ನೂದು ಪಂಚೇತೀನs. ಯಾ ವಾಳ್ಯಾದಾಗ ಯಾರು ದಗಾ ಕೊಟ್ಟಾರನ್ನೂದು ತಿಳಿಯೂ ಹಾಂಗ ಇಲ್ಲಾ."

"ಯಾರು ದಗಾ ಕೊಟ್ಟಾರನ್ನೂದು ತಿಳಿಯೂ ಹಾಂಗ ಇಲ್ಲಂತ ಏನಂದಿರಿ ಅದೇ ಖರೇ. ನೀವು ಸಾರ್ವಜನಿಕ ಸತ್ಯ ಅಷ್ಟs ಹೇಳಿದಿರಿ. ಅನುಭವದ್ದು ಅರ್ಧಾ ಸತ್ಯ ಮಾತ್ರ ಅದs ಇದರಾಗ. ಉಳದ ಅರ್ಧಾ ಸತ್ಯ ಹೊರಬಿದ್ದ ಮ್ಯಾಲೂ ಅದರ ದಶಿಂದ ನಿಮಗ ಖಾತ್ರೀ ಆದೀತು – ಆನಿಸೀತು ಅನ್ನೂ ಭರೋಸ ಇಲ್ಲ ನನಗ. ನಿಮ್ಮ ಘಡಣs ಹಾಂಗ ಅದs. 'ಚಕ್ಷುರ್ವೈ ಸತ್ಯಂ' ಅಂತs ನೀವು ಹೊಂಟರೂ, ನಿಮ್ಮ ಕಣ್ಣಾಗ, ಆ ಸತ್ಯ ಎಲ್ಲೆ ಅದs ಅನ್ನೂದನ್ನ ನೋಡೂ ದೃಷ್ಟೀನs ಇಲ್ಲಾ. ಸತ್ಯ ನೋಡಿದ ದ್ರಷ್ಟಾರರಿಗೆ ಕಣ್ಣ ತಗಿಯೂ ಗರಜs ಇರಲಿಲ್ಲಾ. 'ಫಿಜಿಕಲೀ' ಅವರ ಕಣ್ಣು ಮುಚ್ಚೇ ಇರತಿದ್ದೂ. ಈ ಕಣ್ಣ ಮುಚ್ಚಿದಾಗ – ಆ ಕಣ್ಣಿಗೆ ಸತ್ಯದ ದರ್ಶನ ಆಗತಿತ್ತು. ನಿಮಗ ಆ ದೃಷ್ಟೀ ಇಲ್ಲ ಸಾಹೇಬರs. ನಾ ನಿಮಕಿಂತಾ ಸಣ್ಣಾವ ಇದ್ದರೂ ಆ ಕಣ್ಣು ಸದಾ ತಕ್ಕೊಂಡs ಇರತೀನಿ. ಅಂಜನಾ ಹಾಕಿ ಭೂಗತ ನಿಧಿ ನೋಡೂ ಗರಜು ನನಗ ಬೀಳೂದಿಲ್ಲಾ. ನನ್ನ ಕಣ್ಣಿಗೆ ಸದಾ ಆ ಅಂಜನಾನೇ ತೊಡದಿರತsವ. ಈ ಅರ್ಜೀ – ಈ ಭಾನಗಡೀ, ಇದರ ಹಿಂದಿನ ಇತಿಹಾಸಾ ನನಗ ಕಂಡು ಭಾಳ ದಿನಾ ಆತು ಸಾಹೇಬರs. ಇತಿಹಾಸ ಒಂದಿಷ್ಟು ದೊಡ್ಡದದ. ನಿವಾಂತ ಆಗಿ ಕೂತು ನೀವು ಕೇಳಬೇಕು. ನಾ ಹೇಳಬೇಕು. ಹೇಳೂ ಪ್ರಸಂಗಾ

ಇಷ್ಟ ಲಗೂ ಬರಬಾರದಂತ ನಾ ಧಡಪಡಿಸಿದೆ. ಆದರ ಯಶಾ ಸಿಗಲಿಲ್ಲಾ. ಹೇಳೂ ಕಾಲ ನನಗ – ಕೇಳೂ ವ್ಯಾಳ್ಯಾ ನಿಮಗ ಬಂತು. ನಿವಾಂತಾಗಿ ಹೇಳತೀನಿ ನಡೀರಿ."

ಗ್ರೀನ್ಸ್ ಹೊಟೆಲ್‌ನ – ಸಾಹೇಬರ ವಾಸಸ್ಥಾನದ ಬಾಗಿಲಿಗೆ ಬಂದೆವು. ಬಾಗಿಲಲ್ಲೇ ಇದ್ದ ಮ್ಯಾನೇಜರನಿಗೆ ಚಹ-ಟೋಸ್ಟ ಕಳಿಸಲು ತಿಳಿಸಿ, ಸಾಹೇಬರ ಕೋಣೆ ನಂ. ೩೦ಕ್ಕೆ – ಮಾತಿಲ್ಲದೆ, ಮೌನವಾಗಿ ಸಾಗಿದೆವು. ನಾನು ಹೇಳಬೇಕಾದ ಮಾತನ್ನು ನೆನಿಸಿಕೊಳ್ಳುತ್ತಿದ್ದೆ. ಕೇಳುವ ತಯಾರಿಯನ್ನು ಸಾಹೇಬರು ಮಾಡುತ್ತಿರ ಬೇಕು.

ಶ್ಯಾಮರಾಯನ ಒಂದೇ ಮಾತಿಗೆ ಒಪ್ಪಿ. ನಾನು ಬೆಳಗಾಂವಿಯ ಸಾಹೇಬ ರಲ್ಲಿ ತಾತ್ಪೂರ್ತಿಕ ಜೀತಕ್ಕೆ ನನ್ನನ್ನು ಹೂಣೆಸಿಕೊಂಡಿದ್ದ. ಜೀತದ ಅವಶ್ಯಕತೆ ಇರಲಿಲ್ಲ. ಶಕೂನ ಶಿಕೋಣೆಯ ಗರಜು ನನಗಿರಲಿಲ್ಲ. ಅವರು ಕೊಡಮಾಡಲಿರುವ ನವಕರಿಯ ದರಜೂ ಇರಲಿಲ್ಲ. ಒಂದು-ಒಂದೂವರೆ ವರುಷ ನಾನು ಪ್ರಕ್ಕಟೆ ಕಳೆದೆ. ಅದನ್ನು ವ್ಯರ್ಥವಾಗಿ ಮಾತ್ರ ಹಾಕಲಿಲ್ಲ. ಯಾವುದೋ ಉದ್ದೇಶ – ಏನೋ ಆಮಿಷದಿಂದ ನಾನು ನನ್ನನ್ನು ಜೀತಕ್ಕೆ ಹೂಡಿಕೊಂಡಿದ್ದು. ಜೀತದ ಹೀನ ಪರಿ ಯನ್ನು ಹರಿದು ಜೀವ-ಜೀವಗಳ ಸಹವಾಸ, ಆದರ-ಸಖ್ಯಕ್ಕೆ ಮೂಲವಾಯಿತು. ಸಾಹೇಬರು ನನ್ನನ್ನು ಮಗನ ಸರಿಯಾಗಿ,ಕರುಳಿನ ಕುಡಿಯ ಸಮಾನವಾಗಿ ನೋಡಿ ಕೊಂಡರು. ನನ್ನ ಕಲ್ಯಾಣದ, ಕ್ಷೇಮದ ಭಾರ ಹೊತ್ತರು. ದಾದಲ್ಯಾ. ಏಳಿರಿ, ಎಂದಾಗ ಎದ್ದರು. ಕೂಡಲು ಹೇಳಿದಾಗ ಕೂತರು. ಯಾಕೆ ಎಂದು ಕೆಳಲಿಲ್ಲ. "ದಾದಲ್ಯಾ ಇದ್ದಾನ – ಏನ ಝುಲ್ಲ ಇಲ್ಲಾ" ಎನ್ನುವ ನಿರ್ಧಾಸ್ತತನ ಅವರಲ್ಲಿ ಬಂದಿತ್ತು. ತಮ್ಮ ವಿಶ್ವಾಸವನ್ನೇ ಹೃದಯದಿಂದ ಹೀಳಿ ತೆಗೆದು ನನ್ನ ಕೈಯಲ್ಲಿ ಕೊಟ್ಟರು.

ಸಾಹೇಬರ ವಾತ್ಸಲ್ಯಬಂಧದಲ್ಲಿ ನಾನು ಚಿರಂತನ ಬಂದಿಯಾದೆ. ನನ್ನ ಈ ವಾತ್ಸಲ್ಯಬಂಧನ ಶ್ಯಾಮರಾಯನಿಗೆ ಜೋಳದ-ಪಾಳಿಯಾಗಿ, ಗುಲಾಮಗಿರಿಯಾಗಿ ಕಂಡಿರಬೇಕು. ದಾದಲ್ಯಾ ಖರೀದಿ-ವಿಕ್ರಿಯದ ನಿಃಸ್ಸತ್ವ ವಸ್ತುವೆಂದು ಅವನು ಭಾವಿಸಿರಬೇಕು. ಆ ಭಾವನೆಯ ಕಾವಿನಲ್ಲಿ ಮಾತು ಮಿಂಚಿಸಿದ್ದ. ಸಾಹೇಬರಲ್ಲಿ ಜೀತಕ್ಕೆ ನನ್ನನ್ನು ಬಿಗಿದ ಅವನ ಡಾವಿನ ಅರ್ಥವಾಯಿತು. ಘಟಸರ್ಪವಾಗಿ ಅವನು ಸಾಹೇಬರ ಸುತ್ತುಮುತ್ತು ಪ್ರದಕ್ಷಿಣಾರತನಾಗಿದ್ದ. ವೇಳೆ ನೋಡಿ,

ಸಮಯ ಸಾಧಿಸಿ. ತನ್ನ ವಿಷದಂತಿಯಿಂದ ಅವರ ಸತ್ವವನ್ನು ಹೀರುವ ಸನ್ನಾಹ ದಲ್ಲಿದ್ದ. ಆ ಘಟಸರ್ಪಕ್ಕೆ ಗರುಡನ ಗೆರೆಯ ಧಾಕು – ಭೀತಿಯ ಅವಶ್ಯಕತೆ ಇತ್ತು. ಆ ಗೆರೆಯನ್ನು ತೋರಿಸುತ್ತ ನಾನು ಹಾವನ್ನು ಮುಟಿಗೆ ಮಾಡುತ್ತಿದ್ದೆ. ನಾನು ಬೆಳಗಾಂವಿಯನ್ನು ಬಿಟ್ಟದ್ದಷ್ಟೇ ಪುರಸೊತ್ತು. ಹಾವು ಹೆಡೆ ಬಿಚ್ಚಿ ಸಾಹೇಬರ ಪರಣ ಹೀರಲು ಅವರ ಸನಿಯಕ್ಕೆ ಬಂದಿತು. ದಾದಲ್ಯಾನ ಅಂಜನಲಿಪ್ತ ಕಣ್ಣಿಗೆ ಸಾಹೇಬರ ಅವಸಾನದ ಗಳಿಗೆ ತುಂಬಿದ ದೃಶ್ಯ ಕಂಡಿತು. ದಾದಲ್ಯಾ ತನ್ನ ಅಂಗೈ ಯಲ್ಲಿಯ ಗರುಡರೇಖೆಯಲ್ಲಿ ವಜ್ರಶಕ್ತಿ ಮಂತ್ರಿಸಿ ಹಾವನ್ನು ಕುಕ್ಕರುಬಡಿದಿದ್ದ. ಅದರ ನೆತ್ತಿಯನ್ನು ಕುಕ್ಕಿ ಅದನ್ನು ಗತಪ್ರಾಣಮಾಡಿದ್ದ. ಸಾಹೇಬರು ಬದುಕಿ ದರು. ಅವರಿಗೆ ಆಜನ್ಮ ಈ ಸರ್ಪಭೀತಿ ಹಾರಿತು. ಇಂದು ಆ ಸರ್ಪ ಯಾರು ಎಂಬುದು ಅವರಿಗೆ ವಿದಿತವಾಗಬೇಕಿತ್ತು. ಹಾವಿನ ನಾಮನಿರ್ದೇಶ ಮಾಡದೆ – ನಾನು ಸಾಹೇಬರಿಗೆ ಸಾದ್ಯಂತ ಹಕೀಕತ್ತು ವಿವರಿಸಿ —

"ಸಾಹೇಬರs, ನಿಮಗ ದಗಾ ಕೊಡವರ್‍ನ ನೋಡೂ ದೃಷ್ಟೀ ನಾ ಕೊಡತೀನಿ. ಆದರ ಒಂದು 'ಎಕ್ಸ್‌ಪ್ರೆಸ್ ಕಂಡೀಶನ್'ದ ಮ್ಯಾಲ. ಈ ಹಾಂವನ್ನು ನೋಡಿ, ನೀವು ವಿಚಲಿತರು ಆಗೂದಿಲ್ಲಾ, ಅದರ ಅನಿಷ್ಟ ಪರಿಣಾಮ ಮಾಡಿಕೊಂಬೂ ದಿಲ್ಲಾ ಅಂತs ಶಕೂನ ಆಣೀ ಇಟಿಗೊಂಡು 'ಪ್ರೊಮೀಜ್' ಕೊಡಬೇಕು. ಆತ್ಮಸಾಕ್ಷೀ ಆಗಿ ವಚನ ಕೊಡಬೇಕು. ನಿಮ್ಮ ವಚನಪಾಲನಾದ ಭಿಸ್ತ ಅದs ನನಗ. ನಿಮ್ಮ ವಚನದ ಧೈರ್ಯಾದ ಮ್ಯಾಲ, ಎಲ್ಲಾ ಭಾನಗಡೀದು ಉಲಗಡಾ ಮಾಡತೀನಿ. ಈ ಭಾನಗಡೀ ಸುದ್ದೀ ಕೇಳಿ – ಎಲ್ಲಾ ಸಹನಮಾಡಕೋತೀನಿ. ಕೈಕಾಲು ಬಿಡೂದಿಲ್ಲಾ ಅಂತs ಆಣೀ ಕೊಡರಿ. ನೀವು ಆಣೀ, ವಚನಕ್ಕ ತಪ್ಪಿದರ ಮಾತ್ರ ನಿಮಗ ಶಕೂಂದು, ದಾದಲ್ಯಾಂದು ಇಬ್ಬರ ಋಣಾನೂ ಉಳಿಯೂ ದಿಲ್ಲಾ."

ಗ್ರೀನ್ಸ್ ಹೊಟೆಲ್‌ನ ಹುಡುಗ, ಟಿಫಿನ್-ಚಹ ತಂದು ನಮ್ಮ ಮುಂದೆ ಇಟ್ಟು —

"ಡೀ. ಜೀ. ಜೋಶಿ ಅಂದರ ಯಾರು? ಅವರ ಭೆಟ್ಟಿಗ್ಯಂತ ಯಾರೋ ಬಂದಾರ ತೆಳಗ. ಅವರಿಗೆ ಏನ ನಿರೋಪ ಹೇಳೂದು?"
ಎಂದು ಕೇಳಿದ.

ಬಂದವರು ಯಾರಿರಬೇಕೆಂಬ ಖಾತ್ರೀ ನನಗಾಯಿತು. ಬಂದವರನ್ನು

ಐದು-ಹತ್ತು ನಿಮಿಷ ಕಾಯಿಸುವದರಿಂದ, ನಮಗೆ ಅವರ ಭೆಟ್ಟಿಯು ಅಗತ್ಯ, ಅವಸರವಿಲ್ಲವೆಂದು ಸೂಚಿಸುವ ಆಢ್ಯತೆ ಇರುತ್ತದೆ. ಬಂದವರು ಹುಡುಕಿಕೊಂಡು ಬಂದಿದ್ದಾರೆ. ಅಂದಮೇಲಂತೂ ಅವಸರ ಮಾಡಿಕೊಂಡು ಹೋಗಿ ಅವರನ್ನು ಕಾಣುವ ಜರೂರಿ ಇಲ್ಲವೆಂದು ಭಾವಿಸಿ —

"ಅವರಿಗೆ ಕೂಡಂತ ಹೇಳು. ಹತ್ತ ಮಿನೀಟಿನ್ಯಾಗ ಬರತಾರಂತ ತಿಳಸು. ಅವರ್ನ ವ್ಯಾಲ ಕಳಸೂ ಜರೂರಿ ಏನ ಇಲ್ಲಾ"
ಎಂದು ಅವನಿಗೆ ನಿರೋಪ ಹೇಳಿ, ತಂದಿಟ್ಟ ಚಹ ನಾನೇ ತಯಾರಿಸತೊಡಗಿದೆ. ಸಾಹೇಬರು —

"ಯಾರ ಬಂದಾರ ದಾದಲ್ಯಾ? ಪಾಪಾ, ವ್ಯಾಲ ಕಳಸಂತ ಹೇಳಬೇಕಾಗಿತ್ತಿಲ್ಲೋ? ಅವರೂ ಅಷ್ಟು ಚಹಾ ತಗೋತಿದ್ದರು?"
ಎಂದರು.

"ನಾವು ಬಗೀಹರಸೂಣು. ಅವರ ಜೋಡೀ ನಂದು ಒಂದಿಷ್ಟು ಜರೂರೀ ಕೆಲಸ ಅದs. ಇಲ್ಲೀ ಪತ್ತೇ ಕೊಟ್ಟs ಬಂದಿದ್ದೆ. ಅದಕ ಬಂದಾರ. ನಾ ಬರೂದ್ರಾಗ ನೀವು 'ಪ್ರೊಮೀಜ್' ಕೊಡೂ ಸಿದ್ಧತಾ ಮಾಡಿಕೊಂಡಿರ್ರಿ. ಅದರಾಗೇ ನಿಮ್ಮ ಅಖಂಡ ಕಲ್ಯಾಣ ಅದ ಸಾಹೇಬರ. ಬರೇ ನಿಮ್ಮದೇ ಇಲ್ಲಾ. ನಿಮ್ಮ ಜೋಡೀ ಹತ್ತ ಮಂದೀದೂ ಅದs. ಆತ್ಮಶುದ್ಧೀ ದಶಿಂದ ಆತ್ಮದಹನ ಮಾಡಿಕೋತೀನಿ ಅಂತ ಹೇಳಿದಿರಿ. ನಾಕ ಮಂದೀ ಮಂಗಳದ್ದಶಿಂದೂ ಅದನ್ನ ಮಾಡಬೇಕಾಗತದ. ಸರ್ವರ ಕಲ್ಯಾಣದ್ದು, ಸರ್ವರ ಮಂಗಳದ್ದು ದೃಷ್ಟೀ ಇತ್ತು. ನಿಮಗ ಆತ್ಮದಹನದ್ದು, ಆತ್ಮಶುದ್ಧೀದು ಜರೂರೀನs ಇಲ್ಲಾ. ಬರೇ ನಾ ಹೇಳೂ ಭಾನಗಡೀ ಇತಿಹಾಸನ್ನ ಒಂದಿಷ್ಟು ಧೈರ್ಯಾದಿಂದ ಸಹನ ಮಾಡಿಕೊಂಬೂ ಶಕ್ತೀ ಇದ್ದರ ಸಾಕು. ಆ ಸ್ಥೈರ್ಯಾದಿಂದ ನೀವು ಭಾಳ ಮಂದೀ ಕಲ್ಯಾಣ ಮಾಡತೀರಿ. ಅವರ ಪುಣ್ಯಾ ನಿಮ್ಮ ಪದರಿನ್ಯಾಗ ಬೀಳತದ. ಒಬ್ಬ ಸತ್ತು ನಾಕ ಮಂದಿ ಬದಕೂ ಹಾಂಗ ಇದ್ದರ ಅವನ ಸಾವಿನ್ಯಾಗ ನಿರ್ವಾಣದ ಮಹೋನ್ನತಿ ಇರತದ. ಯಾರು ಸಾಯೂದೂ ಈಗ ಅಗತ್ಯದ್ದಿಲ್ಲಾ. ಆದರ ನೀವು ಬದಕೂ ದೊಡ್ಡಿಸ್ತನಾ ತೋರಿಸಿ, ಅವರ್ನೂ ಬದಕಸ ಬೇಕಾಗೇದ. ನಿಮ್ಮ ಕಲ್ಯಾಣದ್ದಶಿಂದ, ದಾದಲ್ಯಾ, ಇನ್ನೊಂದು ಜೀವನಾ, ತಮ್ಮ ಜೀವಾ, ಧೋಕಾದಾಗ ಹಾಕ್ಯಾರ. ಆ ಎರಡೂ ಜೀವನಾ ಇಂದ ನಿಮಗ ಬೇಡಿಕೋತಾವ: ಈ ಧೋಕಾ ಪತ್ಕರಿಸಿದ್ದಕ್ಕ ಏನು ವರದಾನ ಮಾಡತೀರೀ ಅಂತs?

ಧೈರ್ಯಾದಿಂದ ನಿನ್ನ ಮಾತ ಕೇಳತೀನಿ. ಅದರಿಂದ ವಿಚಲಿತ ಆಗೂದಿಲ್ಲಾ. ಅಂತs ಪರವಾನ ಮಾಡರಿ ಅಂದರ ಆ ಆತ್ಮಾ ಶಾಂತ ಆಗತಾದs. ಅವಕ್ಕ ಪರವಾನದ ಫಲಾ ಸಿಗತದ. ಜಪಾ ಆರತದ ತಗೋರಿ."

"ದಾದಲ್ಯಾ, ನೀನು, ಶಕೂ ನನಗ ಬ್ಯಾರೇ ಅಲ್ಲಾ. ಆಕೀ ಆಣೀ ಮಾಡಿದರ ನಿನ್ನ ಆಣೀ ಮಾಡಿಧಾಂಗ. ನಾ ಧೈರ್ಯಾದ್ಲೇ ನಿನ್ನ ಮಾತು ಕೇಳಿಕೋತೀನಿ. ವಿಚಲಿತಆಗೂದಿಲ್ಲಾ. ದಾದಲ್ಯಾಗ ನಾನು ಸುಳ್ಳ 'ಪ್ರೊಮೀಜ್' ಕೊಡೂದಿಲ್ಲಾ. ಕೊಡೂವವನೂ ಅಲ್ಲಾ ಅನ್ನೂ ಖಾತ್ರೀ ಅದs. ಆತಲಾ ?"

"ನಾ ಗೆದ್ದೆ ಸಾಹೇಬರ. ತೆಳಗ ಹಾದೀ ನೋಡತಿರೂ ಇಸಮಿನ್ನ ಪರಭಾರೆ ಪೊತ್ತ ಹಾಕಿ ಬರತೀನಿ. ನಿಮಗ ಕಥೀ ಹೇಳತೀನಿ."

ಎಂದು ನುಡಿದು ಒಂದೇ ಗುಟುಕಿನಲ್ಲಿ ಜಪ ಮುಗಿಸಿ ಕೋಣೆಯಿಂದ ಹೊರಬಿದ್ದೆ. ಮುಂಜಾನೆ ಸಾಹೇಬರ ಕಡೆಗೆ ಬರುವಾಗ 'ಲಿಫ್ಟ' ಕೆಟ್ಟ ಬಗ್ಗೆ ಶಪಿಸಿದ್ದೆ. ಈಗ 'ಲಿಫ್ಟ' ಕೆಟ್ಟದ್ದೆ ಠೀಕ ಆಯಿತೆಂದೆನಿಸಿತು. ಗೋಲ್ಡ ಫ್ಲೇಕ ಸಿಗರೇಟು ಹಚ್ಚಿಕೊಂಡು ಸುಖವಾಗಿ ಹೊಗೆ ಬಿಡುತ್ತ ಆಧ್ಯತೆಯಿಂದ – ಗಮಜಿನಿಂದ ಬರುವ ದಾದಲ್ಯಾನ ಸ್ವಾರಿಯನ್ನು ಶ್ಯಾಮರಾಯನಿಗೆ ದರ್ಶನಮಾಡಿಸಬೇಕಾಗಿತ್ತು. ಅವನ ಹೀನ-ದೀನ ವಾಣಿಯಿಂದ ಅಂತಿಮ ನಿರ್ಣಯ ಕೇಳಬೇಕಾಗಿತ್ತು. ಸೋತು ಸತ್ತ ಈ ಶ್ಯಾಮ ರಾಯನ ಪ್ರೇತವನ್ನು ಕಿಶೆಯಲ್ಲಿ ಒಗೆದುಕೊಂಡು, ಸಾಹೇಬರಿಗೆ ಸಾದ್ಯಂತ ಕತೆ ಯನ್ನು ವಿವರಿಸಿ. ಆ ಕತೆಯಲ್ಲಿನ ದುರಂತ-ನಾಯಕನ ಈ ಶವವನ್ನು ಅವರಿಗೆ ತೋರಿಸಬೇಕಾಗಿತ್ತು. ಸಾಹೇಬರು ದೊಡ್ಡ ಮನಸ್ಸು ಮಾಡಿ – ಮಹೋನ್ನತ ಭಾವರಾಗಿ ಶ್ಯಾಮರಾಯನ ಪ್ರೇತಕ್ಕೆ ಎರಡು ಹನಿ ಕಣ್ಣೀರಿನ ತರ್ಪಣ ಒಪ್ಪಿಸಿ ಆತ್ಮಶುದ್ಧಿಯ ಶಾಸ್ತ್ರವನ್ನು ಬಗೆಹರಿಸಿದ್ದನ್ನು ನೋಡಬೇಕಾಗಿತ್ತು. ಶ್ಯಾಮರಾಯ ಈಗ ನಕಾರ ಹೇಳಿದ್ದರೂ ನನಗೆ ಯಾವ ಅಂಜಿಕೆಯೂ ಉಳಿದಿರಲಿಲ್ಲ. ನಕಾರ ಹೇಳಬೇಕಾಗಿದ್ದರೆ ಅವನು ನನ್ನನ್ನು ಹುಡುಕಿಕೊಂಡು ಬರುತ್ತಲೇ ಇರಲಿಲ್ಲ.

ನಾನು ಬೇಫಿಕೀರ ವೃತ್ತಿಯಿಂದ ನಡೆದು ಬಂದೆ. ಮ್ಯಾನೇಜರನ ಟೇಬಲ್ಲ ಬಳಿಯ ಬಾಕಿನ ಮೇಲೆ ಶ್ಯಾಮರಾಯ, ಬಸಗೋಂಡ. ನಬೀಸಾಬ ತ್ರಿಕೂಟವಿತ್ತು. ನನ್ನನ್ನು ನೋಡಿದ ಕೂಡಲೇ ಬಸಗೋಂಡ. ನಬೀಸಾಬ ಇಬ್ಬರೂ ಚಟ್ಟನೇ ಎದ್ದು ಆದಬಿಯಿಂದ ನಮಸ್ಕಾರ ಮಾಡಿದರು. ಶ್ಯಾಮರಾಯ ಕುಳಿತಲ್ಲಿಯೇ ಅವನತ ಮುಖನಾದ.

ದಾದಲ್ಯಾ ಗೆದ್ದಿದ್ದ.

"ದಾದಾ, ಇಲ್ಲೆ ಕೂಡೂದಕಿಂತಾ, ಆ 'ಸ್ಪೆಶಲ್ ರೂಮ್'ನ ಕಡೇನs ನಡೀರಿ ಹೋಗೂಣು. ನಿಮ್ಮದೂ ಇನಾ ಚಹಾ ಆಗಿರಲಿಕ್ಕಿಲ್ಲಾ. ಚಹಾ ತಗತಗೋತೇ ಮಾತಾಡೂಣಂತ"
ಎಂದು ಹೇಳಿ ನಾನು ಚಹದ ಆರ್ಡರ ಕೊಟ್ಟು ಅವರೆಲ್ಲರನ್ನೂ 'ಸ್ಪೆಶಲ್-ರೂಮ್' ಕಡೆಗೆ ಕರೆದುಕೊಂಡು ನಡೆದೆ. ಕೋಣೆಯಲ್ಲಿ ಹೋಗಿ ಕುಳಿತ ಮೇಲೂ ಶ್ಯಾಮ ರಾಯ ಮೌನವಾಗಿಯೇ ಇದ್ದ. ಆದರೆ ಬಸಗೊಂಡ ಮೌನ ಮುರಿದು —

"ದಾದಲ್ಯಾ, ನಾವು ನಾಕಕ್ಕs ಬರಬೇಕಾಗಿತ್ತು. ಕಚೇರ್ಯಾಗನs ಜರಾ ವ್ಯಾಳ್ಯಾ ತಿಂತ್ಯೂ. ನೀ ಹೇಳಿಧಾಂಗ, ನಾವು ಸೇಕಟ್ರೀಸಾಬರ ಕಡಿಂದ ಅರ್ಜೀ ಹಿಂದ ತಗೊಂಡೇವು. ಸಾಬರ ವಿರುದ್ಧ ಬಂದ ಅರ್ಜೀ ಬಾತಮೀ ಸಹಶೇಲ ಖೋಟಾ ಅವs ಅಂತ ಕೈಫಿಯತ್ತನೂ ಬರಕೊಟ್ಟ ಬಂದೇವು. ಸೇಕಟ್ರೀಸಾಬರು. ನಿನ್ನ ದೋಸ್ತ ಶೇಡಜೀ ಉಳದದ್ದನ್ನ ತಾವು ನಿಭಾಸಿಗೋತೇವು. ನೀವು ಊರಿಗೆ ಹೋಗರೀ ಅಂತs ನಿರೋಪನೂ ಕೊಟ್ಟಾರ. ಇಂದ ರಾತ್ರೀ ಗಾಡೀಲೇನs ನಾವು ಊರಿಗೆ ಹೊಂಡತೇವು. ದಾದಲ್ಯಾ. ಈಗಾದದ್ದs ಘಾಡ ಆತು. ದೊಡ್ಡ ಇಂಜನ್ಯರ್ ಸಾಬರ ಕೈಯಾಗ ನಮ್ಮನ್ನ ಅನಾಮತಾ ಸಿಗಸಿದ್ದ್ಯಂದರ ಕೊಂದsಬಿಟ್ಟಿದ್ದಿ. ಶ್ಯಾಮ ರಾಯರಿಗೂ ಏನು ನಿನ್ನ ಮ್ಯಾಲ ಸಿಟ್ಟ ಇಲ್ಲಾ. ಅವರಿಗೂ ಏನ ಇಜಾ ಆಗಲಿಲ್ಲಾ. ಠೀಕಾತು. ಆ ಪತ್ರಾ ಇಷ್ಟು ನಾಶಮಾಡಿಬಿಡೂಣು ದಾದಲ್ಯಾ. ಕೆಲಸs ಬಗೀಹರದ ಮ್ಯಾಲ ಅದರ ಅಗತ್ಯನರs ಏನು?"
ನನ್ನನ್ನು ಅಗದೀ ಕೂಸೆಂದು ಭಾವಿಸಿ ಬಸಗೊಂಡ ಸದುಪದೇಶ ಮಾಡಿದ.

"ಬಸಗೊಂಡಾ. ನೀವು ಕೈಫಿಯತ್ತ ಏನ ಬರಕೊಟ್ಟೀರಿ ಅದೂ ನನಗ ತಾಂಪಿಕಿಲ್ಲಾ. ವಿಚಾರಣೀ ಸೋಮವಾರಕ್ಕ ಬಿದ್ದsದ. ಚೀಫ್ ಇಂಜನ್ಯರ್ ತಾವು ವಿಚಾರಣೀನs ಮಾಡಾವ್ರು ಅಂದರ ನಿಮ್ಮ ಸಾಕ್ಷೀ ಆಗೇಬೇಕಾಗತದ. ಸಾಹೇಬರು ಕಚ್ಚಿಹರಕ ಇದ್ದಾರನ್ನೂದಕ್ಕ ಸಾಕ್ಷೀ ಏನು ಅಂತ ಕೇಳಿದರ ನೀವೇನು ಹೇಳಾವ್ರು?"

"ಇದನೇನು ನಾವು ಹೇಳೂ ಜರೂರಿ ಇಲ್ಲಾ. ಶ್ಯಾಮರಾಯರs ಅದರ ಪಶಿಂದ ಏನೋ ಹೇಳಾವ್ರಿದ್ದಾರ."
ನಬೀಸಾಬ ವಾದಿಸಿದ.

"ಗೆಣ್ಯಾ, ಅರ್ಜೀಗೆ ಸಹಿ ನಿಮ್ಮದದ. ಶ್ಯಾಮರಾಯರೇನು ನಿಮ್ಮ ಸಹಿಗೆ ಸಾಕ್ಷೀ ಹಾಕ್ಯಾರೇನು? ದೊಡ್ಡ ದೊಡ್ಡ ಕಾಮಗಿರಿ ಮಾಡತೀರಿ. ನಾಕ ಅಂಕೀ ಚೆಕ್ ತಗೋತೀರಿ. ಸಾಹೇಬರ ಮ್ಯಾಲ ಖಡಿ ಪಾರೇ ಇಟ್ಟು. ಯಾರು ಅವರ ಮನೀಗೆ ಸೀರೀ ಒಯ್ದು ಕೊಟ್ಟರು. ಯಾರು ಖಣಾ ಒಪ್ಪಿಸಿದರೂ ಅನೂದನ್ನ ತಾರೀಖ ವಾರ ಹೇಳತೇವಂತ ಅರ್ಜೀ ಬರೀತೀರಿ. ಆದರ ಸಾಹೇಬರು ಯಾರ ಜೋಡೀ ಮಲಗಿದರು, ಯಾರನ್ನ ಹಿಡಕೊಂಡರು ಅನೂದನ್ನ ಹೇಳಲಿಕ್ಕೆ ಶ್ಯಾಮ ರಾಯರು ಬೇಕಾಗತದೇನು?"

ನನ್ನ ಮಾತನ್ನು ಮಧ್ಯದಲ್ಲಿಯೇ ತಡೆಯುತ್ತ, ಶ್ಯಾಮರಾಯ ತಟ್ಟನೇ —

"ದಾದಲ್ಯಾ, you are in the know of things from the beginning. Unnecessarily don't rake up the matter now. ಬಸವಂತಿ ದಗಾ ಕೊಟ್ಟಳು. ಇಲ್ಲದಿದ್ದರ ನೀ ಹಿಂಗ ಮಾತಾಡೂ ಗಮಜ ನೋಡುತ್ತಿದ್ದೆ. ನನ್ನ ತಪ್ಪಿಗೆ ಯು.ಎಸ್.ನ ಬಲೀ ಆಗಬಾರದಂತ ನಾನು ನಮತೇಘೋರಣ ತಗೋಬೇಕಾಗೇದ. ಇಲ್ಲದಿದ್ದರ ನಮ್ಮ ಮನೀ ಘಂಟೀ ಬಡಿಯೂ ವೈದಿಕಬ್ರಾಹ್ಮಣಗ ಬಗ್ಗೂ ಪ್ರಸಂಗ ಬರತಿದ್ದಿಲ್ಲಾ. ನೀ ಪತ್ರದ ಉಲಗಡಾ ಮಾಡಿದರ, ನಿಮ್ಮ ಸಾಹೇಬ ಪಾರಬಿದ್ದಾನು. ನನ್ನ ದೋಸ್ತರಿಗೆ ಭಾಳ ಆದರ ಇಲ್ಲೀದು ಬದ್ಲೀ ಆದೀತು. ನಾನು 'ಬ್ಲ್ಯಾಕ್ ಲಿಸ್ಟ್' ಆದೇನು. ಇದಕಿಂತಾ ಏನು ಹೆಚ್ಚಿಗೆ ಆಗಬೇಕಾಗೇದ? ಈ ಡಿವ್ಹಿಜನ್ ಇಲ್ಲಾ ಹತ್ತ ಡಿವ್ಹಿಜನ್ ಅವ. ಬ್ಯಾರೇದವರ ಹೆಸರ್ಲೆ 'ಕಾಂಟ್ರ್ಯಾಕ್ಟ್' ತಗೋಳಿಕ್ಕಿ ನನಗೇನು ಬರೂದಿಲ್ಲಂತ ತಿಳೀಬ್ಯಾಡಾ. ನಾ ಈಗ ಘಳಿಸಿದ್ದನ್ನ. ಒಬ್ಬರಲ್ಲಾ. ಹತ್ತು ಮಂದಿ ಕೂತ ತಿಂದರೂ ಸಾಕಾಗಿ ಉಳಿಯೂ ಹಾಂಗ ಅದ. 'ಬ್ಲ್ಯಾಕ್-ಲಿಸ್ಟ್' ಆದಾಕ್ಷಣಕ್ಕ ನನ್ನ ಅವತಾರೇ ಮುಗಧಾಂಗ ಆಗಲಿಲ್ಲಾ. 'ಏನ್‌ಕ್ವಾಯರಿ' ಆಗ ಬಾರದು – ನನ್ನ ಸಾಕ್ಷೀ ಆಗಬಾರದು ಅನ್ನೂದಕ್ಕ ಯಾಕ ಥಡಪಡ ನಡಸೀದಿ ಅನ್ನೂದು ನನಗ-ನಿನಗ ಇಬ್ಬರಿಗೇ ಗೊತ್ತು. ಆ 'ವಿಜ್'ಂದೂ, ನಿಮ್ಮ ಸಾಹೇ ಬಂದೂ ಎಂಥಾ 'ಕನೆಕ್ಶನ್' ಅದ ಅನ್ನೂದನ್ನ 'ಎಕ್ಸ್‌ಪೋಜ್' ಮಾಡೂ 'ಎಕ್ಸ್‌ಟೆಂಟ'ಕ್ಕೂ ಹೋಗತಿದ್ದೆ. ಸಂದೇಸು ಒಳೀಬೇಕಾಗೇದ? ನಾನಾಗೇ ಇವನ್ನ ಹೇಳಿದರ – ಸಿ.ಈ.ಗೂ ವಿಚಾರಮಾಡೂ ಪ್ರಸಂಗ ಬರತದ. ನಿಮ್ಮ ಸಾಹೇಬಾ ಚಿತ್‌ಪಟ್ಟ ಆಗತಾನ. ಆವರ ಯು.ಎಸ್. ತನ್ನ ಬಚಾವ್ ಮಾಡಿಕೊಂಬೂದರ ದಶಿಂದ ನನ್ನ ಮ್ಯಾಲ 'ಪ್ರೆಶ್ಯರ್' ತಂದಂತ. ನಾ ದಮ್ಮತಿನಬೇಕಾತು."

"ದಮ್ಮ ತಿನ್ನೂ ಕಾರಣಾ ಇಲ್ಲ ದಾದಾ. ಹತ್ತ ಮಂದಿ ಕೂತ ತಿಂದರೂ ಸಾಕಾಗುವಷ್ಟು ಸಂಪತ್ತ ಅದs ನಿಮ್ಮಲ್ಲೆ. ಅದರಾಗಿಂದು ಒಂದು ತುಕಡೀ ಒಗದರೂ ಸಾಕು ನಿಮ್ಮ ದೋಸ್ತಾ ಆಜನ್ಮ ಆರಾಮದಾಗ ಇರತಾನ. ಇಬ್ಬರೂ ಕೂಡಿ 'ಕಾಂಟ್ರ್ಯಾಕ್ಟ್' ಧಂದೇ ಸುರುವು ಮಾಡಲಿಕ್ಕೂ ಬರತ್ತದ. ಹತ್ತು ಸರಕಾರಿ ಕೆಲಸ ಸಿಗದಿದ್ದರೂ, ನಾಕರs 'ಪ್ರೈವೆಟ್ ಕಾಂಟ್ರ್ಯಾಕ್ಟ್' ಸಿಕ್ಕೇ ಸಿಗತಾವ. ನೀವು ದಮ್ಮ ತಿನ್ನೂದರಿಂದ ನನ್ನ ಮ್ಯಾಲೇನು ಉಪಕಾರ ಮಾಡಿಧಾಂಗ ಆಗೂದಿಲ್ಲಾ. ಸಾಹೇಬರ 'ಏನ್‌ಕ್ವಾಯರಿ' ಮುಗದು, ಹಳೀ ಮಾತಾತು ದಾದಾ: ನೀವೆಲ್ಲಿ ಇದ್ದೀರಿ ಇನ್ನಾ? ಯು.ಎಸ್. ಹೆಂಡರು-ಮಕ್ಕಳು ಇದ್ದಾಂವ ಇರಬೇಕು. ನಿಮ್ಮ ಮಬ್ಬಿಗೆ ಬೀಳಲಿಕ್ಕೆ ಅಂವೇನು ಎಬಡ ಅಲ್ಲಾ. ಕಂಚಾಣ ಕುಣೇತದಂತ, ನಿಮಗ ಸೋನಕ್ಕಾ 'ವಿಚ್' ಆಗಿ ಕಾಣಸ್ತಾರ. ಬಸವಂತಿಗೆ ವ್ಯರ್ಥ ಕೆಟ್ಟ ಮಾತು ತಗೋ ಬೇಕಾಗತದ. ಯು.ಎಸ್.ಗ ಬದಲೀ ಆದರೂ ನಿಮಗ ಅಷ್ಟೇ; ಬಡತರ್ಫ್ ಆದರೂ ಅಷ್ಟೇ. ಸೂತಕದ ಸ್ಪರ್ಶನೇ ಇಲ್ಲದೆ ನೀವು ಹುಟ್ಟಿ ಬಂಧಾಂಗ ಆಗೇದ. ಕೈಫಿಯತ್ತು ಕೊಟ್ಟ ಬಂದೇವು – ಪತ್ರಾ ಇಷ್ಟು 'ಡಿಸ್ಟ್ರಾಯ್' ಮಾಡಂದರ, ದಾದಲ್ಯಾ ಏನು, ಬಾಯೀ ಬದಲೀ ಕಿಂವೀಗೆ ತುತ್ತು ಒಯ್ಯೂ ಜಾತಿ ಅಲ್ಲಾ. ಅಂವಗೂ ನಿಮ್ಮ ಡಾವ್ ತಿಳೀತದ. ಪತ್ರದ ಸುದ್ದೀ 'ಎಕ್ಸ್‌ಪೋಜ್' ಮಾಡಲಿಕ್ಕೆ ನನಗ ಇಷ್ಟ ವ್ಯಾಳ್ಯಾದ ಜರೂರೀ ಇರಲಿಲ್ಲಾ. ಪತ್ರಾ ನನ್ನ ಕೈಗೆ ಬಿದ್ದಿರಲಿಲ್ಲಾ ಅಂದರೂ, ನೀವರೇ ಏನು ಸಾಹೇಬರ ನಸೀಬ ತಗಿಯೂ ಹಾಂಗ ಇದ್ದಿರಿ. ಅವರಿಗೂ ಕೂತ ತಿಂದರ ಕರಗದಷ್ಟು ಸಂಪತ್ತ ಅದ. ಇರೂವಕೀ ಒಬ್ಬ ಮಗಳು. ನಿಮ್ಮ ಎದೀಮ್ಯಾಲs ನಡದ ಬಂದು ನಿಮ್ಮ ಮನೀಗೆ ಬರತಾಳ. ನೀವು ನವಕರೀ ಬಿಟ್ಟು 'ಕಂಟ್ರ್ಯಾಕ್ಟ್' ಸುರೂ ಮಾಡಿದಿರಿ. ನವಕರಿ ಇರಲಿಲ್ಲಂತ ಭಿಕ್ಷಾಪಾತ್ರೀ ಹಿಡೀಲಿಲ್ಲಾ. ಈ ಭಾನ ಗಡೀಂಬೊಳಗ ಸಾಹೇಬರ ನವಕರೀ ಹೋಗಿದ್ದರ, ಅವರೂ ಏನು ದೇಹೀ ಅಂತ ತಿರಗೂ ಪ್ರಸಂಗ ಬರತಿದ್ದಿಲ್ಲಾ. ನಾಕ ಮಂದೀಯೊಳಗ ನಾಲಸ್ಸೀ ಆಗತಿತ್ತು ನಿಮ್ಮದು. ಈಗಾದರೂ ನಿಮಗ ಸುಖಾ ಆದೀತನೂ ಆಶಾನೇ ಇಲ್ಲಾ. ನಾಳೆ ಈ ಪ್ರಕರಣ ಮುಗದರರೇ ಎಲ್ಲಾ ಶಾಂತ ಆದೀತಂತ ನಾ ಏನು ತಿಳಕೊಂಡಿಲ್ಲಾ. ದುರ್ವಾಸನ ಹಟದಿಂದs ನೀವು ಮುಂಬೈ ಬಿಟ್ಟು ಹೋಗತೀರಿ. ದಾದಾ. ನೀವು ಭಾಳ ಮಂದೀ ಬಲೀಗೆ ಟಪಕಾಸೀರಿ! ಕುರುಕ್ಷೇತ್ರದಾಗ ಎರಡ ಶಕ್ತೀ ಒಂದನ್ನ ಒಂದು ಹಾಯಲಿಕ್ಕೆ ತಯಾರಾಗಿ ನಿಂತು. ಒಂದ ಹತ್ತ ಮಿನೀಟಾ, ತಮ್ಮತಮ್ಮ

ಸಾಮರ್ಥ್ಯ ಅಜಮಾಸಿಗೊಂಡೂ. ಆಗೇನು ಒಂದ ಸ್ಮಶಾನಶಾಂತೀ ಪಸರಿಸಿತ್ತು, ಅಂಥಾದs ಶಾಂತಿ, ಈ ಪತ್ರದ ಪ್ರಕರಣಾ ಶಾಂತ ಆದಾಗ ಬರತದ. ಈ ಶಾಂತೀ, ಶಾಂತೀ ಅಲ್ಲ ಅನ್ನೂದು ಠಾಂವಿಕ್ಯದ ನನಗ. ನಿಮಗೂ ಅದು ಗೊತ್ತದ......"

ಇನ್ನೂ ನನ್ನ ಮಾತು ಮುಗಿದಿರಲಿಲ್ಲ. ಶ್ಯಾಮರಾಯ ನಡುವೆಯೇ ಬಾಯಿ ಹಾಕಿ —

"ವಾದಲ್ಯಾ, ನಾ ನಿನ್ನ ಪುರಾಣ ಕೇಳಲಿಕ್ಕೆ ಬಂದಿಲ್ಲಾ. ಬಸಗೋಂಡಾ, ನಬೀಸಾಬಾ ಕೈಫಿಯತ್ತ ಕೊಟ್ಟ ಬಂದಾರ. 'ಏನ್‌ಕ್ವಾಯರಿ' ಇಲ್ಲದೆ 'ಕೇಸ್ ರಿಕಾರ್ಡ್' ಆಗೂ ಹಾಂಗ ಮಾಡತೀನಿ ಅಂತs, ಯು.ಎಸ್. ಹೇಳ್ಯಾರ. ಅಷ್ಟ ಹೇಳೂದಕ್ಕಂತ ಬಂದಿದ್ದೆ. ಹೇಳಿನ್ಯೂ ಆತು. ಇನ್ನ ನಿನ್ನ ಮಾರೀ ನೋಡೂ ಗರಜು ನನಗ – ನನ್ನ ಭೆಟ್ಟೀ ಅಗತ್ಯ ನಿನಗ ಉಳೀಲಿಲ್ಲಾ... but mind well, I have not come on peace-mission. But to warn you of the future disaster...ತಿಳೀತೇನು?"
ಎಂದು ಹೇಳಿ ಟೇಬಲ್ ಮೇಲಿದ್ದ ಗಂಟೆಯನ್ನು ಜೋರಿನಿಂದ ಕೈ ಅಪ್ಪಳಿಸಿ ಬಾರಿಸಿದ. ಹಾಟೆಲ್ ಮಾಣಿ ಧಾವಿಸಿ ಬಂದ. ಶ್ಯಾಮರಾಯ ಕಿಶೆಯಿಂದ ಹತ್ತರ ನೋಟು ತೆಗೆದು ಟೇಬಲ್ ಮೇಲೆ ಒಗೆಯುತ್ತ —

"ಬಿಲ್"
ಎಂದು ಹುಡುಗನ ಕಡೆಗೆ ನೋಡಿದ. ಹುಡುಗ ತಟ್ಟೆಯಲ್ಲಿದ್ದ ಬಿಲ್ಲು – ನೋಟು ಎತ್ತಿಕೊಂಡು ಹೋಗಿಬಿಟ್ಟ. ನಾನು. ಶ್ಯಾಮರಾಯನ 'future disaster'ದ ಕಣೆಯಿಂದ ಕಿಂಚಿತ್ ಕೂಡ ವಿಚಲಿತನಾಗಿಲ್ಲವೆಂದು ತೋರಿಸುವ ರೀತಿಯಲ್ಲಿ, ಖುರ್ಚಿಯ ಬೆನ್ನಿಗೆ ಒರಗಿ. ಮುಂದಿರುವ ಟೇಬಲ್ಲಿಗೆ ಬೆರಳಿನಾಸರ ಮಾಡಿ, ಜೀಕುವಂತೆ ಜೀಕುತ್ತ. ಒಂದು ಕೈಯಲ್ಲಿಯ ಸಿಗರೇಟಿನ ಹೊಗೆ ಕುಡಿಯುತ್ತ, ಆಪ್ಯಾಯಮಾನವಾಗಿ ಹೊಗೆ ಉಗುಳುತ್ತ ಕುಳಿತುಕೊಂಡೆ. ಬಸಗೋಂಡನೇ ತಾನಾಗಿ —

"ವಾದಲ್ಯಾ. ಪ್ರಕರಣಾ ಹ್ಯಾಂಗೂ ಬಗೀಹರದದ. ಸುಮ್ನs ನೀನು-ಶ್ಯಾಮರಾಯರು ಗರಮ್ ಯಾಕ ಆಗತೀರಿ? ಪತ್ರದ ಉಲಗಡಾ ಮಾಡಿ ನೀ ನಮಗ ನೇರವಾಗಿ. ನಾವೂ ಇಲ್ಲದ ರಸಕಸಿ ಬ್ಯಾಡಂತ ಮಾಫಾರಿ ತಗೊಂಡೇವು. ಮಾತು ಮುಗದೈತಿ. ಯಾರಿಗೂ ಇಜಾ ಆಗೂ ಹಾಂಗ ಆಗಿಲ್ಲಾ. ಮನಿಸಿಗಿ ಜರಾ ವೈನ

ಅನಸಾಕ ಹತ್ತೂದರಾಗೇ. ಮತ್ತ್ಯಾಕ ಮನಸ ಮುರ್ಯಾಂಗ ಮಾತಾಡತೀರಿ? ಶ್ಯಾಮರಾಯರು ನಿನಗ ಹಿರ್‍ಯಾರು. ನಿಮ್ಮ ಅನ್ನದ ಧಣ್ಯಾರು. ಅವರಿಗೆ ನೀ ಮಾನ-ಮರ್ಯಾದೀಲಿಂದ ಮಾತಾಡೂದು ವಾಜಿಮಿ. ನೀ ಸಣ್ಣ ಹುಡಗಾ. ನಿನ್ನ ಮಾತೇನರ್‍ೕ ಬಿರಸ ಆಗಿದ್ದರ ಹೊಟ್ಟ್ಯಾಗ ಹಾಕೊಂಬೂದು ಅವರಿಗೆ ಶೋಭಾ. ನೋಡಪಾ. ನಮಗಿಷ್ಟ ತಿಳೀತಂತ ಹೇಳತೇವು. ಇನ್ನ ನಿಮ್ಮ ನಿಮ್ಮ ಮರ್ಜೀ."

ಹೊಟೇಲಿನ ಹುಡುಗ ಬಿಲ್ಲು ಮುರಿದುಕೊಂಡು, ಚಿಲ್ಲರೆ ಹಣ ತಂದು ಟೇಬಲ್ಲಿನ ಮೇಲೆ ಇಟ್ಟ. ಅವನು ಚಿಲ್ಲರೆ ಇಟ್ಟ ಪ್ಲೇಟಿನಲ್ಲಿ ನಾಕಾಣೆ ಬಿಟ್ಟು ಉಳಿದದ್ದನ್ನು ಕಿಶೆಯಲ್ಲಿ ಹಾಕಿಕೊಂಡು, ಶ್ಯಾಮರಾಯ —

"ಹೂಂ. ನಡೀರಿನ್ನ. ನಬೀಸಾಬ, ಬಸಗೋಂಡಾ. ಹೊತ್ತಾತು. ಹೊರಡೂ ತಯಾರಿಗೆ ಹತ್ತಬೇಕು."

ಎಂದು ಹೇಳಿ ಹೊರಟುಬಿಟ್ಟ. ನನ್ನನ್ನು ಮಾತಾಡಿಸುವ, ನಿರೋಪ ಕೊಡುವ ದೊಡ್ಡಿಸ್ತನವನ್ನೂ ತೋರಿಸಲಿಲ್ಲ.

"ಹೊಂಡತೇವ ದಾದಲ್ಯಾ. ನೀ ಭೆಟ್ಟಿ ಆಗಿದ್ದಿ. ಘಾಡ ಅದೀ ಅಂತ್ರೕ. ನಿಮ್ಮ ಗೋವಿಂದಭಟ್ಟಗ ಹೇಳತೀವಿ"

ಎಂದು ಕೈಮುಗಿಯುತ್ತ ಬಸಗೋಂಡ ಹೇಳಿದ. ಬಸಗೋಂಡ ಕೈಮುಗಿದದ್ದನ್ನು ನೋಡಿ ನಬೀಸಾಬನೂ ನಮಸ್ಕರಿಸಿದ. ಶ್ಯಾಮರಾಯ, ನಬೀಸಾಬ ಮುಂದೆ ಮುಂದೆ ನಡೆದರು. ಬಸಗೋಂಡ ಒಂದಿಷ್ಟು ಹಿಂದಿದ್ದ. ನಾನು ಮೆಲ್ಲಗೆ ಅವನ ಕಿಂವಿಯಲ್ಲಿ —

"ಪುಣೇದಾಗ ಬಸವಂತಿ ಭೆಟ್ಟಿ ಆದರ ಹೇಳು ಬಸಗೋಂಡಾ: ಒಂದಿಷ್ಟು ಹುಷಾರೀಲೇ ಇರೂ ಅಂತ್ರೕ. ದಾದಲ್ಯಾ ಹೇಳ್ಯಾನಂತ ಹೇಳು. ಆಕೀಗೆ ತಿಳೀತದ. ನಿನ್ನ ಬೆನ್ನಿಗೆ ಬಿದ್ದ ತಂಗಿಗೆ ದಗಾ ಕೊಡಬ್ಯಾಡಾ. ನೀವು ಒಂದ ಕರಳಿನವರು" ಉಸುರಿದೆ.

"ದಾದಲ್ಯಾ..."

ಎಂದವನೇ ಬಸಗೋಂಡ, ಅಂಗೈಯಗಲದಷ್ಟು ದೊಡ್ಡದಾಗಿ ಕಣ್ಣು ಪಟಾರಿಸಿ ನನ್ನ ಮುಖವನ್ನು ಮಿಕಿ ಮಿಕಿ ನೋಡುತ್ತ ನಿಂತ.

"ಹೇಳ. ಹೇಳ ಬಸಗೋಂಡಾ. ನಿನಗ ತಿಳಿಯೂದಲ್ಲಾ ಇಂಥಾ ವಿಷಯಾ" ಎಂದು ನಾನು ನಗುತ್ತ ನುಡಿದೆ.

ನಾನು ಗೆದ್ದ ಯೋಧನ. ವಿಜಯೀ ವೀರನ ಅಧ್ಯತೆಯಿಂದ ಅಲೆಕ್ಸಾಂಡರ್, ಸಾಮ್ರಾಟ್ ಚಂದ್ರಗುಪ್ತ, ಮಹಾಬ್ರಾಹ್ಮಣ ವಿಶ್ವಾಮಿತ್ರ. ಚಾಣಕ್ಯರು ಝುಕ್ಕಿಸುವ ರೀತಿಯಲ್ಲಿ, ಠೀವಿಯಲ್ಲಿ 'ಗ್ರೀನ್ಸ್ ಹೊಟೆಲ್'ನ ಮೆಟ್ಟಲುಗಳನ್ನು ವಜ್ರಪಾದದಿಂದ ಮೆಟ್ಟುತ್ತ ಸಾಹೇಬರ ನಂ. ೬೦ – ಕೋಣೆಗೆ ನಡೆದೆ.

ನನ್ನ ಆಗಮನವನ್ನು ಉತಾವಿಳರಾಗಿ ದಾರಿಕಾಯುತ್ತ ಕುಳಿತ ಸಾಹೇಬರು ನನ್ನನ್ನು ನೋಡಿ —

"ದಾದಲ್ಯಾ, ಐದ ಮಿನೀಟಂತ ಹೋದಾಂವಾ. ಅರ್ಧಾ ತಾಸ ಆದರೂ ಪತ್ತೇನs ಇಲ್ಲಲಾ. ಏನಂಥಾ 'ಅರ್ಜಂಟ್' ಕೆಲಸ ಇತ್ತು? ಯಾರ ಬಂದಿದ್ರು?" ಎಂದು ಕೇಳಿದರು.

"ಬಂದಾವರ ವರಿಂದ ಹಿಂದಾಗಡೇ ಹೇಳತೀನಿ ಸಾಹೇಬರs. ಆಗಳೇ ನಮ್ಮ ಮಾತು ಅರಗಚ್ಚಿ ಆಗಿ ನಿಂತಿದ್ವು. ಅದನ್ನ ಹೇಳಿ ಮುಗಿಸಿದ ಮ್ಯಾಲs, ಈಗ ಬಂದ ಮಂದೀ ದರ್ಶನಾ ತಂತಾನೇ ಆಗತದ"

ಎಂದು ಸ್ವಸ್ತಿ-ಪೀಠಿಕೆ ಹಾಕಿ. ನಿಧಾನವಾಗಿ. ನಿರ್ಭಯವಾಗಿ, ನಿಃಸ್ಸಂಕೋಚವಾಗಿ. ಸೋನಕ್ಕ ಘುಳಿಯಿಂದ. ಅಪವಾದದ ಕಲಂಕ ಅಂಟಿಸಿಕೊಂಡು ಬಂದ ದಿನದಿಂದ ಮೊದಲುಮಾಡಿಕೊಂಡು, ಶ್ಯಾಮರಾಯ ಆ ಸೇಡಿನ ಬಲಿಗೆ ಇಂದು ಹಾಸಿದ ಜಾಲದ ವರೆಗಿನ ಸಾದ್ಯಂತ ಕತೆಯನ್ನು ವಿವರಿಸಿದೆ. ರಾಧಾಕಾಕೂ, ರಾಮಜೀಕಾಕಾ. ಪಂತಮಾಮಾ. ಸೋನಕ್ಕ. ಬಸವಂತಿಯರ ದಿವ್ಯ ಭವ್ಯ ಪ್ರತಿಮಾದರ್ಶನವನ್ನೂ ಸಾಹೇಬರಿಗೆ ಮಾಡಿಸಿದೆ. ಪಂತಕುಟುಂಬದ ಘನತೆಯನ್ನ ಅದರಲ್ಲಿಯ ದಿವ್ಯ ಪುರುಷರ – ಮಹಾತೇಜಸ್ವಿನಿ ತಾಯಿಯರ ಪರಿಚಯ ಮಾಡಿಸುವಾಗ ದಾದಲ್ಯಾ ಬೇಭಾನನಾಗುತ್ತಾನೆ. ಕುಮಾರವ್ಯಾಸ ಮಡಿಯಲ್ಲಿ ಕುಳಿತು ಭಾರತ ಸಾರುವಾಗಿನ ಬೇಭಾನ-ಸ್ಥಿತಿಗೇರುತ್ತಾನೆ. ದಾದಲ್ಯಾನ ವಾಣಿಗೆ ಇಂದು ಸಂಜೀವಿನೀ-ಜೀವ ಚೇತನಾ-ಸ್ಪಂದಕ-ಸ್ಫೂರ್ತಿ ಬಂದಿತ್ತು. ವಿಜಯದ ಮಹೋನ್ಮಾದ ಬಂದಿತ್ತು. ರಾಧಾಕಾಕೂ, ರಾಮಜೀಕಾಕಾ. ಸೋನಕ್ಕನ ಪವಿತ್ರ ಸ್ಮರಣೆಯ ಮಹಾಪೂರ ಬಂದಿತ್ತು. ದಾದಲ್ಯಾನ ಜೀವ-ಜಾಹ್ನವಿ ಅಮೋಘವಾಗಿ, ಅಖಂಡವಾಗಿ, ಸುಪ್ರಸನ್ನವಾಗಿ. ಆ ಮಹಾನುಭಾವರ ಗಾಯತ್ರಿ ಪಠಿಸುತ್ತ ಸಾಗಿತ್ತು. ದಾದಲ್ಯಾ ಚೇತನಾಸ್ವರೂಪಿಯಾಗಿ ಮಾತಾಡುತ್ತಿದ್ದ. ಸಾಹೇಬರು ಶಿಲಾಪ್ರತಿಮೆಯಂತೆ ಪ್ರತಿಷ್ಠಿತ ಶ್ರೋತಾ ಆಗಿದ್ದರು. ಒಂದು ಜೀವ ವೈಭವ-ಸಂಪನ್ನ-ಮಹೋನ್ನತರ

ದರ್ಶನಮಾಡಿಸುತ್ತಿತ್ತು. ಇನ್ನೊಂದು ಜೀವ ಮೂಕ-ವಿಸ್ಮಿತವಾಗಿ, ಭಕ್ತಿಭಾವ ಪುಲಕಿತವಾಗಿ ಆ ದೃಶ್ಯ-ದರ್ಶನರತವಾಗಿತ್ತು:

"ತೀರ್ಥೀ ಕುರ್ವಂತಿ ತೀರ್ಥಾನಿ ಸುಕರ್ಮೀ ಕುರ್ವಂತಿ ಕರ್ಮಾಣಿ
ಸಚ್ಛಾಸ್ತ್ರೀ ಕುರ್ವಂತಿ ಶಾಸ್ತ್ರಾಣಿ ॥ ತನ್ಮಯಾಃ ॥
ಮೋದಂತೇ ಪಿತರೋ ನೃತ್ಯಂತಿ ದೇವತಾಃ ಸನಾಥಾ ಚೇಯಂ
ಭೂರ್ಭವತಿ ॥

ದಾದಲ್ಯಾನ ಅಖಂಡ ಭಕ್ತಿಪಿಂಡ ಪಂತಕುಟುಂಬದ ದಿವ್ಯ ಕಥೆಯನ್ನು 'ಮೋದಂತೇ ಪಿತರೋ' ಧರ್ತಿಯಲ್ಲಿ ನಡೆಸಿತು. ಅಖಂಡ ಒಂದು ತಾಸು ಪಾರಾಯಣ ನಡೆದು ದಾದಲ್ಯಾನ ಕತೆ ಮುಗಿಯಿತು. ದಾದಲ್ಯಾ ಕತೆಯನ್ನು ಹೇಳಿ ಮುಗಿಸಿ, ಆ ಸ್ವರ್ಗದಿಂದ ಹೊಟೇಲಿನ ಲೌಕಿಕಲೋಕಕ್ಕೆ ತಾನೂ ಇಳಿದ. ಇನ್ನೂ ಆ ದಿವ್ಯ ಸೃಷ್ಟಿಯಲ್ಲಿ ಬೇಭಾನರಾದ ಸಾಹೇಬರನ್ನೂ ಇಳಿಸಿದ. ಸಾಹೇಬರನ್ನ ಗೋರಿಗೊಳಿಸಬೇಕೆಂದು ದಾವು ಮಾಡಿದ ಶ್ಯಾಮರಾಯ ತನ್ನ ಕುಳಿಯನ್ನು ತೋಡಿ ಮೃತ್ಯುಪತ್ರ ಒಪ್ಪಿಸಿದ ವಿವರ ಹೇಳಿ ಹೋದ ಸಂಗತಿಯನ್ನು ನಿವೇದಿಸಿದ. ಶ್ಯಾಮರಾಯ ತನ್ನ ದೋಸ್ತರಿಗೆ ಬರೆದ ಪತ್ರವನ್ನು ಕಿಸೆಯಿಂದ ತೆಗೆದು ಸಾಹೇಬರ ಕೈಗೆ ಕೊಟ್ಟ. ಅದನ್ನು ಓದುತ್ತ ಓದುತ್ತ ಅಚಾನಕವಾಗಿ ಸಾಹೇಬರ ಕಣ್ಣಿನಿಂದ ನೀರು ತೊಟ್ಟಿಕ್ಕತೊಡಗಿತು. ಪತ್ರಕ್ಕೆ ಸಾಹೇಬರು ಅಂತ್ಯತರ್ಪಣ ಹಿಡಿದಂತಾಗಿತ್ತು. ಸಾಹೇಬರು ಪತ್ರವಾಚನ ಮುಗಿಸಿ, ಮಾತಾಡದೆ – ಮೌನವಾಗಿ ಕರುಣಾರಸಪೂರ್ಣವಾಗಿ ನನ್ನನ್ನು ನೋಡಿದರು: "ದಾದಲ್ಯಾ, ನಿನ್ನ ಋಣವನ್ನು ನಾನು ತೀರಿಸಲಾರೆ" ಎಂದು ಹೇಳಬೇಕೆಂದು ಜೀವ ಮಿಡಿಯುತ್ತಿದ್ದರೂ ನಾಲಿಗೆ ಚಲತ್ ವಾಚಾ-ಶಕ್ತಿಯನ್ನು ಕಳೆದುಕೊಂಡಿರಬೇಕು. ಕಣ್ಣು ನಾಲಿಗೆಯ ನೆರವಿಗೆ ಧಾವಿಸಿ ಹೃದಯ-ಪರಿಚಯವನ್ನು ಅಖಂಡವಾಗಿ ಮಾಡಿಸುವ ಜವಾಬುದಾರಿ ವಹಿಸಿರಬೇಕು.

ಎಲ್ಲಿಂದಲೋ ಆರು ಬಾರಿಸಿದ – ಗಡಿಯಾರದ ಘಂಟಾನಾದ ಕೇಳಿಬಂತು. ನನಗೆ ಏಳು ಗಂಟೆಗೆ ಶೇಡಜಿಯ ಆಮಂತ್ರಣವಿತ್ತು. ಅದರ ನೆನಪು ಬಂದು —

"ಸಾಹೇಬರs, ನಾ ಏಳಕ್ಕ, ಶೇಡಜೀಗೆ ಬರತೀನ್ಯಂತ ತಿಳಿಸೀನಿ. ಅಂವಗ ಈ ಪತ್ರಾ ತೋರಸ್ತೀನ್ಯಂತ ಮಾತು ಕೊಟ್ಟೇನಿ. ಅವನಿಂದ ಇನಾ ನಮಗ ರಗsಡ ಮದತ ಆಗಬೇಕಾಗೇದ. ನಾ ಅಷ್ಟು ಅವನ ಕಡೇ ಹೋಗಿ ಬರತೀನಿ. ಅಲ್ಲೀ

ಕೆಲಸ ಲಗೂ ಬಗೀಪರದರ ವಿಶ್ವಾಸನ್ನ ಕರಕೊಂಡೇ ಬರತೀನಿ. ತಡಾ ಆಗತದ ಅಂತ ಅನಿಸಿದರ, ನಾಳೆ ಮುಂಜಾನೆ ಎದ್ದ ಕೂಡಲೇ ಬರತೀನಿ"
ಎಂದು ಹೇಳಿದೆ.

"ದಾದಲ್ಯಾ, ನನಗೂ ಇಲ್ಲೆ 'ಲೋನ್ಲಿ' ಅನಸ್ತದ. ಈಗೇ ವಿಶ್ವಾಸನ ಕಡೇ ಹೊರಟಬಿಡೂಣು. ನಾ ಅಲ್ಲೇ ಕೂತಿರತೀನಿ. ನೀ ಶೇಡಜೀ ಕಡೇ ಹೋಗಿ ಬಂದ ಬಿಡು. ಪತ್ರಾ ಮಾತ್ರ ಶೇಡಜೀಗೆ ಕೊಡಬ್ಯಾಡಾ. ಅಂವಾ ತನ್ನ 'ಪರ್ಸನಲ್ ಓಜ್' ಸಾಧಿಸಿಗೋಬಾರದು...I have no grudge against anybody...ಯಾರಿಗೂ ಅನ್ಯಾಯ ಆದದ್ದು ನನಗ ಖಪ್ಪಸಾಂಗಿಲ್ಲಾ. ನಮ್ಮ ನಮ್ಮ 'defects'—'drawbacks'—'differences' ಏನಾದರೂ ಇದ್ದರs ಅವು ನಮ್ಮಲ್ಲೇ ಇರಲಿ. ಆದರ ಗೈರಫಾಯದೇ ಬ್ಯಾರೇದವರು ತಗೊಂಬೂದು ಬ್ಯಾಡಾ. ತಿಳೀತೇನು?"

"ಅದರ ಕಾಳಜೀ ಬಿಟ್ಟು ನಿರ್ಧಾಸ್ತ ಇರ್ರಿ. ಈಗ ವಿಶ್ವಾಸನ ಕಡೇ ಹೋಗಿ, ನಿಮ್ಮನ್ನ ಬಿಟ್ಟು, ನಾ ಶೇಡಜೀ ಕಡೇ ಹೋಗೂದಂದರ ಭಾಳ ತಡಾ ಆಗತದ. ನಮ್ಮದು-ನಿಮ್ಮದು 'ಇಂಡಿಯನ್ ಟೈಮಿಂಗ್ಸ್'. ಹ್ಯಾಂಗೂ ನಡೀತದ. ಮುಂಬೈ ಮಂದಿಗೆ 'ಟೈಮ್ ಸೆನ್ಸ್' ಭಾಳಾ. ಶೇಡಜೀ ಕಡೇ ನನಗ ಊಟದ ಔತಣನs ಅದs. ಅಂವಾ ಹಾದೀ ಕಾಯೂದು ಠೀಕಲ್ಲಾ. ವಿಶ್ವಾಸಗ ಫೋನ್ ಮಾಡಿ, ನಾವು ಬರೂದನ್ನ ತಿಳಿಸಿ ಇಡತೀನಿ. ನೀವೂ ಊಟಾ ಬಗೀಹರಿಸಿ ಕೂತಿರ್ರಿ. ನಿವಾಂತವಾಗಿ ಕೂತು, ಮಾತಾಡಲಿಕ್ಕೆ ಎಲ್ಲಾರಿಗೂ ಠೀಕಾ."

"ಹಾಂಗs ಮಾಡ ದಾದಲ್ಯಾ"
ಸಾಹೇಬರು ಒಪ್ಪಿಗೆ ಕೊಟ್ಟರು.

ಅವರ ಕೈಯೊಳಗಿಂದ ಪಾರುಬಿದ್ದು ನಾನು ಶೇಡಜಿಯ ಮನೆಗೆ ಹೊರಟೆ.

ಏಳಕ್ಕೆ ಐದು ನಿಮಿಷವಿದ್ದಾಗ ನಾನು ಶೇಡಜಿಯ ಮನೆಯ ಬಾಗಿಲ ಮುಂದಿದ್ದೆ.

ಶೇಡಜಿಯ ಹೆಂಡತಿ, ಹುಡುಗರು ತಯ್ಯಬ್ಜೀ ಅವರ ಬುಲಾವಣೆ ಬಂದಿತ್ತೆಂದು ಅವರಲ್ಲಿಗೆ ಹೋಗಿದ್ದರು. ಹೋದವರು ಊಟ-ಉಡಿಗೆ ಬಗೆಹರಿಸಿಕೊಂಡೇ ಬರಲಿದ್ದರು. ಅದನ್ನು ಅರಿಯದೆ ನನಗೆ ಊಟದ ಆಮಂತ್ರಣ ಕೊಟ್ಟ ಶೇಡಜೀ ನನ್ನ ದಾರಿ ಕಾಯುತ್ತ ಕುಳಿತಿದ್ದ. ಐದು-ಹತ್ತು ನಿಮಿಷದ ಅವಧಿಯಲ್ಲಿ ನಾವೂ ಊಟಕ್ಕೆ ಕುಳಿತೆವು. ಊಟ ಮಾಡುತ್ತ, ಶೇಡಜೀ ಪತ್ರದ ಪ್ರಸ್ತಾಪ

ಮಾಡಿದ. ಮತ್ತೆ ನನಗೆ ಸಾದ್ಯಂತ ಕತೆಯನ್ನು ವಿವರಿಸಬೇಕಾಯಿತು. ಪತ್ರದ ಗುಪಿತವನ್ನು ಬಿಚ್ಚಿದಾಗ – ಅದರ ಪ್ರದರ್ಶನವನ್ನು ಸಿ.ಈ. ಅವರ ಮುಂದೆ ಮಾಡುವ ಅಗತ್ಯ ಉಳಿಯಲಿಲ್ಲವೆಂದು ವಿನವಿಸಬೇಕಾಯಿತು.

"ಶೇಡಜೀ, 'U.S. in a fix' ಅಂತ ನೀವೇ ಹೇಳಿದಿರಿ. ಮತ್ತ ತ್ಯಾಪೀ ಬಾಗವಾನ ಅವರು 'ರಿಟನ್ ಸ್ಟೇಟ್‌ಮೆಂಟ್' ಕೊಟ್ಟೇವಂತೂ ಹೇಳಿದರು. ಅದು ತಮಗೂ ಗೊತ್ತದ ಅಂತ. ಯು.ಎಸ್. ಹ್ಯಾಂಗೂ ಹಣ್ಣ ಆಗ್ಯಾನ. 'ಕೇಸ್ ರಿಕಾರ್ಡ್' ಮಾಡೂದಂತ ನಿಮಗ ಹೇಳ್ಯಾನಂತ. ನೀವು ಯು.ಎಸ್. ಮತ್ತ ಎಸ್. ಜಿ. ಪಂತ ಮೂರೂ ಮಂದಿ ಕೂಡೇ ಈ ನಿರ್ಣಯಕ್ಕ ಬಂದ ಸುದ್ದೀ ಖುದ್ದ ಪಂತರೇ ಬಂದು ಹೇಳಿ ಹೋದರು. ಈ ಪತ್ರದ ಉಲಗಡಾ ಮಾಡ ಬೇಕಂದಿದ್ದರ ನನಗ ವ್ಯಾಳ್ಯಾ ಹಿಡೀತಿದ್ದಿಲ್ಲಾ. ಯು.ಎಸ್.ಗ ನೀರ ಹಚ್ಚಿ ಹಳೀ ಮಾತು ಆಗತಿತ್ತು. ಆದರ ಒಂದು 'ಫ್ಯಾಮಿಲಿ ಪ್ರಸ್ಟಿಜ್'ಕ್ಕ ಧಕ್ಕಿ ಬರಬಾರದಂತ ನಾ ದಮ್ಮ ತಿಂದೆ. ನನ್ನ 'ಫೀಲಿಂಗ್ಸ್'ದ ಅರ್ಥ ನಿಮಗ ಆಗಿರಲಿಕ್ಕೆ ಸಾಕು. ನಾಳೆ ಈ ಪತ್ರಾ, ಸಿ.ಈ. ದೃಷ್ಟಿಗೆ ಬಿದ್ದರ – ಅದರ 'ರಿಪರ್ಕಶನ್ಸ್' ಎಷ್ಟು 'ಫಾರ್ ರೀಚಿಂಗ್' ಅವs ಅನೂದನ್ನ ನಾ ಹೇಳಬೇಕಾಗಿಲ್ಲಾ... without much ado we have won...ಅದಕ್ಕ ಈ ಪತ್ರಾ ಯಾರ ಕಣ್ಣಿಗೂ ಬೀಳೂದು ಬ್ಯಾಡಾ. ಅದರ ಅವತಾರಕಾರ್ಯ ಮುಗದsದ."

"ಯು.ಎಸ್.ನ್ನ ಖತಮ್ ಮಾಡೇ ಅದೂ ತನ್ನ ಅವತಾರ ಮುಗಿಸ್ತು. ಇಂದ ನಾನೇ ಮೊದಲ ಅವನ ಮುಂದ ಇದರ ಸುದ್ದೀ ತಗದೆ. ಇಲ್ಲದಿದ್ದರ ಅಂವಾ ಏನು 'ಏನ್‌ಕ್ವಾಯರಿ' ಕೆಲಸಾ ಇಂದ ಸುರೂ ಮಾಡಸದೇ ಬಿಡತಿದ್ದಿಲ್ಲಾ. ಸೋಮ ವಾರಕ್ಕ 'ಏನ್‌ಕ್ವಾಯರಿ' ಮುಂದ ಹಾಕೂಣಂತ ಒಂದ 'ನೋಟ್' ಇಟ್ಟಿದ್ದೆ. ಅದರ ಪತ್ತೇ ಯು.ಎಸ್.ಗ ಆಗಲೇ ಇಲ್ಲಾ. ಸಿ.ಈ.ಗೂ ಇಂದ ಬ್ಯಾರೇ 'ಏಂಗೇಜ್‌ಮೆಂಟ್' ಇದ್ದೂ. ಅದೂ ನಿಮಗ 'ಫೆವ್ವರೆಬಲ್' ಆತೂ. ಸೋಮವಾರ ಅನೂತ್ಲೇ ಯು.ಎಸ್. ಕಕ್ಕಾವಿಕ್ಕೀ ಆದಾ. ನಾನೂ 'ಒಪೊರ್ಚುನಿಟಿ' ನೋಡತಿದ್ದೆ. ಸಿ.ಈ. ಸಹೀ ಮಾಡಲಿಕ್ಕೆ ಕೆಳಗ ಮಾರಿ ಹಾಕಿದಾ. ಸನ್ನೀ ಮಾಡಿ ಯು.ಎಸ್.ನ್ನ ಹೊರಗ ಕರಕೊಂಡು ಬಂದು – ಈ ಪತ್ರದ ಸುದ್ದೀ ಅಂವಗ ತಿಳಿಸಿದೆ. ಅಷ್ಟರಾಗೇ ನಿಮ್ಮ ಪಂತನೂ ಬಂದಾ. ಇಬ್ಬರೂ ಕೂಡಿ, ಯು.ಎಸ್.ನ ಖೋಲ್ಯಾಗ ಹೋದವರು, ಸಿ.ಈ. ಆಫೀಸು ಬಿಟ್ಟು ಹೋದರೂ ತಿರಿಗಿ ಬರಲಿಲ್ಲಾ. ನನಗ ಈ

ಪತ್ರದ ಸುದ್ದಿ ಗೊತ್ತ ಆದದ್ದು ಅವಗ ಭಾರೀ ಹೊಡತ ಕೊಟ್ಟಾಂಗ ಆತು. ಇನ್ನ ಅಂವಾ ನನಗ ಅಂಜಿಕೊಂಡನೇ ಇರತಾನ. ಮಾಸ್ತರಜೀ, ನೀ ಇಷ್ಟೆಲ್ಲಾ ಛಾನಗಡೀ ಯಾವಾಗ ಮಾಡತೀ? ಮ್ಯಾಲ ಇಲ್ಲೀ ತನಕಾ 'ಫಸ್ಟ್‌ಕ್ಲಾಸ್' ಬಿಟ್ಟಿಲ್ಲಾ. ಕಮಾಲ್ ಆದನಾsss ಮಾಸ್ತರಜೀ ನೀವು.!"

ಊಟ ಮುಗಿಸಿ ಸಟ್ಟನೆ ಎದ್ದುಬಿಡುವುದು ಸರಿಯಲ್ಲವೆಂದು ಶೇಡಜಿಯು ಕೂಡ ಇಲ್ಲದ ಅಳವಳ್ಳ ಮಾತು ಮಾತಾಡುತ್ತ, ಅವನ ಬೀಬೀ-ಬಚ್ಚಾದ ಕುಶಲ ಕೇಳುತ್ತ, ಅರ್ಧಪಾಕೀಟು ಸಿಗರೇಟು ಧ್ವಂಸಮಾಡಿ. ನಾಳೆ ಸಾಧ್ಯಮಾಡಿಕೊಂಡು ಇಲ್ಲದಿದ್ದರೆ ಸೋಮವಾರ ಸೇಕ್ರುಟರೀಪಟನಲ್ಲಿ ಕಾಣುವೆನೆಂದು ತಿಳಿಸಿ. ಅವನ ನಿರೋಪ ತೆಗೆದುಕೊಂಡೆ.

ಟ್ರಾಮಿನಲ್ಲಿ ಪ್ರಯಾಣಿಸಿದ್ದರೆ ಬಾರಾ ಆದರೂ ವಿಶ್ವಾಸನ ದರ್ಶನ ಯೋಗ ಬರುತ್ತಿದ್ದಿಲ್ಲ. ಇಲ್ಲೇ ಎಂಟೂವರೆಯಾಗಿತ್ತು. ವಿಶ್ಯಾನಲ್ಲಿ ಕಥನಕ್ಕೆ ಕೂತರೆ ಬೆಳಗಾಗುತ್ತಿತ್ತು. ಸಾಹೇಬರ ಕಡೆಗೆ ಹೋಗುವ ಬಗ್ಗೆ ವಿಚಾರ ನಡೆಸಿದೆ. ತಡ ವಾದರೆ ಮುಂಜಾನೆ ಬರುತ್ತೇನೆಂದು ತಿಳಿಸಿದ್ದೆ. ಅದೇ ಸರಿ ಕಾಣತೊಡಗಿತು. ಈ ಎಲ್ಲ ಗಡಿಬಿಡಿಯಲ್ಲಿ ನಾನು ಬಸವಂತಿಯನ್ನು ಅಖಂಡವಾಗಿ ಮರೆತಿದ್ದೆ. ಶ್ಯಾಮ ರಾಯ ಇಂದೇ – ಈ ಹೊತ್ತಿಗಾಗಲೇ ಮುಂಬೈ ಬಿಡುವ – ಬಿಟ್ಟ ಸಂಭವವಿತ್ತು. ದುರ್ವಾಸ-ದುರ್ಯೋಧನ-ಧರ್ತಿಯಲ್ಲಿ ಅವಳನ್ನು ಗಾತಾಯಿಸಲಿದ್ದ. ಬಸವಂತಿಯು ಖಂಬೀರತೆಯ ಬಗ್ಗೆ ನನಗೆ ಶಂಕೆ ಇರಲಿಲ್ಲ. ಅವಳು ಶ್ಯಾಮರಾಯನನ್ನು ದಾದು ಮಾಡುತ್ತಿರಲಿಲ್ಲ. ಅವಳು ಶ್ಯಾಮರಾಯನಂತೆ ಏಕದಮ್ ಉತಾವಿಳವಾಗುತ್ತಿ ದ್ದಿಲ್ಲ. ಅವನು ಕೊಡುವ ಚಿತ್ರಹಿಂಸೆಯನ್ನು ಧರಿತ್ರಿಯಂತೆ ಸಹಿಸುತ್ತಿದ್ದಳು. ನಮತೇ ಧೋರಣ ಸ್ವೀಕರಿಸುತ್ತಿದ್ದಳು. ದಿನ ಕಾಯ್ದು. ಸಂಧಿ ಸಾಧಿಸಿ, ಶ್ಯಾಮರಾಯನ ಮೇಲೆ ಗರುಡನಂತೆ ಎರಗುತ್ತಿದ್ದಳು. ಅಲ್ಲಿಯ ವರೆಗೆ ಶ್ಯಾಮರಾಯ ತನ್ನ ವಿಕಟ ಲೀಲೆ – ರಾಕ್ಷಸೀವೃತ್ತಿ ತೋರಿಸದಿರುತ್ತಿರಲಿಲ್ಲ. ಆ ಕಿಚ್ಚು ಈಗಾಗಲೇ ಧಗಧಗಿಸ ತೊಡಗಿತ್ತು. ಬಸವಂತಿ ಅದರ ಮೇಲೆ ನೀರೆರೆಯುವ ಸಂಭವ ಬಹಳ ಕಡಿಮೆ ಯಾಗಿದ್ದವು. ಬದಲಿಗೆ ಎಣ್ಣೆಯನ್ನೇ ಸುಯ್ಯುಬಹುದಾಗಿತ್ತು. ಕಿಚ್ಚು ನೂರು ನಾಲಿಗೆಯಲ್ಲಿ ತನ್ನ ಶಿಖೆಯನ್ನು ಚಾಚುತ್ತಿತ್ತು. ಅಳವಿನಲ್ಲಿ ಬಂದವರನ್ನು ರಾಚು ತ್ತಿತ್ತು. ಬಸವಂತಿಗೂ ಇವರ ಅಸಹ್ಯ ಧಗೆ ತಾಕದೆ ಅದರಿಂದ ಅವಳು ಹುರಪಳಿ ಸದೆ ಹೋಗುತ್ತಿರಲಿಲ್ಲ.

ಮುಂಬೈಯಲ್ಲಿಯ ಪರಿಸ್ಥಿತಿಯನ್ನು ತುರ್ತಾಗಿ ನಾನು ಫೋನ್ ಮೂಲಕ ಸುರೇಶನಿಗೆ ತಿಳಿಸಬೇಕಾಗಿತ್ತು. ಶ್ಯಾಮರಾಯನ ಅಂತಿಮ ನಿರ್ಣಯ ತಿಳಿದದ್ದು ಐದರ ಹೊತ್ತಿಗೆ. ಅವನ ಆಫೀಸಿನ ವಿಳಾಸಕ್ಕೆ ಫೋನ್ ಮಾಡಿದ್ದರೂ ಅವನು ಸಿಗುವಂತೆ ಇತ್ತು. ಅವನಿಗೆ ಇಲ್ಲಿಯ ವರದಿ ಒಪ್ಪಿಸಿ, ಬಸವಂತಿಯನ್ನು ಜಪ್ತಿಸೆಂದು ಹೇಳಲು, ಅದರ ಭಾರವನ್ನು ಅವನಿಗೆ ವಹಿಸಲು ನೆಟ್ಟಗಾಗುತ್ತಿತ್ತು. ಈಗ ಎಂಟೂವರೆಯಾಗಿ ಹೋಗಿದೆ. ಎಲ್ಲಿಗೆ ಫೋನ್ ಮಾಡುವದು? ಸುರೇಶ ಸಿಕ್ಕರೆ ನೆಟ್ಟಗೆ. ಸಿಗದಿದ್ದರೆ......? ಬಸವಂತಿಯ ಕ್ಷೇಮಭಾರವನ್ನು ಕೇವಲ ಅವಳ ಮೇಲೆ – ದೇವರ ಮೇಲೆ ಬಿಡದೆ ನನಗೆ ಈಗ ಅನ್ಯ ದಾರಿಯೇ ಉಳಿಯಲಿಲ್ಲ.

ತನ್ನ ನಿರ್ಣಯಕ್ಕೆ, ದಾದಲ್ಯಾ ತಾನೇ ಅಸ್ತು ಹೇಳಿದ.

ಶೇಡಜಿಯ ಮನೆಯಿಂದ ಐದು ಮಿನೀಟಿನ ದಾರಿ ಕಡಿದು ಬಂದಿರಬೇಕು. ಶೀಖ-ಸಾರಥಿಯ ಒಂದು ಟ್ಯಾಕ್ಸೀ ಅಲ್ಲಿ ನಿಂತದ್ದು ಕಂಡಿತು. ಅವನಿಗೂ ಗಿರಾಕಿ ಇದ್ದಂತೆ ಕಾಣಲಿಲ್ಲ.

"ಜೀ. ಎಮ್. ಕಾಲೇಜ, ಸರದಾರ್"

ಎಂದೆ.

"ಬೈಠೋಜಿ, ಬೈಠೋಜಿ"

ಎಂದು ಆದಬಿಯಿಂದ ಟ್ಯಾಕ್ಸೀ ಬಾಗಿಲು ತೆರೆದು ನನ್ನನ್ನು ಸ್ವಾಗತಿಸಿದ. ನಾನು ಕುಳಿತ ಕೂಡಲೇ ಬಾಗಿಲು ಮುಚ್ಚಿ, ತಾನೂ ರಥಿಕನಾಗುತ್ತ, ಕೈಗಡಿಯಾರ ನೋಡಿ

"ಆಠ ಪಚ್ಚೇ ಚಾಳೀಸ ಸಾಬ್"

ಎಂದು ಹೇಳಿ ಗಾಡಿಯನ್ನು ಬಿಟ್ಟ.

ಇಂಥ ಅವೇಳೆಯಲ್ಲಿ ಹೋಗಿ ನಾನು ವಿಶ್ವಾಸನನ್ನು ಗಾಠಾಯಿಸುತ್ತಿದ್ದೆ. ವಿಶ್ವಾ ಮೂಲೆಯಲ್ಲಿಯ ಟೇಬಲ್ಲ ಬಳಿ ಮಂಡಿಸಿ, ಟೇಬಲ್-ಲ್ಯಾಂಪಿನ ಬೆಳಕಿನಲ್ಲಿ, ಯಾವುದೋ ಬೃಹದ್-ಗ್ರಂಥದ ಪಾರಾಯಣ ನಡೆಸಿರಬೇಕು. ಬಾಗಿಲ ಮೇಲಿನ ಬೆರಳ ಬಡಿತದಿಂದ ಧ್ಯಾನ-ಮನನ-ಭಗ್ನನಾಗಿ, ಚಿರಡಿಗೆ ಬಂದು,

"yes, wait please"

ಎಂದು ಬಾಗಿಲು ತೆರೆದು ನನ್ನನ್ನು ನೋಡಿದಾಗ, ನನ್ನ ಅಚಾನಕ, ಅವೇಳೆಯ ಆಗಮನದಿಂದ ಚಿತ್‌ಪಟ್ಟನಾಗಬಹುದು.

"ದಾದಲ್ಯಾ, ಜೀತಾಬ್ರಹ್ಮೇತಿ ಗಂಟಬಿದ್ದಾಂಗ ಆಗೇದ. ಇಂಥಾ ಅಪ

ರಾತ್ರ್ಯಾಗ ಯಾಕ ಬಂದು ಅವುರಿದೀ? ಬಾ ಮಗನs. ಮತ್ತೇನ ಕಂತ್ರಾಟ ಎಬ್ಬಿಸಿಗೊಂಡ ಬಂದೀ? ರಾತ್ರೀ ಮುಕ್ಕಾಂ ಇಲ್ಲೇನೋ, ಮತ್ತೇನು ಅವಧೂತರ ಸ್ವಾರೀ ಮುಂದಿನ ಠಿಕಾಣಕ್ಕ ನಡಿಯೂದೋ?"

ಎಂದು ಕೇಳದೆ ಬಿಡುವದಿಲ್ಲ. ಅವನ ಮಾತು ಇನ್ನೂ ಮುಗಿದಿರುವದಿಲ್ಲ. ದಾದಲ್ಯಾ ಏಚು-ಪೇಚು ಏನೂ ಇಲ್ಲದೆ, ಎರಡೂ ತೋಳು ಚಾಚಿ, ವಿಶ್ಯಾನನ್ನು ಬಾಚಿ ತನ್ನ ತೆಕ್ಕೆಯಲ್ಲಿ ನುಗ್ಗುನುರಿ ಮಾಡದೆ ಇರುವದಿಲ್ಲ. ದಾದಲ್ಯಾನ ಆಲಿಂಗನದಿಂದ ಕಸಿವಿಸಿಬಿಡುತ್ತ ನನ್ನ ವಿಶ್ಯಾ, ದಾದಲ್ಯಾನನ್ನು ಅನಾಮತ್ತಾಗಿ ಎತ್ತಿ ಪಲ್ಲಂಗದ ಮೇಲೆ ಕುಕ್ಕರಬಡಿದು, ಬದಿಯಲ್ಲಿ ಕುಳಿತು ನನ್ನ ತೊಡೆಯನ್ನು ಬಲವಾಗಿ ಬಡಿದು,

"ಬೋಲೋ ಯ್ಯಾರ್ ಕ್ಯಾ ಬ್ಯಾತ ಹೈ. ಜಲ್ದೀ ಕರೋ"

ಎಂದು ಖುಷಿಯಲ್ಲಿ ಬಂದು ಹೇಳದಿರುತ್ತಿರಲಿಲ್ಲ.

"ಅರೇ ಭಯ್ಯಾ, ಗಡಬಡ-ಬಿಡಬ್ಯಡ ಕುಚ್ಛ ಮಾಲೂಮ್ ನಹೀ ಹಮಕೂ. ಪಹಲೇ ಚಾಯ್ ಬನಾವೂಂಗಾ. ಏ ದೇಖೋ, ಏಕ ಟಿನ್ ಸಿಗರೇಟ್, ದೋ ಬಾರ್ ಚಾಯ್. ಬಾರಾ ಬಜೇ ತಕ್ ಕಿಸ್ಕೂ ಯಾದ್ ನಹೀ ಕಿಸೀಕೋ ದರ್ದ ನಹೀ. ದೋ ಆದಮೀಕಾ ಬಾತ ಚಿತ್ತಮೇ ರಾತ ಉಡಾಕರ್ ಸುಬಹ ಹುಯೇಂಗಾ."

"ವಾಃ, ವಾಃ, ವಾಃ. ದಾದಲ್ಯಾ, ಏನ ಹಿಂದೀ ಮಗನs. ಮೈಥಿಲೀಶರಣ ಗುಪ್ತಾ, ಚತುರ್ವೇದಿ, ಪ್ರೇಮಚಂದಾ ಗಜಮ್ ನಿಂತರು ಮಗನs, ನಿನ್ನ ಖಡೀ ಬೋಲೀ ಮುಂದ. ರಾತ್ರೀ, ಬೆಳಗ ಆಗೂವಂಥಾದ್ದೇನು ಸುದ್ದೀ ತಂದಿ ಹೇಳ ಮಗನs? ಮೊನ್ನೆರ ಬಂದಿದ್ದಿ. ಎರಡ ದಿನದಾಗ ಯಾವ ರಾಜ್ಯಾನ ತೆಳಗ-ಮ್ಯಾಲ ಮಾಡಿದಿ?"

ದಾದಲ್ಯಾನ ಮೂಕ-ಭಾವಯಂತ್ರ, ತನ್ನ ಸುತ್ತು, ವಿಶ್ಯಾ-ದಾದಲ್ಯಾನ ಸಂದರ್ಶನದ ಕಲ್ಪನಾ-ರಮ್ಯ-ಚಿತ್ರ ಹೆಣೆಯುತ್ತ ಸಾಗೇ ಇತ್ತು. ಯಾವ ಓಣಿ, ಯಾವ ಬೀದಿ, ಯಾವ ರಸ್ತೇ ಸರಿದು ಮರೆಯಾದ ಭಾನ ಅವನಿಗಿರಲಿಲ್ಲ. ಜೀ. ಎಮ್. ಕಾಲೇಜಿನ ಬಾಗಿಲಲ್ಲಿ ಟ್ಯಾಕ್ಸೀ ನಿಲ್ಲಿಸಿ, ಸರದಾರ್ —

"ಜೀ. ಎಮ್. ಕಾಲೇಜ, ಸ್ಯಾಬ್"

ಎಂದು ನನಗೆ ಸೂಚಿಸಿದಾಗಲೇ ಅರಿವು ಮೂಡಿದ್ದು. ಅವನ ಬಾಡಿಗೆ ಕೊಟ್ಟು. ವೇಗವಾಗಿ ಹಾಸ್ಟೆಲ್ಲಿನ ಕಡೆಗೆ ಧಾವಿಸಿದೆ. ಮೊದಲನೇ ಮಜಲಿನ ಮೆಟ್ಟಲು

ಗಳನ್ನು ಮೂರರ ಲೆಕ್ಕದಿಂದ ನೆಗೆಯುತ್ತ, ಎರಡನೇ ಮಜಲಿನ ಕರ್ವ್ಗೆ ಹೊರಳಿ ಆ ಮಜಲಿನ ತೀರ ಕೊನೆಯ ಮೂಲೆಯಲ್ಲಿದ್ದ ವಿಶ್ವಾಸ ಕೋಣೆಗೆ, ಓಡುವ ಬೇತಿನಿಂದಲೇ ಗತಿ ಹೆಚ್ಚಿಸಿದೆ. ನನ್ನ ತಂದ್ರಿಯಲ್ಲಿ ನಾನೇ ದಂಗಾಗಿ, ಅವನತ ಮುಖನಾಗಿ ಧಾವಿಸುತ್ತಿದ್ದ ನನ್ನನ್ನು ಯಾರೋ ಅಚಾನಕವಾಗಿ ಅನಪೇಕ್ಷಿತವಾಗಿ ಢಡಾರನೇ ಢಿಕ್ಕಿಹೊಡೆದು ಹಾಯ್ದರು. ಮುಖವೆತ್ತಿ ನೋಡಿದೆ:

ನನ್ನ ವಿಶ್ಯಾ – ನನ್ನ ವಿಶ್ಯಾ.

ವಿಶ್ಯಾ ನನ್ನನ್ನು ದೂರದಿಂದ ನೋಡಿರಬೇಕು. ಮುದ್ದಾಂ ಎದುರು ಬಂದು ಢಿಕ್ಕಿಹೊಡೆದಿರಬೇಕು.

ಅವನ ನಗೆ – ಅವನ ಆ ಉಲ್ಲಸಿತ ನಗೆ, ಅವನ ಡಾವಿನ ಅರ್ಥ ಸೂಚಿಸು ತ್ತಿತ್ತು. ಕೋಣೆಯಲ್ಲಿ ಅವನನ್ನು ಗಾಠಾಯಿಸಿ, ಚಿತ್‌ಪಟ್ ಮಾಡಬೇಕೆಂದು ಧೇನಿಸಿದ ದಾದಲ್ಯಾ, ಈಗ ತಾನೇ ಅಂಗಾತಾಗಿ ಅಪ್ರತಿಭನಾಗಿ ವಿಶ್ವಾಸನ ಮುಖ ವನ್ನು, ಮಾತಿಲ್ಲದೆ, ಮಿಕಿಮಿಕಿ ನೋಡುತ್ತ ನಿಂತ. ವಿಶ್ಯಾ, ಜೋರಾಗಿ ಹೆಗಲ ಮೇಲೆ ಎರಡೂ ಕೈ ಅಪ್ಪಳಿಸಿ ನನ್ನನ್ನು ಅಲಗದ್ ಅಲುಗಾಡಿಸುತ್ತ —

"ದಾದಲ್ಯಾ ಬರೇ ದಗಾ ಕೊಟ್ಟರ – ವಿಶ್ಯಾ ಎಂಥಾ ಧಕ್ಕಾ ಕೊಡತಾನ ಅನ್ನೂದು ತಿಳೀತಿಲ್ಲೋ? ಹೇಳದೇ ಕೇಳದೇ ಪುಣೇಕ್ಕ ಜಿಗಿದಿದ್ದಿ. ಹೇಳ ಮಗನs, ಯಾವಾಗ ತಿರಿಗಿ ಬಂದಿ? ಏನ ಭಾನಗಡೀ ತಂದೀದಿ ಮತ್ತ? ನಿನ್ನ ಪುಣೇ 'ಪ್ರೊಗ್ರ್ಯಾಮ್'ದ್ದು ಪತ್ತೇ ಆಗಿತ್ತು. ತುಳಸಿನ್ನ ಭೂಬಿಟ್ಟು ಓಡಿದ್ದಿ. ನಿನ್ನ ಡಾವಿನ ಸುದ್ದಿ ಎಲ್ಲಾ ತಿಳೀತು. ಬಸವಂತೀ ಭೆಟ್ಟಿ ಅಗಿತ್ತೇನು? ತಾಯೀ, ಕಾಕಾ ಏನಂತಾರ? ಸುರ್‍ಯಾನ್ನೇನು ಅಲ್ಲೇ ಚತುರ್ಭುಜನ್ನ ಮಾಡಿ ಬಂದ್ಯೋ, ಏನು ನಿನ್ನ ಕಕೂನ್ನ ಇಲ್ಲೇ ಕರಕೊಂಡು ಬಂದೀಯೋ? ನಡೀ ದಾದಲ್ಯಾ, ಮಸ್ತ ಎರಡ ಕಪ್ಪು ಚಹಾ ಹಾಕಿ ಬರೂಣು. ಇನ್ನ ನೀ ಬಂದಿ. ಮಲಗಿಗೊಟ್ಟರ ಕೇಳು. ಇಂದ ಮುಂಜಾನೇ ತುಳಸೀ ನಿರೋಪ ಬಂದಿತ್ತಂತ ಸಂಜೀಮುಂದ ಅಕೀ ಕಡೆ ಹೋಗಿದ್ದೆ. ದಾದಲ್ಯಾನ ಭಾನಗಡೀ ಬಯಲಾಯ್ತು."

"ಯಾಕ ಭಾರೀ ಖುಷ್ಯಾಗಿದ್ದಾನ ವಿಶ್ಯಾ ಅಂತs ಯೋಚನಾ ನಡಿಸಿದ್ದೆ. 'ನೋಡನಾs ಪದರs ರಾಜಾ, ನೋಡನಾs ಪದರ'ದ್ದು ಇನಾ ಧುಂದೀ ಇಳದಿಲ್ಲಂತ ಈಗ ಠಾಂವಿಕ್ಯಾತು. ಅರ್ಕ ಜೋರಲೇ ಅಟಕಾಸಿಧಾಂಗ ಕಾಣಸ್ತದ ವಿಶ್ಯಾ. ಖೋಲ್ಯಾಗ ಹಾಲ ಸಿಲ್ಲಕ ಇಲ್ಲೇನು? ಮತ್ತ ಆ ಇರಾಣೀ ಕಡೇ ಯಾಕ ಎಳದ

ಒಯ್ಯತೀ ನನ್ನs. ವಿಶ್ವಾ, ಇಪತ್ತನಾಲ್ಕ ತಾಸಾತು. ಕಾಲು ನೆಲಕ ಹತ್ತಿದ್ದರ ಆಣೆ. ಮತ್ತ ಈ ಪಾವಟಣಿಗೀ ಸರ್ಕಸ್ ಹಚ್ಚಿದ್ಯಾ ಮಾರಾಯಾ"

"ದಾದಲ್ಯಾ ಈಗ ಮಲಗಿ ಲಗೂನೇ ಏಳಬೇಕಂತ ಮಾಡಿದ್ದೆ. ಚಹಾ-ಗೀತಾದಿಂದ ಅಭ್ಯಾಸ ಸುರೂ ಆಗೂದು. ಖೋಲೀ ಒಳಗ ಹಾಲೂ ಮುಗದಿದ್ವು. ತರಲಿಕ್ಕ್ಯಂತನs ಹೊಂಟಿದ್ದೆ. ಎರಡಕ್ಕ ಎದ್ದರ ಅಪರಾತ್ರ್ಯಾಗ ಎಲ್ಲೆ ನನಗ ಹಾಲ ಸಿಗಬೇಕು? ಚಹಾ ಇಲ್ಲದೆ ಗಾಡೀ ಸಾಗೂದಿಲ್ಲಾ. ಈಗ ವೈಕುಂಠದ ಬಾತಮೀ ದಾರನ್ಹಾಂಗ ನಿನ್ನ ಆಗಮನ ಆಯ್ತು. ಇನ್ನ ಎರಡಕ್ಕ ಏಳೂದರ ಬದಲೀ ಎರಡಕ್ಕ ಮಲಗಿಕೊಂಡರ ಪುಣ್ಯಾ. ಚಹಾ ಕುಡದು ಬರೂಣು. ನಿದ್ದಿ ತಾನs ಹಾರತದ. ಏನೋ ಭಾರೀ ಬಾತಮೀನೂ ಇದ್ಧಾಂಗ ಕಾಣಸ್ತದ; ನಿ ಅಪರಾತ್ರ್ಯಾಗ ಬರಬೇಕಾದರ? ಪುಣೇದಿಂದ ಯಾವಾಗ ತಿರಿಗಿ ಬಂದಿ ದಾದಲ್ಯಾ?"

"ಇಂದ ಬಾರಾ ಅನೂದರಾಗ ಮತ್ತ ಹಜರನs ಆಗಿದ್ದೆ. ಪುಣೇದಾಗ ಮನೀಗೆ ಹೋಗೂದು ಸುದ್ದೇ ಆಗಲಿಲ್ಲಾ. ಬಸವಂತೀಯಲ್ಲೇ ಇಡೀ ರಾತ್ರೀ ಕಳೀತು. ಸುರ್ಯಾ-ಶಕೂ ಸ್ಟೇಶನ್‌ಮ್ಯಾಲs ಅಮರಿದರು. ಕಾಕಾ-ಸೋನಕ್ಕಾ ಠೀಕ ಇದ್ದಾರಂತ ಸುರ್ಯಾ ಹೇಳಿದಾ. ರಾಜಪ್ಪನೂ ಊರಿಂದ ಬಂದಾನಂತ. ಮತ್ತ ನಾಳೆ ನಾನು ಪುಣೇಕ್ಕ ಹೊಂಟೆ. ಅದನ್ನ ಹೇಳೂದರ ದಳಿಂದನs ಸಾಯಕೋತ ನಿನ್ನಲ್ಲಿಗೆ ಬಂದೆ."

ಇರಾಣಿಯಲ್ಲಿ ಚಹ ಕುಡಿದು ಮುಗಿಸಿದವರೇ ನಾವು ತಿರುಗಿ ಕೋಣೆಗೆ ಬಂದೆವು.

ಪುಣೆ-ಮುಂಬೈಯ ಸಾದ್ಯಂತ ಹಕೀಕತ್ತನ್ನು ನಾನು ವರದಿಮಾಡಿದೆ. ಸಾಹೇಬರು ಭೆಟ್ಟಿಗೆ ಉತಾವಿಳರಾಗಿ ಇನ್ನೂ ದಾರಿ ಕಾಯುತ್ತಾ ತೂಕಡಿಸುತ್ತ ಕುಳಿತಿರಬೇಕೆಂದು ತಿಳಿಸಿದೆ. ಶಾಂತಚಿತ್ತನಾಗಿ ಎಲ್ಲವನ್ನೂ ಕೇಳಿಕೊಂಡು, ವಿಶ್ವಾಸ ಹೇಳಿದ :

"ದಾದಲಾ ಈ ಪತ್ರದ ಸುದ್ದೀ ನನಗೂ ಪತ್ತೇ ಹಚ್ಚಿಗೊಟ್ಟಿದ್ದಿಲ್ಲಾ. ಇಂದ ಮುಂಜಾನೆ ಬಂದ ಕೂಡಲೇನರs ಹೇಳಿದ್ದೀ ಅಂದರ ಸುರ್ಯಾಗ ಫೋನ್ ಮಾಡಿ, ಬಸವಂತಿನ್ನ ನಮ್ಮ ಮನೀಗರೆ ಕರಕೊಂಡು ಹೋಗಲಿಕ್ಕೆ ತಿಳಸತಿದ್ದೆ. ನಾ ಹೇಳೀನಿ ಅಂದರ ಬಸವಂತಿ ನಾಕಾರಸತಿದ್ದಿಲ್ಲಾ. ಇನ್ನ ಕಠೀಣ ಅದ ದಾದಲ್ಯಾ. ದಾದಾ ಪುಣೇ ಮುಟ್ಟೂದು ಅಷ್ಟೇ ಪುರಸೊತ್ತು, ಆಕೀ ಜೀವಾ ಹಿಂಡಲಿಕ್ಕೆ ಸುರೂ

ಮಾಡತಾನ. ಈಗ ಹತ್ತ ಹೋಡೀತು. 'ಫೋನ್-ಕಾಲ್' ಬುಕ್ ಮಾಡಿದರೂ, ಸುರ್ಯಾಗ ಅದೂ ಮುಟ್ಟಲಿಕ್ಕೆ –ಅಂವಾ ಮನೀಯಿಂದ 'ಹೆಡ್-ಪೋಸ್ಟ್-ಆಫೀಸಿ'ಗೆ ಬರಲಿಕ್ಕೆ ಏನಿಲ್ಲಂದರೂ ತಾಸು-ದೀಡ ತಾಸಸರ್‍ತ ಹಿಡೀತದ. ರಾತ್ರೀ ವ್ಯಾಳ್ಯಾ ಆದsi. ಕದಾಚಿತ್ 'ಕನೆಕ್ಶನ್' ಲಗೂ ಸಿಕ್ಕರೂ ಸಿಕ್ಕೀತು. 'ಚ್ಯಾನ್ಸ್' ತಗೋಳೂಣು ದಾದಲ್ಯಾ."

"ತಗೊಂಬೂದೇ ಠೀಕಾ. ಯಾಕಂದರ ದಾದಾ ಪುಣೇ ಮುಟ್ಟೊದರೊಳಗೇ ಸುರ್ಯಾ ಬಂಗಲೇದಾಗ ಹೋಗಿ ನಿಂತರೂ ಸಾಕು. ಅವನ ಎದುರಿಗೆ ದಾದಾಗೇನೂ ಮಾಡೂದು ಶಕ್ಯ ಆಗೂದಿಲ್ಲಾ. ಅದಕಿಂತಾ 'ಸೇಫರ್' ಅಂದರ, ಬಸವಂತಿನ್ನ ನಿಮ್ಮ ಮನೀಗೇ ಕರಕೊಂಡು ಹೋಗೂದು. ಬಸವಂತಿ ನಿಮ್ಮಲ್ಲೆ ಹೋಗಿ ನಿಂತಳಂದರ, ದಾದಾಗ ದಿಕ್ಕನ್sa ತಪ್ಪಿಧಾಂಗ ಆಗತದ. ಆಕೀ ಝುಲ್ಲೂ ಬಿಡತsaದ. ನಿನ್ನ ಇರಾಣೀ ದೋಸ್ತನ ಅಂಗಡೀಗೇ ಹೋಗೂಣು. ಹ್ಯಾಂಗೂ ಮಗಾ ಬಾರಾದ ತನಕಾ ಸೋಣಾ ಝಾಡಿಸಿಗೋತ ಕೂತಿರತಾನ. 'ಫೋನ್-ಕಾಲ್'ನ ಚಾರ್ಜ ಕೊಟ್ಟು, ಮ್ಯಾಲ ನಾಕ ಸಿಂಗಲ್ ಚಹಾ ಕುಡೀತೇವು. ಆ ಮಗಂದೇನು ಲುಕ್ಸಾನ ಆಗಬೇಕಾಗೇದ ?"

ಕೋಣೆಯ ಬಾಗಿಲಿಗೆ ಬೀಗ ಜಡಿದು ಇಬ್ಬರೂ ಇರಾಣಿಯ ಹೊಟೇಲಿಗೆ ಬಂದು, ಸುರ್ಯಾನ ಹೆಸರಿಗೆ 'ಕಾಲ್-ಬುಕ್' ಮಾಡಿದೆವು. ವಿಶ್ಯಾ ಐದು ವರ್ಷದ ತನ್ನ ವಾಸ್ತವ್ಯದಲ್ಲಿ, ಈ ಇರಾಣಿಯ ಗಲ್ಲೆಯನ್ನು, ನಿತ್ಯ ನಾಕಾರು ಸಾರೆ ತುಂಬು ತ್ತಿದ್ದ. ಮುದುಕ ಇರಾಣಿ, ಛೋಟಾ ಡಾಕ್ಟರನ ಮೇಲೆ ಭಾರೀ ಖುಷಿಯಿದ್ದ. ನಾವು ಕುಳಿತಲ್ಲಿ ಸಿಗರೇಟ್ ಟಿನ್ನು –ಕಡ್ಡಿಪೆಟ್ಟಿಗೆ ಕಳಿಸಿ, ತಾನು ತೂಕಡಿಸುತ್ತ ಕುಳಿತ ಕುರ್ಚಿಯ ಮೇಲಿಂದಲೇ ಒದರಿ ಹೇಳಿದ:

"ಆಬ್ ಘಂಟಾ – ದೋ ಘಂಟಾ ಆರಾsaಮ್ ಬೈಠೋ. 'ಕನೆಕ್ಶನ್' ಜಲ್ದೀ ಮಿಲೇತೋಬೀ ಖ್ಯಾ ಫಾಯದಾ ? 'ಮೆಸೆಜ್' ಜಾನಾ ಪಡೇಗಾ. ಆಪಕಾ ಆದಮೀ ಮಿಲನಾ ಪಡೇಗಾ. ಬಾರಾ ಬಜೇತಕ್ಕ ಆಪಕಾ ಕಾಮ ಹುಯೇ ತೋ ಠೀಕ. ನಹೀ ತೋ ಫಿರ್ 'ಫ್ರೆಶ್ ಕಾ:ಲ್ ಬುಕ್' ಕರನಾ ಪಡೇಗಾ ಡಾಕ್ಟರ್‌ಸಾಬ್."

ಮುದುಕ ಇರಾಣಿ ಗಲ್ಲೆಯ ಹಿಂದಿನ ಎತ್ತರ ಕುರ್ಚಿಯಲ್ಲಿ ಕುಳಿತು, ನೆಲಕ್ಕೆ ನಿಲುಕದ ಕಾಲುಗಳನ್ನು ಅಂತರಾಳದಲ್ಲಿ ಅಲ್ಲಾಡಿಸುತ್ತ, ಆ ಅಲ್ಲಾಟದ ತಾಳಕ್ಕೆ, ಈಪದ್ ಗೋಣು ಚಲಿಸುತ್ತ ಕುಳಿತ. ಅವನನ್ನು ಅವನ ಪಾಡಿಗೆ ಬಿಟ್ಟು, ನಾವು

ಗಲ್ಲೆಯಿಂದ ಅನತಿದೂರದಲ್ಲಿಯ ಒಂದು ನಿವಾಂತ ಸ್ಥಳದಲ್ಲಿ ಎದುರು-ಬದುರು ಮಂಡಿಸಿ ಧೂಮ್ರಪಾನರತರಾದೆವು.

ನಾನು ಶ್ಯಾಮರಾಯನ ಪತ್ರದ ಗುಪಿತವನ್ನು ಸ್ಫೋಟಮಾಡಿ, ಅವನ ಎಲ್ಲ ಡಾವಿಗೂ ನೀರು ಹಚ್ಚಿದ ಸುದ್ದಿಯನ್ನು ವಿವರವಾಗಿ ವಿಶ್ವಾಸನಿಗೆ ತಿಳಿಸಿದ್ದೆ. ಅವನು ಅದರ ಪರಿಣಾಮ-ಪ್ರತಿಕ್ರಿಯೆಯನ್ನು ಕುರಿತು ಯೋಚಿಸುತ್ತಿರಬೇಕು. ಇರಾಣಿಯ ಹೊಟೇಲಿನಲ್ಲಿ ಚಹ ಕುಡಿದು, ಸಿಗರೇಟಿನ ಮೇಲೆ ಸಿಗರೇಟು ಹಾರುತ್ತಿದ್ದರೂ, ಅವನು ಬಾಯಿಂದ ಬರಿಯ ಹೊಗೆಯನ್ನು ಉಗುಳುತ್ತ ದೀರ್ಘವಾಗಿ ಆಲೋಚಿಸುತ್ತಿರುವಂತೆ – ಎಲ್ಲಿಯೋ ಚಿತ್ತವನ್ನು – ನೋಟವನ್ನು ಕೇಂದ್ರೀಕರಿಸಿ. ಏನನ್ನೋ ಧೇನಿಸುತ್ತಿದ್ದ; ಏನನ್ನೋ ಗುಣಿಸುತ್ತಿದ್ದ. ಐದು-ಹತ್ತು-ಹದಿನೈದು ಮಿನೀಟು ಹೋದರೂ ಅವನ ಬಾಯಿಂದ ಒಂದು ಅಕ್ಷರವೂ ಮಿಂಚಿರಲಿಲ್ಲ. ಈ ಅಸಹ್ಯ-ಮೌನವನ್ನು ಮುರಿದು ನಾನೇ —

"ವಿಶ್ಯಾ, ಏನ ವಿಚಾರ ನಡಿಸೀದಿ? ನಿನ್ನಲ್ಲೆ ಏನೋ ಡಾವ್ ನಡವ್ಯದ. ನೀ ಅಶಾಂತ ಇದ್ದೀ ಅನೂದು ಮಾರೀ ಮ್ಯಾಲ್ಕ ಸ್ಪಷ್ಟ ಆಗಿ ಕಾಣಸ್ತದ. ಪತ್ರದ ಗುಪಿತಾ ಅಕಾಲದಾಗ ಸ್ಫೋಟ ಆತ ವಿಶ್ಯಾ. ಇಷ್ಟ ಲಗೂ – ನಿಧಾನ ಒಂದು ನಾಕಾರ ತಿಂಗಳರ್ಕ ಅದು ಮುಂದ ಹೋಗಿದ್ದರ ಠೀಕ ಆಗತಿತ್ತು. ನಾ ಭಾಳ ಧಡಪಡಿಸಿದೆ. ನನ್ನ ಧಡಪಡಕ್ಕ ಏನೂ ಯಶಾ ಸಿಗಲಿಲ್ಲಾ. ಇಲ್ಲೀ ತನಕಾ ಮಾಡಿಕೋತ ಬಂದ ಕಂತ್ರಾಟಾ ನೀರಾಗ ಹೋಮಿಸಿಧಾಂಗ ಆತು. ನಿನ್ನ ಪರೀಕ್ಷಾ ಮುಗದ ಮ್ಯಾಲ ಇದನ್ನ ಹೊರಗೆಡವಬೇಕಂತ ಮಾಡಿದ್ದೆ. ದಾದಾನ ಡಾವಿಗೆ ನಾ ನೀರ ಹಚ್ಚಿದೆ. ನನ್ನ ಕಂತ್ರಾಟಕ್ಕ ವಿಧಿ ದಗಾ ಕೊಟ್ಟಿತು."

"ದಾದಲ್ಯಾ. ನಾ ನನ್ನ ವಿಚಾರಾ – ನನ್ನ ಪರೀಕ್ಷಾದ ವಿಚಾರಾ, ನಡಿಸಿಲ್ಲಾ, ನಾ ಪರೀಕ್ಷಾಕ್ಕ ಕೂಡೂದನ್ನ ತಪ್ಪಸಬೇಕಂತ ವಿಧೀ ವಿಚಾರ ಮಾಡಿದ್ದರ ಮಾಡವಲ್ಲದ್ಯಾಕ. ಅದರ ದಶಿಂದ ನಾ ಅಷ್ಟು ತಲೀ ಕೆಡಿಸಿಗೊಂಡಿಲ್ಲಾ. ನನಗ ಕಾಳಜೀ ಹತ್ತೇದ ಬಸವಂತೀ ಕ್ಷೇಮದ್ದು. ಖರೇ ಅಂದರ ವಿಧಿಯ ಕಾಟ ಸುರೂ ಆತು ಆಕೀಗೆ – ನಿನಗ. ಇನ್ನ ದಾದಾ ನಿಮ್ಮ ಜೀವಾ ಹೀರಲಿಕ್ಕೆ ಟಪಕಾಸ್ತಾನ. ಅಂವಗ ಕಂಟ್ರ್ಯಾಕ್ಟ ಕೆಲಸದ ಮ್ಯಾಲ ಲಕ್ಷ್ಯ ಉಳಿಯೂದಿಲ್ಲಾ. ಸುರ್‍ಯಾನ ಆಶಾ ಉಳೀಲಿಲ್ಲಾ. ಬಸವಂತೀದೂ ಉಳೀಲಿಲ್ಲಾ. ಬಸವಂತಿನ್ನ ಕೆಣಕಿದರ ಅದರ ಪೆಟ್ಟು ನಮಗೂ ಬಡೀತದ ಅನ್ನೂದು ಅವಗ ಗೊತ್ತಾಗೇದ. ನೇಮಕೀ ಅಂವಾ ಬಸ

ವಂತಿನ್ನ ಕಾಡಲಿಕ್ಕೆ ಸುರೂ ಮಾಡತಾನ. ನಮಗ ಹಾಲ್‌ಜಾಲೀಗೆ ಸುದ್ದೇ ಅವಕಾಶ ಕೊಡದೇ ಅಂವಾ ಬಸವಂತಿನ್ನ ಪುಣೇ ಬಿಡಿಸಿ ಊರಿಗೆ ಒಯ್ಯತಾನ. ಅಲ್ಲೆ 'ಲಂಬರ್' ಖೋಲ್ಯಾಗ ಅಕಿನ್ನ ಬಂದೀ ಮಾಡತಾನ. ಬಸವಂತಿ, ಕೂಳು-ನೀರು, ಕೂಳು-ನೀರು ಅಂತ ಪಲಬಿ ಸಂಕಟಪಡಬೇಕಂತ – ಅದೇ ಸಂಕಟದಿಂದೇ ಪ್ರಾಣ ನೀಗಬೇಕಂತ ಅವನ ಡಾವ್ ನಡೀತದ. ಆದರ ದಾದಲ್ಯಾ, ಬಸವಂತಿಗೂ ಹಾರೂ ಹಕ್ಕೀ ಪುಚ್ಚಾ ಎಣಸೂ ಸಾಮರ್ಥ್ಯ ಅದ. ದಾದಾ ಸೇರ ಆದರ – ಅಕೀ ಸವ್ವಾ ಸೇರು. ಮುಂಬಯಿಯಿಂದ ನೀನು ದಾದಾನ ಉಡ್ಯಾಗ ಮದ್ದಿನ ಕುಳ್ಳೀ ಕಟ್ಟೀ ಕಳಸ್ತೀದಿ ಅನ್ನೂದು ಅಕೀಗೆ ಠಾಂವಿಕ್ಯಾಗೇದ. ಅಕೀ ತಯಾರ್‍ಯಾಗ ಇಲ್ಲದೇ ಇರೂದಿಲ್ಲಾ. ಅಕೀ ಜಾಗರಾಗಿ ಭಾಳ ದಿನಾ ಆತು. ದಾದಾಗ ಠಾಂವಿಕ್ಯಾಗಿದ್ದಿಲ್ಲಾ. ಬಸವಂತೀ ತನ್ನ ಉಡ್ಯಾಗ ಬೆಂಕಿ ಇದ್ಧಾಂಗ ಇದ್ದಾಳನ್ನೂದು. ಆ ಬೆಂಕಿ ಹೊತ್ತೂದೂ ಕ್ಷೇಮ ಅಲ್ಲ ದಾದಲ್ಯಾ."

"ವಿಶ್ಯಾ, ಈ ಬೆಂಕೀ ಒಂದಿಲ್ಲಾ ಒಂದ ರೀತಿಯಿಂದ ಹತ್ತೇ ತೀರತದ. ಅದನ್ನ ತಪ್ಪಸಲಿಕ್ಕೆ ಒಂದ ಧಾಡಸೀತನಾ ಮಾತ್ರ ಮಾಡಬೇಕು. ಅದರಿಂದ ದಾದಾಗ ದಿಶಾಭೂಲಸೂ ಆಗತದ. ಬಸವಂತಿಗೂ ಧಕ್ಕೀ ಹತ್ತೂದು ತಪ್ಪತದ. ಅಕಿನ್ನ ದಾದಾನ ಬಂಗಲೇ ಬಿಡಿಸಿ, ನಿಮ್ಮ ಮನೀಗೆ ಕರಕೊಂಡು ಹೋಗು ಅಂತ ಸುರ್‍ಯಾಗ ಹೇಳಬೇಕು. ಅಕೀ ಅಲ್ಲಿಗೆ ಹೋದದ್ದು ಖಾದರನಿಂದ ದಾದಾಗ ತಿಳದೇ ತಿಳೀತದ. ಸದ್ಯದ ಪರಿಸ್ಥಿತಿಯೊಳಗ ಅಂವಗ ಏನ ಮಾಡೂದು ಸೂಚಿಸುದಿಲ್ಲಾ. ಬಸವಂತಿನ್ನ ಅಂವೇನು 'ಫೋರ್ಸಿಬ್ಲಿ' ಒಯ್ಯೂದು ಶಕ್ಯತಾ ಇಲ್ಲಾ. ನಿಧಾನ ನಾನು ಪುಣೇಕ್ಕ ಹೋಗೂ ತನಕಾನರೇ ಅಕೀ ನಿಮ್ಮ ಮನ್ಯಾಗ ಇದ್ದರ ಸಾಕು. ಮುಂದಿನ ವಿಚಾರ ಮುಂದ."

"ನಂದೂ ಇದೇ ವಿಚಾರ ನಡದದ ದಾದಲ್ಯಾ. ಆದರ ಬಸವಂತಿ ಕಬೂಲ ಆಗತಾಳೋ ಇಲ್ಲೋ ಅನ್ನೂದು ಒಂದು ಪ್ರಶ್ನ ಅದ. ಬರೇ ಪ್ರಶ್ನೆ ಇರದ ದೊಡ್ಡ ಸಮಸ್ಯಾನ ಅದ. ದಾದಾನ್ನ ಮಣಸೂ ಕುವ್ವತ್ತು ಯಾರಲ್ಲ್ಯರ ಇದ್ದರ ಅದು ಅಕೀ ಒಬ್ಬಾಕೀಯಲ್ಲೇ ಅದ. ನಾನೂ-ರಾಜಪ್ಪಾ, ಇಬ್ಬರೂ ಕಾಕಾನ ತಾಬೇದಾರಿ. ಅವರು ಹಾಕಿದ ಉಗಳ ದಾಟವರಲ್ಲಾ ಅನ್ನೂದು ನಿಶ್ಚಿತ. ಅದೂ ಅಕೀಗೇ ಗೊತ್ತ ಅದ. 'ವಿಶ್ವಾಸ, ನೀ ಸೋನಕ್ಕಂದು ಝುಲ್ಲ ಬಿಡೂ. ಠೀಕ ಅಭ್ಯಾಸ ಮಾಡು. ಪರೀಕ್ಷಾ ಪಾಸ ಆಗು. ಆದರಿಂದ ನನಗ ಭಾರೀ ಸಮಾಧಾನ ಬರತದ.

ಇವರ ಜೋಡೀ ನನಗ ಗಾಠ ಅದs. ಅವರ್ನ ಹಣ್ಣಗಾಯಿ-ನೀರಗಾಯಿ ಮಾಡದೇ ನಾ ಬಿಡೂದಿಲ್ಲಾ ನೋಡತಿರೂ' ಅಂತs ಬಸವಂತಿ ಹೇಳ್ಯಾಳ. ದಾದಲ್ಯಾ, ಆಕೀದೂ ಏನೋ ಡಾವ್ ಅದs. ಅದನ್ನ ಸಾಧಸೂದರ ದಶಿಂದ ಆಕೀ ಸಾಧನಾ ನಡದು ಭಾಳ ದಿನಾ ಆಗೇದ. ಸುರ್ಯಾಗ ನಾವು 'ಫೋನ್' ಮಾಡೂದರಿಂದ ಫಾಯದೆ ಏನೂ ಇಲ್ಲಾ. ಬಸವಂತಿ ಅವನ ಮಾತಿಗೆ ಒಪಿಗೊಂಡು ನಮ್ಮಲ್ಲಿಗೆ ಹೊಗೂದೂ ಇಲ್ಲಾ. ಕದಾಚಿತ್ ನಾ ಹೋಗಿ ಕರದಿದ್ದರ ಬರೂ ಸಂಭವ ಇತ್ತು. ದಾದಾ ಇನಾ ಮುಂಬೈ ಬಿಟ್ಟಿರದಿದ್ದರ ಮಾತ್ರ ಇದು ಸಾಧಸೀತು. ನಾಳೆ-ನಾಡದ ಹ್ಯಾಂಗೂ 'ಏನ್‌ಕ್ವಾಯರಿ' ಪ್ರಕರಣ ಮುಂದ ಬಿದ್ದsದ. ದಾದಾ ಇಂದೇ ಮುಂಬೈ ಬಿಟ್ಟಾನನ್ನೂದು ನಮಗ ಗೊತ್ತಿಲ್ಲಾ. ಅಂವಾ ಇಲ್ಲೇ ಇದ್ದರ – ಒಂದ ಕೆಲಸಾ ಮಾಡ ದಾದಲ್ಯಾ. ಅಂವಾ ಎರಡ ದಿನಾ ಇಲ್ಲೇ ಇರೂ ಹಾಂಗ ಮಾಡು. ಅಂದರ ನಾಳೇ ಈ ಬಾತಮೀ ತಿಳಕೊಂಡು, ನಾ ಮುಂಬೈ ಬಿಡತೀನಿ. ಬಸವಂತಿಗೆ ಭೆಟ್ಟಿ ಯಾಗಿ ಆಕಿನ್ನ ನಮ್ಮ ಮನೀಗೆ ಕರಕೊಂಡ ಹೋಗೂ ಜವಾಬ್ದಾರೀ ನಂದು."

"ವಿಶ್ಯಾ, ಎಕ್ಸ್‌ಚೇಂಜ್-ಆಫೀಸಿಗೆ 'ರಿಂಗ್' ಮಾಡಿ ನೋಡೂಣೇನು? 'ಮೆಸೆಂಜರ್' ಹೋದದ್ದರs ತಿಳೀತದ. ಸುರ್ಯಾ ತನ್ನ ಕಕೂನ್ನ ಕಟಿಗೊಂಡು ಸಿನೇಮಾ-ನಾಟಕಂತ ಹೋಗಿದ್ದರ ಪಂಚೇತೀನs. ಅಂವಾ ಇದ್ದಿದ್ದಿಲ್ಲಂದರ, ಸತೀಶ 'ಫೋನ್ ಆಟೆಂಡ್' ಮಾಡ್ಯಾನು. ಆದರ ನಮ್ಮ 'ಮೆಸೇಜ್'ದ ಅರ್ಥ ಅಂವಗ ಲಟ್ಟನೇ ಆಗೂದಿಲ್ಲಾ. ಅರಗಚ್ಚಿ ಸುದ್ದೀ ಒಯ್ದು ಕಾಕಾ ಅವರಿಗೆ ತಿಳಿಸಿದನಂದರ ಅವರಿಗೆ ಇಲ್ಲದ ಕಾಳಜೀ."

"ದಾದಲ್ಯಾ, ನಿನ್ನ ಶಂಕಾ ಏನು ಅಗದೀ 'ಇಂಪ್ರೊಬೆಬಲ್' ಅಲ್ಲಾ. ಸುರ್ಯಾನ ಕಾಲು ಮನೀಗೆ ಹತ್ತಿ ನಿಂದರೂದು ಅಗದೀ ಕ್ವಚಿತ್ತಾ. ಸತೀಶ 'ಫೋನ್ ಅಟೆಂಡ್' ಮಾಡಿದರ, ಇಷ್ಟs ಹೇಳೂಣು. ನಾಳೆ ನಾ ಬರತೀನಿ. ಅಲ್ಲಿಗೆ ಬಂದ ಮ್ಯಾಲ ಸವಿಸ್ತರ ಹಕೀಕತ್ತು ತಿಳಸತೀನಿ. ಕಾಳಜೀಮಾಡೂವಂಥಾದ್ದು ಏನೂ ಇಲ್ಲಾ ಅಂತs ಕಾಕಾಗ ತಿಳಸು – ಸಾಕಲಾ. ಸುರ್ಯಾನಿಂದ ಕಾಕಾ ಅವರಿಗೆ ಎಲ್ಲಾ ಬಾತಮೀ ತಿಳದಿದ್ದರೂ ತಿಳಿದಿರಬೇಕು."

ಗಡಿಯಾರದಲ್ಲಿ ಹನ್ನೊಂದು ಬಾರಿಸಿತು. 'ಎಕ್ಸ್‌ಚೇಂಜ್'ಗೆ 'ರಿಂಗ್' ಮಾಡಿದೆವು. 'ಮೆಸೆಂಜರ್' ಹೋಗಿರುವ ಬಗ್ಗೆ ವಿಚಾರಿಸಿದೆವು. 'ಮೆಸೆಂಜರ್' ಹೋಗಿರಬಹುದು. ತಿಳಿಸುತ್ತೇವೆಂಬ ಉತ್ತರ ಸಿಕ್ಕಿತು.

"ಯಾವುದೋ 'ಆ್ಯಂಗ್ಲೊ-ಇಂಡಿಯನ್' ಕನ್ಯಾರತ್ನ ಅದs ನೋಡು ದಾದಲ್ಯಾ, 'ಎಕ್ಸ್‌ಚೇಂಜ್'ದಾಗ. ಗುಲುಗುಲು ಮಾತಾಡೂ ವಾಸನೀವ್ಯಾಲಿಂದನs ತಿಳೀತದ. ಯಾವದರ ಗಂಡ ಹಿಂಡಿದ್ದರ ಸಾದಾಸೀದಾ ಉತ್ತರಾ ಕೊಡೂ 'ಕರ್ಟ್‌ಸಿ' ಸುದ್ದೇ ಇರತಿದ್ದಿಲ್ಲಾ. ಚಹಾ ಹೇಳೂಣು ದಾದಲ್ಯಾ. ಮತ್ತ ಒಂದ ತಾಸು ಕೂಡಲಿಕ್ಕೆ ತಾಕತ್ತ ಬರತದ."

ಚಹ ಗುಟಕರಿಸುತ್ತ —

"ಇಂದ ಶೇಡಜೀಯಲ್ಲೇ ವ್ಯರ್ಥ ಎರಡ ತಾಸ ಕಳದೆ. ನೆಟ್ಟಗ ಆರು-ಆರೂವರಿಗೆ ನಿನ್ನ ಕಡೇ ಸಾಹೇಬರನ ಕರಕೊಂಡು ಬಂದು ಭೆಟ್ಟೀ ಮಾಡಿಸಿದ್ದೇ ಅಂದರ ನಾ ಮೋಕಳೀಕ ಆಗತಿದ್ದೆ. ಆಗ ಫೋನ್ ಮಾಡಿದ್ದರ ಖಾತ್ರೀಲೇನs ಸುರ್‍ಯಾ ಸಿಗತಿದ್ದಾ. ಈ ಇರಾಣೀ ಮುಂದ ಕೂಡೂ ತಾಪ ತಪ್ಪತಿತ್ತು. ವಿಶ್ಯಾ, ಇರಾಣೀ ನಿನ್ನ ಮ್ಯಾಲ ಭಾರೀ ಖುಷೀ ಕಾಣಸ್ತಾನ. ನಿಮ್ಮದೂ ಅವಂದೂ ಅಗದೀ ಸೂತ ಜಮಾಸೇದ ಕಾಣಸ್ತದ?" ನಾನು ಕೇಳಿದೆ.

"ಇವನ ಮಗಳೂ ನನ್ನ ಜೋಡೀ 'ಫೈನಲ್-ಇಯರ್'ದಾಗ ಇದ್ದಾಳ ದಾದಲ್ಯಾ. 'ಪ್ರ್ಯಾಕ್ಟಿಕಲ್'ದಾಗ 'ಪಾರ್ಟ್ನರ್' ಅಂತs 'ಕಾಂಟ್ಯಾಕ್ಟ್' ಬಂತು. ಮಸ್ತ ಕನ್ಯಾ ಅದs ದಾದಲ್ಯಾ. ಥೇಟ ವಸೂನ ಜಾತಿ. ನಾ ಚಹಾಕ್ಕ ಬರೂತ್ಲೇ ಹೊಟೇಲದಾಗಿನ ಹುಡುಗೂರಿಗೆ ಹುಕೀ ಬರತದ. ಅವರ ನೇತ್ರಪಲ್ಲವಿ, ಮಿಸ್ಕೆಲ್ ನಗೀ ಸುರೂ ಆಗತದ. ವಿಶ್ಯಾನ ಜೀವಕ್ಕ ಒಂದಲ್ಲಾ ಎರಡು ಹೆಣ್ಣ ತೊಡಕ್ಯಾವ ಅನ್ನೂದು ಅವರಿಗೆ ಕಲ್ಪನಾ ಇಲ್ಲಾ."

"ವಿಶ್ಯಾ. ಕೈ ತಾ ಮಗನs. ನಿನ್ನ ಕಲ್ಪನಾಶಕ್ತೀಗೆ ಮೀರಿದ್ದೊಂದು ಸುದ್ದೀ ಹೇಳತೀನಿ. ಕಾಕಾ ನಿನ್ನ ಗಜವನ್ ನಿಂದರಿಸಿದರು. ವಿಶ್ಯಾ, ನನಗ ಠಾಂವಿಕಿಲ್ಲದ ವಸೂನ ಅಪ್ಪಗ ಮಾತ ಕೊಟ್ಟಾನ. ಅಂವಗ ಠಾಂವಿಕಿಲ್ಲದ ನಾ ಸಾಖರಪುಡಾ ಬಗೀಪರಸ್ತೀನಿ ಅಂತs, ನಿಶ್ಚ್ಯದ ಸೀರೀ ಉಡಸಿದರು ವಸೂಗ."

"ದಾದಲ್ಯಾ!"

"ಏನ ದಾದಲ್ಯಾ ಇಲ್ಲಾ – ಪೀದಲ್ಯಾ ಇಲ್ಲಾ. ಕಾಕಾ ಅಂದರ ಏನಂತ ತಿಳದೀ? ಹುಡುಗರಕಿಂತಾ ಹುಡಗರಾಗತಾರ ಒಮ್ಮೊಮ್ಮೆ! ಅದರಾಗ ನೀ ಅಂದರ ತೀರಿತು. "ವಿಶ್ಯಾ ಹೌದಲ್ಲೋ, ನನ್ನ ಮಾತ ಮೀರಲಿ ನೋಡೂಣು" ಅನೂ ಧೈರ್‍ಯಾ ಅದs ಅವರಿಗೆ. ಸಾಖರಪುಡಾದ ವ್ಯಾಳ್ಯಾಕ್ಕ ಬಸವಂತಿನ್ನೂ ಕರೆಸಿ

ಗೊಂಡಿದ್ದರಂತ. ಖುದ್ದ ಸೋನಕ್ಕಾ-ಬಸವಂತಿ ಅವರೇ ಈ ಸುದ್ದೀ ಹೇಳಿದರು."

"ಖರೇ ಅಂದರ್‍s ದಾದಲ್ಯಾ?"

"ನಾಳೆ ನೀನೇ ಹೋಗತೀಯಲಾ ಪುಣೇಕ್ಕ. ಬಸವಂತಿನ್ನ ಕೇಳಿ ಖಾತ್ರೀ ಮಾಡಿಕೋ. ಸಾಹೇಬರ ಸ್ವಾರೀ ಮುಂಬೈಯಿಂದ ತಿರಿಗಿ ಹೋಗೂ ಮುಂದ ಪುಣೇಕ್ಕ ಇಳಿಯೂದsದ. ಸುರ್‍ಯಾನ ಸಾಖರಪುಡಾ ಬಗೀಹರಸಲಿಕ್ಕೆ. ಒಂದು ಇತ್ತು, ಒಂದು ಇಲ್ಲಾ, ಪುಣೇದಾಗs ಅಕ್ಷತಾ ಹಾಕಿಬಿಡತೀನಿ ಅಂತs, ಇಂದೇ ಸಾಹೇಬರು ಹೇಳ್ಯಾರ. ನೀವು ಸಾಂಗಲೀಕರ ಮಂಡಳಿ. ರಾಜವೈಭವದಿಂದ ದಂಡೀ ಕಟಿಗೊಂಬೂವವರು. ಸುರ್‍ಯಾಂದು ಸಂದ್ಯಾಗ ಸಮಾರಾಧನಿ ನಡಿಯೂದು. ಒಂದಿತ್ತು-ಒಂದಿಲ್ಲಾ ಅಂತ ಸಾಹೇಬರಂದಾಗ, ನನಗ ಬ್ಯಾರೇ ಭಾವನಾನೇ ಬಂತು ವಿಶ್ಯಾ. ಸೋನಕ್ಕ ಇದ್ದಾರ – ದಾದಾ ಇರೂದಿಲ್ಲಾ. ಅವರ್‍ನ ಹಿಡದ ತರೂದು ಸಾಧ್ಯ ಇಲ್ಲಾ. ಅಂವಾ ಸೋನಕ್ಕನ ಜೋಡೀ ಪುಣೋಚನಕ್ಕ ಕೂಡೂದು ಅಸಾಧ್ಯನs. ಸುರ್‍ಯಾನ ಲಗ್ನಾ ಸಾಹೇಬೀ ಥಾಟಿನಿಂದ ನಡೀಬೇಕು. 'register-marriage' ಪ್ರಥಾ, ಪಂತರ ಮನೆತಾನದಾಗ ಸುರ್‍ಯಾನs ಹಾಕ ಬೇಕು..."

ಫೋನ್ ಹೊಡೆದುಕೊಳ್ಳತೊಡಗಿತು. ಇರಾಣೀ 'ರಿಸೀವ್ಹರ್' ಎತ್ತಿ —

"ಹಲೋ!"

ಎಂದು......

"ಹಾಂ...... ಡಾಕ್ಟರಸಾsಬ್. ಆಪಕಾ ಫೋನ್"

ಎಂದು 'ರಿಸೀವ್ಹರ್' ವಿಶ್ವಾಸನ ಕೈಗೆ ಕೊಟ್ಟ. ವಿಶ್ಯಾ —

Hallo...Hallo...who is speaking please?...ಅಂ...yes. ವಿಶ್ವಾಸ ದಾತಾರ. ಹಂ...ಸುರ್‍ಯಾ ಏನು? 'ಸ್ಪ್ಲೆಂಡಿಡ್' ಆತ ಸುರ್‍ಯಾ. ನೀನs ಬಂದಿ ಫೋನ್ ಮ್ಯಾಲs. ಇದ್ನೋಡು, ದಾದಲ್ಯಾನೂ ಇಲ್ಲೇ ಇದ್ದಾನ...ಎಲ್ಲಾ ಭಾನಗಡೀ ವ್ಯವಸ್ಥಶೀರ ಬಗೀಹರಸ್ಯಾನ... Sahib is out of trouble. ಏನೂ ಕಾಳಜೀ ಮಾಡೂ ಕಾರಣೆಲ್ಲಾ. ಇಂದs ರಾತ್ರೀ ದಾದಾ ಪುಣೇಕ್ಕ ಬರೂ ಸಂಭವ ಅದ. ಬಸವಂತಿನ್ನ ಅಷ್ಟ ಜ್ವಾಕೀಲೇ ನೋಡಿಕೊ...ನಾಳೆ, ಕದಾಚಿತ್...ನಾನೇ ಬಂದರೂ ಬರತೀನಿ...ನಾ ಬರೂತನಕಾ ಬಸವಂತೀ ಭಾರಾ ನಿನ್ನ ಮ್ಯಾಲ...ರಾಚಪ್ಪಾ ಇನಾ ಇದ್ದಾನೇನು?...ಹಾಂಗಿದ್ದರ ಠೀಕಾತು...ಅಂವಾ ಎಲ್ಲಾ ಸಂಬಾಳಿಸಿಗೋತಾನ...



ಕಾಕಾ, ತಾಯೀಗೆ ಹೇಳು: ನಾ ಆರಾಮ ಇದ್ದೀನ್ಯಂತ...ನಿನ್ನ ಕಕೂ ಏನಂತ್ಸದ? ಹಾಂ... ಅನಿಸಿತ್ತ ನಮಗ... 'ಪ್ರೊಗ್ರ್ಯಾಮ್' ಇರದಿದ್ದರ ನಿನಗ ಚೈನ ಬೀಳೂ ದಿಲ್ಲಾ... ಓ.ಕೆ.... ಸುರ್ಯಾ, ತಾಯೀಗೆ – ಬಸವಂತಿಗೆ ತಿಳಸು... ನಾ ಆರಾಮ್ ಇದ್ದೀನ್ಯಂತ. ಅಚ್ಛಾ... ಅಚ್ಛಾ... ಬಾಯ್... ಬಾಯ್..."

ಫೋನ್ ಚಾರ್ಜು, ಚಹದ ಲೆಕ್ಕವನ್ನು, ವಿಶ್ಯಾ ತನ್ನ ಖಾತೆಗೆ ಬರೆದ. ನಾನು, ವಿಶ್ವಾಸ ಹಾಸ್ಟೆಲ್ಲಿನಲ್ಲಿಯ ಅವನ ಕೋಣೆಗೆ ಬಂದೆವು. ಇಂಥ ಅಪರಾತ್ರಿಯಲ್ಲಿ ಸಾಹೇಬರ ಕಡೆಗೆ ಹೋಗುವದು ಶಕ್ಯವಿರಲಿಲ್ಲ. ಮರುದಿನ ವಿಶ್ವಾಸನಿಗೆ 'off' ಇತ್ತು. ಬೆಳಗಿನ ಚಹವನ್ನು ಮುಗಿಸಿ ಅವರನ್ನು ಕಾಣಲು ಹೋಗುವದೆಂದು ಠರಾಯಿಸಿದೆವು.

ಅಪರಾತ್ರಿಯಲ್ಲಿ 'ಫೋನ್' ಬಂದ ವಿಚಾರದಿಂದ – ಅದೂ ವಿಶ್ವಾಸನಿಂದ ಬಂದ ಕಾರಣದಿಂದ, ಕಾಕಾ, ಸೋನಕ್ಕ ಉತಾವಿಳರಾಗಿ, ಸುರೇಶ 'ಹೆಡ್-ಪೋಸ್ಟ್ ಆಫೀಸಿ'ನಿಂದ ತಿರುಗಿ ಬರುವ ದಾರಿಯನ್ನು ಕಾಯುತ್ತ ಕುಳಿತಿರಬಹುದಾಗಿತ್ತು. ಸಾಹೇಬರಿಗೆ ಏನಾದರೂ ಆಯಿತೋ ಏನೋ ಎಂದು ಶಕೂ ಚಿಂತೆಯಿಂದ ಚಲ ವಿಚಲವಾಗಿರಬಹುದಾಗಿತ್ತು. ಸುರೇಶ ಇವರಿಗೆ ಸಾದ್ಯಂತ ಹಕೀಕತ್ತನ್ನು ವಿವರಿಸಿ ನಾಳೆ ವಿಶ್ವಾಸ ಬರಲಿದ್ದಾನೆಂದು ತಿಳಿಸಿದ ನಂತರ ಅವರು ಒಂದಿಷ್ಟು ನಿರಂಬಳ ರಾಗಿರಬಹುದಿತ್ತು.

ಫೋನು ಬಂದ ಕಾರಣದ ಕೂಡ, ಆದರ ಸುತ್ತು ಆವರಿಸಿದ ಕತೆಯನ್ನೂ ಸುರೇಶ ಕಾಕಾ ಅವರಿಗೆ ನಿವೇದಿಸಿರಬಹುದಾಗಿತ್ತು. ಪತ್ರದ ಪ್ರಕರಣ ಅವನಿಗೆ ಗೊತ್ತಿತ್ತು. ನಾನು ಒಂದೇ ಒಂದು ರಾತ್ರಿ ಪುಣೆಗೆ ಬಂದು ತಿರುಗಿ ಹೋದದ್ದೂ ಅವನಿಗೆ ಗೊತ್ತಿತ್ತು. ಈ ಎಲ್ಲ ವ್ಯವಹಾರದಲ್ಲಿ ದಾದಲ್ಯಾ ಮಾಡಿದ, ಮಾಡು ತ್ತಿರುವ ಭಾನಗಡಿಯನ್ನು ಅವನು ಸಾದ್ಯಂತವಾಗಿ ಕಾಕಾ ಅವರಿಗೆ ಹೇಳದೆ ಗತ್ಯಂತರವಿರಲಿಲ್ಲ. ಈಗ ಗುಪಿತವೆಂಬುವದು ಏನೂ ಉಳಿದಿರಲಿಲ್ಲ. ಅದೆಲ್ಲವನ್ನೂ ಕೇಳಿಕೊಂಡು – ಏನೋ ಭಾರವಿಳಿದ ಸಂತಸದ ಉಸಿರನ್ನು ಬಿಟ್ಟು, ಕಾಕಾ ಅವರು: 'ಶ್ರೀಹರೀ...ಶ್ರೀಹರೀ...ಶ್ರೀಹರೀ' ಎಂದು ತಮ್ಮ ನಿತ್ಯಗಾಯತ್ರಿಯನ್ನು ಮಿಡಿಯದಿರುತ್ತಿರಲಿಲ್ಲ.

ರಾವಜೀಕಾಕಾ ಇನ್ನೊಮ್ಮೆ ತಂಬಾಕದ ಬಾರು ಮಾಡಿ ಮುಗಿಸಿ, ಸೋನಕ್ಕ, ಗಿರಿಜಾ, ರಮಾಕಕ್ಕಿ, ರಾಜಪ್ಪ ಆ್ಯಂಡ ಕಂ. ಎದುರು ಕೂಡಿಸಿಕೊಂಡು, ದಾದಲ್ಯಾನ

ತಾರೀಫು ನಡೆಸುವ. ಬಸವಂತಿಯನ್ನು ಶ್ಯಾಮರಾಯನ ಕಿರುಕುಳದಿಂದ ಬಚಾವು ಮಾಡುವ ದೀರ್ಘಾಲೋಚನೆಗೆ ತೊಡಗಿರಬಹುದಾಗಿತ್ತು.

"ದಾದಲ್ಯಾ, ಇರಾಣೀ ಏನು ಚಹಾದಾಗ ಅಫೂ ಹಾಕಿದ್ದಂತ ಅನಸೂದಿಲ್ಲಾ. ಹೀಂಗ್ಯಾಕ ಮಬ್ಬ ಆಗೀ ಮಗನs! ಅವನ ಮಗಳ ಸುದ್ದೀ ಹೇಳಿದೆ; ಮತ್ತ ಅದರ ಧ್ಯಾಸನೇ ಸುರೂ ಆತೇನು? ದಾದಲ್ಯಾ, ಮುಂಬೈಯಾಗ ಹೋಟೇಲ 'ಬಿಜಿನೆಸ್' ಭಾರೀ 'ಡೆವೆಲಪ್' ಆಗಲಿಕ್ಕೆ ಹತ್ತೇದ. ಜಮಾಸೂ ಹಾಂಗ ಇದ್ದರ ಹೇಳು? ಇರಾಣೀ ಗಲ್ಲೇದ್ದು – ಅವನ ಕನ್ಯಾರತ್ನದ್ದು ನಿನಗ ಸೂತ ಜೋಡಸೂ ಹಾಂಗ ಮಾಡತೀನಿ. ಸಣ್ಣ ಕರೀ ಟೊಪ್ಪಿಗಿ ಹಾಕ್ಕೊಂಡು, ನೀನೂ ಕೂಡಾಕ್ಯಂತs, ಗಲ್ಲೇದ ಸಿಂಹಾಸನದ ಮ್ಯಾಲs."

"'ವಂಡರ್‌ಫುಲ್ ಐಡಿಯಾ' ವಿಶ್ಯಾ! ನಿಂತ ಕಾಲಮ್ಯಾಲ ಕಬೂಲ ಆಗತಿದ್ದೆ. ಆದರೇನ ಮಾಡೂದು? ನಿಮ್ಮ ದಾದಾ ನನ್ನ ಅಗಾವು ಶ್ರಾದ್ಧದ ನೋಟೀಸ ಬಜ್ಯಾಸ್ಯಾನs. ಗೋವಿಂದಭಟ್ಟನ ಕೈಲೆ ನನಗ ತರ್ಪಣಾ ಬಿಡಸೂ ಭಾಷಾ ಆಡ್ಯಾನ. ನಾ ಇಲ್ಲೇ ಗಲ್ಲೇ ಹಿಡಕೊಂಡು ಘಟ್ಟಿ ಕೂತರ, ಅಂವಗ ದಾದಲ್ಯಾಂದು ಕಣಕದ ಗೊಂಬೀ ಮಾಡಿ, ತನ್ನ ಮಾತಿನ ತಿಂಡೀ ತೀರಿಸಿಗೋಬೇಕಾಗತದ. ಬ್ಯಾಡ ವಿಶ್ಯಾ. ವಂತರ ಮನೆತಾನದಾಗ, ಯಾರೂ ವಚನಭ್ರಷ್ಟ ಆಗಿಲ್ಲಾ. ನಿಮ್ಮ ದಾದಾನರs ಯಾಕ ಆಗಬೇಕು? ಇಷ್ಟ ದಿನಾ ಮಾಡಿದ ಕಿತಿಬಿಗೆ, ಮುಂಬೈಯಾಗ ನನಗ ಫಲಾ ಸಿಕ್ಕsದ. ಮುಂಬೈ ದಶಿಂದ ಸಂದು ನನಗs ತಿಳೀಧಾಂಗ ಆತ್ಮೀಯತಾ ಬೆಳೀಲಿಕ್ಕೆ ಹತ್ತೇದ. ನಿಮ್ಮ ದಾದಾನ ಮಾತು ಹುಸೀ ಹೋದರ, ನಾ ಎಲ್ಲೂ ನಿಂದರದs, ಥೇಟ ಇಲ್ಲಿಗೇ ಬಂದಬಿಡತೀನಿ. ತಯ್ಯಬ್ಜೀ ಅವರ 'ಫರ್ಮ್'ದಾಗ ವರ್ಗೇ ಹತ್ತೂ 'ಚಾನ್ಸ್' ಅವs. 'ಬೋರ್ಡಿಂಗ್-ಲಾಜಿಂಗ್'ದ ಕಾಳಜೀ ಇಲ್ಲಾ. ನಿನ್ನ 'ಪ್ರ್ಯಾಕ್ಟಿಕಲ್-ಪಾರ್ಟ್ನರ್'ಗ ಹೇಳಿ ಇಡು. ಒಂದೆರಡು ವರ್ಷ ಹಾದೀ ನೋಡಂತ. ಗುರುತು ಮಾಡಿಕೊಡೂ ವಿಶ್ಯಾ, ನಾನs ಗಾಠಾಸ್ತೀನಿ. ಆದರ ವಿಶ್ಯಾ, ನಾ ಮಬ್ಬ ಆದದ್ದು ಆಕೀ ದಶಿಂದ ಅಲ್ಲಾ. ಮುಂಬೈಗೆ ಬರೂದರ ದಶಿಂದ ಅಲ್ಲಾ. ನನ್ನ ವಿಚಾರಾ. ಬಸವಂತೀ – ದಾದಾನ ಸುತ್ತ ಸುಳೀಲಿಕ್ಕೆ ಹತ್ತಿತ್ತು."

"ಅದರ ದಶಿಂದ ಭಾಳ ವಿಚಾರಮಾಡೂ ಅಗತ್ಯ ಇಲ್ಲಾ ದಾದಲ್ಯಾ. ಇಷ್ಟು ದಿನಾ. ಕಾಕಾ, ರಾಚಪ್ಪಾ ಇವರ ಅಪರೋಕ್ಷದಾಗ ನಮ್ಮ ಭಾನಗಡೀ ನಡದಿತ್ತು. ಇಂದ ಎಲ್ಲಾರೂ 'ಪಿಕ್ಚರ್'ದಾಗ ಬಂಧಾಂಗ ಆತು. ಇದರ ಬೋಜಾ

ಹಿರ್‍ಯಾರ ಮ್ಯಾಲ ಬಿತ್ತು. ಯಾರೂ ಕೈ ಮುಚಿಗೊಂಡು ಕೂಡೂದಿಲ್ಲಾ. ಇಷ್ಟ ದಿನಾ ಸಾದಾ ಬ್ರಶ್ಶು, 'ಆಯಿಲ್-ಪೇಂಟ್'ದಿಂದ ಕೆಂಪ ಬಣ್ಣಾ ಸವರೂ ಧಂದೇ ನಡದಿತ್ತು. ಇನ್ನ ರಕ್ತಕ್ಕ್ಯ ರಂಗ ಏರಿಕೋತ ನಡೀತದ. ಬಿಸಿ ಬಿಸಿ ರಕ್ತದಲೇ, ಕೈ ಮೈ ತೊಳೆಯೂ ಪ್ರಸಂಗ ಬರತ್ಯದ. ದಾದಲ್ಯಾ, ಬಸವಂತಿ ನಿವಾಂತ ಉಳಿಯೂ ದಿಲ್ಲಾ. ನೋಡತಿರೂ, ಊರಿಗೆ ಊರೇ ನೆರದು ಬಸವಂತಿ ಚಮುಕಾಸೂದನ್ನ ನೋಡತ್ಯದೋ ಇಲ್ಲೋ."

ಮೊನ್ನೆ ರಾತ್ರಿ ನಿದ್ರೆಯಾಗಿರಲಿಲ್ಲ. ನಿನ್ನೆ ಅಖಂಡ ಅಲೆದಾಟದಲ್ಲಿ ಹೋಗಿತ್ತು. ಮೈ-ಮನ ಎರಡೂ ಹಣ್ಣುಹಣ್ಣಾಗಿದ್ದವು. ನಾಕು ಸಾರೆ ಕುಡಿದ ಚಹ ನಿದ್ರೆ ಹಾರಿಸುವ ಸಾಮರ್ಥ್ಯವನ್ನೂ ಪಡೆದಿರಲಿಲ್ಲ. ವಿಶ್ವಾಸನ ಟೇಬಲ್ಲ ಮೇಲಿನ ಟಾಯ್‌ಂಪೀಸಿನಲ್ಲಿ ಎರಡೂವರೆಯಾಗಿತ್ತು. ನಾನು ವಿಶ್ವಾಸನ ಪಲ್ಲಂಗದ ಮೇಲೆ ಪವಡಿಸಿ ಅವನ ಮಾತು ಕೇಳುತ್ತಿದ್ದೆ. ವಿಶ್ವಾಸ ಬದಿಯಲ್ಲಿಯೇ ಕುಳಿತು ಮಾತನಾಡುತ್ತಿದ್ದ. ಬಸವಂತಿ ಚಮುಕಾಸುವದನ್ನು ಊರಿಗೆ ಊರೇ ನೆರೆದು ನೋಡುವದೆಂದು ಅವನು ನುಡಿದದ್ದನ್ನು ಅರೆ ನಿದ್ದೆಯಲ್ಲಿ ಅರ್ಧ ಕೇಳಿದ್ದೆ. ಅಷ್ಟೇ! ಆದರೆ ಯಾವಾಗ ಕಣ್ಣು ಮುಚ್ಚಿದವೋ – ಯಾವಾಗ ನಿದ್ರೆ ತನ್ನ ಮುಸುಕನ್ನು ನನ್ನ ಸುತ್ತು ಬಿಗಿಯಿತೋ ತಿಳಿಯಲಿಲ್ಲ.

ಬೆಳಗಿನ ಐದಕ್ಕೆ ತಟ್ಟನೆ ಎಚ್ಚರಾಯಿತು. ನೋಡುತ್ತೇನೆ, ವಿಶ್ವಾಸ ಕೂಸಿ ನಂತೆ ನನ್ನ ಮಗ್ಗುಲಲ್ಲೇ ಮಲಗಿದ್ದ. ಕೆದರಿದ ತಲೆಗೂದಲಿನ ಮುಂಗುರುಳು ವಿಶಾಲ-ಫಾಲವನ್ನು ಮುತ್ತಿ ಮೋದಿಸುತ್ತಿದ್ದವು. ಕೂಸು ಮಳ್ಳಿಯಲ್ಲಿ ಮೃದು ಹಾಸ ಸೂಸುವಂತೆ, ವಿಶ್ವಾಸನ ಹಾಸ-ವದನ ದೀಪ್ತಮಂತವಾಗಿತ್ತು. ಕಾಲುದೆಸೆಗೆ ಮಡಿಚಿಟ್ಟ ಚಾದರವನ್ನು ಮೆಲ್ಲಗೆ ಅವನ ಕತ್ತಿನ ವರೆಗೂ ಹೊಚ್ಚಿದೆ. ಕಿಟಕಿಯ ಬಳಿಯ ಕುರ್ಚಿಯ ಮೇಲೆ ಕುಳಿತು, ಮೆಲ್ಲಡಿಯಿಟ್ಟು ಬರುವ ಬೆಳಗಿನ ಅಂಧುಕ ಪ್ರಕಾಶದಲ್ಲಿ ದೃಷ್ಟಿ ಚಾಚುವ ವರೆಗೂ ನೋಟ ಚಾಚಿ ಮುಂಬೈ ವೈಭವವನ್ನು ನೋಡುತ್ತ ವಿಶ್ವಾಸ ವದಿಸಿದ, ಬಸವಂತಿಯ ಚಮಕಿನ ಮೆಲಕುಹಾಕತೊಡಗಿದೆ. ಮುಂಬೈ ಮರೆಯಾಯಿತು. ಬಸವಂತಿಯ ಪ್ರಸನ್ನ ಪ್ರತಿಮೆ ಕಣ್ಣೆದುರು ಸಾಕಾರ ವಾಗತೊಡಗಿತು.

ವಿಶ್ವಾಸ ಬಸವಂತಿಯ ಸ್ವಯಂ ಸಾಮರ್ಥ್ಯದ ಅರ್ಥಮಾಡಿಕೊಂಡಿದ್ದಾನೆ. ರ-ಠ-ಈ-ಕ ತಿದ್ದಿ-ತೀಡಿಸುವ ಕೈಯ ನೆರವು ಅವಳಿಗೆ ಅಗತ್ಯವಿಲ್ಲವೆಂದು ಖಚಿತ

ಪಡಿಸಿಕೊಂಡಿದ್ದಾನೆ. ಅವಳ ಉಡದ ಹಿಡಿತದ ಸಾಮರ್ಥ್ಯ – ಹಟವನ್ನು ದಿಟಕ್ಕೆ ಇಳಿಸುವ ಅವಳ ಕೃತುಶಕ್ತಿಯನ್ನು ಅವನು ಕಂಡುಕೊಂಡಿದ್ದಾನೆ. ನಾವು ಕೇವಲ ರಂಗಾರಿಯಂತೆ, ಕೆಂಬಣ್ಣ-ಬ್ರಶ್-ಹಸ್ತರಾಗಿ ಹುರಮಂಜು-ರಕ್ತ-ಚಂದನದ ಸಾರಣೆ ಕಾರಣೆ ಮಾಡುತ್ತ ನಡೆದಿದ್ದ ಅಪೇಶಿಗಳಂತೆ ಕಂಡರೆ, ಬಸವಂತಿಯಲ್ಲಿ ಅವನಿಗೆ ರುಧಿರೋನ್ಮಾದಿನಿಯ, ರಕ್ತ-ಸ್ರಾವಕ-ಚೇತನೆಯ ದರ್ಶನ ಘಟಿಸಿದೆ.

ಪಂತಕುಟುಂಬದಲ್ಲಿ ಅಚಾನಕವಾಗಿ – ಅಕಸ್ಮಾತ್ತಾಗಿ ಅನ್ಯ ಕವಲು-ದಾರಿಯಿಂದ ಒಳನುಗ್ಗಿ ಬಂದ ಬಸವಂತಿ, ಆ ಮನೆತನದ ಕಥಾಮುಖವನ್ನೇ ಬದಲಿಸುವದಕ್ಕೆ ಕಾರಣಕರ್ತೃವಾಗುವಂತಿದೆ. ಬಸವಂತಿ ಬಯಸಿ ಬಂದದ್ದೇನು? ಬೇಡಿ ಪಡೆದದ್ದೇನು? ತನಗಿಂತ ಎರಡರಷ್ಟು ವಯಸ್ಸಾದ – ಇಳಿಮುಖ-ಚೇತನನಾದ ಶ್ಯಾಮರಾಯನಿಂದ ಅವಳು ಕಾಯಸುಖ ಬಯಸಿರಲಿಕ್ಕಿಲ್ಲ. ಆ ಕಾಯಕ್ಕೆ ಒಂದು ಆಸರಿನ ತಾವು ಇರದಿದ್ದರೆ ಅದರ ಚರಗ ತೂರಾಡುವ ಅಳಕು ಅವಳಿಗಿರಬೇಕು. ಹಿಡಿ ಅನ್ನ, ಅಡಿ ಅರಿವೆಯಿಂದ ಅದನ್ನು ಚಿರಗದಂತೆ ಚಲ್ಲಗೊಡದೆ ಕಾಯರಕ್ಷಣೆಗೆ ವಾಡೆಯ ನೆರಳಿನಾಶ್ರಯ ಪಡೆದಳು. ಚೋಳದ-ಪಾಳಿಗೆ ಶ್ಯಾಮರಾಯನ ತೀಟಿ ತಣಿಸಿರಬೇಕು. ಶ್ಯಾಮರಾಯ, ಬಸವಂತಿಯಲ್ಲಿ ಆ ತೀಟಿ ತಂಪಿಸುವ ಹಿಮಶೀತಲ ಜಲಕುಂಡವನ್ನಷ್ಟೇ ಕಂಡ. ಶ್ಯಾಮರಾಯ ನೇರವಾಗಿ, ನಿರ್ವಿಕಾರಚಿತ್ತನಾಗಿ ಪ್ರಾಂಜಲಮಾನಸನಾಗಿ ತಾನು ಸೋನಕ್ಕನನ್ನು ಬಿಟ್ಟ ಕಾರಣ ತಿಳಿಸಿದ್ದರೆ, ಕದಾಚಿತ್ ಬಸವಂತಿ, ಇನ್ನೂ ಶೀತಲ ಜಲಕುಂಡವಾಗಿ ಅವನ ಪಾಲಿಗೆ ಉಳಿಯುತ್ತಿದ್ದಳು. ಅವಳಿಗೆ ತಾನು ಶ್ಯಾಮರಾಯನ ರಖೇಲಿ ಎನ್ನುವ ಸತ್ಯ ವಿದಿತವಾಗಿ ಹೋಗಿದೆ. ಶ್ಯಾಮರಾಯ ಅವಳ ಕಣ್ಣಿಗೆ ಅಂಜನವೆಸೆದು ಅವಳನ್ನು ಅನಾಮತ್ತಾಗಿ ಕತ್ತಲೆಯ ಕೂಪದಲ್ಲಿ ಜಗ್ಗಿಕೊಂಡಿದ್ದ. ಈಗಲಾದರೂ ಶ್ಯಾಮರಾಯ ಸೋನಕ್ಕನನ್ನು ಆದರಿಸಿ ಬರಮಾಡಿಕೊಂಡರೆ, ಬಸವಂತಿಗೆ ಸವತಿಯ ಸಂಕಟವಾಗುತ್ತಿದ್ದಿಲ್ಲ. ತನ್ನ ಸ್ಥಾನ-ಚ್ಯುತಿಯಾಯಿತೆಂಬ ಮಾತ್ಸರ್ಯ ಕುದಿಯುತ್ತಿರಲಿಲ್ಲ. ಬದಲಾಗಿ ಅವಳಿಗೆ ಅಮಿತಾನಂದವೇ ಆಗುತ್ತಿತ್ತು. ಬಸವಂತಿ, ಸೋನಕ್ಕನ ತೈನಾತಿಯಂತೆ, ಪರಮ ವಿಶ್ವಾಸಿ ದಾಸಿಯಂತೆ ಅವರ ನೆರಳಿನಲ್ಲಿ ಸುಖವಾಗಿ ಬದುಕಲು ಹಿಂಜರಿಯುತ್ತಿರಲಿಲ್ಲ.

"ಅಽ ... ಹಾಽ..."

ಎಂದು ಕೈ-ಮೈ ಮುರಿಯುತ್ತ ವಿಶ್ವಾಸ 'ಆಹಾ'ಕಾರದ ಓಂಕಾರ-ನಾದವನ್ನು

ಮೂಡಿಸಿದ. ಚಟ್ಟನೆ ಹಾಸಿಗೆಯ ಮೇಲೆ ಎದ್ದು ಕುಳಿತು ಕೈಗೆ ಕೈ ಮಸೆದುಕೊಂಡು ಕಣ್ಣು ಮುಚ್ಚಿ "ಕರಾಗ್ರೇ ವರ್ತತೇ ಲಕ್ಷ್ಮೀ ಕರಮಧ್ಯೇ ಸರಸ್ವತಿ..." ಶ್ಲೋಕವನ್ನು ತುಂಬಿದ ಹೃದಯದಿಂದ ಹೇಳಿ ಕಣ್ಣು ಬಿಟ್ಟ.

"ದಾದಲ್ಯಾ, ಎದ್ದು ಭಾಳ ಹೊತ್ತ ಆತೇನು? ನನ್ನೂ ಎಬ್ಬಿಸಬೇಕಾಗಿತ್ತು? ತಾಸರ್ಧ ತಾಸು ಅಡ್ಡ್ಯಾಡರ‍್ಯ ಬರತಿದ್ದೇವು. ಚುಮುಚುಮು ನಸಿಕಿನ್ಯಾಗ– ಮುಂಬೈ ರಸ್ತೇದಾಗ ಅಡ್ಡ್ಯಾಡಿದರ – ಜೀವನಂದರ ಅಖಂಡ ಧಡಪಡ ಅನ್ನೂದರ ದರ್ಶನ ಆಗತದ. ಬ್ರೆಡ್ಡಿನವರು, ಹಾಲಿನವರು, ಪೇಪರ ಮಾರೂ ಹುಡುಗೂರು, ಯಾರದೋ ಸುಖಕ್ಕ – ಯಾರದೋ ಸೋವೀಗೆ ಎಲ್ಲೇಲ್ಲೀದೋ ಧಾವಸ ತಿರತಾರ. ಮುಂಬೈ-ಜೀವಚೇತನಾದ ಹೂವು, ಪಕಳಿ ಪಕಳಿ ಆಗಿ ಅರಳತಿರೂ ಭಾಸ ಬರತದ. ಒಮ್ಮೊಮ್ಮೆ ಈ ವೈಭವ ನೋಡಿಕೋತ, ಹುಚ್ಚನ್ಹಾಂಗ ಬೆಳಕ ಹರಿಯೂ ತನಕಾ ನಡ ರಸ್ತೇದಾಗs ನಿಂತಬಿಟ್ಟೇನಿ. ಮುಂಬೈಯ ವೈಭವ ನೋಡೂದಕ್ಕೆ ಕಣ್ಣ ಬೇಕು ದಾದಲ್ಯಾ. ಸಾಂಗಲಿ, ಬೆಳಗಾಂವಿ, ಪುಣೆ ಅಂದರ 'ಸ್ಟ್ಯಾಗ್ನೆಂಟ್ ವಾಟರ್'ಊ. ಚಲತ್ ಶಕ್ತೀನs ಇಲ್ಲ ಅದರಾಗ ದಾದಲ್ಯಾ, ಇನ್ನೂ ಆರು ಹೊಡದಿಲ್ಲಾ. ಲಗೂ ಅಷ್ಟು ಮಾರೀ ಬಸಗೊಂಡು ಇರಾಣೀಯಲ್ಲೇ ಹೋಗೂಣು. ಒಂದ ಡೋಜು ಭರ್ತಿ ಹಾಕಿ, ತುಳಸೀ ಕಡೇ, 'ಕ್ವಿಕ್ ಮಾರ್ಚ್' ಮಾಡೂಣು. ಅಲ್ಲೇ ಸ್ನಾನಾ-ನಾಷ್ಟಾ ಬಗೀಹರಿಸಿ, ಎಂಟ ಅನ್ನೂದರಾಗ, ನಿಮ್ಮ ಸಾಹೇಬರನ ಗಾಠಾಸೂಣು. ಏನಂತೀ?"

"ನನಗೂ ಇದೇ ಠೀಕ ಕಾಣಸ್ತದ. ತುಳಸಿಗೆ ಇನಾ ವರದೀ ಒಪ್ಪಿಸಿಲ್ಲಾ. ಖರೇ ಅಂದರ ಪ್ರಥಮ ಶ್ರೋತಾನ ಹಕ್ಕು ಅಕೀದಿತ್ತು. ಆಗಲಿ – ಅಗದೀ 'ಸ್ಟೇಲ್' ಏನು ಆಗಿಲ್ಲಾ ಬಾತಮೀ. ಸಾಹೇಬರನ ಹಿಂದಾಗಡೇ ಭೆಟ್ಟಿ ಆಗೂಣಂತ. ದಾದಾ ನಿನ್ನೇ ಮುಂಬೈ ಬಿಟ್ಟನೋ ಏನು ಇನ್ನಾ ಇಲ್ಲೇ ಇದ್ದಾನೋ ಅನ್ನೂದರ ತಪಾಸ ತಕ್ಕೊಂಡ ಬರತೀನಿ. ಬಸಗೋಂಡಾ, ನಬೀಸಾಬಾ ಇಳದ ಹೊಟೇಲಿನ ಪತ್ತೇ ಅದs ನನ್ನ ಕಡೇ."

ಇಬ್ಬರೂ ಮುಖಮಾರ್ಜನ ಮುಗಿಸಿ, ಹಾಸ್ಟೆಲ್ಲಿನಿಂದ ಹೊರಬಿದ್ದೆವು. ಇರಾಣಿಯಲ್ಲಿ ಚಹ ಮುಗಿಸಿ, ಮುಂಬೈ ವೈಭವ ನೋಡುತ್ತ, ತುಳಸಿಯ ಮನೆಯನ್ನು ತೀವ್ರ ಮುಟ್ಟುವ ಈರ್ಷೆಯಿಂದ ದಾರಿ ಕಡಿಯುತ್ತ ನಡೆದೆವು.

ತುಳಸಿ ಇನ್ನೂ ಸಕ್ಕರೆ-ನಿದ್ರೆಯಲ್ಲಿರುವ ಸಂಭವವಿತ್ತು. ನಮ್ಮ ಅವೇಳೆ

ಯಲ್ಲಿಯ ಆಗಮನದಿಂದ ಅವಳ ಸಕ್ಕರೆ-ನಿದ್ರೆಗೆ ಭಂಗಬರಬಹುದಾಗಿತ್ತು. ನಾನು ಒಬ್ಬನೇ ಧುತ್ತೆಂದು ಹೋಗಿ ಅವಳೆದುರು ನಿಂತಿದ್ದರೆ ನನಗೆ ಪುಷ್ಪಾರ್ಚನೆಯಾಗು ವದರಲ್ಲಿ ಸಂದೇಹವೇ ಇರಲಿಲ್ಲ. ಆದರೆ ಜೊತೆಗೆ ವಿಶ್ವಾಸನಿದ್ದ. ಹೂ ನಿವಾಳಿಸಿ ಒಗೆದೇ ಸ್ವಾಗತವಾಗುತ್ತಿತ್ತು.

ಸಡಾ-ಸಮ್ಮಾರ್ಜನ ಮುಗಿಸಿ, ತಲೆತುಂಬ ಪ್ರೋಕ್ಷವಾಗಿ ಸೆರಗೆಳೆದುಕೊಂಡು, ತುಳಸಿ, ತಲೆಬಾಗಿಲ ಹೊಸ್ತಿಲಕ್ಕೆ ರಂಗವಲ್ಲಿಯ ಶ್ರೀಕಾರ ಬರೆಯುತ್ತಿರುವದು ಕಂಡಿತು. ತೀರ ಸಮೀಪಕ್ಕೆ ಬಂದಂತೆ, ತುಳಸಿಯ ಕೋಕಿಲಕಂಠ ಇಳಿದನಿಯಲ್ಲಿ, ಹೋನಾಜಿ ಬಾಳನ ಅಮರಭೂಪಾಳಿಯಲ್ಲಿಯ —

"ಅರುಣೋದಯ ಹೋತಾಂಚ ಉಡಾಲೇ । ಚರಾವಯಾ ಪಕ್ಷೀ"

ಪ್ರಭಾತಗೀತದಲ್ಲಿಯ ಈ ಸಾಲನ್ನು ಗುಣುಗುಣಿಸುತ್ತಿರುವದು ನಮಗೆ ಕೇಳಿಸಿತು. ನಾವು ತೀರ ಸಮೀಪಕ್ಕೆ ಬಂದಾಗ ತುಳಸಿ ಮುಖವೆತ್ತಿ ನೋಡಿದಳು. ಸ್ವರ್ಣ ತಟ್ಟೆಯಲ್ಲಿ ರತ್ನದೀಪವಿಟ್ಟು, ಆರತಿ ಎತ್ತುವಂತೆ, ಆ ಬಟ್ಟಮುಖದಲ್ಲಿಯ ಬಟ್ಟ ಗಣ್ಣಿನ ದೇದೀಪ್ಯಮಾನ ನೀರಾಂಜನ-ಕಾಂತಿ, ಮೃದು-ಹಾಸದೊಂದಿಗೆ ಬೆರೆತು ಸುಸ್ವಾಗತ ಕೋರಿತು.

"ತುಳಸೀ, ನಾವು ಬರತಿರೂದನ್ನ ನೋಡೇ, ಅಮರಭೂಪಾಳಿ ಆಲಾಪಸ ಲಿಕ್ಕೆ ಸುರುವು ಮಾಡಿದ್ದಿ ಕಾಣಸ್ತದ? ಅರುಣೋದಯ ಹೋತಾಂಚ ಉಡಾಲೇ ಅಂತs ಮುದ್ದಾಂ ಅಂದಿರಬೇಕು. ಆದರ ಪಕ್ಷಿ ಹೊರಗ ಹಾರಿ ಹೋಗದೇ, ನಿನ್ನ ಅಂಗಳದಾಗೇ ಇಳದೂ, ವಿಶ್ಯಾ, ನೀನು ಮುದಿಗೂಸ ಆಗಿದ್ದರೂ, ರಾಧಾಕಾಕೂ ನಿನ್ನನ್ನ ತೊಡೀ ಮ್ಯಾಲ ಮಲಗಿಸಿಕೊಂಡು, ಒಂದ ಹಾಡಾ ಹಾಡತಿದ್ದರು. ನೆನಪ ಅದs ಏನು? "ರಾಜ ಬರತಾನಂತ ರಾಜಂಗಳುಡುಗ್ಯಾರ – ತಾಜ ಮಲ್ಲೀಗಿ ಹರವ್ಯಾರ" ಅಂತs. ರಾಧಾಕಾಕೂನ ಬಯಕಿ ಪೂರ್ಣ ಆತು. ರಾಜಾನ ಸ್ವಾಗತಕ್ಕ ತುಳಸೀ ತಯಾರೀ ಅಗದೀ ಯೋಗ್ಯ ಅದs"

"ಯಾಕ ದಾದಲ್ಯಾ? ಒಳಗ ಬರೂದಿಲ್ಲೇನು? ಬುತ್ತೀ ನಿವಾಳಿಸಿ ಒಗೀದs ನಿನ್ನ ರಾಜಾಗ ಒಳಗ ಬರೂ ಮನಸ್ಸ ಇರದಿದ್ದರ ಹೇಳು. ಇಬ್ಬರಿಗೂ ಆರತೀ ಮಾಡೇ ಒಳಗ ಕರಕೋತೀನಿ"

ತುಳಸಿ ನಗುತ್ತ, ಬಾಗಿಲಿಗೆ ಅಡ್ಡವಾಗಿ ನಿಂತು ಹೇಳಿದಳು.

"ಮುಂಜಾನೆ ಏಳೂತ್ಲೇ ಮೋರ್ಚಾ ಬಂತಂತ ಮಂಗಳಾರತೀ ಮಾತ್ರ ಮಾಡಬ್ಯಾಡಾ. ದಾದಲ್ಯಾ ಆರತೀ ಮಾಡಿಸಿಗೊಂಬೂವಂಥಾ ಕೆಲಸಾ ಮಾಡಿ ಬಂದಾನ. ಅಂವಗ ಬೇಕಾರ ಆರತೀ ಮಾಡು. ಓವಾಳಣೀ ಏನ ಹಾಕತಾನ ಕೇಳಿ ಇಟಗೋ"

ವಿಶ್ವಾಸ.

"ವಿಶ್ಯಾ, ಓವಾಳಣೀ ಹಾಕಲಿಕ್ಕೆ, ಒಂದು ಮಸ್ತ ವಸ್ತಾ ಜ್ಯಾಕಿಲೇ ಇಟ್ಟಿದ್ದೆ. ಕಣ್ ತಪ್ಪಿಸಿ, ತುಳಸಿ ಅದನ್ನ ಗಡಪ್ ಮಾಡಿದಳು. ನಾ ಕೊಡೂ ವಸ್ತಾ ಆಕೀ ತಾಬೇದಾರೀನೇ ಆಗೇದ. ಇನ್ನೋನು ಓವಾಳಣೀ ಹಾಕಲಿ? 'ಸುಖೀ ಭವ' ಅಂತ ಬೇಕಾರ ಅಂತೀನಿ. ಇಬ್ಬರೂ ಜೋಡಿ ಆಗಿ ನಿಂದರ್ರೀ."

"ದಾದಲ್ಯಾ ಹುಕೀಯೊಳಗ ಇದ್ದಾನ ಆಂs ರಾಜಾ. ನಿನ್ನೆ ರಾತ್ರೀ ಮುಕ್ಕಾಂ ಎಲ್ಲೆ ನಿನ್ನಲ್ಲೆ ಮಾಡಿದ್ನೇನು?"

ತುಳಸಿ ಕಿತಬಿಸಿದಳು.

"ಬರೇ ಮುಕ್ಕಾಂ ಯಾಕ ತುಳಸೀ. ಒಂದೇ ಪಲ್ಲಂಗದ ಮ್ಯಾಲs ಇಬ್ಬರದೂ ಶಯನ ಆಗಿತ್ತು. ದಾದಲ್ಯಾ ನನ್ನ ಜೋಡೀ ಹೊಲಕೊಂಡಾನ. ಅಗಲಿದರ ಆಣಿ. ನೀರು ಕಾದಾವೇನ ತುಳಸೀ? ನಾನು ಸ್ನಾನಾ ಬಗೀಹರಸ್ತೀನಿ. ದಾದಲ್ಯಾ ನಿನ್ನ ಮುಂದ ಕೂತು ತನ್ನ ಕಿತಬೀ ಬಿಚ್ಚಲಿ ಅನಕಾತ."

ವಿಶ್ವಾಸ.

"ಇನ್ನೊಂದ ಗಿರಾಕಿ ಬಂದsದ ರಾಜಾ, ಕಿತಬೀ ಕೇಳಲಿಕ್ಕೆ. ಮುಂಜಾನೆ ಎದ್ದವರೇ ಬಂದು ನನ್ನ ಚಕಿತ ಮಾಡಬೇಕಂತ ಮಾಡಿದ್ದಿರಿ. ನಿಮ್ಮನ್ನ ನಾನೂ ಚಿತ್‌ಪಟ್ಟ ಮಾಡಿದೆ. ಖೋಲ್ಯಾಗ ಹಣೆಕ್ಯರ ಹಾಕರಿ; ಇನ್ನೂ ನಡರಾತ್ರೀ ಇದ್ಧಾಂಗ, ಇಸಮು ನಿದ್ದೀ ಒಳಗ ಆದs"

ತುಳಸಿ.

ನಾನು, ವಿಶ್ಯಾ ಒಂದೇ ನೆಗೆತದಲ್ಲಿ ಕೋಣೆಗೆ ಹಾರಿದೆವು. ರಗ್ಗಿನಲ್ಲಿ ಅಖಂಡ ಮೈ ಸುತ್ತಿಕೊಂಡು ಎಲ್ಲೆಲ್ಲಿಯೂ ಪತ್ತೇ ಹತ್ತದ ಥರ್ತಿಯಲ್ಲಿ ಒಂದು ಇಸಮು ಗೊರಕೆ ಹೊಡೆಯುತ್ತ ಮಲಗಿತ್ತು. ಇಬ್ಬರೂ ಒಬ್ಬರ ಮುಖ ಒಬ್ಬರು ನೋಡುತ್ತ ನಿಂತಾಗ, ನಮ್ಮ ಬೆನ್ನಿಗೇ ಬಂದ ತುಳಸಿ —

"ಹೇಃ, ಎರಡೂ ಅಗದೀ ಖೋಕಾ ಅಂದರ ಖೋಕಾ. ಆಸಪಾಸ ನಜರ ಹೋಗಿದ್ದರ ಒಗಟ ಒಡೀತಿತ್ತಲಾ. ತಲೀ ಇದ್ದರಲ್ಲಾ ಇಬ್ಬರಿಗೂ"
ಎಂದು ಮುಸಿಮುಸಿ ನಕ್ಕು ಹೇಳಿದಳು.

ಅಲ್ಲೇ ಟೀಪಾಯಿಯ ಮೇಲೆ ಕೇಮಾಲ್‌ಪಾಶಾ ಧರಿಸುವಂತಹ ಟರ್ಕಿಶ್ ಶಿರಸ್ತ್ರಾಣವಿತ್ತು. ಆ ಮಕುಟವನ್ನು ಧರಿಸುವ ವ್ಯಕ್ತಿಯ ಬಗ್ಗೆ ಬಹಳ ಊಹಾ ಪ್ರೋಹ, ನೇತಿನೇತಿಯ ಅಗತ್ಯವಿರಲಿಲ್ಲ. ಜನ್ಮದಾರಭ್ಯ, ಮಹಾರಥಿ ಕರ್ಣನಿಗೆ ಕರ್ಣಕುಂಡಲಿಗಳು ಅಂಟಿದಂತೆ, ಈ ಶಿರಸ್ತ್ರಾಣ ಕೂಡ – I will sink or swim with ದಸ್ತಗೀರ್‍ಯಾ – ಎನ್ನುವ ಜಿದ್ದಿನಿಂದಲೇ ಅವನಿಗೆ ಚಿಕಟಾಯಿಸಿಕೊಂಡಿತ್ತು. ಈ ಟೆಪ್ಪಿಗೆಯ ಬಹದ್ದೂರ, ದಸ್ತಾಗೀರ್‍ಯಾನೇ ಎನ್ನುವದರಲ್ಲಿ ಸಂದೇಹವೇ ಇರಲಿಲ್ಲ. ಆ ಶಿರೋಭೂಷಣವನ್ನು ಎತ್ತಿದವನೇ, ನಾನು, ಮುಸುಕು ಬಿಗಿದುಕೊಂಡು ಬಿದ್ದ ದಸ್ತಾಗೀರ್‍ಯಾನ ಮೇಲೆ ಅಪ್ಪಳಿಸಿದೆ. ವಿಶ್ಯಾ, ಮುಸುಕಿನ ಬುರುಕಿ ಹಿರಿದ. ಆ ಹಿರಿತಕ್ಕೆ ಎಚ್ಚರಾದ ದಸ್ತಗೀರ್‍ಯಾ, ನಮ್ಮನ್ನು ನೋಡಿದವನೇ ಎರಡೂ ಕೈಯಿಂದ ಮುಖ ಮುಚ್ಚಿಕೊಂಡು —

"ಯಾ ಅಲ್ಲಾ... ಯಾ ಖುದಾ... ತೋಬಾ... ತೋಬಾ"
ಎಂದು ಇನ್ನೂ ಏನೇನೋ ನುಡಿಯುತ್ತಿದ್ದ. ಅಷ್ಟರಲ್ಲಿಯೇ ದಾದಲ್ಯಾ, ವಿಶ್ಯಾನ ತೋಳ ತೆಕ್ಕೆಯಲ್ಲಿ ಸಿಕ್ಕು ಗಾಸಿಯಾದ. ನಾನು —

"ಖುದಾಕೇ ಬಚ್ಚೇ, ಊಠ"
ಎಂದೆ.

"ಸೋ ಜಾ, ರಾಜಕುಮಾರಾಽ, ಸೋೀ ಜಾಽಽ"
ಎಂದು ವಿಶ್ಯಾ, ದಸ್ತಗೀರ್‍ಯಾನನ್ನು ಮತ್ತೆ ಹಾಸಿಗೆಯ ಮೇಲೆ ಅಡ್ಡವಾಗಿಸಿದ. ದಸ್ತಗೀರ್‍ಯಾ, ಇಬ್ಬರ ನಡುವೆ ಅಂಗಾತ ಬಿದ್ದು —

"ನರೀ ಮಾರೀ ತೋರಿಸಿದ್ರ್ಯಾಪಾ, ನಸೀಕಲೇ ಏಳೂದರಾಗ. ಇನ್ನಽ ನನ್ನ ಮುಂಬೈಯಾಗಿನ ಕೆಲಸ ಬಗೀಹರದರ ಕೇಳರಿ"
ಎಂದ.

"ಏನ ಮಗನಽ, ಮಸ್ತ ಅಗದೀ, ಟಾಟಾ-ಬಿರ್ಲಾರ ಖರೀದೀಗೇ ಬಂದೀ? ವಾಯದಾ ಜಮಾಸಲಿಲ್ಲಂತ ಹಳಹಳಸಬೇಕಾಗೇದ? ಕಳಕ ಬೆಣ್ಣಿ, ಕೊಳಕ ಬಟಾಟಿ ದಲಾಲೀ ಮಾಡೂವವಗ ಕೆಲಸಾ ಬಗೀಹರಸೂ ಧಾವತ್ಯಾಕಲೇ?

ಚೋವಿಸ ತಾಸಾ ಅಖಂಡ ಬಾರಾ ತಿಂಗಳಾ, ಪೋಕಳೀಕ ಅವs ನಿನ್ನ ರದ್ದಡ ಮಾಲ ಖಪ್ಪ ಆಗಲಿಕ್ಕೆ. ಏಳ ಮಗನs, ಝಾಡಿಸಿಗೊಂಡು. ಇಲ್ಲದಿದ್ದರ ನೋಡು ಮಲಗಿದಲ್ಲೇ ಚಹಾದ ಗೊಟ್ಟಾ ಹಾಕತೇವು"
ನಾನು.

"ವಿಶ್ಯಾ, ಬೆಳಗಹರಿಯೂದರಾಗ, ಈ ನರೀ ಮಾರೀ ಭಟ್ಟನ್ನ, ಯಾಕ ಕಟಿಗೊಂಡ ಹೊಂಟಿ. ನಾ ಬರೂ ಮುಂದ ವಸೂ ಹೇಳಿದ್ದಳು – ಮುಂಬೈಯಾಗ ಬೇಕಾದವರನ ಭೆಟ್ಟಿ ಆಗು. ಆದರ ದಾದಲ್ಯಾಗ ಮಾತ್ರ ಮಾರೀ ತೋರಸ ಬ್ಯಾಡಂತ. ಮುಸಕ ತಗಿಯೂದರಾಗs ತನ್ನ ನರೀ ಮೋತೀ ತಂದ ಹಿಡದ ಮಗಾ ನನ್ನ ಮುಂದs. ವಿಶ್ಯಾ, ಸಾಂಗಲೀವು ಮಸ್ತ ಎರಡು ಖುರಾಕಿನ ಡಬ್ಬಿ ಬಂದಾವ. ಒಂದು ತೌರಮನೀದು, ಒಂದು ಅತ್ತೀಮನೀದು. ಹದನೈದ ದಿನಾ ಊಟಕ್ಕ ಖಾಡಾ ಹಾಕಿದರೂ ನಡೀತದ. ದಾದಲ್ಯಾಗ ತೋರಸಬ್ಯಾಡಾ. ನಾಕೇ ದಿನದಾಗ ನಿಕಾಲ ಮಾಡತಾನ."
ಬನೂಮಾಮೀ, ವಸೂ ವಿಶ್ವಾಸನಿಗೆ ಫರಾಳದ ಡಬ್ಬಿ ಕಳಿಸಿದ ಬಗ್ಗೆ ದಸ್ತಗೀರ್ಯಾ ತಿಳಿಸಿದ.

"ವಿಶ್ಯಾ, ಇನ್ನ ನನ್ನ 'ಪ್ರೊಗ್ರ್ಯಾಮ್' ಎಲ್ಲಾ 'ಪೋಸ್ಟ್‌ಪೋನ್' ಆದೂ ಅಪಾ. ಡಬ್ಬೀ ತಳಾ ಝಾಡಿಸಿದ ಮ್ಯಾಲs ಮುಂದಿನ ವಿಚಾರಾ. ಸಾಂಗಲೀ ಪ್ರಸಾದ ಸಿಗದs ಭಾಳ ದಿನಾ ಆಗಿತ್ತು. ವಸೂ ಒಬ್ಬಾಕಿ ಇದ್ದಲಂದರ ಏನ ಮಜಾ ಬರತಿತ್ತಂದೀ? ಸೋಮವಾರದ ಹೊತ್ತಿಗೆ ಪುಣೇಕ್ಕ ಬರಲಿಕ್ಕೆ ವಸೂಗ ತಾರ ಕೊಡೂಣು. ದಸ್ತಗೀರ್ಯಾನ್ನೂ ಮುಸಗೀ ಬಿಗದು ಕರಕೊಂಡ ಹೋಗೂಣು. ದಸ್ತಗೀರ್ಯಾ, ಸುರ್‍ಯಾನ ಕಕೂ ಬಂದsದ ಪುಣೇಕ್ಕ. ಜಮಾಸಿದರ ಸಾಖರಪುಡಾ ಅದs. ಅನಾಯಾಸಾ ಬಂದೀ. ಸೋನಕ್ಕ ಅಸರಂತಾ ನಿನ್ನ ನೆನಸ್ತಾರ. ಕಿಶ್ಯಾ ಏನು ಮಸ್ತ ಮಾಲ ಆಗ್ಯಾನಂದೀ? ಇದ್ನೋಡು ದೇವರs ಅಂತs ಇಂದ ಗುರುವಾರಾ. ಶುಕ್ರ-ಶನಿ-ರವಿ. ಮೂರ ದಿನಾ ಪುಣೇದ ಮುಕ್ಕಾಂ. ಸೋಮವಾರ ದಿನಾ ಓ ಲಕ್ಷ್ಮಣಾ ಅಂತs ತಿರಗಿ ಮುಂಬೈ ಪ್ರಯಾಣಾ. ಏನಂತೀ?"
ನಾನು.

"ರಾಜಾ, ಜಳಕದ ಗಡಿಬಿಡಿ ಮಾಡಿದಂವಾ ಹರಟಿಗೆ ಕೂತಿಲ್ಲೋ? ನನಗ ಗೊತ್ತs ಇತ್ತು. ಇನ್ನ ಜಾಗಾ ಬಿಟ್ಟು ನೀವು ಹಲಾಸಿದರ ಕೇಳು. ಚಹಾ ಇಲ್ಲೇ

ತರ್ಲೇನು ? ಏನು ಒಳಗs ಬರತೀರೋ ?"
ತುಳಸಿ.

ನಮ್ಮ ಚಹ ಅಡುಗೆಯ ಮನೆಯಲ್ಲಿಯೇ ಮುಗಿಯಿತು. ವಿಶ್ವಾಸ, ಸ್ನಾನ ಮುಗಿಸಿ ಬರುವಷ್ಟರಲ್ಲಿ ನಾನು, ದಸ್ತಗೀರ್ರ್ಯಾ ತುಳಸಿಗೆ ನನ್ನ ಮುಂಬೈ-ಪುಣೆಯ ಕಂತ್ರಾಟದ ವಿವರ ವರದಿ ಮಾಡಿದೆ. ಎಂಟು-ಎಂಟೂವರೆಯೊಳಗಾಗಿ ಸಾಹೇಬ ರನ್ನು ಕಾಣಲು ಹೋಗಬೇಕಾದ ವಿಷಯ ತಿಳಿಸಿದೆ. ಏಳೂವರೆಯಾಗುತ್ತ ಬಂದಿತ್ತು. ಗಡಿಬಿಡಿ ಮಾಡದೆ ಗತಿ ಇರಲಿಲ್ಲ. ಸಾಹೇಬರನ್ನು ಕಂಡುಬಂದ ನಂತರ ಇಡೀ ದಿನ ನಮಗೆ ಅನ್ಯ ಉದ್ಯೋಗವೇ ಇರಲಿಲ್ಲ. ನನಗೆ ಶ್ಯಾಮರಾಯನ ಪತ್ತೇ ತೆಗೆಯಬೇಕಾಗಿತ್ತು. ಅವನು ಸೋಮವಾರದ ವರೆಗೆ ಮುಂಬೈಯಲ್ಲಿ ನಿಲ್ಲುವಂತೆ ಮಾಡಿ, ವಿಶ್ವಾಸನನ್ನು ಇಂದೇ ಪುಣೆಗೆ ರವಾನಿಸಬೇಕಾಗಿತ್ತು.

ನಿನ್ನೆ ಕೈಫಿಯತ್ತಿನ ವಿಷಯ ತಿಳಿದುಬಂದಾಗ ಶ್ಯಾಮರಾಯ ಇನ್ನೂ ಗಮಜಿ ನಲ್ಲೇ ಇದ್ದ. ಬಸಗೋಂಡ, ನಬೀಸಾಬರು ಅವನ ಹೇಳಿಕೆಯಂತೆ ಏನು ಬರೆದು ಕೊಟ್ಟಿದ್ದರೆಂಬುವದನ್ನು ನಾನು ಪ್ರತ್ಯಕ್ಷ ನೋಡಿರಲಿಲ್ಲ. ಅವರ ಕೈಫಿಯತ್ತು ಇನ್ನೂ ಯು.ಎಸ್.ನ ಕಡೆಗೇ ಇದ್ದವು. ಸಿ.ಈ. ಅವರು 'ಏನ್‌ಕ್ವಾಯರಿ'ಯನ್ನು ಶನಿ ವಾರವೇ ಬಗೆಪರಿಸಿದ್ದರೆ ಠೀಕ ಆಗತ್ತಿತ್ತು. ನಾವೂ ಮೋಕಳೀಕ ಆಗುತ್ತಿದ್ದೆವು. ಆದರೆ ಅಂದು ಸಿ.ಈ. ಅವರಿಗೆ ಬರೇ ನೀಲಾಶ್ವಗಳ ಓಟದ ಧ್ಯಾಸ. 'ಬೆಟ್' ಕಟ್ಟುವ ತದೇಕಧ್ಯಾನ. ಈ ಚಿಂತನದಲ್ಲಿ ಅವರಿಗೆ ಯಾರು 'ಡ್ಯಾಪ್' ಆದ – ಯಾರು 'ಕಂಡೆಮ್' ಆದ ಭಾನವಿರುವದಿಲ್ಲ. ಕೇವಲ ಮಹತ್ವದ ಕಾಗದಗಳಿದ್ದರೆ ಮಾತ್ರ ಅವರು ಅವುಗಳನ್ನು ಕಡೆಗಣ್ಣಿನಿಂದ ನೋಡುತ್ತಾರೆ. ಅನ್ಯಮನಸ್ಕರಾಗಿ – ಸಹಿ ಇದ್ದರೆ, ಸಹಿ 'ಪರ್ಸನಲ್' ಎಂದಿದ್ದರೆ – ಬರೇ 'ಇನೀಶಿಯಲ್' ಅಷ್ಟು ಮಾಡಿ, ಅವನ್ನು ಹೊತ್ತುಹಾಕುತ್ತಾರೆ. ಅಂದು ಅವರಿಗೆ ಸಹಸಾ ಯಾರೂ ತೊಂದರೆ ಕೊಡಲು ಹೋಗುವದಿಲ್ಲ. ಅವನ್ನು ಅರಿತುಬಲ್ಲ ಶೇಡಜೀ 'ಏನ್‌ಕ್ವಾಯರಿ'ಯ ಪ್ರಕರಣವನ್ನು ಸೋಮವಾರ ತೆಗೆದುಕೊಳ್ಳಬಹುದೆಂದು ಸೂಚಿಸಿದ್ದ. 'ಆಲ್ ರೈಟ್' ಎಂದು ಸಿ.ಈ. ಅವರು, ಸಾಹೇಬರ ವಿರುದ್ಧ ಬಂದ ಮೂಕೀ ಅರ್ಜಿಯ ಮೇಷ್ಮನದ ಮೇಲೆ – "put up on Monday." ಎಂದು ಕೆಂಪು ಶೀಸಿನಲ್ಲಿ ಗೀಚಿದ್ದರು.

ಅರ್ಜಿಗಳನ್ನು 'ರಿಕಾರ್ಡ್' ಮಾಡಿಸುತ್ತೇನೆಂದು ಯು.ಎಸ್. ಹೇಳಿದ್ದನಂತೆ.

ಶೇಡಜೀಯೂ ಅದರ ಕತೆ-ಗತಿಯನ್ನು ಹೇಳಿದ್ದ. ಆದರೆ, ಸಿ.ಈ. ಅವರು ಈ 'ಏನ್‌ಕ್ವಾಯರಿ'ನ್ನು ಸೋಮವಾರದ ದಿನ ನಡೆಸಿದರೆ... ನಡೆಸಲಿಕ್ಕಿಲ್ಲವೆಂದು ಅನುಮಾನಿಸಲು ಸಬಲ ಕಾರಣಗಳೂ ಇರಲಿಲ್ಲ. "These applications are a headache to me; I want to get rid of them once for all." ಎಂದು ಅವರು ಸಾಹೇಬರನ್ನು ಜವಾಬು ಕೊಡಲು ಹೇಳಬಹುದಾಗಿತ್ತು. ಸಾಹೇಬರಂತೂ ಗಟ್ಟಿಮುಟ್ಟಾಗಿ ಹೇಳೇ ಇದ್ದರು. "ಚೂರ-ಚಾರ 'ಕರಪ್ಟ್' ಇದ್ದದ್ದನ್ನ ಒಪಿಗೊಂಡಬಿಡತೀನಿ. 'ಫ್ರೂಮುನ್ಯಾಜರ್' ಅನೂದನ್ನ 'ರಿಫ್ಯೂಟ್' ಮಾಡತೀನಿ. ಏನು ಆಗೂದು ಆಗಿಹೋಗಲಿ" ಎಂದು. ಆಗುವದೇನು ಮಣ್ಣು? ಸಾಕ್ಷಿಗೆಂದು 'ಮೆಮೊ' ಹೋದ ಬಸಗೋಂಡ, ನಬೀಸಾಬ, ಶ್ಯಾಮರಾಯರಿಗೆ ಬುಲಾವಣೀ ಹೋಗುತ್ತಿತ್ತು. ಆರು ಫೂಟು ಎತ್ತರದ – ಆಜಾನುಬಾಹೂ – ಆರಕ್ತನಯನ ಸಿ.ಈ. ಅವರ ಕೇಸರೀ ಕಾಯವನ್ನು ಕಂಡು ಬಸಗೋಂಡ-ನಬೀಸಾಬರು ತತ್ತರಿಸುತ್ತಿದ್ದರು. ಇವರ ತೊದಲ ಮಾತು ಸಿ.ಈ. ಅವರಿಗೆ ತಿಳಿಯುವ ಸಂಭವವಿಲ್ಲ. ಅವರು "ಪಂತಸಾಬರು...ಪಂತಸಾಬರು" ಎಂದು ಅರಗಚ್ಚಿ ನುಡಿದಾಗ ನಮ್ಮ ಪಂತಸಾಬರು-ಶ್ಯಾಮರಾಯರು "ತತಃ ಪ್ರವಿಶತಿ ಶ್ಯಾಮರಾಯಃ" – ರಂಗದ ಮೇಲೆ ಬರುತ್ತಿದ್ದರು. ಬೇಫಿಕೀರ-ವೃತ್ತಿಯಿಂದ ಯು.ಎಸ್. ಕಂಡೆಮ್ ಆದರೆ, ಸಾಹೇಬರು ಡ್ಯಾಮ್ ಆದರೆ ಅದರ ಸೂತಕ ತಮಗೆ ತಟ್ಟದೆಂದು ನಿರ್ಲಜ್ಜರಾಗಿ ಸಾಹೇಬರ ಚಾರಿತ್ರ್ಯಕ್ಕೆ ಮಸಿ ಬಳೆಯುವ ಸಾಹಸ ಮಾಡಿದರೆ... ಸಿ.ಈ. ಅವರಿಗೆ ಅವನ ಮಾತಿನಲ್ಲಿ ನಂಬಿಗೆ ಹುಟ್ಟದೆ ಇರುತ್ತಿರಲಿಲ್ಲ. ಅವರಿಗೆ ಸಾಹೇಬರ ಬಗ್ಗೆ ನಾಲಸ್ತಿಯುಂಟಾಗುತ್ತಿತ್ತು. ಅವರ ಮರ್ಜೀ-ಖಾತೆಯಿಂದ ಸಾಹೇಬರು ವಜಾ ಆಗುತ್ತಿದ್ದರು... ಖಲಾಸ್ ಆಗುತ್ತಿದ್ದರು. ನನ್ನ ಕಿಶೆಯಲ್ಲಿ ಇನ್ನೂ ಮಡಗಿದ ಶ್ಯಾಮರಾಯನ ಪತ್ರಕ್ಕೆ ರದ್ದಿಯ ಬೆಲೆಯೂ ಇಲ್ಲದಾಗುತ್ತಿತ್ತು. ದಾದಲ್ಯಾನ ಡಾವಿನ ಅಡಿಗಲ್ಲೇ ಸರಕ್ಕನೆ ಸರಿದು, ಅವನು ಕಟ್ಟಿದ ಭವ್ಯ ಮಂದಿರ ಕುಸಿದು ಪಾತಾಳ-ಗರ್ಭಕ್ಕೆ ಇಳಿಯುತ್ತಿತ್ತು. ಶ್ಯಾಮರಾಯ ದುರ್ಯೋಧನನ ಕ್ರೂರ-ವಿಕಟ-ವಿಜಯೀ-ಹಾಸ್ಯ ಮಾಡುತ್ತಿದ್ದ.

ಬಸಗೋಂಡ-ನಬೀಸಾಬರು ಸಾದರಪಡಿಸಿದಂತೆ ಶ್ಯಾಮರಾಯನಿಂದಲೂ ಕೈಫಿಯತ್ತು ಪಡೆದು ಅದನ್ನು ಸಿ.ಈ. ಅವರಿಗೆ ಸಾದರಪಡಿಸಿದರೆ ಮಾತ್ರ, ಈ ಪಗರಣ ತಪ್ಪುತ್ತಿತ್ತು. ಆಡುವ ಬಾಯಿಯನ್ನು ಕೈಫಿಯತ್ತು ಒಪ್ಪಿಸಿದ ಕೈ

ಮುಚ್ಚುತ್ತಿತ್ತು. ಆ ಕೈಯ ತಲಾಶಕ್ಕೆ ನಾನು ಹೊರಡುವದು ಅಗತ್ಯವಿತ್ತು. ಇಲ್ಲಿ' ಮತ್ತೆ ಶೇಡಜೀಗೆ "ತ್ವಮೇಕಂ ಶರಣ್ಯಂ ವ್ರಜಾಮಃ" ಎಂದು ಅನನ್ಯಭಾವದಿಂದ ಶರಣುಹೋಗದೆ ಗತಿ ಇರಲಿಲ್ಲ.

ಶೇಡಜೀಗೆ ಗಂಟುಬಿದ್ದರೆ, ಅವನು ನನ್ನ ದಾರಿಯನ್ನು ಸುಗಮ ಮಾಡಬಲ್ಲ ನೆಂಬ ಖಾತ್ರೀ ಇತ್ತು. ಈ ಪ್ರಕರಣದ ಮೇಲೆ ಲಗೇಚ ಕ್ರಮವನ್ನು ತೆಗೆದು ಕೊಳ್ಳದೆ, ಅದು ಧೂಳಡರುವಷ್ಟು ದೂರ ಬಿಸಾಡಿಬಿಡುವ ಕ್ಲೃಪ್ತಿಯನ್ನು ಅವನು ಮಾಡಬರುವಂತಿತ್ತು. ಸಹಜಾಸಹಜೀ ವರುಷಾರು ತಿಂಗಳು ಇಂಥ ಪ್ರಕರಣ ಗಳನ್ನು ನಿರ್ಜೀವ, ನಿಸ್ಸತ್ವ ಮಾಡುವದು ಅಷ್ಟೇನೂ "ಮಹಾ" ಸದರಿನಲ್ಲಿ ಬರುವ ಸಾಹಸವಲ್ಲ. ಯಾಕೆ ಗಡಪ್ ಮಾಡಿದಿರೆಂದು ಕೇಳುವ ಚಿಕಿತ್ಸೆಗಿಂತ, ಯಾಕೆ ಕೆದರಿ ತೆಗೆದಿರೆಂದು ತ್ರಾಸಿಕವಾಣಿಯಿಂದ ಕೇಳುವ ಸಂಭವವೇ ಹೆಚ್ಚಾಗಿತ್ತು. ಇಂಥ ಪ್ರಕರಣಗಳೆಂದರೆ, ಸ್ವಚ್ಛ ಭಾಷೆಯಲ್ಲಿ, ಹಾದರಗಿತ್ತಿಯ ಹೆಣವಿದ್ದಂತೆ. ಹೆಗಲು ಕೊಡಲು ಯಾವ ದೈವದವರೂ ಮುಂದಾಗುವದಿಲ್ಲ. ನಗರಸಭೆಯವರ ಕಚರಾ ಗಾಡಿಯನ್ನು ಏರಿಯೇ ಆ ಹೆಣ ಸ್ಮಶಾನದ ದಾರಿಯನ್ನು ಹಿಡಿಯಬೇಕು. ಇಲ್ಲ ದಿದ್ದರೆ, ಪೋಲೀಸ-ಪಂಚನಾಮೆ, 'ಪೋಸ್ಟ್-ಮಾರ್ಟೆಮ್'ದ ವಿಧಿ ಮುಗಿಯುವ ತನಕ ಬಿದ್ದಲ್ಲಿ ಬಿದ್ದು ಕೊಳೆತು ಕಳಕ ನಾತ ಹೊರಡಿಸಬೇಕು.

ಶೇಡಜೀ ಗಡಪ್ ಧಂದೆಯಲ್ಲಿಯೇ ಹದಿನೈದು-ಇಪ್ಪತ್ತು ವರ್ಷದ ವರೆಗೆ ಏಕಪ್ರಕಾರವಾಗಿ ದೇಹ ತೇಯುತ್ತ ನಡೆದಿದ್ದಾನೆ. ಅವನಿಗೆ ಇಂಥಾ ಕ್ಲೃಪ್ತಿ ಯಃಕಶ್ಚಿತ್ ಬಾಬು.

"ನಿಮ್ಮಾಂವಾ ಅನ್ನೂ ಒಂದು ವಿಶ್ವಾಸದ ವ್ಯಕ್ತೀ ಸೇಕ್ರುಟರೀಏಟದಾಗ ಇದ್ದರ ಝುಲ್ಲ ಇರೂದಿಲ್ಲಾ. ನಿರ್ಧಾಸ್ತತನಾ ಇರತ್ಯದ. ಶೇಡಜೀದು, ರಗ್ಯಾಡ ಮದತ ಆಗೇದ. ಅಂವನ್ನೂ ಖುಷ್ಯಾಗ ಇಡೂದು ಠೀಕ ಸಾಹೇಬರ್‍ರ."

ಶೇಡಜಿಯನ್ನು ಖುಷಿಯಲ್ಲಿ ಇಡುವ ವಿಷಯದ ಬಗ್ಗೆ ನಾನು ಸಾಹೇಬ ರನ್ನು ಜಾಗರಿಸಬೇಕಾಗುತ್ತಿತ್ತು.

ಪಿ.ಡಬ್ಲ್ಯೂ.ಡಿ.ಯಲ್ಲಿ "ಖುಷ್ಯಾಗಿಡುವ" ವಿಷಯ ಹೊಸದಲ್ಲ. ಎಂಥ ಶುಕಾಚಾರಿ-ಧರ್ಮರಾಜರಿಗೂ ಇದು ಅವಗತವಿದ್ದೇ ಇರುತ್ತದೆ. ಇರಬೇಕಾ ದದ್ದು ಧರ್ಮ. ಪಿ.ಡಬ್ಲ್ಯೂ.ಡಿ.ಯಲ್ಲಿ ನವಕರಿಯ ವ್ರತಬಂಧವಾದ ದಿನವೇ 'ಖುಷ್ಯಾಗಿಡುವ' ಆ ಮಹಾಮಂತ್ರವನ್ನು, ಆ ಅಮರ ಗಾಯತ್ರಿಯನ್ನು – 'ಹೆಡ್

ಕ್ಲಾರ್ಕ್ – ಅಕೌಂಟೆಂಟ್' ಆದಿ ದೇವಪಿತೃಗಳು ಕಿವಿಯಲ್ಲಿ ಪದಿಸುತ್ತಾರೆ. ಪ್ರತಿಷ್ಠ ಪಟು. ಏಕದಮ್ ಮಂತ್ರದರ್ಥ ಮಾಡಿಕೊಂಡು, ತಾನೂ ಖುಷಿಯಾಗಿರುವ ದನ್ನು ಅನ್ಯರನ್ನೂ ಖುಷಿಯಲ್ಲಿಡುವದನ್ನೂ ಆಚರಣೆಯಲ್ಲಿ ತರುತ್ತಾನೆ.

ಶೇಡಜೀ ಖುಷಿಯಾಗಬೇಕು; ಸಾಹೇಬರು ಅವನನ್ನು ಖುಷಿಯಾಗಿಸ ಬೇಕು.

ಸಾಹೇಬರು ಅನ್ಯ ಬಾಬತ್ತಿನಲ್ಲಿ ಖೋಕಾ ಆದರೂ, ಓಂದೆ ಕಲಿತು, ಆಚರಿ ಸುತ್ತ ಬಂದ ಈ ಗಾಯತ್ರೀ-ಧರ್ಮ ಚಾಚೂ ತಪ್ಪದೆ ಅನುಸರಿಸುತ್ತಾರೆ. ನಿಮಗೆ ವಿವರವಾಗಿ ಹೇಳಬೇಕಾದಂತೆ ಅವರಿಗೆ ತಿಳಿಸುವ ಅಗತ್ಯವಿಲ್ಲ.

"ಶೇಡಜೀ. ನಿಮ್ಮ ಕೆಲಸೂ ಆಗೇದ. ನಾ ಎಲ್ಲಾ ಬಂದೋಬಸ್ತ ಮಾಡೀನಿ" ಎಂದು ನಾನು ಮಾಡಿದ ಬಂದೋಬಸ್ತಿನ ವಿಷಯ ಅವನಿಗೆ ತಿಳಿಸಬೇಕಾಗಿತ್ತು.

ಇದೆಲ್ಲ ರಗಳೆ ಬಗೆಹರಿಯಬೇಕು; ಸಾಹೇಬ-ವಿಶ್ವಾಸರ ಭೆಟ್ಟಿ ಮಾಡಿಸ ಬೇಕು. ಶ್ಯಾಮರಾಯನನ್ನು – ಇಲ್ಲ ಶೇಡಜಿಯನ್ನು ಗಾಠಾಯಿಸಬೇಕು. ಈ ಕಂತ್ರಾಟ ಮುಗಿಸುವದರಲ್ಲಿ ಹೊತ್ತು ಹೊಡಮಳ್ಳುತ್ತಿತ್ತು. ತುಳಸಿ. ವಿಶ್ಯಾ• ದಸ್ತಗೀರ್ಯಾ ಕಂಪೂದಲ್ಲಿ ರಮಿಸುವ ಭಾಗ್ಯ ನನಗೆ ದೊರೆಯುತ್ತಿದ್ದಿಲ್ಲ. ಈ ಭಾಸ ಗಡಿ ವಿಶ್ಯಾ-ದಸ್ತಗೀರ್ಯಾರ ತಲೆಗೆ ಹತ್ತುವ ವಿಷಯವಲ್ಲ. ಸಾಹೇಬರ ಭೆಟ್ಟಿ ಅವರನ್ನು ಅಲ್ಲಿಂದ ದಾಟಿಸಿ. ನನಗೆ ಅನ್ಯ ಲಿಗಾಡಿಗೆ ಕೂಡುವ ತಾಪತ್ರಯವಿತ್ತು.

"ದಸ್ತಗೀರ್ಯಾ, ಇಂದ ಗುರವಾರಾ. ನಾಳೆ ಜುಮ್ಮೆ, ಜುಮ್ಮೇಸಿ-ಜುಮ್ಮೆ ಲೆಕ್ಕದಲೆ ನಾಳೆ ನೀನು ಬೋಡೀಬಸಗೊಂಡರೂ ನಡೀತದ. ಇಂವ ಅದಕ ಚಕ್ರಾ ಕೊಡು. ಧರ್ಮಪಾಲನಾ ಮಾಡಿದ ಪುಣ್ಯಾ ಪದರಾಗನೂ ಬೀಳತದ. ನೀ ಸ್ನಾನಕ್ಕ ಕೂತರ ಏಳ ದಿನದ ಕೀಬ ಕಿತ್ತಲಿಕ್ಕೆ ನಾಕ ತಾಸ ಆದರೂ ಸಾಕಾಗ್ಹಾಂಗಿಲ್ಲಾ. ಇಲ್ಲೇ ಬಾರಾ ಆಗತದ. ವಿಶ್ಯಾ. ಹೀಂಗ ಮಾಡೂಣು: ನೀನು-ದಸ್ತಗೀರ್ಯಾ ಸ್ನಾನಾ-ನಾಷ್ಟಾ ಬಗೀಹರಿಸಿ 'ಗ್ರೀನ್ಸ್ ಹೋಟೇಲ್'ಗೆ ನೆಟ್ಟಗ ಬರ್ರಿ. ನಾ ಮುಂದ ಹೋಗಿರತೀನಿ. ಇನಾ ಹಜಾರ ಲಿಗಾಡ ಅವs ನನ್ನ ಕೊಳ್ಳಿಗೆ."

"ಒಂದ ಲಿಗಾಡರs ನಿನ್ನ ಕೊಳ್ಳಿಗೆ ಉರ್ಲ ಹಾಕೊಲ್ದಲಾ, ದಾದಲ್ಯಾ. ನೀ ಟಕ್ ಅಂದರs ಠೀಕ ಆಗತದ. ಉರ್ಲ ಬೀಳೂದರಾಗ ಕುತ್ತಿಗೀ ಝಾಡಸ್ತಾನ ಮಗಾ."

ದಸ್ತಗೀರ್ಯಾ.

“ದಸ್ತಗೀರ್‍ಯಾ, ದಾದಾ ಈ ಸಾರೆ ಝುಕಾಸ ನೂಲಿನ ಹಗ್ಗಾನs ಒಗದಾನ. ದಾದಲ್ಯಾ ಬಚಾವಾಗಲೀ. ಫಾಶೀ ಅಂವಸರ ಹತ್ತೇದ ಅಂವಗ. ಅದಕs ಧಡಪಡ ನಡಸ್ಯಾನ.”
ವಿಶ್ವಾಸ.

ಇಬ್ಬರಿಗೂ ನನ್ನ ಫಾಶಿಯ ವಿಚಾರ ಬಿಟ್ಟು ಮನೆಯಿಂದ ಹೊರಬಿದ್ದು ರಸ್ತೆಗೆ ಬಂದೆ. ‘ಬಸ್-ಸ್ಟಾಪ್’ ಅಲ್ಲೇ ಇತ್ತು. ಬಂದ ಬಸ್ಸುಗಳೆಲ್ಲ ತುಂಬಿ ತುಂಬಿ ಬರುತ್ತಿದ್ದವು. ಈ ಅಡ್ನಾಡಿ ಬೀದಿಯಲ್ಲಿ ಇಳಿಯುವ ಗಿರಾಕಿಗಳೇ ಇರಲಿಲ್ಲ. ಬಸ್ಸಿಗಿಂತ ಟ್ಯಾಕ್ಸಿ ಚುಟಕಿಯ ವ್ಯವಹಾರ. ಗ್ರಾಮಪ್ರದಕ್ಷಿಣೆ ಮಾಡಿ ‘ಗ್ರೀನ್ಸ್ ಹೊಟೆಲ್’ ಮುಟ್ಟಬೇಕಾಗುತ್ತಿತ್ತು, ಈ ಬಸ್ಸಿನ ಸೋಬತಿಗೆ ಬಿದ್ದಿದ್ದರೆ. ಅದರ ಉಸಾಬರಿಯನ್ನು ಈಗ ಬಿಟ್ಟು ಒಂದು ‘ಟ್ಯಾಕ್ಸಿ’ ಹಿಡಿದು ‘ಗ್ರೀನ್ಸ್ ಹೊಟೆಲ್’ ಅಭಿಮುಖನಾದೆ.

ಸಾಹೇಬರು ಉತಾವಿಳರಾಗಿ ನಮ್ಮ ದಾರಿ ಕಾಯುತ್ತಿದ್ದರು. ನಾನೊಬ್ಬನೇ ಬಂದದ್ದನ್ನು ನೋಡಿ ಅವರು ತೀರ ನಿರಾಶರಾದರು. ವಿಶ್ವಾಸ, ಅವನ ದೋಸ್ತ ದಸ್ತಗೀರಸಾಹೇಬರು ಈಗ ಬರುತ್ತಾರೆಂದು ತಿಳಿಸಿದ ಮೇಲೆ ಅವರ ಬಾಡಿದ ಮುಖ ಸತೇಜವಾಯಿತು. ಶೇಡಜಿಯ ಸುವರ್ಣಪುಷ್ಪ-ದಕ್ಷಿಣೆಯ ಅಳತೆ-ಆಕಾರ ಠರಾವಾಗಿ, ಚಾಂದೀಖುರಾಕು ನನ್ನ ಕಿಶೆ ಸೇರಿತು.

“ಸಾಹೇಬರs, ಹ್ಯಾಂಗೂ ಇಂದಿನಿಂದ ಮೂರ ದಿನದ ಸೂಟೀನs ಅವs. ಶನಿವಾರ ದಿನಾ ‘ಎನ್‌ಕ್ವಾಯರಿ’ಯಂತೂ ನಡಿಯೂದೇ ಇಲ್ಲಾ. ಇಂದೇ ಮಧ್ಯಾಹ್ನದ ಹೊತ್ತಿಗೆ ಅಷ್ಟ ಕೆಲಸ ಬಗೀಹರದರ ‘ಎಕ್ಸ್‌ಪ್ರೆಸ್’ನಿಂದ ಪುಣೇಕ್ಕ ಹೋಗಿ ಬರೂಣು ಬೇಕಾರ.”
ನಾನು ಸೂಚಿಸಿದೆ.

“ನಂದೇನ ಕೆಲಸ ದಾದಲ್ಯಾ ಇಲ್ಲೇ? ಯಾವಾಗ ಪುಣೇಕ್ಕ ಹೋಗಿ. ಕಾಕಾ-ಸೋಸಕ್ಕ ಅವರ್‍ನ ನೋಡೇನು ಅನೂಹಾಂಗ ಆಗೇದ. ಅವರ ತಳಮಳ ಕಡೀತು. ನನಗ ಸಮಾಧಾನ ಬಂತು. ಇದೇನು ಸಣ್ಣ ಮಾತಲ್ಲಾ, ದಾದಲ್ಯಾ.”
ಮಹಾ ಶೋಧ ಮಾಡಿದವರಂತೆ ಸಾಹೇಬರು ಹೇಳಿದರು. ನಾನು ಮಾತಾಡಿದ್ದರೆ ಮತ್ತೆ ಅವರಿಗೆ ಹುಕೀ ಉಕ್ಕುತ್ತಿತ್ತು. ಸದ್ಯ ಅದು ಉಕ್ಕುವ ಗರಜು ಇರಲಿಲ್ಲ. ಅವರು ಸಮಾಧಾನದ ತಂದ್ರಿಯಲ್ಲೇ ಇರಲೆಂದು ಬಿಟ್ಟು, ನಾನು, ವಿಶ್ವಾಸ-

ದಸ್ತಗೀರ್ಸ್ಯಾರ ಬರವಿಗಾಗಿ ಚಟಪಟಿಸತೊಡಗಿದೆ. ಬಾತಿಗೆ ಬಾರದ ರಗಳೆಯಲ್ಲಿ ಹೊತ್ತು ಕಡಿಯುತ್ತ ಕಸಿವಿಸಿಪಡತೊಡಗಿದೆ. ಒಂಭತ್ತು ಬಾರಿಸಿತು.

ಬಾಗಿಲ ಮೇಲೆ ಬೆರಳಿನ ಟಿಕ್ ಟಿಕ್ ಸದ್ದಾಯಿತು:

"Yes, come in please." 16726

ಎಂದು ಸಾಹೇಬರು ಸ್ವಾಗತ ಕೋರಿದರು.

ಮುಂದೆ ಮಾಡಿದ ಬಾಗಿಲು ಹಿಂದೆ ಸರಿದು ತೆರೆಯಿತು. ವಿಶ್ಯಾ-ದಸ್ತಗಿರ್ಸ್ಯಾರ ಆಗಮನವಾಯಿತು. ಇಬ್ಬರೂ ಶತಾಯುಷೀ ವರದಾನವಾಗಿ ಬಂದ ಮಕ್ಕಳೇ! ನಾನು ಚಟ್ಟನೇ ಎದ್ದು, ನನ್ನ ಕೂಡ ತಾವೂ ಎದ್ದ ಸಾಹೇಬ ಬ್ರುವರಿಗೆ —

"This is Viswas Datar; this is his friend A. R. Attar. ಜಾಡೀಬೀಡೀ ಮರ್ಚಂಟ್ ಪ್ರಿನ್ಸ್ – ಸಾಂಗ್ಲಿ... ಇವರೇ ನಮ್ಮ ಶಕೂನ ತಂದೀಯವರು, ವಿಶ್ಯಾ."

ಎಂದು ನಾನು ಪರಿಚಯ ಮಾಡಿಸಿದೆ. ವಿಶ್ವಾಸ 'ಶೇಕ್-ಹ್ಯಾಂಡ್'ಗೆ ಮುಂಚಾಚಿದ ಕೈಯನ್ನು ಬಿಟ್ಟು, ಸಾಹೇಬರು ಏಕದಮ್ ಬೇಭಾನರಾಗಿ ಅವನ ಕೊರಳಿಗೇ ಬಿದ್ದರು.

"ವಿಶ್ವಾಸ... ವಿಶ್ವಾಸ ಎಂದ ನೋಡಿದ್ದಪಾ ನಿನ್ನs... ! ನಾಕ ವರ್ಷದ ಕೂಸ ಇದ್ದೀ...ನನ್ನ ಗುರುತರೆ ಹತ್ತದೋ ಇಲ್ಲೋ? ನಮ್ಮ ಸೋನೂತಾಯೀ ಮಗಾ ನೀನು. ಅದ್ಯಾಕ ವಿಶ್ವಾಸ...ಖಾಸ್ ನನ್ನ ತಂಗೀ ಮಗನs ನೀನು. ಏನ ಆನಂದ ಆತಂದಿ ವಿಶ್ವಾಸ! ಬಂದ್ಯೆಪಾ. ಭೆಟ್ಟಿ ಆತು! ಇಂದ ನನ್ನ ತಂಗಿಯ ಮಗನ್ನ ನೋಡಿ ಕಣ್ಣ ಪಾರಣ್ಯಾತು. ಬಾ, ಹೀಂಗ ಬಾ. ಕೂಡಿಲ್ಲೆ. ಎಲಾ, ಅಗದೀ ಮರತ ಬಿಟ್ಟೆ, ವಿಶ್ವಾಸ, ನಿನ್ನ ಭೆಟ್ಟ್ಯಾಗ. "come on Mr. Attar, come on, come on." ದಾದಲ್ಯಾ, ಚಹಾ ಹೇಳಪಾ. ಬರ್ರಿ ಬರ್ರಿ. ಹೀಂಗ ಕೂಡೂಣು ಬರ್ರಿ. ವಿಶ್ವಾಸ, ನೀ ಭೆಟ್ಟಿ ಆದಿ. ಏನ ಮಾತಾಡಬೇಕು, ಏನ ಬಿಡಬೇಕು ಅನೂದs ಸುಚಾಸಥಾಂಗ ಆಗೇದ. ನಮ್ಮ ಭೆಟ್ಟೀ 'ಕ್ರೆಡಿಟ್' ಎಲ್ಲಾ ದಾದಲ್ಯಾಗೇ, ಎಲ್ಲಾ ಅವನ ಪುಣ್ಯಾ..."

ನನ್ನ ಪುಣ್ಯಪ್ರಭಾವದ ಹರಿಕೀರ್ತನೆಯನ್ನು ಕೇಳುವದಕ್ಕಿಂತ, ಅದನ್ನು ಕೇಳಲಿಕ್ಕೆ, ವಿಶ್ವಾಸ-ದಸ್ತಗೀರ್ಸ್ಯಾರನ್ನು ಶ್ರೋತಾ ಮಾಡಿ, ಹೇಳಲಿಕ್ಕೆ ಸಾಹೇಬರಿಗೆ ಕೀಲಿ ಕೊಟ್ಟು, ನಾನು ಚಹದ ಆರ್ಡರ್ ಕೊಡಲು ಕೋಣೆಯಿಂದ ಹೊರಗೆ ಜಾರಿದೆ.

ನನಗೆ ಸಿಗರೇಟಿನ ತಲಬೂ ಆಗಿತ್ತು. ಸಾಹೇಬರೆದುರು ಇನ್ನೂ ನನ್ನ ತಲಬಿನ ಚಟ ಹಳಸಿರಲಿಲ್ಲವಾದ್ದರಿಂದ ಅಲ್ಲಿ ಸೇದುವದು ಯೋಗ್ಯವಾಗಿರಲಿಲ್ಲ. ಸಾಹೇಬ-ವಿಶ್ವಾಸರ ಪರಿಚಯವಾಗಿತ್ತು. ಅವರವರು ತಮ್ಮ ತಮ್ಮ ಸುಖ-ದುಃಖ ಹೇಳಿಕೊಳ್ಳಲು ಮೋಕಳೀಕರಾಗಿದ್ದರು. ಒಂದು ಪ್ರಕರಣದ ಕುಲಾಲ-ಚಕ್ರ ದಲ್ಲಿ ಸಿಕ್ಕು ಅಪವಾದ ಹೊತ್ತವರಿದ್ದರೂ, ಇಲ್ಲಿಯ ವರೆಗೆ ಅಪರಿಚಿತರಾಗಿಯೇ ಇದ್ದರು. ಅದರ ನೋವು, ಸಂಕಟ ಅನುಭವಿಸಿದ್ದರು. ಇಬ್ಬರೂ ಸಂಕಟವಿಮುಕ್ತ ರಾದ ಸಂತಸ ಪಡೆದಿದ್ದರು. ಸುಖದ ಕ್ಷಣ ಮೂಡಿದಾಗೂ, ಗತ ದುಃಖದ ನೆನ ಪನ್ನು ಮರುಕಳಿಸಿಕೊಳ್ಳುವದು, ಅದನ್ನು ಕುರಿತು ಮಾತಾಡುವದು ಸ್ವಭಾವಸಹಜ ವಾದದ್ದು. ವಿಶ್ವಾ ಹಾಗೆ ಮಾತಿಗೆ ಕೂಡುವ ಜಾತಿಯಲ್ಲವಾದರೂ, ಸಾಹೇಬರು ಬಿಡುವವರಲ್ಲ. ದಸ್ತಗೀರ್‍ಯಾನಿಗೆ ಮಾತ್ರ ಅಲ್ಲಿ ಹಿಡಿದುಬಿಟ್ಟಂತೆ ಆಗುತ್ತಿರಬೇಕು. ಅವನನ್ನು ಎಬ್ಬಿಸಿಕೊಂಡು ಶೇಡಜಿಯ ಮನೆಗೆ ಹರಕೆ ಹಾಕಿ, ಚಾಂದೀಖುರಾಕನ್ನು ಅವನ ಸ್ವಾಧೀನ ಮಾಡಿ, ಹೇಳಬೇಕಾದದ್ದನ್ನು ಹೇಳಿ, ತಾಸು ಒಂದೂವರೀ ತಾಸಿ ನಲ್ಲಿ ನಾವು ತಿರುಗಿ ಬರಬಹುದಾಗಿತ್ತು. ಅಷ್ಟರಲ್ಲಿ ಸಾಹೇಬ-ವಿಶ್ವಾಸರ ಮಾತು-ಕತೆ ಮುಕ್ಕಾಲು ಮೂರು ಪಾಲು ಮುಗಿದಿರುತ್ತಿದ್ದವು. ನಂತರ ವಿಶ್ವಾಸ-ದಸ್ತಗೀರ್‍ಯಾ ರನ್ನು ತುಳಸಿಯ ಮನೆಗೆ ಹೊತ್ತು ಹಾಕಿ, ನಾನು ಶ್ಯಾಮರಾಯನ ತಪಾಸು ತೆಗೆಯಬೇಕಾಗಿತ್ತು.

ಚಹ ಮುಗಿದ ನಂತರ ನಾನು ಸಾಹೇಬರಿಗೆ ಶೇಡಜಿಯ ಭೆಟ್ಟಿಯ ವಿಷಯ ವನ್ನು ಸೂಚ್ಯವಾಗಿ ತಿಳಿಸಿ, ದಸ್ತಗೀರ್‍ಯಾನ ಕೂಡ ಅಲ್ಲಿಂದ ತಳ ಕಿತ್ತಿದೆ.

೦ ೦ ೦ ೦

ಚಾಂದೀಖುರಾಕು ಶೇಡಜಿಯ ಕಪಾಟಿನಲ್ಲಿ ಭದ್ರವಾಗಿ ಕುಳಿತಿತ್ತು. ಅವನ ಬೀಬೀ ಕೊಟ್ಟ ಥಂಡಾ ಶರಬತ್ತಿನಿಂದ ನನ್ನ-ದಸ್ತಗೀರ್‍ಯಾನ ಹೊಟ್ಟೆ ತಣ್ಣಗಾದವು.

ಘೋರೀ ಜಾತಿಯ ಶೇಡಜೀ, ತನ್ನ ವ್ಯಾಪಾರೀ ವೃತ್ತಿಯನ್ನು ಜಾಗರಿಸಿ, ದಸ್ತಗೀರ್‍ಯಾನ ಕೂಡ, ಬೀಡೀ ಧಂದೆಯಲ್ಲಿಯ ಉಲಾಢಾಲೀ, ಬಟಾಟೀ-ಬೆಣ್ಣೆಯ ವ್ಯಾಪಾರದಲ್ಲಿಯ ಯಶಾಪಯಶ ಕುರಿತು ಒಂದು ತಾಸಿನ ವರೆಗೆ ಅಖಂಡವಾಗಿ ಗಂಟಲ ಕಸರತ್ತು ನಡೆಸಿದ. ಕಲಕತ್ತೆಗೆ ನಿಪ್ಪಾಣಿಯ ತಂಬಾಕು ಒಂಟೆಯ ಮೇಲೆ

ಹೋಗುತ್ತಿತ್ತು; ಮುಂಬೈಯು ಖಾಲೋಖಾಲ್ ಸಾಂಗಲಿಯೇ ದೊಡ್ಡ ಪೇಟೆ, ಎನ್ನುವ ನವೀನ ಶೋಧವನ್ನು ನನಗೂ ಕೇಳಿಸಿದ. 'ಹಿಸ್ಟರಿ ಆಫ್ ಟುಬ್ಯಾಕೊ' ಯಾರಾದರೂ ಬರೆದರೆ, ನಮ್ಮ ತಾಲೂಕಿನಲ್ಲಿಯ ನಿಪ್ಪಾಣಿ ಅಜರಾಮರ ಸ್ಥಾನ ಪಡೆಯುವದೆಂಬ ಸಮಾಧಾನ ಮಾತ್ರ ನನಗಾಯಿತು.

ನಾವು ತಿರುಗಿ ಹೊಟೇಲ್ 'ಗ್ರೀನ್ಸ್'ಕ್ಕೆ ಬಂದಾಗ, ಸಾಹೇಬ-ವಿಶ್ವಾಸರ ಮಾತು-ಕತೆ ಇನ್ನೂ ನಡದೇ ಇದ್ದವು. ನಾವು ಬಂದದ್ದನ್ನು ನೋಡಿ ಸಾಹೇಬರು –

"ಲಗೂನ ಬಂದರಿ, ಠೀಕಾತು. ಅತ್ತಾರಸಾಹೇಬ ಎಲ್ಲಾರೂ ಕೂಡಿ ಇಲ್ಲೇ ಊಟಾ ಮಾಡೂಣಂತ. ಉಂಡು ಇಲ್ಲೆ ಆರಾಮು ಮಾಡಿಕೋರಿ. 'ಎಕ್ಸ್‌ಪ್ರೆಸ್ಸಿ' ನಿಂದ ಪುಣೇಕ್ಕ ಹೋಗೂಣಂತ ದಾದಲ್ಯಾ ಅಂತಾನ. ನನಗೂ ಹೋಗಿ ಬರೂದು ಠೀಕ ಕಾಣಸ್ತದ. ಎರಡ-ಮೂರ ದಿನಾ ಇಲ್ಲೆ ನಿಂತಾರೆ ಏನ ಮಾಡೂದು?"
ಎಂದರು.

"ಅತ್ತಾರಸಾಹೇಬರದೊಂದು ಅರ್ಜಂಟ ಕೆಲಸ ಅದ. ನಾನು-ವಿಶ್ವಾಸ ಇಬ್ಬರೂ ಅವರ ಜೋಡಿ ಹೋಗಲಿಕ್ಕೇಬೇಕಾಗೇದ. ನಮ್ಮ ಊಟದ ಉಸಾಬರೀ ಇಲ್ಲೇನು ಬ್ಯಾಡಾ. ನೀವು ಉಂಡು ಅಷ್ಟ ವಿಶ್ರಾಂತೀ ತಗೋರಿ. ಕೆಲಸ ಬಗೀಹರದರ ನಾವೇ ಬರತೇವು."
ನಾನು ಹೇಳಿದೆ.

"ನಿಮಗ ಹ್ಯಾಂಗ ಅನಕೂಲ ಅನಸ್ತದ ಹಾಂಗ ಮಾಡರಿ. ಮೊದಲ ನಿಮ್ಮ ಕೆಲಸಾ ಬಗೀಹರಿಸಿಗೋರಿ. ದಾದಲ್ಯಾ, ಪುಣೇದ ತಿಕೀಟನೂ ತಂದೇಬಿಡಲಾ. ಗಾಡಿಗೆ ಗರ್ದೀ ಇರೂ ಸಂಭವ ಅದs. ನನ್ನ ಕಡೇ 'ಚೇಂಜ್' ಇಲ್ಲಾ. ನೀನೇ 'ಚೇಂಜ್' ಮಾಡಸೂ. ಇಕಾ ಹಿಡೀ ಈ ನೋಟಾ."
ನೂರರ ನೋಟನ್ನು ನನಗೆ ಒಪ್ಪಿಸಿ ಸಾಹೇಬರು ವಿಶ್ವಾಸನ ಕಡೆಗೆ ತಿರುಗಿ —

"ವಿಶ್ವಾಸ, ದಾದಲ್ಯಾ ಸಹಭೋಜನದ ಚ್ಯಾನ್ಸ್ ತಪ್ಪಿಸಿದಾ. ಎಕ್ಸ್‌ಪ್ರೆಸಕ್ಕ ಹೊಂಡೂ ವ್ಯಾಳ್ಯಾದಾಗ ಕೂಡಿ ಚಹಾನರೇ ತಗೊಂಬೂಣು. ಏನು ಅತ್ತಾರ ಸಾಹೇಬ?"
ಎಂದರು.

"ರಾವಸಾಹೇಬ, ನಾನೂ ಪುಣೇಕ್ಕ ಬರಾಂವನs ಇದ್ದೀನಿ. ನಾಕ ದಿನಾ ಅಲ್ಲೇ ಇರತೀನಿ. ನಿಮ್ಮ ಸಾಖರ-ಪುಡಾದ ಮೇಜವಾನಿ ಮೊದಲ ನಾವ್ ಮಾಡ

ತೇವು. ಆಮ್ಯಾಲs ನೀವು ಕರದಲ್ಲೆ ಬರತೇವು."
ದಸ್ತಗೀರ್‍ಯಾ ಸಾಖರಪುಡಾದ ಮಾತೆತ್ತಿ ಏಕದಮ್ ಸಾಹೇಬರನ್ನು ಬಗಲಿಗೆ ಹಾಕಿ ಕೊಂಡ.

"Alright... alright, as you please... ನೀವೇನು ಹೊರಗಿನವರಲ್ಲ ಇನ್ನs. ವಿಶ್ವಾಸನ ಗೆಳ್ಯಾರಂದ ಮ್ಯಾಲ, ಆಗ್ರಹಮಾಡೂ ಜರೂರಿ ಇಲ್ಲಾ."

ನಾವು ಸಾಹೇಬರ ನಿರೋಪ ತೆಗೆದುಕೊಂಡು, 'ಗ್ರೀನ್ಸ್'ಗೆ ಬಿಟ್ಟೆವು.

"ಆವಡೀಕೇ, ಜಾಡೀ-ಬೀಡೀ 'ಮರ್ಚಂಟ್ ಪ್ರಿನ್ಸ್' ಅಂತs ದಸ್ತಗೀರ್‍ಯಾನ್ನ 'ಇಂಟ್ರೊಡ್ಯೂಸ್' ಮಾಡಿಕೊಡೂ ಮುಂದ ಹೀಂಗs ನಗೀ ಬಂದಿತ್ತು –ಒತ್ತಿ ಹಿಡಿಯೂ ತನಕಾ ಜೀವ ಗುದಮುರಸಿಹೋತು. ದಾದಲ್ಯಾ, ನೀ ಮುದ್ದಾಂ ಜಾವಟತನಾ ಮಾಡತೀ. ಸಾಹೇಬರ ವಯಸ್ಸು, ನಿನ್ನ ವಯಸ್ಸು, ಅವರ 'ಪೊಜಿಶ'ನ್ನು, ನಿನ್ನ 'ಪೊಜಿಶ'ನ್ನು ಒಂದರದೂ ನಿನಗ ದಾದs ಇಲ್ಲಾ. ನಿನ್ನ ಕೈಯಾ ಗಿಂದ ಪಾರಬೀಳೂದರಾಗ, ಸುರ್‍ಯಾನ ಕೈಯಾಗ ಸಿಗತಾರ. ಅಗದೀ ಅಗದೀ ಹೇಳಿ ಮಾಡಿಸಿದ ಭೋಳಾಶಂಕರ ಇದ್ದಾಂಗ ಇದ್ದಾರ. ಅಂತೇ ಇಲ್ಲೀ ತನಕಾ ನಿನ್ನ ಬ್ಯಾಳಿ ಬೇಯಕೋತ ಬಂದsದ."
ವಿಶ್ವಾಸ.

"ಈ ದಸ್ತಗೀರ್‍ಯಾಗ ಯಾರರs ಅತ್ತಾರಸಾಹೇಬ ಅಂತ ಅಂದಿದ್ದರೇನು? ಕೋಳಕ ಬಟಾಟಿ ಮಾರೂ ಬಾಗವಾನಾ, ನಾ 'ಮರ್ಚಂಟ್ ಪ್ರಿನ್ಸ್' ಅನೂತ್ಲೇ ಅವನ ಅಮಲು ಏರಿತು. ಊರಾಗ ಹತ್ತೀ ಸುಗ್ಗಿ ನಡದಾಗ. ನಮ್ಮ ಕರಿಶೆಟ್ಟೀನೂ ಹತ್ತೀ ಗ್ವಾಳೀ ಮಾಡಿಕೋತ ಅಡ್ಡ್ಯಾಡತಿದ್ದಾ. ಅಂವಗ ಏನಂತ ಹೆಸರ ಇಟ್ಟಿ ದ್ದೇವು. ಅನ್ನೂದು ನೆನಪ ಅದs ಏನ ವಿಶ್ಯಾ? "ಕಾಟನ್ ಕಿಂಗ್ ಆ ರಹಾ ಹೈ... ಬಹುಪರಾಕ!" ಅಂತs ಅವನ ಬೆನ್ನ ಹತ್ತತಿದ್ದೇವು. ದಸ್ತಗೀರ್‍ಯಾನ್ನ 'ಇಂಟ್ರೊ ಡ್ಯೂಸ್' ಮಾಡಾಗ ಆ 'ಕಾಟನ್-ಕಿಂಗ್'ನ ನೆನಪಾತು. ಈ ಜೋದೀಕೇಗ 'ಪ್ರಿನ್ಸ್' ಅಭಿದಾನ ಜೋಡಸೂಣಂತ ಆಗ ವಿಚಾರ ಬಂತು. ಲಟ್ಟನೇ ಅದೇ ಬಾಯಿಗೂ ಬಂತು. "ದುಡ್ಡಿಗೆ ಹತ್ತೆಂಟುರೆ ಬೀಡೀ ಕೊಡತಿರಬೇಕು, ಅಂದರೂ ಆ ಧಂದೇದಾಗ ಇಷ್ಟ ಫಾಯದೇ ಅದs ಅಲ್ಲs ದಾದಲ್ಯಾ, "ಶೇತಕೀ ಶ್ರೇಷ್ಠ, ವ್ಯಾಪಾರ ಮಧ್ಯಮಾ, ನೌಕರೀ ಕನಿಷ್ಠಂತಾರ", ಖರೇ ನೋಡ ದಾದಲ್ಯಾ. ಅಂತs ಇನ್ನ ಮ್ಯಾಲs ಸಾಹೇಬರದು ವೃತ್ತಿ-ವಿಲಾಸ-ಮಹಿಮಾ ಸುರೂ ಆಗತದ. ಅವರ

ಕಥನ ನಡದಾಗೊಮ್ಮೆ, ಈ ಜಾಡೀ-ಬೀಡೀ 'ಮರ್ಚಂಟ್ ಪ್ರಿನ್ಸ್'ನ ನೆನಪ ಆಗತದ. ನನಗ ನಗೀ ಬರೂದಿಲ್ಲಂತ ಠೀಕದ. ಇಲ್ಲದಿದ್ದರ ಪಂಚೀತಿ. ವಿಶ್ಯಾ, ನಾ ಇನ್ನs ದಾದಾನ ಪತ್ತೇಕ ಹೊಂಡತೀನಿ. 'ಡೈರೆಕ್ಟ್' ಅವನ ಕಡೇ ಹೋಗೂದಂತೂ ಶಕ್ಯನs ಇಲ್ಲಾ. ಬಸಗೋಂಡಾ-ನಬೀಸಾಬರ್ನ ಹಿಡದು ಅವನ ಪತ್ತೇ ತಗೀಬೇಕು. ಅವರ್ಸ್ಯರs ಸಿಕ್ಕಾರನೂ ಭರೋಸ ಇಲ್ಲಾ."
ನಾನು.

"ಯಾರನೂ ಪತ್ತೇ ಹಚ್ಚೂ ಭಾನಗಡಿಗೆ ಹೋಗಬ್ಯಾಡ ದಾದಲ್ಯಾ, ಅವರ್ನ ಭೆಟ್ಟಿ ಆಗೂದರಿಂದ ಏನೂ ನಿಷ್ಪನ್ನ ಆಗೂ ಲಕ್ಷಣೆಲ್ಲಾ. ದಸ್ತಗೀರ್ಯಾ, ಬಸವಂತೀ ಕಾಳಜೀ ತಗೋ ಅಂತs, ನಿನ್ನೆ ಸುರ್ಯಾಗ ಫೋನ್ ಮಾಡಿದೇವು. ಆಕೀ ಕಾಳಜೀ ಮಾಡಾಗ, ಸುರ್ಯಾನ ಸಂತಾಪದ್ದು ನನಗ ವಿಚಾರನೇ ಬರಲಿಲ್ಲಾ. ನನ್ನ ಮ್ಯಾಲಿನ ಪ್ರೀತಿಯಿಂದ ಅಂವಾ ಏನ ಮಾಡಲಿಕ್ಕೂ ಅಸಿವಿಸಿ ನೋಡೂದಿಲ್ಲಾ. ದಾದಾನ್ನ ಅಟಕಾಸಿದರೂ ಅಟಕಾಸಿದಾ. ದಾದಲ್ಯಾಂದೂ ನನಗಷ್ಟು ಭರೋಸ ಇಲ್ಲ ದಸ್ತಗೀರ್ಯಾ. ದಾದಲ್ಯಾನ್ನ ನೋಡೇ, ದಾದಾ, ಖವಳಾಸ್ತಾನ. ನೀನೂ ಏಕಾಕಿ ಆಗಿ ಅಂವಗ ಭೆಟ್ಟಿ ಆಗೂದು ಬ್ಯಾಡಾ. ಎರಡ ದಿನಾ ಅಭ್ಯಾಸ ಹೋದರ ಹೋತು. ನಾನೇ ಇಂದ 'ಎಕ್ಸ್‌ಪ್ರೆಸ್'ಲೇ ಪುಣೇಕ್ಕ ಹೋಗತೀನಿ. ದಾದಾ ಅಲ್ಲೇ ಇದ್ದರ, ಅವನ 'ಪ್ರೆಜೆನ್ಸ್'ದಾಗ ಬಸವಂತೀ 'ಪ್ರೊಬ್ಲೆಮ್' ಬಿಡಸೂದು ಆಗತದೇನು ನೋಡತೀನಿ. ರಾಚಪ್ಪನೂ ನನ್ನ ಜೋಡಿಗೆ ಇರತಾನ. ಬಸವಂತಿ ದಗಾ ಕೊಟ್ಟಳು. ಆಕೀ ಜರೂರಿ ನನಗ ಇಲ್ಲಂತ ದಾದಾ ಹೇಳಿದರ ಠೀಕನs ಆತು. ಆಕಿನ್ನ ನಮ್ಮ ಮನೀಗೆ ಕರಕೊಂಡು ಬರತೀನಿ. ಅಂವಾ ಏನೂ ಹೇಳದಿದ್ದರ, ಬಸವಂತಿನ್ನs ಕೇಳತೀನಿ. ಅಲ್ಲಿಂದ ಆಕೀ 'ಸೇಫ್ಟಿ' ದಶಿಂದ ಏನ ಮಾಡಬೇಕು ಅನೂದನ್ನ ಠರಾಸ್ತೀನಿ. ನೀನೂ ನಡದಬಿಡೂ ದಸ್ತಗೀರ್ಯಾ. ಸಂಜೀ ಆರು ಅನೂದರಾಗ ಪುಣೇದಾಗ ಇರತೇವು"
ವಿಶ್ವಾಸ.

ಸಾಹೇಬರನ್ನು ಬಿಟ್ಟವರು ಮಾತಾಡುತ್ತ ಮಾತಾಡುತ್ತ ಯಾವುದೋ ಹೊಟೇಲ ಹೊಕ್ಕಿದ್ದೆವು. ಚಹ ಕುಡಿದು, ಮಾತಿನಲ್ಲಿ, ಒಂದು ಪಾಕೀಟು ಸಿಕರೇಟಿ ಧ್ವಂಸ ಮಾಡಿದ್ದೆವು. ವೇಳೆಯ ಅರಿವಿಲ್ಲದೆ ನಮ್ಮ ಮಾತು ನಡೆದಿದ್ದವು.

ಗಡಿಯಾರದಲ್ಲಿ ಹನ್ನೆರಡು ಬಾರಿಸಿತು. ತುಳಸಿ ಅಡಿಗೆಯನ್ನು ಮಾಡಿ

ಕೊಂಡು ದಾರಿ ಕಾಯುತ್ತ ಕುಳಿತಿರಬೇಕೆಂಬ ನೆನಪು ಬಂತು. ಲೆಕ್ಕ ಚುಕ್ತಾ ಮಾಡಿ, ಟ್ಯಾಕ್ಸೀ ಹಿಡಿದು ಮನೆಯ ಕಡೆಗೆ ನಡೆದೆವು.

ವಿಶ್ವಾಸನ ಪುಣೆಯ ಪ್ರಯಾಣದ ವಿಷಯ ನನ್ನ ಮನಸ್ಸಿನಲ್ಲಿ ನುಲಿಯ ತೊಡಗಿತು.

ನಿನ್ನೆ ನಮ್ಮ 'ಫೋನ್' ಹೋದ ಮೇಲೆ ಸಾದ್ಯಂತ ಹಕೀಕತ್ತು, ಸುರೇಶನ ಮುಖಾಂತರ ಕಾಕಾ ಅವರಿಗೆ ವಿದಿತವಾಗಿರಬಹುದಾಗಿತ್ತು, ಅವಳ ಕ್ಷೇಮದ ಭಾರವನ್ನು ಸುರೇಶನ ಮೇಲೆ ಹಾಕಿದ್ದೂ ಅವರಿಗೆ ತಿಳಿದಿರುತ್ತಿತ್ತು.

"ಬಸವಂತೀ, ನೀ ಶ್ಯಾಮುನ ಮನ್ಯಾಗ ಇರೂ ಜರೂರೀ ಇಲ್ಲಾ. ನಮ್ಮ ಮನೀಗೇ ಬಂದಬಿಡು. ಇದು ನಿನ್ನ ಕಾಕಾನ ಹುಕಮು"
ಎಂದು ಅಧಿಕಾರವಾಣಿಯಿಂದ ತಂದೆಯ ವಾತ್ಸಲ್ಯದಿಂದ ಬಸಪಂತಿಗೆ ನಿರೋಪ ಕಳಿಸಿದ್ದರೆ, ಬಸವಂತಿ ಏನು ಮಾಡಿರುತ್ತಿದ್ದಳು? ಕಾಕಾ ಅವಳನ್ನು ಮನೆತುಂಬಿಸಿ ಕೊಂಡು, ತುಂಬಿದ ಅಂತಃಕರಣದಿಂದ ಹರಸಿದ್ದರು. ಆ ಹರಕೆಯಲ್ಲಿಯ ಪ್ರೀತಿ-ವಾತ್ಸಲ್ಯ ಇನ್ನೂ ಅವಳ ಜೀವನದಲ್ಲಿ ಹಸಿರು ಮುರಿಯುತ್ತಿತ್ತು. ಕಾಕಾ ಅವರ ಮಾತನ್ನು ಮಾನ್ಯಮಾಡಿ, ಬಸವಂತಿ, ಅವರ ಮನೆಗೆ ಬಂದರೆ – ಬಂದಿದ್ದರೆ – ಬಂಗಾರವೇ ಆಗುತ್ತಿತ್ತು. ಮತ್ತೆ ಜೀವನ-ಚಕ್ರ ನಿವಾಂತವಾಗಿ ಸುತ್ತುತ್ತ ನಡೆಯು ತ್ತಿತ್ತು. ದಗಾ ಕೊಟ್ಟ ಬಸವಂತಿ, ತನ್ನ ಪರಲು ಹರಿದುಕೊಂಡು ಹೋದದ್ದರಿಂದ ಶ್ಯಾಮುರಾಯನಿಗೆ ದುಃಖವಾಗುವ ಕಾರಣವಿರಲಿಲ್ಲ. ಬಹಳವಾದರೆ ನಾಕು ಜನರ ಮುಂದೆ ಅವಳಿಗೆ ಅವಾಚ್ಯ ಶಬ್ದ ವಾಡುತ್ತಿದ್ದ. ಬಾಯಿ ತೀಟಿ ತೀರಿಸಿಕೊಳ್ಳುತ್ತಿದ್ದ.

ಬಸಪಂತಿ ಅವನನ್ನು ಬಿಟ್ಟು ಇನ್ನಾರನ್ನಾದರೂ ಕೂಡಿದ್ದರೆ ಅದು ಕಿಲಾಪ ಕುಟಿಲರಿಗೆ ನಗೆಯ ಅನ್ನವಾಗುತ್ತಿತ್ತು. ಆದರೆ ಬಸವಂತಿ, ಕಾಕಾ ಅವರ ಪ್ರೀತಿಯ ಸೊಸೆಯಾಗಿ ಅವರ ಮನೆಗೆ ಹೊದಳೆಂದರೆ, ಬಸವಂತಿಯ ಗೌರವ ಹೆಚ್ಚುತ್ತಿತ್ತು. ಶ್ಯಾಮುರಾಯನ ಮುಖ ಜೋಲುತ್ತಿತ್ತು. ಈಗ ಕೂಡ, ಅವಳಿಗೆ ಶ್ಯಾಮುರಾಯನ ಸುಖ ಅಷ್ಟರಲ್ಲೇ ಇತ್ತು. ಅವನನ್ನು ಬಿಟ್ಟಾಗ ಅಗುವ ದುಃಖವೂ ಅಷ್ಟರಲ್ಲೇ ಇರುತ್ತಿತ್ತು. ಸೋನಕ್ಕ ಸುಖಿಯಾಗುವ ಆಶೆಗೆ ನೀರು ಬಿಟ್ಟಂತೆ, ಬಸವಂತಿಯೂ ನೀರು ಬಿಟ್ಟು, ನಿದಾನ ಸುರಕ್ಷಿತೆಯಾದರೂ ಆಗುತ್ತಿದ್ದಳು.

ಗೌಡರೊಮ್ಮೆ ಶ್ಯಾಮುರಾಯನನ್ನು ಗಾಠಾಯಿಸಿ, ಸವಿ-ಗವಿಯಿಂದ ಮಾತಾಡಿ, ಅವನ-ಸೋನಕ್ಕನ ಸೂತ ಜೋಡಿಸುವ ಸಾಹಸ ಮಾಡಿ ನೋಡಿದ್ದರು.

ಆಗ ಅವರು ತೀರ ಕಟಿ ಮಾತುಗಳನ್ನು ಕೇಳಿ ಅಪಮಾನಿತರಾಗಿ ಬರಬೇಕಾಯಿತು.

"ನಾ ಆರೋಪ ಕೊಟ್ಟಿದ್ದು ಖರೇ. ಆವರ ಮನೀ ಬಿಟ್ಟು ಝಾಡಿಸಿಕೊಂಡು ನಡೀ ಅಂತನೂ ಅಲ್ಲಿಲ್ಲಾ. ಇಲ್ಲ್ಯಾಕ ಇರತೀ ಅಂತನೂ ಕೇಳಲಿಲ್ಲಾ. ನನ್ನ ಮನ್ಯಾಗs ಇದ್ದರs, ಆಕೀಗೆ ಮಜಾ ಮಾಡಲಿಕ್ಕೆ ಮೋಕಳೀಕ ಆಗತಿದ್ದಿಲ್ಲಾ. ಆಕೀಗೆ ಮಜಾವಿದ್ದು ಮದಾ ಏರಿತ್ತು. ಅಂದಲ್ಲೇ ಗವುಜಿಸಿಂದ ಹುಡಗೂರ್ನ ಕಟಿ ಗೊಂಡು ಹೋದಳು. ಪೋಟಿಗೀ ಬೇಕಾರ ಬೇಡಲಿ. ನಾಯಿಗೆ ಭಕ್ಕರಿ ತುಕಡೀ ಒಗಧಾಂಗ ಒಗೀತೀನಿ"

ಎಂದು ಕಟುವಾಗಿ ಹೇಳಿದ್ದ. ಈ ಮಾತು ಕಾಕಾ ಅವರಿಗೆ ತಿಳಿದವು. ಮಾನಧನಿ ರಾವಜೀಕಾಕಾ, ತಮ್ಮ ಖಾತೆಗೆ ಇದ್ದ ತಮ್ಮ ಮಾಲ್ಕೀ ಜಮೀನುಗಳನ್ನು ಅಂದೇ ಸೋನಕ್ಕನ ಹೆಸರಿಗೆ ಹಚ್ಚಿಸಿದರು. ಅದರ ಉಪಭೋಗಕ್ಕೆ, ವಿಲೇವಾಟಕ್ಕೆ ಸೋನಕ್ಕನೇ ಏಕಮೇವ ಅಧಿಕಾರಿಯೆಂದು ಕಾಗದ-ಪತ್ರ ಮಾಡಿಸಿದರು. ಆದರೆ ಆ ಆಸ್ತಿ, ಆ ಸಂಪತ್ತಿಗಿಂತ, ಸೋನಕ್ಕನಿಗೆ ಆಧಾರವಾಗಿತ್ತು, ಅಖಂಡ ಛತ್ರ ವಾಗಿತ್ತು, ರಾವಜೀಕಾಕಾನ ವಿರಾಟ್ ಅಂತಃಕರಣ. ಅವರಿಗೆ ರಕ್ಷೆಯಾದದ್ದು ಕಾಕಾನ ವಾತ್ಸಲ್ಯ. ಆ ತಂಪಿನ ಆಸರಿನಿಂದ ಇಷ್ಟು ದಿನವಾದರೂ ಅವರು ಜೀವ ಹಿಡಿದುಕೊಂಡರು. ಈಗ ಬಸವಂತಿಯೂ ಹಿಡಿದರೆ...ಹಿಡಿದು ಬದುಕಿದರೆ...

ಬಸವಂತಿಗೂ ನಾಯಿಪಾಡಿನ ನಿರ್ಲಕ್ಷ್ಯತನ ಕಾದಿತ್ತು. ತುಕಡಿ ಭಕ್ಕರಿಯ ಮಹಾದಾನದ ತ್ರಾಣ ತನ್ನಲ್ಲಿದ್ದ ಗವುಜನ್ನು ಶ್ಯಾಮರಾಯ ತೋರಿಸಿದ್ದ. ತಂದೆಯ ವೈಭವ, ಮಾವನ ವೈಭವ ಎರಡೂ ಎಡ-ಬಲ ರಕ್ಷೆಯಾದ ಸೋನಕ್ಕ ಇಂಥ ದಾನವನ್ನು ಹೆಬ್ಬೆರಳಿನಿಂದ ಚಿಮ್ಮಿದಂತೆ, ಬಸವಂತಿಗೂ ಚಿಮ್ಮಲಿಕ್ಕೆ ಬರುತ್ತಿತ್ತು. ಕಾಕಾ ಅವರ, ವಿಶ್ವಾಸನ ಅಖಂಡ ರಕ್ಷೆಯ ಅಭಯ ಅವಳಿಗಿತ್ತು. ಆದರೆ ಸೋನಕ್ಕ ಹೂಬಿಸಿಲಿಗೆ ಅರಳಿದರೂ, ಉರಿಬಿಸಿಲಿಗೆ ಬಾಡುವ ಮೃದು-ಕೋಮಲ ಜಾತಿ! ಬಸವಂತಿ, ಸೂರ್ಯಪಾನದಂತೆ. ಹೂಬಿಸಿಲು ಚಿಮ್ಮಿದಂತೆ ಪಕಳಿಪಕಳಿ ಅರಳುತ್ತ. ಉರಿಕೆಂಡವಾದ ಸೂರ್ಯನ ಕೆಂಡದಲ್ಲಿಯ ದಾಹಕತೆಯನ್ನು ಸರಾಗವಾಗಿ ಹೀರಿಯೂ ಸತೇಜವಾಗಿರುವ ತೇಜಸ್ವಿನೀ ಜಾತಿ. ಅವಳನ್ನು ಶ್ಯಾಮರಾಯನ ಧಾಕು – ಭೀತಿ ಬೇಯಿಸಿದರೂ, ಕುಲುಮೆಯಿಂದ ಹೊರಬಿದ್ದು ಬರುವ ಚಿನ್ನದಂತೆ, ತಳತಳಿಸುವ ಸಾಮರ್ಥ್ಯ. ತೇಜವನ್ನು ಪಡೆಯುವ ಮನೋಬಲ ಅವಳಲ್ಲಿದೆ. ಕಾಕಾ-ವಿಶ್ವಾಸರ ರಕ್ಷೆಯ ಅಗತ್ಯ ಅವಳಿಗಿಲ್ಲ. ಸ್ವಸಾಮರ್ಥ್ಯದ ಬಲದಿಂದ ತಾನು ಬದುಕಿ, ಶ್ಯಾಮ

ರಾಯನನ್ನು ಬಗ್ಗಿಸುವ ಶಕ್ತಿ ಅವಳಲ್ಲಿದೆ. ಅವಳಿಗೆ ತನ್ನ ಬದುಕಿನಲ್ಲಿ – ತಾನು ಬದುಕುವದರಲ್ಲಿ – ತಥ್ಯ ಕಂಡಿಲ್ಲ. ಶ್ಯಾಮರಾಯನನ್ನು ಬಗ್ಗಿಸುವದಕ್ಕೆ ಈರ್ಷೆ ಕೆದಕಿದೆ. ಅದಕ್ಕಾಗಿ ಎಂಥ ದಿವ್ಯವನ್ನೂ ಸಾಧಿಸುವ ಸಾಮರ್ಥ್ಯ ಅವಳಿಗೆ ಬಂದಿದೆ. ಅವಳ ಸಿದ್ಧತೆಯಾಗಿದೆ. ಬಸವಂತಿ, ಯಾವ ದಿವ್ಯಕ್ಕೋ ಸನ್ನದ್ಧಳಾಗಿದ್ದಾಳೆ. ನಮ್ಮ ರಕ್ಷೆಯ ಒಣ ಮಾತಿನ ಅಗತ್ಯ ಅವಳಿಗೆ ಉಳಿದಿಲ್ಲ. ಅದನ್ನು ಕೇಳುತ್ತ ಕೂಡುವ ವ್ಯವಧಾನವೂ ಅವಳಿಗಿಲ್ಲ.

ಟ್ಯಾಕ್ಸೀ ತುಳಸಿಯ ಮನೆಯ ಬಾಗಿಲಲ್ಲಿ ನಿಂತಿತು.

"ದಾದಲ್ಯಾ, ಇಳಿಯೂ ವಿಚಾರ ಇಲ್ಲೇನು? ಹಳ್ಳೀ ಊರ ವರಾತದಾಗಿನ ಗಂಡಾ, ಕುದರೀ ಬಿಟ್ಟು ಇಳೀಧಾಂಗ, ನೀನೂ ಕುಕ್ಕರಸೀಯಲಾ. ಇಳೀ ಮಗನs ಮನೀ ಬಂತು"

ದಸ್ತಗೀರ್‍ಯಾ ನನ್ನನ್ನು ತಿವಿದು ಎಚ್ಚರಿಸಿದ.

"ಸುರ್‍ಯಾನ ವರಾತ ಲಗೂ ಹೊರಡತದ. ನಂದೂ ಹೊರಟೀತು. ತನ್ನ ಗತೀ ಏನು ಅನೂ ಕಾಳಜೀ ಹತ್ತೇದ ದಾದಲ್ಯಾಗ, ಮಗ್ಗ. ನನ್ನ 'ಪ್ರ್ಯಾಕ್ಟಿಕಲ್-ಪಾರ್ಟ್ನರ್'ಗ 'ಮೆಡಿಕೋ'ನ ಬೇಕಾಗೇದ. ಇಲ್ಲದಿದ್ದರ ದಾದಲ್ಯಾನ ಜೋಡೀ, ಜಮಾಸೂ ಹಾಂಗ ಇತ್ತು"

ವಿಶ್ವಾಸ.

"ಮೆಡಿಕೊ ಅಂದರ ವಿಶ್ಯಾ, ನಿಂದೇ ಆಶಾ ಇರಬೇಕು ಅಕೀಗೆ. ಲಗೂನs ಸಾವಧ ಆಗಿ ತಿಳಿಸಿ ಇಡೂ. ಒಂದ ಕಡೇ ಕೆರೀ, ಒಂದ ಕಡೇ ಭಾಂವಿ, ಎರಡೂ ಈಗs ಜಗ್ಗಲಿಕ್ಕೆ ಹತ್ಯಾವಂತs. ಝುಗಾ-ಬಾಬ್-ಕಟ್ಟಿನ ಹುಡಿಗ್ಯೊಂದು ಗಂಟ ಬಿದ್ದರ, ಮೂರಕ್ಕೆ ಮೂರಾಬಟ್ಟೆ ಆದೀತು. ಈ ಜನ್ಮದಾಗ, ಹಣಮಂತರಾಯಾ ನಮ್ಮನ್ನ ಪತ್ರುಕ ತಗೊಂಡಾನ. ಸಾಯೂದ್ರಾಗ ಚೂರ-ಚಾರ ಆಸ್ತೀ ಮಾಡಿದರ ಅದರ ವಿಲೇವಾಟಕ್ಕ ಗಿರಾಕ್ಯೊಂದ ಬೇಕಾಗತದ. ನಾನೂ ಯಾರ್‍ನರ ಒಬ್ಬ ಗಣಪತಿನ್ನ ಕಲಮು ಮಾಡಕೋತೀನಿ. ದಾದಲ್ಯಾಂದು ಕಲಮಿನ ವಂಶವೃಕ್ಷ ಬೆಳಕೋತ ಕಡೀತದ. ವಿಶ್ಯಾ, ನಿನಗ ಮೂರ ಬಿಟ್ಟು ಆರ ಕನ್ಯಾ ಬಂದರೂ ನಡೀತದ. ವಸೂ, ತಾ ಬರಾಗ ಶಂಕರಕಾಕಾನ ಆಸ್ತೀ ತಗೊಂಡೇ ಬರತಾಳ. ಧೋಂಡೂಬಾಯೀ ಇಸ್ಟೇಟು ತುಳಸಿ ತಗೊಂಡು ಬರತಾಳ. ನಿನ್ನ 'ಪ್ರ್ಯಾಕ್ಟಿಕಲ್ ಪಾರ್ಟ್ನರ್' ಬರೇ ಕೈಲೇ ಹ್ಯಾಂಗ ಬಂದಾಳು? ಡಾಕ್ಟರ್ ದಾತಾರ "ಡಾಕ್ಟರ್

ಎಂಡ್ ಮಿಸೆಸ್ ದಾತಾರ – ಜೊಯಿಂಟ್ ಸ್ಟಾಕ್ ಕಂ." ಸುರೂ ಆಗೂದೇನು ಅಸಂಭವ ಇಲ್ಲಾ. ಸಾಂಗ್ಲ್ಯಾಗ ರಘುಕಾಸ 'ಪ್ರ್ಯಾಕ್ಟೀಸ್' ನಡೀತದ."
ನಾನು.

"ಸೂಳೇಮುಗಾ ದಾದಲ್ಯಾಗ ಏತಾಳ ವಶಾ ಆಗಿರಬೇಕು ನೋಡ ದಸ್ತಗೀರ್ಯಾ, ಅಚೂಕ ಭವಿಷ್ಯ ನುಡೀತದ ಅವನ ನಾಲಗಿ. ಇರಾಣೀ ಕನ್ಯಾ ಹೀಂಗs ಅಂದಿತ್ತು ದಸ್ತಗೀರ್ಯಾ. ಭಾಳ ದಿಸಾ ಅಕೀ ಮನಸಿನ್ಯಾಗ ಇದೇ ವಿಚಾರ ನಡದಿರಬೇಕು. ಆ ಹುಚ್ಚಿನಿಂದ ಬಿಡಸೂ ತನಕಾ ರಗಡಾತು. ಇನಾ ಆ ಹುಚ್ಚು ಪೂರಾ ಬಿಟ್ಟಿರಲಿಕ್ಕಿನೂ ಇಲ್ಲಾ. ಇಕೀ ಬಾಬತ್ಯಾಗೂ ತುಳಸೀ ಪ್ರಕರಣದ ಪುನರಾವೃತೀ ಆದೀತಂತ ಅನಸ್ತದ. ಎಂ.ಬಿ.,ಬಿ.ಎಸ್. ಮುಗದರ, ಇರಾಣೀಗೆ 'ಕೇಪ್ ಆಫ್ ಗುಡ್ ಹೋಪ್" ಕಂಡಷ್ಟು ಆನಂದ ಆಗತದ. 'ಕೊ-ಆಪರೇಟಿವ್ ಬೇಸಿಸ್' ಮ್ಯಾಲ, ಅಂವಾ ದವಾಖಾನೀ – 'ಮೆಟರ್ನಿಟಿ ಹೋಮ್'ದ್ದು 'ಪ್ಲ್ಯಾನ್ ಎಸ್ಟಿಮೇಟ್' ಎಲ್ಲಾ ಮಾಡಿಕೊಂಡು ಕೂತಾನ. ಇದರದೂ ಘನ ಸಂಕಟ ಹತ್ತೇದ ನನಗ."

"ಎಲ್ಲೆ ಹೋಗಿದ್ದಿರಿ ರಾಜಾ? ಒಂದು ಹೊಡೀತಲ್ಲಾ? ಆಈ, ಭಾಳ ಹಾದೀ ನೋಡಿದಳು ನಿಮ್ಮದು. ರಘೂ ಬೇಮಾರಂತ ತಾರ ಬಂತು. ನೀವು ಹೋಗೂತ್ಲೇ 'ಎಕ್ಸ್‌ಪ್ರೆಸ್' ಗಾಠಾಸಲಿಕ್ಕೆ ಸ್ಟೇಶನಕ್ಕ ಹೋದಳು. ತಾ ಬರೂ ತನಕಾ ದಾದಲ್ಯಾಗ ಇಲ್ಲೇ ಇರಲಿಕ್ಕೆ ಹೇಳಿ ಹೋಗ್ಯಾಳ"
ತುಳಸಿ ಅಡುಗೆಯ ಮನೆಯಿಂದ ಬರುತ್ತ ವರದಿ ಮಾಡಿದಳು.

"ಅರೇ ಇಸ್ಕೀ... ! ಅಂವಗೇನಾತು ಏಕದಮ್? ಮೊನ್ನೆರ ಅಂಗಡೀ ಕಡೇ ಬಂದಿದ್ನಲ್ಲಾ? ನಾಕ ಎಕರೇದ್ದು ಒಂದ ತುಕಡಿ ಅದs. ಕಿಂಮತ ಒಂದಿಷ್ಟು ಭಾರೀ ಆದರೂ, ಸುಪೀಕ ಜಮೀನದ. ಕೈಯಾಗಿಂದ ಬಿಡೂದು ಠೀಕಲ್ಲಾ. ಧೋಂಡೂ ಬಾಯಿ ಧಾರಣೀ ದಶಿಂದ ಮಿಜಿಮಿಜಿ ಮಾಡಾಕಿ. ನಿಮ್ಮ ಕಿಂಮೀ ಮ್ಯಾಲ ಇಟ್ಟs ಈ ವ್ಯವಹಾರ ಮಾಡತೀನಿ ಅಂತ ಹೇಳಿ ಹೋದಾ. ಇಷ್ಟರಾಗs ತಾರ ಕೊಡೂ ವಂಥಾ ಬೇಮಾರಿ ಏನಾತು? ಈ ವ್ಯವಹಾರದ್ದಶಿಂದ ಸಹ್ಯಜ ಪತ್ರಾ ಬರದರ ಧೋಂಡೂಬಾಯಿ ಬರಲಿಕ್ಕಿಲ್ಲಂತ ಅಜಾರೀ ಇದ್ದ ತಾರ ಕೊಟ್ಟಿರಬೇಕು. ರಘೂನ ಜಡ್ಡಿನ ಕಾರಣೇನು ಖರೇ ಕಾಣಸೂದಿಲ್ಲ ನನಗ."
ದಸ್ತಗೀರ್ಯಾ ವಿವರಿಸಿದ.

"ಮುಂಜಾನೇಳೊತ್ಲೇ ಬಂದು ಔತ್‌ಣಾ ತಗೊಂಡೀ ದಾದಲ್ಯಾ. ಇನ್ನ ನಿನ್ನ ಕಾಯಂ ಮುಕ್ಕಾಂ ಇಲ್ಲೇ."
ತುಳಸಿ.

'ಎಕ್ಸ್‌ಪ್ರೆಸ್ಸಿ'ನಿಂದ ಪುಣೆಗೆ ಹೊರಡಲಿಕ್ಕೆಂದು ತಿಕೀಟ ತೆಗೆಯಲು ಸಾಹೇಬ ಕೊಟ್ಟ ಹಣ ಕಿಶೆಯಲ್ಲಿಯೇ ಉಳಿಯಿತು. ತಿಕೀಟೂ ತೆಗೆಯಲಿಲ್ಲ. ಅವರಿಗೆ ಭೆಟ್ಟಿಯಾಗಿ ತಿಕೀಟು ತೆಗೆಯದಿದ್ದ ಬಗ್ಗೆ ಹೇಳುವದೂ ಹಾಗೇ ಉಳಿಯಿತು. ಅವರು ಪುಣೇಗೆ ಹೊರಡುವ ತಯಾರಿಯಲ್ಲಿ ಕುಳಿತು ನಮ್ಮ ಪ್ರತೀಕ್ಷೆ ಮಾಡಬಹುದಾಗಿತ್ತು. ಅತ್ತಾರಸಾಹೇಬರ ಕೆಲಸ ಮುಗಿಯಲು ವೇಳೆ ತಿಂದಿತು – ತಿಕೀಟು ತೆಗೆಸಲಿಕ್ಕೆ ಬಿಡುವೇ ಸಿಗಲಿಲ್ಲವೆಂದು ಸಾಧಿಸಿದರೆ – ಸಾಹೇಬರು ಸುಮ್ಮನಾಗುತ್ತಿದ್ದರು. ಮೇಲಿನಿಂದ ಹೊರಡುವದಕ್ಕೆ ತಿಕೀಟ ತಂದಿದ್ದೇನೆಂದು ತಿಳಿಸಿದ್ದರೆ ಅವರು ಕುರುಬುರು ಮಾಡುತ್ತಿದ್ದಿಲ್ಲ. ಆದರೆ 'ಲೋಕಲ್'ಗೆ ವಿಶ್ವಾಸ-ದಸ್ತಗೀರ ಹೊರಟುಬಿಟ್ಟರೆ, ತುಳಸಿಯ ರಖವಾಲುದಾರಿಕೆಯ ಭಾರ ನನ್ನ ಮೇಲೆ ಬೀಳುತ್ತಿತ್ತು. ಅವರು ತಿರುಗಿ ಬರುವ ತನಕ ನಾನು ಅವಳನ್ನು ನೋಡಿಕೊಳ್ಳಬೇಕಾಗಿತ್ತು. ಅಂದರೆ ಪುಣೆಗೆ ಪ್ರಯಾಣಿಸುವ ಯೋಗವೇ ನನಗೆ ಬರುವಂತಿರಲಿಲ್ಲ. ಎಕ್ಸ್‌ಪ್ರೆಸ್ಸಿನ ತಿಕೀಟ ತರದಿದ್ದಕ್ಕೆ ಏನೋ ಕಾರಣ ಹೇಳಿ ಸವರಿಸಿಕೊಂಡಂತೆ – ಈಗ ನಾನು ಬರುವದೇ ಅಶಕ್ಯವೆಂದು ಸಾಹೇಬರಿಗೆ ಹೇಗೆ ತಿಳಿಸುವದು? ಅದಕ್ಕೇನು ಸಬಲ ಕಾರಣ ಒಡ್ಡುವದು?

ವಿಶ್ವಾಸ-ದಸ್ತಗೀರ್‍ಯಾರು ಪುಣೆಗೆ ಹೊರಟಿದ್ದು ಬಸವಂತಿಯ ಕ್ಷೇಮ ಕಾರಣವಾಗಿ. ಅಲ್ಲಿ ವಾಟಾಘಾಟೀ, ಮಾತು-ಕತೆ, ಭಾನಗಡೀ ನಡಿಯದೇ ಇರುತ್ತಿದ್ದಿಲ್ಲ. ವಾತಾವರಣ ಸಚಿಂತವಾಗಿರುತಿತ್ತು. ಶ್ಯಾಮರಾಯನೂ ಅಲ್ಲಿಗೆ ಹೋಗಲಿದ್ದ. ಹೋಗಿದ್ದರೂ ಹೋಗಿದ್ದಿರಬಹುದು. ಅವನು ಬಸವಂತಿಯ ಹಾಲ್-ಚಾಲಿಯನ್ನು ಪ್ರತಿಭಟಿಸಿದರೆ, ವಾತಾವರಣ ಬಿಸಿಬಿಸಿಯಾಗದೆ ಹೋಗುತ್ತಿರಲಿಲ್ಲ. ಇದೆಲ್ಲ ಗೊಂದಲ ನಡೆದಾಗ, ಅದರಲ್ಲಿ ಸಾಹೇಬರ ಆಗಮನದ ಭರತೀ ಹಾಕಿ, ಎಲ್ಲರನ್ನು ಪಂಚೇತಿಗೀಡುಮಾಡುವದು ನನಗೆ ಬೇಡವಾಗಿತ್ತು. ಈ ಪ್ರಾಣಿಯನ್ನು ಇನ್ನೆರಡು ದಿನ ಇಲ್ಲೇ ನಿಲ್ಲಿಸಿಬಿಡುವದೇ ಕ್ಷೇಮಕರವೆಂದು ಕಾಣತೊಡಗಿತು. ಅವರನ್ನು ತಡೆದು ನಿಲ್ಲಿಸಿದರೆ, ನನಗೂ ಇಲ್ಲೇ ಇರಬೇಕಾಗುತ್ತಿತ್ತು. ಅದರಿಂದ ನಾನು ತುಳಸಿಯನ್ನೂ ನೋಡಿಕೊಳ್ಳಲು ಅನುಕೂಲವಾಗುತ್ತಿತ್ತು.

ನಾನು ಇನ್ನೂ ನೀತಿ-ನೀತಿಯ ತಂದ್ರಿಯಲ್ಲಿಯೇ ಜೋಲಾಡುತ್ತಿದ್ದೆ. ಯಾವ ಖಚಿತ ನಿರ್ಣಯಕ್ಕೂ ಬರುವ ಸಿದ್ಧತೆಯಾಗಿರಲಿಲ್ಲ. ನಾವು ಮೂವರೂ ಮೂಕ ರಾಗಿ ಕುಳಿತಿರುವದನ್ನು ನೋಡಿ ತುಳಸಿ —

"ಲೋಕಲ್‌ಗೆ ಹೊರಡೂವಂತೀರಿ ಮತ್ತ. ಇನಾ ಊಟಕ್ಕೆ ಕೂಡಲಿಕ್ಕೇ ಠಿಕಾಣಿಲ್ಲಾ. ಅಡಿಗಿ ಆರಿ ಅಂಗಾರಾತು. ಮೊದಲ ಊಟಾ ಬಗೀಹರಸರಿ. ಏನ ಮಾಡಬೇಕು ಅನೂದನ್ನ ಠರಾಸಲಿಕ್ಕ ಚೇಕಾರ ಸಂಜೀ ತನಕಾ ಕೂಡರಿ"
ಎಂದು ಹೇಳಿದಳು.

"ವಿಶ್ಯಾ. ತುಳಸೀನೂ ನಮ್ಮ ಜೋಡಿಗೇ ಬಂದೇಬಿಡಲಿ. ಪುಣೇದಾಗ ಗೋಂದ್ಯಾನ ಮನೀ ಅದs. ನಮ್ಮ ಕೆಲಸ ಬಗೀಹರಿಯೂ ತನಕಾ ತುಳಸಿ ಅವನಲ್ಲೆ ಇರತಾಳ. ಗೋಂದ್ಯಾ ಏನು ಹೊರಗಿನಂವಾ ಅಲ್ಲಾ. ತಪ್ಪಿ ಈ ಕಂಪೂದಾಗಿಂದ ಹೊರಗ ಉಳದಾನ. ತುಳಸಿನ್ನ ಎಲ್ಲಿ ಇಡೂದು ಅನೂ 'ಪ್ರೊಬ್ಲೆಮ್' ಬಿದ್ದಾಗ – ಅಂವನೇ, ಪುಢಾಕಾರ ತಗೊಂಡವಾ? ಪುಣೇದಾಗ, ತನ್ನ ಕಡೇ ಇಟಗೋಳಿಕ್ಕೆ ತಯಾರಾಗಿದ್ದಾ. ಈಗ ಅವನ ಕಕೂಗ ದಿನದಾಗ ಅವs. ತೌರಮನೀಗೆ ಕಳಿಸಿ ಬಿಟ್ಟಾನ. ಮನೀ ನಮ್ಮ ತಾಬೇದಾಗs ಇದ್ಧಾಂಗ. ದಾದಲ್ಯಾಗ, ಸಾಹೇಬರಿಗೆ ಬಿಡದ ಗಂಟ ಅದs. ಅಂವಾ ಅವರ ಜೋಡೀ ಇರವಲ್ಲನ್ಯಾಕ. ನಾವು ಮೂರೂ ಮಂದಿ ಪುಣೇಕ್ಕ ಹೊಂಡೂಣಂತ."
ದಸ್ತಗೀರ್‍ಯಾ ಸಮಸ್ಯೆ ಬಿಡಿಸಿದ.

ಅತ್ತಾರಸಾಹೇಬರಿಗೆ ಅರ್ಜಂಟ್ ಕೆಲಸವಿದ್ದ ಬುರುಡೆಯನ್ನು ಹೇಗೂ ಹೊಡೆದು ಸಾಹೇಬರ ಕೈಯಿಂದ ಪಾರುಬಿದ್ದಿದ್ದೆ. ವಿಶ್ವಾಸ-ದಸ್ತಗೀರ್‍ಯಾರನ್ನೂ ಪಾರುಗೆಡವಿದ್ದೆ. ಇದೇ ಅರ್ಜಂಟ್ ಕೆಲಸದ ನಿಮಿತ್ತ ಅವರು ಪುಣೆಗೆ ಹೋಗ ಬೇಕಾಯಿತೆಂದು ತಿಳಿಸಿದರೆ ಅವರೇನೂ ಚಿಕಿತ್ಸೆ ಮಾಡುತ್ತಿದ್ದಿಲ್ಲ. ಚಿಕಿತ್ಸೆ ಮಾಡಿ ದ್ದರೂ, ದಾದಲ್ಯಾನ ಗುಳಿಗೆಯ ಬತ್ತಳಿಕೆ ಬರೇದಾಗಿರಲಿಲ್ಲ.

ವಿಶ್ವಾಸನ ಗೆಳೆಯನೊಬ್ಬ – ಪುಣೆಯ ಕಾಲೇಜಿನಲ್ಲಿಯ ಸಹಪಾಠಿ – ಬಿ.ಎಸ್‌ಸಿ. ಆಗಿ ಈಗ ಅಲ್ಲೇ ಇದ್ದಾನೆ. ಅವನಿಗೆ ದಸ್ತಗೀರಸಾಹೇಬರ ತಂಗಿಯನ್ನು ಕೊಡುವ ಬಗ್ಗೆ ಮಾತು-ಕತೆ ಆಡಿ ಮುಗಿಸಬೇಕಾಗಿತ್ತು. ಆ ಕಾರಣದಿಂದ ಅವ ರಿಬ್ಬರೂ ಪುಣೆಗೆ ಹೋಗಬೇಕಾಯಿತು ...
ಎಂಬ ಚ್ಯವನ-ಮಾತ್ರೆಯನ್ನು ಸಾಹೇಬರಿಗೆ ಕೊಟ್ಟಿದ್ದರೆ, ಅದು ಖಾತ್ರೀಲಾಯ

ಖಾಗಿ ತನ್ನ ಪ್ರಭಾವ ಬೀರುತ್ತಿತ್ತು.

ದಾದಲ್ಯಾ ನಾಡೀ-ಪರೀಕ್ಷೆಯಲ್ಲಿ ತೀರಾ ಢ ಗಿರಾಕಿ ಅಲ್ಲ. ಶ್ಯಾಮರಾಯನ ಉಚ್ಚೈಃಶ್ರವಸ್ಸಿನ ಗತಿಯನ್ನೇ ಗುರುತಿಸಿದ್ದ. ಇನ್ನು ಸಾಹೇಬರಂಥವರು ಅವನಿಗೆ ಯಾವ ಗಿಡದ ತೊಪ್ಪಲು ?

ನಾವು ಊಟ ಮುಗಿಸಿ ಪಡಸಾಲೆಗೆ ಬಂದಾಗ, ನಮಗಿಂತ ಮುಂಚೆಯೇ ಗಡಿಬಿಡಿಯಿಂದ ಎದ್ದ ದಸ್ತಗೀರ್‍ಯಾ ಪಡಸಾಲೆಯಲ್ಲಿ ಇರಲಿಲ್ಲ. ಎಲ್ಲೋ ಫರಾರಿ ಯಾಗಿದ್ದ. ಸಿಗರೇಟು ತರಲಿಕ್ಕೆ ಹೋಗಿರಬೇಕೆಂದರೆ, ಇನ್ನೂ ಒಂದು ಟಿನ್ನು ಶಾಬೂತಾಗಿಯೇ ಇತ್ತು.

"ದಾದಲ್ಯಾ, ಅಂವಾ ಬಂದುದು ತನ್ನ ಅಡತದಾರನ ಕಡೇ ಕೆಲಸದ ಮ್ಯಾಲ. ನಮ್ಮ 'ಪ್ರೊಗ್ರ್ಯಾಮ್'ದಿಂದ ಅಂವನ 'ಎಂಗೇಜ್‌ಮೆಂಟ್'ಗೆ ನೀರ ಹತ್ತಿತು. ತನ್ನ ಅಡತದಾರಗ 'ಫೋನ್'ಸರs ಮಾಡತೀನೀ ಅಂತಿದ್ದಾ. ಅದಕ್ಕ ಏಸರs ಹೋಗಿರಬೇಕು. ಸನೇದ ಹೊಟೇಲದಾಗ ಫೋನದ."
ವಿಶ್ವಾಸ ಹೇಳಿದ.

ಹತ್ತು-ಹದಿನೈದು ಗಳಿಗೆಯ ಅವಧಿಯಲ್ಲಿ ದಸ್ತಗೀರ್‍ಯಾ ತಿರುಗಿ ಬಂದು,

"ವಿಶ್ಯಾ, ಪುಣೇಕ್ಕ ಕಾರಲೇನs ಹೋಗೂದು, ನಾಕಕ್ಕ ಕಾರ ಬರತ್ವದ. ನಮ್ಮ ಬೆಣ್ಣೇ ಅಡತದಾರ ಇದ್ದಾನಲಾ, ಚುನೀಲಾಲ ಶೇಠಜೀ, ನಾಕ ದಿನಾ ತನ್ನ ಕಾರು ನಮ್ಮ ತಾಬೇದಾರೀ ಮಾಡ್ಯಾನ. ರಾತ್ರೀ ಎಂಟ ಅನೂದರಾಗ ಪುಣೇದಾಗ ಇರತೇವು. ಲೋಕಲ್‌ದಲೇ ಟುಕ್ ಟುಕ್ ಅಂತs ಹೋಗೂ ಸಂಕಟಾ ಯಾರ ಹೇಳಿದ್ದರು."
ಹೇಳಿದ.

"ಶೇಠಜೀ ತೋ ಶೇಠಜಿ. ಭಡಜೀ ತೋ ಭಡಜಿ: ನಿಮಗ ಐದ ಮಿನೀಟಿ ನ್ಯಾಗ ಕಾರ ಸಿಗತದ. ಹತ್ತ ಮಿನೀಟಿನ್ಯಾಗ ವಿಮಾನ ಸಿಗತದ. ಎಲ್ಲಾ ಲಕ್ಷ್ಮೀ ಬಾಯೀ ಮಹಾತ್ಮ್ಯ. ನಾ ಸೂಳೇಮಗಾ ಅಷ್ಟ-ದರಿದ್ರ ವೈದಿಕಬ್ರಾಹ್ಮಣಾ. ಮತ್ತ ದೇಶಾವರೀ ನಗೀ ನಕ್ಕೋತ, ಸಾಹೇಬರ ರೊಕ್ಕದಾಗೇ ಪುಣೇಕ್ಕ ಬರಾಂವಾ. ಘನ ಹೇಸ್ಯಪಾ ನಮ್ಮ ಜಾತಿ !"
ನಾನು.

"ಅರರರರರs ಏನ ಸಂಕಟಾತಲೇ ಮಗನs ನಿನಗ? ನಮ್ಮ ಜೋಡೀ

ಬರೂದು ತಪ್ಪಿದಾಗೇ ನೀ ಮಬ್ಬ ಆಗಿದ್ದಿ. ಊಟಕ್ಕ ಕೂತಾಗ, ಬ್ರ ಅಂತ ಮಾತಾಡ ಲಿಲ್ಲಾ. ಕಾರಲೇನs ನಾವು ಹೊಂಡತೇವು ಅನೂದನ್ನ ಕೇಳ್ಯಂತೂ ಸಾಸವೀ ಅರ್ಕನs ಬಿಟ್ಟಾ್ಹಂಗಾತು ಹೊಟ್ಟ್ಯಾಗ. ದಾದಲ್ಯಾ, ಬಾಳ್ಯಾ, ಪುಣೇದಿಂದ ಬರೂಮುಂದ ನಿನ್ನ ಕಾರಿನ್ಯಾಗೇ ಕರಕೊಂಡು ಬರತೇವಂತೇಳು. ಅಗದೀ 'ಫ್ರಂಟ್ ಸೀಟ್'ನ್ಯಾಗs ಕೂತು ಬರಾಕ್ಯಂತ."

ದಸ್ತಗೀರ್ಯಾ.

"ಅಕ್ಷತಾದ ಔತ್ನಾ ಕೊಡಲಿಕ್ಕೆ ಹೋದಾಗ, ಪುರೋಹಿತನ್ನೂ 'ಫ್ರಂಟ್ ಸೀಂಟ್'ನ್ಯಾಗೇ ತುರಕಿರತಾರ. ಆದರ, ನೀನು-ವಿಶ್ಯಾ ಕೂತ ದಿಮಾಕು ಬಂದೀ ತೇನು ಅಂವಗ? ಭಡಜೀ ತೋ ಭಡಜೀ ಅಂದದ್ದು ಅದಕs. ಫೋನ್ ಮಾಡೂ ದಪ್ಪೇ ಪುರಸೋತ್ತಾ. ಶೇಡಜೀ ಕಾರ ಕೊಟ್ಟಾ. ನಾ ಕೇಳಿದ್ದರ ಬಾರ ಮಾಡತಿದ್ದಾ. ಸಾಮಾನ ಖರೀದಿ ಮಾಡಿ ಶಂಭರದ ನೋಟ ಇಟ್ಟರ, ಅಂಗಡೀಯುವರು ಮಿಕಿ ಮಿಕಿ ನಮ್ಮ ಮೋತೀ ನೋಡತಾರ. ನೋಟ ಏನು ಇವಂದೇನೋ ಏನು ಡಲ್ಲಾದ್ದೋ ಅಂತs. ವೈದಿಕಬ್ರಾಹ್ಮಣಂತ ಹೇಳೂದೇ ಬ್ಯಾಡಾ. ನಮ್ಮ ಅವ ಲಕ್ಷಣ ಕಳೇನs ಹೇಳತದ, ನಾವು ಯಾರು ಅನೂದನ್ನ. ಸಾಹೇಬರಂಥಾವರು ನಮಕಿಂತಾ ಖೋಕಾ ಅಂತs, ನಮ್ಮಂಥವರ ಬೆನ್ನ ಹತ್ತತಾರ. ಬಿ.ಎ. 'ಫಸ್ಟ್ ಕ್ಲಾಸ್' ಬಂದೆ. 'ಥರ್ಡ್-ಕ್ಲಾಸ್' ಬಂದ ಗೋಂದ್ಯಾನ ಹೇಣತೀ ತಿರಿಗಿ ಬಾಣಂತ್ಯನಕ ಹೋದಳು. ನಮ್ಮ ನಶೀಬಕ್ಕ ಒಂದು ಕನ್ಯಾ ನಿರ್ಮಾಣ ಆಗವಲ್ಲದು. ನಶೀಬ ಖಡತರ ಆದs. 'ಫಸ್ಟ್ ಕ್ಲಾಸ್' ಬಿ.ಎ. ಏನ ಮಾಡೀತು ಮಗಂದು? ನಿಮ್ಮ ಜೋಡೀ ಕಾರನ್ಯಾಗ ಬರೂ ಯೋಗನೂ ಇರಬಾರದಂದರ, ಹಣ್ಯಾಗ ಬರೆಯೂ ಮುಂದs ಆ ಮಹಾರಾಯಾ ಏನೋ ಫೋಟಾಳೀ ಮಾಡ್ಯಾನ. ಸಂಸ್ಕೃತ ವಿಧಿಲಿಖಿತಾ – ಉರ್ದೂ ಲಿಪ್ಯಾಗ ಬರದಾನ. ಎಲ್ಲಾ 'ಟಾಪ್ಸಿ–ಟರ್ವಿ.'"

ನಾನು ಮಾತಾಡುತ್ತಿದ್ದಂತೆ ವಿಶ್ಯಾ, ದಸ್ತಗೀರ್ಯಾ, ತುಳಸಿ ಮುಸಿಮುಸಿ ನಗುತ್ತಿದ್ದರು.

"ಮಗನs ಅಲಗರ್ಜಿ ನಶೀಬಿದ್ದರ ಎಸ್.ಈ. ಅಂಥಾ ಯುರೋಪಿಯನ್ ಸಾಹೇಬರ್ನ ಬಗಲಿಗೆ ಒಗೀತಿದ್ದೇನು? ತಯ್ಯಬ್ಜೀಯ 'ಬಿಜಿನೆಸ್-ಕನ್ಸರ್ನ್'ದ 'ಮ್ಯಾನೇಜರ್' ಆಗಾಂವ ಇದ್ದೀ. ದಾದಾನಂಥಾವಾ ನಿನ್ನ ಮಬ್ಬಿಗೆ ಬಿದ್ದಾ. ನಿನ್ನ ಕಿತಬೀ ನೋಡಲಿಕ್ಕೆ ನನಗ ಸವಡ ಆಗಲಿಲ್ಲ. ಮುಂಬೈಯಾಗ ಎಲ್ಲೆಲ್ಲೆ ಏನೇನು

ಹಗ್ಗಾ ಒಕ್ಕೊಂಡು ಕೂತಿಯೋ ಯಾರಿಗೆ ಠಾಂವಿಕಿ? ನಮ್ಮ ಮನೀ ಲಿಗಾಡ ನಿನಗ ಹತ್ತಿದ್ದಿಲ್ಲಂದರ, ದಾದಲ್ಯಾ, ನಿನ್ನ ಪುಚ್ಚಾ ಎಣಸೂದು ಯಾರಿಗ್ಯರ ಶಕ್ಯ ಆಗತಿತ್ತೇನು? ಕಾಕಾಗ ನನ್ನ ಐ.ಸಿ.ಎಸ್. ಮಾಡಸೂ ಮನಸ್ಸಿತ್ತು. ಆದರ ನನಕಿಂತಾ ಮುಂಚನೇನs ನೀನು ಇಂಗ್ಲಂಡ ಸಫರ ಮಾಡಿರತಿದ್ದಿ. ಒಂದ 'ಸಿಕ್ರೆಟ್ ಡಿಸ್ಕ್ಲೋಜ್' ಮಾಡತೀನಿ ದಾದಲ್ಯಾ. ನೀ 'ಫಸ್ಟ್ ಕ್ಲಾಸ್' ಬಂದ ತಾರ ಬಂತು. ಕಾಕಾ, ಚಟ್ಟನೇ ಎದ್ದವರs ದೇವರ ಮನೀಗೆ ಹೋಗಿ, ಐದ ಮಿನೀಟಾ ತದೇಕ ಚಿತ್ತರಾಗಿ ಕೈಮುಕ್ಕೊಂಡು ನಿಂಟಬಿಟ್ಟರು. ಆ ಮ್ಯಾಲ ಹೊರಗ ಬಂದು, ನನ್ನ ಕಡಿಂದ ಗೋವಿಂದಭಟ್ಟಗ ಪತ್ರಾ ಬರಸಿದರು: ದಾದಲ್ಯಾ ಬ್ಯಾರಿಸ್ಟರ ಆಗಿ ಬರಲಿ, ವಿಲಾಯತಿಗೆ ಹೋಗಲೀ ಅಂತs. ಲಗೇಚ ಅವನ ಕಡಿಂದ ಉತ್ತರ ಬಂತು: ಇಷ್ಟ ದೊಡ್ಡ ಋಣಭಾರಾ ಹೊರೂ ಶಕ್ಯತಾ ನನ್ನಲ್ಲೆ ಇಲ್ಲಾ. ದಾದಲ್ಯಾ ಸಾದಾ ಮಾಮಲೇದಾರ, ಮಾಲಕರೀ ಆಗಲಿ ನಿಮ್ಮ ಪುಣ್ಯಾದಿಂದ. ಅಷ್ಟೇ ಸಾಕು ನನಗಂತ. ದಾದಲ್ಯಾ ಹಡಗದಾಗ ಕೂತರ ತಾ ಭಾವೀ ಬೀಳತೀನಿ ಅಂತs ನಿಮ್ಮ ಗೋದಕ್ಕಾ ಧಾಕ ಹಾಕಿದಳಂತ. ನೀ ರಂದೀ ಮಾಡೀ-ಗೀಡೀಯಂತ ಈ ಮಾತು ಮುಚ್ಚಿ ಇಟ್ಟಿರಬೇಕು, ಗೋವಿಂದಭಟ್ಟಾ. ಕಾಕಾ ಭಾಳ ಕೆಟ್ಟ ಅನಿಸಿಗೊಂಡರು. ಎಂಟಾ ನೆಂಟ ದಿನಾ ಹಳಹಳಿಸಿದರು. ಗೋವಿಂದಭಟ್ಟಾ ಖರೇ ವೈದಿಕಬ್ರಾಹ್ಮಣಾ. ಋಣದ ಬಾಬತ್ಯಾಗೂ ಹಾಸಿಗಿ ಇದ್ದಷ್ಟೇ ಕಾಲ ಚಾಚೂ ಹಟಾ ಅವಂದು ಅಂದರು. ಬಸವಂತೀ ಭಾಸಗಡೀನೂ ಅದೇ ವ್ಯಾಖ್ಯಾಕ್ಕ ಎದ್ದಿತು. ನಾ ಇದರ ದಶಿಂದ ಹೇಳಿದ್ದರೂ ನೀ ಏನು ಕಬೂಲಾಗತಿದ್ದಿಲ್ಲಾ. ನೀ ಬರದ ಪತ್ರಾ ನೋಡೇ ಅನಿಸ್ತ್ಯು: ನಿಂದೂ-ಬಸವಂತೀದೂ ಜೀವ ಬೆಸದಿರಬೇಕಂತ. ಪಂತರ ಮನೀ ಕಲ್ಯಾಣಕ್ಕಂತೇ ಅವು ಬೆಸದಿರಬೇಕಂತ ಅನಿಸ್ತ್ಯು... ನೀ ಬಸವಂತೀ ಬೆನ್ನ ಬಿಡೂ ದಿಲ್ಲಾ ಅನ್ನೂದಕ್ಕ ಅಕ್ಷರ ಅಕ್ಷರ ಸಾಕ್ಷೀ ಅವs. ನಾ ಹೇಳ್ಯರ ಏನ ಮಾಡಾಂವ ಇದ್ದೆ?"

ಬಸವಂತಿ-ದಾದಲ್ಯಾರ ಜೀವನದ ಬೆಸಿಗೆಯಾದದ್ದು ಸತ್ಯವಿತ್ತು. ಆ ಬೆಸಿಗೆ ಯಲ್ಲಿ ಯಾವ ಸ್ವಾರ್ಥವಿರಲಿಲ್ಲ. ಸ್ವ-ಸುಖದ ಆಮಿಷವಿರಲಿಲ್ಲ. ಅದು ವಿಶ್ವಾಸನ-ಸೋನಕ್ಕರ, ಪಂತಕುಟುಂಬದ ಕ್ಷೇಮಕಾರಣಕ್ಕೆ, ಅದರ ಮಂಗಲಕ್ಕೆ ಬೆಸಿಗೆ ಯಾಗಿತ್ತು. ಆ ಜೀವಗಳ ಬೆಸಿಗೆಯಾದ ದಿನವೇ ಬಸವಂತಿ ಹೇಳಿದ್ದಳು: ನಮ್ಮ ಜೀವನದ ಹೋಳಿಯಾದರೂ ಅಡ್ಡಿ ಇಲ್ಲವೆಂದು. ಅಂದೇ ಅವಳು ನನ್ನ ಹಣೆಗೆ

ಸಿಂಧೂರವನ್ನು ತೊಡೆದಿದ್ದಳು. ಅಂದೇ ದಾದಲ್ಯಾನ ಜೀವ ಪ್ರತಿಷ್ಠವಾಯಿತು. ಎಮ್.ಎ.ದ ಆಶೆ, ಮಾಮುಲೇ-ಮಹಾಲ್‌ಕರಿಯ ಆಶೆಯನ್ನು ಅಂದೇ ಬಿಟ್ಟೆ. ಅದನ್ನು ಬಿಟ್ಟೆನೆಂದು ಅಳುಕಲಿಲ್ಲ.ರಾವಜೀಕಾಕಾ ಯಾವ ವಿರಾಟ್ ವಾತ್ಸಲ್ಯದಿಂದ, ನನ್ನ ಸಾಂಗಲಿಯಲ್ಲಿಯ ಶಿಕ್ಷಣ ಸುಗಮವಾಗುವಂತೆ ಮಾಡಿದ್ದರೋ, ಅದೇ, ಅಂಥದೇ ವಾತ್ಸಲ್ಯದಿಂದ, ಎಸ್.ಈ. ನನ್ನನ್ನು ಮುಂಬೈಯಲ್ಲಿ ತಂದಿಡಲು ಕಾರಣ ರಾವರು. ಅವರ ಮಾತಿಗೆ ಸಕಾರ ಹೇಳುವದು ನನ್ನ ಜೀವದ ಸುತ್ತು ಬಂದಿತು. ಅವರ ಮಾತಿಗೆ ಕಟ್ಟುಬಿದ್ದು ಮುಂಬೈಗೆ ಬಂದಿದ್ದೆ. ಬಂದದ್ದೂ ಠೀಕೇ ಆಯಿತು. ಶಿಕ್ಷಣ ಸಾಗುತ್ತಿತ್ತು. ವಿಶ್ವಾಸನಿಗೆ ರಕ್ಷೆಯಾಗಿರುವದೂ ಸಾಧಿಸುತ್ತಿತ್ತು. ಇಂದು ವಿಶ್ವಾಸ ಒಂದು ಕುತ್ತಿನಿಂದ ಪಾರುಬಿದ್ದಿದ್ದ. ಸಾಹೇಬರು ಪಾರುಬಿದ್ದಿದ್ದರು. ಒಂದು ಪ್ರಕರಣ ಬಿನ್-ಬೊಬ್ಬಾಟಿಲ್ಲದೆ ಬಗೆಹರಿದಿತು. ಆದರೆ ಇಲ್ಲಿ ಆರಿದ ಬೆಂಕಿ ಎಲ್ಲಿಯೋ ಉರಿದೇಳಲಿತ್ತು. ಇದನ್ನು ತಪ್ಪಿಸಿದಂತೆ ಅದನ್ನು ಆರಿಸುವ ಕುವ್ವತ್ತು ನನ್ನಲ್ಲಿದ್ದ ಬಗ್ಗೆ ನನಗೇ ಸಂದೇಹ ಬರತೊಡಗಿತ್ತು. ಬಸವಂತಿ ನನ್ನ ಮಾತಿಗೆ ಒಪ್ಪುವ ಸಂಭವವಿರಲಿಲ್ಲ. ಶ್ಯಾಮರಾಯನ ಹುಲಿಯ ಗವಿಯಲ್ಲಿ ಹೊಕ್ಕೇ ಅವಳು ಅದರೊಡನೆ ಸೆಣಸಲಿದ್ದಳು. ಆ ತುಮುಲ ಭಾರೀ ಧೋಕಾದ್ದಿತ್ತು... ಬಸವಂತಿಯ ಜೀವನ ಧೋಕಾದಲ್ಲಿತ್ತು. ಅದನ್ನು ತಪ್ಪಿಸುವ, ಅವಳನ್ನು ಕಾಯುವ ಸಾಮರ್ಥ್ಯ ಇಂದು ವಿಶ್ವಾಸನಲ್ಲಿತ್ತು.......

ಹೊರಗೆ ಮೋಟಾರು ಬಂದು ನಿಂತ ಸದ್ದಾಯಿತು. ಚುನೀಲಾಲ ಶೇಡ ಜಿಯ ಗಾಡಿ ಬಂದು ಬಾಗಿಲಲ್ಲಿ ನಿಂತಿತು. ಡ್ರಾಯವ್ಹರನಿಗೆ ಏನೋ ಹೇಳುವದ ಕ್ಕೆಂದು ವಸ್ತಗೀರ್‍ಯಾ ಹೊರಗೆ ಹೋದ. ಚಹ ತಯಾರಿಸಲು ತುಳಸಿ ಅಡುಗೆಯ ಮನೆಗೆ ನಡೆದಳು.

"ವಿಶ್ಯಾ, ಹ್ಯಾಂಗರ ಮಾಡಿ, ಬಸವಂತಿನ್ನ ದಾದಾನ ಬಂಗಲೇ ಬಿಡಸೂ. ಅಕಿನ್ನ ಬದಕೂಸೂದಕ್ಕ ಇದೇ ಒಂದು ಉಪಾಯಾ. ಇಲ್ಲದಿದ್ದರ ಅಕೀ ಹೆಣಾನs ನೋಡೂ ಪಾಳೀ ಬರತ್ತದ ನಮಗ."

ನಾನು ಅತಿ ಆರ್ಜವತೆಯಿಂದ ವಿಶ್ವಾಸನಿಗೆ ಹೇಳಿದೆ.

ವಿಶ್ವಾಸ ಸಿಗರೇಟು ಹಚ್ಚಲೆಂದು ಕಡ್ಡಿ ಗೀಚಿದ. ಅರೆನಯನ ಮುಚ್ಚಿ, ಬಾಯಲ್ಲಿ ತುಂಬಿದ ಹೊಗೆಯನ್ನು ಉಫ್ ಎಂದು ಬಿಟ್ಟ. ನನ್ನ ಮಾತಿಗೆ ಉತ್ತರ ಮಾತ್ರ ಕೊಡಲಿಲ್ಲ.

ಚಹ ಮುಗಿಯಿತು. ಹೊರಡುವ ತಯಾರಿಯಾಯಿತು. ವಿಶ್ವಾಸ ಗಾಡಿಯಲ್ಲಿ ಕೂಡುತ್ತ —

"ಪಹಲೇ ಜೀ. ಎಮ್. ಚಲೋ."

ಎಂದ.

ಏನಾದರೂ ಸಾಮಾನು-ಸಡಿ ತೆಗೆದುಕೊಳ್ಳುವದಿರಬೇಕೆಂದು ನನ್ನ ಭಾವನೆಯಾಯಿತು. ವಿಶ್ವಾಸ ತಾನೇ ಹೇಳಿದ:

"ಎರಡ ಮೂರ ದಿನಾ ನಾವು ಯಾರೂ ಇರೂದಿಲ್ಲಾ. ಮನೀಗೆ ಕೀಲಿ ಇರೂದು ಠೀಕಲ್ಲಾ. ಸಾವಂತ ಅಂತ್ಸ ನನ್ನ ಗೆಳ್ಯಾ ಇದ್ದಾನ. ಅಂವಗ ಹೇಳಿ ಇಡತೀನಿ: ಎರಡ-ಮೂರು ದಿನಾ ಮನೀ ನೋಡಿಕೋ ಅಂತ್ಸ. ಅಂದರ ನಿಶ್ಚಿಂತಿ ಇರತ್ತsದ. 'ಪರ್ಮಿಶನ್' ತಗೋಳ್ದೇ ನನಗೂ ಊರ ಬಿಡಲಿಕ್ಕೆ ಬರೂದಿಲ್ಲಾ. ಅದನ್ನೂ ತಗೊಂಡ ಬರತೀನಿ. ನೀವು ಕಾರಿನ್ಯಾಗೇ ಕೂತಿರ್ರಿ. ಹತ್ತ ಹದನೈದು ಮಿನೀಟಿನ್ಯಾಗ ಬರತೀನಿ" —

ವಿಶ್ವಾಸ ಅಂದು ಬೆಳಗಿನಿಂದ ನಮ್ಮ ಕೂಡ ಇದ್ದ. ಹಾಸ್ಟೆಲ್ಲಿನಲ್ಲಿಯ ತನ್ನ ಕೋಣೆಗೆ ಹೋಗಿರಲೇ ಇಲ್ಲ.

ವಿಶ್ವಾಸನಿಗೆ ತಿರುಗಿ ಬರಲಿಕ್ಕೆ ಅರ್ಧ ಗಂಟೆ ಹಿಡಿಯಿತು. 'ಇನ್-ಎಕ್ಸ್‌ಚೇಂಜ್' ಬಹಳ ಮಿಜಿಮಿಜಿ ಮಾಡಿ ಅವನಿಗೆ ಪರವಾನಿಗಿ ದಯಪಾಲಿಸಿದನಂತೆ. ಸಾವಂತನಿಗೆ ಕೀಲಿ ಕೊಟ್ಟು, ಅವನಿಗೆ ಹೇಳಬೇಕಾದುದನ್ನು ಹೇಳಿಯಾಯಿತು. ಗಾಡಿಯ ಸಾರಥ್ಯವನ್ನು ದಸ್ತುಗೀರ್‍ಯಾನೇ ಮಾಡಲಿದ್ದ. ಡ್ರಾಯವ್ಹರನ ಕೈಯಲ್ಲಿ ಮಿಷಿಯ ಹಣವನ್ನಿಟ್ಟು ಅವನಿಂದ ಸಲಾಮು ಸ್ವೀಕರಿಸಿದ್ದಾಯಿತು. ನನ್ನನ್ನು ಗ್ರೀನ್ಸ ಹೋಟೇಲಿನ ಹೆಬ್ಬಾಗಿಲಲ್ಲಿ ಬಿಟ್ಟು ಗಾಡಿ ಪುಣೆಯ ದಾರಿ ಹಿಡಿಯಿತು.

ಲಿಫ್ಟ್ ಇನ್ನೂ ನಾದುರಸ್ತವಾಗಿಯೇ ಉಳಿದಿತ್ತು. ಜಿನ್ನೆ ಏರಿಯೇ ನಾಲ್ಕನೇ ಅಂತಸ್ತಿನ ಮೂವತ್ತನೇ ನಂಬರ ಕೋಣೆಗೆ ಹೋಗಬೇಕು. ಈ ಸ್ವರ್ಗಾರೋಹಣ ಪ್ರಯುಕ್ತ – ನಾನು ಇನ್ನು ಜಿನ್ನೇ ಏರುವವ – ಅಷ್ಟರಲ್ಲಿ ಯಾರೋ,

"ದಾದಲ್ಯಾ !"

ಎಂದು ಒದರಿದ್ದು ಕೇಳಿಬಂತು. ಹಿಂದಿರುಗಿ ನೋಡಿದೆ: ನಿನ್ನೆ ನಾವು ಕುಳಿತು ಚಹ ಕುಡಿದ ಕೋಣೆಯಲ್ಲಿ ಬಸಗೊಂಡ-ನಬೀಸಾಬರು ಕುಳಿತಿದ್ದರು. ಅವರು ನನ್ನ ದಾರಿಯನ್ನೇ ಕಾಯುತ್ತಿರುವಂತೆ ಕಂಡಿತು. ಅವರು ಕುಳಿತಲ್ಲಿ ಹೋಗಿ ನಾನು.

"ಯಾಕ ಬಸಗೋಂಡಾ, ಇನಾ ಊರಿಗೆ ಹೋಗಿಲ್ಲೇನು? ನಿನ್ನೆ ರಾತ್ರೀನೇ ಹೋಗಾವ್ರಿದ್ರೆಲಾ? ಮತ್ತೇನು ನೊಣಾ ಒದಕೊಂಡಿತು?"
ಎಂದು ಕೇಳಿದೆ.

"ನಿನ್ನ ಕಡೇನs ಜರಾ ಕೆಲಸಾ ಶಿಲ್ಲಕ ಇತ್ತು. ತಯ್ಯಬ್ಜೀ ಅವರ ಮನೀದು ಪತ್ತೇ ಕೊಟ್ಟಿದ್ದರು ಶ್ಯಾಮರಾಯರು. ಅಲ್ಲಿನೂ ಹೋಗಿ ಬಂದೇವು. ನೀ ಊರಾಗಿಲ್ಲಂತ ಅವರು ಹೇಳಿದರು. ಸಾಹೇಬರು ಇಲ್ಲೇ ಇಳದಾರು ಅನೂದು ಠಾಂವಿಕಿತ್ತು. ಜರಾ ಇಲ್ಲೇ ಠಾಣೇ ಹಾಕಿದರ ನೀ ಸಿಕ್ಕೀಯಂತ ಇಲ್ಲಿ ಬಂದ ಕೂತು ತಾಸಾತು. ನೀ ಮೋಟಾರದಾಗಿಂದ ಇಳಿಯೂದ್ನ ಫಕ್ಕನ ನಬೀಸಾಬ ನೋಡಿದಾ, ಖಿಡಕ್ಯಾಗಿಂದ. ಬ್ಯಾರೇ ಇಬ್ಬರು ಹುಡುಗೂರು, ಒಬ್ಬ ಹುಡಿಗಿ ಇದ್ದಿದಿಲ್ಲs? ಯಾರದಾದಲ್ಯಾ ಅವರು? ಮುಂಬೈಯಾಗ ಭಾರೀ ದೋಸ್ತೀ ಅದs ಬಿಡೂ ದಾದಲ್ಯಾ ನಿಂದೂ?"
ಬಸಗೋಂಡ ಕಿಲಾಪ, ಪುಷಾರಕಿ ಎರಡೂ ಒಂದೇ ಉಸರಿನಲ್ಲಿ ಬಿಟ್ಟು ಕೇಳಿದ.

"ಶ್ಯಾಮರಾಯನ ಗೆಣ್ಯಾ ಅಂತೀ. ಅಂವನ ಹಿರೇ ಮಗನ್ನು ಗುರತ ಹತ್ತಲಿಲ್ಲs ಬಸಗೋಂಡಾ? ಕಂಪಗಿನ ಬಕ್ಕನೆತ್ತೀ ಹುಡಗಾ, ಅವನೇ ಶ್ಯಾಮರಾಯನ ಹಿರೇ ಮಗಾ, ಇಲ್ಲೇ ಡಾಕ್ಟರಕೀ ಕಲೀತಾನ. ಇನ್ನೊಬ್ಬಾ ಅವನ ದೋಸ್ತಾ. ಹುಡಿಗಿ ವಿಶ್ವಾಸನ ಯಜಮಾನ್ತೀ."

"ಅರೇ ಎಂದ ಅರಷಣಾತು? ನಮಗೇನು ಅದರ ಪತ್ತೇನs ಇಲ್ಲಲಾ?"

"ಅರಷಣಕ ಅವನ ಅಪ್ಪನs ಬರಲಿಲ್ಲಾ. ಇನ್ನ ನೀ ಬಂದೇನು ಆಹೇರೀ ಮಾಡತಿದ್ದಿ? ಅದು ಹೋಗಲಿ ಬಸಗೋಂಡಾ. ನನ್ನ ಯಾಕ ಹುಡಕತಿದ್ದಿರಿ?"
ನಾನು ಕೇಳಿದೆ.

"ನಮ್ಮ ಕೈಫಿಯತ್ತಿನ ನಿಕಾಲಿ ಏನಾತನೂದನ್ನ ತಿಳಕೊಂಡು ಹೋಗೂದs ಠೀಕ ಅಂತs ನಿಂತಿವಿ. ಮತ್ತ ನಿನ್ನೆ ಹಾಕ್ಯಾಟದಾಗ ಖರೇ ಮುದ್ದೇನs ಬಾಜೂಕ ಉಳೀತು. ಶ್ಯಾಮರಾಯಗ-ನಿನಗ ಸುಮ್ನs ಬಾಯಿಗೆ ಬಾಯಿ ಹತ್ತಿತು. ನೀನs ಜರಾ ದಮ್ಮ ತಿಂದಿದ್ದರ ಆಗತಿತ್ತು. ಕೆಲಸ ಆಗ್ಹಾಂಗ ಆಗತಿರತದ. ಮಾತ ಮಾತ್ರ ನಿಂದರತಾವ ದಾದಲ್ಯಾ. ಇಲ್ಲೀದು ಹೋದ ತಾಸಿನ್ಯಾಗ ಶ್ಯಾಮರಾಯನ ಸಿಟ್ಟು ತಾನs ಇಳೀತು."
ನಬೀಸಾಬ.

"ನಬೀಸಾ, ಶ್ಯಾಮರಾಯ ಸಿಟ್ಟಮಾಡಿ ನಂದೇನು ಮಣಸ್ಹಾಂಗ ಇದ್ದಾನ? ಕಬ್ಬಿಣ ಕಡಲೀ ಕಡದರ – ಹಲ್ಲ ಉದರೂದು ಅವಂದು. ನನ್ನ ಕೂದಲೇನು ಕೊಂಕೂ ಹಾಂಗಿಲ್ಲಾ. ದಗಾ ಕೊಟ್ಟೇವಂತs, ನನ್ನ ಮತ್ತs ಬಸವಂತಿನ್ನ ಒಂದ ಕೈ ನೋಡೂ ಹುಕೀ ಅದs ಅಂವಗ. ಕೈ ತೋರಸೂ ಹುಕೀ ನಮಗೂ ಅದs. ಬಸವಂತಿ ಏನು, ಬಸಗೋಂಡನ್ಹಾಂಗ ನಾಲಾಯಖ ಅಲ್ಲಾ. ಇಂಥಾ ಹತ್ತ ಶ್ಯಾಮರಾಯ ರನ್ನ ಮುರದ ತಿನ್ಹಾಂಗ ಇದ್ದಾಳ."

"ಬಸವಂತಿಗೆ ನೀನs ಏನೋ ಭುಲತಾಪೀ ತುಂಬಿ ಅಕಿನ್ನ ಅಡ್ಡದಾರಿಗಿ ಎಳದೀ. ಹರೇ ನಿನಗ ಒಬ್ಬಗs ಇದ್ದಿದ್ದಿಲ್ಲಾ. ಬಸವಂತೀ ಶ್ಯಾಮರಾಯನ್ನ ಕೂಡಿದಕೀ ಅನೂದು ಗೊತ್ತ ಇದ್ದೂ ನೀ ಯಾಕ ಅಕೀ ಬೆನ್ನ ಹತ್ತಿದಿ? ನೀ ಹೇಳಿ ಧಾಂಗ ಕುಣೇಬೇಕಾದರ ಅಕೀಗೆ ನೀ ಗಿಡಾನs ಮಾಡಿರಬೇಕು. ಶ್ಯಾಮರಾಯ ಇಲ್ಲದಾಗ ನೀ ವಾಡೇಕ್ಕ ಬರತಿರೂ ಸುದ್ದೀ ತಮ್ಮಾಜಿ ಹೇಳಿದಾಗ ನಮಗ ವಿಶ್ವಾಸ ಕೂಡಲಿಲ್ಲಾ. ಈ ಸುದ್ದಿ ಗೊತ್ತ ಇದ್ದೂ ಬಸವಂತೀ ಜೋಡೀ ಪುಣೇದಾಗ ಇಡಲಿಕ್ಕೆ, ಶ್ಯಾಮರಾಯಾ ದೊಡ್ಡ ಮನಸಮಾಡಿದಾ. ಆದರದs ಗೈರ್‌ಫಾಯದೇ ತಗೊಂಡು ನೀ ಪತ್ರಾ ಹಾರಿಸಿದಿ. ಆದರ ಶಕಾ ಬಡೀತು ಬಸವಂತಿಗೆ. ಆದದ್ದು ಆಗಿಹೋಗೇದ. ಬಸವಂತೀ ಜೇಂವಕ ತ್ರಾಸ ಆಗಬಾರದಂತ ನಿನ್ನ ಮನಸ್ಸ ಇದ್ದರ, ಶ್ಯಾಮರಾಯರ ಎದರಿಗೆ ಆ ಪತ್ರಾ ಇಷ್ಟು ನಾಶಮಾಡಿಬಿಡು. ಸಾಹೇಬರ ಅರ್ಜೀ ಪ್ರಕರಣದಾಗ ನಮಗೇನೂ ಠಾಂವಿಕಿಲ್ಲಾ. ಅವರಿಂದ ನಮಗೇನೂ ತ್ರಾಸ ಆಗಿಲ್ಲಾ ಅಂತs ಲೇಖೀ ಜವಾಬನs ಕೊಟ್ಟ ಬಂದೇವು. ಅವರಿಗೂ ಏನ ಧಕ್ಕಿ ಆಗ್ಹಾಂಗ ಇಲ್ಲಾ; ಬಸವಂತಿಗೂ ಇಜಾ ಆಗ್ಹಾಂಗಿಲ್ಲಾ."

ನಬೀಸಾಬ.

"ಹೀಂಗ ಅಲ್ಲಿಕ್ಕೆ ಶ್ಯಾಮರಾಯನೇ ನಿಮಗ ಕಲಸ್ಯಾನ ಅನ್ನೂದು ಉಘಡ ಅದs. ಬಸವಂತೀ ಮ್ಯಾಲಿನ ಕಳಕಳೀಲೇ ನೀವೇನು ಹೀಂಗ ವಕೀಲೀ ಮಾಡಲಿಕ್ಕೆ ಬರಾಪ್ರಲ್ಲಾ. ಶ್ಯಾಮರಾಯ ಈಗ ತಿಳಕೊಂಥಾಂಗ, ನಂದೂ-ಬಸವಂತೀದೂ ಸಂಬಂಧನs ಇದ್ದರ, ಅಕಿನ್ನ ನನ್ನ ಜೋಡೀ ಇಟಗೊಂಬೂದೇನು ಭಾರ ಹೋಗ ತಿದ್ದಿಲ್ಲಾ. ವಾಡೇದಿಂದ ಶ್ಯಾಮರಾಯನ್ನೇ ಗುಡಚಾಪಿ ಕಿತ್ತಿಸಿ, ಬಸವಂತೀ ಜೋಡಿ ಇರತಿದ್ದೆ. ದಾದಲ್ಯಾನ ಕೂಡೀನ್ಯಂತ ಬಸವಂತೀನೇ ಹೇಳಿದ್ರ ಶ್ಯಾಮ ರಾಯ ಏನ ಮಾಢಾಂಗ ಇದ್ದಾ? ನೀವೇನು ಮಾಢಾಂಗ ಇದ್ದರಿ? ಬಸವಂತಿಗೆ

ತ್ರಾಸ ಆಗೂ ಧಾಕ ನನಗ ಹಾಕಬ್ಯಾಡರಿ. ಆಕೀಗೆ ತ್ರಾಸ ಕೊಟ್ಟರ ಏನ ಆದೀತ ಅನೂದನ್ನ ಶ್ಯಾಮರಾಯಗ ಹೇಳರಿ. ಬಸವಂತಿ, ಊರ ವೀರಭದ್ರಾ, ರಾಚಪ್ಪನ ತಾಬೇದಾಗ ಇರತಾಳ. ರಾಚಪ್ಪ ಇರೂ ತನಕಾ ಆಕೀ ಕೂದಲಾ ಕೊಂಕ್ಪಾಂಗಿಲ್ಲಾ. ದಾದಲ್ಯಾ ಕರದಾನಂದರ, ಗೌಡರ ಓಣೀ ಹುಡುಗೂರು, ಅರ ತಾಸ ರಾತ್ರ್ಯಾಗ ಎದ್ದ ಬರತಾರ. ಕಣ್‌ಮುಚ್ಚಿ ಕಣ್ಣ ತಗಿಯೂದರಾಗ, ಶ್ಯಾಮರಾಯನ ಚೆಟ್ಟಾ ಬೆಳಗತಾರs. ಇಲ್ಲೆ ಬಾಲ ಸುಟ್ಟಿತು. ಅದರ ಸೇಡು ಎಲ್ಲೆ ತೀರಿಸಿಗೊಂಬೂ ಡಾವ್ ಶ್ಯಾಮರಾಯಾ ಮಾಡ್ಯಾನ ಅನೂದು ಠಾಂವಿಕ್ಯದ ನನಗ. ಒಂದ ಕರಾರಕ್ಕ ಶ್ಯಾಮ ರಾಯಾ ಕಬೂಲಿದ್ದರ ಈ ಪತ್ರಾ ಸುಡತೀನಿ. ಅಂವಾ ಕಾಕಾ ಅವರ ಎದರಿಗೆ ಅಡ್ಡ ಬಿದ್ದು ಕಾಲ ಹಿಡಕೋಬೇಕು. ಸೋಸಕ್ಕಗ ಸುಳ್ಳ ಅಪವಾದ ಕೊಟ್ಟಿದ್ದೆ. ಅದನ್ನು ಹೊಟ್ಟ್ಯಾಗ ಹಾಕೋಬೇಕು ಅಂತs ಮಾಫೀ ಬೇಡಬೇಕು. ಹೀಂಗ ಮಾಡಿದರ ಅವಂದs ಭಂಗಾರ ಆಗತದ ಬಸಗೋಂಡಾ. ನಾಕ ಮಂದೀ ಎದರಿಗೆ ಪತ್ರಾ ಅವನ ತಾಬೇಕ್ಕ ಕೊಡತೀನಿ."

"ಇದೆಲ್ಲಾ ಕಂತ್ರಾಟ ಹೇಳೂದು ನಮಗ ಜಮಾಸ್ಪಾಂಗಿಲ್ಲ ದಾದಲ್ಯಾ. ನೀನೇ ಶ್ಯಾಮರಾಯನಿದರಿಗೆ ಈ ಮಾತು ಯಾಕ ಹೇಳಬಾರದು? ಅಂವಾ ಕಬೂಲಿದ್ದರ ಎಲ್ಲಾನೂ ಠೀಕನs ಆಗತದ. ಮತ್ತs......"

"ಮತ್ತೇನು ಅನೂದನ್ನ ಹೇಳಲಾ? ಅರಗಚ್ಚಿ ಯಾಕ ಮಾಡತೀ ಮಾತಾ?"

"ಹಾಂಗಲ್ಲಾ. ಏನಪಾ ಅಂದರs. ಪತ್ರಾ ನಿನ್ನ ಕೈಯಾಗ ಸಿಕ್ಕು ಶ್ಯಾಮ ರಾಯನ ಇಜ್ಜತ್ತನ್ನs ನಿನ್ನ ಕೈಯಾಗ ಸಿಕ್ಕಾಂಗ ಆಗೇದ. ಅದು ಬಚಾವ್ ಆಗ ಬೇಕು ಮತ್ತು ನಿನಗೂ ಅದರ ಫಾಯದೇ ಸಿಕ್ಕಿರಬೇಕು, ಹಾಂಗನೂ ಒಂದ ದಾರಿ ಅದs. ನಿನ್ನ ಮಾಗಣೀನರs ಏನೈತಿ ಹೇಳಲಾ?"

"ತಿಳೀತ... ತಿಳೀತ ಬಸಗೋಂಡಾ. ಅಗಾಳ್ಗೇ ನಾ ಕರಾರಂತ ಹೇಳಿದ್ದೆ. ಅದs ನನ್ನ ಮಾಗಣೀ. ಅದಕ್ಕ ಕಬೂಲ ಆಗದಿದ್ದರ, ಬಸವಂತಿನ್ನ ತಾನಾಗೇ ನನಗ ಒಪ್ಪಸಲಿಕ್ಕೆ ತಯಾರ ಇದ್ದರ ಕೇಳು. ಕೂತ ಮೆಟ್ಟಿನ ಮ್ಯಾಲ ಪತ್ರಾ ಸುಡ ತೀನಿ. ನಾ ಇಂದೇ ರಾತ್ರೀ ಗಾಡಿಗೆ ಪುಣೇಕ್ಕ ಹೋಗತೀನಿ. ಅಲ್ಲೆ ಎರಡ ದಿನಾ ಇರತೀನಿ. ಎರಡರ ಪೈಕೀ ಬೇಕಾದ್ದು ಒಂದ ಮಾಗಣೀಗೆ ಶ್ಯಾಮರಾಯ ಕಬೂಲ ಆದರ ಬಂದ ತಿಳಸರಿ. ಶ್ಯಾಮರಾಯರ ಎರಡನೇ ಮಗನ ಜೋಡೀ, ಸಾಹೇಬರ ಮಗಳದು ಛಾಟಿನಿ ಮಾತ ಅವs. ನಾ ಪುಣೇಕ್ಕ ಹೋಗಲಿಕ್ಕೇಬೇಕು. ಇಲ್ಲದಿದ್ದರ

ಆದರ ನಿಕಾಲೀ ಇಲ್ಲೇ ಆಗತಿತ್ತು. ಬಸವಂತಿನ್ನ ಜ್ವಾಕೀ ಅಂತs ನಿನ್ನೆ ಹೇಳಿದ್ದೆ. ಇಂದ ನೀ ಪ್ರುಣೇಕ್ಕ ಹೋದರ ಹೇಳು, ಅಕೀಗೆ. ದಾದಲ್ಯಾ ನಿನ್ನ ಮಾಗಣೀ ಹಾಕ್ಯಾನಂತs. ಆಗದೀ ಶ್ಯಾಮರಾಯನ ಎದರಿಗೇನs ಹೇಳು."

ಇಷ್ಟು ಹೇಳಿ ನಾನು ಕೋಣೆಯಿಂದ ಹೊರಬಿದ್ದೆ. ನನ್ನ ಬೆನ್ನಿಗೇ ಬಸಗೋಂಡನ —

"ಎಲಾ ಹಾರೂಟ್ಯಾ. ಭಾರೀ ಮಸ್ತಿಗಿ ಬಂದೀ ಮಗನs. ಜುಟ್ಟಾ ಹಿಡದು ರಝಾಡಿಸಿದರ ತಿಳೀತದ"

ಉಕ್ತಿ-ಮುಕ್ತಾಫಲ ಉದರಿದ್ದು ಕೇಳಿಬಂತು.

ಹಾರೂಟ್ಯಾ-ವೈದಿಕಬ್ರಾಹ್ಮಣನ ಶಿಖೆಯಲ್ಲಿ ರುದ್ರಸಂತಾಪ ಮಡಗಿರುವ ವಿಷಯು. ಪಾಪ, ಬಸಗೋಂಡನಿಗೆ ಗೊತ್ತಿರುವ ಸಂಭವವಿರಲಿಲ್ಲ. ಚಾಣಕ್ಯನ ಕತೆಯು ವರೆಗೆ ಕೈಚಾಚುವಷ್ಟು ಅವನ ಶಿಕ್ಷಣವಾಗಿರಲಿಲ್ಲ.

ನನ್ನ ಮಾಗಣೆಯು ಅಂಕುಶ ನೇರವಾಗಿ ಶ್ಯಾಮರಾಯನ ಎದೆಗೇ ಬೀಸಿತ್ತು. ಕಿಡಿ ತೂರುತ್ತ ಬರುವ ಅದರ ತಪ್ತ-ವಿದ್ಯುದ್ವಿನ್ಯಾಸಕ್ಕೆ ಅವನ ಕಣ್ಣು ಮುಚ್ಚುತ್ತಿತ್ತು. ಶ್ಯಾಮರಾಯ ತೀರ ನಿರ್ಲಕ್ಷ್ಯ-ನಿರ್ಲಜ್ಜ-ಭಾವನಾಗಿ ಈ ದೂತರಿಂದ ರಾಜಭಾರ ಮಾಡಿಸಿದ್ದ. ಇವು ಎಚ್.ಎಂ.ವ್ಹಿ. ತಬಕಡಿ. ಇಲ್ಲಿ ಅಂದದ್ದನ್ನು ಕೇಳಿ, ಅದನ್ನೇ ಅಲ್ಲಿ ನುಡಿಸುವ ಗಿಳಿ-ಜೋಡಿ. ಒಂದೆರಡು ಹಸಿರು ನೋಟು ಕಂಡು, ದಾದಲ್ಯಾ ಕಣ್ಣನ್ನೇ ಬೆಳ್ಳಗೆ ಮಾಡಬಹುದೆಂದು ಶ್ಯಾಮರಾಯ ಭಾವಿಸಿದಂತಿತ್ತು. ಗೋವಾ-ಲಾಟರಿಯಲ್ಲಿ ಐದು ಸಾವಿರ ತನ್ನ ಹೆಸರಿಗೆ ಬಂದಾಗ, ಅದರಲ್ಲಿ ಕೇವಲ ಇಪ್ಪತ್ತೇ ತನ್ನದೆಂದು ಎತ್ತಿಕೊಂಡು. ಉಳಿದದ್ದನ್ನು ಬರೇ ಕಾಗದದ ಕಟ್ಟೆಂದು ಭಾವಿಸಿದ ದಾದಲ್ಯಾನ ಅರ್ಥಜ್ಞಾನ ಶ್ಯಾಮರಾಯನಿಗೆ ಅವಗತವಾಗುವಂತಿರಲಿಲ್ಲ. ನೂರು ರೂಪಾಯಿ – ಎರಡು ಭಾಂಡು ಕೊಟ್ಟು. ಸಾಹೇಬರು ನನ್ನನ್ನು ಖರೀದಿ ಮಾಡಿರುವರೆಂದು ಶ್ಯಾಮರಾಯ ಹಂಗಿಸುತ್ತಿದ್ದ. ದಾದಲ್ಯಾನಿಗೆ ನೂರು ರೂಪಾಯಿಯು ಮೂರುಂಕಿ ದೊಡ್ಡದಿರಲಿಲ್ಲ. ಅದರ ಬೆನ್ನಿಗಿದ್ದ ವಿರಾಟ್ ಅಂತಃಕರಣ-ವಾತ್ಸಲ್ಯ. ಭೂವ್ಯೋಮದುದ್ದವಿತ್ತು. ಶ್ಯಾಮರಾಯ. ಹತ್ತು ಸಾವಿರದ ಹಮ್ಮಿಣಿಯನ್ನು ನನ್ನೆದುರು ಇಟ್ಟಿದ್ದರೆ. ನಾನದನ್ನು ಹೆಬ್ಬೆರಳಿನಿಂದ ಚಿಮ್ಮುತ್ತಿದ್ದೆ. ಆದರೆ ರಾಪಜೀಕಾಕಾ, ಕೇವಲ ಹತ್ತು ರೂಪಾಯಿಯಲ್ಲಿ. ನಾಕು ಶರ್ಟು, ಎರಡು ಪಾಯಜಾಮಾ ಹೊಲಿಸಿ ಕೊಟ್ಟು ನನ್ನನ್ನು ಖರೀದಿಮಾಡಿದ್ದರು. ಈ ಖರೀದಿದಾರರ ಯೋಗ್ಯತೆ ಶ್ಯಾಮರಾಯನಿಗೆ ಏಳೇಳು ಜನ್ಮವಾದರೂ

ಬರುವಂತಿರಲಿಲ್ಲ. "ಸುವರ್ಣ-ಪುಷ್ಪ-ದಕ್ಷಿಣಾಂ-ಸಮರ್ಪಯಾಮಿ... " ಎಂದು ಬಾಯಿಂದ ಹೇಳುತ್ತ ನಾವು ಇಡುವದು ಒಂದು ನಿಕೆಲ್ ನಾಣ್ಯ. ಆದರೆ ನಮ್ಮ ಆ ಅರ್ಪಣದ ಬೆನ್ನಿಗಿದ್ದ ಭಾವನೆಯಲ್ಲಿಯ ಹಿರಿಮೆ-ಗರಿಮೆ ತಪ್ತ-ಕಾಂಚನ-ಲಿಪ್ತ ವಾಗಿ ದೇದೀಪ್ಯಮಾನವಾಗಿರುತ್ತದೆ. ಅರ್ಥ ದೊಡ್ಡದಲ್ಲ; ಭಾವನೆಯಲ್ಲಿಯ ವಿರಾಟ್‌ಸ್ವರೂಪ ದೊಡ್ಡದು. ಈ ವಿರಾಟ್‌ಸ್ವರೂಪೀ ಮಹೋನ್ನತ ಭಾವದ ಎದುರು ಶ್ಯಾಮರಾಯ ಕಿರುಕುಳ-ವಾಮನ-ಪಿನ್ನೀ. ದಾದಲ್ಯಾನ ಖರೀದಿ, ಅವನ ಆಕಾರ-ಆಕೃತಿಯಷ್ಟೇ ಕ್ಷುಲ್ಲಕಬಾಬೆಂದು ಅವನು ಭಾವಿಸಿದಂತಿತ್ತು.

ಬಸವಂತಿಯ ಜೀವದ ಧಾಕು ಹಾಕಿದರೆ ದಾದಲ್ಯಾ ಬೆದರಬಹುದೆಂದು ಅವನು ಅಜಮಾಯಿಸಿರಬೇಕು. ಪತ್ರನಾಶದ ವಿಷಯವನ್ನು ಕುರಿತು ಯು.ಎಸ್. ಶ್ಯಾಮರಾಯ ತಲೆ ಕೆಡಿಸಿಕೊಂಡಿರಬೇಕು. ಒಂದಲ್ಲ, ಹತ್ತು ರೀತಿಯಲ್ಲಿ ದಾದಲ್ಯಾ ನನ್ನು ಮರುಳುಗೊಳಿಸುವ, ಮಣಿಸುವ ವಿಚಾರ ಮಾಡಿರಬೇಕು. ಅವರು ನಿರ್ಧರಿಸಿ ಒಂದು ನಿರ್ಧಾರಕ್ಕೆ ಬಂದು, ದಾದಲ್ಯಾನ ಎದುರು ಚಾಂದೀಲಿಪ್ತ ತುಕಡಿ ಒಗೆಯ ಬಯಸಿರಬೇಕು. ದಾದಲ್ಯಾ ಅಮೇಶಖೋರನಂತೆ ಅದನ್ನು ಚಾಟಿಸಿದರೆ ತಮ್ಮ ಕೆಲಸವಾದಂತೆ; ಅವನು ಅದನ್ನು ಮೂಸದಿದ್ದರೆ, ಬಸವಂತಿಯ ಜೀವನದ ಧಾಕು ತೋರಿಸಿದರೆ ಸಾಕು, ತಾನೇ ಬಗ್ಗುತ್ತಾನೆ ಎಂಬ ನಿರ್ಣಯಕ್ಕೆ ಬಂದಿರಬೇಕು. ತನ್ನ ನಿರ್ಣಯವನ್ನು ಈ ದೂತರ ಮುಖಾಂತರ ಮುಟ್ಟಿಸಲು ಅವರನ್ನು ಅಟ್ಟಿರ ಬೇಕು.

ಶ್ಯಾಮರಾಯನ ನಿರೋಪದಲ್ಲಿಯ ಭಾವ, ಕ್ಷುಲ್ಲಕ-ಲಘುವಾದಷ್ಟೇ ತೀಕ್ಷ್ಣ-ಜಾಲೀಮಾಗಿತ್ತು. ನಂಜಿನ ನೀರಿನಲ್ಲಿ ಅದ್ದಿ ತೆಗೆದಂಥದಿದ್ದಿತು. ದಾದಲ್ಯಾನ ಜುಟ್ಟದ ಕಟ್ಟು ಬಿಚ್ಚಿ, ಶ್ಯಾಮರಾಯ ತನ್ನ ನಿರೋಪದ ಕಡೆಗೆ ಅಂಗುಲಿ-ನಿರ್ದೇಶ ಮಾಡಿದ್ದ. ದಾದಲ್ಯಾ ಜುಟ್ಟ ಅಲ್ಲಾಡಿಸಿ ತೋರಿಸುವ ಭೀತಿ ಮೂಡಿಸಿದ್ದ. ಶ್ಯಾಮ ರಾಯನಿಗೆ ಆ ಜುಟ್ಟದಲ್ಲಿ ಮಡಗಿದ ರುದ್ರಾನಲನ ದರ್ಶನ ಘಟಿಸಿರಲಿಲ್ಲ.

ಕಾಕಾ ಅವರಿಗೆ ಶರಣುಹೋಗಬೇಕು, ಇಲ್ಲ – ಬಸವಂತಿಯನ್ನು ತನಗೆ ಒಪ್ಪಿಸಬೇಕು.

ದಾದಲ್ಯಾ ಒಂದು ಕೈಯಲ್ಲಿ ಹಾಲಾಹಲ ಹಿಡಿದಿದ್ದ. ಇನ್ನೊಂದು ಕೈಯಲ್ಲಿ ಬತ್ತಲೆ ಕತ್ತಿ ಹಿಡಿದಿದ್ದ. ಶ್ಯಾಮರಾಯ ಹಾಲಾಹಲ ಸ್ವೀಕರಿಸದಿದ್ದರೆ, ಮುಂಡ, ದಂಡ ದಿಂದ ಬೇರೆಯಾಗಿ ಹಾರಿಹೋಗುತ್ತಿತ್ತು. ಹಾಲಾಹಲ ಕುಡಿದಿದ್ದರೆ ದೇಹ ಅಂಗಾತ

ವಾಗುತ್ತಿತ್ತು. ದಾದಲ್ಯಾನ ಉಗ್ರನಾರಸಿಂಹ, ಅಕರಾಳ-ವಿಕರಾಳ ಮೂರ್ತಿ, ಹೊಸ್ತಿಲ ಮೇಲೆ ವಿಕಟಾಟ್ಟಹಾಸ ಬೀರುತ್ತ ಮಂಡಿಸಿತ್ತು. ತನ್ನ ಮೃತ್ಯು ಸ್ಥಾನದ ಠಾಂವ-ಠಿಕಾಣವನ್ನು ರಾಕ್ಷಸ ತಾನೇ ವರದಾನವಾಗಿ ಬೇಡಿ ಪಡೆದಿದ್ದ. ದಾದಲ್ಯಾ ನಿರೋಪ ಕಳಿಸಿ ಶ್ಯಾಮರಾಯನನ್ನು ಆ ಮೃತ್ಯುಪೀಠಕ್ಕೆ ಆವ್ಹಾನಿಸಿದ್ದ.

ವಿಸ್ಫಲಿತ-ಶಿಖೆಯ ಚಾಣಕ್ಯ-ಸಂತಾನ ಇನ್ನೂ ಹಯಾತವಿದ್ದ ಸಮಾಧಾನ ಬಂತು ದಾದಲ್ಯಾನಿಗೆ. ಆ ತಳಿಯನ್ನು ಬಾಡಿಸದೆ ಜೀವಸ್ರಾವಕ-ಚೇತನೆಯಾಗಿ ಗುಪ್ತಗಂಗೆ ಜಲಧಾರೆ ಹಿಡಿದ ಕಲ್ಪನೆ ಬಂತು ದಾದಲ್ಯಾನಿಗೆ. ಪಂತಕುಟುಂಬದ ಯಜ್ಞಕುಂಡದ ಮುಂದೆ ಜಾತವೇದ ಮಂಡಿಸಿ ಪೌರೋಹಿತ್ಯ ನಡೆಸಿದ ರೀವಿ, ದಾದಲ್ಯಾನನ್ನು ಪುಲಕಿಸಿತು.

ಶ್ಯಾಮರಾಯ ಇನ್ನೂ ಮುಂಬೈಯಲ್ಲಿ ಇದ್ದ ಖಾತ್ರೀ ದಾದಲ್ಯಾನಿಗೆ ಆಯಿತು. ಅವನು, ಯು.ಎಸ್. ಇಬ್ಬರೂ ಕೂಡಿ, ಪತ್ರನಾಶದ ವಿಷಯವನ್ನು ಕುರಿತು ಚಿಂತಿಸಿರಬೇಕು. ಅನೇಕ ಆಂತರಿಕ ಕಾರಣಗಳ ಮೂಲಕ ದಾದಲ್ಯಾ ಆ ಪತ್ರದ ಗುಪಿತವನ್ನು ಸ್ಫೋಟಮಾಡನೆಂಬ ಖಾತ್ರೀ, ಶ್ಯಾಮರಾಯನಿಗೆ ಇದ್ದರೂ, ಆ ನಂಬಿಗೆ ಯು.ಎಸ್.ನಿಗೆ ಇರಲಿಕ್ಕಿಲ್ಲ. ಯು.ಎಸ್.ನಿಗೆ ತನ್ನ ಸ್ಥಾನದ, ಮಾನದ, ನವಕರಿಯ ಪರಿವೆ ಇದ್ದಂತೆ, ಶ್ಯಾಮರಾಯನಿಗೆ ಯಾತರ ಪರಿವೆಯೂ ಇರಲಿಲ್ಲ. ಎಲ್ಲ ಕಡೆಯಿಂದ ಅವನಿಗೆ ಅಪಯಶ, ನಿರಾಶೆ, ಮುಖಭಂಗ ಮುಪ್ಪುರಿಗೊಂಡು ಬಂದು ತೆಕ್ಕೆಮುಕ್ಕಿ ಬಿದ್ದವು. ಸುರೇಶನ ಆಶೆ ಅಳಿಯಿತು. ಬಸವಂತಿ ಕಾಣಾ ಕಾಣಾ ಕೈ ಬಿಟ್ಟಳು. ಅವನ ದ್ವೇಷಮೂಲರಾದ ಸಾಹೇಬರು ತಮ್ಮ ಕನ್ಯೆಯನ್ನು ಸುರೇಶ ನಿಗೆ ಧಾರೆಯೆರೆದು ಕೊಡಲು ಸಿದ್ಧರಾಗಿ ಕುಳಿತಿದ್ದರು. ಅವರನ್ನು ಪೇಚಿನಲ್ಲಿ ತಂದು ಗಾಣದಲ್ಲಿ ಅರೆಯಬೇಕೆಂದು ಮಾಡಿದ ಅವನ ಡಾವಿನ ಬಾಯಿಗೆ ದಾದಲ್ಯಾ ಗಂಟಲಗಣಿಯಾಗಿ ಕೂತುಬಿಟ್ಟ. ಅವನ ಮಾಲ್ಕೀ – ಜಹಾಗೀರೀ ಮಾಲಾದ ಬಸವಂತಿಗೇ ಮಾಗಣೆ ಹಾಕಿದ. ಶ್ಯಾಮರಾಯ ನರಕ-ಸಂಕಟವನ್ನು ಕಂಠಮಟ ಅನುಭವಿಸುತ್ತಿರಬೇಕು. ಆಪಾದಮಸ್ತಕ ಆ ಸಂಕಟದಿಂದ ಬೇಯುತ್ತಿರಬೇಕು.

ವಿಶ್ವಾಸ-ದಸ್ತಗೀರ್‍ಯಾ ಪುಣೆಗೆ ಹೋದದ್ದು ನೆಟ್ಟಗಾಯಿತು. ಶ್ಯಾಮರಾಯ ಪುಣೆಗೆ ಹೋಗುವದರೊಳಗಾಗಿ ಅವರು ಬಸವಂತಿಯನ್ನು ಕಂಡಿರುತ್ತಾರೆ. ಅವಳ ಸುರಕ್ಷಿತತೆಗಾಗಿ ಏನಾದರೂ ವ್ಯವಸ್ಥೆ ಮಾಡುತ್ತಾರೆ. ಅಲ್ಲಿಯ ಝಳಲ್ಲು ಬಿಟ್ಟಿತು.

o o o o

ರಾವಜೀಕಾಕಾ-ಸಾಹೇಬರ ಭೆಟ್ಟಿಯಾಯಿತು. ಕಾಕಾ ಅವರ ಪಾದಗಳನ್ನು ಸಾಹೇಬರು ಅರ್ಘ್ಯಪಾದ್ಯದಿಂದ ನೆನೆಸಿದರು. ಕಾಕಾನ ಅಭಯಹಸ್ತ ಸಾಹೇಬರ ಬೆನ್ನು ಸವರಿ ಅಂತಃಕರಣ-ವಾತ್ಸಲ್ಯದ ಮಂಗಲಸ್ನಾನ ಮಾಡಿಸಿತು. ಆ ಸ್ನಾಂತ ಶುದ್ಧ ಮೂರ್ತಿಗೆ ಸೋನಕ್ಕ ಬಾಗಿ ನಮಸ್ಕರಿಸಿದರು.

"ಸೋನಕ್ಕಾ, ತಂಗೀ, ನನ್ನಿಂದ ನಿನಗ ಭಾಳ ತ್ರಾಸ ಆತವಾ. ಒಗತಾಸ ಮುರೀತು. ನಂದೇನರs ತಪ್ಪ ಆಗಿದ್ದರ ಹೊಟ್ಟ್ಯಾಗ ಹಾಕೋ ತಾಯೀ. ಅಣ್ಣನ ನೂರ ತಪ್ಪಾ ತಂಗ್ಯಾಗಿ ಹೊಟ್ಟ್ಯಾಗ ಹಾಕೋ. ಏನೋ ಕಾಟ ಇತ್ತು ಇಬ್ಬರಿಗೂ. ಅದು ಮುಗೀತು ಇಂದs. ಅಣ್ಣಾ. ತಂಗೀ ಮನೀಗೆ ಬಂದಾ. ನಿನ್ನ ಹೆಸರಲೇ ದೀಪಾವಳೀ ಆಹೇರಿ ತಗದು ಇಡತಿದ್ದೆ. ಇಂದ ಬರೇ ಭಾವೂಬೀಜ ಸೋನಕ್ಕಾ ನಮ್ಮದು. ಅಣ್ಣಾ, ಅಕ್ಕಾ, ತಂಗೀ, ತಮ್ಮಾ ಯಾರಸೂ ನಾ ಪಡೀದೇ ಬಂದಿದ್ದೆ. ನಿನ್ನ ತಂಗಿ, ಶ್ಯಾಮರಾಯನ್ನ ತಮ್ಮಾ ಅಂತs ಭಾವಿಸಿದ್ದೆ. ಶ್ಯಾಮರಾಯರ ಕಣ್ಣಿಗೆ ನನ್ನ ಭಾವನಾ ಕಾಣಸಲಿಲ್ಲಾ. ನಿನಗ ಕಾಣಿಸಿತ್ತು. ಅದಕs ಅಣ್ಣಾ-ತಂಗೀ ಮತ್ತ ಕೂಡಿದೇವು. ಕಾಕಾಸಾಹೇಬ, ಇದು ಅಮೃತಕ್ಷಣಾ. ಈ ಅಮೃತಮೂರ್ತಿ ಬರಲಿಕ್ಕೆ ಇಷ್ಟು ಜೀವಾ ತೇಯಬೇಕಾತು, ಸೋನಕ್ಕಗ. ಗಂಧಕೊರಡಾ ತೇಯು ತೇಯಥಾಂಗ ಗಂಧಾನs ಬಿಡತದ. ಸೋನಕ್ಕಾ ದೊಡ್ಡ ಅಗ್ನಿದಿವ್ಯ ಮಾಡಿ ಗೆದ್ದಳು. ಎಲ್ಲಾ **ಅವನ** ಲೀಲಾ ಕಾಕಾಸಾಹೇಬ...ಆ ಲೀಲಾದ ಅರ್ಥ ನಮಗ ಆದಾಗ **ಅವನ** ಮಹಾತ್ಮ್ಯ, **ಅವನ** ಲೀಲಾಪ್ರಭಾವಾ ತಿಳೀತದ!"

ಸಾಹೇಬರು ಅಗಮ್ಯ-ಅಚಿಂತ್ಯ-ಅನುಪಮ-ಗುಣನ ಲೀಲಾ-ವಿಲಾಸ-ಕಥನ ರತರಾದರು. ಪಂತರ ಕುಟುಂಬವೇ ನೆರೆದು ಕಥನ-ಶ್ರೋತಾ ಆಗಿತ್ತು.

ವಿಶ್ವಾಸ ಮುಂಚಿತವಾಗಿ ಪುಣೆಗೆ ಬಂದದ್ದು ಬಹಳ ಒಳ್ಳೆಯದಾಯಿತು. ಮುಂಬೈಯ ಸಾದ್ಯಂತ ಹಕೀಕತ್ತನ್ನು ಅವನು ರಾವಜೀಕಾಕಾ-ಸೋನಕ್ಕ ಅವರಿಗೆ ವರದಿಮಾಡಿ, ನನ್ನ ದಾರಿಯನ್ನು ಸುಗಮವಾಗಿಸಿದ್ದ. ಅದರಿಂದ ವರದಿ ಮಾಡುವ, ಪರಿಚಯ ಮಾಡಿಸಿಕೊಡುವ ಯಾವ ಉಪದ್ವ್ಯಾಪವೂ ನನಗೆ ಹತ್ತಲಿಲ್ಲ. ಈ ಆಲಾ-ಬಾಲಾ-ಪ್ರಕರಣ ಮುಗಿದ ನಂತರ ಕಾಕಾ-ಸಾಹೇಬರು ಲೋಕಾಭಿರಾಮದ ಮಾತು-ಕತೆಗೆ ಕುಳಿತರು.

ನಾವು ಪುಣೆಯನ್ನು ಮುಟ್ಟಿದಾಗಲೇ ಮೂರು-ಮೂರೂವರೆ ಗಂಟೆಯಾಗಿತ್ತು. ಗಾಡಿ ಒಂದೂವರೆ ತಾಸು ತಡವಾಗಿ ಬಂದಿತ್ತು. ಮನೆಯನ್ನು ಮುಟ್ಟ

ಲಿಕ್ಕೆಂದರೆ ನಾಕರ ಸನಿಯಕ್ಕೆ ಬಂದಿತು. ನಂತರ ತಾಸರ್ಧ ತಾಸು ಸಾಹೇಬ ಬ್ರುವರು ತಮ್ಮ ಹರಿಕೀರ್ತನಕ್ಕೆ ತೆಗೆದುಕೊಂಡರು. ಐದರ ನಂತರ ಯಾರು ಮಲಗುತ್ತಾರೆ? ಸಾಹೇಬರಿಗಂತೂ ಕಾಕಾನಂಥ ಶ್ರೋತಾ ಸಿಕ್ಕರು. ಅವರಿಬ್ಬರಿಗೂ ಅಲ್ಲಿಯೇ ಚಹ ಕಳಿಸಿ, ನಾವು ಅಡುಗೆಯ ಮನೆಯಲ್ಲಿಯೇ ನಮ್ಮ ಚಹಾಪಾನ ಮುಗಿಸಿದೆವು. ವಿಶ್ವಾಸ-ನಾನು-ದಸ್ತಗೀರ್‍ಯಾ-ಸುರೇಶ, ಅಟ್ಟದ ಮೇಲೆ ಸುರೇಶನ ಕೋಣೆಗೆ ಸಿಗರೇಟು-ಸೇವನೆಗೆ ನಡೆದೆವು. ಗಾಳಿಯಾಡಲೆಂದು ಸುರೇಶ ಪಶ್ಚಿಮ ದಿಕ್ಕಿನ ಕಿಟಿಕಿ ತೆಗೆದ. ಬದಿಯ ಮನೆಯ ಅಟ್ಟದ ಮೇಲಿನ ಕೋಣೆಯಿಂದ ಪೇನಶನರ್ ಪಂತೋಜೀ – ಗೋಡಬೋಲೆ ಮಾಸ್ತರರು, ಉಚ್ಚ ಕಂಠದಲ್ಲಿ:

"ಸದಾ ಚಕ್ರವಾಕಾಸಿ ಮಾರ್ತಾಂಡ ಜೈಸಾ ।
ಉಡೀ ಘಾಲಿತೋ ಸಂಕಟೀ ಸ್ವಾಮಿ ತೈಸಾ ॥
ಹರೀಭಕ್ತಿಚಾ ಘಾವ ಘಾಲೀ ನಿಶಾಣೀ ।
ನುಪೇಕ್ಷೀ ಕದಾ ರಾಮದಾಸಾಭಿಮಾನೀ ॥




ಎಂದು ಮನಾಚೆ-ಶ್ಲೋಕ ಹೇಳುವದು ಕೇಳಿಬಂತು. ನಾನು-ವಿಶ್ಯಾ ಒಬ್ಬರ ಮುಖ ಒಬ್ಬರು ನೋಡಿದೆವು. ಶ್ಲೋಕದರ್ಥ ನಮಗಾದಂತೆ ಅನ್ಯರಿಗೆ ಆಗಿರಲಿಲ್ಲ.

ನಾವು ನಾಲ್ವರೂ ಕೋಣೆಯ ಮಧ್ಯದಲ್ಲಿಟ್ಟ ಗುಂಡು-ಟೀಪಾಯಿಯ ಸುತ್ತು ಕುಳಿತು ಸಿಗರೇಟ ಹಚ್ಚಿದೆವು. ಒಂದೆರಡು ಝುರುಕಿ ಎಳೆದು ನಾನು —

"ಸುರ್‍ಯಾ, ಬಸವಂತೀದೇನು ಬಾತಮೀ?"

ಎಂದು ಕೇಳಿದೆ.

"ದಾದಲ್ಯಾ, ಬಸವಂತಿ, ಈಗ ವಾಡೇದ 'ಬ್ಲ್ಯಾಕ್-ಹೋಲ್'ದಾಗ ಇರಬೇಕು. ದಾದಾ ಆಕಿನ್ನ ನಿನ್ನೇ ಪುಣೇ ಬಿಡಿಸಿದಾ."

ಸುರೇಶ ಹೇಳಿದ.

"ಸುರ್‍ಯಾ..."

ನಾನು.

"Yes ದಾದಲ್ಯಾ, she didn't heed our advice...ದಾದಾ, ನಡೀ ಅನ್ನೂತ್ಲೇ, ಸಟ್ಟನೆ ಹೋಗಿ ಮೋಟಾರದಾಗ ಕೂತಳು:

"ನನ್ನ ಝುಲ್ಲ ಬಿಡೂ ಸುರೇಶ. ಕಾಕಾ-ಸೋನಕ್ಕ ಅವರಿಗೆ ನನ್ನ ಕಾಳಜೀ ಮಾಡಬ್ಯಾಡರಿ ಅಂತs ತಿಳಸು. ವಿಶ್ವಾಸಗ ಏನೂ ಸುದ್ದೀ ತಿಳಸಬ್ಯಾಡಾ. ನಿನ್ನ ಮದಿವಿಗೆ ಬರತೀನಿ ಸುರೇಶ. ಕಾಳಜೀ ಮಾಡಬ್ಯಾಡಾ."

ಇಷ್ಟs ಅಂದಿದ್ಲು. ಖಾದರ್ ಯಾಕೋ ಮೋಟಾರ ಬಿಡೂ ಹಾಂಗ ಕಾಣಸಲಿಲ್ಲಾ. ದಾದಾ ಸಿಟ್ಟಲೇ ಅವನ್ನ ನುಗಿಸಿ ತಾನೇ ಗಾಡೀ ಸ್ಟಾರ್ಟ ಮಾಡಿದಾ. ಗಾಡೀ ಸ್ಟಾರ್ಟ ಆಗೂ ತನಕಾ ಬಸವಂತಿ ಹೊರಗ ಮಾರೀ ಹಾಕಿ ಕೈಮಾಡತಿದ್ದಳು. ನಿಮ್ಮ ಫೋನ್ ಬಂದ ಸುದ್ದೀ ಹೇಳಿದಾಗಿನಿಂದ ಬಸವಂತಿ ಏನ್ 'ಆ್ಯಕ್ಟಿವ್' ಆಗಿದ್ಲಂದೀ. ಮಿಂಚ ಹರದಾಡಿಧಾಂಗ ಆಗತಿತ್ತು. ಬಸವಂತಿ ನಗೂದನ್ನ ಹಿಂದಕ ನೋಡಿದ್ದೆ. ದಿನಾನೂ ನೋಡುತಿದ್ದೆ. ಆದರ ದಾದಲ್ಯಾ, ಈಗ ಆಕೀ ನಗೂವಾಗಿನ ರೀತೀನs ಬ್ಯಾರೇ ಇತ್ತು. ಮೂರ-ನಾಕ ಸಾರೆ ಕೇಳಿದೆ. ಅದೇ ವಿಚಿತ್ರ ನಗೀಲೇನs ಉತ್ತರಾ ಕೊಟ್ಟಳು. ಮೊನ್ನೆ ಮುಂಜಾನೆದ್ದ ಕೂಡಲೇ ನಮ್ಮ ಬಂಗಲೇಕ ಬಂದಿದ್ದಳು. ಕಾಕಾ-ತಾಯೀಗೆ ಭೆಟ್ಟಿ ಆದಳು:

"ಊರ ಕಡೇ ಹೋಗೂ ಪ್ರಸಂಗ ಬಂದೀತು. ಭೆಟ್ಟಿನೂ ಆಗಲಿಕ್ಕಿಲ್ಲಾ. ಅದಕs ಪಾದಧೂಳೀ ಒಯ್ಯಲಿಕ್ಕಿ ಬಂದೆ ಕಾಕಾ" ಅಂತs ಕಾಕಾ ಅವರಿಗೆ ಹೇಳಿದಳು. ಯಾರಿಗೂ ಏನೂ ಅದರ ಅರ್ಥ ಆಗಲಿಲ್ಲಾ. ನಾ ಎರಡ ದಿನಾ ಆಕೀ ಬೆನ್ನ ಕಾಯ್ದೆ. ದಾದಾ ಮುಂಬೈಯಿಂದ ಬಂದಾಗ ನಾ ಅಲ್ಲೇ ಇದ್ದೆ. ಭಾಳ ಸಿಟ್ಟಿ ಮಾಡಿಕೊಂಡಾ. ಸಂತಾಪಿಸಿ ಬಂದಾ. ಅಂವಾ ಏನ ಮಾಡಿದರೂ ಬ್ರ ಅನಬ್ಯಾಡಂತ ಬಸವಂತಿ ಆಣೀ ಹಾಕಿದ್ಲು. ತನ್ನ ಮನ್ಯಾಗ ಕಾಲ ಇಡೂ ಜರೂರೀ ಇಲ್ಲಾ... ನಿಂತ ಕಾಲಮ್ಯಾಲ ಹೊರಬೀಳು ಅಂತs ದಾದಾ ಪರ್ಮಾಸಿದಾ. ಇಕೀ, ದಾದಲ್ಯಾ ಇಬ್ಬರೂ ದಗಾ ಕೊಟ್ಟರು. ಇಬ್ಬರಿಗೂ ಏಳ ಕೆರೀ ನೀರ ಕುಡಸರಿದ್ದರ ನಾ ಕಾಕಾನ ಉತ್ತರದಂವಾ ಅಲ್ಲಾ, ಹೇಳಿ ಇಡೂ ನಿನ್ನ ದೋಸ್ತಗ; ಅಂತs ನಿನಗ ಸಂದೇಶ ಮುಟ್ಟಸಲಿಕ್ಕೆ ಹೇಳ್ಯಾನ. ದಾದಾ, ಇದನ್ನ ರೌಸಿನಿಂದ ಹೇಳೂವಾಗ, ದಾದಲ್ಯಾ, ಬಸವಂತೀ ಏನ ಭಯಂಕರ ಖೊಕ್ಕನೆ ನಕ್ಕಳಂದೀ! ನಂದs ಜೀವಾ ಝುಲ್ಲ ಅಂತ್ಯೂ. ಅಗದೀ ದಾದಾನ್ನ ನಿವಾಳಿಸಿ ಒಗಧಾಂಗ ಮಾಡಿತು ಆಕೀ ನಗೀ. ಬಸವಂತಿ ಇಷ್ಟ ಭಯಂಕರ ನಗೀ ನಕ್ಕಾಳೂ ಅನೂ ಕಲ್ಪನಾ ಇದ್ದಿದ್ದಿಲ್ಲ ನನಗ...ಇನಾ ಕಿಂವ್ಯಾಗ ಅದರ ನಾದಾ ಠಣಾ-ಠಣಾ ಹೊಡೀತದ. ನಿನ್ನ ಮಾತ ಬಂದಾಗ ನಗಬೇಕಾದರ, ನಿನಗ ಆ ನಗೀ ಹಿಂದಿನ ಡಾವು ಠಾಂವಿಕಿರಬೇಕು

ದಾದಲ್ಯಾ. ವಿಶ್ಯಾಗೂ ಅದರ ಅರ್ಥ ಆಗವಲ್ಲದು. ಬಸವಂತೀ-ದಾದಲ್ಯಾ ಏನರs 'ಪ್ಲ್ಯಾನ್' ಮಾಡಿರಬೇಕು ಅಂತs ದಸ್ತಗೀರ್ಯಾ-ವಿಶ್ಯಾ ಅಂತಾರ. ನಿನಗ ಅದರ ಶಾಂಖಿಕಿರಬೇಕು. ನಾಕ ದಿನದ ಹಿಂದ, ನೀ ಇಲ್ಲಿಗೆ ಬಂದಾಗ, ಇಬ್ಬರದೂ ಅಖಂಡ ರಾತ್ರೀ ಮಾತ-ಕತೀ ಆದೂ ಅಂತs ಬಸವಂತಿ ಹೇಳಿದ್ದಳು... "

ಅವನ ಮಾತನ್ನು ಅರ್ಧಕ್ಕೇ ನಿಲ್ಲಿಸುತ್ತ —

"ರಾಚಪ್ಪಾದೂ ಬಸವಂತೀದೂ ಭೆಟ್ಟಿ ಆಗಿತ್ತೇನ ಸುರ್ಯಾ ?"
ಎಂದು ಕೇಳಿದೆ.

"ನಿನ್ನ ಮುಂಬೈಗೆ ಕಳಸಲಿಕ್ಕೆ ಸ್ಟೇಶನಕ್ಕ ಬಂದಿದ್ದೇವಲಾ. ಅಂದೇ ಮುಂಜಾನೆ ಒಂಭತ್ತರ ಸುಮಾರಕ್ಕ ರಾಚಪ್ಪಾ ಬಸವಂತೀ ಕಡೆ ಬಂದಿದ್ದಾ. ಪಡಸಾಲ್ಯಾಗ ಇಬ್ಬರದೂ ಏನೋ ಗುಜುಗುಜು ನಡೀತು. ಮುಂಬೈಯಾಗ ಏನರs ಭಾನಗಡೀ ಆದರ, ದಾದಾ ನೆಟ್ಟಗs ಊರಿಗೇ ಬರಾಂವಾ. ಅಲ್ಲೆ ಇಲ್ಲದ ಧಾಂದಲೇ ಹಾಕೋತ ಇರಾಂವಾ. ನಾ ಊರಾಗಿರೂದು ಠೀಕ ಕಾಕಾ ಅಂತs, ಕಾಕಾ ಅವರ ನಿರೋಪ ತಗೊಂಡು, ಅಂದೇ ಮಧ್ಯಾಹ್ನ ಗಾಡಿಗೆ ಊರಿಗೆ ಹೋದಾ. ಅವನೂ ಯಾಕ ಇಷ್ಟ ಗಡಿಬಿಡಿಯಿಂದ ಊರಿಗೆ ಹೋದಾ ಅನೂದು ತಿಳೀಲಿಲ್ಲಾ. ಕಾಕಾ ಇಡೀ ದಿನಾ ಸಚಿಂತ ಇದ್ದರು. ಹಿಂದ ಕೈ ಕಟಿಗೊಂಡು ಬಗೀಚ್ಯಾದಾಗ ಬರೇ ಫೇರೀ ಹಾಕತಿದ್ದರು. "ಇಂದ ಏಕಾದಶೀ ಸೋನಾ, ನಾ ನಿಶ್ಚಕ್ರ ನಿರಾಹಾರ ಮಾಡತೀನಿ" ಅಂತs ತಾಯೀಗೆ ಹೇಳಿದರು. ತೀರ್ಥದ ವಿನಾ ಬಾಯಿಗೆ ನೀರ ಹಾಕಲಿಲ್ಲಾ. ಗಿರಿಜಾ, ರಮಾಕಕ್ಕಿ ಯಾರಿಗೂ ಅವರ್ನ ಮಾತಾಡಸೂ ಧೈರ್ಯಾ ಆಗಲಿಲ್ಲಾ. ಇಂದ ಯಾಕೋ ಶಾಂತ ಇದ್ದಾರ. ದಾದಲ್ಯಾ, ಇಷ್ಟ ದಿನಾ ಈ ಕಂತ್ರಾಟಾ ನಮ್ಮೊಳಗs ಸುತ್ತಾಡತಿತ್ತು. ಇಂದs ನಮಗೇ ತಿಳೀಧಾಂಗ ಅದರ ದಿಶಾ ಬದ್ಲ ಆಗೇದ. ಬಸವಂತಿ 'ಸೆಂಟ್ರಿಫ್ಯೂಗಲ್ ಫೋರ್ಸ್' ಆಗ್ಯಾಳ ಈ ಗುಂಭಕ್ಕ. ವಿಶ್ಯಾನೂ ಅಗದೀ. ಮೌನಧಾರಣ ಮಾಡ್ಯಾನ ಈ ಸುದ್ದೀ ಕೇಳಿದಾಗಿನಿಂದ."
ಸುರೇಶ.

"ವಿಶ್ಯಾ, ಹಿಂದಕ ನಿನಗ, ದಾದಾಗ ಚಕಮಕೀ ಹಾರಿದ ಸುದ್ದೀ ಹೇಳಿದಾಗ, ಒಂದ ಮಾತ ಅಂದಿದ್ದಿ "ಸ್ಪಷ್ಟಮಗ್ರೇ ಭವಿಷ್ಯತಿ" ಅಂತs. ಆಗ ನಿನಗ ಬಸವಂತೀ ಕಲ್ಪನಾ ಬಂದಿರೂ ಶಕ್ಯತಾನs ಇರಲಿಲ್ಲಾ. ಅದು ಯಾರಿಗೂ ಇರಲಿಲ್ಲ ಅನ್ನು ರಾವಜೀಕಾಕಾ-ರಾಚಪ್ಪಾ-ನೀನು, ದಾದಾನ್ನ ಎದರಸ್ತೀರಿ ಅನೂ ಠಳಕ ಕಲ್ಪನಾ

ನನಗೂ ಇತ್ತು. ಆದರ ಇಂದ ಮಾತ್ರ ಬಸವಂತಿನ್ನ ದಾದಾ ಎದರಿಸಿ ಬದಕಬೇಕಾದ ಪ್ರಸಂಗ ಬಂತು. ದಾದಾನ 'ಪ್ಲಾ:ಟ್'ಕ್ಕ ನಿನ್ನೇ ಸ್ಪಷ್ಟ ವಾಚ್ಯತಾ ಮೂಡಿತ್ತು. ಬಸಗೋಂಡಾ ರಾಯಭಾರ ಮಾಡಿ ಆಗಾವ ಸೂಚನಾ ಕೊಟ್ಟೇ ಇದ್ದಾ."

ಬಸಗೋಂಡ-ನಬೀಸಾಬರ ಭೆಟ್ಟಿಯ ವಿಷಯ, ಆದ ಮಾತು-ಕತೆಯ ವಿವರ ತಿಳಿಸಿದೆ. ತಾನು ಇನ್ನೂ ಮುಂಬೈಯಲ್ಲೇ ಇರುವ ಭಾಸ ನನಗೆ ಬರುವಂತೆ ಮಾಡಿ, ಬಸಗೋಂಡ-ನಬೀಸಾಬರನ್ನು ಹಿಂದೆ ಬಿಟ್ಟು, ತಾನು ಪುಣೆಗೆ ಧಾವಿಸಿರ ಬೇಕಾದರೆ ಅವನದೂ ಏನಾದರೂ ಡಾವು ಇರಬೇಕೆಂಬ ನನ್ನ ಸಂದೇಹವನ್ನು ಅವರೆಲ್ಲರಿಗೆ ತಿಳಿಸಿದೆ.

ಸಾಹೇಬರ ವಿಚಾರಣೆಯು ಮುಗಿಯುವ ವರೆಗೆ, ಶ್ಯಾಮರಾಯ ಮುಂಬೈ ಬಿಡಲಾರನೆಂದು ಭಾವಿಸಿದ ನನ್ನ ಕಲ್ಪನೆಯು ಕಳಸವೇ ಕಳಚಿ ಬಿದ್ದಿತ್ತು. ಬರಿಯ ವಯಸ್ಸಿನ ಮಾನದಿಂದಲ್ಲದೆ, ಬುದ್ಧಿಯ ಚಾಕಚಕ್ಯತೆಯ ಮಾನದಿಂದ ಕೂಡ ಶ್ಯಾಮರಾಯ ನಮಗಿಂತ ಚಲಾಕಾಗಿದ್ದ. ಅನುಮಾನದಿಂದ ತಟ್ಟನೆ ಸಿದ್ಧಾಂತಕ್ಕೆ ನೆಗೆಯುವ ಈಗಿನ ಅವನ ಪಾರಜ-ಬುದ್ಧಿ-ಸಾಮರ್ಥ್ಯ, ಅವರ್ಣನೀಯವಾಗಿತ್ತು. ಸಾಹೇಬರನ್ನು ಪಾರುಗೆಡವಿದ ಖುಷಿಯಲ್ಲಿ ಬೇಭಾನರಾಗಿ ನಾವು ಬಸವಂತಿ ಯನ್ನು ಒಂದರೆಕ್ಷಣ ನಿರ್ಲಕ್ಷ್ಯಮಾಡುತ್ತೇವೆ – ಅಷ್ಟೇ ಅವಧಿಯಲ್ಲಿ ಅವಳನ್ನು ಹಾರಿಸಿಕೊಂಡು ಊರಿಗೆ ಒಯ್ದರೆ ಮಾತ್ರ ಅವಳು ತನ್ನ ಕೈಗೆ ಹತ್ತುತ್ತಾಳೆ. ಇಲ್ಲದಿದ್ದರೆ ಅವಳ ಆಶೆಗೆ ನೀರು ಬಿಟ್ಟಂತೆಯೇ ಎಂದು ಗಣಿಸಿಸಿ, ಅವನು ಪುಣೆಗೆ ಧಾವಿಸಿರಬೇಕು. ಬಸವಂತಿ-ಶ್ಯಾಮರಾಯರ ಆಕಸ್ಮಿಕ, ಅಚಾನಕ ನಿಷ್ಕ್ರಮಣ ದಿಂದ ನಮಗೆ ದಿಕ್ಕುತಪ್ಪಿದಂತಾಗಬೇಕು. ಅವಳ ಹಿಂಸೆಗೆ ತಾನು ನಿರಂಬಳನಾಗ ಬೇಕು ಎಂದು ಅವನು ಡಾವು ಹಾಕಿರುವಂತಿತ್ತು. ಬಸವಂತಿಯನ್ನು ಹಿಡಿದು ಅಲ್ಲಾಡಿಸುವದಷ್ಟೇ ಪುರಸೊತ್ತು, ಕಾಕಾ, ಸೋನಕ್ಕ, ವಿಶ್ವಾಸ, ದಾದಲ್ಯಾ ಎಲ್ಲಾ ಪಟಪಟನೆ ಬೀಳುತ್ತಿದ್ದರು. ಬಿದ್ದವರನ್ನು ಮೆಟ್ಟಿ ಮುಟಿಗೆ ಮಾಡಲಿಕ್ಕೆ ಅವನಿಗೆ ವೇಳೆ ಹಿಡಿಯುತ್ತಿರಲಿಲ್ಲ.

ನಾವೂ ಬಸವಂತಿಯ ಬಗ್ಗೆ ದಕ್ಷತೆ ವಹಿಸದಿರಲಿಕ್ಕಿಲ್ಲವೆಂಬ ಬಗ್ಗೆಯೂ ಅವನು ಯೋಚಿಸಿರಬೇಕು. ಆ ದಕ್ಷತೆಯ ವ್ಯೂಹವನ್ನು ಸಡಲಿಸಲು ಅವನು ನನ್ನನ್ನು ಮುಂಬೈಯಲ್ಲಿಯೇ ಒಂದೆರಡು ದಿನ ನಿಲ್ಲುವಂತೆ ಮಾಡಬಯಸಿರ ಬೇಕು. ಬಸಗೋಂಡ-ನಬೀಸಾಬರನ್ನು ರದಬದಲಿಗೆ ಬಿಟ್ಟು, ನನ್ನ ಲಕ್ಷ್ಯ ಅನ್ಯತ್ರ

ಕೇಂದ್ರೀಕೃತವಾಗುವಂತೆ ಹಂಚಿಕೆ ಹಾಕಿರಬೇಕು. ಕಾರಣ ನನಗೆ ಹಗಲು-ರಾತ್ರಿ ನಿದ್ದೆ-ನೀರಡಿಕೆಯ ಪರಿವೆ ಇಲ್ಲದೆ ಪಾರಜದಂತೆ ಎಲ್ಲಿಂದರೆ ಅಲ್ಲಿ ಹರಿದಾಡುವ ಸಾಮರ್ಥ್ಯವಿದ್ದ ಕಲ್ಪನೆ ಅವನಿಗಿತ್ತು. ನಾನು ಪುಣೆಗೆ ಧಾವಿಸಿ ಬಸವಂತಿಯನ್ನು ಜಾಗ ಬಿಡಿಸುವ ಕ್ಲ್ಯಪ್ತ ಮಾಡಬಹುದೆಂದು ಅವನು ಧೇನಿಸಿದ್ದರೆ ಅದೇನು ಅಸಂಭಾವ್ಯ ಭಾವನೆಯಾಗಿರಲಿಲ್ಲ. ಮೊನ್ನೆ ನಾನು ಪುಣೆಗೆ ಪ್ರಯಾಣಿಸಿ ಬಂದದ್ದೇ ಅವನಿಗೆ ಚಿಟುಕುಮುಳ್ಳಾಗಿತ್ತು. ನನ್ನನ್ನು ಎಲ್ಲಿಯಾದರೂ ಹೇಗಾದರೂ ತೊಡ ಕಿಸಬೇಕೆಂದು ಬಗೆದು, ಆ ಕಾಯಕಕ್ಕೆ ತನ್ನ ಎಡಗೈ-ಬಲಗೈಯಾದ ಬಸಗೋಂಡ-ನಬೀಸಾಬರನ್ನು ಬಿಟ್ಟಿದ್ದ.

ಶ್ಯಾಮರಾಯ ಲೆಕ್ಕ ಬಿಡಿಸಿ ಸರಿಯಾದ ಉತ್ತರ ತೆಗೆದಿಟ್ಟ.

ಇಷ್ಟು ಹೊತ್ತಿನ ವರೆಗೆ ವಿಶ್ವಾಸ ಏನು ಧೇನಿಸಿದನೋ ಏನೋ, ಆದರೆ ನಿಶ್ಚಿತ ವಿಚಾರಕ್ಕೆ ಬಂದಂತೆ —

"ದಸ್ತಗೀರ್‍ಯಾ, ಹ್ಯಾಂಗೂ ಗಾಡೀ ನಮ್ಮ ತಾಬೇದಾಗ ಅದ. ಹತ್ತರೊಳಗ ನಾವು ಮುಂಬೈಗೆ ಹೋಗಬೇಕಂತ ಕಾಕಾಗ ಹೇಳಿ ಈ ಜಾಗಾ ಬಿಡೂಣು. ಥೇಟ ಊರಿಗೆ ಹೋಗೂಣು. ಬಸವಂತಿನ್ನ ಕರಕೊಂಡ ಬರೂದು ನನಗ ಹತ್ತಿತು." ಹೇಳಿದ.

"ವಿಶ್ಯಾ, ಇದು ಠೀಕ ಕಾಣಸೂದಿಲ್ಲಾ. ಸಾಹೇಬರು ದೇವರs ಅಂತ ಇದೇ ಬಂದಾರ. ಶಕೂನ ದಶಿಂದ ಮಾತ-ಕಥೀ ಸುರೂ ಆಗೂವು. ನೀ ಇರದಿದ್ದರ ಯಾರಿಗೂ ಮನಸ್ಸ ಬಿಚ್ಚಿ ಮಾತಾಡಲಿಕ್ಕೆ ಆಗೂದಿಲ್ಲಾ. ಖರೇ ಅಂದರ ನಂದೇನು ಕೆಲಸ ಇಲ್ಲ ಇಲ್ಲೆ. ದಸ್ತಗೀರ್‍ಯಾನೂ ರಿಕಾಮಿ ಇದ್ದಾನ. ಅವನ ತಂಗೀ ಮದಿವಿ ಭಂಪು ಹ್ಯಾಂಗೂ ಸಾಹೇಬರ ಮುಂದ ಹೊಡದೀನಿ. ಅದರ ದಶಿಂದನs ಅಂವಗ ಸಾಂಗಲೀ ತನಕಾ ಹೋಗಬೇಕಾಗೇದಂತ ಹೇಳತೀನಿ. ಅನಾಯಾಸಾ ಗಾಡೀ ಅದs, ನಾನೂ ಸಾಂಗಲೀ ತನಕಾ ಹೋಗಿ ಬರತೀನಿ ಅಂತs ಕಾಕಾ ಅವರಿಗೆ ಹೇಳತೀನಿ. ಯಾರಿಗೂ ಸಂಶ್ಯಾ ಬರೂದಿಲ್ಲಾ. ಹಾಂಗೇ ಊರಿಗೆ ಹೋಗಿಬಿಡತೀನಿ. ದಸ್ತ ಗೀರ್‍ಯಾ, ನಾನು, ರಾಚಪ್ಪಾ ಮೂರೂ ಮಂದಿ ಕೂಡಿ, ಬಸವಂತಿನ್ನ ಕಡೀಕೆ ಮಾಡಿ ಕೊಂಡು ಬರತೇವು."

ನಾನು.

"ದಾದಲ್ಯಾ, ನನಗ ಒಂದು ಉತ್ತಮ ದಾರಿ ಸಿಕ್ಕಿತು. ಇದ್ನೋಡು, ಇಂದ

ಹ್ಯಾಂಗೂ ಲಕ್ಷ್ಮಣರಾವಜೀ ಅವರದು ತಿಥಿ. ಕಾಕಾ ಸಾಖರಪುಡಾದ ಮಾತು ಇಂದ ತಗಿಯೂ ಶಕ್ಯತಾನs ಇಲ್ಲಾ. ಸಾಹೇಬರಿಗೂ ಇದರ ದಶಿಂದ ಹೇಳಿ ಇಡೂ. ದಸ್ತಗೀರ್ಯಾಗ ಸಾಂಗಲೀಗೆ ಹೋಗೂದದ ಅಂತs ಕಾರಣಾ ಹೇಳೂಣು. ನಾನೂ ಹೋಗಿ ನಾಳೆ ಮುಂಜಾನೆ ಅನೂದರಾಗ ತಿರಗಿ ಬರತೀನಿ ಅಂದರ, ಅದರ ಅರ್ಥಾ ಎಲ್ಲಾರಿಗೂ ಆಗತದ. ಕಾಕಾ ನಕ್ಕೋತ ಹೇಳತಾರ: "ಸೋನಾ, ವಿಶ್ಯಾ ಕೈಬಿಟ್ಟಾ. ವಸೂನ ಕಡೇ ಹ್ಯಾಂಗ ಧಾವತೀ ಸುರೂ ಆತ ನೋಡೂ"ಅಂತs. ಸೋಳಾ ಆಣೇ ಪಟಾಸ್ತದ ಈ ಮಾತಾ. ನಾಳೆ ಹತ್ತ ಅನೂದರಾಗ, ಬಸವಂತಿ, ವಸೂ, ಪಂತಮಾಮಾ, ಬನೂಮಾಮೀ ಸಾಖರಪುಡಾಕ್ಕ ಹಜ್ಜರ ಅಂತs ತಿಳೀ. 'It's finally, decided' ದಸ್ತಗೀರ್ಯಾ, ನಿನ್ನ ಪಿಸ್ತೂಲ ಅದs ಇಲ್ಲೋ? ತಗೊಂಡಿರೂ ಜೋಡಿಗೆ. ಎಂಟ ಅನೂದರಾಗ ಜಾಗಾ ಬಿಡೂಣು. ತುಳಸೀ ಕಡೇ ಹೋಗಿ ಹೊರಡೂದಂದರ ಅಲ್ಲಿಗೇ ಬರತದ"

ನಮ್ಮ ಉತ್ತರದ ದಾರಿ ಕಾಯದೆ ವಿಶ್ಯಾ ದಡದಡ ಮಹಡಿ ಇಳಿದು ಕೆಳಗೆ ಹೋದ.

"ಸುರ್ಯಾ, ನಾ ಇದ್ದೀನಿ ವಿಶ್ಯಾನ ಜೋಡಿ. ನಿರ್ಧಾಸ್ತ ಇರ್ರಿ ನೀವು. ಬಸವಂತಿ ಬರಲಿಕ್ಕೆ ಕಬೂಲಾಗದಿದ್ದರ ನಾನೇ ಆಕೀ ಜೋಡೀ ನಿಂದರತೀನಿ. ವಿಶ್ಯಾನ್ನ ಕಳಸ್ತೀನಿ, ಇಕಡೆ. ವಿಶ್ಯಾ ಹೋಗಿ ಕರದನಂದರ ಬಸವಂತಿ ಬರದೇ ಇರೂದಿಲ್ಲಾ. ಆ ಖಾತ್ರೀ ಅದs ನನಗ."
ದಸ್ತಗೀರ್ಯಾ.

ಭಾವ-ಮೈದುನರ ಮೇಲೆ ಪೋಟಗೀ-ದಾವೇ ಮಾಡಿ ಕೋರ್ಟಿಗೆ ಅಲೆ ದಾಡುವ ಅಗತಿಕ ವಿಧವೆಯಂತೆ ನನ್ನ ಪರಿಸ್ಥಿತಿಯಾಯಿತು. ಊರಿಗೆ ಹೋಗಿ ಬಸವಂತಿಯನ್ನು ಕಾಣುವ ಸುಯೋಗ ತಪ್ಪಿತು. ಶ್ಯಾಮರಾಯನನ್ನು ಗಾತಾಯಿ ಸುವ ಆಶೆ ದೂರವಾಯಿತು. ಮತ್ತೆ ಸಾಹೇಬರನ್ನು ಕಟ್ಟಿಕೊಂಡು ನಾನು ತೌಡು ಕುಟ್ಟುವ ತಾಪತ್ರಯ ತಪ್ಪಲಿಲ್ಲ.

ನಾಕು ದಿನದ ಹಿಂದೆ ಬಸವಂತಿ ಆಡಿದ ಎಲ್ಲ ಮಾತುಗಳನ್ನೂ ಜ್ಞಾಪಿಸಿ ಕೊಂಡೆ. ನನ್ನ-ಅವಳ ಸಂಬಂಧ ಜೋಡಿಸಿ ಶ್ಯಾಮರಾಯ ಹೀನ ಮಾತುಗಳನ್ನು ಆಡಿದ್ದ. ನನ್ನ ನೆತ್ತರಿಗೆ ಆಸುರಿಸಿದ್ದ. ಪತ್ರದ ಗುಪಿತ ಸ್ಫೋಟವಾದರೆ, ಬಸವಂತಿ ನಾನು ಇಬ್ಬರೇ ಅವನ ಕ್ರೋಧಕ್ಕೆ ಪ್ರಥಮ ಬಲಿ ಬೀಳಬೇಕಾದವರು – ಇದೆಲ್ಲ

ವನ್ನು ಅವಳು ಹೇಳಿದ್ದರೂ – ತಾನೇ ಮತ್ತೆ ಅಂದಿದ್ದಳು: "ನನ್ನ ಝುಲ್ಲ ಬಿಡೂ ದಾದಲ್ಯಾ. ನನ್ನ ಡಾವ್ ನಿನ್ನೇ ತಯಾರಾಗೈತಿ" ಎಂದು. ಅವಳ ಡಾವಿನ ವಿವರ ವನ್ನು ನಾನು ಕೇಳಲಿಲ್ಲ. ಕೇಳಿದ್ದರೂ ಅವಳು ಉತ್ತರಿಸದೆ ನಗೆಯ ಮೇಲೆ ಹಾಕಿ ಬಿಡುತ್ತಿದ್ದಳು. "ನನ್ನ ಕೈ ಸೋತರ, ನೀ ನೆರವಿಗೆ ಬಾ ದಾದಲ್ಯಾ" ಎಂದು ಹೇಳಿ ದ್ದಳು. ಬಸವಂತಿ ತನ್ನ ನೆರವಿಗೆ ಕರೆದದ್ದು ದಾದಲ್ಯಾನನ್ನು; ವಿಶ್ವಾಸನನ್ನಲ್ಲ, ದಸ್ತಗೀರ್‍ಯಾನನ್ನಲ್ಲ; ತನ್ನ ದಾದಲ್ಯಾನನ್ನು. ತನಗೆ ಜೀವ ಮುಡಿಪಿಟ್ಟ ದಾದಲ್ಯಾ ನನ್ನು. ಬಸವಂತಿ ಕೈಸೋತು ಒರಗಿದಾಗ – ಭೂಪತಿತವಾದಾಗ, ತನ್ನ ತಲೆಯ ಆಸರಕ್ಕೆ ದಾದಲ್ಯಾನ ತೊಡೆಯನ್ನು ಬೇಡಿದ್ದಳು. ಅವನ ಕೈಯ ನೀರು ಬಯ ಸಿದ್ದಳು. ಒಂದೇ ಚಿತೆಯಲ್ಲಿ ದಾದಲ್ಯಾನ ಕೂಡ ಒರಗಬಯಸಿದ್ದಳು. ಸುರ್‍ಯಾ ಹೇಳಿದ: 'ಬಸವಂತಿ ಮಹಾ ಭಯಂಕರವಾಗಿ ನಕ್ಕಳು. ದಾದಲ್ಯಾನ ಹೆಸರನ್ನು ಶ್ಯಾಮರಾಯ ಉಚ್ಚರಿಸಿದಾಗ ಮಹಾ ಭೀಕರವಾಗಿ ನಕ್ಕಳೆ'ಂದು.

"ದಾದಲ್ಯಾ, ನಿನಗ ಕೇಳಸ್ಹಾಂಗ ನಕ್ಕೀನಿ. ತಡಾಮಾಡಬ್ಯಾಡಾ. ಗಡಾನs ಬಾ."

ಎಂದು, ನನಗೆ ಕೇಳಿಸಬೇಕೆಂದು ನಕ್ಕಿರಬೇಕು. ಅವಳು ನಕ್ಕದ್ದನ್ನು ಕೇಳಿಯೂ ನಾನು ಹೋಗದಿದ್ದರೆ, ವಿಶ್ಯಾ-ದಸ್ತಗೀರ್‍ಯಾ ಇಬ್ಬರೇ ಹೋಗಿ ಅವಳೆದುರು ನಿಂತರೆ ...

"ದಾದಲ್ಯಾ ಬರಲಿಲ್ಲೇನು ?"

ಎಂದು ಖಚಿತವಾಗಿ ಬಸವಂತಿ ಕೇಳುತ್ತಾಳೆ. ಅವಳ ಕೇಳಿಕೆಯಲ್ಲಿಯ ಆರ್ತತೆ ವಿಶ್ಯಾ-ದಸ್ತಗೀರ್‍ಯಾ ಅವರಿಗೆ ತಿಳಿಯುವದಿಲ್ಲ.

"ದಾದಲ್ಯಾಗ ನಾವೇ ಬರಬ್ಯಾಡಂದೇವು"

ಎಂದು ಇವರು ಹೇಳಿದಾಗ ಬಸವಂತಿ, ಉಪಹಾಸ-ಗರ್ಭ-ಲಘು-ಹಾಸ್ಯ ಬೀರಿ, ದಾದಲ್ಯಾನ ಕ್ಷುಲ್ಲಕತ್ವದ ಬೆಲೆಕಟ್ಟುತ್ತಾಳೆ. ಶ್ಯಾಮರಾಯ ನನ್ನ ಜುಟ್ಟ ಹಿಡಿದು ಝಾಡಿಸುವ ಕಾರಣ ಬೀಳುವದಿಲ್ಲ. ಆಗತ್ಯ ಉಳಿಯುವದಿಲ್ಲ. ಬಸವಂತಿಯ ಉಪಹಾಸ-ಗರ್ಭ-ನಗೆಯಿಂದ ದಾದಲ್ಯಾ ಮೃತ್ಯು-ಮುಖಿಯಾಗುತ್ತಾನೆ. ಬಸ ವಂತಿ ನಿರಂತರವಾಗಿ ಆಗಲುತ್ತಾಳೆ. ದಾದಲ್ಯಾ, ಅಖಂಡ ಅವಮಾನ, ಅನಂತ ಉಪಹಾಸದ ವಸ್ತುವಾಗಿ, ಅವನತಮುಖನಾಗಿ ಸಾಹೇಬರೆದುರು ತೌಡು ಕುಟ್ಟುವ ಕಾಯಕಕ್ಕೆ ತನ್ನನ್ನು ಹೂಣೆಸಿಕೊಳ್ಳುತ್ತಾನೆ. ಗಾಣದೆತ್ತಿನಂತೆ ಸಾಹೇಬರ

ಪ್ರದಕ್ಷಿಣಾರತನಾಗುತ್ತಾನೆ. ತನ್ನ ಮಾನಸದ ರತ್ನದೀಪವನ್ನು ಬಸವಂತಿ ಹೃದಯದಿಂದ ಒರಿದು ಫಕ್ಕನೆ ಊದಿ ಆರಿಸಿಬಿಡುತ್ತಾಳೆ. ದಾದಲ್ಯಾ ಕತ್ತಲೆಯ ಮಹಾಕೂಪದಲ್ಲಿ ಅಖಂಡ ನರಕ-ಜೀವನ ಕಂಠಿಸುತ್ತ ನವೆಯುತ್ತಾನೆ. ದಾದಲ್ಯಾನ ಜುಟ್ಟದಲ್ಲಿಯ ರುದ್ರಶಕ್ತಿ ಕ್ಷಣಾರ್ಧದಲ್ಲಿ ಮಿಂಚಿನ ಗತಿಯಿಂದ ಹಾರಿ ಮಾಯವಾಗುತ್ತದೆ.

ಚಾಣಕ್ಯ-ತಳಿಗೆ ದಾದಲ್ಯಾ ಮೃತ್ಯುವಿನ ಅವಕಳೆ ತರುತ್ತಾನೆ:

"ದಾದಲ್ಯಾ"

ನಾನು ನನ್ನಲ್ಲಿಯ ದಾದಲ್ಯಾನನ್ನು ಜಾಗರಿಸುವಂತೆ ಕೂಗಿದೆ. ದಾಡೀ ಮಾಡಿಕೊಳ್ಳುತ್ತಿದ್ದ ದಸ್ತಗೀರ್‍ಯಾ ಗಾಬರಿಯಾಗಿ ತಿರುಗಿ ನೋಡಿದ. ಬದಿಗೆ ಕುಳಿತು ಅಂದಿನ ಪೇಪರು ಓದುತ್ತಿದ್ದ ಸುರ್‍ಯಾ ತಟ್ಟನೇ ಪೇಪರು ಒಗೆದು ನನ್ನ ಕೈ ಹಿಡಿದ. ಅದೇ ಸ್ನಾನ ಮುಗಿಸಿ ಬಂದು, ಕನ್ನಡಿಯ ಮುಂದೆ ನಿಂತು ಕ್ರಾಪು ಬಾಚಿಕೊಳ್ಳುತ್ತಿದ್ದ ವಿಶ್ಯಾ ತಟ್ಟನೇ ತಿರುಗಿದ. ಮೂವರೂ ಏಕಕಾಲಕ್ಕೆ – ಏಕಕಂಠದಿಂದ ...

"ದಾದಲ್ಯಾ, ಏನಾತು?"

ಎಂದು ಕೇಳಿದರು.

ನನ್ನಲ್ಲಿಯ ದಾದಲ್ಯಾನನ್ನು ಯಾರೋ ಕೊಲ್ಲಹತ್ತಿದ್ದರು. ಚಿತ್ರಹಿಂಸೆ ಕೊಟ್ಟು ಕೊಲ್ಲಹತ್ತಿದ್ದರು. ಅವನನ್ನು ಶ್ಯಾಮರಾಯ ಕೊಂದಿದ್ದರೆ ದಾದಲ್ಯಾ ಅಮರನಾಗುತ್ತಿದ್ದ. ಈಗ ಕೊಲ್ಲುತ್ತಿದ್ದವ ಶ್ಯಾಮರಾಯನಲ್ಲ. ಬಸವಂತಿಯ ದೃಷ್ಟಿಯಲ್ಲಿ ನನ್ನನ್ನು ಲಘುವಾಗಿ ಮಾಡಿ, ವಿಶ್ಯಾ-ದಸ್ತಗೀರ್‍ಯಾ ನನ್ನನ್ನು ಕೊಲ್ಲತೊಡಗಿದ್ದರು. ಅವನಿಗಾಗಿ ಅಮರ ನರಕವನ್ನು ನಿರ್ಮಾಣಮಾಡತೊಡಗಿದ್ದರು. ನನ್ನನ್ನು ಬಿಟ್ಟು ಅವರು ಬಸವಂತಿಯ ಕಡೆಗೆ ಧಾವಿಸುವದು...ಅವಳ ನೆರವಿಗೆ ಧಾವಿಸುವದು...'ಇಂಪೊಸಿಬಲ್'...ತೀರ ಅಶಕ್ಯ...ಬಸವಂತಿ ನಗೆಯ ಪಾಂಚಜನ್ಯವನ್ನು ಊದಿದ್ದು ನನ್ನ ಸ್ವಾಗತಕ್ಕೆ...ಅವಳನ್ನು ಎದುರುಗೊಳ್ಳಬೇಕಾದವ ನಾನು...ವಿಶ್ಯಾ...ದಸ್ತಗೀರ್‍ಯಾ ಅಲ್ಲ.

"ವಿಶ್ಯಾ, ನಿನಗ ದಾದಲ್ಯಾ-ಬಸವಂತೀದು ಅರ್ಥ ಆಗಿಲ್ಲಾ. I will sink or swim with ಬಸವಂತಿ. ನಿಮ್ಮ ಜೋಡೀ ಹೋಗತೀನ್ಯಂತ ಕಾಕಾಗ ತಿಳಿಸಿ ಬರತೀನಿ. ಒಪಗೊಂಪರ ಠೀಕಾತು. ಇಲದಿದ್ದರ ನನ್ನ ಧಾರಿ ನನಗs."

"ದಾದಲ್ಯಾ, ನನ್ನ ಮಾತನರs ಕೇಳು."

ವಿಶ್ಯಾ ಹೇಳುವಷ್ಟರಲ್ಲಿ ದಾದಲ್ಯಾ ಮಹಡಿ ಇಳಿದು ಹೋಗಿದ್ದ. ಅವನಲ್ಲಿಯ ದಾದಲ್ಯಾ ಜಾಗರಿಸಿದ್ದ. ಅವನ ಜುಟ್ಟದಲ್ಲಿಯ ರುದ್ರ ಸಚೇತನನಾಗಿದ್ದ. ತೌಡು ಕುಟ್ಟುವ ಒನಿಕೆಯನ್ನು ಕಬ್ಬಿನ ಗಳದಂತೆ ಲಟಲಟನೆ ಮುರಿದು ಒಗೆದಿದ್ದ.

"ಕಾಕಾ, ಸಾಂಗಲೀ ತನಕಾ ಹ್ಯಾಂಗೂ ಗಾಡೀ ಹೋಗತದ. ಗೋವಿಂದ ಭಟ್ಟಾ ಅವ್ವಾ, ಹುಡಗೂರ ಕಡಿಂದ ಮೂರ-ನಾಕ ಪತ್ರಾ ಬರಸಿದ್ದರು: ಒಮ್ಮೆ ಊರಿಗೆ ಬಂದಹೋಗು. ಜೀವ ಭಾಳ ನೆನಸ್ತದಂತ. ಸಾಂಗಲೀಯಿಂದ, ನಾ ಮುಂದ ಊರಿಗೆ ಹೋಗಿ ನಾಕೇ ದಿನದಾಗ ಬಂದಬಿಡತೀನಿ. ಮುಂಬೈಯಿಂದ ಗಾಡೀಖರ್ಚ ಮಾಡಿಕೊಂಡು ಹೋಗೂದು ಎಲ್ಲೆ ಆಗತದ?"

ಅತಿ ಆರ್ಜವತೆಯಿಂದ ಹೇಳಿದೆ. ಕಾಕಾ ಪಡಸಾಲೆಯಲ್ಲಿಯ ತಮ್ಮ ಕೋಣೆಯಲ್ಲಿ ಒಬ್ಬರೇ ಇದ್ದರು. ಸಾಹೇಬರು ಸ್ನಾನಕ್ಕೆ ಹೋಗಿದ್ದರು. ಕಾಕಾ ಅತ್ತಿತ್ತ ನೋಡಿ, ಯಾರೂ ಇರದ ಖಾತ್ರೀ ಮಾಡಿಕೊಂಡು, ನನ್ನನ್ನು ಹತ್ತಿರ ಕರೆದು ಕೂಡಿಸಿಕೊಂಡು —

"ಇದ್ನೋಡ ದಾದಲ್ಯಾ, ಶ್ಯಾಮಾ ನಿನ್ನೇ ಬಸವಂತಿನ್ನ ಕರಕೊಂಡು ಹೋಗ್ಯಾನ. ಅಂವಾ ಊರಿಗೇ ಹೋಗಿರಬೇಕು. ಅಕೀ ಜೀವಕ್ಕ ತ್ರಾಸ ಕೊಡೂ ಸಂಭವ ಅದs. ಧೋಕಾ ಇಲ್ಲ ಖರೇ. ಆದರೂ ಅಂವಾ ಅವೇಕತನಾ ಮಾಡ್ಯಾನು. ರಾಜಪ್ಪನ ನಜರು ಇದ್ದೇ ಇರತದ. ವಾಡೇದಾಗ ಏನರೇ ಧಾಂದಲೇ ಮಾಡಿದಾ ಅಂದರ, ಊರ ತುಂಬೇ ಹರಲಿ ಆಗೂದು ನಮ್ಮದು. ಬಸವಂತೀ ಹಾಂಗ ಖಂಬೀರ ಇದ್ದಾಳ. ಶ್ಯಾಮರಾಯನ್ನೇನು ಅಕೀ ದಾದ ಮಾಡೂದಿಲ್ಲಾ. ಹೊತ್ತೂ ವ್ಯಾಳ್ಯಾ ಹೇಳಿ-ಕೇಳಿ ಬರತಿರೂಹಾಂಗಿಲ್ಲಾ. ಇಲ್ಲೀದ ಹೋಗೂ ಮುಂದs ಅಂವಾ ಖವಳಾಸಿ ಹೋಗ್ಯಾನ. ವಾಡೇದಾಗ ಏನರs ಹೆಚ್ಚಕಡಿಮಿ ಆದರ ರಾಜಪ್ಪಗ-ಶ್ಯಾಮಗ ಕೈಗೆ ಕೈ ಹತ್ತೂದು ಠೀಕಲ್ಲ ದಾದಲ್ಯಾ; ಮುಂದಿನ ಪರಿಸ್ಥಿತಿ. ರಾಜಪ್ಪಗೇ ನಮುತೇ-ಧೋರಣ ತಗೋ ಅನ್ನ. ಏನ ನಡದsದ ಅನೂದನ್ನ ದಿನ ದಿನಾ ತಿಳಸ್ತಿರೂ ಅಂತ ಹೇಳು. ಶ್ಯಾಮು ಭಾಳೇ ಗಡಿಬಿಡಿ ಮಾಡಲಿಕ್ಕೆ ಹತ್ತಿದರ. ತಾರ ಕೊಡಸನ್ನು. ನಾನೇ ಬಂದಬಿಡತೀನಿ. ನಾ ಬಂದರ ಅಂವಾ ತಾನೇ ಊರ ಬಿಡತಾನ. ದಾದಲ್ಯಾ, ನಿನ್ನ ಕಾಕೂ ಇಲ್ಲದ ವಾಡೇ ನನಗ ಬೇಕೋ ಅನಸಲಿಕ್ಕೆ ಹತ್ತ್ಯಂತ ನಾ ಇಲ್ಲಿಗೆ ಬಂದೆ. ಅಲ್ಲೆ ಹೋದರೂ ನಾಯೇನು ಭಾಳ ದಿನಾ ಬಡಕೇನು ಅನಸೂದಿಲ್ಲಾ. ಸೋನಾನ ಸಂಕಟೂ ಪರಿಹಾರ ಆತು: ವಿಶ್ಯಾ-ಸುರ್‍ಯಾನು ಕೈಗೆ

ಬಂದರು. ನಾಳೆ ವಸೂ-ಶಕೂ ಬಂದರಂದರ, ಸೋನಾನ ಜೀವನಕ್ಕ ಧನ್ಯತಾ ಅನಸ್ತದ. ಅಕಿನ್ನ, ವಿಶ್ಯಾ-ಸುರ್ಯಾನ ಉಡ್ಯಾಗ ಹಾಕಿದರ ನಾ ಗೆದ್ದೆ. ತಿಕೀಟ ತಗಸಲಿಕ್ಕೆ ಏನೂ ಅಡ್ಡಿೀ ಇಲ್ಲಧಾಂಗ ಆಗತದ. ಶ್ಯಾಮೂ, ಸೋನಾನ್ನ ಬಿಟ್ಟಾಂಗ, ಬಸವಂತಿನ್ನು ಬಿಟ್ಟಿದ್ದರ ನನಗ ಯಾತರದೂ ಅಳಕ ಇದ್ದಿದ್ದಿಲ್ಲಾ. ಇಂದೇ ಶ್ರೀಹರೀ ಅಂತ ಕೂತಲ್ಲೇ ಕಣ್ಣುಮುಚ್ಚತಿದ್ದೆ. ಶ್ವಾಸ-ನಿರೋಧ ಮಾಡೂ ಕಲಾ ಅವಗತ ಅದs ದಾದಲ್ಯಾ ನನಗ. ಟಕ್ ಅಲ್ಲಿಕ್ಕೆ ವ್ಯಾಳ್ಯಾ ಹಿಡಿಯೂದಿಲ್ಲಾ. ಶ್ಯಾಮೂ ನನ್ನ ಟಕ್ ಅನಿಸಿಗೊಡವಲ್ಲ ಆಗ್ಯಾನ. ಭಾಳ ಕಾಡಸಲಿಕ್ಕೆ ಹತ್ತ್ಯಾನ ದಾದಲ್ಯಾ ಅಂವಾ ನನ್ನs. ನಿನ್ನ ಕಾಕೂನ ಜೀವಾ ಈಗೊ ಇನ್ನೊಂದು ಘಳಿಗ್ಗೆಗೊ ಅಂತಿತ್ತು. ಆಗೇ ಸುರೂ ಆತು ಅವನ ಕಾಟಾ. ರಾವಜೀಕಾಕಾನ್ನ ವೃದ್ಧಾಪ್ಯ ಹಣ್ಣು ಮಾಡಲಿಲ್ಲಾ. ಹೇಣತೀ-ಮೊಮ್ಮಕ್ಕಳು-ಸೊಸೀ ಯಾರೂ ಯಾರೂ ಹಣ್ಣು ಮಾಡಲಿಲ್ಲಾ. ಅಚಾನಕ ಬಸವಂತಿ ಬಂದಳು. ಸೋನಾಗ ಅದರಿಂದ ಸಿಡ್ಲ ಬಡದೀತಂತ ಮಾಡಿದ್ದೆ. ಬಸವಂತಿ ಸೋನಾಗ, ಬಳ್ಳಿಗೆ ಗಿಡಾ ಆಧಾರ ಆಧಾಂಗ ಆದಳು. ದಾದಲ್ಯಾ, ಆಲೀಕಡೇ ನಾ ಭಾಳ ಶಾಂತ ಆಗಿದ್ದೆ. ಅಗದೀ ನಿರ್ವಾಣ ಶಾಂತೀ ಅನಭೋಗಸ್ತಿದ್ದೆ. ವೊನ್ನೆ ಏಕಾದಶೀ ಹಿಡದು ಮತ್ತ ಆ ಶಾಂತೀ ಕಲಕಿತು. ಶ್ಯಾಮೂ ದೊಡ್ಡ ಕಲ್ಲ ಒಗದು ಶಾಂತ ನೀರ ಕಲಕಿದಾ. ಬಸವಂತಿ ಆ ನೀರಾಗ ಮುಣಗಬಾರದು ದಾದಲ್ಯಾ, ಆಕಿ ಮುಣಗಿದರ ನಿಮ್ಮ ಕಾಕಾನೂ ಮುಣಗಿಧಾಂಗ. 'ಕಾಕಾ, ನಾ ನಿಮ್ಮ ಮಗಳ ಸರೀ' ಅಂದಾಳ ಬಸವಂತಿ. ಮಗಳ್ನ ನಾ ಕಟಕನ ಕೈಗೆ ಕೊಡಲಾರೆ. ವೊದಲ ಅಂವಾ ನನ್ನ ಕೊಯ್ಯಲಿ. ನನ್ನ ಅಪರೋಕ್ಷದಾಗ, ಹತ್ಯಾಕಾಂಡ ಮಾಡಲಿ. ರಾಚಪ್ಪಗ ಜತನಂತ ಹೇಳೀನಿ. ನನ್ನ ಝುಲ್ಲ ಬಿಟ್ಟsದ. ರಾಚೋಟಿ ತಾ ಸತ್ತು ಬಸವಂತಿನ್ನ ಬದಕಸ್ತಾನ ಅನೂ ಖಾತ್ರೀ ಅದs ನನಗ. ರಾಚೋಟಿಗೆ ಇದರ ನೆನಪು ಕೊಡು. ಹೋಗಿ ಬಾ ದಾದಲ್ಯಾ; ಬರೂ ಮುಂದ ಗೋವಿಂದಭಟ್ಟರನ ಕರಕೊಂಡು ಬಾ. ಇಂದ ನಾನೇ ಅವರಿಗೆ ಪತ್ರಾ ಬರ್‍ಯಾಂವ ಇದ್ದೆ. ಸುರ್ಯಾಂದು ಮೂರ್ತಾ ವಗ್ಯೆರೆ ತಗಸಬೇಕಾಗೇದ. ಬಾಕೀ ಎಲ್ಲಾ ಠರಾವ ಆಗೇದ. ಇಕಾ ಗೌಡರಿಗೂ ಈ ಸುದ್ದೀ ಜರೂರ ತಿಳಸು. ದಾದಲ್ಯಾ, ಸೋನಾನ್ನ ಕರೀ ಒಂದಿಷ್ಟು."

ಎಂದು ಕಾಕಾ ಹೇಳಿದರು. ನಾನು ಸೋನಕ್ಕನನ್ನು ಕರೆದುಕೊಂಡು ಬಂದೆ.

"ನಾ ಹೋಗಿಬರತೀನಿ ಕಾಕಾ"

ಎಂದು ಕಾಕಾ ಅವರ ಪಾದ ಮುಟ್ಟಿ ನಮಸ್ಕಾರ ಮಾಡಿದೆ. ಕಾಕಾ ವಾತ್ಸಲ್ಯದಿಂದ ತಲೆಯ ಮೇಲೆ ಕೈಯಾಡಿಸಿದರು. ಬೆನ್ನ ಸವರಿದರು. ಸೋನಕ್ಕನ ಕಡೆಗೆ ತಿರುಗಿ —

"ಸೋನಾ, ದಾದಲ್ಯಾ ಎರಡ ದಿನಾ ಊರಿಗೆ ಹೋಗಿ ಬರತಾನಂತ. ಸಾಂಗಲೀ ತನಕಾ ಅಂತೂ ವಿಶ್ಯಾ ಅವರ ಜೋಡಿನೇ ಹೊರಡತಾನ. ಬರಾಗ ಗೋವಿಂದಭಟ್ಟರ್ನ ಕರಕೊಂಡು ಬರಲಿಕ್ಕೆ ಹೇಳೀನಿ. ಅಂವಗ ಪಂಚವೀಸ ರೂಪಾಯಿ ಕೊಟ್ಟಿರು. ಇಬ್ಬರದೂ ಗಾಡೀಖರ್ಚು ಅಲ್ಲಿಗೇ ಬರತದ. ದಾದಲ್ಯಾ ಹೋಗಿ ಬರೂದು ಠೀಕ ಅಲ್ಲs? ಬಸವಂತಿ ಊರಾಗೇ ಇದ್ದರs, ಆಕೀ ಸುದ್ದಿ ತಿಳೀತದ. ಅರ್ಧಾ ಜೀವ ಇಲ್ಲೇ – ಅರ್ಧಾ ಜೀವ ಅಲ್ಲೇ ಅಧಾಂಗ ಆಗೇದ. ಎರಡ ದಿನಾ ಆತು ಸೋನಾ, ಏನೋ ಸಂಕಟಾಗಲಿಕ್ಕೆ ಹತ್ತೇದ."

"ಏಕಾದಶೀ ಆಗದೀ ನಿಶ್ಚಕ್ರ ಮಾಡಿದಿರಿ. ಈ ವಯಸ್ಸಿಗೆ ಹ್ಯಾಂಗ ತಡೀ ಬೇಕು? ನಿತ್ರಾಣತನಾ ಬಂದsದ. ಮ್ಯಾಲ ನಿನ್ನೆ ರಾತ್ರೀ ಅಖಂಡ ನಿದ್ದಿ ಇಲ್ಲಾ. ಊಟದ ವ್ಯಾಳ್ಯಾದ ತನಕಾ ವಿಶ್ರಾಂತೀ ತಗೋರಿ. ಎರಡ ನಿದ್ದಿ ಆದರ ರಕರಕೀ ತಾನೇ ಕಡಿಮಿ ಆಗತದ. ದಾದಲ್ಯಾ, ಊರಾಗ ನೀಏನರ ಗಡಿಬಿಡಿ ಮಾಡಲಿಕ್ಕೆ ಹೋದಿ-ಗೀದೀ. ನಿನಗ–ಇವರಿಗೆ ಅಡ್ಡ ಬೆಂಕಿ ಹಾಯಧಾಂಗ ಆಗೇದ. ಈ ವ್ಯಾಳ್ಯಾ ದಾಗ ನೀ ಹೋಗದಿರೂದೇ ಠೀಕ ಇತ್ತು. ಇವರ ಬೆನ್ನಾಬೆನ್ನ ಹೋದೆಂದರ, ಬಸವಂತೀ ಜೀವಕs ತ್ರಾಸು. ನಿನ್ನ ಮ್ಯಾಲಿನ ಸಿಟ್ಟಲೆ ಇವರು ಗೋವಿಂದಭಟ್ಟ ರಿಗೂ ತ್ರಾಸ ಕೊಡಾವ್ರು. ನೀ ಎರಡ ದಿನಾ ಸುದ್ದೇ ನಿಂದರೇಬ್ಯಾಡಾ. ಹೋದ ವನೇ ತಿರಿಗಿ ಬಾ. ಗೋವಿಂದಭಟ್ಟರನ ಬಿಟ್ಟಬರಬ್ಯಾಡಾ. ಅವರು ನಿನಕಿಂತಾ ಉತಾವಿಳ ಆಗತಾರ. ಸುರ್ಯಾನ ಲಗ್ನದ ತಯಾರಿಗೆ ನೀವೇ ಬರಬೇಕಂತ, ಕಾಕಾ ಹೇಳ್ಯಾರನ್ನು. ಅಂದರ ಹೊಂಟೇಬಿಡತಾರ. ನಿನ್ನ ಸ್ನಾನ ಆಗಿರದಿದ್ದರ ಲಗೂ ಬಗೀ ಹರಸು. ಎಂಟಕ್ಕ ಹೊಂಡೂದಂತ ವಿಶ್ಯಾನ ಗಡಿಬಿಡಿ ನಡದsದ. ನೀ ಹೊಂಡೂದು ಅಂವಗ ಠಾಂವಿಕಿಲ್ಲ ಕಾಣಸ್ತದ. ನಾ ಹೇಳತೀನಿ ಅಂವಗ. ನೀ ಸ್ನಾನಾ ಬಗೀಹರಸು ಮೊದಲ."

ಮೋಟಾರಿನಲ್ಲಿ ಕೂಡುವ ಏನವೇಳೆಯಲ್ಲಿ ಸಾಹೇಬರು ತಮ್ಮ ಖೋಕಾ ತನದ ಪ್ರದರ್ಶನ ಮಾಡದೆ ಬಿಡಲಿಲ್ಲ.

"ದಾದಲ್ಯಾ, ವರ್ಷಾನಗಟ್ಟಲೇ ನಿನಗ ಅವ್ವಾ-ಅಪ್ಪನ ನೆನಪ ಆಗೂದಿಲ್ಲಾ. ಇಂದೇ ನೆನಸೂದಕ್ಕ ಮುಹೂರ್ತ ಬಂತ ಕಾಣಸ್ತದ. ಕಾಕಾಸಾಹೇಬರ ಎದರಿಗೆ ನಿನ್ನ

ಕೂಡಿಸಿಗೊಂಡು ನಿನ್ನ ಕರ್ತಬಗಾರೀ ವರ್ಣನಾ ಮಾಡಾಂವ ಇದ್ದೆ. ತಪ್ಪಿಸಿ ಗೊಂಡಿ. ತಿರಿಗಿ ಬರಾಗ, ಬೆಳಗಾಂವೀ ಮ್ಯಾಲ ಹಾದೇ ಬಂದಬಿಡೂ ದಾದಲ್ಯಾ. ಇಕಿನ್ನ, ಠೋಮರೇಮಾಮಾನ್ನ ಕರಕೊಂಡೇ ಬಾ. ಶಕೂನ ಸಾಖರಪುಡಾ ಅಂತs ತಿಳಸು."

ದಾದಲ್ಯಾ ದೇಶಾವರೀ-ನಗೆಯಿಂದಲೇ ಸಾಹೇಬರ ಆದೇಶವನ್ನು ಮಾನ್ಯ ಮಾಡಿದ.

ಮೋಟಾರು ಬಿಟ್ಟಿತು.

ಗೋಂದ್ಯಾನ ಮನೆಗೆ ಹೋಗಿ ತುಳಸಿಯನ್ನು ಕಂಡು, ಅವಳಿಗೆ ನಮ್ಮ ಪ್ರಯಾಣದ ವಿಷಯವನ್ನು ತಿಳಿಸುವದಿತ್ತೆಂದು ನಾವು ಮನೆಯನ್ನು ಬಿಟ್ಟವರು ಮೊದಲು ಅಲ್ಲಿಗೇ ಹೋದೆವು. ಪುಣೆಯಲ್ಲಿ ನಿಲ್ಲಲು ತುಳಸಿ ಒಪ್ಪಲಿಲ್ಲ. ಅವಳೂ ದಾದಲ್ಯಾನಂತೆ, ತಾನೂ ಬರುವೆನೆಂದು ಹಟ ತೊಡದೆ, ಆಕ್ರೋಶ ಮಾಡದೆ. ನಮಗಿಂತ ಮುಂಚಿತವಾಗಿ ಹೋಗಿ ಮೋಟಾರಿನಲ್ಲಿ ಕುಳಿತೇಬಿಟ್ಟಳು. ವಿಶ್ಯಾ ಕೊನೆಯ ಉಪಾಯವೆಂದು ಅವಳಿಗೆ —

"ತುಳಸೀ ನೋಡು ತಿರಿಗಿ ಬರೂ ಮುಂದ, ನಾವು ಸಾಂಗ್ಲೀ ಮ್ಯಾಲ ಹಾದ ಬರಾವು, ಮತ್ತ..."

ತನ್ನ ಅನೂಮಾನ ಸೂಚಿಸಿದ. ಅವನಿಗೆ ತನ್ನ-ತುಳಸಿಯ ಸಂಬಂಧ, ಸದ್ಯ ಪಂತಮಾಮಾ-ಬನೂಮಾಮೀ ಅವರಿಗೆ ತಿಳಿಯಬಾರದಾಗಿತ್ತು. ಅವನ ಅನು ಮಾನದ ಅರ್ಥವನ್ನು ಮಾಡಿಕೊಂಡು —

"ರಾಜಾ, ತಿರಿಗಿ ಬರಾಗ ನನ್ನ ಗಾಡಿಗೆ ಕೂಡಿಸಿಬಿಡೂ. ನಿಮಕಿಂತಾ ಮೊದಲೆ ನಾ ಪುಣೇಕ್ಕ ಬಂದಬಿಡತೀನಿ. ಇಲ್ಲದಿದ್ದರ, ಸಾಂಗಲೀಯಿಂದ ಆಈ ಕಡೆ ನಾಕ ದಿನಾ ಹೋಗಿ ಬರತೀನಿ. ನನಗ ಈಗ ಮಾತ್ರ ನಿಮ್ಮ ಜೋಡೀ ಬರಲಿಕ್ಕೆ ಹರಕತ್ತ ಮಾಡಬ್ಯಾಡಾ. ಈ ಬಾಬತ್ಯಾಗ ನಾವಿನು ನಿನ್ನ ಮಾತು ನಡಸಾಕ್ಯಲ್ಲಾ."
ಠೋಕಠೋಕ ಉತ್ತರ ಕೊಟ್ಟಳು. ನಿರಾಶನಾಗಿ ವಿಶ್ಯಾ —

"ತುಳಸಿ-ದಾದಲ್ಯಾ, ಘನ ಖಿಪಾರತಾ ಕೊಳ್ಳಿಗೆ ಬಿದ್ದೂ ಗೋಂದ್ಯಾ. ಜಿಕೇರಿ ಮಾಡಿಕೋತ ಕೂಡೂದರಾಗ ಅರ್ಥ ಇಲ್ಲಾ. ಹೊಂಟಬಿಡೂದs ಠೀಕಾ" ಎಂದು ಹೇಳಿದ.

"ದಸ್ತಗೀರ್ಯಾ, ವಿಶ್ಯಾ-ದಾದಲ್ಯಾನ್ನ ಸಂಬಾಳಸೂ"

ಗೋಂದ್ಯಾ ಹೇಳಿದ.

"ಅಲ್ಲಾ ಕೇ ಕಸವ್. ಕಾಳಜೀ ಬಿಡೂ ಗೋಂದ್ಯಾ"
ದಸ್ತಗೀರ್‍ಯಾ ಆಶ್ವಾಸನ ಕೊಟ್ಟ.

ಗಾಡಿ ಪೂನಾ-ಬೆಂಗಳೂರ ದಾರಿಯಲ್ಲಿ ಭರದಿಂದ ಸಾಗಿತು.

ಬಹಳ ಹೊತ್ತಿನ ಮೇಲೆ ದಸ್ತಗೀರ್‍ಯಾ ವಿಶ್ಯಾನ ಕಡೆಗೆ ತಿರುಗಿ —

"ವಿಶ್ಯಾ. ತನ್ನ ಬಿಟ್ಟ ಬಂದದ್ದಕ್ಕ ಸುರ್‍ಯಾಗೂ ಸಿಟ್ಟ ಬಂತ ಕಾಣಸ್ತದ. ನಾವು ಹೊಂಡೂ ಮುಂದ ಅಂವಾ ಮಾತ ಸುದ್ದೇ ಆಡಲಿಲ್ಲಾ."
ಎಂದ.

"ದಾದಲ್ಯಾನ ಹಾಂಗ ಅಂವಗ ಸುಳ್ಳ ಹೇಳಲಿಕ್ಕ ಮಾರ್ಗನ್ಸ ಇದ್ದಿದ್ದಿಲ್ಲಾ. ಶಕೂ-ಸಾಹೇಬರು ಅಲ್ಲೆ ಇರೂ ಮುಂದ ಅಂವಾ ನಮ್ಮ ಜೋಡೀ ಬರೂದು ಯೋಗ್ಯನೂ ಆಗತಿದ್ದಿಲ್ಲಾ. ನನ್ನ ಮಾತು ಬ್ಯಾರೆ. ಸಾಂಗ್ಲ್ಯಾಗ ವಸೂ ಇದ್ದಾಳ. ಪಂತಸಾಮಾ-ಬನೂಮಾಮೀ ಇದ್ದಾರ. ಅವರ ಭೆಟ್ಟೀ ಕಾರಣಾ ದಕ್ಕಿತು. ಸುರ್‍ಯಾನ ದಶಿಂದ ಏನ ಕಾರಣಾ ಹೇಳಬೇಕಾಗಿತ್ತು? ದಾದಲ್ಯಾ-ತುಳಸಿ ಗಾಡಿಗೆ ಭಾರ ಆಧಾಂಗ ಅವನೂ ಆಗತಿದ್ದಾ. ದಾದಲ್ಯಾ ಇಲ್ಲದೇ ಸಾಹೇಬರ ಗಾಡೀ ಮುಂದ ಸಾಗೂದಿಲ್ಲಾ. 'ಏನ್‌ಕ್ವಾಯರಿ' ದಶಿಂದ ಅವರಿಗೆ ನಾಳೆ ಮುಂಬೈಯಾಗ ಹಜ್ಜರ ಇರಬೇಕಾಗತದ. ಅವರು ಇಂದ ರಾತ್ರೀ ಗಾಡೀಗೆ ಮುಂಬೈಗೆ ಹೋಗ ಲಿಕ್ಕೇಬೇಕು. ದಾದಲ್ಯಾ ಅದರದೂ ಕಾಳಜೀ ಮಾಡಲಿಲ್ಲಾ. ನಡನೀರಾಗೇ ಅವರ ಕೈಬಿಟ್ಟಾ. ಅರಗಚ್ಚಿ ಕೆಲಸಾ ಮಾಡೂದು ವೈದಿಕಬ್ರಾಹ್ಮಣನ ಲಕ್ಷಣಾ. ಜಾತಿಗೆ ಹೊರತು ಹ್ಯಾಂಗ ಆದಾನು?"

ನಾನು-ತುಳಸಿ ಬಂದದ್ದಕ್ಕೆ ವಿಶ್ಯಾ ರುಷ್ಟನಾಗಿದ್ದ. ಅವನ ಕುದಿ ಇನ್ನೂ ಇಳಿದಿರಲಿಲ್ಲ. ತಾಸರ್ಧತಾಸು ಹೋದರೆ ತಾನೇ ಇಳಿಯುವದೆಂದು ನಾನು ಸುಮ್ಮನೇ ಕುಳಿತೆ. ತುಳಸಿ ಸುಮ್ಮನಿರದೆ —

"ದಾದಲ್ಯಾನ್ಹಾಂಗ ನಾ ಅರಗಚ್ಚಿ ಕೆಲಸಾ ಮಾಡೂದಿಲ್ಲ ರಾಜಾ. ಬಸವಂತಿ ಬರದಿದ್ದರ ನಾನೂ ವಾಡೇದಾಗ ನಿಂತಬಿಡತೀನಿ ಅಕೀ ಜೋಡಿಗೆ. ಒಬ್ಬರಿಗೊಬ್ಬರು ಜೋಡಿ ಆಧಾಂಗ ಆಗತದ."
ತನ್ನ ಖಚಿತ ನಿರ್ಣಯವಾದಂತೆ ವದಿಸಿದಳು.

"ದಾದಲ್ಯಾ, ನೀನೂ ಬೇಕಾರ ವಾಡೇದಾಗs ನಿಂತಬಿಡು. ಊರ ತನಕಾ

ಮೋಟಾರ ತಗೊಂಡು ಹೋಗೂದರ ಜರೂರೀನೇ ಉಳೀಲಿಲ್ಲ ದಸ್ತಗೀರ್ಯಾ. ಇಬ್ಬರ್ನೂ ಮಿರ್ಜಿಯಿಂದ ಗಾಡಿಗೆ ಕೂಡಿಸಿಬಿಡೂಣು. ಅವರೇ ಹೋಗಿಬಿಡಲಿ ಊರಿಗೆ. ವಾಡೇದಾಗ ಬಂದೀ ಆದವರನ ಹೊರಗ ತರೂ ಖಟಪಿಟಿ ನಮ್ಮದ ನಡದ್ವದ. ಹೊರಗ ಇದ್ದಾವ್ರು ವಾಡೇದಾಗ ಬಂದೀ ಆಗೂ ಖಟಪಿಟಿ ತಾವ ಮಾಡಲಿಕ್ಕೆ ಹತ್ತ್ಯಾರ.

ವಿಶ್ಯಾ ಅಕ್ಕಸದಿಂದ ಹೇಳಿದ.

"ದಾದಲ್ಯಾ-ತುಳಸೀ ಬಂದದ್ದರಾಗ ನನಗೇನು ತಪ್ಪ ಅನಸೋಲ್ಲು ವಿಶ್ಯಾ. ನೀ ಅವರ ಕಾಳಜೀ ದಶಿಂದ ಹೀಂಗ ಮಾತಾಡ್ತೀ ಅನೂದು ಖರೇ. ನಿನಗ ಹ್ಯಾಂಗ ಅವರ ಕಾಳಜೀ ಅದs, ಅವರಿಗೂ ನಿನ್ನ ಕಾಳಜೀ ಇರೂದು ಸಹಜನs. ನಾನೂ-ನೀನೂ ಏಕಜೀವಿ 'ಇನ್‌ಸೆಪರೆಬಲ್' ಜೋಡಗೋಳೀ ಅನೂದು ಇಡೀ ಸಾಂಗ್ಲಿಗೇ ಠಾಂವಿಕಿತ್ತು. ಆದರ ನಾ ಸಾಂಗ್ಲ್ಯಾಗ, ನೀ ಮುಂಬೈಯಾಗ. ಇಂದ ಹ್ಯಾಂಗ ಯೋಗ ಬಂತ ನೋಡು? ಈ ಭಾನಗಡೀ ಇಷ್ಟ ಲಗೂ ಎದ್ದೀತು ಅನೂದು, ಕನಸ-ಮನಸಿನ್ಯಾಗ ಇದ್ದಿದ್ದಿಲ್ಲಾ. ಸೋನಕ್ಕನ ಪ್ರಕರಣದಾಗ ನಿನ್ನ ಕೈ ಸುಡದೇ ಹೋಗೂದಿಲ್ಲಾ – ನಿನ್ನ ಕೈ ಸುಡಾಗ ನಾ ಧಾವಸದೇ ಇರೂದಿಲ್ಲಾ ಅನೂದು ನಿನಗ ಠಾಂವಿಕಿತ್ತು. ಜೋಡಗೋಳೀ ಮತ್ತ ಜಮಾಸೂ ಯೋಗಾ ಇಂದ ಬಂತು. ದಾದಲ್ಯಾ-ತುಳಸೀಗೂ ಆ ಯೋಗ ಅದs. ನೀನು ಅವರು ಬರೂದನ್ನ ಬಿಡಿಸಿದ್ದರ, ಅವರೇನು ಯೋಗ ತಪ್ಪಿಸಿಗೋತಿದ್ದಿಲ್ಲಾ. ದಾದಲ್ಯಾ, ನೀ ಪತ್ರದ ಬಾತಮೀ ಮುಂಚೇ ತಿಳಿಸಿದ್ದ್ಯಂದರ ಠೀಕ ಆಗತಿತ್ತು. ಭಾಳ ಧಾವತೀ ಮಾಡೂ ಪ್ರಸಂಗ ಬರತಿದ್ದಿಲ್ಲಾ. ಬಸವಂತಿ ಪುಣೇನೂ ಬಿಡತಿದ್ದಿಲ್ಲಾ."

ದಸ್ತಗೀರ್ಯಾ.

ವಿಶ್ವಾಸ ಧಾವತೀ ಪಡಬೇಕೆಂದು ನಾನು ಎಂದೂ ಬಯಸಿರಲಿಲ್ಲ. ಈಗಲೂ ಅವನು ಧಾವತಿಪಡಬೇಕಾದ ಅಗತ್ಯವಿರಲಿಲ್ಲ. ಆ ಧಾವತಿಗೆ ನಾನು-ಬಸವಂತಿ ಮೀಸಲಾಗಿದ್ದೆವು. ತನ್ನ ಝುಲ್ಲು ಬಿಟ್ಟು, ವಿಶ್ವಾಸನ ಕಾಳಜೀ ಮಾಡೆಂದು ಬಸವಂತಿ ನನಗೆ ಆದೇಶವಿತ್ತಿದ್ದಳು. ಈಗ ವಿಶ್ವಾಸ ತನ್ನ ಕಾಳಜೀ, ತನ್ನ ಕ್ಷೇಮದ ದರಜಿಲ್ಲದೆ ಹೊರಟಿದ್ದ. ದಾದಲ್ಯಾ ಯಾರ ಕಾಳಜಿಯ ಸಲುವಾಗಿ ಹಿಂದೆ ನಿಲ್ಲಬೇಕಾಗಿತ್ತು? ನಾನು ಬೆನ್ನಹತ್ತಿ ಬಂದೆನೆಂದು ಅವನಿಗೆ ಸಿಟ್ಟಿರಲಿಲ್ಲವೆಂಬುದು ನಿಜ; ನನ್ನ ಜೀವನ. ಕದಾಚಿತ್ ಸಂಕಟದಲ್ಲಿ ಬೀಳಬಹುದೆಂದು ಅವನ ಕಲ್ಪನೆಯಾಗಿರಬೇಕು. ಆ ಕುತ್ತಿನ

ಕಲ್ಪನೆ ನನಗೆ ಎಂದೋ ಬಂದಿತ್ತು. ಅದರ ಭೀತಿ ನನಗಿರಲಿಲ್ಲ. ನಾನು ಬಂದಿರದಿದ್ದರೆ, ಬಸವಂತಿ, ಏನೆಂದು ಭಾವಿಸಬಹುದಾಗಿತ್ತೆಂಬುದರ ಭೀತಿ ನನಗಿತ್ತು. ನನಗೆ ಇದ್ದದ್ದು ಅವಳ ಮಾತಿನ ಧಾಕು. ಬಸವಂತಿಗೆ ನಾನು ವಚನಬದ್ಧನಾಗಿದ್ದೆ. ಇಂದು, ಓಂದುಳಿದು ಪುಣೆಯಲ್ಲಿ ನಿಂತಿದ್ದರೆ, ನಾನು ಕಾಣಾಕಾಣಾ, ಬಸವಂತಿಯನ್ನು ವಂಚಿಸುತ್ತಿದ್ದೆ. ನನ್ನನ್ನು ನಾನೇ ವಂಚಿಸಿಕೊಳ್ಳುತ್ತಿದ್ದೆ. ಆ ವಂಚನೆಯ ವೇದನೆ ತೀವ್ರವಾಗಿ, ಅಸಹ್ಯವಾಗಿ ನಾನು ನನ್ನಷ್ಟಕ್ಕೆ ಕೂಗಿಕೊಂಡಿದ್ದೆ. ನನ್ನಲ್ಲಿಯ 'ದಾದಲ್ಯಾ' ನಿಸ್ಸತ್ವಜಡನಾಗಿ ಬಿದ್ದಿದ್ದ. ಆ ಬಿದ್ದ ದಾದಲ್ಯಾನನ್ನು ಜಾಗರಿಸಲಿಕ್ಕೆ ಕೂಗಿಕೊಂಡಿದ್ದೆ.

ಪತ್ರದ ಗುಪಿತವನ್ನು ನಾನು ಸ್ಫೋಟಮಾಡಿರದಿದ್ದರೆ, ಸಾಲಾಗಿ ಬಲಿ ಬೀಳುತ್ತಿದ್ದವು. ಸಾಹೇಬರು, ವಿಶ್ವಾಸ, ಸುರೇಶ, ಸೋನಕ್ಕ, ರಾವಜೀಕಾಕಾ, ಶಕೂ, ರಂಗಕ್ಕ ಇವರೆಲ್ಲ ಶ್ಯಾಮರಾಯ ಹಚ್ಚಿದ ಕಿಚ್ಚಿನಲ್ಲಿ ಹುರಪಳಿಸದೆ ಇರುತ್ತಿರಲಿಲ್ಲ. ಅವರ ದಹನಕಾರ್ಯ ನಡೆದಿರವಾಗ, ಕೈತಟ್ಟಿ, ತೊಡೆ ಚಪ್ಪರಿಸಿ, ದುರ್ಯೋಧನ-ದುಃಶಾಸನ ಧರ್ತಿಯಲ್ಲಿ ಶ್ಯಾಮರಾಯ ವಿಕಟಾಟ್ಟಹಾಸ ಮಾಡಿ ವಿಜೃಂಭಿಸದಿರುತ್ತಿರಲಿಲ್ಲ. ಆ ವಿಜೃಂಭಣೆಯ ಘಾತುಕ ಪರಿಣಾಮವನ್ನು ಊಹಿಸಿ, ನಾನು ಪತ್ರದ ಗುಪಿತವನ್ನು ಸ್ಫೋಟಪಡಿಸಿದ್ದೆ. ಆ ದಿವ್ಯದಿಂದ ಬಹಳವಾದರೆ ನನ್ನ-ಬಸವಂತಿಯ ಜೀವನಕ್ಕೆ ಅಪಾಯವಿತ್ತು. ದೊಡ್ಡ ಅನಿಷ್ಟ ತಪ್ಪಲಿಕ್ಕೆ ಎರಡು ಚಿಲ್ಲರೆ ಜೀವನಗಳನ್ನು ನಿವಾಳಿಸಿ ಒಗೆಯುವದೇನೂ ಮಹಾ ದಿವ್ಯವಲ್ಲವೆಂದು ಬಗೆದು ನಾನು ಪತ್ರದ ಪ್ರಚ್ಛನ್ನ ಸತ್ಯವನ್ನು ಪ್ರಕಟಿಸಿದ್ದೆ.

"ದಾದಲ್ಯಾ, ನಿನಗ-ದಾದಾಗ ಮುಂಗಲೀ ಹಾವಿನ ದ್ವೇಷ ಕೆದಕೇದ. ಅದೂ ಆಗದೀ ತಾಜಾ ತರತರೀತ ಅದ. ಬಸವಂತಿ ಬೆನ್ನಿಗೆ ನೀನೂ ಊರಿಗೆ ಬಂದದ್ದನ್ನ ನೋಡಿ, ಅವನ ಕಿಚ್ಚು ಉರದ ಏಳದs ಇರೂದಿಲ್ಲಾ. ಅದರಿಂದ ನಿನಗ, ಬಸವಂತಿಗೆ ಧಕ್ಕಿ ಆಗದೇ ಹೋಗೂದಿಲ್ಲಾ ಅನೂ ಠಾಂವಿಕಿ ನನಗ ಇತ್ತು. ಅಷ್ಟರದಶಿಂದ ಸದ್ಯಕ್ಕ ನೀನು ನಮ್ಮ ಜೋಡೀ ಬರೂದು ಬ್ಯಾಡಂದೆ. ದಾದಾ 'ಕ್ರಿಮಿನಲ್ ಮ್ಯೆಂಡೆಡ್' ಯಾಕ ಆಗ್ಯಾನ ಅಂದೀ? ಪತ್ರದ ಸುದ್ದಿ ಜಾಹೀರಾಗಿ ಅವನ ಅಭಿಮಾನ ಮುಕ್ಕ ಆಗೇದ. ಅಪಮಾನದ ಅವಕಳಾ ಅಂವಗ ಅಡರೇದ. ಇದು ಒಂದ ಭಾಗ ಆದರs, ಅಂವಾ 'ಕ್ರಿಮಿನಲ್ ಮ್ಯೆಂಡೆಡ್' ಆಗಲಿಕ್ಕೆ ಇನ್ನೂ ಒಂದು ಭಾಗ ಅದs. ಹೆಂಗಸನ್ನು – sex-thirst ಅನ್ನು that is at the bottom of

crimes. ದಾದಾನ ಅತೃಪ್ತವಾಸನಾ ಭೂತ ಆಗೇದ. ನಿನ್ನ ನೋಡಿದ ಕೂಡಲೇ ಅದು ಆಹುತಿಗೇ ಅಡರಾಸಿ ನೆಗೀತದ. ನಿಂದು-ಬಸವಂತೀದು 'ರಿಲೇಶನ್'ದ ಅರ್ಥನ್ನs ಅಂವಾ ಬ್ಯಾರೇ ಮಾಡಿಕೊಂಡಾನ. ಅದಕೇ ನಿಮ್ಮನ್ನ ಜೀವಂತ ಸುಡಸೂ ಡಾವ್ ಮಾಡ್ಯಾನ. ನೀನೂ ಅದನ್ನ 'ರೆಜಿಸ್ಟ್' ಮಾಡತಿ. ಬಸವಂತೀನೂ ಧಾವಸ್ತಾಳ. ನಿಮ್ಮ ಕೈ ಪ್ಯಾಲಾದರ ದಾದಾ ನಿಕಾಲ ಆಗತಾನ. ಅವನ ಕೈ ಪ್ಯಾಲಾದರ ನೀವು ನಾವು ಎಲ್ಲಾರೂ ನಿಕಾಲ ಆಗತೇವು. ವಿನಾಕಾರಣ ಇಷ್ಟು ಆಗಬಾರದಂತ ನಾನೇ ಬಂದದ್ದು. ನಿನ್ನ ಕರಕೊಂಡು ಬರಲಿಕ್ಕೆ ಅನುಮಾನಿಸಿದ್ದು." ವಿಶ್ವಾಸ ಹೇಳಿದ. ನಾವು ಯಾರೂ ಅವನಿಗೆ ಉತ್ತರಿಸಲಿಲ್ಲ. ಅವನೂ ನಮ್ಮಿಂದ ಉತ್ತರವನ್ನು ಅಪೇಕ್ಷಿಸಿರಲಿಲ್ಲ. ಗಾಡಿಯಲ್ಲಿ ನಿಃಶಬ್ದ – ನಿಃಸ್ತಬ್ಧ ವಾತಾವರಣ ಇತ್ತು. ಗಾಡಿ ಮೂವತ್ತೈದು-ನಾಲ್ವತ್ತು ಮೈಲಿನ ಗತಿಯಲ್ಲಿ ಧಾವಿಸುತ್ತಿತ್ತು. ಗಾಡಿಯು ಧಾವನಕ್ಕೆ ನನಗೆ ಗುಂಗು ಬರತೊಡಗಿತು. ನಿನ್ನೆ ರಾತ್ರಿ ನನಗಂತೂ ಅಖಂಡ ಜಾಗರವಾಗಿತ್ತು. ಕಣ್ಣಿಗೆ ಕಣ್ಣು ಹತ್ತಿರಲಿಲ್ಲ. ಗಾಡಿಯು ಧಾವನದಲ್ಲಿ. ನಾನು ಜಾಗರ-ನಿದ್ರೆಯು ನಡುವೆ ಜೀಕತೊಡಗಿದೆ. ತುಳಸಿ ವಿಶ್ಯಾನ ಹೆಗಲ ಮೇಲೆ ಗೋಣು ಒರಗಿಸಿ ನಿದ್ರಾವಶಳಾಗಿ ಬಹಳ ಹೊತ್ತಾಗಿರಬೇಕು. ಮಾತಿನ ಓಘದಲ್ಲಿ ಯಾರಿಗೂ ಅವಳ ಕಡೆಗೆ ನೋಡುವದಾಗಿರಲಿಲ್ಲ. ಮಾತು ಮುಗಿಸಿದ ವಿಶ್ವಾಸ. ಅವಳನ್ನು ಮೆಲ್ಲನೆ ಮೇಲೆತ್ತಿ ತೊಡೆಯ ತಲೆದಿಂಬು ಮಾಡಿ. ಮಲಗಿಸಿಕೊಂಡ. ನನ್ನ ನಿದ್ರಾಜಡ-ಕಣ್ಣು ನೋಡಿ —

"ದಾದಲ್ಯಾ, ನೀನೂ ಮಲಕೋತಿದ್ದರ ನೋಡು. ಇಕಡೀ ತೊಡೀ ರಿಕಾಮೀ ಅದs. ಗಾಡಿಗೆ ಭಾರಂದರ, ನಿನಗ-ತುಳಸಿಗೆ ಇಬ್ಬರಿಗೂ ಸಿಟ್ಟ ಬಂತು. ಆದರ ಗಾಡೀ ಬಿಡೂ – ತೊಡೀ ಸಹಿತ ಜಬ್ಬ ಆಗಲಿಕ್ಕೆ ಹತ್ತಿತ್ತು. ಮಲಕೋ ಮಗನs, ಸಾತಾರಾ ನಾಕೇದ ತನಕಾ. ಜಹಾಕ್ಕ ಎದ್ದೀಯಂತ ಅಲ್ಲೇ."

ನಗುತ್ತ ವಿಶ್ಯಾ ಹೇಳಿದ. ಜೋರಾವರಿಯಿಂದ ತನ್ನ ಹೆಗಲಿನಾಸರ ಕೊಟ್ಟು ನನ್ನನ್ನು ಮಲಗಿಸಿಕೊಂಡ.

"ದಸ್ತಗೀರ್ಯಾ, ಈ ಸ್ಪೀಡ್‌ಲೇ ಹೋದರ, ನಾಕು-ನಾಕೂವರಿಗೆ ಊರ ಮುಟ್ಟತೇವು. ಆದರ ಆರು-ಆರೂವರೀ ಸುಮಾರಕ್ಕ ಊರಾಗ ಇರೂದು ಠೀಕ ಕಾಣಸ್ತದ. ನಾವು ಬಂದ ಬೊಬ್ಬಾಟನೂ ಅಷ್ಟು ಆಗೂದಿಲ್ಲಾ. ಕೆಲಸ ಬಗೀ ಹರದರ ಬೆಳಗ ಮುಂಜಾನೆ ನಾಕಕ್ಕs ಹೊಂಟಬಿಡೂಣು."

ವಿಶ್ವಾಸ ಹೇಳುವದು ಕೇಳಿಸಿತು. ದಸ್ತಗೀರ್ಯಾನ ಉತ್ತರ ಕೇಳುವಷ್ಟು ತ್ರಾಣ ನನ್ನಲ್ಲಿ ಉಳಿದಿರಲಿಲ್ಲ. ನಿದ್ರೆ ನನ್ನ ಕಬಜಾ ತೆಗೆದುಕೊಂಡುಬಿಟ್ಟಿತ್ತು.

○ ○ ○ ○

ನಿದ್ರೆಯ ಉಡದ ಹಿಡಿತದಿಂದ ವಿಮುಕ್ತನಾಗಿ ನಾನು ಕಣ್ಣು ಬಿಟ್ಟಾಗ, ತುಳಸಿಯ ತೊಡೆಯು ಆಸರ ಮಾಡಿಕೊಂಡು, ಹಿಂದಿನ ಸೀಟಿನಲ್ಲಿ ಅಖಂಡ ನಾನೊಬ್ಬನೇ ಮಲಗಿದ್ದು ಕಂಡಿತು. ನನಗೇ ನಾಚಿಕೆ ಎನಿಸಿತು. ಚಟ್ಟನೆ ಎದ್ದು ಕುಳಿತೆ. ನಾನು ಕಣ್ಣೊರೆಸಿಕೊಳ್ಳುವಂತೆ, ತುಳಸಿ ನಗುತ್ತ —

“ರಾಜಾ, ನನ್ನ ಮುಂಗಡೀ ಕೂಸು ಎಚ್ಚರಾತು ನೋಡು. ದಾದಲ್ಯಾ, ಇಂದೇನು ಏಳೂ ಲಕ್ಷಣs ಇಲ್ಲ ಅಂದಿದ್ರಿ. ಕುಂಭಕರ್ಣಾ ತಾನೇ ಎದ್ದಾನ. ಹಸದ ಹೊಟ್ಟೀ ಥಣ್ಣಗ ಮಾಡೂಣು. ಉಂಡ ಮುಸಲನ್ನ ಸಂಬಾಳಿಸಿಗೊಂಡ ಬಂದೇವು. ಹಸದ ಹಾರೂನ್ನs ತಡಿಯೂದು ಇನ್ನ ಕಠೀಣಾ. ದಸ್ತಗೀರಭಾಯೀ, ಗಾಡಿ ನಿಂದರಸು. ಚಹಾ-ಪಾಣೀ ಬಗೀಹರಸೂಣು.”

ಎಂದು ಮುಂದಿನ ಸೀಟಿನಲ್ಲಿ ಮಂಡಿಸಿದ ವಿಶ್ವಾಸ, ರಥಸಾರಥಿ ದಸ್ತಗೀರ್ಯಾ ಇವರಿಗೆ ಹೇಳಿದಳು.

ಗಾಡಿಯು ತೀವ್ರಧಾವನಗತಿಯನ್ನು ಅಟೋಪಿನಲ್ಲಿ ತಂದು, ದಸ್ತಗೀರ್ಯಾ ಅದನ್ನು ರಸ್ತೆಯ ಬದಿಯ ಒಂದು ವಿಶಾಲ ಆಲದಡಿಯ ನೆರಳಿಗೆ ನಿಲ್ಲಿಸಿದ. ದಸ್ತಗೀರ್ಯಾ ದಣಿದಿರಬೇಕು; ಗಾಡಿಯಿಂದ ಇಳಿದವ, ಮೈಗಡರಿದ ಧೂಳು ಕೊಡವಿಕೊಂಡು, ಕರವಸ್ತ್ರದಿಂದ ಮುಖ ಒರೆಸಿಕೊಂಡು, ವಿಶ್ರಾಂತಿಗಾಗಿ, ಆಲದಡಿಯಲ್ಲಿಯ ಹರಿದ್ವರ್ಣದ ಹುಲ್ಲುಹಾಸಿಗೆಯ ಮೇಲೆ ಕೈಕಾಲು ಚಾಚಿ ಅಂಗಾತಾದ.

“ವಿಶ್ಯಾ ‘ಟೈಮ್’ ಎಷ್ಟಾತು? ಮೂರರs ಆಗಿರಬೇಕು?”

ಎಂದು ಕೇಳಿದೆ.

“ದಾದಲ್ಯಾ, you are always behind times ಮಗನs. ಮೂರರ ಡಬಲ್ ಆಗತ ಬಂತು”

ಎಂದು ಹೇಳಿ ವಿಶ್ವಾಸ ಕೈಗಡಿಯಾರ ತೋರಿಸಿದ. ಐದೂವರೆ ಗಂಟೆಯಾಗಿತ್ತು.

ಆಲದ ಗಿಡದ ಬದಿಯಲ್ಲಿಯ ರಸ್ತೆಯ ಅಂಚಿಗೆ ನಿಂತ ಡಿ. ಎಲ್. ಬಿ.

ಮೈಲುಗಲ್ಲು, ಊರು ಕೇವಲ ಹದಿನೈದು ಮೈಲು ಉಳಿದಿರುವ ಸಾಕ್ಷಿ ಸಾರುತ್ತಿತ್ತು. ಬಹಳವಾದರೆ ಅರ್ಧ-ಮುಕ್ಕಾಲು ಗಂಟೆಯ ದಾರಿ. ಗೋಧೂಳಿಯ ಹೊತ್ತಿಗೆ ಗಾಡಿ ಊರ ಅಗಸೆಯಲ್ಲಿ ಇರಬಹುದಾಗಿತ್ತು.

ಸಾತಾರಾ ನಾಕೆಯ ಬಳಿಗೆ ಗಾಡಿ ಬಂದಾಗ, ನಾನು ಈ ಲೋಕಕ್ಕೆ ಮರಳುವ ವಿಚಾರವಿರದ ಖಾತ್ರೀ ಮಾಡಿಕೊಂಡೇ ಉಳಿದವರು ಚಹ-ಫರಾಳ ಬಗೆಹರಿಸಿದ್ದರು. ನನ್ನ ಪಾಲಿನದನ್ನು ಮೀಸಲಿಟ್ಟಿದ್ದರು. ನನ್ನ ಫರಾಳ ಮುಗಿಯಿತು. ದಾರಿಯಲ್ಲಿಯ ಚಹದಂಗಡಿಯಲ್ಲಿ ಬರಿವಾದಂತೆ ಥರ್ಮಾಸ್ ತುಂಬುತ್ತಲೇ ಬಂದಿದ್ದರು. ಮತ್ತೆ ಎಲ್ಲರದೂ ಚಹ ಮುಗಿಯಿತು. ವಿಶ್ವಾಸ ಸಿಗರೇಟು ಹಚ್ಚಿ, ನೀಳವಾಗಿ ಝುರಿಕಿ ಎಳೆದು ಹೊಗೆ ಬಿಟ್ಟು —

“ದಾದಲ್ಯಾ, ಊರ ಬಂತು ನನೇಕ್ಕ. ಕಾಕಾ ಊರ ಬಿಟ್ಟವ್ಯಾಲs, ನನಗ ಒಮ್ಮೆ ಊರ ಕಡೆಗೆ ಬರೂ ಪ್ರಸಂಗ ಬಂದಿತ್ತು. ಅದೂ ಅಗದೀ ಥ್ವಾಡೇ ವ್ಯಾಳ್ಯಾ. ಜೇಮ್-ತೇಮ್ ಎರಡು-ಮೂರು ತಾಸು ಏನರs ಊರಾಗ ನಿಂತಿರಬೇಕು. ಆಗ ಇನಾ ವಾಡೇದಾಗ ದಾದಾನ ಪ್ರವೇಶ ಆಗಿದ್ದಿಲ್ಲಾ. ವಾಡೇದ ಪದ್ಧತಿ ಒಳಗ ಹೇರ-ಫೇರ ಏನೂ ಆಗಿದ್ದಿಲ್ಲಾ. ಎಲ್ಲಾ ಕಾಕಾನ ಕಾಲಕಿರ್ದೀಯೊಳಗ ನಡಿಯೂ ಹಾಂಗs ನಡದಿತ್ತು, ರಾಧಾಕಾಕೂ-ಕಾಕಾ ಅಷ್ಟೇ ಇರಲಿಲ್ಲ ಅಲ್ಲೇ. ಹಂಪೀ ವಿಠ್ಠಲಮಂದಿರದಾಗ ಎಲ್ಲಾ ವೈಭವನೂ ಅದs. ಆದರ ವಿಠ್ಠಲ-ದೈವತನs ಇಲ್ಲಾ. ವಾಡೇದ ವೈಭವ ಅದೇ ರೀತಿ ಆಗಿತ್ತು. ಇಂದ ಮತ್ತ ವಾಡೇ ನೋಡೂ ಪ್ರಸಂಗ ಬಂತು, ದಾದಲ್ಯಾ, ಗೋಧೂಳಿ ಮೂರ್ತಕ್ಕ ವಾಡೇದ ಬಾಗಲದಾಗ ಹೋಗಿ ನಿಂದರೂ ಮಹಾಯೋಗ ಬಂತು. ಸಂಜಿ ಆತಂದರ ವಾಡೇದ ಬಾಗಲದಾಗ ಅಖಂಡ ದೀಪ ಉರೀತಿರೂವು. ದಾದಾ ಬಂದಾಗಿನಿಂದ ದೀಪಾ ಹಚ್ಚೂದನ್ನ ಬಂದ ಮಾಡಿಸಿದನಂತ. ಇದನ್ನ ರಾಚಪ್ಪ ಹೇಳಿ ಭಾಳ ಸಂಕಟಪಡತಿದ್ದಾ. ಅಖಂಡ ಹಿಲಾಲ ಉರಿಯೂದನ್ನ ನೀನೂ ನೋಡಿದ್ಯೆಲಾ ದಾದಲ್ಯಾ. ನಾವು ಲಗೂನs ಹೋಗೂಣು. ಒಂದ ದಿನಾನರೇ ದೀಪಾಹಚ್ಚೂಣು. ದೀಪದ ಬೆಳಕಿನ್ಯಾಗ ವಾಡೇದ ವೈಭವ ನೋಡೂಣು. ಏನೋ ಸಮಾಧಾನ ದಾದಲ್ಯಾ, ಏನೋ ಸಮಾಧಾನ ಅನಸ್ತದ. ಇಂದೇ ತಿರಿಗಿ ಹೋದೆವಂದರ, ಮತ್ತೆಂದ ವಾಡೇದ ದರ್ಶನೋ ಏನೋ? ಇಂದ ಯಾವ ತಿಥಿ ದಾದಲ್ಯಾ? ಇಂದ ಲಕ್ಷ್ಮಣರಾವಜೀ ಅವರ ತಿಥೀ. ಅವರ ಹಯಾತ್ಯಾಗ ವಾಡೇದ ದೀಪಾ ಎಂದೂ ಆರಿರಲಿಲ್ಲಾ.

ಕಾಕಾ ಎಂದೂ ಆ ದೀಪಾ ಆರಿಗೊಡಲಿಲ್ಲಾ. ಇಂದ ಕಾಕಾ ಪುಣೇದಾಗ, ಲಕ್ಷ್ಮಣ ರಾವಜೀ ಅವರ ತಿಥೀ ಮಾಡಿರಬೇಕು. ತಿಲತರ್ಪಣ ಒಪ್ಪಿಸಿರಬೇಕು. ದಾದಲ್ಯಾ, ಈ ತರ್ಪಣದಿಂದ ಲಕ್ಷ್ಮಣರಾವಜೀ ಅವರಿಗೆ ತೃಪ್ತೀ ಆಗಿರಲಿಕ್ಕಿಲ್ಲಾ. ಅವರ ಆತ್ಮಕ್ಕ ತೃಪ್ತೀ ಅನಿಸಿರಲಿಕ್ಕಿಲ್ಲಾ. ಇಂದ ವಾಡೇದ ದೀಪ ಹತ್ತಿದರ – ಹಿಲಾಲು ಝಗಾ ಝಗಾ ಉರದರ ಅವರ ಆತ್ಮಾಕ್ಕ ತೃಪ್ತಿ ಅನಿಸೀತು. ಅದಕ್ಕಂತೇ ತಮ್ಮ ತಿಥೀ ದಿನಾ, ನನ್ನ ಕರಿಸಿಗೊಂಡರ ಕಾಣಸ್ತದ. 'ವಿಶ್ಯಾ, ನೀನಽ ದೀಪಾ ಹಚ್ಚು, ನನ್ನ ಆತ್ಮಾ ಶಾಂತ ಆಗತದಂ'ತ ಅಂದರ ಕಾಣಸ್ತದ.

ನಾ ಹುಟ್ಟಿದಾಗ ಅವರು ಭಂಗಾರದ ಹೂವು ಹಾರಿಸಿಗೊಂಡರು. ಊರೊಳಗಿನ ಒಂದ ಮನೀ ಬಿಡದೆ ಗಾಡೀ ತುಂಬಿ ಸಕ್ಕರಿ ಹಂಚಿದರು. ನಾ ಕೂಸಿದ್ದಾಗ, ಕಾಕಾನ ತೊಡೀಮ್ಯಾಲಽ, ರಾಧಾಕಾಕೂನ ತೊಡೀಮ್ಯಾಲಽ ಆಡಿ ಕೋತ ಮಲಗಿದಾಗ, ಅವರು ಸನೇಕ ಬಂದು ಅಗದೀ ಕಣ್ಣಾಗ ಕಣ್ಣ ಇಟ್ಟು ನನ್ನ ನೋಡತಿದ್ದರಂತ. "ರಾವಜೀ, ಕೂಸಿನ ಕಣ್ಣು, ಮಾರೀ, ಮೈಮಾಟಾ ನೋಡಿದರ ಶಿವರಾಮಪಂತರ ನೆನಪಽ ಬರತದ. ಮಾಡೀಮ್ಯಾಲಿನ ಅವರ ತಸ್ಬೀರಿನ್ಯಾಗಿನ ಕಣ್ಣು – ಈ ಕೂಸಿನ ಕಣ್ಣು ಹುಬೇಹೂಬ ಹಂಗೇ ಅವಽ. ಕೈ-ಕಾಲು, ಈಗಽ ಹ್ಯಾಂಗ ಬೀಸ ಅವಽ ನೋಡು. ರಾವಜೀ, ನಿನ್ನ ದೇಖರಖಿಯೊಳಗಽ ಹುಡಗ ಬೆಳೀಲಿ" ಅಂತಽ ಕಾಕಾಗ ಹೇಳತಿದ್ದರಂತ. "ರಾಧಾ, ನಂದಽ ದೃಷ್ಟಿ ಆದೀತು ಹುಡಗಗ್ಗಽ. ದೃಷ್ಟೀ ನಿವಾಳಿಸಿ ಒಗೀ" ಅಂತ ಕಾಕೂಗ ಹೇಳತಿದ್ದರಂತ. ಲಕ್ಷ್ಮಣ ರಾವಜೀ ಅವರ ಮಾತು, ಕಾಕಾ-ಕಾಕೂ ನಡಸಿದರು. ತಮ್ಮ ದೇಖರಖಿ ಒಳಗ ನನ್ನ ಬೆಳಸಿದರು. ತಮ್ಮ ಎಲ್ಲಾ ಸತ್ವನೂ ನನಗ ದಾನಮಾಡಿದರು. ಇಂದ ಲಕ್ಷ್ಮಣರಾವಜೀ ಅವರ ಆತ್ಮಾ ತೃಪ್ತ ಆಗಬೇಕು ದಾದಲ್ಯಾ. ಇಂದ ವಾಡೇದ ಮುಂದಿನ ದೀಪ ಹತ್ತಬೇಕು. ಅವರ ಆತ್ಮಾ ಎಲ್ಲೇ ಇರಲಿ, ಅಲ್ಲೀದೇ ಅದು ವಾಡೇದ ಮುಂದ ದೀಪ ಹತ್ತಿದ್ದನ್ನು ನೋಡಬೇಕು. ದೀಪಹತ್ತಿದರ ಅವರ ಆತ್ಮಾ ಖರೇನಽ ಶಾಂತ ಆತೂ ಅನೂ ಸಮಾಧಾನ ಬರತದ ನನಗ.

ದಾದಲ್ಯಾ, ಹಿಲಾಲು ಇರಬೇಕೇನು? ಇಂದ ಅವು ಜಂಗ ತಿನಕೋತ ಬಿದ್ದಿರ ಭೇಕು. ಕಾಕಾ ದೊಡ್ಡೂ ಖಬ್ಬಿಣ ಬುಟ್ಟೀ ಮಾಡಿಸಿದ್ದರು. ಅದರಾಗ ಹತ್ತೀಕಾಳ ಹಾಕಿ, ವಾಡೇದ ಮುಂದ ಅಖಂಡ ದೀಪಜ್ಯೋತಿ ಬೆಳಗಸ್ತಿದ್ದರು. ಇಂದ ಆ ಖಬ್ಬಿಣ-ಬುಟ್ಟಿಗೆ ತೂತ ಬಿದ್ದಿರಬೇಕು. ದಾದಾ, ಮನೀ ಮುರದಿದ್ದಾ. ತನ್ನ ಸಂಸಾರ

ಒಡಕೊಂಡಿದ್ದಾ. ತಾಯೀನ್ನ ಅಗತಿಕ ಮಾಡಿದ್ದಾ. ಕಾಕಾನ ಸಂಕಟಕ್ಕ ಸೀಮಾ ಇಲ್ಲದ ಹೀನ ಕೃತೀ ಮಾಡಿದ್ದಾ. ಆದರ ಅಂವಾ ವಾಡೇದ ವೈಭವ ಮುಕ್ಕ ಮಾಡ ಬಾರದಾಗಿತ್ತು. ಆದರ ವೈಭವಕ್ಕ ತನ್ನ ಕೈಲೇನs ಕಪ್ಪ ಹಚ್ಚಬಾರದಾಗಿತ್ತು. ನಿಧಾನ ಅದರ ಸ್ವರೂಪನರೇ ಕಾಯಬೇಕಾಗಿತ್ತು. ವಾಡೇ ಅವಂದೂ ಇತ್ತು. ಅಂವಗೂ ವಾಡೇದ ಅನ್ನದ್ದು ನೀರಿಂದು ಋಣಾ ಇತ್ತು. ಕಾಕೂನಂಥಾ ಲಕ್ಷ್ಮಿಯ ವಾಸ ಇತ್ತು ವಾಡೇದಾಗ, ದಾದಲ್ಯಾ. ಇನಾ, ವಾಡೇದಾಗ ಪಂತರ ಮನೀ ದೇವತಾ ಅವs. ದೊಡ್ಡ-ದೇವರು ಇದ್ದಾರ. ಒಳಗ ಪೂಜಿ-ಪುನಸ್ಕಾರಾ ಎಲ್ಲಾ ಅದs. ಆದರ ಹೊರಗ, ದಾದಲ್ಯಾ, ಕತ್ಲೆ ಇಡಿಗೇದ. ಅಗದೀ ಕಮುಕಾಳ ಅಡರೇದ. ಇಂದ ಅಲ್ಲೆ ದೀಪ ಇಲ್ಲಾ, ಧೂಪ ಇಲ್ಲಾ. ಬೆಕೋ ಅಂತಿರಬೇಕು ಆ ವಾಡೇ. ಲಕ್ಷ್ಮಣರಾವಜೀ ಅವರ ಆತ್ಮಾ, ಸಂಕಟಪಟಕೋತ, ಅಲ್ಲೇ ಘುಟಮುಳಸ್ತಿರ ಬೇಕು!

ಅಂಗಳಾ, ಧಾಬೇ, ಪಡಸಾಲಿ, ಅಡಗೀಮನೀ, ಹಿತ್ತಲಾ, ವಾಡೇದ ದೊಡ್ಡ ಮಾಡೀ, ಕತ್ತಲಿಯ ಮುಸಕ ಎಳಕೊಂಡು, ಅಗದೀ ಮುದ್ದಿ ಆಗಿ ಕೂತಿರಬೇಕು. ಹಿತ್ತಲದಾಗಿನ ವೃಂದಾವನಾ – ಅಂಗಳದಾಗಿನ ವೃಂದಾವನಾ, ನಿತ್ಯ-ದೀಪೋತ್ಸವ ಕಾಣತಿದ್ದು. ಕಾರ್ತಿಕೋತ್ಸವನs ಇಳಧಾಂಗ ಆಗಿರತಿತ್ತು ಅಂಗಳದಾಗ. ಐವತ್ತು-ಅರವತ್ತು, ಲಕಲಕಸೂ ಹಿತ್ತಾಳೀ ಪ್ರಣತೀ, ನೀರಾಂಜನಾ ಬೆಳಗಿತಿದ್ದು. ಸದಾ ಕಾಲಾ ತುಳಸಿ ಮಲಮಲಸತಿತ್ತು. ಇಂದ ವೃಂದಾವನದಾಗ ಕರಕಿ ಬೆಳದಿರಬೇಕು! ದಾದಲ್ಯಾ, ನಮ್ಮ ಕಪಿಲಾಧೇನೂ ಇನಾ ಹಯಾತ ಅದs ಅಲ್ಲs? ನನ್ನ ಗುರುತು ಹಿಡದೀತೇನು ದಾದಲ್ಯಾ? ನಾ ಸೂಟ್ಯಾಗ ಊರಿಂದ ಬಂದರ, ತಲಬಾಗಿಲ ದಾಗಿಂದೇ, "ಕಾಕೂ" ಅಂತs ಒದರತಿದ್ದೆ. ನನ್ನ ಧನೀ ಕಿವೀಗೆ ಬೀಳೂದಷ್ಟೇ ತಡಾ, ಧಾಬೇದಾಗಿನ ಕಪಿಲಾ, ಕರುವಿನ ಮೈ ನೆಕ್ಕೂದನ್ನ ಬಿಟ್ಟು "ಹಂಬಾs" ಅಂತ ಒದರಿ ನನ್ನ ಸ್ವಾಗತ ಮಾಡತಿತ್ತು. ಕಾಕೂ ಸದಾ ಅಂತಿದ್ದರು: "ವಿಶ್ಯಾ, ನಿಂದೂ-ಕಪಿಲಾಂದೂ ಏನೋ ಜನ್ಮಾಂತರದ ಋಣಾ ಇರಬೇಕ"ಂತ. ಅಗದೀ ಖರೇ ದಾದಲ್ಯಾ. ಸೂಟಿಗೊಮ್ಮೆ ನಾ ಊರಿಗೆ ಹೋದಾಗ, ಕಪಿಲಾ ಅದೇ ಈದಿರ ಬೇಕು. ಗಿಣ್ಣದ ವಡೀ ತಿನಸದೆ ಕಪಿಲಾ ಎಂದೂ ಬಿಡಲಿಲ್ಲಾ. ಹತ್ತೆಂಟ ಸೂಲ ಆದೂ. ಕಪಿಲಾ ಅಗದೀ ಥಕಾಸಿರಬೇಕು.

ಖಾದರ್ ವಾಡೇದಾಗs ಇರತಾನ. ನನ್ನ ನೋಡಿದರ ಸಾಕು. ವಿಶ್ವಾಸ್

ಅಂತ ಓಡಿ ಬಂದು ಕೊಳ್ಳಿಗೇ ಬೀಳತಾನ. ನಾನು ಹತ್ತ ವರ್ಷದ ಕಡವ ಆಗೂ ತನಕಾ ತನ್ನ ಹೆಗಲಮ್ಯಾಲ ಕೂಡಿಸಿಗೊಂಡು ಅಡ್ಡ್ಯಾಡಿದ್ದಾ. ಕಾಕಾ-ಕಾಕೂನ ತುಡಗಲೇ ತನ್ನ ಮನೀಗೆ ಕರಕೊಂಡು ಹೋಗಬೇಕು; ಚೊಂಗೇದ ಮೊದಲನೇ ನೈವೇದ್ಯಾ ನನಗೇ ತೋರಸಬೇಕು. ಕಾಳು-ಕಡೀ ಅಳಿಯೂ ಮುಂದs, ಮೊದ ಲನೇ ಮಾಪಿಗೆ, "ಲ್ಯಾಭ" ಅಂತ ಹೇಳಿ ಅಳೀಲಿಕ್ಕೆ ಸುರೂಮಾಡತಾರ. ಖಾದ ರನೂ ಹಾಂಗೇ ಮಾಡತಿದ್ದಾ. ಹತ್ತೀ ಬೀಡ ಸುರೂ ಆತಂತ್ರ, ಸಂಜೀಕಡೇ ಹತ್ತೀ ಗಂಟು ಬರೂವು ವಾಡೇದ ಕಡೇ. ಮೊದಲನೇ ದಿನಾ ಕಾಟಾಕ್ಕ ಹಚ್ಚೂ ಮುಂದs, ಕಾಟಾಕ್ಕ ನಮಸ್ಕಾರ ಮಾಡಿ, ಪಂಥೇರದಷ್ಟು ಹತ್ತೀ ಬಾಜೂಕ್ಕ ಸರಿಸಿ ಇಡ ಬೇಕು. ಹತ್ತೀ ಬಿಡಸೂ ಹೆಣ್‌ಮಕ್ಕಳು "ಇದು ಯಾ ದೇವರಿಗೋಪಾ?" ಅಂತ ಕೇಳಿದರ, ಖಾದರ್ ಹೇಳಬೇಕು: "ವಿಶ್ವಾಸನ ಕರದಂಟ-ಖಾತೇಕ್ಕ-ಬೇ" ಅಂತs. ಖಬ್ಬಿನ ಗಾಣಾ ಆಡಲಿಕ್ಕೆ ಸುರೂ ಆದ ದಿನಾ, ಮೊದಲ ಹಾಲು ಕುಡಿಯೂವಂವಾ ನಾನು. "ಕಾಕಾ, ವಿಶ್ವಾಸ ಕೈ ಹಚ್ಚಿದರ, ಮಣ್ಣ ಸುದ್ದೇ ಭಂಗಾರ ಆಗತದ. ಅಂವಾ ಹುಟ್ಟಿದ ವರ್ಷ ಬಂದ ಪೀಕ ಇಡಲಿಕ್ಕೆ ವಾಡೇಕ್ಕ ವಾಡೇನs ಸಾಲಲಿಲ್ಲಾ. ಪಂಥೇರ ಭಂಗಾರ ಖರೀದಿ ಮಾಡಿದೆ ಅಂತs, ನೀವs ಅಂತಿದ್ರಿ. ಅಂತs ಕಾಕಾಗ ಹೇಳಾಂವಾ. ಖಾದರಗ, ನಾ ಅಂದರ ಅಷ್ಟ ವಿಶ್ವಾಸಾ.

ವೆಂಕಣ್ಣಮಾಸ್ತರೂ ಇರಬೇಕು. ತಮ್ಮ ಶಿಷ್ಯಾ ಡಾಕ್ಟರ ಆಗಾಂವಾ ಅನೂ ದನ್ನ ಕೇಳ್ಯಾರ. ನಾ ಬಂದಿರೂ ಸುದ್ದಿ ತಿಳದರ ಸಾಕು. ಆರ ತಾಸ ರಾತ್ರ್ಯಾಗ ಎದ್ದ ಬರತಾರ. ವಿಶ್ಯಾ ಬಂದಾನಂತs ಪರಶ್ಯಾ. ಬಂಡ್ಯಾ ಎಲ್ಲಾರೂ ದಿಕ್ಕೆಟ್ಟು ಓಡಿ ಬರತಾರ. ದಸ್ತಗೀರ್ಯಾ, ಒಮ್ಮೆ ಬಸವಣ್ಣನ ಜಾತ್ರ್ಯಾಗ ತುಳಸೀದು, ರಾಧಾನ ಆಟಾ ನೋಡಲಿಕ್ಕೆ ಹೋಗಿದ್ವಿ. ಎಲ್ಲಾರಿಗೂ ತುಳಸೀದೇ ಧ್ಯಾಸಾ. ಪರಶ್ಯಾ-ಬಂಡ್ಯಾ ತುಳಸಿಗೆ ಭಾರೀ ಹಪಾಪಿಸಿದ್ದರು. ತುಳಸಿ, ವಿಶ್ಯಾನಕೀ ಆಗ್ಯಾಳ ಅನೂದನ್ನ ನೋಡಿ ದಂಗ ಆಗತಾರ. ದಾದಲ್ಯಾ, ಗೋವಿಂದಭಟ್ಟಾ ಏಳಕೋತ-ಬೀಳಕೋತ ಬರತಾನ ಪಾಪ. ತನ್ನ ಹಸರ-ಶಾಲಿನ ಮುಸಕಿನ್ಯಾಗ ನನ್ನ ಬಿಕ್ಕೊಂಡುಬಿಡತಾನ. ಮಲಗಿದ ಮಂದಿನ್ನ ಎಬ್ಬಿಸಿ, ವಿಶ್ಯಾ ಬಂದಾನಂತ ಹೇಳಿ ಬರತಾನ. ಅಪರಾತ್ರ್ಯಾಗ ಗಣಪತಿಗೆ ಮಂಗಳಾರತೀ ಸುರೂ ಮಾಡತಾನ. ಗೌಡರಿಗೆ ಭಾನನs ಉಳಿಯೂ ದಿಲ್ಲ ದಾದಲ್ಯಾ. ಕಾಕಾ-ಗೌಡರು ಏಕಜೀವಾ-ಏಕರಸಾ ಆಗಿ ಬೆರತಾರ. ನಾ ಬಂದದ್ದು ಕೇಳಿ ಧಾವಿಸಿ ಬರತಾರ. "ಕಾಕಾ ಬರೂ ಸುದ್ದೀ ತಂದೇನು ವಿಶ್ಯಾ"

ಅಂತs ತೆಕ್ಕಿಹಾಯ್ತಾರ. ಅವರ ಗಂಗೂ, ಊರಾಗ ಇರತಾಳೇನ ದಾದಲ್ಯಾ? ಎಷ್ಟ ದಿನಾ ಆತು ಆಕಿನ್ನ ನೋಡಿ? ನಾಕ ಮಕ್ಕಳ ತಾಯಿ ಆಗಿರಬೇಕು. ಒಂದ ದಿನಾ, ನಾನು ಗೌಡರಿಗೆ ಅಂದಿದ್ದೆ: "ಗೌಡರs, ನಾ ಆದರs ಗಂಗೀನ್ನs ಮದಿವಿ ಆಗಾಂವಾ. ಆಕಿನ್ನ ವಾಡೇಕ್ಕ ಕಳಸರೀ" ಅಂತ. ಗೌಡರು ಸಂಜೀಮುಂದ ವಾಡೇಕ್ಕ ಬಂದಾಗ ಕಾಕಾಗ ಹೇಳಿದರು: "ರಾವಜೀ ಈ ಜನ್ಮದಾಗ ಜ್ಯಾತಿ ಬ್ಯಾರೇ ಆತು. ಮುಂದಿನ ಜನ್ಮದಾಗ ಒಂದೇ ಜಾತ್ಯಾಗ ಇಬ್ಬರೂ ಹುಟ್ಟಿ ಬರೂಣು. ವಿಶ್ಯಾನ ಆಶಾ ಪೂರ್ಣ ಮಾಡೂಣಂತs. ಇನ್ನ ಅರ್ಧಾ ತಾಸ, ದಾದಲ್ಯಾ. ಈ ವೈಭವ ನೋಡಲಿಕ್ಕೆ ಹೋಗತೀನಿ. ಎಲ್ಲಾರ ವಿಶ್ವಾಸನೂ ಅದs, ಎಲ್ಲಾರ ಪ್ರೀತಿನೂ ಅದs. ವಿಶ್ಯಾ ಕಾಕಾನ ರೂಪದಾಗ ಊರಿಗೆ ಬಂದಾs ಅಂತs ಎಲ್ಲಾರ ಪ್ರೀತಿಗೂ ಮಹಾಪೂರ ಬರತ್ವದ. ನನಗ ಎಲ್ಲಾ ವೈಭವನೂ ಕಾಣಸ್ತದ. ಆದರ, ವಾಡೇದ ವೈಭವ ಅಷ್ಟs ಕಾಣಸಧಾಂಗ ಆಗತದ. "ಕಾಕಾ-ನೀನು ವಾಡೇ ಬಿಟ್ಟರಿ, ಅಂತs ವಾಡೇದ ಮಾರಿ ಬಾಡಿಧಾಂಗ ಆಗಿರತದ. ಇಂದ, ಕಾಕಾ, ಗಿರಿಜಾ, ಸೋನಕ್ಕಾ, ಸುರ್‍ಯಾ, ಸತೀಶ, ಕಿಶ್ಯಾ ಬಂದಿದ್ದರ ವಾಡೇದ ಕಳೇನs ಬ್ಯಾರೇ ಆಗತಿತ್ತು. ವಾಡೇ ತುಂಬಿದ ಮುತ್ತೈದಿ ಹಾಂಗs ದೀಪ್ತಿಮಂತ ಆಗಿ ಕಾಣಸ್ತಿತ್ತು. ನಾ ಇಲ್ಲೇ ನಿಂತಬಿಡತೀನಿ ದಸ್ತಗೀರ್‍ಯಾ. ನೀನು-ದಾದಲ್ಯಾ ಇಬ್ಬರೂ ಹೋಗಿ ಎಲ್ಲಾರನೂ ಕರಕೊಂಡು ಬರ್‍ರಿ. ಕಾಕಾ, ವಿಶ್ಯಾ ವಾಡೇದಾಗ ದೀಪಾ ಹಚ್ಯಾನ, ನೋಡ ಬರ್‍ರ್‍ಯಂತ ಕರಕೊಂಡ ಬರ್‍ರಿ. ಕಾಕಾ-ತಾಯೀ ಕಣ್ಣು ಆ ವೈಭವ ನೋಡಲಿ.

ದಾದಲ್ಯಾ, ಸುರ್‍ಯಾನ ಲಗ್ನಾ ವಾಡೇದಾಗs ಮಾಡೂಣು. ಅಗದೀ ವೈಭವ ದಿಂದ ಮಾಡೂಣು. ನಾ ಇಂದಿನಿಂದ ವಾಡೇದ ಸುಣ್ಣಾ-ಬಣ್ಣಾ ಸುರೂ ಮಾಡ ಸ್ತೀನಿ. ತಳಲು-ತೊರಣಾ ಕಟ್ಟಸ್ತೀನಿ. ಭಾರೀ ಹಂದರಾ ಹಾಕಸ್ತೀನಿ. ಅಖಂಡ ದೀಪೋತ್ಸವ ನಡಸ್ತೀನಿ. ನಕ್ಷತ್ರಲೋಕನs ಇಳಧಾಂಗ ಅನಿಸಿರಬೇಕು ವಾಡೇ ನೋಡಿದವರಿಗೆ – ಹಾಂಗ ದಿವ್ಯ ದೀಪೋತ್ಸವ ಮಾಡಸ್ತೀನಿ. ದಸ್ತಗೀರ್‍ಯಾ, ನನ್ನ ಪರೀಕ್ಷಾ ಹೋಗಲಿ, – ನನ್ನ ಎಂ.ಬಿ.,ಬಿ.ಎಸ್. ಹೋಗಲಿ – ನನ್ನ ಡಾಕ್ಟರ ಡಿಗ್ರೀ ಹೋಗಲಿ – ಸಾಂಗಲೀ ಹೋಗಲಿ – ದೊಡ್ಡ ದವಾಖಾನೀ ತಗಿಯೂ ಆಶಾ ಹೋಗಲಿ. ಸಾಂಗಲೀ ಆಶಾ... ಹಾಂ... ವಸೂನ ಆಶಾ... ಅದೂ ಹೋಗಲಿ ದಾದಲ್ಯಾ... ಅದೂ ಹೋಗಲೀ......

"ವಿಶ್ಯಾss..."

ತುಳಸಿ ಒದರಿದಳು.

"ವಸೂನು ಬರಲಿ ತುಳಸೀ, ವಸೂನು ಬರಲಿ. ವಸೂ ಬಂದಾಳ ತುಳಸೀ. ವಸೂ ಬಂದಾಳ. ವಿಶ್ಯಾ ಇರಲ್ಲೆ ನೀ ಇರ್ವಾಂಗ ಪಸೂನು ಇದ್ದಾಳ. ನೀನು-ವಸೂ ಏಕಜೀವಿ ಆಗಿ, ವಿಶ್ಯಾನಲ್ಲೆ ಏಕರಸಾ ಆಗೀರಿ. ವಾಡೇದಾಗ ನಾನು ಕಾಲಿಡೂ ಗಳಿಗಿ ಬಂದಿತ್ತು. ನಾ ದೀಪಾ ಹಚ್ಚಾಗ, ನನ್ನ ಜೋಡೀ ನೀ ನಿಂದರಬೇಕಾಗಿತ್ತು. ಅದಕೇ ನೀ ಬಂದಿ ತುಳಸಿ. ವಾಡೇದ ಬಾಗಲಿಗೆ ದಾಂಪತ್ಯದ ಕಡಿಂದ ಪೂಜಿ ಮಾಡಸು ದಾದಲ್ಯಾ. ನಾ ದೀಪಾ ಹಚ್ಚತೀನಿ. ತುಳಸಿ ಆರತೀ ಮಾಡಲಿ. ವಾಡೇದ ವೈಭವಕ್ಕ ಇಂದಿನಿಂದ ಶ್ರೀಕಾರ ನಾವೇ ಬರೆಯೂಣು.

ದಾದಲ್ಯಾ, ಏನ ಅಂತಿದ್ದೆ ನಾನು? ನಾ ಏನಂತಿದ್ದೆ? ಏನಿಲ್ಲ ದಸ್ತಗೀರ್ಯಾ. ಏನಿಲ್ಲಾ! ಊರ ಸನೇಕ ಬಂತು. ವಾಡೇದ ದರ್ಶನಯೋಗ ಬಂತು. ಜೀವ ಬೇಭಾನ ಆಗಿತ್ತು. ಆ ಮಂಗಲ ಗಳಿಗಿ – ಆ ಮಂಗಲಮೂರ್ತದ ಕಲ್ಪನಾದಿಂದ ಜೀವ ಬೇಭಾನ ಆಗಿತ್ತು. ಬ್ರಾಹ್ಮೀಸ್ಥಿತೀಗೆ ಹೊತ್ತು-ವ್ಯಾಳ್ಯಾ ಯಾಕ ಬೇಕು ದಾದಲ್ಯಾ? ಸರ್ವಕ್ಷಣಾ ಮಂಗಲಕ್ಷಣಾ – ಸರ್ವ ಮೂರ್ತಾ ಮಂಗಲಮೂರ್ತಾ.

"ಏಷಾ ಬ್ರಾಹ್ಮೀ ಸ್ಥಿತಿಃ ಪಾರ್ಥ ನೈನಂ ಪ್ರಾಪ್ಯ ವಿಮುಹ್ಯತಿ ।
ಸ್ಥಿತ್ವಾಸ್ಯಾಮಂತಕಾಲೇಪಿ ಬ್ರಹ್ಮನಿರ್ವಾಣ ಮೃಚ್ಛತಿ ॥

ಅಂಥಾ ದಿವ್ಯ ಕ್ಷಣಾ ಬಂತೇನ ದಾದಲ್ಯಾ? ನಾ ದೀಪಾ ಹಚ್ಚೂದರಾಗ ಬ್ರಹ್ಮನಿರ್ವಾಣ-ಸ್ಥಿತಿಗೇ ಮುಟ್ಟೂದು, ಅಂಥಾ ದಿವ್ಯ ಕ್ಷಣಾ ಬಂಧಾಂಗ ಕಾಣ ಸ್ತದ. ದಾದಲ್ಯಾ, ನಾ ಭಾಳ ಧೂರ ಹೊಂಟಿದ್ದೆ. "ನ ತತ್ರ ಸೂರ್ಯೋ ಭಾತಿ ನ ಚಂದ್ರ ತಾರಕಾಃ" ಲೋಕದ ಕಡೇ ನನ್ನ ಪ್ರಯಾಣ ನಡದಿತ್ತು. ನನಗ ಏನೂ ಕಾಣಸ್ತಿದ್ದಿಲ್ಲ ದಾದಲ್ಯಾ. ಬರೇ ವಾಡೇ! ನನ್ನ ಕೈಯಾಗ ಹಿಲಾಲು ಅಷ್ಟೇ ಝುಗಾ ಝುಗಾ ಉರೀತಿತ್ತು. ಅದರ ಬೆಳಕಿನ್ಯಾಗ ವಾಡೇದ ದಾರಿ ಕಾಣಸ್ತಿತ್ತು. ವಾಡೇದ ಬಾಗಲದಾಗ ದೀಪಾಹಚ್ಚಿದ ಸಂಭ್ರಮದಿಂದ ನಾ ಅಗದೀ ಬೇಭಾನ ಆಗಿದ್ದೆ. ತುಳಸಿ, "ವಿಶ್ಯಾ" ಅಂತ ಒದರಿದಳು. ತುಳಸಿಗೆ ಪ್ರೀತಿ ಉಕ್ಕಿಬಂದರ, ಆಕೀಗೆ ಬ್ಯಾರೇ ಹೆಸರು ಸೂಚಸೂದಿಲ್ಲಾ. ಮುಕ್ತಹೃದಯದಿಂದ – ಮುಕ್ತಕಂಠದಿಂದ "ವಿಶ್ಯಾ" ಅಂತ ಒದರತಾಳ. ಆಕೀ ಆರ್ತಧನೀ ಕೇಳಿಸ್ತು್ಯ. ನನ್ನ ತುಳಸೀ ಧನೀ

ಕೇಳಿಸಿತು. ಭಾನ ಬಂತು. ನಾ ಎಲ್ಲ್ಯೋ ಹೊಂಟಾವಾ ತಿರಗಿ ಬಂದೆ. ತುಳಸಿ ಕರೀದೇ ಇದ್ದರ, ನಾ ಭಾಳ ಧೂರ ಹೊಗತಿದ್ದೆ. ಏನೋ ಬಡಬಡಸತಿದ್ದೆ. ದಸ್ತ ಗೀರ್‍ಯಾ, ಏಳು ಸವ್ವಾಸಾಹಾ ಆತು. ಹೊಂಡೂಣು ಇನ್ನs. ಕತ್ಲೆ ಆಗೂದರಾಗ ಊರಾಗ ಇರತೇವು."

ನಿಧಾನವಾಗಿ ನಮ್ಮ ಕಾರು ದಾರಿ ಕಡಿಯತೊಡಗಿತು. ತುಳಸಿಯ ಕರೆ ಕೇಳಿ, ವಿಶ್ವಾಸ ಆ ಲೋಕದಿಂದ ಈ ಲೋಕಕ್ಕೆ ಬಂದಿದ್ದ. ನಮಗೆ ಆ ಲೋಕದ ದರ್ಶನ ಮಾಡಿಸಿದ್ದ. ರಾವಜೀಕಾಕಾ ಅವರ, ಪಂತಕುಟುಂಬದ ಪ್ರಸಾದತುಲ್ಯ ಹರ್ಮ್ಯದ, ದಿವ್ಯ ವಾಡೆಯ ವೈಭವದರ್ಶನವಾಗಿತ್ತು. ಅಂಗಾಂಗ, ವಸನ-ವಸ್ತ್ರ ಭೂಷಿತೆಯಾಗಿ, ತುಂಬಿದ ಮುತ್ತೈದೆಯಂತೆ, ವರಮಹಾಲಕ್ಷ್ಮಿಯಂತೆ, ಪಂತರ ವಾಡೇ, ರಾಜಲಕ್ಷ್ಮಿಯ ಠೀವಿಯಲ್ಲಿ ವಿರಾಜಮಾನವಾದದ್ದು ಕಾಣತೊಡಗಿತು. ಪಂತಕುಟುಂಬ ಮೇಳವಿಸಿ, ಆ ರಾಜಲಕ್ಷ್ಮಿಗೆ, ನತಶಿರವಾಗಿ ಬಾಗಿ ವಂದಿಸುವ ಚಿತ್ರ ಕಂಡಿತು. ಶಿವರಾಮಪಂತರು, ಗಂಗಾಧರಪಂತರು, ಬಳವಂತ ರಾವಜೀ, ಲಕ್ಷ್ಮಣ ರಾವಜೀ, ರಾವಜೀಕಾಕಾ ಇವರೆಲ್ಲ ಅನರ್ಘ್ಯ-ಪುಷ್ಪರಾಶಿಯನ್ನು ರಾಜಲಕ್ಷ್ಮಿಯ ಸನ್ನಿಧಿಗೆ ಸಮರ್ಪಿಸುತ್ತಿದ್ದರು. ರತ್ನಖಚಿತ-ಸ್ವರ್ಣ-ತಬಕದಲ್ಲಿ, ಮಹಾನೀರಾಂಜನ ಗಳನ್ನಿಟ್ಟು, ರಾಧಾಕಾಕೂ, ಸೋನಕ್ಕ, ವಸೂ, ಶಕೂ ಆರತಿ ಎತ್ತಿ ಬೆಳಗುತ್ತಿದ್ದರು. ಗಿರಿಜಾ, ಬಸವಂತಿ, ತುಳಸಿ, ರಾಜಲಕ್ಷ್ಮಿಗೆ ಚವರಿ-ಚಾಮರ-ಸೇವೆ ನಡೆಸಿದ್ದರು. ವಿಶ್ಯಾ. ಸುರ್‍ಯಾ. ಸತೀಶ, ಕಿಶೋರ ಇವರೆಲ್ಲ ಹಿಲಾಲುಹಸ್ತರಾಗಿ, ದೀಪಧಾರಿ ಗಳಾಗಿ ರಾಜಲಕ್ಷ್ಮಿಯ ಮಹಾಹರ್ಮ್ಯದ ಸುತ್ತೂ ಗಸ್ತಿಹಾಕುತ್ತಿದ್ದರು.

ವಿಶ್ವಾಸ ಆ ಲೋಕದಿಂದ ಈ ಲೋಕಕ್ಕೆ ಮರಳಿದ್ದರೂ ತನ್ನ ದರ್ಶನಕಥನ ದಿಂದ ನನ್ನನ್ನು ಬೇಭಾನನನ್ನಾಗಿಸಿ ಅಲ್ಲಿಯೇ ಬಿಟ್ಟು ಬಂದಿದ್ದ. ದಾದಲ್ಯಾ ಇನ್ನೂ ಭಾವಸ್ವರ್ಗವಿಹಾರಿಯೇ ಆಗಿದ್ದ. ಆ ದರ್ಶನದ ಅದ್ಭುತ ಗುಂಗಿಯಲ್ಲಿಯೇ ಇದ್ದ. ಅದರ ವಿಸ್ಮಯವಿಲಾಸದಲ್ಲಿಯೇ ಇದ್ದ.

"ದಾದಲ್ಯಾ. ಊರು ಆಗದೀ ಸನೇಕ್ಕ ಬಂತು. ಅದ್ನೋಡು, ಹುಡೇ ಕಾಣಸಲಿಕ್ಕೆ ಹತ್ತಿತು. ಗಣಪತಿಗುಡೀ ಗೋಪುರ ನೋಡು, ಹ್ಯಾಂಗ ಗಿಡದಾಗ ಕಣ್-ಮುಚ್ಚಣಕಿ ಆಡಲಿಕ್ಕೆ ಹತ್ತೇದ ! ಬಸವಣ್ಣ ದೇವರ ತೇರಿನ ಕಳಸಾ ನೋಡ ದಾದಲ್ಯಾ. ಹ್ಯಾಂಗ ಆಕಾಶದಾಗ ಮಾರೀ ನೋಡಲಿಕ್ಕೆ ಎದ್ದ ನಿಂಥಾಂಗ ಆಗೇದ. ವಾಡೇದ ಸುತ್ತಮುತ್ತ ಗಿಡಾ ಭಾಳ ದಸ್ತಗೀರ್‍ಯಾ. ಪನ್ನಾಸ-ಸಾರ ವರ್ಷದ ಗಿಡಾ.

ಅಖಂಡ, ವಾಡೇ ಕಾಯಕೋತ ನಿಂತಾವ. ಅಗದೀ ಸಮೀಪಕ್ಕ ಹೋಗೂ ತನಕಾ ವಾಡೇ ಕಾಣಸೂದಿಲ್ಲಾ. ಪೀರನ ದರ್ಬಾರದಾಗಿನ ನಿಶಾನೀ ನೋಡು, ಸ್ವಚ್ಛಂದ ಆಗಿ ಹ್ಯಾಂಗ ಫಾಳ್ಯಾಗ ಆಡಲಿಕ್ಕೆ ಹತ್ತೇದ. ಗುಡೀ-ಗೋಪುರಾ ಅಗದೀ ಸ್ಪಷ್ಟ ಕಾಣಸಲಿಕ್ಕೆ ಹತ್ಯಾವ್ರು. ಸೂರ್ಯ್ಯಾ ಭಂಗಾರದ ನೀರಿನ ಅರ್ಘ್ಯಾ ಹಿಡಧಾಂಗ ಆಗೇದ ಗೋಪುರದ ಮ್ಯಾಲ. ಅಂಥಾಂಗ ದಾದಲ್ಯಾ, ಗಣೇಶಚತುರ್ಥಿ ಮೊನ್ನೇ ಮುಗೀತಲ್ಲs? ಅದಕಂತೇ ಸುಣ್ಣಾ-ಬಣ್ಣಾ ಆಗೇದ. ಕಳಸಾ ಹ್ಯಾಂಗ ಚಕಾಕಸ್ತದ ನೋಡು ದಾದಲ್ಯಾ. ಇಂದ ಕಾಕಾ ನಮ್ಮ ಜೋಡೀ ಇದ್ದರ, ಇಲ್ಲೀದೇನs ದೀಡ ನಮಸ್ಕಾರ ಹಾಕ್ಕೋತ ಹೊಂಡತಿದ್ದರು."

ವಿಶ್ಯಾ ಇನ್ನೂ ಮಾತಾಡುತ್ತಿದ್ದ; ಅಷ್ಟರಲ್ಲಿ ನಮ್ಮಿಂದ ಒಂದು ಒಂದೂ ವರೇ ಫರ್ಲಾಂಗು ಮುಂದೆ ಎತ್ತಿನ ಪಟಾಲವ್, ಜೋಡಿ-ಜೋಡಿಯಾಗಿ ಮಿಲಿಟರಿ ಪೋಜಿನಲ್ಲಿ ಸಾಕಿದ್ದು ಕಂಡಿತು. ಪಟಾಲಮ್ಮಿನ ಮುಂದೆ-ಹಿಂದೆ, ಕೆಲ ಬಲಕ್ಕೆ ಆಳು-ಕಾಳು ಇದ್ದರು. ಅವರಿಂದ ಅನತಿ ಹಿಂದೆ ಕಮತಿಗ ಖಾದರನ ಮಗ ಖಾಜಾ ಇದ್ದ. ಎತ್ತಿನ ಪಟಾಲವ್ ಕಾಕಾ ಅವರದೇ ಎಂಬ ಬಗ್ಗೆ ಶಂಕೆ ಉಳಿಯ ಲಿಲ್ಲ. ಎತ್ತು ಬೆದರಬಾರದೆಂದು, ಮೋಟಾರಿನ ಗತಿಯನ್ನು ನಿಧಾನ ಮಾಡಬೇಕಾ ಯಿತು. ಮತ್ತೆ ಮತ್ತೆ ಹಾರ್ನ ಬಾರಿಸಬೇಕಾಯಿತು. ಖಾಜಾನ ಸಮಿಸಮೀಪ ಮೋಟಾರು ಬಂದಾಗ, ಹಾರ್ನ ಬಾರಿಸಿತು. ಖಾಜಾ ತಿರುಗಿ ನೋಡಿದ. ನಾನು ತಡೆಯದೆ —

"ಖಾಜಾ"

ಎಂದೆ.

"ಅರೇ ದಾದಲ್ಯಾ ! ಔರ್ ಕೋನ ಹೈ ? ಅರೇ ವಿಶ್ವಾಸ ದಾದಾ! ವಿಶ್ವಾಸ ದಾದಾ ! ಮಲ್ಲ್ಯಾ. ಶಂಕರ್ಯಾ, ಶಿವ್ಯಾ, ಇದ್ರ್ಯೋದ್ರ್ಯಲೇ, ವಿಶ್ವಾಸದಾದಾ ಬಂದಾ, ವಿಶ್ವಾಸದಾದಾ ಬಂದಾ... ದಾದಾ ತರಬರಿ ಗಾಡೀ. ತರಬರಿ ಗಾಡೀ. ಅಡ್ಡ ಬೀಳ ತೇವು ನಿಂದರ್ರಿ. ದಾದಾ. ಕಾಕಾ ಅವರು ಬರಲಿಲ್ಲರೀ? ಓಡಲೇ ಮಲ್ಲ್ಯಾ. ಮುಂಚಾಕ ವಾಡೇದ ಕಡೇ ಓಡು. ಕಮತಿಗ್ಯಾಗ ವರದೀ ಮಾಡು: ವಿಶ್ವಾಸದಾದಾ ಬಂದಾರಂತs. ಅಡ್ಡದಾರೀ ಬಿದ್ದು ಓಡು ಲಗ್ಗನs. ದಾದಾ. ಕಾಕಾ ಘಾತ ಆದಾರ್ರೀ ?"

ಖಾಜಾನ ಆನಂದಕ್ಕೆ ಇತಿಮಿತಿಯೇ ಉಳಿದಿರಲಿಲ್ಲ. ಏನು ಆಡುವದು —

ಏನು ಬಿಡುವದು ಅವನಿಗೇ ತಿಳಿಯದಂತಾಗಿತ್ತು. ವಿಶ್ವಾಸ ಊರಿಗೆ ಬಂದ ಸುದ್ದಿಯನ್ನ ಮುಟ್ಟಿಸುವ ಪ್ರಥಮ ಶ್ರೇಯ ತನಗೆ ಬರಲೆಂದು ಅವನು ಮಲ್ಲ್ಯಾನನ್ನು ಓಡಿಸಲಿದ್ದ. ವಿಶ್ಯಾನ ಪಾದಕ್ಕೆ ಬಿದ್ದ ಮಲ್ಲ್ಯಾ ಬಸ್ಯಾ, ಶಂಕರ್ಯಾ, ಶಿವ್ಯಾ ಇನ್ನೂ ಎದ್ದಿರಲೇ ಇಲ್ಲ. ವಿಶ್ವಾಸ ಎಲ್ಲರನ್ನೂ ಪ್ರೀತಿಯಿಂದ ಮೈದಡವಿ ಎಬ್ಬಿಸುತ್ತ —

"ಖಾಜಾ, ಮಲ್ಲನ್ನ ಓಡಸಬ್ಯಾಡಾ. ನೀವೂ ಸಾವಕಾಶ ಬರ್ರಿ. ನಾವು ಮುಂದ ಹೋಗಿರತೇವು. ಖಾದರ್ ಅರಾಮ ಇದ್ದಾನs?"
ಎಂದು ಕೇಳಿದ.

"ಕಮತಿಗ್ಯಾ ಘಾssಡ ಅದಾನ್ರೀ. ನಿನ್ನಿನ ಸುಟೂ ವಾಡೇದ ಸುಣ್ಣಾ-ಬಣ್ಣಾ ಸುರೂ ಆಗ್ಯೆತ್ರೀ. ಅರ್ಧಾ ಆಳಾ ಇದಕ್ಕಂತ ಮನ್ಯಾಗನs ಅದಾವ್ರೀ. ಬಸವಂತ್ಯಕ್ಕಾ..." ಮಲ್ಲ್ಯಾ ತನ್ನ ವರದಿಯನ್ನು ಇನ್ನೂ ಮುಗಿಸಿರಲಿಲ್ಲ. ಮಿಲಟರಿ ಪ್ರೋಜಿನ ಎತ್ತಿನ ಪಟಾಲಮ್ ಅನಾಯಕತ್ವದಿಂದ ವೀಥಿ ಒಡೆದು ಚಲ್ಲಾಪಿಲ್ಲಿಯಾಗತೊಡಗಿತ್ತು. ಖಾಜಾ ದರಕಾಯಿಸುತ್ತ —

"ಮಲ್ಲ್ಯಾ, ಎತಗೋಳ್ನ ಸಂಬಾಳಸ ನಡೀ. ಊರ ಸನೇ ಬಂತು. ಮನೀಗೆ ಹಾರಿಗ್ಗಾಲಸs ಕೊಡತಾವs. ಅಟಾಪಸಾಕ ಆಗಾಣೆಲ್ಲಾ. ವಿಶ್ವಾಸದಾದಾ' ಬಾಬಾ ವಾಡೇದಾಗs ಅದಾನ್ರೀ. ಬಾಕಲದಾಗ ಅವಂದs ಭೆಟ್ಟಿರಿ ನಿಮಗ. ಗಾಡೀ ಜರಾ ಸಾವಕಾಶ ಬಿಡರಿ. ದನಾ-ಕರಾ ಮನೀಗೆ ಹೊಡಮಳ್ಳೂ ಹೊತ್ತಾ. ಮೋಟಾರ ಸಪ್ಪಳಕ್ಕ ಘಸಕ್ಕನ ಬೆದರಿ ಅಡ್ಡ ಬರತಾವರಿ. ನಾವೂ ನಿಮ್ಮ ಬೆನ್ನಾ ಬೆನ್ನನs ಬಂದೇವ್ರೀ"
ಎಂದು ಹೇಳಿದ.

ಗಾಡಿ ಮುಂದೆ ಸಾಗಿತು. ತೀರ ನಿಧಾನವಾಗಿ ಸಾಗಿತು. ಮುಚ್ಚಂಜೆ ಮೆಲ್ಲಡಿಯಲ್ಲಿ ನಡೆದು ಬರುತ್ತಿತ್ತು. ಮೋಟಾರಿನ ದೀಪಹತ್ತಿತು.

ಹೊಲದಿಂದ ಮನೆಗೆ ಹಿಂದಿರುಗುವ ಹೆಣ್ಣು-ಗಂಡಿನ ವೀಥಿ ವೀಥಿ ರಸ್ತೆಯ ಕೆಲಬಲದಲ್ಲಿ ಸಾಗಿತ್ತು.

"ಯಾರದಲೇ ಮೋಟರಗಾಡೀ?"
ಒಂದು ದನಿ.

"ಅಯ್ಯs, ಹೆಣ್ಣಮಕ್ಕಳೂ ಇದ್ದ್ಯಾಂಗ ಕಾಣತೈತಿ?"
ಇನ್ನೊಂದು ದನಿ.

"ಯಾರ ಮಗಳವ್ವ ನೀ, ಮಲ್ಲೀಗಿ ತೂಕದ......"

ಲಾವಣಿಯಲ್ಲಿಯ ಒಂದು ಸಾಲು. ರಸ್ತೆಯ ಈ ಬದಿಯಲ್ಲಿಯ ಒಂದು ತರುಣ ಗಂಡು, ಆ ಬದಿಯ ಅಂಚಿನಲ್ಲಿ ನಡೆದ ಮಲ್ಲಿಗೆ ತೂಕದ ಹೆಣ್ಣನ್ನು ಕುರಿತು ಮುದ್ದಾಂ ಅವಳಿಗೆ ಕೇಳಿಸುವಂತೆ ಹಾಡುವದು! ಆಕೆ ಯಾರ ಮಗಳೆಂಬುದು ಇವನಿಗೂ ಗೊತ್ತಿದೆ. ಗೊತ್ತಿದ್ದೂ ಕೇಳುತ್ತಿದ್ದಾನೆಂದು – ಕೇಳಲೆಂದು ಅವಳ ಕಿಲಿಕಿಲಿ ನಗು.

ಹತ್ತೆಂಟು ಹೆಣ್ಣುಮಕ್ಕಳು ಸಾಮೂಹಿಕವಾಗಿ —

"ಬಸವಕ ಬಸವೆನಿರೇ ಬಸವನ ಪಾದಕ ಶರಣೆನಿರೇ..."

ಹಾಡುತ್ತ ನಡೆದಿದ್ದರು.

ದೂರದಲ್ಲಿ ಊರ ಅಗಸೆಯ ಭವ್ಯ ಬಾಗಿಲು ಕಾಣತೊಡಗಿತು. ಅಗಸೆಯ ಮುಂದಿನ ಮಾವಿನ ತೋಪಿನ ಬಳಿಯಲ್ಲಿಯ ಮೋಟಾರು-ನಿಲ್ದಾಣದ ಮೇಲಿನ ಚಹದಂಗಡಿಗಳಲ್ಲಿ ಲಾಟೀನು ಪೆಟ್ರೋಮ್ಯಾಕ್ಸ ಮಿಣುಗುತ್ತಿದ್ದವು. ಫೋನೋ ಕಿರಚುತ್ತಿದ್ದವು. ಕುತನಿಯ ಗಾದಿಯ ಮೇಲೆ ನಿವಾಂತವಾಗಿ ಕುಳಿತಂತೆ, ಜನ, ಗುಂಪುಗುಂಪಾಗಿ, ಚಹದಂಗಡಿಯ ಮುಂದಿನ ಬಯಲಲ್ಲಿ ಕುಳಿತಿತ್ತು.

ಗಾಡಿ ಅಗಸೆಯ ಬಾಗಿಲಲ್ಲಿ ಬಂತು.

"ಎಳಾತು ದಾದಲ್ಯಾ"

ವಿಶ್ಯಾ ಹೇಳಿದ.

ಐದು ನಿಮಿಷದಲ್ಲಿ ಗಾಡಿ, ವಾಡೆಯ ಮುಂದೆ ಹೋಗಿ ನಿಲ್ಲುತ್ತದೆ. ಅಗಸಿಯಿಂದ ಎರಡು-ಎರಡೂವರೇ ಫರ್ಲಾಂಗು ಒಳಗೆ ಹೋಗಿ ಬಲಕ್ಕೆ ಹೊಳ್ಳಬೇಕು. ಮತ್ತೆ ನೆಟ್ಟಗೆ ಎರಡು ಫರ್ಲಾಂಗಿನಷ್ಟು ಹೋಗಬೇಕು. ಮತ್ತೆ ಎಡಕ್ಕೆ ಹೊರಳಬೇಕು. ಈ ಬೀದಿಯಿಂದ ಒಳಗೆ ಇಪ್ಪತ್ತು ಮಾರಿನ ಅಂತರದಲ್ಲಿ ವಾಡೇ! ವಾಡೆಯಲ್ಲಿ ದೀಪ ಹಚ್ಚಿದರೆ ಅದರ ಬೆಳಕು ಈ ಬೀದಿಯ ವರೆಗೂ ಚಾಚಿರುತ್ತದೆ. ವಾಡೆಯ ಮುಂದೆ ಹಿಲಾಲು ಉರಿಯುತ್ತಿದ್ದಾಗ ಅದರ ಪ್ರಕಾಶದಲ್ಲಿ ಈ ಇಪ್ಪತ್ತು ಮಾರಿನ ಒಳಬೀದಿ ನಿತ್ಯ ದೀಪ್ತಿಮಂತವಾಗಿರುತ್ತಿತ್ತು. ಮಳೆಗಾಲದಲ್ಲಿ ನದಿಗೆ ಮಹಾಪೂರ ಬಂದು ತೆರೆಯುಕ್ಕುವಂತೆ, ಹಿಲಾಲ-ಪ್ರಕಾಶ ಬೀದಿಯನ್ನು ಬೆಳಗಿ ಹೊರಚೆಲ್ಲುತ್ತಿತ್ತು. ಪ್ರಕಾಶಪುಂಜದಲ್ಲಿ ಅಭ್ಯಂಗಸ್ನಾಂತವಾದ ಬೀದಿ ಅಂದು ಪಾಂಥಸ್ಥರಿಗೆ, ವಾಡೆಯ ಹೆಬ್ಬಾಗಿಲ ವರೆಗೂ ಬೆಳಕಿನ ಶುಭ್ರ ಹಡದಿ

ಯನ್ನು ಹಾಸಿ ನಡೆಸಿಕೊಂಡು ಹೋಗುತ್ತಿತ್ತು. ಇಂದು ಕತ್ತಲೆಯಲ್ಲಿ ಮೋಟಾರಿನ ದೀಪವನ್ನು ಕೈಚಿಮಣಿಯಾಗಿ ಮಾಡಿಕೊಂಡು, ನಮಗೆ ಮರೆತ ಆ ಬೀದಿಯನ್ನು – ಮುಖಾಳವಾದ ಆ ವಾಡೆಯ ಮುಖವನ್ನು ಗುರುತಿಸಬೇಕಾಗಿತ್ತು.

ಕಾರಿನ ಸಾರಥಿಯಾದ ದಸ್ತಗೀರ್‍ಯಾನಿಗೆ ವಾಡೆಯ ದಾರಿ ಅಪರಿಚಿತ. ವಿಶ್ವಾಸನ ನಿರ್ದೇಶದಂತೆ ಅವನು ಗಾಡಿಯನ್ನು ನಿಧಾನವಾಗಿ ನಡೆಸುತ್ತಿದ್ದ. ಗಾಡಿಗಳ ಓಡಾಟಕ್ಕೆ ನಮ್ಮೂರ ಬೀದಿಗಳು ಅಪರಿಚಿತವಲ್ಲ. ಆದರೂ ಸಂಜೆಯ ವೇಳೆ. ಬೀದಿ ಜನರಿಂದ ಗಜಿಬಜಿಸಿರುತ್ತಿದ್ದವು. ದನಕರಗಳು ಮನೆಗೆ ಮರಳುತ್ತಿದ್ದವು. ಗಾಡಿ ತೀರ ನಿಧಾನವಾಗಿ ಸಾಗದೆ ಗತಿ ಇರಲಿಲ್ಲ.

ಗಾಡಿ ಅಗಸೆಯನ್ನು ಬಿಟ್ಟು ನೆಟ್ಟಗೆ ಸಾಗಿ, ಬಲಕ್ಕೆ ಹೊರಳಿ, ಮತ್ತೆ ಎರಡು ಫರ್ಲಾಂಗು ಬಂದು, ಎಡಕ್ಕೆ ಹೊರಳಿತು... ಹೊರಳಿತು... ಹೊರಳಿತು. ವಿಶ್ವಾಸ ಅಡರಾಸಿ ಸಾಗರಬಿದ್ದು ದಸ್ತಗೀರ್‍ಯಾನ ಕೈ ಒತ್ತಿ ಗಾಡಿ ನಿಲ್ಲಿಸುವಂತೆ ಸೂಚಿಸಿದ.

"ದಾದಲ್ಯಾ !"

16726

ವಿಶ್ವಾಸ ಚೀರಿದ.

"ವಿಶ್ಯಾ"

ನಾನು ಕೂಗಿದೆ.

ಇಬ್ಬರೂ ಬೇಭಾನಸರಾಗಿದ್ದೆವು. ಇಬ್ಬರೂ ಗಾಡಿ ಬಿಟ್ಟು ಈಚೆಗೆ ಜಿಗಿದಿದ್ದೆವು. ಏಕೆ ಒದರಿದೆವು – ಏಕೆ ಜಿಗಿದೆವು ಎಂಬುದು ದಸ್ತಗೀರ್‍ಯಾ-ತುಳಸಿಗೆ ತಿಳಿಯಲಿಲ್ಲ. ಅವರೂ ಗಾಡಿ ಬಿಟ್ಟು ಇಳಿದರು. ದಸ್ತಗೀರ್‍ಯಾ-ತುಳಸಿ ಚಟ್ಟನೆ ವಿಶ್ಯಾನ ಬದಿಗೆ ಬಂದು ನಿಂತು ಅವನನ್ನು ಹಿಡಿದುಕೊಂಡರು. ನಾನು, ತೀರಾ ಬೇಹೋಷನಾಗಿ – ಬೇಭಾನನಾಗಿ ಕೂಗಿದೆ:

"ವಿಶ್ಯಾ, ವಿಶ್ಯಾ, ಅದ್ನೋಡ ಬೆಳಕಾ ! ಅದ್ನೋಡ ಬೆಳಕಾ !! ವಿಶ್ಯಾ. ಇದು ಬರೇ ಬೆಳಕ ಅಲ್ಲಾ ! ಸಾದಾ ದೀಪದ ಬೆಳಕ ಅಲ್ಲಾ ! ಹೀಲಾಲ ಬೆಳಕ ವಿಶ್ಯಾ, ಥೇಟ ಹಿಲಾಲದ್ದs, ಝಗಝಗಾಟಾ ! ವಿಶ್ಯಾ, ದೀಪಾ ಹಚ್ಚ್ಯಾರ, ವಾಡೇದ ಬಾಗಲದಾಗ ಯಾರೋ ಹಿಲಾಲ ಉರಸಲಿಕ್ಕೆ ಹತ್ಯಾರ! ಖಾಜಾ ಅಡ್ಡದಾರೀಲೇ ಓಡಿ ಬಂದಿರಬೇಕು. ನೀ ಬರತೀಯಂತ ಕಮತಿಗ್ಯಾಗ ಹೇಳಿರಬೇಕು. ಅಂವನೇ ದೀಪಾ ಹಚ್ಚ್ಯಾನ ವಿಶ್ಯಾ, ಅವನೇ ದೀಪಾ ಹಚ್ಚ್ಯಾನ."

ನನ್ನ ಕೂಗಿಗೆ ಓಣಿಯಲ್ಲಿಯ ಜನ ಕೂಡಿತು. ಮುಚ್ಚಿದ ಬಾಗಿಲು ತೆರೆದವು. ಜನ ಮೋಟಾರಿನ ಸುತ್ತು ಪರಿಸಿ ಕೂಡಿತು. ವಿಶ್ವಾ, ದಸ್ತಗೀರ್‍ಯಾ, ತುಳಸಿ, ಜನಕ್ಕೆ ಅಪರಿಚಿತವೆನಿಸಿರಬೇಕು. ಕೂಡಿದ ಜನರ ಗುಂಪಿನಲ್ಲಿಂದ ಯಾರೋ ಒದರಿದರು:

"ದಾದಲ್ಯಾ…ಗೋವಿಂದಭಟ್ಟನ ಮಗಾ, ದಾದಲ್ಯಾ!"

"ದಾದಲ್ಯಾ…ದಾದಲ್ಯಾ…ದಾದಲ್ಯಾ…"

ಧ್ವನಿ-ಪ್ರತಿಧ್ವನಿ ಎದ್ದಿತು.

ಲಕ್ಷನಕ್ಷತ್ರದ ಜ್ಯೋತಿ-ತೀರ್ಥದಲ್ಲಿ ಮಿಂದು ಮಡಿಯಾದಂತೆ, ದೀಪ್ತಮಂತವಾಗಿ ಹಿಲಾಲ ಬೆಳಕಿನಲ್ಲಿ ಝಗಝಗಿಸುವ ವಾಡೆಯು, ದರ್ಶನರತನಾಗಿ, ದರ್ಶನಚಿತ್ರನಾಗಿ, ದರ್ಶನದೇಹಿಯಾಗಿ, ದರ್ಶನಮಾನಸನಾಗಿ, ವಿಶ್ವಾಸ ಶಿಲಾ ಪ್ರತಿಮೆಯಂತೆ ನಿಂತಿದ್ದ.

ಬೀದಿಯಲ್ಲಿಯ ಗದ್ದಲಕ್ಕೆ – ನೂರು ಕಂಠದ ದಾದಲ್ಯಾ-ನಾದ-ನಿನಾದಕ್ಕೆ. ವಾಡೇ ಸ್ಪಂದಿಸಿತು. ವಾಡೆಯ ಜೀವ-ನಾಡಿ ಸ್ಪಂದಿಸಿತು. ವಾಡೆಯ ಚೈತನ್ಯ, ಮೇಖಲಾ-ವಿಲಾಸ ಮಿಂಚಿಸಿತು!

ಸ್ವರ್ಣಕಾಯದ ಶ್ವೇತವಸನಧಾರಿಯಾದ ಅಲೌಕಿಕ ಅಪ್ರತಿಮ ತೇಜದಿಂದ ಬೆಳಗುವ ಹಿಮಾಂಗಿಯಂತೆ ಬಸವಂತಿ ನಿಧಾನವಾಗಿ ನಡೆದು ಬಂದು ವಾಡೆಯ ಹೆಬ್ಬಾಗಿಲಲ್ಲಿ ನಿಂತಳು.

— **ಬಸವಂತಿ.**

"ಬಸವಂತೀ"

ಎಂದು ಕೂಗಿದವನೇ, ವಿಶ್ವಾಸ ದಸ್ತಗೀರ್‍ಯಾ-ತುಳಸಿಯ ಹಿಡಿತದಿಂದ ಬಿಡಿಸಿಕೊಂಡು ಒಂದೇ ಧಾಪಿನಲ್ಲಿ ನೆಗೆದು ಬಸವಂತಿಯ ಬಳಿಗೆ ಹೋಗಿ ಅವಳ ಕಾಲಿಗೆ ತಲೆ ಹಚ್ಚಿದ. ಅವನ ಬೆನ್ನಿಗೆ ನಾವೂ ಧಾವಿಸಿದೆವು.

"ವಿಶ್ವಾಸ"

ಬಸವಂತಿ ವಾತ್ಸಲ್ಯದಿಂದ ವಿಶ್ವಾಸನನ್ನು ಎತ್ತಿ ಎದೆಗವಚಿಕೊಂಡು ನಿಂತಳು. ವಿಶ್ವಾಸ ಮತ್ತು ಬಸವಂತಿಯರ ವಾತ್ಸಲ್ಯ-ತೀರ್ಥದಿಂದ ವಾಡೆಯ ಹೆಬ್ಬಾಗಿಲಿಗೆ ಮಂಗಲಾಭಿಷೇಚನ ನಡೆದಂತಾಗಿತ್ತು.

ಒಳಗಿನಿಂದ ಖಾದರ್ ಧಾವಿಸಿ ಬಂದ. ಹೊರಗಿನ ಜನರ ಪಡೆಯನ್ನು ನುಗ್ಗಿ, ರಾಚಪ್ಪ. ಗೋವಿಂದಭಟ್ಟ ಧಾವಿಸಿ ಬಂದರು.

"ವಿಶ್ವಾಸ"

"ರಾಚಪ್ಪಾ ವಾಡೇದ ದೀಪಹತ್ತಿತು"

ವಿಶ್ವಾಸ.

"ವಿಶ್ವಾಸ, ದೀಪಾ ಬಸವಂತಿ ಹಚ್ಚಿದಳು. ವಾಡೇ ಬಸವಂತಿ ಬೆಳಗಿದಳು." ರಾಚಪ್ಪ ಹೇಳಿದ.

"ಶ್ಯಾಮನ್ನ ಗಜವ್ ನಿಂದರಿಸಿದಳು. ನಾಯೀಕುನ್ನೀ ಕಿಂವೀ ಹಿಡದು ಎತ್ತಿ ಬಿಸ್ಯಾಡಿ ಒಗಿಯೂ ಹಾಂಗ, ಶ್ಯಾಮನ್ನ ಛಿರಕಾಸಿ ಒಗದು ದೀಪಾ ಹಚ್ಚಿದಳು. ದಾದಲ್ಯಾನ್ವಾಂಗ ದಿಮಾಕ ಹೇಳೂ ಗಂಡಸರs ಭಾಳ ಮಂದಿ ಆಗಿದ್ದರು. ಒಬ್ಬ ಬಸವಂತೀ ತೇಜ ಬರಲಿಲ್ಲ ಯಾರಿಗೂ; ಒಬ್ಬ ಬಸವಂತೀ ಧೈರ್ಯಾ ಬರಲಿಲ್ಲ ಯಾರಿಗೂ. ವಿಶ್ವಾಸ, ನಿಮ್ವಾಂಗ ಬಸವಂತಿ ಪರಾಗಂದಾ ಆಗಲಿಲ್ಲಾ. ವಾಡೇದಾಗ ನಿಂದರಲಿಕ್ಕೆ ಬಂದಳು. ವಾಡೇದ ದೀಪಾ ಹಚ್ಚಲಿಕ್ಕೆ ಬಂದಳು. ಆಕೀ ತೇಜಾ ನೋಡರಿ. ಮೊನ್ನೇ ವಾಡೇದ ಬಾಗಲದಾಗ ದೀಪ ಹತ್ತಿದೂ. ವಿಶ್ವಾಸ, ಇಂದ ಲಕ್ಷ್ಮಣರಾವಜೀ ಅವರ ತಿಥೀ! ಕಾಕಾ, ಬರೇ ನೀರ ಬಿಟ್ಟಿರಬೇಕು. ಕೌಶಿಕ ಗೋತ್ರೋತ್ಪನ್ನೋಹಂ ಅಂದಿರಬೇಕು. ಖರೇ ತಿಥೀ ಇಲ್ಲೆ ಸಾಂಗ ಆತು. ದೀಪದ ನೈವೇದ್ಯಾ ತೋರಿಸಿದಳು ಬಸವಂತೀ, ವಾಡೇದ ಲಕ್ಷ್ಮೀಗೆ."

ಗೋವಿಂದಭಟ್ಟನ ಪ್ರವಚನ ಇನ್ನೂ ನಿರರ್ಗಳ ನಡೆಯುತ್ತಿತ್ತು. ನಡುವೆಯೇ ಅವನಿಗೆ ತಡೆಹಾಕುತ್ತ ಬಸವಂತಿ —

"ಗೋವಿಂದಭಟ್ಟರs, ಮನೀ ಮಾಲಕ ಬಂದಾ. ಅಂವಗ ಆರತೀ ಮಾಡೇ ಒಳಗ ಕರಿಯೂದು ಶೋಭಾ. ನಾ ಆರತೀ ತರತೀನಿ ತಡೀರಿ."

ಎಂದು ಒಳಗೆ ಹೊರಟಳು.

"ಬಸವಂತೀ, ಆರತೀಗೆ ಕೈಹಚ್ಚಲಿಕ್ಕೆ ಇನ್ನೊಬ್ಬ ಮುತ್ತೈದೀನೂ ಬಂದಾಳ. ಅತ್ತೀ-ಸೊಸೀ ಕೂಡೆ ಆರತೀ ಮಾಡರಿ"

ನಾನು ಹೇಳಿದೆ.

"ದಾದಲ್ಯಾ, ನೀ ಬಂದಿಲ್ಲಂತ ಮಾಡಿದ್ದೆ. ಹಜರೀ ಹಾಕೀಯಲಾ"

ಬಸವಂತಿ ನಗುತ್ತ ಹೇಳಿ ಆರತಿ ತರಲು ಒಳಗೆ ಹೋದಳು.

"ಅಳ್ಳೀ ಅಂಡಿಗೀಮ್ಯಾಲ ಲಾಗಾ ಒಗೀಲಿಕ್ಕೇ ದಾದಲ್ಯಾಗ ಸಾಧಿಸಿದ್ದು. ಇಷ್ಟು ಧೊಡ್ಡ ಧೊಡ್ಡ ಮಾತಾಡಾಂವಾ ಮುಂಚೇ ಬರಬೇಕಾಗಿತ್ತು. ಶ್ಯಾಮಾ,

ಬಸವಂತಿನ್ನ ಎಳಕೊಂಡ ಬಂದಾಗ ಎಲ್ಲೆ ಹೋಗಿದ್ದಿ ಮಗನs? ಈಗ ಬಂದೀದಿ ಓಡಿ."

ಗೋವಿಂದಭಟ್ಟ ದಾದಲ್ಯಾನ ಚಂಪೀ ನಡೆಸಿದ್ದವ ಏನೋ ನೆನಪಾದಂತಾಗಿ ತಟ್ಟನೇ —

"ಹೂಂ ದಾದಲ್ಯಾ, ಇನ್ನs ನಿನ್ನ ಕೆತ್ತೇಬಜೇ ಸುರೂ ಆತಂದ್ರs ಬೆಳಗ ಆದರೂ ಬಗೀಹರಿಯೂದಿಲ್ಲಾ. ಲಟ್ಟನs ಮನೀಗೆ ಓಡ ನೀ. ಇಕಾ, ಆಕೀಗೆ ಹೇಳು. ನಾಕಾರ ಮಂದೀ ಅಡಿಗೀ ಮಾಡನ್ನು ಲಗೂನೇ. ಇದ್ನೋಡು, ಹಂಡೇದ ಒಲೀಗೆ ನೀನೇ ಉರೀ ಹಾಕು. ನೀರ ಕಾಸು. ಎಲ್ಲಾರೂ ದಣದ ಬಂದಾರ ಎಷ್ಟ ಧೂರಿಂದ. ನೀ ಮೊದಲ ಸ್ನಾನಾ ಬಗೀಹರಿಸಿದವನs ಥೇಟ ಗುಡೀಗೆ ಬಂದಬಿಡು. ಇಂದ ಮಂಗಳಾರತಿ ನಿಂದೇ. ಇಂದಿನಿಂದ ವಿಶ್ವಾಸ ಯಜಮಾನಾ, ನೀನs ಪೊರೋಹಿತಾ. ನಾ ಕಡೀಕಾದೆ."

ಗೋವಿಂದಭಟ್ಟ ಹುಕುಂ ಬಜಾಯಿಸಿದ. ಇದನ್ನೇ ದಾರಿ ಕಾಯುತ್ತಿದ್ದಂತೆ ದಸ್ತಗೀರ್‍ಯಾ ನನ್ನ ಕಡೆಗೆ ನೋಡಿ, ನಗುತ್ತ —

"ಅಗದೀ ರಾಸ್ತ ಮಾತ ಹೇಳಿದಿರಿ ಗೋವಿಂದಭಟ್ಟರs. ಮೋಟಾರದಾಗ ನಾನೂ ಇದೇ ಮಾತs ಹೇಳಿದ್ದೆ. ನಾ ಮುಸಲಾ, ನನ್ನ ಮಾತು ದಾದಲ್ಯಾ ಕೇಳ್ಯಾನ್ರೀ. ಕಾಯೀ-ಪೂಜೀ ಮಂಗಳಾರತೀ ಉಸಾಬರೀ ನಿಮಗs ಅಂದಿದ್ದಾ. ಭಲೋ ಧಂದೇ ಹಚ್ಚಿದಿರಿ ಅಂವಗ"

ದಸ್ತಗೀರ್‍ಯಾನೂ ಘನ ಬುರಡೆ ಉರುಳಿಸಿದ. ಅಲ್ಲಿಂದ ಕೇಳುವದೇನು? ಗೋವಿಂದ ಭಟ್ಟ ಏಕದಮ್ ಖುಷಿಯಾಗಿ —

"ಮುಸಲೇನು, ಮೊಮ್ಮಣಿಗ್ಯಾ ಏನು ತಮ್ಮಾ; ಮುಖ್ಯ ಶ್ರದ್ಧಾ ಅನೂದು ದೊಡ್ಡದು. ಅದು ಜಾತೀಯಿಂದ ಬರೂದಲ್ಲಾ. ಸಂಸ್ಕಾರದಿಂದ ಬರೂದು. ಸಾಕ್ಷಾತ್ ಬಸವಂತೀನೇ ಅದಕ್ಕ ಸಾಕ್ಷೀ ಇದ್ದಾಳ. ಆಕೀ ಜಾತೀ, ನನ್ನ ಜಾತೀ ಜನಾ ಎಷ್ಟ ಮಂದಿ ಇಲ್ಲಾ ಊರಾಗs? ರಾಜಪ್ಪನಂಥಾ ಅಯ್ಯಗೋಳ ಜಾತೀ ಜನಾ ಎಷ್ಟ ಮಂದಿ ಇಲ್ಲಾ? ಬಸವಂತಿ-ರಾಜಪ್ಪರ ಶ್ರದ್ಧಾ ನನಗ-ದಾದಲ್ಯಾಗ ಬಂದೀತೇನು? ನಾವೂ ವಾಡೇದ ಅನ್ನಾ ಉಣತೇವು; ಅದರ ಪುಣ್ಯಾದ್ಲೇ ಇನಾ ಮನ್ಯಾಗ ದೀಪಾ ಹಚ್ಚತೇವು. ನಮ್ಮದು ಕೇವಲ ಉದರಂಭರಣಾ. ಬಸವಂತೀ-ರಾಜಪ್ಪರದು ಶ್ರದ್ಧಾದ ದಶಿಂದ ಕಾಯದಂಡನಾ, ದೇಹದಂಡನಾ. ಇಬ್ಬರೂ ಜೀವಾ ನಿವಾಳಿಸಿ

ಒಗದರು ವಾಡೇದ್ದಶಿಂದ. ಗಣಪತಿಗುಡ್ಯಾಗ ಮಂಗಳಾರತಿ ಆಗದs, ರಾಚಪ್ಪಾ ಬಾಯಾಗ ನೀರು ಹಾಕ್ಯಾಂಗಿಲ್ಲಾ. ವಾಡೇದ ಬಾಗಲಿಗೆ ಥಳೀ-ರಂಗೋಲಿ ಆಗದs, ವಾಡೇದ ದೇವರಿಗೆ ಹೂ-ಪತ್ರೀ ಒಪ್ಪಸದs ಬಸವಂತಿ ತನ್ನ ಬಾಯಿಗೆ ನೀರ ಹಾಕ್ಯಾಂಗಿಲ್ಲಾ. ಎಲ್ಲಾನೂ ಇದ್ದs ಕಣ್ಣು ನೋಡಕೋತ ಬಂದಾವ. ನಿನ್ನ ಬಾಯಲೇ ಕಾಯಿ ಒಡಸೂದು, ಮಂಗಳಾರತಿ ಮಾಡಸೂದು ಮಾತ ಬಂತು. ಯಾಕ? ಶ್ರದ್ಧಾ ತಮ್ಮಾ ಶ್ರದ್ಧಾ. ಸಂಸ್ಕಾರಾ. ಜಾತಿ ಏನ ಮಾಡೀತು?"

"ಗೋವಿಂದಭಟ್ಟ, ಒಂದಿಷ್ಟು ಇಕಡೆ ಬಾ"

ಎಂದು ರಾಚಪ್ಪ ಗೋವಿಂದಭಟ್ಟನನ್ನು ನಾನು ನಿಂತಲ್ಲಿ ಕರೆದುಕೊಂಡು ಬಂದು,

"ದಾದಲ್ಯಾ-ವಿಶ್ವಾಸರ ಜೋಡಿ ಇರೂ ಹುಡಿಗಿ ಯಾರು? ವಸೂನ್ಯಾಂಗ ಕಾಣಸೂದಿಲ್ಲಾ?"

ಎಂದು ಕೇಳಿದ.

ನನಗೆ ಏನು ಹೇಳುವದೆಂಬ ಪಂಚೇತಿಗಿಟ್ಟುಕೊಂಡಿತು. ಆದರೆ ಹೇಳದಿದ್ದರೆ ನಡೆಯುುವಂತಿರಲಿಲ್ಲ.

"ರಾಚಪ್ಪಾ, ಆಗಳೇ ನಾ ಬಸವಂತಿಗೆ ಅಂದೆನ್ಯಲಾ. ಅತ್ತೀ-ಸೊಸೀ ಕೂಡೇ ಆರತೀ ಮಾಡರೀ ಅಂತs. ಅಷ್ಟರ ಮ್ಯಾಲಿಂದನs ತಿಳಕೋ. ಅಕೀ ವಸೂ ಅಲ್ಲಾ. ವಿಶ್ವಾಸನ ತುಳಸಿ. ಗಿರಿಜಾ-ಬಸವಂತೀ ತಲೀಗೆ ಆ ತಳೀ ನಿಂದರಬಾರದಂತ ವಾಡೇಕ್ಕ ಇನ್ನೊಂದು ರತ್ನ ಬಂತು. ಆತಲಾ ಅರ್ಥಾ?"

ಎಂದು ವಿಶ್ಯಾ-ತುಳಸಿಯರ ಸಂಬಂಧವನ್ನು ಸೂಕ್ಷ್ಮವಾಗಿ ತಿಳಿಸಿದೆ. ಗೋವಿಂದ ಭಟ್ಟ, ರಾಚಪ್ಪ ಇಬ್ಬರೂ ಏಕದಮ್...ಏಕಕಂಠದಲ್ಲಿ ...

"ದಾದಲ್ಯಾ ಖರೇನs?"

ಎಂದರು.

"ಅಗದೀ ಖರೇ! ವಸೂ ಕೈ ಎತ್ತಿ ಈ ರತ್ನಾ ವಿಶ್ವಾಸನ ಕೈಯಾಗ ಹಾಕ್ಯಾಳ. ವಿಶ್ವಾಸ, ಕಾಕಾನ ಮೊಮ್ಮಗಾ. ಮುಚ್ಚಮರೀ ಅಂವಗ ಕಾಂವಿಕಿಲ್ಲಾ"

ನಾನು.

"ರತ್ನಂ ಸಮಾಗಚ್ಛತು ಕಾಂಚನೇನ! ದಾದಲ್ಯಾ ಯಾವಾಗ ಆ ಹುಡಿಗ್ಗೆ ರತ್ನ ಅಂತ ಅಂದಾನ, ಬಗೀಹರದ ಹೋತು. ದಾದಲ್ಯಾ ಕದಾಪಿ ಅಸತ್ಯ ಮಾತಾಡೂದಿಲ್ಲಾ. ಬಸವಂತೀ ಸಂಬಂಧದಾಗೂ ದಾದಲ್ಯಾ ಅಂದ ಮಾತೇ ಖರೇ ಬಂತು.

ನನ್ನ ಅಂದಾಜ ತಪ್ಪಿತು. ದಾದಲ್ಯಾಂದು ಅಚೂಕ ಹೇರಾ; ಅಂಪಾ ರತ್ನ-ಪಾರಖೀ ಇದ್ಧಾಂಗ"

ಗೋವಿಂದಭಟ್ಟ ಪುತ್ರರತ್ನನ ಪ್ರಶಂಸೆಗೆ ತೊಡಗಿದ. ಅಷ್ಟರಲ್ಲಿ ಬಸವಂತಿ ಆರತಿ ತಂದಳು. ತುಳಸಿ-ಬಸವಂತಿ ವಿಶ್ಯಾನಿಗೆ ಆರತಿ ಬೆಳಗಿ ಒಳಗೆ ಕರೆದುಕೊಂಡರು. ನಾವು ವಾಡೆಯ ಪಡಸಾಲೆಗೆ ಬಂದೊಡನೆ, ವಿಶ್ವಾಸ ಸಬಾಷ್ಪನಯನನಾಗಿ, ಗದ್ಗದಿತನಾಗಿ, ಗೋವಿಂದಭಟ್ಟ-ರಾಚಪ್ಪ-ಬಸವಂತಿಗೆ ಕಾಲು ಮುಟ್ಟಿ ನಮಸ್ಕರಿಸಿದ. ರಾಚಪ್ಪ ತಟ್ಟನೆ ಬದಿಗೆ ಸರಿದು —

"ವಿಶ್ವಾಸ ನನಗ ನೀ ಮಾಡಬಾರದು"

ಎಂದ.

"ಮಾಡಬೇಕ ರಾಚಪ್ಪಾ, ಮಾಡಬೇಕು. ನೀ ಹಿರ್ಯಾ ವಿಶ್ವಾಸಗ. ಪಂತರ ನರ್ಮ-ಸಚಿವಾ. ಕಾಕಾನ ಬಲಗೈ. ಅದೇ ಕೈಯಿಂದ ವಿಶ್ವಾಸಗ ಆಶೀರ್ವಾದ ಮಾಡು. ಉದ್ದಂಡ ಆಯುಷ್ಯ ಹೇಳು. ರಾಚೋಟಿ, ನಿನ್ನ ಜೀವನ ಧೊಡ್ಡದಿದ್ಧಾಂಗ ವಿಶ್ವಾಸನ ತಿಳವಳಿಕಿ ಧೊಡ್ಡದದ. ರಾವಜೀಕಾಕಾ, ಈ ವೈಭವ ನೋಡಲಿಕ್ಕೆ ಇಂದ ಇಲ್ಲೆ ಇರಬೇಕಾಗಿತ್ತು. ವಿಶ್ವಾಸ, ಕೈಕಾಲು-ಮಾರೀ ತೊಳಕೋ. ಒಳಗ ಇನಾ ಪಂತರ ಮನೀ ದೈವತ ಅವs. ನಮಸ್ಕಾರ ಮಾಡು. ಅಪನವರ ದರ್ಶನಕ ನಡೀ. ಅವರ ಆಶೀರ್ವಾದ ತಗೊಂಡೇ ಗುಡೀಗೆ ಹೋಗೂಣು. ಯತೀ ಆಶೀರ್ವಾದ ದೊಡ್ಡದು. ಅವರಿಗೂ ನೀ ಬಂದ ಸುದ್ದಿ ಇಷ್ಟೊತ್ತಿಗೆ ಮುಟ್ಟಿರಬೇಕು."

"ಗೋವಿಂದಭಟ್ಟಾ, ರಾವಜೀ-ಭಾವಾ ಬಂದsದಂತಲಾ? ಎಲ್ಲ್ಯದ?" ಗೌಡರು ಅಂಗಳದಿಂದ ಧಾವಿಸುತ್ತ ಬಂದು ಕೇಳಿದರು.

"ತಗೋರಿ ಗೌಡರs. ವ್ಯಾಘ್ರಶಿಶು ಸಾಕ್ಷಾತ್ ಎದರಿಗೇನs ನಿಂತsದ" ಗೋವಿಂದಭಟ್ಟ ಗೌಡರಿಗೆ ದಾರಿಮಾಡಿಕೊಡುತ್ತ, ವಿಶ್ವಾಸನನ್ನು ತೋರಿಸಿ ಹೇಳಿದ. ಬಾಗಿ ನಮಸ್ಕರಿಸುವ ವಿಶ್ವಾಸನನ್ನು, ಎತ್ತಿ ಅಪ್ಪಿಕೊಂಡು —

"ಅಗದೀ ಅಗದೀ ರಾವಜೀ ಪಡೇಚಾ. ಹುಬೇಹೂಬ ರಾವಜೀ ಅವತಾರಾ. ಇಪ್ಪತ್ತೈದ ವರ್ಷದಂವಾ ಇದ್ದಾಗ ರಾವಜೀನೂ ಥೇಟ ಹೀಂಗs ಇದ್ದಾ. ಅದೇ ನಿಲವಾ, ಅದೇ ಎತ್ತರಾ. ಅದೇ ಬೀಸತನಾ. ಮಾರ್‍ಯಾಗಿನ ತೇಜ ಮಾತ್ರ ಅಗದೀ ಕಾಕೂನ್ಹಾಂಗ. ಗಣಪತಿಗುಡ್ಯಾಗಿನ ನಂದಾದೀಪಧಾಂಗ ಶಾಂತ ಅದs. ರಾವಜೀ ಠೌಸ ಇಲ್ಲಾ. ಇರತ ಇಲ್ಲಾ. ವಿಶ್ವಾಸ ನಿನ್ನ ಗಂಗಿ ಬಂದಾಳ ಇಂದs ಅತ್ತೀಮನೀ

ಯಿಂದ. ನೀ ಬಂದೀ ಅನೂದನ್ನ ಕೇಳಿ, ಇಕಡೆ ಬರಲಿಕ್ಕೆ ತಾನೇ ಹೊಂಟಿದ್ನ್ಲ. ನಾನೇ ವಿಶ್ವಾಸನ್ನ ಮನೀತನಕಾ ಕರಕೊಂಡು ಬರತೀನ್ಯಂತ ಹೇಳಿ ಬಂದೀನಿ. ಈಗ ಥೊಡ್ಡ ಊರಾಗ ಇದ್ದೀ. ಥೊಡ್ಡ ಡಾಕ್ದರ ಆಗಾಂವಾ. ನಮ್ಮ ಊಟ ನಡೀತದ ನಿನಗ. ನಾ ಊಟಕ್ಕ ಕರೀಲಿಕ್ಕೇ ಬಂದೀನಿ. ಗಂಗಿ ಶ್ಯಾಂವಿಗೀ ಬಸೀಲಿಕ್ಕೆ ಕೂತಾಳ. ಎಷ್ಟ ವರ್ಷದ ಮ್ಯಾಲ ಭೆಟ್ಟಿ ಆಗತೀರಿ ಇಬ್ಬರೂ. ಮಾತಿನ್ಯಾಗ ಕೂತರ ಬೆಳಗ ಹರೀತದ. ವಿಶ್ವಾಸ, ಮಠಕ್ಕ ಹೋಗಿ ಬಂದಿಲ್ಲೋ? ಅಪನವರ ದರ್ಶನ ಆತಿಲ್ಲೋ?"

ಗೌಡರು ಕೇಳಿದರು. ಗೌಡರಿಗೆ ರಾವಜೀಕಾಕಾನ – ಅವರ ಬಾಲ್ಯಸ್ನೇಹಿತನ – ಜೀವದ ಗೆಳೆಯನ ಸ್ಮೃತಿ ಮರುಕಳಿಸಿತ್ತು. ವಿಶ್ವಾಸನಲ್ಲಿ ಅವರು ಗೆಳೆಯನನ್ನು ಕಂಡ ಅಪಾರ ಸಮಾಧಾನ ಹಚ್ಚಿಕೊಂಡು ಮಾತನಾಡಿದರು.

"ಈಗ ಅಪನವರ ಕಡೇನs ಹೊಂಟಿದ್ದೇವು, ಗೌಡರs ಅಲ್ಲೀ ದರ್ಶನ ಮುಗದ ಮ್ಯಾಲs ಮುಂದಿನ ಕೆಲಸಾ. ಅನಾಯಾಸ ನೀವೂ ಬಂದರಿ. ನಡೀರಿ, ಎಲ್ಲಾರೂ ಕೂಡಿ ಅಕಡೇ ಹೋಗೂಣು. ಅಲ್ಲಿಂದ ಗುಡೀಗೆ ಬರೂಣು. ವಿಶ್ವಾಸ ಇನಾ ಇರಾಂವ ಇದ್ದಾನ ಗೌಡರs. ಶ್ಯಾವಿಂಗೀ ಸಾವಕಾಶ ಬಸೀಯಂತs ಗಂಗೂಗ ಹೇಳಿಕಳಸಿರಿ. ನನ್ನಲ್ಲೆ ಅಡಿಗಿ ತಯಾರ ಆಗಿರಬೇಕು."

ಗೋವಿಂದಭಟ್ಟ.

"ನಮ್ಮ ಊಟದ ತ್ರಾಸು ಇಬ್ಬರೂ ತಗೋಬ್ಯಾಡ್ರೀ. ಯಾರ ಮನೀನೂ ನನಗೇನು ಹೊರಗಿಂದಲ್ಲಾ. ನಾವು ಲಗೇಚ ಹೊಂಡೂ ತಯಾರೀಯಿಂದನs ಬಂದೇವು. ನಾಳೇ ಸುರೇಶನ ಸಾಖರಪುಡಾ. ಗೋವಿಂದಭಟ್ಟರನ, ಬಸವಂತಿನ್ನ ಅಗಾವು ಕರಕೊಂಡು ಹೋಗಬೇಕಂತ ಬಂದಿದ್ದೇವು. ಲಗ್ನಾ ಹ್ಯಾಂಗೂ ಇಲ್ಲೇ ಮಾಡೂದದ. ದಿನಾ ಒಬ್ಬರ ಮನ್ಯಾಗ ಗಡಿಗಿನೀರ ಆದರೂ ನಡೀತದ. ವಾಡೇ ದಾಗ ಒಲೀನs ಹೊತ್ತಸಾಂಗಿಲ್ಲಾ. ಒಪ್ಪತ್ತಿಲ್ಲ ಒಪ್ಪತ್ತ ಗಂಗೂನ ಕೈ ಪಾಯಸಾ ನನಗೇನ ತಪ್ಪಿದ್ದಲ್ಲಾ. ಆಕೀ ನಮ್ಮ ಕಳಸಗಿತ್ತಿ. ನಿಮ್ಮ ಮನೀ ಕಡೇ ಬರತೀನಿ ಗೌಡರ. ಆದರ ಊಟದ ಧಾವತೀ ಮಾಡಿಕೋಬ್ಯಾಡರಿ. ನಿಮ್ಮ ಮನೀ ನನಗ ಹೊರಗಿಂದೇನು?"

ವಿಶ್ವಾಸ ಸಾಧಿಸಹೊರಟ.

"ಒಳಗಿಂದಂತs ಬಾರೋ ಗೆಣ್ಯಾ. ಗಂಗೀ ಕೈಲೆ ನನ್ನ ಬೈಸಬೇಕಂತ ಮಾಡೀ

ಏನು ? ಜಪ್ಪ ಅಂದರೂ ನಾ ಬಿಟ್ಟಪ್ಪಲ್ಲಾ. ಲಗೇಜ ಹೊಂಡೂದಂದರೂ ಉಪಾಸ ಹೋಗತೀ ಏನು ? ನಿನ್ನ ಉಪಾಸ ಕಳಿಸಿದೇವು ಅನೂದನ್ನ ಕೇಳಿ, ರಾವಜೀ ಶೆಗಣೀ ಹಾಕ್ಯಾನಲಾ. ಕಮತಿಗ್ಯಾ ಲಗ್ಗನs ನಮ್ಮ ಮನೀಗೆ ಹೋಗಿ ಹೇಳಿ ಬಾ. ಹತ್ತ ಮಂದಿ ಐತಿ ಉಳ್ಯಾಕಂತs. ಇಕಾ ನೀ ಜರಾ ಗಡಾನs ಬಾ ವಾಡೇದ ಕಡೇ. ಜರೂರೀ ಕೆಲಸ ಐತಿ; ಗೋವಿಂದಭಟ್ಟ, ನೀ ವಿಶ್ವಾಸನ್ನ ಕರಕೊಂಡು ಮಠಕ್ಕ ಹೋಗಿ ಬಾ. ರಾಜೋಟಿ-ನಾನೂ ಇಲ್ಲೇ ಇರತೇವಿ. ನೀವು ಬಂದಮ್ಯಾಲ ನಮ್ಮ ಮನೀ ಕಡೇ ಹೋಗೂಣಂತ; ನಿನ್ನ ಫಳಾರ ಏನು ? ಥಾಲಿ ಹಾಲಾ, ನಾಕ ಹಣ್ಣಾ ನಮ್ಮ ಮನ್ಯಾಗನs ಆಗಲಿ"

"ದಾದಲ್ಯಾ, ಹಂಗಾರ ಮನೀಕಡೇ ಹೋಗಿ ಬಾ. ಸ್ನಾನಾ ಮಾಡಿ ಗಣಪತಿ ಗುಡೀ ಕಡೇ ಬರತೀಯಾ ಅಂದರs. ಇಕಾ ಗುಡೀ ಕೀಲಿ ಕೈ. ಗುರುಭಟ್ಟ ಇರತಾನ ಅಲ್ಲೇ. ಮಂಗಳಾರತೀ ತಯಾರೀ ಮಾಡನ್ನು. ಬರೂ ಮುಂದ ಕಾಯಿ-ಕಪ್ಪರಾ ನಾವ್ ತರತೇವು. ಇಕಾ, ನಿಮ್ಮ ಅಜ್ಜಿ ಮಲಗಿದ್ದರ ಎಬ್ಬಿಸಿ ಮೋತಿ ತೋರಸು. ದಾದಲ್ಯಾನ ಅಕ್ಕೀಕಾಳೇನು ನನ್ನಿಂದ ಹಾಕಸೂದಿಲ್ಲ ಗೋವಿಂದಭಟ್ಟಾ ಅಂತs ಹಾಡಲಿಕ್ಕೆ ಸುರೂ ಮಾಡ್ಯಾಳ. ಇನ್ನೇನು ಭಾಳ ದಿನಾ ಟಿಕಾಸೂ ಲಕ್ಷಣ ಇಲ್ಲಾ"

ನಮ್ಮ ಅಜ್ಜಿಗೆ ಖಚಿತವಾಗಿ ನೂರು ವರುಷ ತುಂಬಿಹೋಗಿದ್ದವು. ನೂರರ ಮೇಲೆ ಎಷ್ಟು ದಶಕವಾಗಿರಬೇಕೆಂಬ ಬಗ್ಗೆ ತಿಪಲಾಗಿತ್ತು. ಆದರೂ ಅವಳ ಸುಪುತ್ರ – ಗೋವಿಂದಭಟ್ಟ, ತನ್ನ ಮಾತೋಶ್ರೀ "ಭಾಳ ದಿನಾ" ಟಿಕಾಸುವದಿಲ್ಲ ವೆಂದು ಹಳಹಳಿಸಿದ. ನನ್ನ ಉತ್ತರದ ದಾರಿಕಾಯದೆ, ಅಪನವರ ದರ್ಶನಕ್ಕೆ ಹೊರಟು ನಿಂತ ವಿಶ್ವಾಸನನ್ನು ಕರೆದುಕೊಂಡು ಹೊರಟು ನಡೆದ.

ತುಳಸಿಯನ್ನು ಕರೆದುಕೊಂಡು ಬಸವಂತಿ ಒಳಗೆ ನಡೆದಳು. ಗೌಡರು ನನ್ನನ್ನು ಬದಿಗೆ ಕರೆದು, ಆಕೇಲಾ ಆಗಿ ನಿಂತ ದಸ್ತಗೀರ್ಯಾ ಯಾರೆಂದು ಕೇಳಿದರು. ಬಸವಂತಿಯು ಕೂಡ ಒಳಗೆ ಹೋದ ಹುಡುಗಿಯ ಚಿಕಿತ್ಸೆ ಮಾಡಿದರು. ಮತ್ತೆ ನಾನು ಪರಿಚಯ-ಪುರಾಣ ವಾಚಿಸಿದೆ.

"ಕಾಕಾನ ಮೊಮ್ಮಗಾ. ಹೂಬೇಹೂಬ ಅವರ್‍ನ ಹೊತಾನಂತ ಯಾಕ ಅಂದನೀ. ನನ್ನ ಕಾಯಾಸ ತಪ್ಪಾಂಗಿಲ್ಲಾ"

ತಮ್ಮ ಕಾಯಾಸಚಾತುರ್ಯ ತಾನೇ ಹೇಳಿಕೊಂಡು, ಮತ್ತೆ —

"ದಾದಲ್ಯಾ, ಬಸವಂತಿನ್ನ ಜರಾ ಹೊರಗ ಕರೀ. ದಗದ ಅದs ಅಂತ ಹೇಳು.

ಜರಾ ಮಾತಾಡೂದದ. ಬಂದ ಹೋಗನ್ನು"
ಎಂದು ಹೇಳಿದರು.

ನಾನು ಬಸವಂತಿಯನ್ನು ಕರೆಯಲೆಂದು ಒಳಗೆ ಹೋದೆ. ಅಡುಗೆಯ ಮನೆಯಲ್ಲಿ ಬಸವಂತಿ-ತುಳಸಿ ಒಲೆ ಹೊತ್ತಿಸಿ ಚಹಕ್ಕಿಡುವ ತಯಾರಿ ನಡೆಸಿದ್ದರು. ನನ್ನನ್ನು ನೋಡಿ, ಬಸವಂತಿ, ತುಳಸಿಯ ಕಡೆಗೆ ತಿರುಗಿ —

"ತುಳಸೀ, ಬಂದ ನೋಡು ನನ್ನ ಯಜಮಾನಾ. ಹ್ಯಾಂಗ ಎಲ್ಲಾರ ಕಣ್ಣ ತಪ್ಪಿಸಿ ಒಳಗ ಬಂದಾನ. ನನ್ನ ನೋಡದs ಅವನ ಜೀಂವಕ ಸಮಾಧಾನs ಇಲ್ಲಾ. ದಾದಲ್ಯಾ, ನಿನ್ನ ಆಶಾ ಬಿಟ್ಟs ಪುಣೇದಿಂದ ಬಂದಿದ್ದೆ. ದಾದಲ್ಯಾನ ಭೆಟ್ಟಿ ಶಿವನ ಮನ್ಯಾಗನs ಅಂತ ಮಾಡಿದ್ದೆ. ನನ್ನ ಮನಸಿನ್ಯಾಗಿನ ಮಾತು ತಿಳೀತ ಕಾಣತೈತಿ ದಾದಲ್ಯಾ? ಅದಕs ಧಾವಿಸಿ ಬಂದೀ."
ಎಂದು ನಗುತ್ತ ನುಡಿದಳು.

"ನೀ ಸೂಜಿಗಲ್ಲ ಬಸವಂತೀ. ಜಗ್ಗೂ ಗುಣಾ ನಿನ್ನಲ್ಲೆ. ಜಗ್ಗಿದಲ್ಲೆ ಬರೂ ಗುಣಾ ನನ್ನಲ್ಲೆ. ನೀ ಜಗ್ಗಿದಾಗ ನಾ ಬರದೇ ಏನ ಮಾಡಲಿ ಬಸವಂತೀ? ದಾದಾ ಎಲ್ಲೀ? ವಾಡೇದ ಇಡೀ ಅಧಿಕಾರನs ತಗೊಂಡೀ ಏನು? ವಾಡೇದ ಬಾಗಲದಾಗ ದೀಪಾ ನೋಡೇ ಅನಿಸ್ತ್ಯು. ಇದು ನನ್ನ ಬಸವಂತೀ ಕೆಲಸ ಅಂತs. ನಿಶಾನೀ ಹಚ್ಚಿದಿ ಬಸವಂತಿ! ದಾದಾ, ಜೀವಂತರs ಇದ್ದಾನಿಲ್ಲೋ? ಏನು ಪುಣೇದ ಹಾದ್ಯಾಗೇ ಖತಮ್ ಮಾಡಿದ್ಯೋ?"
ನಾನು.

"ಊಟಾ-ಉಡಿಗೀ ಬಗೀಹರೀಲಿ ದಾದಲ್ಯಾ. ಹೇಳತೀನಿ ಹಿಂದಾಗಡಿಸಿ. ಅವರಿಗೇನ ಆಗೇದ ಖತಮು ಆಗಾಕ? ವಾಡೇದ ಮ್ಯಾಲ ಕಲ್ಲ ಬೀಳಾಕ ಸುರೂ ಆಗಲಿ ಸರಿ ರಾತ್ರೀಗೆ. ಅವರು ಅದಾರೋ ಇಲ್ಲೋ ತಿಳೀತೈತಿ. ಇಂದ ನೀ,ವಿಶ್ವಾಸ ಇಬ್ಬರೂ ಬಂದೀರಿ. ಅವರಿಗೂ ಸುದ್ದಿ ಮುಟ್ಟಿರತೈತಿ. ಕವಣೆಗಲ್ಲs ಸುರದಾಡ ತಾವs. ಕಾವಲಾ ಜರಾ ಬಿಗೀ ಮಾಡರ್ಯಂತ ಗೌಡರಿಗಿ ಹೇಳಬೇಕ ಇಂದs"

ಬಸವಂತಿ ಏನೋ ಹೊಸ ಸುದ್ದಿ ಹೇಳಿದಳು.

"ಅಂಥಾಂಗ ಬಸವಂತೀ, ಗೌಡರು ನಿನ್ನ ಕರೀಲಿಕ್ಕೆ ಹತ್ತ್ಯಾರ. ಹಾದೀ ನೋಡತಾರ ನಡೀ."

ಅವಳನ್ನು ಕರೆದುಕೊಂಡು ಗೌಡರು-ರಾಜಪ್ಪ ಇದ್ದಲ್ಲಿಗೆ ಹೋದೆ. ಗೌಡರು

ಮೆಲುದನಿಯಲ್ಲಿ —

"ಬಸವಂತೀ, ಇಂದ ಕಲ್ಲ ಬೀಳೂದು ಜರಾ ಜೋರ ಆಗ್ವಾಂಗ ಕಾಣಸ್ತದ. ಇವರೆಲ್ಲಾ ಬಂದ ಸುದ್ದಿ ಹತ್ತಿರತ್ವದ. ಬಸಗೋಂಡಾ, ನಬೀಸಾಬಾ ಇಂದ ಹರ್‍ಯಾಗನ್ಽ ಬಂದು ಇವರಿಗೆ ಕೂಡಿದರು. ಎಲ್ಲ್ರೊ್ಯೀ ಹೋಗಿ ಟ್ರಕ್ಕನ್ಯಾಗ ಮಂದಿನ್ನ ತುಂಬಿ ತಂದಾರಂತ. ಇಂದ ಮುಕ್ಕ ಶೇರೇ ಹೊರಗ ಮಾರಾಟ ಆಗಿಲ್ಲಂತ. ಮೂರ-ನಾಕ ದಿನಾ ಯಾರಿಗೂ ಹೊರಗ ಶೆರೇ ಮಾರಬ್ಯಾಡಂತ, ಗಡಂಗದವಗ ಅಗಾವ ರೊಕ್ಕಾ ಕೊಟ್ಟು ಇಟ್ಟಾರಂತ. ಊರ ಮುಂದಿನ ನಬೀಸಾಬನ ತ್ವಾಟದಾಗ ಮ್ಯಾಳ ಜಮಾಸೇದ. ಹಿರೇಮಠದಾಗೂ ಮಂದಿ ಕೂಡೇದ. ನಿನ್ನ ಅನಾಮಾತನ್ಽ ಹಿಡಿಯೂ ಡಾವ್ ನಡದ್ವದ. ನಾಳೆ ಅಮಾಸೀ. ಕತ್ತಲ್-ರಾತ್ರಿ ನಾಳೇನ್ಽ. ನಾಳೆ ಜರಾ ಊರಾಗ ಗಡಿಬಿಡಿ ಕಾಣಿಸಿದರ ಠಾಣೇಕ್ಕ ವರದೀ ಕಳಸ್ತೀನಿ. ನಾಕ ಮಂದಿ ಪೋಲೀಸರು ಅದಾರಂದರ ಏಟೋ ಕಾಯದೇದ್ದು ಧಾಕ ಇರತ್ವದ. ಪೋಲೀಸ ಪಾರ್ಟಿ ಇಂದ್ಽ ಬರತ್ವದ ಅಂತ್ಽ ಸುದ್ದೀ ಹುಟ್ಟಸ್ತೀನಿ. ಜರಾ ಘಾಬರ್‍ಯಾಗಲಿ ಅವರ ಮಂದಿ. ರಾಚೋಟೀ ನಿಮ್ಮ ಶಿವ್ಯಾನ್ನ ಎರಡ ದಿನಾ ವಾಡೇದಾಗ ಬಂದೀನ್ನ ಮಾಡೂಣು. ನನಗ ಅವಂದ್ಽ ಅಂಜಿಕಿ. ಕಾಕಾ-ಸೋನಕ್ಕಾ ಯಾರೂ ಬರಲಿಲ್ಲಾ ರಾಚೋಟಿ, ಅದ್ಽ ಠೀಕ ಆತು. ಅವರಿಗೆ ಭಾಳ ಧಾವತಿ ಆಗತಿತ್ತು. ನಾಕ ದಿನಾ ಜರಾ ಗಡಿಬಿಡಿ ಆಗತದ. ಶ್ಯಾಮನ ಕಡೀಯವರು ಕೂಲೀ ಮಂದಿ. ನಿಶಾ ಇಳದರ ಮತ್ತ ಅವೂ ಹೆಣಾನ್ಽ. ಅಗದೀ ನಮ್ಮ ಕೈನ್ಽ ಮೀರತದ ಅಂದರ, ಚಿಕ್ಕೋಡಿ ಫೌಜದಾರಗ ಹೇಳಿಕಳಸೂಣು. ಅವಂದು ನಮ್ಮದು ಘರೋಬಾ. ಅಂವಾ, ನಮ್ಮ ಗಂಗೀ ಗಂಡನ ಸ್ವಾದರತ್ತೀ ಮಗಾ! ನನ್ನ ನಿರೋಪ ಅದ್ಽ ಅಂದರ ಆರ ತಾಸ ರಾತ್ರ್ಯಾಗ ಎದ್ದ ಬರತಾನ. ನಾ ಹೋಗಲ್ಯಾ ರಾಚೋಟಿ ಇನ್ನ್ಽ. ನಾ ದಾರೀ ಕಾಯುತಿರತೀನಿ. ಲಗ್ಗನ ಬಂದಬಿಡರಿ."

ಇಷ್ಟು ಹೇಳಿ ಗೌಡರು ನಮ್ಮ ಮನೆಗೆ ಹೊರಟರು. ನಾನು, ದಸ್ತಗೀರ್‍ಯಾ ಈ ಸುದ್ದಿಯನ್ನು ಕೇಳಿ ಸಚಿಂತರಾದೆವು.

"ಚಾ ಆಗಿರಬೇಕ ನಡೀ ದಾದಲ್ಯಾ... ನೀವು ಚಾ ಕುಡಿಯೂದರಾಗ ರಾಚಪ್ಪಣ್ಣಾ ಎಲ್ಲಾ ಹಕೀಕತ್ತ ಹೇಳತಾನ."

ಬಸವಂತಿ.

ಚಹಾ ಕುಡಿಯಲೆಂದು ನಾವು ಅಡುಗೆಯ ಮನೆಗೆ ನಡೆದೆವು. ಮರಳುವ

ಚಹವನ್ನು ಅದೇ ಒಲೆಯಿಂದ ಇಳಿಸುತ್ತ ತುಳಸಿ —

"ರಾಜಾನೂ ಚಹಾ ತಗೊಂಡು ಹೋಗಿದ್ದರ ಠೀಕ ಆಗತಿತ್ತು. ನೀವು ತಗೋರಿ. ಅಂವಾ ಬಂದ ವ್ಯಾಲ ಮತ್ತ ಮಾಡಿಕೊಡತೀನಿ."
ಎಂದಳು.

ನಾವು ನಾಲ್ವರೂ ಚಹಾ ಕುಡಿಯಲು ಕುಳಿತೆವು. ರಾಚಪ್ಪ ನಮ್ಮಿಂದ ಅನತಿ ದೂರದಲ್ಲಿ ಕುಳಿತ. ಅವನು ಚಹದ ಗಿರಾಕಿ ಅಲ್ಲ.

ಶ್ಯಾಮರಾಯನ ಕೂಡ ಪುಣೆಯಿಂದ ಬಂದ ಬಸವಂತಿ ವಾಡೆಯ ಹೆಬ್ಬಾಗಿಲಲ್ಲೇ ಕುರುಕ್ಷೇತ್ರದ ಪೀಠಿಕೆ ಹಾಕಿ ಕಿಚ್ಚಿನ ಕುಂಡವನ್ನು ಕೆದಕಿದ್ದಳು. ದಾರಿಯುದ್ದಕ್ಕೂ ಇಬ್ಬರಲ್ಲಿಯೂ ದುಸು-ಮುಸು, ಭುಸು-ಭುಸು ನಡದೇ ಇತ್ತು. ಶ್ಯಾಮರಾಯ ನಾಗರದಂತೆ ಫಣೆಯನ್ನು ಬಿಡಿಸಿ ಫೂತ್ಕರಿಸಿದರೆ, ಬಸವಂತಿ ತನ್ನ ವಜ್ರಪಂಜರದಿಂದ ಅದರ ಹೆಡೆಗೆ ಆಘಾತಮಾಡುತ್ತಿದ್ದಳು. ಈ ಆಘಾತ-ಪ್ರತ್ಯಾಘಾತದಲ್ಲಿ, ಕೈ-ಮೈಗೆ ನೆತ್ತರ ತೊಡೆಯದಿದ್ದರೂ ಮನಸ್ಸು ಆ-ರಕ್ತರಂಜಿತವಾದವು. ಶ್ಯಾಮರಾಯನ ನಂಜಿನ ಮಾತು ತನ್ನ ವಿಕಟಲೀಲೆಯಾಡಿದಾಗ – ಗಾಡಿಯ ರಥಿಕ ಖಾದರ್ ಅದನ್ನು ಸಹಿಸದೆ, ಯುದ್ಧ ಮಧ್ಯದಲ್ಲಿ, ಶಲ್ಯ ಕರ್ಣನ ರಥವನ್ನು ಬಿಟ್ಟು ನಡೆದಂತೆ, ಶ್ಯಾಮರಾಯನ ಗಾಡಿಯನ್ನು ಬಿಟ್ಟು ನಡೆದಿದ್ದ. ಬಸವಂತಿಯ ಎದುರಿನಲ್ಲಿ, ತಾನು ನೆಚ್ಚಿ ನಂಬಿದ ಖಾದರ್ ಈ ರೀತಿ ಅವಮಾನಿಸಿ ಹೊರಟದ್ದನ್ನು ಕಂಡು, ಶ್ಯಾಮರಾಯನ ಉಕ್ಕಿನ ಹಲ್ಲು ಕರಕರ ನಿನಾದಮಾಡಿದ್ದವು. ಆದರೆ ಮಾಡುತ್ತಾನೇನು? ಗಾಡಿಯನ್ನು ತಾನೇ ದೂಡಿಕೊಂಡು ಹೇಗೋ ಊರಿಗಂತೂ ಬಂದು ಮುಟ್ಟಿದ. ವಾಡೆಯಲ್ಲಿ ನಿಂತು ಎಲ್ಲರ ಪಾರುಪತ್ಯ ಮಾಡಬೇಕೆಂದು ಡಾವು ಹಾಕಿಕೊಂಡಿರಬೇಕು.

ಆದರೆ... ಬಸವಂತಿ, ಅವನ ಡಾವಿನ ಬುಡಕ್ಕೇ ಸುರಂಗ ಹೊಡೆದಳು. ಶ್ಯಾಮರಾಯ ಯೋಜನದಾಚೆಗೆ ಹೋಗಿ ಅಂಗಾತ ಬಿದ್ದ.

ಗಾಡಿಯಿಂದ ಇಳಿದವಳೇ ಬಸವಂತಿ, ಸರಸರನೇ ವಾಡೆಯನ್ನು ಹೊಕ್ಕು ಹರಿತಾದ ಕುಡುಗೋಲೊಂದನ್ನು ತೆಗೆದುಕೊಂಡು ಬಂದು ಬಾಗಿಲಲ್ಲಿ ದ್ವಾರ ಭೈರವಿಯಂತೆ ನಿಂತುಬಿಟ್ಟಳು. ಆಳು-ಕಾಳು, ಹಿರಿಯ ಕಮತಿಗ ಖಾದರ್ ನೋಡುನೋಡುತ್ತಿದ್ದಂತೆ – ಶ್ಯಾಮರಾಯನಿಗೆ ಅಂತಿಮ ಸಂದೇಶ ಹೇಳಿದಳು:
"ವಾಡೇದಾಗ ಕಾಲಿಟ್ಟರ ನಿಮ್ಮ ನೆತ್ತರಾ ಬಸೀತೀನಿ. ವಾಡೇದ ಹೊಸ್ತಲಾ

ನಿಮ್ಮ ನೆತ್ತರಲೇನs ತೊಳೀತೀನಿ. ವಾಡೇ ಕಾಕಾ ಅವರದು. ಅವರs ಬಂದು ಇಲ್ಲಿ ನಿಂದರಬೇಕು. ನಾಯೀ-ನರೀಗಿ ಇಲ್ಲಿ ತಾಂವ ಇಲ್ಲಾ. ಕಾಕಾ ಅವರಿಗಿ ಹೇಳಿ ಬಂದೀನಿ: ಕಾಕಾ, ವಾಡೇದ ಕಾಳಜೀ ಬಿಡರ‍್ಯಂತ. ಇಂದಿನ ಸುಟೂ ನಾನೇ ವಾಡೇದ ಮಾಲಕತಿ"

ಎಂದು ಕೋಮಲ-ಕಾಯದ, ಮಲ್ಲಿಗೆ-ತೂಕದ ಬಸವಂತಿಯಲ್ಲಿ ಚತುರ್ಭುಜ-ದುರ್ಗೆಯ ಕರಾಳಸ್ವರೂಪ ಅವತರಿಸಿದ್ದನ್ನು ಕಂಡು ಶ್ಯಾಮರಾಯ ತಿರುಗಿ ಮೋಟಾರು ಏರಿ ಹೊರಟ. ಎಲ್ಲಿಗೆ ಹೋದನೆಂಬುದು ಯಾರಿಗೂ ತಿಳಿಯಲೇ ಇಲ್ಲ.

ಮುಚ್ಚಂಜೆಯಾಗಿತ್ತು. ಬಸವಂತಿ, ಪಡಸಾಲೆಯ ಗೂಟಕ್ಕಿದ್ದ ಹಿಲಾಲು ಛಡಿಗಳನ್ನು ಎಳೆದವಳೇ, ಅರಿವೆ ಸುತ್ತಿ – ಎಣ್ಣೆಯಲ್ಲದ್ದಿ – ಧಗಧಗ ಉರಿಯುವ ಭುಗಿಲೆಂದು ಹೊತ್ತಿದ ಹಿಲಾಲುಗಳನ್ನು ಹಿಡಿದುಕೊಂಡೇ ಬಂದು ಅವನ್ನು ವಾಡೆಯ ಹೆಬ್ಬಾಗಿಲಲ್ಲಿ ನೆಟ್ಟುಬಿಟ್ಟಳು. ಅಖಂಡ ರಾತ್ರಿಯೆಲ್ಲ ಅವು ಉರಿಯುವಂತೆ, ಖಡೀ ಒಂದು ಆಳನ್ನು ಕೂಡಿಸಿ, ಎಣ್ಣೆಯ ಡಬ್ಬಿಯನ್ನು ಅವನ ಸ್ವಾಧೀನ ಮಾಡಿದಳು. ಜನ ಪರಿಸೆ ಕೂಡಿ ಇದನ್ನು ನೋಡಿತು. ವಾಡೆಯ ಹೆಬ್ಬಾಗಿಲಲ್ಲಿ ದೀಪ ಹತ್ತಿದ್ದನ್ನು ಮತ್ತೆ ಅವರ ಕಣ್ಣು ಕಂಡಿತು. ಕಾಕಾನ ಬಳಗಕ್ಕೆ ಬಸವಂತಿಯ ಈ ಚಮತ್ಕಾರದಿಂದ ಧನ್ಯತೆ ಎನಿಸಿತು.

ಶ್ಯಾಮರಾಯನ ಬಳಗದ ಬಣಿವೆಯಲ್ಲಿ ಬಸವಂತಿ ಉರಿಯುವ ಹಿಲಾಲು ಬೀಸಿದ್ದಳು.

ಗೌಡರು, ರಾಚಪ್ಪ, ಗೋವಿಂದಭಟ್ಟ, ಕುಲಕರ್ಣೀ ರಂಗಣ್ಣ, ದರ್ಗಾದ ಪೀರಸಾಹೇಬರು ಬಸವಂತಿಯ ಉಧೋ ಮಾಡಿದ್ದನ್ನು, ಪ್ರಾಂಜಲಮನಸ್ಸಿನಿಂದ, ಮುಕ್ತಕಂಠದಿಂದ ಪೋಸ್ಟಮನ್ ಪಾಂಡೂ, ಪತ್ರ ಹಂಚುವ ಚಲಾಕಿನಿಂದಲೇ ಊರ ತುಂಬ ಸಾರಿ ಬಂದ. ಅಷ್ಟಾವಕ್ರ ತಮ್ಮಾಜಿಯನ್ನು ತಿವಿದು "ನಿಮ್ಮ ಶ್ಯಾಮರಾಯನ ಕಂತೀ ಹ್ಯಾಂಗ ಕೂಡಿಸಿದೇವು" ಎಂದು ರೇಗಿಸಿದ್ದ. ಇದೆಲ್ಲ ವಾರ್ತೆ, ನಬೀಸಾಬನ ತೋಟದಲ್ಲಿಯ ಮನೆಯಲ್ಲಿ ನಿಂತ ಶ್ಯಾಮರಾಯನಿಗೆ ಬಿನ್-ಚೂಕಾಗಿ ವರದಿಯಾಗಿತ್ತು. ಈ ವರದಿಯ ಅಗತ್ಯ ಶ್ಯಾಮರಾಯನಿಗಿರಲಿಲ್ಲ. ಅವನ ಸಿದ್ಧತೆ ನಡೆದಿರಬೇಕು. ಬಸಗೋಂಡ-ನಬೀಸಾಬ ಇಬ್ಬರೂ ಮುಂಬೈಯಿಂದ ಅಚಾನಕವಾಗಿ ಬಂದು, ಅದೇ ಅವನನ್ನು ಕೂಡಿದ್ದರು. ಶ್ಯಾಮರಾಯನ ಕಾಮಗಿರಿಯ ಮೇಲೆ ಒಡ್ಡರ, ಹರಣ-ಶಿಕಾರಿಗಳ ಪಟಾಲಮ್ಮೇ ಇತ್ತು. ಬೆಳಗಿನ ನ್ಯಾರಿ,

ಮಧ್ಯಾಹ್ನದ ಊಟ ಇರದಿದ್ದರೂ ಅವರಿಗೆ ಸಾಗುತ್ತಿದೆ. ಆದರೆ ಸಂಜೆಯ ಮುಂದೆ ಈ ಪಸಿವೆಯ ಹಿಂಸೆಯನ್ನು ಮರೆಯಿಸುವ – ಒಂದು ಮಗೀ ಶೆರೇ ಇದ್ದರೆ ಸಾಕು. ಅವರು ಸ್ವರ್ಗ, ನರಕ, ವೈಕುಂಠ ಯಾವುದಕ್ಕೂ ಬಂದು ಕೊಳ್ಳಿಹಚ್ಚುತ್ತಾರೆ. ಅದರ ಅಮಲಿನಲ್ಲಿ ಖೂನೀ-ದರೋಡೆ ಯಃಕಶ್ಚಿತ್ ಎಂದು ಸಾಧಿಸುತ್ತಾರೆ. ಶ್ಯಾಮರಾಯನಿಗೆ ಇವರ ಗತ್ತು ಅಪರಿಚಿತವಲ್ಲ. ಮುಕ್ತಹಸ್ತನಾಗಿ ರೊಕ್ಕ ಚೆಲ್ಲಿ ಗಡಂಗವನ್ನೇ ಗುತ್ತಿಗೆ ಹಿಡಿದುಬಿಟ್ಟಿದ್ದ. ಎರಡು ದಿನ ನಿಶೆಯ ಘುಂದಿಯಲ್ಲಿದ್ದ ತನ್ನ ಕೂಲಿಯ ಆಳುಗಳಿಂದ ನಿಶಾಚರಕೃತ್ಯ ಮಾಡಿಸಿದ್ದ.

ವಾಡೆಯ ಮೇಲೆ ಸರಿರಾತ್ರಿಗೆ ಕಲ್ಲು ಬೀಳಲು ಸುರುವಾದರೆ ಆಯಿತು. ಯಾರಿಗೂ ಹೊರಗೆ ತಲೆಹಾಕುವ ಎದೆಯಾಗುತ್ತಿರಲಿಲ್ಲ. ಈ ಗದ್ದಲದ ನಾಡಿಯನ್ನು ಹಿಡಿದು. ಗೌಡರು ತಮ್ಮ ಆಳು-ಕಾಳು, ವಾಡೆಯ ಆಳು-ಕಾಳು, ಹೊಲಗೇರಿಯಲ್ಲಿಯ ಎಲ್ಲ ಗಂಡಾಳುಗಳನ್ನು ಜಮಾಯಿಸಿ, ರಾತ್ರಿಯ ಗಸ್ತಿಗೆ, ವಾಡೆಯ ಕಾವಲಿಗೆ ಇಟ್ಟರು. ತಾವು, ರಾಜಪ್ಪ, ಖಾದರ್, ಕುಲಕರ್ಣೀ ಬಂಡ್ಯಾ, ಪರಸ್ಯಾ, ವಾಡೆಯಲ್ಲಿ ಬಸವಂತಿಯ ರಕ್ಷಣೆಗೆ ನಿಂತಿದ್ದರು.

ನಿನ್ನೆ ರಾತ್ರಿ ವಾಡೆಯ ಮೈ ಹುಣ್ಣುಹುಣ್ಣಾಗುವಂತೆ ಕಲ್ಲು ಬಿದ್ದಿದ್ದವು. ಮಾಡಿಯ ಮೇಲಿನ ಖಿಡಕಿಯ ಕಾಜು ಒಡೆದಿದ್ದವು. ಕಲ್ಲಿನ ಸುರಿಮಳೆಗೆ ಪ್ರತ್ಯುತ್ತರವೆಂದು ರಾಜಪ್ಪ, ಕಾಕಾ ಅವರ ಜೋಡು-ನಳಿಯ ಬಂದೂಕಿನಿಂದ – ಗಣಪತಿ ಗುಡಿಯ ಪಠಾಣ ರಖವಾಲದಾರ ತನ್ನ ಬಂದೂಕಿನಿಂದ ಗುಂಡು ಹಾರಿಸಿದ್ದರು. ನಬೀಸಾಬನ ತೋಟದಿಂದೂ ಬಂದೂಕಿನ ಬಾರು ಆಗಿತ್ತು.

ಬಸವಂತಿಯನ್ನು ಜೀವಂತ ಸೆರೆಹಿಡಿದು, ವಾಡೆಯ ಹೆಬ್ಬಾಗಿಲಲ್ಲೇ ಅವಳ ಮೂಗು-ಕಿವಿ ಕೊಯ್ದು ಅವಳನ್ನು ವಿದ್ರೂಪಗೊಳಿಸುವ ಪಣವನ್ನು ಶ್ಯಾಮರಾಯ ಪುಕಾರಿಸಿದ್ದಾನೆಂಬ ಬಾತಮಿಯನ್ನು ಪೋಸ್ಟಮನ್ ಪಾಂಡೂ ತಂದಿದ್ದ.

"ಯಾ ಜಾಗಾದಾಗ ನನ್ನ ಅಪಮಾನ ಮಾಡ್ಯಾಳ, ಅಲ್ಲೇ ಅದರ ಬದಲಾ ತಗೋತೀನಿ...ತಗೋಳದಿದ್ದರ, ಕಾಕಾನ......" ತನ್ನ ಠರಾವಿಕ ಉತ್ತರ-ದಕ್ಷಿಣದ ಪುಕಾರಕಿಯನ್ನು ಶ್ಯಾಮರಾಯ ಹೊಡೆದಿದ್ದ. ಪುಕಾರಕಿಯಲ್ಲಿ ತಥ್ಯವಿರದಿದ್ದರೂ ಅವನು ಸಾರಿದ ಪಣ ನಂಬಲರ್ಹವಾಗಿತ್ತು. ಇದರಲ್ಲಿ ಪಾಂಡೂನ ಕೈಗಂಟು ಇದ್ದಂತಿರಲಿಲ್ಲ.

ಇದು ರಾಜಪ್ಪ ಹೇಳಿದ ಸುದ್ದಿಯ ತ್ರೋಟಕ ವರದಿ.

ಇಷ್ಟು ವಿವರಿಸಿ, ರಾಜಪ್ಪ —

"ದಾದಲ್ಯಾ, ಶ್ಯಾಮರಾಯನ ಪುಷಾರಕೀ ಒಳಗ ಅರ್ಥ ಇಲ್ಲಂತ ತಿಳೀ ಬ್ಯಾಡಾ. ಅಂವಾ ಭಾರೀ ಖವಾಳಸಿ, ಬಸವಂತೀವ್ಯಾಲ, ವಾಡೇದವ್ಯಾಲ ಕೈ ತಗೊಂಡಾ ಅಂದರ, ಅಂವನ್ನ ಇದರ ಸಹಗತೀ ಉಳಿಯೂದಿಲ್ಲ. ನಾ ಪುಣೇದಿಂದ ಬರೂಮುಂದ ಕಾಕಾ ಒಂದ ಮಾತ ಹೇಳಿದರು: "ರಾಜೋಟಿ, ಬಸವಂತೀ ಕೂದಲಕ್ಕ ಧಕ್ಕಿ ಹತ್ತಿದರ ನನ್ನ ಜೀಂವನs ಹೋಧಾಂಗ" ಅಂತs. ಬಸವಂತಿನ್ನ ಬಚಾವ್ ಮಾಡೂದರಾಗ ಶ್ಯಾಮರಾಯಗ ಧಕ್ಕಿ ಹತ್ತೀತಲಾ ಅನ್ನೂ ವಿಚಾರ ಕಾಕಾ ಅವರಿಗೆ ಬಂಧಾಂಗ ಕಾಣಲಿಲ್ಲಾ. ಬಂದಿದ್ದರೂ ಅವರು ಅದರ ದಶಿಂದ ಬೇಫಿಕೀರ ಇರಬೇಕು. ಶ್ಯಾಮರಾಯಗ ಧಕ್ಕಿ ಆದರ, ಸೋನಕ್ಕಗ ಧಕ್ಕಿ ಆಧಾಂಗ. ಶ್ಯಾಮರಾಯನ್ನ ಎದರಸಾವರು ಅಂದರs ನಾನು, ನಮ್ಮ ಶಿವ್ಯಾ ಇಬ್ಬರs. ಏನ ಪಂಚೇತಿ ಬಂದsದ, ನನಗ! ಇಂದ ಮಧ್ಯಾಹ್ನದಾಗ ನಾನೂ ಗೌಡರು ಅಪಸವರ ಕಡೇ ಹೋಗಿ ಇದರ ದಶಿಂದ ಮಾತಾಡಿ ಬಂದೇವು. ಬಸವಂತಿನ್ನ ಊರ ಬಿಡಿಸಿ ಪುಣೇಕ್ಕ ಕಳಿಸಿದರ ಒಂದಿಷ್ಟು ಥಾಂಬಣೀ ಆದೀತು ಈ ಗದ್ದಲಾ ಅಂತ ವಿಚಾರ ಮಾಡೇವು. ನೀವೂ ಬಂದೀರಿ. ಇಂದ ರಾತ್ರೀನೇ ಊರ ಬಿಡರಿ. ಅದರಾಗನs ನಮ್ಮ ಕಲ್ಯಾಣ ಅದs ದಾದಲ್ಯಾ."

ಕಳಕಳಿಯಿಂದ ಹೇಳಿದ.

"ರಾಜಪ್ಪಣ್ಣಾ, ರಾತ್ರೀ ತಲೀ ತಪ್ಪಿಸಿಗೊಂಡು ಹೋಗೂದು ನನಗ ಒಪ್ಪೂದಿಲ್ಲಾ. ಬಸವಂತಿ ಬರೇ ಕುಡಗೋಲ ತೋರಿಸಿ ದಾದಾ ಅವರಿಗೆ ಧಾಕ ಹಾಕ್ಯಾಳ. ಬಂದೂಕಾ, ಪಿಸ್ತೂಲಾ ಇದ್ದ ಗಂಡಸರು ರಾತೋರಾತ್ರೀ ಓಡಿದರು ಅನೂವನ್ನ ಕೇಳಿ ಊರಿಗೆ ಊರೇ ನಕ್ಕೀತು. ಏನರs ಭಾನಗಡೀ ಆಗೂದು ಅನು ಕಲ್ಪನಾ ಬಂದೇ ನಾವು ಈ ಗಾಡಿ ತಗೊಂಡು ಬಂದೇವು. ವಿಶ್ವಾಸ ಬಂದದ್ದು – ದಾದಲ್ಯಾ ಬಂದದ್ದು ದಾದಾಗ ತಿಳದsದ. ಅವನೂ ಏನೋ ವಿಚಾರಕ್ಕ ಬೀಳತಾನ. ಇಂದೇ ಅಷ್ಟೇನು ಗಡಿಬಿಡಿ ಮಾಡಲಿಕ್ಕಿಲ್ಲಾ. ನಾಳೆ ಬಸವಂತಿನ್ನ ಕರಕೊಂಡು ಹಗಲ ಹಾಡೇ ಊರ ಬಿಡತೇವು. ವಾಡೇದ ಜವಾಬದಾರೀ ನಿಮ್ಮ ವ್ಯಾಲ ಇರತದ. ವಿಶ್ವಾಸ ಬರಲಿ; ಇದರ ದಶಿಂದ ಮಾತಾಡೂಣು"

ದಸ್ತಗೀರ್‍ಯಾ ಹೇಳಿದ.

"ದಾದಲ್ಯಾ, ರಾತ್ರೀಯೆಲ್ಲ ನೀ ವಾಡೇದಾಗs ನಿಂದರು. ಮನೀಗೆ ಹೋಗಿ

ಲಗೂನ ಬಂದಬಿಡೂ. ಹತ್ತ ಹೊಡಿಯೂದರಾಗ ಎಲ್ಲಾರೂ ವಾಡೇದಾಗ ಇದ್ದ ಬಿಡೂದು ಠೀಕಾ. ಗೋವಿಂದಭಟ್ಟಾ ಗುಡೀಗೆ ಬಂದಿರಬೇಕು. ನಾ ಅಷ್ಟು ಅಕಡೇ ಹೋಗತೀನಿ. ಮಂಗಳಾರತಿಗೆ ಹಜ್ಜರ ಇರಬೇಕು. ಬಸವಂತೀ, ನಿಮ್ಮ ಊಟಾ ಇಲ್ಲೇ ಬಗೀಪರೀಲಿ. ನಾನೂ-ವಿಶ್ವಾಸ ಅಷ್ಟs ಗೌಡರ ಮನೀಗೆ ಹೋಗತೇವು. ವಾಡೇದ ಕಾವಲಿಗೆ ಕಮತಿಗ್ಯಾ, ನಮ್ಮ ಶಿವ್ಯಾ ಇರತಾರ. ನಾವೂ ಉಂಡವರs ಇಕಡೆ ಬಂದಬಿಡತೇವು."

ಇಷ್ಟು ಹೇಳಿ ರಾಜಪ್ಪ ಗುಡಿಗೆ ಹೊರಟ. ಅವನು ಹೋದಾಗ ರಾತ್ರಿಯ ಎಂಟು ಗಂಟೆಯಾಗಿತ್ತು.

ನಾವು ಇನ್ನೂ ಮಾತನಾಡುತ್ತ ಕುಳಿತಿರುವಾಗ, ಅಪನವರ ದರ್ಶನಕ್ಕೆ ಹೋದ ವಿಶ್ವಾಸ, ಅವರ ದರ್ಶನ-ಪಾದಧೂಲಿ ತೆಗೆದುಕೊಂಡು, ಗುಡಿಗೆ ಹೋಗಿ ಮಂಗಳಾರತಿ ಮುಗಿಸಿಕೊಂಡೇ ಬಂದಿದ್ದ. ನಾನು ಗುಡಿಗೆ ಹೋಗಿ ಮಂಗಳಾರತಿಯ ತಯಾರಿಯನ್ನು ಮಾಡಿರದಿದ್ದ ಪ್ರಯುಕ್ತ ಗೋವಿಂದಭಟ್ಟ, ಮನಸ್ವಿಯಾಗಿ ನನ್ನ ಮಂಗಳಾರತಿಯನ್ನು ಮಾಡಿದ್ದನ್ನು ವಿಶ್ವಾಸ ಹೇಳಿದ. ಗೋವಿಂದಭಟ್ಟ ಪರಭಾರೇ ಗುಡಿಯಿಂದ ಗೌಡರ ಮನೆಗೆ ಹೋಗಿದ್ದ. ನಾನು ಅವನ ಕೈಯಲ್ಲಿ ಸಿಗದೆ ಪಾರುಬಿದ್ದೆ. ವಿಶ್ವಾಸ ಚಹ ಮುಗಿಸಿ, ಸಿಗರೇಟು ಹಚ್ಚುತ್ತ —

"ಬಸವಂತೀ, ಗೌಡರ ಮನೀಗೆ ನಾನು-ರಾಜಪ್ಪಾ ಇಬ್ಬರೇ ಹೋಗತೇವು. ನಿಮ್ಮ ಊಟಾ ಇಲ್ಲೇ ಬಡಿಸಿ ಬರತ್ವದ. ಗೋವಿಂದಭಟ್ಟಾ ಅಷ್ಟರ ದಳಿಂದನs ಮುಂದ ಹೋಗ್ಯಾನ. ಬಸವಂತೀ, ನಾ ಸ್ನಾನಾ ಮಾಡತೀನಿ. ಮೈ ಹವೂರಗರs ಆಗತದ. ಬಚ್ಚಲದಾಗ ದೀಪ ಅದs ಏನು?"

ಎಂದು ಕೇಳಿದ.

"ದೀಪನೂ ಅದs. ನೀರೂ ಕಾದಾವ. ನನ್ನ ಮೈ ಸುದ್ದೇ ಮುಗೀತು. ನೀ ಹಾಂಗೇ ಗುಡೀಗೆ ಹೋಗಿ ಬಂದ್ಯಲ್ಲ ರಾಜಾ?"

ತುಳಸಿ ಕೇಳಿದಳು.

"ಪುಣೇ ಬಿಡಾಗ ಸ್ನಾನಾ ಬಗೀಹರಿಸೇ ಹೊಂಟಿದ್ದೆ. ನಿನಗೇ ಅಲ್ಲೆ ಅಡಾಡಿ ಆತು. ಎಷ್ಟೊತ್ತು ನನ್ನ ಸ್ನಾನಾ. ಈಗ ಮುಗಸ್ತೀನಿ. ನನ್ನ ಟಾವೆಲ್ ಇರಬೇಕು, ನಿನ್ನ ಬ್ಯಾಗಿನಾಗ, ತುಳಸೀ."

ವಿಶ್ವಾಸ.

"ನೀ ಬಚ್ಚಲಕ ನಡೀ. ನಾನು ಟಾವೆಲ್ – ಸಾಬಾಣಾ ಎಲ್ಲಾ ತರತೀನಿ"
ತುಳಸಿ.

"ವಿಶ್ಯಾ, ಲಗೂ ಸ್ನಾನಾ ಮುಗಿಸಿ ಬಾ. ಈ ಖಪಾರತಾ ದಾದಲ್ಯಾನ್ನಿಷ್ಟು ಅವರ ಮನೀ ತನಕಾ ಒಯ್ದು ಮುಟ್ಟಸೂಣು. ಊಟಾ ಮುಗಿಸಿ ಬರೂವುಂದ ಅವನ್ನ ತಿರಗಿ ಕರಕೊಂಡು ಬರ್ರಿ"
ದಸ್ತಗೀರ್‍ಯಾ.

"ದಸ್ತಗೀರ್‍ಯಾ, ನಾ ಲಗೂನs ಮನೀಗೆ ಹೋಗಿ ಊಟಾ ಮುಗಿಸಿಕೊಂಡು ಬರತೀನಿ. ನೀನೇನು ಕಳಸಲಿಕ್ಕೆ-ಕರೀಲಿಕ್ಕೆ ಬರೂ ಜರೂರಿ ಇಲ್ಲಾ. ಹತ್ತು ಅನೂದ ರಾಗ ಹಜ್ಜರ ಇರತೀನಿ. ಅಂಜಬುರಕರು ಹಾವಿಗೂ ಅಂಜತಾರ. ಹಗ್ಗಕ್ಕೂ ಅಂಜತಾರ. ದಾದಲ್ಯಾ ಅಂಜಲಿಕ್ಕೆ ಹುಟ್ಟಿಲ್ಲ ದಸ್ತಗೀರ್‍ಯಾ. ಶ್ಯಾಮರಾಯಗ ನನ್ನ ಧಾಕಾ – ನನಗ ಅವನ ಧಾಕಾ ಇನ್ನs ಜನ್ಮಕ್ಕs ಹತ್ತ್ಯ. ಇಬ್ಬರ ಪೈಕೀ ಒಬ್ಬರು ಅಂಗಾತ ಆಗೂ ತನಕಾ ಈ ಧಾಕ ಬಿಟ್ಟದ್ದಲ್ಲಾ. ಆ ಧಾಕದ ಅಂಜಕೀಲೇ ಕೂತರ, ಅಂಜಕೀನೇ ದೆವ್ವ ಆಗಿ ಕುತ್ತಿಗೀ ಹಿಚಕೀತಲಾ"

ನಾನು ಇನ್ನೂ ಮಾತಾಡುತ್ತಿದ್ದೆ. ವಿಶ್ವಾಸನನ್ನು ಕರೆಯಲಿಕ್ಕೆ ಬಂದ ರಾಜಪ್ಪ, ನೇರವಾಗಿ ನಾವು ಕುಳಿತಲ್ಲಿಯೇ ಬಂದು —

"ದಾದಲ್ಯಾ, ಇನಾ ಇಲ್ಲೇ ಇದ್ದೀಯಲಾ. ಮನೀ ಕಂಡಿಲ್ಲ ಹೌದಲ್ಲೋ? ನಡೀ ಮಾರಾಯಾ. ನಿನ್ನ ಕಳಿಸೇ ಗೌಡರ ಮನೀಗೆ ಹೋಗತೇವು. ಬರಾಗ ನಿಮ್ಮ ಮನೀ ಮ್ಯಾಲೇ ಹಾದ ಬರತೇವು. ನೀ ಗಡಿಬಿಡಿ ಮಾಡಿ ಬಂದಗಿಂದೀ. ಜ್ವಾಕೀ!"
ಎಂದು ಹೇಳಿದ.

ವಿಶ್ವಾಸನ ಸ್ನಾನ ಮುಗಿದು, ಅವನು ತಯಾರಾಗುವದರಲ್ಲಿ ನನ್ನನ್ನು ಮನೆಗೆ ಬಿಟ್ಟು ಬರುತ್ತೇನೆಂದು ಹೇಳಿ, ರಾಜಪ್ಪ ನನ್ನನ್ನು ಎಬ್ಬಿಸಿಕೊಂಡು ನಡೆದ. ನನ್ನನ್ನು ಮನೆ ಮುಟ್ಟಿಸಿ, ತಾವು ಬರುವ ತನಕ ನಾನು ಮನೆಯನ್ನು ಬಿಟ್ಟು ಹೊರ ಬೀಳಕೂಡದೆಂದು ಜಾಣಾಸಿದ.

"ನೀವು ಬರೂತನಕಾ, ನಾ ದಾದಲ್ಯಾನ್ನ ಬಿಡೂದಿಲ್ಲ ರಾಜಪ್ಪಾ. ಅದರ ಕಾಳಜೀ ಬಿಡೂ"
ಎಂದು ನಮ್ಮ ಅವ್ವ ಅಭಿವಚನ ಕೊಟ್ಟಳು.

"ದಾದಲ್ಯಾ, ಊರಾಗ ಬಂದು ಎರಡ ತಾಸ ಆತು. ನೂರು ಮಂದಿ ಬಂದು

ಹೇಳಿ ಪೋದರು. ನಿನಗ ನಮ್ಮ ನೆನಪs ಆಗಲಿಲ್ಲಲ್ಲs? ಅಜ್ಜಿ, ಒಂದೇ ಸವನೆ ಪಲಬಲಿಕ್ಕೆ ಹತ್ತ್ಯಾಳ; ದಾದಲ್ಯಾ ಬರೂತ್ಲೇ ನನ್ನ ಕಣ್ಣಿಗೆ ಹಾಕರ್‍ಯಂತ. ಧೊಡ್ಡಾಂವಾದಿ ದಾದಲ್ಯಾ, ಎಂದ ತಿಳವಳಿಕಿ ಬರಬೇಕು? ಮುಂಬೈ ಬಿಟ್ಟು ಯಾಕ ಬಂದಿ ದಾದಲ್ಯಾ, ಜೀವಾ ಧೋಕಾದಾಗ ಹಾಕಲಿಕ್ಕೆ? ಲಗೂ ಸ್ನಾನಾ ಬಗೀ ಪರಸು. ಅಡಿಗಿ ಮಾಡಿಕೊಂಡು ಕೂತು ತಾಸ ಆತು. ನಿನ್ನ ದಾರಿ ನೋಡಿ ನೋಡಿ ಸಾಕಾತು."

ಅಜ್ಜಿ-ಮೊಮ್ಮಗನ ಗಾಠ-ಭೇಟಿ ಮುಗಿಯಿತು. ಆಶೀರ್ವಾದ-ಅಳುಕರೆಯುವದು ಯಥಾಪ್ರಕಾರ ಬಗೆಹರಿಯಿತು. ಈ ಸಾರೆ ಅರಿಷಣ-ಅಕ್ಷತೆ ಇಲ್ಲದೆ ಹೋದರೆ ತನ್ನ ಆಣೆಯೆಂದು ಅಜ್ಜಿ ಆಣೆ ಇಟ್ಟುಕೊಂಡಳು. ಈ ಜನ್ಮದಲ್ಲಿ ಆ ಸುಖವಿರದ ಶಾಪ ದಾದಲ್ಯಾನಿಗಿತ್ತು. ಅಜ್ಜಿಯ ಆಣೆ ಅವನನ್ನು ಕರಗಿಸಿದರೂ ಬೆದರಿಸಲಿಲ್ಲ. 'promise is not fulfillment' ತತ್ವ ದಾದಲ್ಯಾನಿಗೆ ಸರ್ವಮಾನ್ಯವಾಗಿತ್ತು. ತಾನು ಚತುರ್ಭುಜನಾಗೇ ತೀರುವ ಅಭಯವಚನವನ್ನು ಅಜ್ಜಿಗೆ ದಯಪಾಲಿಸಿ, ದಾದಲ್ಯಾ ಅಜ್ಜಿಯ ಹಿಡಿತದಿಂದ ಪಾರುಬಿದ್ದ.

ಸ್ನಾನ ಮುಗಿಸಿ. ದೇವರಿಗೆ ಮಂಗಳಾರತಿ ಮಾಡಿ ಊಟಕ್ಕೆ ಕುಳಿತ.

"ದಾದಲ್ಯಾ, ಮುಂಜಾನಿಂದ ಊಟನs ಆಗಿರಲಿಕ್ಕಿಲ್ಲಾ. ಪುಣೇ ಯಾವಾಗ ಬಿಟ್ಟೀ? ಹಾದ್ಯಾಗ ಫರಾಳನರs ಮಾಡಿದಿಲ್ಲೋ? ಈಗೇನು ಅವಸರಿಲ್ಲಾ. ನಿಧಾನಾಗಿ ಹೊಟ್ಟೆತುಂಬೇ ಊಟಾ ಮಾಡು. ವಿಶ್ವಾಸ ಅವನ ಗೆಳ್ಯಾ ಇಲ್ಲಿಗೇ ಬಂದಿದ್ದರ ಆಗತಿದ್ದಿಲ್ಲೇನು? ನಿನಗ ಇವರಿಗೆ ರೀತಿ-ರಿವಾಜಾ ಠಾಂವಿಕೀನೇ ಇಲ್ಲಾ. ಊದ್ದಕ ಬೆಳದು ಉಥೋ ಅಂತ ನಿಂತೀರಿ. ನಾ ತಿಳಿಸಿ ಹೇಳಬೇಕೇನು ದಾದಲ್ಯಾ? ಮುಂಬೈಯಾಗ ಊಟ ಠೀಕ ಇರತದೇನ ದಾದಲ್ಯಾ? ಖಾನಾವಳೀ ಊಟಾ. ಮನೀ ಹಾಂಗ ಹ್ಯಾಂಗ ಆದೀತು? ಕುತ್ತಿಗೀ ಎಲವಾ ಎದ್ದ ಕಾಣಲಿಕ್ಕೆ ಹತ್ತ್ಯಾವ. ಹೊಟ್ಟೆ-ನೆತ್ತಿ ನೋಡವರಿದ್ದರ ಎಲ್ಲಾ ಛಂದಾ. ಇನಾ ಎಷ್ಟ ದಿನಾ ಉಳೀತ ದಾದಲ್ಯಾ ನೀ ಕಲಿಯೂದು? ಚಂಪಿ ಧೊಡ್ಡಾಕ್ಯಾದ್ಲು. ವರಾ ನೋಡ್ಡಾಂಗಿಲ್ಲೇನು? ಅವರಿಗೆ ಊರ ಉಸಾಬರಿ; ನಿನಗ ದೇಶದ ಉಸಾಬರಿ. ದಾದಲ್ಯಾ. ಮುಂಬೈಯಾಗ ನಿನಗ-ಶ್ಯಾಮರಾಯಗ ಧೊಡ್ಡ ಜಗಳs ಆತಂತs. ಖರೇ ಏನು? ಊರಾಗ ಪಜಾರ ಸುದ್ದಿ ಎದ್ದಾವ. ನೀ ಏನೋ ಅವರ್‍ನ ಕಂತ್ರಾಟದಾಗ ಸಿಗಸೀಯಂತs. ಅವರಿಗೆ ವರ್ಷ-ಎರಡ ವರ್ಷರ ಫಾಶೀ-ಕಾಳಾಪಾಣೀ-ಶಿಕ್ಷಾ ಆಗದs

ಹೋಗೂದಿಲ್ಲಂತ. ದಾದಲ್ಯಾ, ನೀ ಇಷ್ಟ ಉದ್ದ ನೀರಿಗೆ ಹೋಗಬಾರದಾಗಿತ್ತು. ನಿನ್ನ ಪ್ಯಾಲಿನ ಸಿಟ್ಟು ಇವರ ಪ್ಯಾಲೂ ಹೊಳ್ಳೂದೇ. ದಿನಾ ಬೆಳಗಾದರ ರಣಕತ್ಲ ಸುರೂ. ಕಾಕಾ ಊರಾಗಿದ್ದರ ಯಾರದೇನು ಅಂಜಿಕಿರತಿದ್ದಿಲ್ಲಾ. ಇವರ ಜೀವೂ ಸುಮ್ಮ ಕೊಡೂದಿಲ್ಲಾ. ನಾಳೆ ಏನರs ನಿನಗs ಆಗಲಿ. ಅವರಿಗೇ ಆಗಲಿ, ಸಂಕಟಾಗೂದು ಯಾರಿಗೆ? ನನಗs ಅಲ್ಲೇನು? ಸಣ್ಣ-ಪುಟ್ಟ ಹುಡಗ್ರು-ಹುಪ್ಪಡೀ ಮನೀ. ಅವರದೆಲ್ಲಾ ಬೋಜಾ ನಿಮ್ಮ ಮ್ಯಾಲs. ಏನರs ಆದರ, ನಾವು ಯಾರ ಮೋತೀ ನೋಡಿ ಬದಕಬೇಕು? ನನಗೇನು, ಬೆನ್ನಿಗೆ ಬಿದ್ದ ಅಣ್ಣ-ತಮ್ಮಂದಿ ರಿದ್ವಾರs, ಹಡದ ತಂದಿ-ತಾಯಿ ಇದ್ದಾರs? ಯಾರಿದ್ದಾರ ಅನೂಹಾಂಗ ಅದs? ನಂದೂ, ಈ ಚಿಲ್ಲೀ-ಮಿಲ್ಲೀದು ಇವರ ಮ್ಯಾಲ ಭಿಸ್ತಾ – ನಿನ್ನ ಮ್ಯಾಲ ಭಿಸ್ತಾ. ನೀವೂ ಜೀವಾ ಧೋಕಾದಾಗ ಹಾಕ್ಕೊಂತ ನಡದರ ನಮ್ಮದೇನ ಗತೀ? ನಮ್ಮದು ಹ್ಯಾಂಗರ ಆದೀತು. ಹಡದ ಕರಳಂತ ನಿಂದೂ – ಕೈ ಹಿಡದ ಯಜಮಾನರಂತ ಅವರದೂ ಅಷ್ಟೇ ಧ್ಯಾಸ ಹತ್ತೇದ ನನಗ. ನನಗೇನು ಥೊಡ್ಡಿಸ್ತನಾ ಬ್ಯಾಡಾ. ಶ್ರೀಮಂತಿಕಿ ಬ್ಯಾಡಾ ಯಾ ವೈಭಿವನೂ ಬ್ಯಾಡಾ. ನೀನು-ಇವರು ಕುಶಾಲದಿಂದ ಇದ್ದರ ಅದೇ ಎಲ್ಲಾ ವೈಭವಂತ ತಿಳಕೋತೀನಿ. ಊರಾಗಿನ ಮಂದಿ ಏನೇನೋ ಮಾತಾಡೂದು ಕೇಳಿದರ, ಕರಳು ಮುದ್ದಿ ಮುಟಿಗಿ ಆಗತ್ವದ. ಹೊಟ್ಟ್ಯಾಗ ಕೆಟ್ಟ ಸಂಕಟಾಗತದ. ಯಾರ ಮುಂದ ತೋಡಿಕೊಂಬೂದ್ವದ? ಮತ್ತ ದೇವರ ಕಟ್ಟೀ ಮುಂದ ನಿಂತು **ಅಂವಗs** ಕೈ ಮುಗಿಯೂದು. ಇವರದು-ದಾದಲ್ಯಾಂದು ನಿನ್ನ ಮ್ಯಾಲs ಭಾರ ಅಂತs **ಅಂವಗs** ಹೇಳೂದು. ಅಯ್ಯಯ್ಯs ದಾದಲ್ಯಾ, ಆಪೋಷಣಾನs ತಗೊಂಡ್ಯಲಾs. ಇಷ್ಟರಾಗೇ ಊಟ ಬಗೀಹರೀತೇನು? ಮಾತಿ ನ್ಯಾಗ ಸಾಕ-ಬೇಕ ಸುದ್ದೇ, ನಾ ಕೇಳಲಿಲ್ಲಾ. ಸುಟ್ಟಬರಲಿ, ನನ್ನ ನಾಲಗಿ ಅಗದೀ ಬೇತಾಳ ಆಗೇದ. ಹಸದ ಕೂಸಿಗೆ ಹೊಟ್ಟಿತುಂಬೇ ಉಣಗೊಡಸದs ಇಲ್ಲದ ಕಿತಬೀ ಬಿಚ್ಚಿದೆ. ಅಗದೀ ಅರೆಹೊಟ್ಟಿ ಉಂಡ ಎದ್ದಿ ದಾದಲ್ಯಾ? ಇಕಾ. ಇಂದ ಕುಲಕರ್ಣ್ಯಾರ ಮನ್ಯಾಗ ಅಂಟಿನುಂಡಿ ಕಳಸ್ಯಾರ. ಒಂದ ಉಂಡೀ ತಿಂದು ನೀರ ಕುಡಿ. ಅಂದರ ನನಗ ಸಮಾಧಾನ ಆಗತದ."

"ಅವ್ವಾ ಗಡಪ್ಪ ಹೊಟ್ಟಿ ತುಂಬೇದ. ನೋಡಿದಿಲ್ಲೋ, ಕಾಸಿದ ಹಲಗೀ ಹಾಂಗ, ಠಣಾಠಣಾ ಅನೂಹಾಂಗ ಆಗೇದ ಹೊಟ್ಟಿ. ಉಂಡೀ-ನೀರಿಗೆ ಜಾಗಾ ಇದ್ದರ ಇನಾ ಎರಡು ಚಪಾತೀನೇ ತಿಂತಿದ್ನೆಲಾ. ಹುಡುಗೂರಿಗೆ ಇರಲಿ ಉಂಡಿ. ನೀ

ಊಟಕ್ಕೆ ಕೂಡೇಳು. ನಿನ್ನ ಊಟ ಮುಗಿಯುಊತಸಕಾ ನಾ ಎದರಿಗೇನs ಕೂಡತೀನಿ. ಊರಾಗ ಏನರs ಸುದ್ದಿ ಅದs ಅವ್ವಾ? ಏನsರ ಅಂತಾರ ಮಂದಿ?"

"ನೂರ ಮಂದಿ ನೂರ ಥರಾ ಆಡತಾರ. ಒಂದಕೊಂದು ತಾಳ-ಮೇಳ ಇಲ್ಲಾ. ಮುಂಬೈ ಸುದ್ದಿ ಇಂದ-ನಿನ್ನೀದು. ಇದಕಿಂತಾ ಮುಂಚೇನೂ ಕೆಟ್ಟ ಕೆಟ್ಟ ಸುದ್ದಿ ಎದ್ದಿದ್ದೂ. ನಮ್ಮ ವಸ್ತೂ ಹ್ಯಾಂಗದ ಅನೂ ಖಾತ್ರೀ ನಮಗ ಇತ್ತಂತ ನಾವೂ ಅಲಕ್ಷ್ಯ ಮಾಡಿಕೋತ ಬಂದೇವು. ನಿಂದೂ-ಬಸವಂತೀದೂ ಸೂತ ಜೋಡಿಸಿತ್ತು. ಅದು ಶ್ಯಾಮರಾಯಗ ಠಾಂವಿಕ್ಯಾತು. ಅಂವಾ ಬಸವಂತಿನ್ನ ಹಣ್ಣಗಾಯಿ-ನೀರಗಾಯಿ ಮಾಡಿದನಂತs. ಪುಣೇದಾಗ ಸುದ್ದೇ ನೀ ಬಸವಂತೀ ಕಡೇ ಕದ್ದ-ಮುಚ್ಚಿ ಹೋಗತಿದ್ದ್ಯಂತ. ಶ್ಯಾಮರಾಯನ ಮನೀ ಬಳದು, ನಿನ್ನ ಕಿಶೇ ತುಂಬಲಿಕ್ಕೆ ಹತ್ತ್ಯಾಳಂತ ಬಸವಂತಿ. ಒಂದs ಎರಡs ಮಂದಿ ಅನೂದು? ಅವರು ಅಂತಾರಂತs ಇವರು ಅಲಕ್ಷ ಮಾಡಾಂಗಿಲ್ಲಾ. ಬಾಯಿಗೇ ಹತ್ತಾರ. ಖರೇ ಖೊಟ್ಟಿಗೆ ನಿಂದರತಾರ. ಜೀವ ಕತವಾಸಿ ಹೋಗೇದ. ನೀ ಎಲ್ಲ್ಯರ ಒಂದು ನೌಕರೀ ಹಿಡೀ ದಾದಲ್ಯಾ. ಅಲ್ಲಿಗೇ ಬಂದಬಿಡತೇವು. ಚಟ್ನಿ-ಭಕ್ಕರೀನs ತಿನ್ನಲಿ, ಜೀವಕ ಸಮಾಧಾನನರs ಇರತದ. ಇಲ್ಲೀ ಸೆರೀ ಬಿಡಿಸಿ ನಮ್ಮನ್ನ ಕಟಿಗೊಂಡ ಹೋಗ ಮಾರಾಯಾ. ಕೂತರ, ನಿಂತರ ಮಂದೀ ಯದ್ದಲಗಾಟಾ ಯಾರ ತಾಳ್ಯಾರು? ಬಂದದ್ದs ಬಾರಿಸಿದ್ದs ಏನದ?"

ಅವ್ವನ ಮಾತು ಇನ್ನೂ ಮುಗಿದಿರಲಿಲ್ಲ. ಮಹಾಭಯಂಕರವಾಗಿ ಧಡಲ್ ಧಡಲ್ ಎಂದು ಎರಡು ಸಾರೆ ಧಡಾಕಿ ಹಾರಿದ ಗರ್ಜನೆ ಕೇಳಿಬಂತು. ಅವ್ವನ ಕೈಯಲ್ಲಿಯ – ಬಾಯಿಗೊಯ್ಯಲೆಂದು ಮಾಡಿದ, ಮೊಸರನ್ನದ ಕಡೆಯ ತುತ್ತು ತಟ್ಟನೆ ಕೆಳಗೆ ಬಿತ್ತು. ಪಡಸಾಲೆಯಲ್ಲಿ ಕುಳಿತ ಹುಡುಗರು ಒಳಗೆ ಧಾವಿಸಿ ಬಂದರು. ನನ್ನ ಕಡೆಹುಟ್ಟ ತಮ್ಮಂದಿರು ಎಲೆಯ ಮುಂದೆ ಕುಳಿತ ಅವ್ವನ ಕೊರಳಿಗೆ ಬಿದ್ದರು. ನನ್ನ ತಂಗಿ – ಚಂಪಿ ಅಡುಗೆಯ ಮನೆಯ ಮೂಲೆಯಲ್ಲಿ ಮುದ್ದೆಯಾಗಿ ನಿಂತಳು. ಅವ್ವ ವಿಸ್ಫಾರಿತ-ನಯನಳಾಗಿ, ಜೀವಸತ್ವವನ್ನು ಕಣ್ಣಲ್ಲಿ ಕೇಂದ್ರೀಕರಿಸಿ, ತೀರ ಗಾಬರಿಬಡಿದವರಂತೆ ಮಾತಿಲ್ಲದೆ ನನ್ನ ಮುಖ ನೋಡತೊಡಗಿದಳು. ಅವಳ ನಾಲಿಗೆಯ ತವಕವನ್ನು ತುಟಿ ತಡೆಗಟ್ಟಿರಬೇಕು. ಅದರರ್ಥ ಮಾಡಿಕೊಂಡು —

"ಅವ್ವಾ ಇಷ್ಟ್ಯಾಕ ಘಾಬರ್ಯಾಗೀ. ಯಾರೋ ಹುಸಿ ಗುಂಡ ಹಾರಿಸಿರಬೇಕು. ಗಣೇಶಚೌತ್ಯಾಗ ಬರ್ನಾಸು – ಧಡಲ್‌ಬಾಜೀ ಹಾರಿಸಿದಾಗ ಹೀಂಗೇ

ಸಪ್ಪುಳ ಆಗೂದಿಲ್ಲೇನು? ನೀನೂ ಭಾರೀ ಅಂಜಾಕಿ? ಗೋವಿಂದಭಟ್ಟನ ಮಾತಿಗೇ ಅಂಜದಕೀ, ಈ ಗುಂಡಿನ ಶಬ್ದಕ್ಕ ಅಂಜತ್ಯಲಾ?"
ನಾನು ಧೈರ್ಯ ಕೊಡುವ ಉದ್ದೇಶದಿಂದ ಮಾತನಾಡಿದೆ.

"ದಾದಲ್ಯಾ, ವಾಡೇದ ಕಡಿಂದs ಕೇಳಿ ಬಂಧಾಂಗಾತು ಗುಂಡಿನ ಸಪ್ಪಳಾ. ಎಲ್ಲಾರೂ ಗೌಡರ ಮನೀಗೆ ಊಟಕ್ಕ ಹೋಗ್ಯಾರಲಾ? ಯಾರ ಇದ್ದಾರ ವಾಡೇದಾಗ ಗುಂಡ ಹಾರಸಲಿಕ್ಕೆ?"
ಅವ್ವ.

"ದಸ್ತಗೀರ್ಯಾನs ಏನರs ಹಾರಿಸಿರಬೇಕು. ವಾಡೇದಾಗ ಅಂವನೇ ಇದ್ದಾನ."
ನಾನು.

"ದಾದಲ್ಯಾ, ಏ ದಾದಲ್ಯಾ ಊಟ ಮುಗೀತಿಲ್ಲೋ? ಇಕಾ, ವಿಶ್ವಾಸ-ರಾಜಪ್ಪ ಬಂದಾರ ನೋಡು. ವಾಡೇಕ್ಕ ನಡೀ ಅವರ ಜೋಡೀ"
ಗೋವಿಂದಭಟ್ಟ ಒಳಗೆ ಬರುತ್ತ ಹೇಳಿದ.

ವಿಶ್ವಾಸ-ರಾಜಪ್ಪ ಅಂಗಳದಲ್ಲಿ ನನ್ನ ದಾರಿ ಕಾಯುತ್ತ ನಿಂತಿದ್ದರು.

"ಬಂದೆ ವಿಶ್ಯಾ"
ಎಂದು ಹೇಳಿ ನಾನು ಅಂಗಿಯನ್ನು ಹಾಕಿಕೊಳ್ಳತೊಡಗಿದೆ. ಇನ್ನೂ ಎಂಜಲ ಕೈಯಲ್ಲಿಯೇ ಇದ್ದ ಅವ್ವ, ನಡುಮನೆಯ ಬಾಗಿಲಿಗೆ ಬಂದು ಸಬಾಷ್ಪನಯನಳಾಗಿ,

"ದಾದಲ್ಯಾ, ಜ್ವಾಕೀ..."
ಎಂದಿಷ್ಟೇ ನುಡಿದಳು.

ಅವಳ ಸಂಕಟ, ತಳಮಳ ಅತಿಯಾಗಿತ್ತು. ವಿಶ್ವಾಸ ಒಳಗೆ ಬಂದು ಅವ್ವನಿಗೆ ನಮಸ್ಕರಿಸಿ —

"ಗೋದಕ್ಕಾ, ನೀವು ಇಷ್ಟ್ಯಾಕ ಘಾಬರ್ಯಾಗೀರಿ. ದಾದಲ್ಯಾಗೇನ ಆಗತದ? ನಾವಿಲ್ಲೇನು? ಅವನ ಕೂದಲ ಕೊಂಕಿಗುಡೂದಿಲ್ಲಾ. ಅಗದೀ ನಿರ್ಧಾಸ್ತ ಇರ್ರೀ"
ಎಂದ.

"ಆಯುಷ್ಯವಂತ ಆಗ ನಮ್ಮಪ್ಪಾ – ಉದಂಡ ಆಯುಷ್ಯವಂತ ಆಗು. ವಿಶ್ವಾಸ, ಎಂದ ನಿನ್ನ ನೋಡಿದ್ದು? ಏನ ಮಾತಾ? ಕಾಕಾ, ಸೋನಕ್ಕಾ ರೀಕ ಇಪ್ಪಾರಿಲ್ಲೋ? ಊಟಕ್ಕ ಇಕಡೇ ಬರಬಾರದೇನಪಾ? ದಾದಲ್ಯಾಗ – ಇವರಿಗೆ ಏನೂ ಗೃಹಸ್ಥಮಿಕೀನೇ ಇಲ್ಲಾ. ಕಾಕಾ ಊರ ಬಿಡೂ ದಿನಾ ಈ ಮನ್ಯಾಗ ತಮ್ಮ

ಪಾದಧೂಳೀ ಹಾಕಿದ್ದರು. ಆ ಪುಣ್ಯಾದ್ಲೇನs ಇನಾ ದೀಪಾ ಹಚ್ಚತೇವು. ವಿಶ್ವಾಸ, ಇಂದ ನೀ ಬಂದೀ. ಜೀವಕಷ್ಟು ಸಮಾಧಾನ ಬಂತು. ಒಂದಿಷ್ಟು ಹುಷಾರೀ ಇಂದ ಇರ್ರಿ ನಮ್ಮಪ್ಪಾ. ಊರಾಗ ಇಲ್ಲದ ಗದ್ದಲ ಎದ್ದsದ."

"ವಿಶ್ವಾಸ, ಅಕೀ ಪುರಾಣ ಸುರೂ ಆತಂದ್ರ ತೀರಿತು. ಇಲ್ಲೇ ಬೆಳಗ ಹರೀತದ. ಪುರಾಣವಾಚಸ್ಪತಿಯ ಪತ್ನೀ ಅಕೀ. ಕೇಳೀಯಾ? ನೀವು ನಡೀರಿನ್ನ ವಾಡೇದ ಕಡೇ"

ಗೋವಿಂದಭಟ್ಟ.

"ಗೋವಿಂದಭಟ್ಟಾ, ರಾತ್ರೀ ಬಾಯಿ-ಪೀಯಿ ಆದರ, ಒದರ್ಯಾಟ-ಚೀರ್ಯಾಟ ಕೇಳಿಬಂದರ ನೀ ಏನು ಗಡಿಬಿಡಿ ಮಾಡಿಕೊಂಡು ಓಡಿ ಬರಬ್ಯಾಡಾ. ಮನೀ ಬಿಟ್ಟು ಹೊರಗೇ ಬೀಳಬ್ಯಾಡಾ. ಶಿವ್ಯಾನ ಗರಡೀ ಹುಡುಗೂರು ಸುಮ್ಮನs ಕೇಕೇ ಹೊಡಕೋತ ತಿರಗತಾವs. ತಿಳೀತೇನು? ನಡೀ ದಾದಲ್ಯಾ."

ರಾಚಪ್ಪ.

"ರಾಚಪ್ಪಾ, ದಾದಲ್ಯಾನ್ನ ಜ್ವಾಕೀ..."

ಅವ್ವನ ಅಳುದನಿ.

"ಕಾಳಜೀ ಬಿಡೂ ಗೋದಕ್ಕಾ, ನಾ ಇದ್ದೀನಿ."

ರಾಚಪ್ಪನ ಅಭಯ.

"ದಾದಲ್ಯಾ ಸಂಬಾಳಸು..."

ಗೋವಿಂದಭಟ್ಟನ ಸಾವಧ.

"ಗೋವಿಂದಭಟ್ರು, ಕಾಳಜೀ ಬಿಡ್ರಿ. ನಿರ್ಧಾಸ್ತ ಇರ್ರಿ."

ವಿಶ್ವಾಸನ ಅಭಯವಚನ.

ವಿಶ್ವಾಸ, ನಾನು, ರಾಚಪ್ಪ ನಮ್ಮ ಮನೆಯಿಂದ ಒಂದು ಫರ್ಲಾಂಗಿನಷ್ಟು ದೂರ ಬಂದಿದ್ದೆವು. ಕುಲಕರ್ಣಿಯವರ ಮನೆಯ ಮೂಲೆಗೆ ಹೊರಳಿ ವಾಡೆಯ ಹಾದಿಗೆ ಹತ್ತಬೇಕು. ಪೋಸ್ಟ್‌ಮನ್ ಪಾಂಡೂ ಏದುತ್ತ ಏದುತ್ತ ಓಡಿ ಬಂದು –

"ರಾಚಪ್ಪಾ ಒಂದಿಷ್ಟು ನಿಂದರು...ಒಂದಿಷ್ಟು ನಿಂದರು...ನಿಮ್ಮ ತ್ವಾಟ ದಾಗಿನ ಕಣಕೀ ಬಣವಿಗೆ ಯಾರೋ ಉರೀ ಹಚ್ಚ್ಯಾರಂತs....ನಿನ್ನ ಹೇಣತೀ, ಗಾಣಗ್ಯಾರ ಪರಸ್ಯಾ, ಕುಲಕರ್ಣೀ ಬಂಡ್ಯಾ ಅಕಡೇ ಓಡಿವರು...ತ್ವಾಟದಾಗಿನ ಆಳನೂ ಹೊಡದಾರಂತ..."

ಅರಗಚ್ಚಿ ಸುದ್ದಿ ಹೇಳಿದ.

"ಪಾಂಡೂ, ಆಳಗೋಳ್ನ ಹೊಡದಾರಂತs? ಹೊಡದಾರಂದರ ಏನಂದೀ? ಪಾಂಡೂ. ಶಿವ್ಯಾನೂ ಹೋದನೇನು ತ್ವಾಟದ ಕಡೇ?"

ರಾಚಪ್ಪ ಉತಾವಿಳನಾಗಿ ಕೇಳಿದ.

"ಶಿವಾ, ಖಾಜ್ಯಾ ಮೊದಲೇ ಓಡ್ಯಾರ ಅಕಡೆ. ಹೊಲ್ಯಾರ ಭರಮ್ಯಾ ತನ್ನ ಮಂದಿನ್ನ ಕರಕೊಂಡು ಇದೇ ಓಡಿದಾ. ನೀ ಗೌಡರ ಮನ್ಯಾಗ ಇದ್ದೀ ಅನೂದು ತಿಳೀತು. ಈ ಸುದ್ದೀ ತಿಳಿಸಬೇಕಂತ ಅಕಡೆ ಬಂದೆ. ನೀನೂ, ಗೋವಿಂದಭಟ್ಟಾ ಇದೇ ಹೋದರಿ ಅಂತs ಗೌಡರು ಹೇಳಿದರು. ಅವರೂ ಗಡಿಬಿಡಿಯಿಂದ ವಾಡೇದ ಕಡೇ ಹೋದರು. ರಾಚಪ್ಪಾ, ಹಿರೇಮಠದಾಗ ಶ್ಯಾಮರಾಯನ ಆ ಮಂದಿ ಜಮಾಸೇದ. ನೀ ಹುಡಗೂರ್ನ ಕರಕೊಂಡು ವಾಡೇಕ್ಕ ನಡೀ. ನಾನೂ ಗರಡೀ ಹುಡಗೂರ್ನ ಕರಕೊಂಡು ವಾಡೇದ ರಸ್ತೇಕ್ಕ ನಿಂದರತೀನಿ. ವಾಡೇದ ವ್ಯಾಲ ಗೌಡ ಬರೂ ಸಂಭವ ಅದs. ಶ್ಯಾಮರಾಯನ ಮಂದಿ ಎಲ್ಲಾ ಕಡೇ ಟಪಾಸಿ ಗೊಂಡು ಕೂತದ."

ಪಾಂಡೂ.

"ವಾಡೇದ ಕಾವಲಾ ಸಪ್ಲ ಮಾಡೂ ಬೇತ ನಡಸಿರಬೇಕು. ನಮ್ಮ ಜನಾ ಘಾಪಾ-ಘಾಡೀ ಆದದ್ದ ನೋಡಿ ವಾಡೇದಾಗ ಹೊಗೂ ಡಾವ್ ಇರಬೇಕು. ಪಾಂಡೂ, ತ್ವಾಟದಾಗಿನ ಆಳಗೋಳಿಗೆ ಭಾಳ ಇಜಾ ಆಗೇದಂತೇನು?"

ರಾಚಪ್ಪ.

"ಬರೇ, ಹೊಡದಾರನೂ ಸುದ್ದಿ ಹತ್ತಿತು. ಜಾಸ್ತೀ ಏನೂ ಗೊತ್ತ ಆಗಿಲ್ಲಾ. ಉರೀ ಮಾತ್ರ, ಅಗಸ್ಯಾಗ ನಿಂತರೂ ಕಾಣಸ್ತದಂತ, ಕರಿಶೆಟ್ಟಿ ಅಂತಿದ್ದಾ. ನೀ ವಾಡೇಕ್ಕ ನಡೀ. ನಾ ಎಲ್ಲಾ ಸುದ್ದೀ ತರಸ್ತೀನಿ, ಯಾರ್ನರ ಓಡಿಸಿ."

ಪಾಂಡೂ ನಮ್ಮನ್ನು ಬಿಟ್ಟು ಗರಡಿಯ ದಿಕ್ಕಿಗೆ ಧಾವಿಸಿದ.

"ರಾಚಪ್ಪಾ, ನೀನೂ-ದಾದಲ್ಯಾ ವಾಡೇದ ಕಾವಲಿಗೆ ಇರ್ರಿ. ನಾನೂ-ದಸ್ತಗೀರ್ಯಾ ಗಾಡೀ ತಗೊಂಡು ತ್ವಾಟಕ್ಕ ಹೋಗಿ ಆಳಗೋಳನ ಹೇರಿಕೊಂಡು ಬರತೇವು."

ವಿಶ್ವಾಸ.

"ವಿಶ್ವಾಸ, ಮೋಟರ ತಗಿಯೂದು ಬ್ಯಾಡಾ. ನಮ್ಮ ಸವಾರೀ-ಗಾಡೀ

ಕಳಸೂಣು ಕಮತಿಗ್ಯಾನ ಜೋಡೀ. ನಾವು ವಾಡೇ ಬಿಡೂದು ಠೀಕ ಅಲ್ಲಾ. ಖಾದರ್, ನೀ ಗಾಡೀ ತಗೊಂಡು ತ್ವಾಟಕ ಹೋಗು. ನಮ್ಮ ಆಳಗೋಳನ ಹೊಡದಾರಂತ. ಅವರ್ನ ಹಾಕ್ಕೊಂಡು ಚಾವಡೀಗೆ ನಡೀ. ಹೆಣಾನs ಬಿದ್ದಿದ್ರು ಕೈ ಹಚ್ಚಾಕ ಹೋಗಬ್ಯಾಡಾ. ಓಡಿ ಬಂದು ವರದಿ ಮಾಡು. ಇಕೀ, ಶಿವ್ಯಾ ಅಲ್ಲೇ ಆದಾರಂತs. ಬಣವಿ ಸುಟ್ಟರ ಸುಡಲಿ. ಲಗ್ಗನs ವಾಡೇದ ಕಡೇ ಬಾ ಅನ್ನು. ಭರಮ್ಯಾನ ಮಂದಿನ್ನೂ ಲಗ್ಗನs ಕಳಸು. ಜರಾ ಅಂವಸರಾ ಮಾಡು"
ರಾಚಪ್ಪ ಹೇಳಿದ. ಎತ್ತು ಬಿಡಲು ಕಮತಿಗ ಧಾಬೆಗೆ ಧಾವಿಸಿದ.

"ರಾಚಪ್ಪಣ್ಣಾ, ವಾಡೇದ ಅಟ್ಟದ ಮ್ಯಾಲಿಂದ ಉರೀ ಕಾಣತದ. ಘಾಳಿ ಬ್ಯಾರೆ ರೊಂಯ್ ಅಂತ ಬೀಸಾಕ ಹತ್ತೇದ. ಬಣವಿ ಖಾಕ ಆಕ್ಕದ. ಉರೀ ನೋಡೇ ದಸ್ತಗೀರಸಾಬಾ, ಗುಂಡ ಹಾರಿಸಿದಾ. ಗೌಡರು, ಪೀರಸಾಬರು ಇದ್ದs, ಮುಸಲರ ಓಣೀ ಮಂದಿನ್ನ ಕರಕೊಂಡು ಗುಡೀ ತಾವಲಿ ಹೋದರು. ಅಲ್ಲೂ್ಯ ಕಾವಲಿಡಾಕ ಹೋಗ್ಯಾರ. ಗೋವಿಂದಭಟ್ಟರ ಮನೀಗೆ ನಿಮ್ಮ ಮನೀಗೆ ಕುಲಕರ್ಣ್ಯಾರು ವಾಲಿಕಾರೂ ಹೋಗ್ಯಾರ. ಇಂದಿನ ರಂಗನs ಜರಾ ಬ್ಯಾರೇ ಕಾಣತೈತಿ."
ಬಸವಂತಿ.

ರಾಚಪ್ಪನ ತೋಟದಲ್ಲಿಯ ಉರಿ ಈಗ ಸ್ಪಷ್ಟವಾಗಿ ಕಾಣತೊಡಗಿತು. ನಾವು ವಾಡೆಯ ಅಂಗಳದಲ್ಲಿ ನಿಂತಿದ್ದೆವು. ಗಾಳಿ, ಹೊಗೆಯನ್ನು ಹಾರಿಸಿಬಿಡುತ್ತಿದ್ದದ್ದರಿಂದ, ಅಗ್ನಿಯ ನಗ್ನನೃತ್ಯ ನಡೆದದ್ದು ನಿಚ್ಚಳವಾಗಿ ಕಾಣುತ್ತಿತ್ತು. ಕುಣಿಯುವ ಬೆಂಕಿಯನ್ನು ನೋಡುತ್ತ, ರಾಚಪ್ಪ, ವಿಶ್ಯಾ ಅನ್ಯ ಪರಿವೆ ಇಲ್ಲದೆ ನಿಂತಿದ್ದರು. ಒಂದರ ಬೆನ್ನ ಮೇಲೆ ಒಂದರಂತೆ, ಐದಾರು ಹಿಡಿಗಲ್ಲು ತೂರಿ ಬಂದು, ವಾಡೆಯ ಮಹಡಿಯ ಕಬ್ಬಿಣ ಕಟಾಂಜನಕ್ಕೆ ಬಡಿದು ಛಣ್ ಛಣ್ ಸಪ್ಪಳ ಮಾಡಿದವು. ಬಸವಂತಿ ಮೇಲೆ ನೋಡಿ —

"ಇಂದ ಜರಾ ಲಗೂ ಸುರೂ ಆತು. ಒಳಗ ನಡೀರಿ ವಿಶ್ವಾಸ. ದಸ್ತಗೀರ, ಒಂದ್ಯಾಡ್ಡ ಬ್ಯಾರೇ ಬಾರ ಮಾಡು. ಮಠದ ಕಡೇ ಹಾರಲಿ ಗುಂಡಾ. ಜರಾ ಧಾಕ ಕುಂಡರತೈತಿ"
ಹೇಳಿದಳು.

ರಾಚಪ್ಪ ಬಂದೂಕು ತೆಗೆದುಕೊಂಡು ತಾನೇ ವಾಡೆಯ ಮೇಲ್ಭಾವಣಿಗೆ ಹೋದ. ಎರಡು ಮಿನೀಟಿನಲ್ಲಿ ಗುಂಡಿನ ಸದ್ದು ಗದಗಮಿಸಿತು. ಅದರ ನಾದ-

ನಿನಾದ ಇನ್ನೂ ಅಡಗಿರಲಿಲ್ಲ. ಮತ್ತೆ ಗುಂಡು ಹಾರಿದವು. ಗುಂಡಿನ ಗಡಚಿಕ್ಕುವ ಸಪ್ಪಳ ಇನ್ನೂ ಸತ್ತಿರಲಿಲ್ಲ. ರಾಚಪ್ಪ ಮೇಲಿನಿಂದಲೇ ಒದರಿಕೊಂಡ:

"ದಾದಲ್ಯಾ, ದಾದಲ್ಯಾ, ವ್ಯಾಲ ಬಾ ಲಗೂನೇ. ಅದ್ನೋಡ ಬಾ. ನಿಮ್ಮ ಮನೀಗೂ ಉರೀ ಹತ್ತೇದ. ಬೆಂಕಿ ಒತ್ತರಿಸಿ ಏಳಲಿಕ್ಕೆ ಹತ್ತೇದ ನೋಡು !"

ನಾನು, ವಿಶ್ವಾಸ, ದಸ್ತಗೀರ್‍ಯಾ ಒಂದೇ ಧಾಪಿಗೆ ಓಡಿ ಮೇಲ್ಭಾವಣಿಗೆ ಹೋಗುವದಕ್ಕೂ, ಒಂದು ನಿಂಬೆಯಕಾಯಿಯ ಗಾತ್ರದ ಗುಂಡುಕಲ್ಲು ತೂರಿ ಬಂದು ವಿಶ್ವಾಸನ ಹಣೆಗೆ ಬಡೆಯುವದಕ್ಕೂ ಗಂಟುಬಿತ್ತು.

"ರಾಚಪ್ಪಾs..."

ವಿಶ್ವಾಸ ಒದರಿ, ನಿಂತಲ್ಲಿಯೇ ಕುಸಿದ.

"ಘಾತ ಆತ ದಾದಲ್ಯಾ, ಘಾತ ಆತು. ಗಡಾ ನೀರ ತಗೊಂಡ ಬಾ. ಗಡಾ ಬಸವಂತಿನ್ನ ಕರೀ"

ರಾಚಪ್ಪ ಬಂದೂಕು ಒಗೆದು ವಿಶ್ವಾಸನನ್ನು ತೊಡೆಯ ಮೇಲೆ ಹಾಕಿಕೊಂಡು, ಧೋತರದ ಚುಂಗಿನಿಂದ ರಕ್ತ ಬಸಿಯುವ ಹಣೆಯ ಗಾಯವನ್ನು ಒತ್ತಿ ಹಿಡಿದ.

ಬಸವಂತಿ, ತುಳಸಿ ಧಾವಿಸಿ ಬಂದರು. ನಾನು ನೀರು, ಸಕ್ಕರೆ ತಂದೆ. ಹಣೆಯ ಗಾಯದಲ್ಲಿ ಬಸವಂತಿ ಸಕ್ಕರೆ ತುಂಬಿದಳು. ಚರ್‍ರನೆ ಸೀರೆಯ ಸೆರಗು ಹರಿದು ಬಿಗಿಯಾಗಿ ಗಾಯವನ್ನು ಕಟ್ಟಿದಳು. ವಿಶ್ವಾಸ ಇನ್ನೂ ಬೇಶುದ್ಧಿಯಲ್ಲಿಯೇ ಇದ್ದ. ನೆತ್ತರು ಚಿಮ್ಮಿ ಅವನ ಮತ್ತು ರಾಚಪ್ಪನ ಅಂಗಿ-ಧೋತರ ರಕ್ತಾಂಕಿತವಾಗಿದ್ದವು. ದಸ್ತಗೀರ್‍ಯಾ, ರಾಚಪ್ಪ, ತೋಳಿನಾಸರೆ ಮಾಡಿ, ವಿಶ್ವಾಸನನ್ನು ಎತ್ತಿ ಕೆಳಗೆ ಒಯ್ಯ ತೊಡಗಿದರು. ಕಂದೀಲಿನ ಬೆಳಕು ತೋರಿಸುತ್ತ ತುಳಸಿ ಜಿನ್ನೇ ಇಳಿಯುತ್ತಿದ್ದಳು. ನಾನು ಇನ್ನೊಂದು ಕಂದೀಲು ಹಿಡಿದುಕೊಂಡು ಜಿನ್ನೆಯ ಮೇಲ್ಬಾಗಿಲಿಗೆ ನಿಂತಿದ್ದೆ. ವಿಶ್ವಾಸನ ನಿಶ್ಚೇಷ್ಟವಾದ ದೇಹ ಜಿನ್ನೆಯ ಕೊನೆಯ ಮೆಟ್ಟಲನ್ನು ಇಳಿಯಿತು. ಅಷ್ಟರಲ್ಲಿ, ಇನ್ನೊಂದು ಕಲ್ಲು ತೂರಿ ಬಂದು ನೇರವಾಗಿ, ನಾನು ಎತ್ತಿ ಹಿಡಿದ ಕಂದೀಲಿಗೆ ಬಡಿಯಿತು. ಪಾವು ಒಡೆದು ಚೂರುಚೂರಾಯಿತು. ಕಲ್ಲಿನ ಬೀಸು ಬಡಿತಕ್ಕೆ ಹಗುರಾಗಿ ಹಿಡಿದ ಕಂದೀಲು ಭೂಪತಿತವಾಯಿತು. ಬಿದ್ದ ಕಂದೀಲನ್ನು ಎತ್ತಿಕೊಳ್ಳಲೆಂದು ನಾನು ನೆಲಕ್ಕೆ ಕೈಯೂರಿದೆ. ವಿಶ್ವಾಸನ ಹಣೆಯಿಂದ ಚಿಮ್ಮಿದ ಗಟ್ಟಿ ನೆತ್ತರ. ಫರಸಿಯ ಮೇಲೆ ಪಸರಿಸಿತ್ತು. ಅದರಲ್ಲಿ ನನ್ನ ಅಂಗೈ ಬುಚಕಳಿಸಿತು.

ಆರಕ್ತ-ರಕ್ತ-ವಸ್ತ್ರವನ್ನು ಆರುವ ದೀಪದಲ್ಲಿ ನೋಡಿಕೊಂಡೆ. ಒಂದೇ ಕ್ಷಣ! ರಕ್ತ ವಸ್ತ್ರವನ್ನು ತೋರಿಸಿ ದೀಪ ಫಕ್ಕ್ ಎಂದು ಆರಿತು.

ಒಂದಿರುಗಿ ನೋಡಿದೆ. ನನ್ನ ಮನೆಯನ್ನು ಆಪೋಷಣೆ ಕೊಳ್ಳುವ ಜಾತ ವೇದ ಮಹಾಭಯಂಕರನಾಗಿ ನಗ್ನಭೈರವನಾಟ್ಯ ನಡೆಸಿದ್ದ.

ಧಗಧಗಿಸುವ ಅಗ್ನಿಜ್ವಾಲೆಯನ್ನು ನೋಡುತ್ತ ನಾನು ಜಿನ್ನೆಯ ಬಾಗಿಲಲ್ಲೇ ನಿಂತೆ. ವಾಡೆಯ ಪೂರ್ವದಿಕ್ಕಿನಲ್ಲಿ ನನ್ನ ಮನೆ ಉರಿಯುತ್ತಿತ್ತು. ದಕ್ಷಿಣ ದಿಕ್ಕಿನಲ್ಲಿ ರಾಚಪ್ಪನ ಬಣವೆ ಉರಿಯುತ್ತಿತ್ತು. ರಾಚಪ್ಪನ ತೋಟದಲ್ಲಿ ಹೆಣ ಬಿದ್ದಿರುವ ಸಂಭವವಿತ್ತು. ಮನೆ ಸುಟ್ಟು, ಅನಾಥರಾಗಿ ಅನಿಕೇತರಾಗಿ, ಗೋವಿಂದಭಟ್ಟ. ಅವ್ವ, ಹುಡುಗರು, ಸಾಯಲಿಕ್ಕೆ ಟೇಕೆಸಿದ ಅಜ್ಜಿ ಹೆಣವಾಗುವ ಸಂಭವವಿತ್ತು, ಗೋವಿಂದಭಟ್ಟನ ಕುಟುಂಬ-ದಹನ ನಡೆದಿರಬೇಕು. ಶ್ಯಾಮರಾಯನ ಕಿಚ್ಚು ಕೆರಳಿಸಿ ದಾದಲ್ಯಾ, ಕುಟುಂಬದ ಹೋಳೀಗೆ – ರಾಚಪ್ಪನ ಪಶು-ತಳಿಯ ಅನ್ನದ ಹೋಳೀಗೆ ಕಾರಣನಾದ. ವಿಶ್ವಾಸ... ವಿಶ್ವಾಸನ...

ವಿಶ್ಯಾ, ನನ್ನ ವಿಶ್ಯಾ ಏನಾದ?

ದಾದಲ್ಯಾ ಜಿನ್ನೆಯ ಮೆಟ್ಟಲುಗಳನ್ನು ಜಿಗಿದು ಪಡಸಾಲೆಗೆ ಬಂದ. ವಿಶ್ವಾಸನನ್ನು ಮಂಚದ ಮೇಲೆ ಮಲಗಿಸಿದ್ದರು. ಬಸವಂತಿ ಗಾಳಿ ಬೀಸುತ್ತಿದ್ದಳು. ತುಳಸಿ, ದಸ್ತಗೀರ್‍ಯಾ ಅಂಗಾಲು ತಿಕ್ಕುತ್ತಿದ್ದರು. ರಾಚಪ್ಪ ವಿಶ್ವಾಸನ ರಕ್ತ-ಮಾಂಖಿತ ಮುಖವನ್ನು ಒದ್ದೆಯ ಅರಿವೆಯಿಂದ ಒರೆಸುತ್ತಿದ್ದ.

ಪಡಸಾಲೆಯ ಗೋಡೆಯನ್ನು ಅಲಂಕರಿಸಿ ನಿಂತ ಕಾಕಾ ಅವರ 'ಲೈಫ್ ಸೈಜ್ ಫೋಟೊ' ವಿಸ್ಫಾರಿತ ನಯನದಿಂದ, ತಮ್ಮ ಮೃತ್ಯುಮುಖೀ ವಿಶ್ವಾಸನನ್ನು ನೋಡುವಂತಿತ್ತು. ಮುಖ ಒರೆಸುವದನ್ನು ಮುಗಿಸಿದ ರಾಚಪ್ಪ, ತಿರುಗಿ ನೋಡಿದ. ಅವನಿಗೆ ಕಾಕಾ ಅವರ ಫೋಟೋದ ದರ್ಶನವಾಯಿತು. ನಾನೂ ಅದನ್ನೇ ನೋಡುತ್ತಿದ್ದೆ. ಇಬ್ಬರದೂ ಧೃಷ್ಟಾದೃಷ್ಟಿಯಾಯಿತು. ರಾಚಪ್ಪನಿಗೆ ಏನು ಅನಿಸಿತೋ ಏನೋ ... ದೇವರೇ ಬಲ್ಲ. ಚಟ್ಟನೇ ...

"ದಾದಲ್ಯಾ, ನೀ ಇಲ್ಲೇ ಕೂಡು, ವಿಶ್ವಾಸನ ಬಾಜೂಕ್ಕ......"
ಇನ್ನೂ ಏನೇನೋ ಹೇಳಲಿದ್ದ ... ಹೊರಗಿನಿಂದ ಧಾವಿಸಿ ಬಂದ ಗೌಡರು, ಪೀರಸಾಹೇಬರು ಒಂದೇ ಉಸುರಿನಲ್ಲಿ ಕೂಗಿ —

"ರಾಚಪ್ಪಾ, ಗೋವಿಂದಭಟ್ಟನ ಮನೀ ಖಾಕ ಆತು..."

ಎಂದರು.

ವಿಶ್ವಾಸನ ಗತಿ ಅವರಿಗೆ ಗೊತ್ತಾಗಿರಲಿಲ್ಲ. ಬಸವಂತಿ ಕೈ ಎತ್ತಿ ಸುಮ್ಮನಿರಲು ಸೂಚಿಸಿದಳು. ವಿಶ್ವಾಸ ಮಲಗಿದ ಪಲ್ಲಂಗದ ಬಳಿಗೆ ಬಂದು ಗೌಡರು:

"ಇದೇನಾತ ಬಸವಂತೀ. ವಿಶ್ವಾಸನ್ಗ ಅಂಗಾತ ಆಗ್ಯಾನಲಾ?"

ಎಂದು ಚೀರಿದರು.

"ಕಲ್ಲ ಬಡೀತ ಗೌಡರ, ಅವನ ಹಣೀಗೆ. ನೆತ್ತರ ಹರೀತು. ನೆತ್ತರಾ ಹರಸೂ ಈರ್ಷಾದ್ಲೇನ ಬಂದ ಕಾಣತದ ಊರಿಗೆ. ಗೋವಿಂದಭಟ್ಟನ ಮನ್ಯಾಗೇನು ಯಾರಿಗೂ ಇಜಾ ಆಗಿಲ್ಲಲಾ?"

ರಾಚಪ್ಪ ಕೇಳಿದ.

"ರಾಚಪ್ಪಾ, ದಾದಲ್ಯಾನ ಮನೀ ಕಡೇ ಹೋಗೂಣು ನಡೀರಿ..."

ಪಿಸ್ತೂಲನ್ನು ಅದರ ಕೇಸಿನಿಂದ ಹೊರ ತೆಗೆಯುತ್ತ ದಸ್ತಗೀರ್‍ಯಾ ಹೇಳಿದ. ಅವನ ಕೈ, ಶರ್ಟಿನ ಅಂಚು ರಕ್ತರಂಜಿತವಾಗಿದ್ದವು. ದಸ್ತಗೀರ್‍ಯಾ ಪಿಸ್ತೂಲನ್ನು ಅತ್ತ-ಇತ್ತ ಹೊರಳಿಸಿ ನೋಡಿದ. ಆಗಲೇ ಅವನು ತನ್ನ ರಕ್ತಮಾಂಖಿತ ಕೈಯನ್ನು ನೋಡಿರಬೇಕು. ಅವನು ಕಣ್ಣೆತ್ತಿ, ತನ್ನನ್ನೇ ದಿಟ್ಟಿಸುತ್ತಿದ್ದ ರಾಚಪ್ಪನ ಕಡೆಗೆ ನೋಡಿದ. ಇಬ್ಬರ ದೃಷ್ಟಿಗಳೂ ಏಕವಾದವು. ದಸ್ತಗೀರ್‍ಯಾ, ವಿಶ್ವಾಸನ ನಿಶ್ಚಲ ದೇಹದೆದುರು ನಿಂತು —

"ವಿಶ್ಯಾ ಇದರ ಬದಲಾ ತಗೋತೇವು. ಹೋಗಿ ಬರತೇವು"

ಎಂದು ಪ್ರತಿಜ್ಞೆ ಪುಕಾರಿಸಿ ಗಾಳಿತುಂಬಿದವರಂತೆ ಬೇಭಾನನಾಗಿ, ರಾಚಪ್ಪನಿಗೆ ಕಣ್ಸನ್ನೆಯಿಂದ ತನ್ನನ್ನು ಹಿಂಬಾಲಿಸಲು ಸೂಚಿಸಿ, ಭಿರಭಿರನೆ ನಡೆದುಬಿಟ್ಟ.

ನಾನೂ ಅವನ ಬೆನ್ನಿಗೇ ನಡೆದೆ.

"ದಸ್ತಗೀರ್‍ಯಾ-ದಾದಲ್ಯಾ, ನನ್ನ ಆಣ್ಯದ ನಿಮಗ. ವಾಡೇದ ಹೊಸ್ತಲಾ ದಾಟಬ್ಯಾಡರಿ. ನನ್ನ ಆಣ್ಯದ"

ಬಸವಂತಿ ಕೂಗಿದಳು.

ಚಿತಾಸ್ವರೂಪಿ-ಚೇತನತ್ರಯಕ್ಕೆ ಆಣೆ-ಸೂರೆಯ ದರಜು ಇರಲಿಲ್ಲ. ವಿಶ್ವಾಸನ ರಕ್ತದಿಂದ ಆರಕ್ತಭೀಕರವಾದ ಹಸ್ತಕ್ಕೆ ಬಲಿಯ ಆಸುರೀಶಕ್ತಿ ಬಂದಿತ್ತು. ಆ ಜೀವತ್ರಯದಲ್ಲಿ ಸೇಡಿನ ಕಿಚ್ಚು ಭಗ್ಗನೆ ಉರಿದೆದ್ದಿತ್ತು. ಅವರು ಬೀದಿಗೆ ಬಂದೊಡನೆ ದಸ್ತಗೀರ್‍ಯಾ —

"ರಾಚಪ್ಪಣ್ಣಾ, ಥೇಟ ಹಿರೇಮಠಕ್ಕ ಹೋಗೂಣು. ದಾದಾ ಅಲ್ಲೇ ಇರತಾನ. ಅವನ ಜನಾ ಬರೇ ಉರೀ ಹಚ್ಚೂದರಾಗ ದಂಗ ಆಗ್ಯಾರ. ಥ್ವಾಡೇ ತುಸೂ ಮಂದಿ ಅಲ್ಲಿದ್ದರೂ ನನ್ನ ಕಡೇ ಪಿಸ್ತೂಲದ. ನಾಕ ಬಾರ ಮಾಡಿದರ ಘಾಡಂಘಾಡ ಆಗತಾರ. ದಾದಾನ್ನ ಎಳಕೊಂಡ ಬರೂಣು ವಾಡೇಕ್ಕ. ಗಡಿಬಿಡಿ ಆದರ ಗುಂಡ ಹಾಕೂಣು. ವಿಶ್ಯಾನ ಬದ್ಲಾ ತಗೋಮೂಣು"
ತನ್ನ ಡಾವು ತಿಳಿಸಿದ.

"ದಸ್ತಗೀರ, ನಮ್ಮ ಗಣಪತಿಗುಡೀ ರಖವಾಲದಾರನ ಕಡೇ ಜೋಡನಳೀ ಬಂದೂಕ ಅದ. ಹೋಗೂ ಮುಂದ ಅದನ್ನೂ ತಗೊಂಬೂಣು. ಎರಡೂ ಇದ್ದರ ಠೀಕಾ."
ರಾಚಪ್ಪ.

ಗುಡಿಯ ಕಾವಲಿಗೆ ಪಠಾಣ-ಶೀಖ ರಖವಾಲದಾರರ ಜೊತೆಗೆ, ದರ್ಗಾದ ಪೀರಸಾಹೇಬರು ನಿಲ್ಲಿಸಿದ, ಮುಸಲ್ಮಾನರ ತಂಡವೂ ಇತ್ತು. ಎಲ್ಲರ ಕೈಯಲ್ಲಿಯೂ ಆಳೆತ್ತರದ ಗಂಡುಬಿದಿರಿನ ಕೋಲು, ಜಪಗೊಡಲೆ ಇದ್ದವು. ಪಠಾಣ ರಖವಾಲ ದಾರ ತನ್ನ ತುಂಬಿದ ಬಂದೂಕನ್ನ ರಾಚಪ್ಪನಿಗೆ ಕೊಟ್ಟು. ತಾನು ತನ್ನ ಉಕ್ಕಿನ ಅಣಸಿನ ಲಾಠಿಯನ್ನು ತೆಗೆದುಕೊಂಡು ನಮ್ಮ ಮುಂದೆ ಮುಂದೆ ನಡೆದ.

ರಾತ್ರಿ ರೊಂಯ್ ಎನ್ನುತ್ತಿತ್ತು. ರಾತ್ರಿ ಹನ್ನೆರಡೂವರೇ, ಒಂದು ಆಗಿರ ಬಹುದು. ಊರಲ್ಲಿಯ ತಂಗ ವಾತಾವರಣದ ಪರಿಚಯ ಎಲ್ಲರಿಗೂ ಇದ್ದೇ ಇತ್ತು. ಮನೆಯ ಹೊರಗೆ ತಲೆ ಹಾಕಿ ತಿಪಲಿನಲ್ಲಿ ಸಿಗುವದನ್ನು ತಪ್ಪಿಸಲು, ಜನ ಮನೆ ಯಲ್ಲಿ ಅಡಗಿಕೊಂಡುಬಿಟ್ಟಿತ್ತು. ಕತ್ತಲಲ್ಲಿ ನಮ್ಮ ದಾರಿಯು ನಿಷ್ಕಂಟಕವಾಗಿತ್ತು. ನಕ್ಷತ್ರದ ಅಂಧುಕ-ಪ್ರಕಾಶ ಕತ್ತಲೆಯ ಭೀಕರತೆಯನ್ನು ಎತ್ತಿ ತೋರಿಸುತ್ತಿತ್ತು. ಕರ್ಕಶವಾಗಿ, ಭೀಕರವಾಗಿ ರೊಂಯ್ ಎಂದು ನಾಯಿಗಳು ಊರ ತುಂಬ ಬೊಗಳುತ್ತಿದ್ದವು. ಊರ ಸುತ್ತಲಿನ ತೋಟಗಳ ಬೇಲಿಯಿಂದ ನರಿಗಳ ಅಪಸ್ವರ ಕೀಸರಿಟ್ಟಿತ್ತು. ಗೌಡರ ಓಣಿಯ ಕಡೆಯಿಂದ, ವಾಡೆಯ ಹಿತ್ತಲ ಕಡೆಯಿಂದ, ಗಸ್ತಿ ತಿರುಗುತ್ತಿದ್ದ ಹೊಲೆಯರ ಓಣಿಯ ಹುಡುಗರ ಕೇಕೆ ಕೇಳಿಬರುತ್ತಿತ್ತು. ಉಳಿದದ್ದೆಲ್ಲ ಶುಕಶುಕಾಟ.

ನಮ್ಮ ಮುಂದೆ ನಿರ್ಭಯವಾಗಿ ದುರುದುರು ನಡೆದ ಪಠಾಣನಿಗೆ ರಾಚಪ್ಪ ಮೆಲ್ಲಗೆ ಹೇಳಿದ:

"ಏ ಮಿಯಾ. ಜರಾ ಆಜೂ-ಬಾಜೂ ನೋಡಿಕೋತ ನಡೀ. ಸಂದಿಗೊಂದ್ಯಾಗ ಶ್ಯಾಮರಾಯನ ಜನಾ ಟಪಾಸಿ ಕೂತೈತ್ಯಂತ. ಜರಾ ಹುಷಾರೀ"

ದೂರದಲ್ಲಿ ಹಿರೇಮಠದ ಹೆಬ್ಬಾಗಿಲು ಕಾಣತೊಡಗಿತು. ಬಾಗಿಲ ಮಾಡದಲ್ಲಿಯ ಮಿಣುಕುವ ಪಣತಿ ಗಾಳಿಯೊಡನೆ ಸೆಣಸಿ ಹೊಯ್ದಾಡುತ್ತಿತ್ತು. ಸತ್ತು ಬದುಕುವಂತೆ ಆರುತ್ತಿತ್ತು – ಹೊತ್ತುತ್ತಿತ್ತು.

ಮಠ ಇಪ್ಪತ್ತು-ಮೂವತ್ತು ಮಾರು ಉಳಿದಿರಬೇಕು. ಬದಿಯ ಸಂದಿಯಿಂದ ಚಕ್ಕನೆ ಬ್ಯಾಟ್ರಿಯ ಬೆಳಕು ತೂರಿ ಬಂದು, ನಮ್ಮ ಮುಂದೆ ನಡೆದ ಪಠಾಣನ ಮೇಲೆ ಬಿತ್ತು.

"ಗುಡೀ ರಖವಾಲದಾರಾ, ಪಠಾಣಲೇ. ಇಕ್ಕರಸ ಅವನ್ನ."

ದನಿ ಬಂದ ದಿಕ್ಕಿನಿಂದ ಒಂದು ವ್ಯಕ್ತಿ ಧಾವಿಸಿತು. ಪಠಾಣ ಸಾವಧಾನನಿದ್ದ. ಒನಿಕಿಯ ಗಾತ್ರದ ಉಕ್ಕಿನ ಅಣಸಿನ ಲಾಠಿಯನ್ನು ಜೋರಾಗಿ ಬೀಸಿದ.

"ಸತ್ತ್ಯೆನೋ ಯಪ್ಪಾs..."

ಕತ್ತಲೆಯ ನೀರವತೆಯನ್ನು ಸೀಳಿ ಕ್ರೂರವಾಗಿ ಕೊರೆದು, ಬಡಿತ ತಿಂದವನ ನಿರ್ವಾಣ-ವಾಣಿ ಹೊರಬಿತ್ತು.

"ಮರ್‌ಗಯಾ ಸಾಲಾ"

ಎಂದ ಪಠಾಣ.

ಬಿದ್ದ ವ್ಯಕ್ತಿ ಸತ್ತಿರಲಿಲ್ಲ. ಹೊಡೆತದ ಸಂಕಟ ತಾಳಲಾರದೆ ನರಳುತ್ತಿತ್ತು. ಬಿದ್ದವನ ಜೊತೆಗೆ ಇನ್ನಿಬ್ಬರಿದ್ದರೆಂದು ಕಾಣುತ್ತದೆ. ಬಿದ್ದ ವ್ಯಕ್ತಿಯನ್ನು ನಾವು ನೋಡುತ್ತಿರುವಾಗಲೇ, ನಮ್ಮೆದುರಿನಿಂದ ನುಸುಳಿ ಮಠದ ದಿಕ್ಕಿಗೆ ಧಾವಿಸಿದರು.

"ಪಕಡೋ ಸಾಲೇಕು"

ದಸ್ತಗೀರ ಪಠಾಣನಿಗೆ ಸೂಚಿಸಿದ. ಹೊಡೆತ ತಿಂದವನ ದನಿ ಮಠದಲ್ಲಿದ್ದವರಿಗೆ ಕೇಳಿಸಿರಬೇಕು. ಮೂರು-ನಾಲ್ಕು ಜನ ಒಳಗಿನಿಂದ ಧಾವಿಸಿ ಮಠದ ಬಾಗಿಲಿಗೆ ಬಂದಿತು. ಮಠದ ಮಾಡದಲ್ಲಿಯ ಮಿಣುಕುವ ಪಣತಿಯ ಪ್ರಕಾಶದಲ್ಲಿ ಅವರು ಕಾಣುತ್ತಿದ್ದರೂ, ನಾವು ಅವರಿಗೆ ಕಾಣುವಂತಿರಲಿಲ್ಲ. ಓಡಿ ಹೋದ ವ್ಯಕ್ತಿಗಳು, ಮಠದ ಬಾಗಿಲಲ್ಲಿ ನಿಂತವರಿಗೆ ಕೇಳುವಂತೆ —

"ಶ್ಯಾಮರಾಯರs ಘಾತ ಆತರೀ. ನಬೀಸಾಬನ ಮಗನ್ನ. ಗುಡೀ ರಖವಾಲ್ದಾರಾ ಹೊಡದಾ. ಹುಡಗನ ಹೆಣಾನs ಬಿದ್ದಿರಬೇಕರಿ. ಪಠಾಣ ಬಂದ

ನೋಡರಿ ನಮ್ಮನ್ನ ಹಿಡ್ಯಾಕ. ಯಾರೋ ಮಂದೀನೂ ಅದಾರ್‍ರ"
ಹೇಳಿದ್ದು ಕೇಳಿಸಿತು.

ನಾವು ಬರುವ ದಿಕ್ಕಿಗೆ ಶ್ಯಾಮರಾಯ ಟಾರ್ಚ ಬಿಟ್ಟ. ಮಠದ ಪಾವಟಣಿಗೆ ಇಳಿದು, ಶ್ಯಾಮರಾಯ ಮುಂದೆ ಬರುವಂತೆ ಕಂಡಿತು. ಹಚ್ಚಿದ ಟಾರ್ಚ ಅವನ ಕೈಯಲ್ಲಿತ್ತು. ಅವನ ಕೆಲಬಲದಲ್ಲಿ ನಬೀಸಾಬ, ಬಸಗೋಂಡ ಇದ್ದರು.

"ಶ್ಯಾಮರಾಯರ್‍ರ, ಝಾಡಸರಿ ಗೋಳೀ"
ಬಸಗೋಂಡ ಸೂಚಿಸಿದ.

ಶ್ಯಾಮರಾಯ ಕೈ ಎತ್ತುವಷ್ಟರಲ್ಲಿ, ಸಾವಧಸಿದ್ದ ದಸ್ತಗೀರ್‍ಯಾ, ಚಲಾಕಿನಿಂದ ಪಿಸ್ತೂಲ ಹಾರಿಸಿದ. ಗುಂಡಿನ ಸಪ್ಪಳು ಕೇಳಿದ್ದಷ್ಟೇ. ಟಾರ್ಚ ಕೆಳಗೆ ಬಿದ್ದು ಆರಿರಬೇಕು. ಮತ್ತೆ ಗುಂಡಿನ ಸದ್ದಾಯಿತು.

"ಸತ್ತೆ ಬಸಗೋಂಡಾ. ಇದು ವಿಶ್ಯಾಂದ್ರ ಕೆಲಸಾ...ಘಾತಾ ಮಾಡಿದಾ... ಹೊಲಸೂಳೀಮಗಾ..."

ಶ್ಯಾಮರಾಯನ ಅಂತಿಮ ಸಂದೇಶ ಕೇಳಲಿಕ್ಕೆ ಬಸಗೋಂಡ, ನಬೀಸಾಬ ಇನ್ನುಳಿದವರು ಯಾರೂ ಅಲ್ಲಿರಲಿಲ್ಲ. ಎಲ್ಲರೂ ಮಠದೊಳಗೆ ಓಡಿಬಿಟ್ಟಿದ್ದರು. ದಸ್ತಗೀರ್‍ಯಾ ಮುದ್ದಾಂ ಅವರ ಬೆನ್ನಿಗೆ–ಮಠದ ಗೋಡೆಗೆ ಬಡೆಯುವಂತೆ ಗುಂಡು ಹಾರಿಸಿದ.

"ರಾಚಪ್ಪಣ್ಣಾ. ದಾದಾನ ಕೈಯಾಗ ಬ್ಯಾಟ್ರೀ ಇತ್ತು. ಠೀಕಾತು. ನೇಮತೀ ಗುಂಡು ತೊಡೀಗೇ ಹೊಡದೀನಿ. ಸತ್ತಿಲ್ಲ ಅಂವಾ. ಅವನ ಪಿಸ್ತೂಲೂ ಹಾರೇದ. ಇನ್ನ ಸನೇಕ ಹೋಗಲಿಕ್ಕೆ ಅಂಜಿಕಿಲ್ಲಾ. ಚಲೋ ಪಠಾಣ. ಲೇಕ ಜಾಯಿಂಗೆ ಪರಾಮುಕೂ. ಲೇಕ ಚಲೋ ವಾಡೇಮೆ. ರಾಚಪ್ಪಣ್ಣಾ, ಶ್ಯಾಮರಾಯನ ಪಿಸ್ತೂಲು ಶಾಬೂತ ಇರ್‍ಲಿ. ಟಾರ್ಚ ತಗೋ ದಾದಲ್ಯಾ ಕೈಯಾಗ, ವಾಡೇ ತನಕಾ ಬಾರ ಮಾಡಿಕೋತ ಹೋಗೂಣು. ಹಾದ್ಯಾಗ ಇವರ ಮಂದಿ ಅಟಕಾಸೂ ಅಂಜಿಕ್ಯದ. ಮಠದ ಬಾಗಲಾ ಹೊರಕೊಂಡೀ ಹಾಕಿಬಿಡೂಣು"
ದಸ್ತಗೀರ.

ಪಠಾಣ ಬಾಗಿಲು ಮುಚ್ಚಿ ಹೊರಚಿಲಕ ಹಾಕಿದ. ದಸ್ತಗೀರ್‍ಯಾ ಮತ್ತೊಮ್ಮೆ ಬಾರು ಮಾಡಿದ. ನಾನು ಟಾರ್ಚ ಬಿಟ್ಟು ಶ್ಯಾಮರಾಯನ ಪತಿತದೇಹದ ಕಡೆಗೆ ನೋಡಿದೆ.

ಶ್ಯಾಮರಾಯ ಸತ್ತಿರಲಿಲ್ಲ. ಬೇಖಬರ ಆಗಿದ್ದ. ಗುಂಡು ತೊಡೆಯಲ್ಲಿ ನಟ್ಟು ರಕ್ತ ಬಸಿಯುತ್ತಿತ್ತು. ಉಟ್ಟ ಧೋತರ ಅಸ್ತವ್ಯಸ್ತವಾಗಿತ್ತು. ಪಠಾಣ ಅವನ ಅರಿವೆಯನ್ನು ಸರಿಪಡಿಸಿ, ತುಂಬಿದ ತಂಬಿಗೆಯನ್ನು ನಿರಾಯಾಸವಾಗಿ ಎತ್ತುವಂತೆ ಶ್ಯಾಮರಾಯನನ್ನು ಎತ್ತಿ ಹೆಗಲ ಮೇಲೆ ಹಾಕಿಕೊಂಡು ಭಿರಭಿರನೆ ನಡೆದ. ನಾವೂ ಅವನ ಬೆನ್ನಿಗೆ ನಡೆದೆವು.

ಹೊಡೆತ ತಿಂದು ಬಿದ್ದ, ನಬೀಸಾಬನ ಮಗ, ಇನ್ನೂ ನರಳುತ್ತ ದಾರಿಗೆ ಅಡ್ಡಾಗಿಯೇ ಬಿದ್ದಿದ್ದ. ಹೆಬ್ಬೆರಳಿನಿಂದ ಹರಳು ಚಿಮ್ಮುವಂತೆ. ಕಾಲಿನಿಂದ, ಆ ನಿಶ್ಚೇಷ್ಟ ದೇಹವನ್ನು ತಳ್ಳಿ ಪಠಾಣ ಮುಂದೆ ಸಾಗಿದ.

"ರಾಚಪ್ಪಣ್ಣಾ, ನೀವು ಪಠಾಣಗ ಹುಷಾರ ಅಂತ ಹೇಳಿದ್ದು ಠೀಕ ಆತು. ಇಲ್ಲದಿದ್ದರ, ನಮ್ಮ ಪೈಕೀ ಯಾರಿಗ್ಯರs ಹೊಡತ ಕೂಡತಿತ್ತು. ಇಂಥವ ಕಡೇ ನಾವು ಬರೂ ಧೈರ್ಯಾ ಮಾಡಲಿಕ್ಕಿಲ್ಲಂತ ಅವರದೆಲ್ಲಾ ಸಮಜೂತ ಆಗಿರಬೇಕು. ಯಾರೋ ತಮ್ಮ ಪೈಕೀ ಮಂದಿ ಬಂದಿರಬೇಕಂತ ಅವರು ಬ್ಯಾಟ್ರೀ ಬಿಟ್ಟರು. ಹೊಡತಾ ತಿಂದರೂ ಯಾರೂ ಸಾಯಲಿಲ್ಲಾ; ಠೀಕಾತು. ವಿಶ್ಯಾನ ಹಣೀಗೆ ದೊಡ್ಡ ಭೋಕನs ಬಿದ್ದದ. ನನೇದಾಗ ಎಲ್ಲ್ಯರs ದವಾಖಾನಿ ಅವs ಏನು? ಇವೆಲ್ಲಾ ಮಾರಾಮಾರೀ ಕೇಸಾ. ಸರಕಾರೀ ದವಾಖಾನಿಗೆ ಹೋಗೂವು. ಹ್ಯಾಂಗ ಮಾಡೂದು. ರೊಕ್ಕಾ ಛೆಲ್ಲಬೇಕ ರಾಚಪ್ಪಣ್ಣಾ! ಎಲ್ಲಾ ಪ್ರಕರಣ ತಾನೇ ಗಡಪ್ ಆಗತಾವ. ಪಂಚನಾಮೀ ಭಾನಗಡೀನೂ ಬ್ಯಾಡಾ. ಗೌಡರು ಏನೋ ಅಂದರಲಾ! ಚಿಕ್ಕೋಡಿ ಫೌಜದಾರ ಘೋರೋಬಾ ಅಂತs. ನಾನೂ ಅವರೂ ಗಾಡೀ ತಗೊಂಡು ಚಿಕ್ಕೋಡಿಗೆ ಹೋಗತೇವು. ಎಸ್.ಐ. ನ್ನ ಬಗಲಿಗೆ ಹಾಕೊಂಡು ಬರತೇವು." ದಸ್ತಗೀರ ಹೇಳಿದ.

"ಅರೇ ದಸ್ತಗೀರ್ಯಾ, ಅದ್ನೋಡು. ವಾಡೇದ ಬಾಗಲದಾಗ ಯಾರದೋ ಕಾರ ನಿಂತದ. ಏನೋ ಗಡಿಬಿಡಿ ಕಾಣಸ್ತದ. ಅಂಗಳದಾಗ ಮಂದೀ ಓಡ್ಯಾಟ ನಡದ್ವದ. ಯಾರ ಬಂದಿರಬೇಕು. ಇಂಥಾ ಅಪರಾತ್ರ್ಯಾಗ? ಅದಂತೂ ಶ್ಯಾಮ ರಾಯನ ಕಾರ ಅಲ್ಲಾ."

ನಾನು.

ನಾವು ಓಡುತ್ತಲೇ ವಾಡೆಯ ತಲೆಬಾಗಿಲಿಗೆ ಬಂದೆವು. ವಾಡೆಯ ಬಾಗಿಲಲ್ಲಿಯ ಪಿಲಾಲದ ಬೆಳಕಿನಿಂದ ಹಗಲಪಂಜು ಹಚ್ಚಿದಷ್ಟು ಪ್ರಕಾಶ ಬಿದ್ದಿತ್ತು.

ನಮ್ಮನ್ನು ಪಡಸಾಲೆಯಿಂದಲೇ ನೋಡಿ, ಗೌಡರು —

"ರಾಚೋಟೀ, ಕಾಕಾ ಬಂದರು. ಸೋನಕ್ಕ ಬಂದಳು. ಏನ ತಂದಿರಿ ಅದನ್ನ? ಪಠಾಣಸ ಹೆಗಲ ಮ್ಯಾಲ ಯಾರ್ನ ಹೊತ್ತ ತಂದಿರಿ?"
ಕೇಳಿದರು.

"ಶ್ಯಾಮರಾಯರ ಬ್ಯಾಟಿ ಗೌಡರs"
ರಾಚಪ್ಪ ಉತ್ತರಿಸಿದ.

"ರಾಚೋಟೀ ಏನ ಮಾಡಿದಿ? ಎಂಥಾ ಘಾತಾ ಮಾಡಿದಿ?"
ಗೌಡರು ಒದರಿಕೊಂಡರು.

ಪಠಾಣ ಶ್ಯಾಮರಾಯನ ನಿಶ್ಚೇಷ್ಟ ದೇಹವನ್ನು ಪಡಸಾಲೆಯ ಮುಂದಿನ ಜಗುಲಿಯ ಮೇಲೆ ಒರಗಿಸಿದ.

ರಾವಜೀಕಾಕಾ, ಸೋನಕ್ಕ, ಬಸವಂತಿ, ಮೂವರನ್ನು ಬಿಟ್ಟು, ಉಳಿದವರೆಲ್ಲ ಶ್ಯಾಮರಾಯನನ್ನು ಮಲಗಿಸಿದಲ್ಲಿ ಬಂದು ನೆರೆದರು. ಸೋನಕ್ಕ ವಿಶ್ವಾಸನ ಬದಿಯಲ್ಲಿ ಅವನ ಎದೆಯ ಹತ್ತಿರ – ತಲೆಯಿಟ್ಟು ಬೋರಲಾಗಿ ಮಲಗಿದವರು – ತಲೆಯೆತ್ತಿ ಕೂಡ ನೋಡಲಿಲ್ಲ. ಸುರ್ಯಾ, ಒಮ್ಮೆ ನಿರ್ಲಕ್ಷ್ಯಭಾವದಿಂದ ಶ್ಯಾಮರಾಯನ ದೇಹವನ್ನು ನೋಡಿ, ತಿರುಗಿ ಹೋಗಿ ವಿಶ್ವಾಸನ ಕಾಲುದೆಸೆಗೆ ಕುಳಿತ. ಗೌಡರು, ಕಾಕಾ ಕುಳಿತಲ್ಲಿಗೆ ಬಂದರು. ರಾಚಪ್ಪ, ತಟ್ಟನೆ ಸಾಗರಬಿದ್ದು, ಕಾಕಾ ಅವರ ಕಾಲು ಹಿಡಿದುಕೊಂಡು —

"ಕಾಕಾ... ಕಾಕಾ..."
ಎಂದ. ಅವನಿಗೆ ಏನು ಹೇಳುವದಿತ್ತೋ ಏನೋ – ಅದರ ಅರ್ಥ ಕಾಕಾ ಅವರಿಗೆ ಆಗಿರಬೇಕು. ಕಾಕಾ ಗಂಭೀರವಾಗಿ —

"ರಾಚೋಟೀ ಏಳು. ನೀ ಮಾಡಿದ್ದs ಠೀಕ ಆತು. ವಿಶ್ಯಾನ ಬದಲಾ ನಾನೇ ತಗೋತಿದ್ದೆ. ನೀ ತಗೊಂಡಿ. ಶ್ಯಾಮುನ ಬ್ಯಾಟೀ ಆಡಿದ್ಯಂತ ನನಗೇನು ಕೆಟ್ಟ ಅನಿಸಿಲ್ಲಾ. ಉಲಟ ಸಮಾಧಾನನs ಆಗೇದ. ಶಿವರಾಯ್ಯಾ, ಅಂವಾ ಸತ್ತಿದ್ದರ, ಕಾಯದೇಶೀರ ಪಂಚನಾಮೀ ಮಾಡರಿ. ಬದಕೂ ಲಕ್ಷಣ ಇದ್ದರ, ಅವನ್ನ ತಮ್ಮಾನ ಮನೀಗೆ ಒಯ್ದು ಇಲಾಜ ಮಾಡರಿ. ಅಂವಾ ಇಲ್ಲೆ ವಾಡೇದಾಗ – ನನ್ನ ಕಣ್ಣೆದರಿಗೆ ಇರೂದು ಬ್ಯಾಡಾ. ವಿಶ್ಯಾ ಎದ್ದು ಕೂಡೂ ತನಕಾ ನಾಯೇನು ಈ ಜಾಗಾ ಬಿಟ್ಟು ಅಗಳ್ಯಾಡಾಂಗ ಇಲ್ಲಾ. ಗೋವಿಂದಭಟ್ಟನ ಮನೀ ಮುಂದಿನ್ನ ವಾಡೇಕ್ಕ ಕರಕೊಂಡ

ಬರ್ರಿ. ನಾ ಬಂದೀನಿ...ಕರದೀನಿ ಅಂತ ಗೋವಿಂದಭಟ್ಟಗ ಹೇಳರಿ. ಮೋಟರ ಒಯ್ಯಿರಿ. ಮುದಕಿನ್ನೂ ಹಾಕೊಂಡ ಬರ್ರಿ. ಯಾರಿಗೂ ಇಜಾ ಆಗಿಲ್ಲ ದಾದಲ್ಯಾ, ಅಂಜಬ್ಯಾಡಾ"

ರಾವಜೀಕಾಕಾ ತಮ್ಮ ಬಾಲ್ಯಸ್ನೇಹಿತ ಗೌಡರಿಗೆ – ಶಿವಲಿಂಗಪ್ಪನವರಿಗೆ – ಶಿವರಾಯನಿಗೆ ಆಜ್ಞೆ ಮಾಡಿದರು. ರಮಾಕಕ್ಕಿ, ಗಿರಿಜಾ, ಧನ್ವಂತರಿ ಕೃಷ್ಣಭಟ್ಟ ಶ್ಯಾಮರಾಯನ ಸುಶ್ರೂಷೆಯಲ್ಲಿದ್ದರು. ಗುಂಡು ನಟ್ಟ ತೊಡೆಯ ಭಾಗವನ್ನು ನೋಡಿ, ಕೃಷ್ಣಭಟ್ಟ ಗೌಡರಿಗೆ ಹೇಳಿದ:

"ಗೌಡರs ಗುಂಡು ನಟ್ಟೇ ಇಲ್ಲಾ. ತರದ ಹೋಗೇದ. ಮಾಂಸಲ ಭಾಗ ಹರಕೊಂಡು ಹೋಗೇದಂತ, ರಕ್ತ ಸುರದ್ವದ. ಶ್ಯಾಮಾ ಬೇಖಬರ ಇದ್ದಾನ ಅಷ್ಟೇ! ಪಂಚನಾಮೆ-ಗಿಂಚನಾಮೇ ಭಾನಗಡೀ ಯಾತಕ್ಕs? ಗಿರಿಜಾ, ನೀ ಇಷ್ಟು ಬರೇ ಘಾಳೀ ಹಾಕೋತ ಇರೂ. ಶ್ಯಾಮುಗೇನೂ ಧಾಡಿ ಆಗ್ಪಾಂಗಿಲ್ಲಾ. ಈಗ ಮಲಾಮು ಹಚ್ಚಿ ಪಟ್ಟೀ ಬಿಗೀತೀನಿ. ವಿಶ್ವಾಸನ್ನs ಭಾಳ ನಿತ್ರಾಣ ಆಗ್ಯಾನ. ರಕ್ತೇನು ಥ್ವಾಡೇ ಹೋಗೇದs. ಅಂವಾ ಅಂತs ತಡಕೊಂಡು ಬದಕಿದಾ. ಭಾರೀ ಘಟ್ಟಿ ಜೀವನಾ. ಬಸವಂತೀ, ವಿಶ್ವಾಸಗ, ಶರಬತ್ತು-ಹಾಲೂ ಏನ ಬೇಕ ಅದನ್ನ ಹಾಕೂತ ಬಾ. ಗುಳಿಗೀ ಮಾತ್ರ ತಾಸಿಗೊಮ್ಮೆ ಹಾಕು. ಭಾಳ ಮಾತಾಡಿಸಿಗೊಡ ಬ್ಯಾಡರಿ. ತಾನಾಗೇ ಎಚ್ಚರಾಗೂ ತನಕಾ ಅವನ್ನ ಎಬ್ಬಿಸಲಿಕ್ಕೂ ಹೋಗಬ್ಯಾಡರಿ. ರಾಚೋಟೀ, ಶ್ಯಾಮುನ್ನ ತಮ್ಮಾಜೀ ಮನೀಗೆ ಸಾಗಸು. ವಿಶ್ವಾಸ-ಶ್ಯಾಮಾ ಬ್ಯಾರೇ ಬ್ಯಾರೇ ಇರೂದೇ ಠೀಕಾ. ದೇಹದ ಪೆಟ್ಟು ಒಂದ ಪಾಲ ಆದರ, ಮನಸಿನ ಪೆಟ್ಟಾ ಹತ್ತ ಪಾಲಾ. ಇದು ಮಾಯೂದರಾಗ ಅದು ಮರಕಳಸಬಾರದು. ರಮಾಕಕ್ಕೀ. ಸೋನಕ್ಕನ್ನ ಜಪ್ಪಸು. ಇನ್ನೂ ಅಕೀಗೆ ಶುದ್ಧೀ ಬಂದಿಲ್ಲಾ. ನಾ ಕೂತಿರತೀನಿ. ಕಾಕಾನ ಹತ್ತರಾ. ಜರೂರ ಬಿದ್ದರ ಕರೀರಿ"

ವಾಡೆಯಲ್ಲಿ ಶ್ಯಾಮರಾಯನ ಹಳೆಯ 'ಕ್ಯಾಂಪ್ ಕಾಟ್' ಇತ್ತು. ಮೆಲ್ಲನೆ ಅದರ ಮೇಲೆ ಮಲಗಿಸಿ ಅವನನ್ನು ತಮ್ಮಾಜಿಯ ಮನೆಗೆ ಸಾಗಿಸಿದ್ದಾಯಿತು. ಗಿರಿಜಾ, ರಮಾಕಕ್ಕಿ ಆಗೀಗ ಹೋಗಿ ಬಂದು, ಅವನನ್ನು ನೋಡಿಕೊಳ್ಳುತ್ತಿದ್ದರು. ಶ್ಯಾಮರಾಯನ ಬಳಿಯಿಂದ ಹಲಾಸಕೂಡದೆಂದು ತಮ್ಮಾಜಿಗೆ ಸಕ್ತಮನಾಯಿ ಹುಕುಮಾಗಿತ್ತು.

ಶ್ಯಾಮರಾಯನನ್ನು ಸಾಗಿಸಿದ ನಂತರವೇ ಕಾಕಾ ಕೂತ ಜಾಗ ಬಿಟ್ಟು

ಅಂಗಳಕ್ಕೆ ಬಂದರು. ಗೌಡರು. ಪೀರಸಾಹೇಬರು, ರಾಜಪ್ಪ ಅವರನ್ನು ಸುತ್ತುರಿದು ನಿಂತರು.

ಗೋವಿಂದಭಟ್ಟನ ನಿರಾಶ್ರಿತ, ಅನಿಕೇತ ಕುಟುಂಬ ಮೋಟಾರಿನಿಂದ ಇಳಿಯಿತು. ಕಮತಿಗ, ಪಠಾಣ ಕೂಡಿ, ಅಜ್ಜಿಯನ್ನು ಅನಾಮತ್ತಾಗಿ ಹೊತ್ತು ತಂದು ಅಡುಗೆಯ ಮನೆಯಲ್ಲಿಯ ಕೋಣೆಯಲ್ಲಿ ಹಾಕಿ ಬಂದರು. ಗೋವಿಂದಭಟ್ಟ–ಅವ್ವ ಧಾವಿಸಿ ಬಂದು ಕಾಕಾ ಅವರ ಕಾಲಿಗೆ ಬಿದ್ದು —

"ಕಾಕಾ, ನೀವ್ ಬಂದರಿ. ನಾವು ಬದುಕಿದೇವು"

ಎಂದು ಕಣ್ಣೀರು ಸುರಿಸತೊಡಗಿದರು.

"ಗೋವಿಂದಭಟ್ಟ, ಗೋದಕ್ಕಾ ಶಾಂತ ಆಗರಿ. ಆದದ್ದು ಆಗಿ ಹೋತು. ವಾಡೇ ನಿಮ್ಮದೇ ಅದs. ಊರಾಗ ನನ್ನೂ ಒಂದಲ್ಲಾ ಹತ್ತ ಮನೀ ಅವs. ಬೇಕಾದ್ದೊಂದು ಆರಿಸಿಗೋರಿ. ಹುಟ್ಟಿ ಬೆಳದ ಮನೀ ಹೋತಂತ ಸಂಕಟಾಗೂದು ಸಹಜ ಅದs. ನಿಮ್ಮ ಮನೀ ಅನ್ನೂ ಪ್ರೀತಿಗೆ ನನ್ನ ವಾಡೇದ ಕಿಂಮತ್ತು ಹ್ಯಾಂಗ ಬಂದೀತು? ನಾ ಕೊಡೂ ಮನೀ ಅದಕ್ಕ ಹ್ಯಾಂಗ ಸಮಾ ಆದೀತು? ಶ್ಯಾಮು ಸುಡಸಲಿಲ್ಲ ಮನೀ. ನಾ ಸುಡಸಿದೆ ಅಂತ ತಿಳಕೋರಿ. ನನ್ನ ತಪ್ಪು ಹೊಟ್ಟ್ಯಾಗ ಹಾಕೋರಿ."

ಕಾಕಾ ಸಗದ್ಗದಿತರಾಗಿ ಹೇಳಿದರು. ನಿಂತವರ ಕಣ್ಣಲ್ಲಿ ನೀರಾಡಿತು. ಗೋವಿಂದಭಟ್ಟ ತೀರಾ ಸಂಕಟಪಟ್ಟವರಂತೆ —

"ಕಾಕಾ ಏನಂದಿರಿ? ನಿಮ್ಮ ತಪ್ಪ ನಾ ಏನ ಹೊಟ್ಟ್ಯಾಗ ಹಾಕೋಳ್ಳೀ? ಯಾರ ಮನೀ ಅದು? ನೀವೇ ನಿಂದರಿಸಿದ್ದು. ನಿಮ್ಮ ಹೆಸರಿಲೇನs ದೀಪಾ ಹಚ್ಚತಿದ್ದೇವು. ಎಲ್ಲೇ ನಿಂತರೂ ನಿಮ್ಮದೇ ನೆರಳಾ. ಶ್ಯಾಮು ನಮ್ಮನ್ನ ಬಯಲಾಗ ಒಗದರೂ ಕಾಕಾನ ಉಡೀ ಒಡ್ಡೇದ. ನಮಗ ಯಾತರ ವದಾತೀನೂ ಇಲ್ಲಾ. ಕಾಕಾ, ನೀವು ಮನಸಿಗೆ ಹಚಿಗೋಬ್ಯಾಡರಿ. ಮನೀ ಸುಟ್ಟ ದುಃಖಾ ನನಗ ಆಗಿಲ್ಲಾ. ಇಕೀಗೆ ಆಗಿಲ್ಲಾ. ನೀವು ಊರಿಗೆ ಬಂದರಿ. ವಾಡೇಕ್ಕ ಬಂದರಿ. ಬಂದವರs ನಮ್ಮನ್ನ ಕರಿಸಿಗೊಂಡಿರಿ. ಅದರ ಅಭಿಮಾನ ಅನಿಸಿ ಸಮಾಧಾನ ಬಂದ್ವದ. ಕಾಕಾ ಮನೀ ಅಸ್ಥಿರಾ – ಈ ಸಮಾಧಾನನs ಖರೇ – ಅದೇ ಅಖಂಡಾ."

ಎಂದು ಹೇಳಿದ.

ರಾವಜೀಕಾಕಾ ಅಚಾನಕವಾಗಿ ಸಹಕುಟುಂಬ ಬಂದ ವಿಷಯ ಇನ್ನೂ

ನಮಗೆ ಅಗಮ್ಯವಾಗಿಯೇ ಇತ್ತು. ಕಾಕಾ ತಾವೇ ಹೇಳಿದರು:

"ಶಿವರಾಯ್ಯಾ. ಏನೇನ ಭಯಂಕರ ನಡದಹೋತು ಒಂದ ದಿನದಾಗ. ಬಸವಂತಿ ಹುಡುಗೂರು ಕೂಡಿ ಏನ ಚಮತ್ಕಾರ ಮಾಡಿದರು. ಬಸವಂತೀ ಜೀವಕ ಧೋಕಾ ಅದ್ಯ ಅನೂ ಸಂಶ್ಯಾದಿಂದ ನಾನು ರಾಚಪ್ಪನ್ನ ಅಗಾವನೇ ಕಳಿಸಿದ್ದೆ. ವಿಶ್ವಾಸ-ದಸ್ತಗೀರ, ಸಾಂಗ್ಲೀಗೆ ಹೋಗತೇವಂತ ಸುಳ್ಳ ಹೇಳಿ ಇಲ್ಲಿಗೆ ಬಂದರು. ದಾದಲ್ಯಾ ಊರಿಗೆ ಹೋಗತೀನಿ ಅಂತ ಹೇಳಿದ್ದರೂ, ಈ ಡಾವಿನ ದಶಿಂದ ಚಕಾರ ಶಬ್ದ ತಗದಿರಲಿಲ್ಲಾ. ಸುರೇಶಗ ಇವರ ಡಾವಿನ ಮಾಹಿತಿ ಇತ್ತು. ಇವರು ಸಂಕಟದಾಗ ಸಿಕ್ಕರ. ಇಡೀ ಮನೀನೆ ಮುಗೀತದ ಅನೂ ಕಲ್ಪನಾ ಇತ್ತು. ಅಂವಗ ತಡಕೊಂಬೂದು ಆಗಲಿಲ್ಲಾ. ಮೂರ ಘಂಟೇದ ಸುಮಾರಕ್ಕ ಗಾಡೀ ತಗೊಂಡೇ ಮನೀಗೆ ಬಂದಾ: "ಕಾಕಾ, ವಿಶ್ಯಾ, ದಾದಲ್ಯಾ, ಒಣಗಿದ ಹುಲ್ಲಾಗ ಕಡ್ಡೀ ಕೊರದು ಒಗೀಲಿಕ್ಕೆ ಹೋಧಾಂಗ ಆಗೇದ. ಬದಕಿ ಬಂದಾರನೂ ಆಶಾ ಇಲ್ಲ ನನಗ. ಪರಿಸ್ಥಿತಿ ಕೈಮೀರದಿದ್ದರ ಭೆಟ್ಟ್ಯರ್‍ಯ ಆದೀತು" ಅಂತ ಹೇಳಿದಾ. ದುರ್ದೈವಕ್ಕ. ದಾರ್‍ಯಾಗ ನಮ್ಮ ಗಾಡೀ ಕೆಟ್ಟಿತು. ಜೀವ ತೆಳಗ-ಮ್ಯಾಲ ಆಕ್ಕೋತ ನಡದಿತ್ತು. ಎರಡ ತಾಸು ನಾ ಮುಂಚೆ ಬಂದಿದ್ದರ, ವಿಶ್ಯಾಗ ಏನ ಆಗತಿದ್ದಿಲ್ಲಾ. ಶ್ಯಾಮಗೇನ ಆಗತಿದ್ದಿಲ್ಲಾ. ನೀನೂ ರಾಚಪ್ಪಾ ಇದ್ದೀರಿ ಅನ್ನೂ ಧೈರ್‍ಯಾ ಇತ್ತು. ನಿಮ್ಮದೂ ಕೈಮೀರಿತ್ತು. ನೀವರ್‍ಯ ಏನ ಮಾಡೀರಿ?"

ಗೌಡರು ಸೂತೋವಾಚ ಧರ್ತಿಯಲ್ಲಿ ಮೊದಲುಮಾಡಿ, ಬಸವಂತಿ ದೀಪ ಹಚ್ಚಿದ ದಿವ್ಯ – ಶ್ಯಾಮರಾಯನ ಹಕಾಲಪಟ್ಟಿ – ಅವನು ಊರಲ್ಲಿ ಎರಡು ದಿನ ಗಳಿಂದ ಹಾಕುತ್ತಿದ್ದ ಧಿಂಗಣ-ಗುಣಿತದ ರಸಾಳ-ವರ್ಣನೆಯನ್ನು ಮಾಡಿದರು.

ಊರಲ್ಲಿ ನಡೆದ ಈ ಗದ್ದಲಕ್ಕೆ ಶ್ಯಾಮರಾಯನ ಈರ್ಷೆ, ಬಸವಂತಿಯನ್ನು ಹಿಡಿಯುವ ಅವನ ಜಿದ್ದು, ಕಾರಣವಿರುವಂತೆ ರಾವಜೀಕಾಕಾ ಅವರ ಮೇಲಿನ ಹಳೆಯ ಸೇಡನ್ನು ತೀರಿಸಿಕೊಳ್ಳುವ ಹಿರೇಮಠದ ಅಯ್ಯನವರ ಡಾವೂ ಕಾರಣ ವಾಗಿತ್ತೆಂದು ಹೇಳಿದರು. ನಲವತ್ತು ವರ್ಷದ ಹಿಂದೆ, ಮಠದ ಪಟ್ಟಕ್ಕೆ ಬರುವದರ ಸಲುವಾಗಿ, ಪ್ರಸ್ತುತ ಪೀಠಾಧೀಶ ಅಯ್ಯನವರಿಗೆ – ಚರಂತಿಮಠದ ಅಪನವರಿಗೆ ಜಗಳ ಕಡೆದಿತ್ತು. ಚರಂತಿಮಠದ ಅಪನವರೆಂದರೆ, ಸಾತ್ವಿಕತೆಯೇ ಕಡೆದು ಬಂದಂಥ ಅವಧೂತರು. ಚಿಕ್ಕವರಿದ್ದಾಗಲೂ ಅಷ್ಟೇ! ತದ್‌ವ್ಯತಿರಿಕ್ತ ಹಿರೇಮಠದ ಅಯ್ಯ. ಕೂತರೆ ಕಾಮಿಸಿ. ಕೈ ಚಾಚಿದರೆ ಕಾಂಚಾಣಕ್ಕೆ ಹಪಾಹಪಿಸಿದ ವ್ಯಕ್ತಿ. ಈ ಪೀಠಾಧಿ

ಕಾರದ ಪ್ರಕರಣ, ಬೆಳಗಾಂವಿ, ಮುಂಬೈ, ಲಂಡನ್ನದ ವರೆಗೆ ಹೋಗಿ ಬಂದಿತು. ನ್ಯಾಯ ಹಿರೇಮಠದ ಅಯ್ಯನವರಂತಾಯಿತು. ರಾವಜೀಕಾಕಾ, ಆ ವೇಳೆಯಲ್ಲಿ ಚರಂತಿಮಠದ ಸ್ವಾಮಿಗಳ ಬೆನ್ನುಕಟ್ಟಿ ಬರೇ ಸಾಕ್ಷಿ-ಪುರಾವೆ ಒದಗಿಸಿದ್ದಲ್ಲದೆ, ನೀರಿನಂತೆ ಹಣವನ್ನೂ ಹರಿಸಿದ್ದರು. ಚರಂತಿಮಠದ ಅಪನವರು ತಮಗೆ ಹಿರೇಮಠದ ಪಟ್ಟ– ಅದರ ಸಲುವಾಗಿ ಅನ್ಯರ ನ್ಯಾಯ-ಅನ್ಯಾಯ ಏನೂ ಬೇಡವೆಂದು ಯಾವ ಕೋರ್ಟಿನ ಕಟ್ಟೆಯನ್ನೂ ಏರಿರಲಿಲ್ಲ. ಅವರನ್ನು ಹಿಂದೆ ಸರಿಸಿ, ಮುಂದೆ ಬಿದ್ದವರು, ಖಟ್ಲೆಯ ದೀರ್ಘ ಕುಸ್ತಿ ಆಡಿದವರು ಕಾಕಾ.

"ಇದರಾಗ ಜಾತೀ ಪ್ರಶ್ನಿ ಇಲ್ಲಾ. ಇಡೀಊರಿಗೆ ಮಾನ-ಮರ್ರ್ಯಾದಿ ಬರೂದು ಮಠಾ, ಅಪನವರು, ಗುಡೀ, ಪಂಚಾಯತೀಯಿಂದ. ಶೀಲಾ ಒಯ್ದು ಗೂಟಕ್ಕ ಕಟ್ಟಿ ಇಟ್ಟಾಂವಗ ನಾ ಪಟ್ಟಾ ಏರಿಗೊಡಾಂವಲ್ಲಾ. ಈ ಅಯ್ಯಗ ಏಳ ಕೆರೀ ನೀರ ಕುಡಸದೆ ಬಿಡೂದಿಲ್ಲಾ. ನ್ಯಾಯ ತನ್ನ ನಿರ್ಣಯ ಕೊಡಲಿ"
ಅಂತ ಜಿದ್ದಿಗೆ ಬಿದ್ದು ಖಟ್ಲೇ ನಡಿಸಿದ್ದರು. ಆದರ ಅದು ಉಲಟಾ ಡಾವ್ ಬಿದ್ದು ಕಾಕಾ ಸೋತಿದ್ದರು. ಅಯ್ಯನ ಕೈಯೇ ಮೇಲಾಗಿತ್ತು.

ಕಾಕಾ ಅವರಿಗೆ ನ್ಯಾಯಾಲಯದಲ್ಲಿಯ ವಿಶ್ವಾಸ ಢಳಮಳಿಸಿತು. ಪ್ರೀವ್ಹಿಯಲ್ಲಿ ತಮ್ಮ ವಿರುದ್ಧ ನಿಕಾಲೆಯಾದ್ದರಿಂದ ಅವರ ಕೈಕಟ್ಟಿದಂತಾಯಿತು. ಅಯ್ಯ ಗೆದ್ದ ವಿಜಯದ ಪ್ರಯುಕ್ತ ರಾವಜೀಕಾಕಾ ಅವರ ಎದೆಯ ಮೇಲೆ ನಡೆಯುವಂತೆ, ಅಂಬಾರಿಯಲ್ಲಿ ಕುಳಿತು ಮೆರವಣಿಗೆ ಮಾಡಿಸಿಕೊಂಡ. ಸುತ್ತಲಿನ ಸಪ್ತಗ್ರಾಮಕ್ಕೆ ಮೂರು ದಿನ ಹುಗ್ಗಿಯ ಪ್ರಸ್ತ ಹಾಕಿದ. ಶ್ರಾವಣಮಾಸದಲ್ಲಿ ಪುರಾಣದ ಬದಲು, ರಾವಜೀಕಾಕಾ ಮತ್ತು ಚರಂತಿಮಠದ ಅಪನವರು, ಇವರಲ್ಲಿಯ ಕಾಕಾ ಅವರ ಸೋಲಿನ, ತನ್ನ ಗೆಲುವಿನ ಪವಾಡವನ್ನೆ ಹಾಡತೊಡಗಿದ.

ಮೂರು-ನಾಲ್ಕು ವರುಷ ಇದು ಅಖಂಡ ಸಾಗಿತು. ಕಾಕಾ ನಿರ್ವಿಕಾರ ಚಿತ್ತರಾಗಿಯೇ ಇದ್ದರು. ಅಷ್ಟು ಹೊತ್ತಿಗೆ ಅವರ – ಚರಂತಿ ಸ್ವಾಮಿಗಳ ಸಂಬಂಧ ಜೀವ-ಶಿವದಂತೆ ಏಕವಾದವು.

ಎಲ್ಲವೂ ಮರೆತಂತೆ ಆಗತೊಡಗಿತ್ತು. ಎಲ್ಲರೂ ಆದದ್ದನ್ನು ಮರೆಯುವದರಲ್ಲಿದ್ದರು. ಆದರೊಂದು ಅಚಾತುರ್ಯ ಘಟಿಸಿತು. ಒಂದು ಶ್ರಾವಣಮಾಸದಲ್ಲಿ, ಗದಿಗೆಯ್ಯನವರ ತಂಗಿ – ಮೈ-ಕೈ ತುಂಬಿಕೊಂಡು ಬಹಳ ಸದ್ದು-ಮುದ್ದಾಗಿದ್ದರಂತೆ – ಹಿರೇಮಠದಲ್ಲಿ ಪುರಾಣಕ್ಕೆ ಹೋಗಿದ್ದರು. ಪುರಾಣ ಮುಗಿಯಿತು. ಅಷ್ಟು

ಹೊತ್ತಿಗೆ ಆಗಲೆ ಅಯ್ಯನವರ ಕಣ್ಣು ಈ ಹೆಣ್ಣುಮಗಳ ಚೆಲುವನ್ನು ಹೀರಿತ್ತು. ಯಾವುದೋ ಕಾರಣದಿಂದ, ಏನೋ ಕ್ಲೃಪ್ತಿ ಮಾಡಿ, ಅಯ್ಯನವರು, ಗದಿಗೆಯ್ಯನವರ ತಂಗಿಯನ್ನು ತಮ್ಮ ಖಾಸಾ ಕೋಣೆಗೆ ಕರೆಸಿಕೊಂಡರು. ಅವರ ಮೇಲೆ ಕೈಹಾಕಿದರು. ಹೆಣ್ಣುಮಗಳು ಗಾಬರಿಯಾಗಿ – ದಿಕ್ಕುಗಾಣದೆ ಕೈಬಾಯಿಯ ಗದ್ದಲ ಮಾಡಿದಳು. ಅವರು 'ಹೊಯ್'ಕೊಂಡ ಗದ್ದಲ – ಪಂಚಾಯತಿಯಲ್ಲಿ ಕುಳಿತ ರಾವಜೀಕಾಕಾ, ಗೌಡರಿಗೆ ತಿಳಿಯಿತು. ಅದೇ ಹೊತ್ತಿಗೆ ಗದಿಗೆಯ್ಯನವರು ಧಾವಿಸಿ ಬಂದು – ಕಾಕಾನಿಗೆ ಅಡ್ಡಬಿದ್ದು ಹೇಳಿಕೊಂಡರು. ಕಾಕಾ, ಗೌಡರು ಪಂಚಾಯತಿ ಬಿಟ್ಟವರೇ ಮಠಕ್ಕೆ ನಡೆದರು. ಅಯ್ಯನನ್ನು ಹೊರಗೆಳೆದು, ಅವನ ಶಿಷ್ಯಸ್ತೋಮದ ಮುಂದೆಯೇ ಎಕ್ಕಡದಿಂದ ಹಣ್ಣುಗಾಯಿ-ನೀರುಗಾಯಿ ಮಾಡಿದರು. ಪಾದಪೂಜೆಯನ್ನು ಕೊಳ್ಳುವ ಮಾಸದಲ್ಲಿ ಅಯ್ಯನಿಗೆ ಪಾದರಕ್ಷೆಯ ಮಹಾಪೂಜೆಯಾಯಿತು. ಅಯ್ಯನ ಪ್ರಮಾದ ಎಲ್ಲರಿಗೂ ವಿದಿತವಿತ್ತು. ಯಾರೂ ಕಾಕಾ, ಗೌಡರನ್ನು ಪ್ರತಿಭಟಿಸಲಿಕ್ಕೆ ಹೋಗಲಿಲ್ಲ. ಅಂದಿನಿಂದ ಮಠದ ಶಿಷ್ಯರಲ್ಲಿ ಇಬ್ಬಣ ಕಾಣಿಸಿತು.

ಗದಿಗೆಯ್ಯ ತೀರಿಕೊಂಡರು. ಅವರ ತಂಗಿಯೂ ತೀರಿಕೊಂಡಳು. ಆದರೆ ಅವಮಾನಿತ ಅಯ್ಯನ ಸೇಡಿಗೆ ಸಾವಿನ ಸ್ಪರ್ಶವಾಗಲಿಲ್ಲ. ಅದು ಬೆಳೆದು, ಬಲಿತು ನಿಂತಿತ್ತು. ಸೇಡಿನ ಕ್ಷಣಕ್ಕಾಗಿ ಕಾಯುತ್ತಿತ್ತು. ಮುಳ್ಳಿನಿಂದ ಮುಳ್ಳನ್ನೇ ಎಬ್ಬುತ್ತೇನೆಂದು ಅಯ್ಯನವರು ಹಾಡುತ್ತಿದ್ದರು. ಶ್ಯಾಮರಾಯ ಧುಳೆಯಿಂದ ಪರಾಗಂದಾ ಆಗಿ ಊರಿಗೆ ಬಂದು ನಿಂತನಂತರ – ಅವನಿಗೆ, ಅಯ್ಯನವರಿಗೆ ಸೂತ ಜೋಡಿಸಿತು. ಶ್ಯಾಮರಾಯನಿಗೆ ಆಧಾರ ಬೇಕಾಗಿತ್ತು. ಅಯ್ಯನವರಿಗೆ ಆಯುಧ ಬೇಕಾಗಿತ್ತು. ಮಸೆದು ಹರಿತವಾದ, ಒರೆ ಹಿರಿದ ಕತ್ತಿಯೇ ಅವರ ಕೈಗೆ ಬಂದಿತ್ತು. ಅಯ್ಯ ಅದನ್ನು ಕಾಕಾ ಅವರ ಮೇಲೆ ಬೀಸುವ ತಯಾರಿಯಲ್ಲಿ ಸನ್ನಾಹ ಮಾಡಿಕೊಂಡಿದ್ದ. ತನ್ನ ಮಠವನ್ನು ಶ್ಯಾಮರಾಯನ ಭಾನಗಡಿಗೆ ಮುಖ್ಯ ಸ್ಥಾನ ಮಾಡಿಕೊಟ್ಟಿದ್ದ. ಈ ಠಾಣೆಯ ಕೇಂದ್ರದಿಂದ ಶ್ಯಾಮರಾಯ, ಅಯ್ಯ ಸೂತ್ರ ಚಲಾಯಿಸುತ್ತಿದ್ದರು. ಈ ಠಾಣೆಯ ಗಂಡುಮೆಟ್ಟಿನ ಗುಹೆಯಲ್ಲಿ ಶ್ಯಾಮರಾಯನ ಶಾರ್ದೂಲ ಅಡಗಿ ಕುಳಿತಿತ್ತು. ಅದರಲ್ಲಿ ಕೈ ಹಾಕಿ, ಅದನ್ನು ಹೊರತರುವದು ಕಠಿಣವಿದ್ದಷ್ಟೇ – ಅಪಾಯಕರವೂ ಆಗಿತ್ತು. ಜೀವದ ಹಂಗುದೊರೆದವರು ಮಾತ್ರ ಈ ದಿವ್ಯಕ್ಕೆ ಕೈಹಾಕಬಹುದಾಗಿತ್ತು.

ವಿಶ್ವಾಸ ಬಿದ್ದಾಗಲೇ ರಾಚಪ್ಪನಲ್ಲಿ ವೀರಭದ್ರನ ಸಂಚಾರವಾಗಿತ್ತು. ಅವನಿಗೆ ಜೀವದ ಪರಿವೆ ಹಾರಿತ್ತು. ಹುಲಿಯನ್ನು, ಅದರ ಗುಹೆಯಿಂದ ಬಾಲ ಹಿಡಿದು ಎಳೆದು ತರುವ ಸನ್ನಾಹದಿಂದ ಅವನು ದಸ್ತಗೀರ್ಯಾನನ್ನು ಕಟ್ಟಿಕೊಂಡು ಮಠಕ್ಕೆ ಹೋಗಿದ್ದ. ಮಠದ ಮೂಗು ಹಿಡಿದರೆ, ಶ್ಯಾಮರಾಯನ ಡಾವಿನ ಬಾಯಿ ತಾನೇ ತೆರೆಯುವ ಖಾತ್ರೀ ಅವನಿಗಿತ್ತು. ಶ್ಯಾಮರಾಯನನ್ನು ಹಿಡಿದರೆ ಅಯ್ಯನ ಪುಂಗಿ ತಾನೇ ಬಂದಾಗುತ್ತಿತ್ತು. ಯಾವ ನಾಗರಕ್ಕೂ ಹೆಡೆ ಬಿಡಿಸಿ ಆಡುವ ಚೇತನೆ ಚಲಿಸುತ್ತಿರಲಿಲ್ಲ.

ರಾಚಪ್ಪನ ಡಾವು ಫಲಿಸಿತ್ತು. ಗೌಡರು ಇದರ ಪವಾಡ ಹಾಡಿ –

"ಊರು ಸುಟ್ಟರೂ ಹಣಮಪ್ಪ ಹೊರಗs ಅನ್ನಾಂಗ, ಅಯ್ಯಾ ತಾ ತಾ ಬಚಾವ್ ಆಗೇ ಉಳದಾನ. ಹ್ಯಾಂಗ ಉಳೀತಾನ ನೋಡತೀನಿ. ಅವನ ಮಠದ ಬಾಗಲದಾಗs ಶ್ಯಾಮಗ ಗುಂಡ ಬಡದೈತಿ. ನಾಳೆ ಪಂಚನಾಮೆ ಆದರ ಶ್ಯಾಮನs ಹೇಳತಾನಲಾ. ಆಗ ಒಂದಕೊಂದು ಹೊರಬೀಳಕೋತ ಹೋಗತದ. ಫೌಜದಾರ ಬರಲಿ. ಜಬಾನೀ ತಗೊಂಡ ಫಾರ್ಸ ಮಾಡೂಣು. ಅಯ್ಯಾ ತಾನs ಕಾಲ ಹಿಡ ಕೊಂಡು ಪ್ರಕರಣಾ ಗಡಪ್ ಮಾಡಂತಾನ. ವಾದೀನೂ ಇಲ್ಲಾ, ಪ್ರತಿವಾದೀನೂ ಇಲ್ಲಾ. ಗಂಟ ಬಿಚ್ಚದs, ಪ್ರಕರಣಾ ಗಡಪ್ ಮಾಡೂದಿಲ್ಲಂತ, ಅಯ್ಯಗ ಧಾಕ ಹಾಕಸ್ತೀನಿ. ಪರಭಾರೇನs ಫೌಜದಾರನ ಕೈಯಿ ಭೆಚ್ಚಗಾದರ ನಂದೇನ ಗಂಟ ಹೋಗತದ. ಅಯ್ಯನ ಮುಳ್ಳಾ ತಾನs ಮುರದು ಮಂಡ ಆಗತದ."

ನಾನು, ಸುರೇಶ, ದಸ್ತಗೀರ ಜಗುಲಿಯ ಮೇಲೆ ಕುಳಿತು ಇವರ ಮಾತು ಕೇಳುತ್ತಿದ್ದೆವು. ದಸ್ತಗೀರ್ಯಾ —

"ದಾದಲ್ಯಾ, ನಾವು ಬರೇ ಗಂಡ ಆದರ, ಗೌಡಾ ತಾಯಗಂಡ ಇದ್ದಾನ. ದಾದಾನ್ನ ಹಿಡದು ತರೂತನಕಾ ಅಂಜಕಿ ಅನಸಲಿಲ್ಲಾ. ಅವನ್ನ ತರೂ ಮುಂದ ಮಾತ್ರ, ಈ ಪ್ರಕರಣಾ ನಮ್ಮ ವ್ಯಾಲ ಗುದರಾಸದೇ ಹೋಗೂದಿಲ್ಲಾ ಅಂತs ಅನಸಲಿಕ್ಕೆ ಹತ್ತಿತು. ನನ್ನ ಕಡೇ ಇರೂ ಪಿಸ್ತೂಲಿಗೆ ಲಾಯಸೆನ್ಸ ಸುದ್ದೇ ಇಲ್ಲಾ. ಅದರದೂ ಭಾನಗಡೀ ಕೊಳ್ಳಿಗೆ ಬೀಳತಿತ್ತು. ಗೌಡರು ಸಹಜಾಸಹಜೀ ಅಯ್ಯನ್ನ ಸಿಗಿಸಿ ನನ್ನ ಪಾರಮಾಡವಿದರು. ಇನ್ನ ಝುಲ್ಲ ಹಾರಿತು; ಸುರ್ಯಾ, ಐದ ಹೊಡೀತಲ್ಲ. ನೀ ಪುಣೇದಿಂದ ತಂದ ಗಾಡೀ ತಿರಿಗಿ ಹೋಗಲಿ. ಮುಂಬೈ ಶೇಡಜೀಗೆ ಇಂದೇ ಪತ್ರಾ ಬರೀತೀನಿ. ಗಾಡೀ ಪಸಂದ ಅದs ಅಂತ. ನಾ ಮುಂಬೈಗೆ ಹೋದದ್ದೂ

ಅದಕೇ. ಗಾಡೀ ಪಸಂದ ಬಿದ್ದರ ಖರೀದಿ ಮಾಡೂದಂತ. ರೊಕ್ಕದ ಜಿಕೀರಿ ಮಾಡೂದಿಲ್ಲಾ ನಾ ಇನ್ನs. ಯಾಕಂದ್ರು ಗಾಡೀ ಕಾಲ್ಗುಣಾನs ಮಸ್ತ ಅದs. ನಾವೂ ಇದೇ ಕೈಲೆ ಬೆಳಗಾಂವಿಗೆ ಹೋಗೂಣು. ಕಾಕಾ ಅವರ ಗುರುತಿನ ಡಾಕ್ಟರನ ಕರಕೊಂಡು ಬರೂಣು. ವಿಶ್ಯಾನ ಜಕಮು ಏನು ಸಣ್ಣದಿಲ್ಲಾ. ಹೈಗೈ ಮಾಡೂದು ಠೀಕಲ್ಲಾ."
ಹೇಳಿದ.

ನಾವು ಒಳಗೆ ಬಂದು ಬಸವಂತಿಯನ್ನು ಒಂದು ಬದಿಗೆ ಕರೆದು ನಮ್ಮ ವಿಚಾರ ತಿಳಿಸಿದೆವು. ಬಸವಂತಿ, ತುಳಸಿಯನ್ನು ವಿಶ್ವಾಸನ ಹತ್ತಿರ ಕೂಡಿಸಿ, ಅಡುಗೆಯ ಮನೆಗೆ ನಮ್ಮನ್ನು ಕರೆದೊಯ್ದು —

"ದಸ್ತಗೀರ, ಸೋನಕ್ಕಂದs ಜರಾ ಕಠೀಣ ಕಾಣತೈತಿ. ಒಂದು ಬಂದ ಲಗಟ ವಿಶ್ವಾಸನ ಎದೀಮ್ಯಾಲ ತಲೀ ಇಟ್ಟಾವ್ರು ಮಿಸಿಕಿಲ್ಲಾ. ಎರಡ-ಮೂರ ಸಾರೆ ಮಾರೀ ಮ್ಯಾಲ ಮಾಡಿ ನೋಡಿದರು. ಕಣ್ಣಾಗಿನ ತೇಜನs ಅಳಿಸಿಧಾಂಗ ಆಗೇದ. ಮಾರೀ ಬಿಳಪ ಒಡದ್ಸದ."
ಭಯ ಸೂಚಿಸಿದಳು.

"ಅದು ಧಾಕದ 'ಶಾಕ್' ಬಸವಂತೀ. ಘಾಬರ್‍ಯಾಗೇ ಬಂದಿದ್ರು. ಅದರಾಗ ವಿಶ್ವಾಸನ ಘಾಯ ನೋಡಿದರು. ಏಕದಮ್ ಆಘಾತ ಆಗೇದ. ವಿಶ್ಯಾ ಎದ್ದು ಕೂತು ಒಂದಿಷ್ಟು ಹಾಂಗ ಮಾತಾಡಲಿಕ್ಕೆ ಹತ್ತಲಿ. ಸೋನಕ್ಕ ಸುಧಾರಿಸಿಗೋತಾರ. ಅವರ ಜವಾಬದಾರೀ ನಿನ್ನs ಕೂಡಿತು. ಶ್ಯಾಮರಾಯಾ ಶುದ್ಧೀಮ್ಯಾಲ ಬಂದು ಏನರs ಎಬಡಾ-ಸಬಡಾ ಆಡಿ-ಗೀಡ್ಯಾನು. ಅದರದೂ ಜ್ವಾಕೀ. ವಿಶ್ಯಾ-ಸೋನಕ್ಕನ್ನ ಬಿಟ್ಟು ನೀ ಹಲಾಸಬ್ಯಾಡಾ."
ನಾನು.

ಹೊತ್ತಿಸಿದ ಒಲೆಯ ಮೇಲೆ ಚಹದ ತಪ್ಪೇಲಿಯನ್ನು ಇಡುತ್ತ ಬಸವಂತಿ:

"ನೀ ಏನು ಕವಾಯತ್ ಮಾಡಲಿಕ್ಕೆ ಬೆಳಗಾಂವಿಗೆ ಹೋಗಾವ ಇದ್ದೀ, ಎಲ್ಲಾ ಬೋಜಾ ನನ್ನ ಮ್ಯಾಲಂತ ಹೇಳಿ? ಇನ್ನಾ, ತುಳಸೀ ಸುದ್ದಿ ಕಾಕಾಗ ತಿಳದಿಲ್ಲಾ. ಅದನ್ನ ಯಾರು – ನಾ ಹೇಳಲೇನು? ಕಾಕಾನ ಮ್ಯಾಲ ನಿಂದs ಭಾರೀ ಛಾಪೈತಿ. ಅವರ್‍ನ ಬ್ಯಾರೇ ಕಡೇ ಕರಕೊಂಡು ಹೋಗಿ ನೀನೇ ತಿಳಿಸಿ ಹೇಳು. ಹೊತ್ತ ಹೊಂಟರ ಅವರು ಅವರು ನೋಡದs ಇರ್‍ತಾಂಗಿಲ್ಲಾ. ನೀ ಯಾರಂತ ಆಕಿನ್ನ ಕೇಳಿದರ – ಇಕೀ ಯಾರಂತ ನನ್ನ ಕೇಳಿದರ – ಉತ್ತರಾ ಕೊಡಾಕ ಪಂಚೇತಿ?

ಊರಾಗೊಂದು ಮನೀನರs ಇತ್ತು. ಅದೂ ಇಂದ ಸುಟ್ಟ ಖಾಕ ಆತು. ಇನ್ನ ಬೈರಾಗೀನೇ ನೀನು. ಸುರೇಶ, ದಸ್ತಗೀರ ಇಬ್ಬರs ಹೋಗಲಿ ಬೆಳಗಾಂವಿಗೆ. ನಿಂದೇನು ಅಲ್ಲಿ ಕೆಲಸ-ಭಗಸಿ ಇಲ್ಲಾ. ಅವರ್ನ ಬ್ಯಾಟೀ ಆಡಿ, ದೀಪಾ ಹಚ್ಚಿದ್ಯೆಲಾ. ದಾದಲ್ಯಾ, ಹ್ಯಾಂಗೂ ಪುಣೇಕ್ಕ ಗಾಡೀ ಹೋಗೇ ಹೋಕ್ಕsದ. ನೀನೂ ಅದರಾಗನs ಹೋಗು. ಅಲ್ಲೆ ಸಾಬರ ಕೆಲಸಾ ಅರಗಚ್ಚಿ ಆಗಿ ಕುಂತಿರಬೇಕು. ಅದರ ಕಾಳಜೀ ಇಲ್ಲೇನ ನಿನಗs? ಬರಾಗ ಅವರ್ನ ಕರಕೊಂಡ ಬಾ. ಸುರೇಶ ಯಾರ್ನರ ಕಳಿಸಿ, ಚಿಕ್ಕೋಡಿಲಿಂದ, ಸಾಂಗಲಿಗೆ ತಾರ ಕೊಡಸು. ವಸೂ ಬರಲಿ. ಪಂತಮಾಮಾ ಬರಲಿ. ಬನೂಮಾಮೀ ಬರಲಿ. ಕಾಕಾ ಅವರ ನೀರ-ನಿಡೀ ನೋಡಾಕ ಒಬ್ಬರ ಬೇಕು. ರಮಾಕಕ್ಕಿ ಒಬ್ಬಾಕೀಗೇ ಬಗೀಹರಿಯೂದಿಲ್ಲಾ. ದಾದಲ್ಯಾ, ಇಕಾ, ಕಾಕಾ ಅವರಿಗೆ ಗೌಡರಿಗೆ ಚಾ ಹೊರಗs ಒಯ್ಯಿ. ಮತ್ತ ಯಾರ ಆದಾರೇನು ನೋಡಕೊಂಡ ಬಾ." ಎಂದು ಹೇಳಿದಳು.

"ಸುರ್ಯಾ, ವಾಡೇದ ಆಕಾಶವಾಣಿ ನುಡೀತದ. ಶಿರಸಾಮಾನ್ಯ ಅಸ್ನು. ತಥಾಪಿ ಕಾಕಾಗ ಸುದ್ದೀ ಬ್ರ ಅನೂ ತಾಕತ್ ಉಳೀಲಿಲ್ಲ ಇನ್ನs. ದೀಪಾ ಹಚ್ಚಿ ಮಾಲ್ಕೀ ಹಕ್ಕ ಸ್ಥಾಪನಾ ಆಗೇದ. ನಿಮಗೇ ಆಜ್ಞಾದ ಅಳಕಾ. ನನಗೇನು ಇನ್ನs ಈ ಊರ ಆಶಾ ಉಳೀತು? ಇದ್ದ ಮನೀ ಹೋತು. ರಾತ್ರೀನೇ ಅವ್ವ ಹೇಳಿದ್ದಳು: ಒಂದ ನೌಕರೀ ನೋಡ ಮಾರಾಯಾ ಎಲ್ಲ್ಯರs. ಈ ಊರ ಸೋಬತಿ ಬಿಡೂಣು ಅಂತs. ಆಕೀ ಅಂದ ನಾಕ ತಾಸಿನ್ಯಾಗ ಈ ಊರ ಋಣಾ ಕಡೀತು."
ನಾನು.

"ಬಲೇ ರಿಣಾ ಕಡಕೊಂಡೀ ನೀನು. ಇರಲಿ. ಚಾ ಒಯ್ಯಿ ಮೊದಲ ಹೊರಗ. ಎಲ್ಲಾ ಠಾಂವಿಕ್ಯದ ನಿಂದು."
ಬಸವಂತಿ ನಕ್ಕು ನುಡಿದಳು.

ದಾದಲ್ಯಾನ ಜೀವನದ ಮಂದಾರ ಅರಳಿತು.





ಮನೋಹರ ಗ್ರಂಥಮಾಲೆ

ಧಾರವಾಡ.

**ಪರಿಚಯ:**

**೧೯೬೯ :**

* ಕನ್ನಡ ಸ್ವತಂತ್ರ-ಕೃತಿ-ಪ್ರಕಟನೆಗೇ ಮೀಸಲಾಗಿದೆ.
* ಈ ವರೆಗೆ – ಮೂವತ್ತಾರು ವರ್ಷಗಳ ವರೆಗೆ – ಅವಿಚ್ಛಿನ್ನವಾಗಿ ಈ ಕೆಲಸ ಮಾಡುತ್ತ ಬಂದಿದೆ.
* ದಿನಾಂಕ ೧೫–೮–೧೯೩೩ರಂದು ಇದು ಪ್ರಾರಂಭವಾಗಿದೆ.
* ಬೇಂದ್ರೆ, ಗೋಕಾಕ, ಮುಗಳಿ ಇವರು ಅನೇಕ ವರ್ಷಗಳ ವರೆಗೆ ಈ ಮಾಲೆಯ ಸಾಹಿತ್ಯ-ಸಲಹೆಗಾರರಾಗಿ ಕೆಲಸ ಮಾಡಿ ಈ ಮಾಲೆಗೆ ಒಳ್ಳೆ ಹೆಸರು ತಂದುಕೊಟ್ಟಿದ್ದಾರೆ.
* ಕಾದಂಬರಿ, ಸಣ್ಣಕತೆ, ನಾಟಕ, ಏಕಾಂಕ, ಹರಟೆ, ಪ್ರವಾಸಕಥನ, ದಿನಚರಿ, ಪತ್ರಸಾಹಿತ್ಯ, ಜೀವನಚರಿತ್ರೆ, ಆತ್ಮಚರಿತ್ರೆ ಮೊದಲಾದ ಎಲ್ಲ ಸಾಹಿತ್ಯ-ಪ್ರಕಾರಗಳಲ್ಲಿಯೂ ಗ್ರಂಥಗಳನ್ನು ಪ್ರಕಟಿಸಿ ಗ್ರಾಹಕರಾದವರಿಗೆ ಒದಗಿಸಿಕೊಟ್ಟಿದೆ, ಕೊಡುತ್ತದೆ.
* ಇಪ್ಪತ್ತೈದು ವರ್ಷ ನಡೆದದ್ದರ ನೆನಪಿಗೆಂದು ಈ ಗ್ರಂಥಮಾಲೆಯು "ನಡೆದು ಬಂದ ದಾರಿ" ಎಂಬ ಮೂರು ಸಂಪುಟಗಳನ್ನು (ಒಟ್ಟು ೨,೫೦೦ ಪುಟ) ಹೊರ ತಂದು ಕನ್ನಡ ಸಾಹಿತ್ಯೇತಿಹಾಸಕ್ಕೆ ನೆರವಾಗಿದೆ.
* ಗ್ರಂಥಮಾಲೆಯು ೩೭ನೆಯ ವರ್ಷದ ಪ್ರಾರಂಭದಿಂದ – ಅಂದರೆ ೧೯೬೯ರಿಂದ – ಪ್ರಚಲಿತ ಆರ್ಥಿಕ ಪರಿಸ್ಥಿತಿಯನ್ನನುಲಕ್ಷಿಸಿ, ಒಂದು ವರ್ಷದಲ್ಲಿ ಈ ಮೊದಲಿನಂತೆ **ಸಾವಿರ** ಪುಟಗಳನ್ನು ಕೊಡದೆ, ಗ್ರಾಹಕರಾದವರಿಗೆ **ಆರೂವರೆನೂರು** ಪುಟಗಳನ್ನು ಮಾತ್ರ ಗ್ರಂಥರೂಪದಲ್ಲಿ ಇನ್ನು ಮುಂದೆ ಸಲ್ಲಿಸುತ್ತೇವೆ.

* ವಾರ್ಷಿಕ ಚಂದಾ ಅಂಚೆವೆಚ್ಚ ಸೇರಿ ಸಾದಾ ಪ್ರತಿಗಳಿಗೆ ಹದಿನೈದು ರೂಪಾಯಿ (೧೫–೦೦) ಕ್ಯಾಲಿಕೊ ಪ್ರತಿಗಳಿಗೆ ಇಪ್ಪತ್ತು ರೂಪಾಯಿ (೨೦–೦೦) ಮಾತ್ರ ಇದೆ.

* ಗ್ರಂಥಗಳನ್ನು "ರಜಿಸ್ಟರ್ಡ್-ಬುಕ್‌ಪೋಸ್ಟ್" ಮಾಡಿ ಕಳಿಸಿಕೊಡಲಾಗುವುದು.

* ಚಂದಾಹಣವನ್ನು 'ಮನಿಯಾರ್ಡರ್' ಮೂಲಕವಾಗಲಿ, ವ್ಹಿ.ಪಿ. ಯಿಂದ ತರಿಸಿಕೊಂಡಾಗಲಿ ಸಲ್ಲಿಸಬಹುದು.

* ವೈಯಕ್ತಿಕ ಚೆಕ್ಕುಗಳನ್ನು ಕಳಿಸುವಾಗ 'ಬ್ಯಾಂಕ್ ಕಮೀಶನ್' ಸೇರಿಸಿ ದಯವಿಟ್ಟು ಕಳುಹಿಸಬೇಕು.

* ಗ್ರಂಥಮಾಲೆಗೆ ಒಂದೇ ಸಲಕ್ಕೆ ೨೫೦/- ರೂಪಾಯಿ ಸಲ್ಲಿಸಿ ಆಜೀವ ಚಂದಾದಾರರಾಗಬಹುದು. ಅಂತಹವರಿಗೆ ಹಣ ಸಲ್ಲಿಸಿದಂದಿನಿಂದ ಅವರ ಆಜೀವ ಪರ್ಯಂತ ಮಾಲೆಯ ಗ್ರಂಥಗಳನ್ನು ಹಾಗೆಯೇ ಸಲ್ಲಿಸಲಾಗುವುದು.

ವಿಳಾಸ :

ವ್ಯವಸ್ಥಾಪಕ
ಮನೋಹರ ಗ್ರಂಥಮಾಲಾ
ಧಾರವಾಡ – ೧

## ಮನ್ವಂತರ ಪ್ರಕಾಶನ

ಧಾರವಾಡ.

**ಪರಿಚಯ:**

**೧೯೬೯:**

* ಮನ್ವಂತರ ಪತ್ರಿಕೆಯು ಸಾಹಿತ್ಯ-ವಿಮರ್ಶೆಗೇ ಎಂದು ಮೀಸಲಾದ ನಿಯತಕಾಲಿಕ.
* ವರ್ಷದಲ್ಲಿ ಎರಡೇ ಸಂಪುಟಗಳು (ಆರು ತಿಂಗಳಿಗೆ ಒಂದರಂತೆ) ಪ್ರಕಟವಾಗುತ್ತವೆ.
* ಪ್ರತಿ ಸಂಪುಟವು ಡೆಮಿ ೧/೮ ಆಕಾರದ್ದಿದ್ದು ಒಂದೊಂದು ಸಂಪುಟದಲ್ಲೂ ೧೨೫ರಿಂದ ೧೩೦ರ ವರೆಗೆ ಪುಟಗಳಿರುತ್ತವೆ.
* ಮನ್ವಂತರದ ವಾರ್ಷಿಕ ಚಂದಾ ಹದಿನೈದು ರೂಪಾಯಿ (೧೫–೦೦) ಮಾತ್ರ ಇದೆ.
* ಚಂದಾಹಣವನ್ನು 'ಮನಿಯಾರ್ಡರ್' ಮೂಲಕವಾಗಲಿ, ವ್ಹಿ.ಪಿ. ಯಿಂದ ತರಿಸಿಕೊಂಡಾಗಲಿ ಸಲ್ಲಿಸಬಹುದು.
* ವೈಯಕ್ತಿಕ ಚೆಕ್ಕುಗಳನ್ನು ಕಳಿಸುವಾಗ. 'ಬ್ಯಾಂಕ್ ಕಮೀಶನ್' ಸೇರಿಸಿ ದಯವಿಟ್ಟು ಕಳುಹಿಸಬೇಕು.
* ಸಂಪುಟಗಳನ್ನು ಗ್ರಾಹಕರಿಗೆ "ರಜಿಸ್ಟರ್ಡ್-ಬುಕ್‌ಪೋಸ್ಟ್" ಮೂಲಕ ಕಳಿಸಲಾಗುವುದು.

ಈಗಾಗಲೆ ಪ್ರಕಟವಾದ ಸಂಪುಟಗಳು ಇವು:

| | | | |
|---|---|---|---|
| ೧. ಕಾವ್ಯೋದ್ಯೋಗ | ... | ದ. ರಾ. ಬೇಂದ್ರೆ | ... ತೀರಿವೆ |
| ೨. ನವ್ಯ-ಕಾವ್ಯ-ಪ್ರಯೋಗ | ... | ಕೆ. ಡಿ. ಕುರ್ತಕೋಟಿ | ... ,, |
| ೩. ಎಲಿಯಟ್ ಕವಿಯ ವಿಮರ್ಶೆಯ ವಿಚಾರಗಳು | | ಎಸ್. ಬಿ. ಮಿಣಜಗಿ | ... ,, |
| ೪. ಉತ್ತರ ಕರ್ನಾಟಕದ ಜಾನಪದ ರಂಗಭೂಮಿ | ... | ಚಂದ್ರಶೇಖರ ಕಂಬಾರ | ... ೬–೦೦ |
| ೫-೬ ನಾಟಕ-ವಿಮರ್ಶೆಯ ವಿಶೇಷಾಂಕ | ... | ರಾಜೀವ/ಕೀರ್ತಿ/ಗಿರೀಶ/ಬೇಂದ್ರೆ | ... ೧೪–೦೦ |
| ೭. ವಿಚಾರ-ಸಂಕಿರಣ-ವಿಶೇಷಾಂಕ | | ಕೀರ್ತಿ/ರಾಜೀವ/ಬೇಂದ್ರೆ/ಗಿರೀಶ ಅನಂತಮೂರ್ತಿ/ಗಿರಡ್ಡಿ | ... ೧೦–೦೦ |


ವಿಳಾಸ :

ಮನ್ವಂತರ ಪ್ರಕಾಶನ,

ಸುಭಾಸ ರೋಡ, ಧಾರವಾಡ – ೧

# ಈಗ ಮಾರಾಟಕ್ಕೆ ದೊರೆಯುವ ಗ್ರಂಥಗಳು:

**ಕಾದಂಬರಿ :**

| | | | ಸಾದಾ: | ಕ್ಯಾಲಿಕೊ: |
|---|---|---|---|---|
| ಮೇದಿನಾಪುರದ ಮಲ್ಲ | ... | ಗುರುರಾಜ ಜೋಶಿ | ೧–೫೦ | — |
| ಇಂದ್ರಚಾಪ | ... | ತಲ್ಚೇಕರ ರಂಗರಾಯ | ೨–೫೦ | — |
| ಝೋಹರಾ | ... | ಡಿ. ಎಚ್. ಕೊಪ್ಪರ | ೧–೭೫ | — |
| ಪದ್ಮರಂಗು | ... | ಶೇಷನಾರಾಯಣ | ೨–೦೦ | ೩–೦೦ |
| ಬೆಳ್ಳಿಮೂಡಿತು | ... | ಭಾರತೀಸುತ | — | ೫–೦೦ |
| ಗಂಗವ್ವ ಗಂಗಾಮಾಯಿ | ... | ಶಂಕರ ಮೊಕಾಶಿ | ೪–೦೦ | — |
| ನಾನಿಯ ಕಾದಂಬರಿ | ... | ಬಾಳಕೃಷ್ಣ | ೩–೫೦ | — |
| ಖೊ | ... | ಹನ್ನೊಂದು ಜನ ಲೇಖಕರು | ೨–೦೦ | — |
| ಹಳದಿಮೀನು | ... | 'ಶೌರಿ' ಅನು:ರಾಮಾನುಜನ್ | ೪–೦೦ | ೬–೦೦ |
| ಉಸಿರು | ... | ವ್ಯಾಸರಾವ್ ನಿಂಜೂರ್ | ೬–೦೦ | ೮–೦೦ |
| ದೀಪಹತ್ತಿತು (ಭಾಗ ೧) | ... | ಕೊಟ್ಟಲಗಿ ರಾಮಚಂದ್ರ | ೪–೦೦ | — |
| ದೀಪಹತ್ತಿತು (ಭಾಗ ೨) | ... | ,, ,, | ೧೬–೦೦ | ೨೦–೦೦ |

**ನಾಟಕ :**

| | | | | |
|---|---|---|---|---|
| ಮಗು | ... | ಅಶ್ವತ್ಥ | ೧–೫೦ | — |
| ಪತಿತೋದ್ಧಾರ | ... | ಎನ್. ಕೆ. ಹುಯಿಲಗೋಳ | ೧–೫೦ | — |
| ಮೂಕಬಲಿ | ... | ಜಡಭರತ | ೨–೫೦ | — |
| ಆ ಮನಿ | ... | ಕೀರ್ತಿನಾಥ ಕುರ್ತಕೋಟಿ | ೨–೦೦ | — |
| ಸ್ವಪ್ನದರ್ಶಿ | ... | ,, ,, | ೨–೫೦ | — |
| ಕದಡಿದ ನೀರು | ... | ಅನಾಮಧೇಯ | ೨–೫೦ | ೩–೫೦ |
| ರಂಗಭಾರತ | ... | ಶ್ರೀರಂಗ | ೬–೦೦ | ೮–೦೦ |
| 'ಸಂಗ್ಯಾ-ಬಾಳ್ಯಾ | ... | ಸಂ: ಕಂಬಾರ; ಕುರ್ತಕೋಟಿ | ೩–೦೦ | ೫–೦೦ |
| ಕತ್ತಲೆ-ಬೆಳಕು | ... | ಶ್ರೀರಂಗ | ೨–೦೦ | — |
| ಗೌರಿ | ... | ಆರ್. ಪಿ. ಕುಲಕರ್ಣಿ | ೨–೦೦ | — |

**ಸಣ್ಣ ಕತೆ :**

| | | | | |
|---|---|---|---|---|
| ಚೀನದ ಬಾಳು ಬದುಕು | ... | ಬೇರೆಬೇರೆಯವರು | ೬–೦೦ | — |
| ಕೆಂಪುಗುಲಾಬಿ | ... | ಎಂ. ಸೀತಾರತ್ನ | ೧–೫೦ | — |
| ತೊಳೆದ ಮುತ್ತು | ... | ದಿ. ಕೆರೂರ ವಾಸುದೇವಾಚಾರ್ಯ | ೩–೨೫ | — |
| ಪ್ರಶ್ನೆ | ... | ಯು. ಆರ್. ಅನಂತಮೂರ್ತಿ | ೨–೫೦ | ೩–೫೦ |
| ಹೊಸಕ್ಷಿತಿಜ | ... | ಬೇರೆಬೇರೆಯವರು | ೫–೦೦ | ೭–೦೦ |
| ಕ್ಷಿತಿಜ | ... | ಶಾಂತಿನಾಥ ದೇಸಾಯಿ | ೩–೦೦ | ೫–೦೦ |

**ಕಾವ್ಯ :**

| | | | | |
|---|---|---|---|---|
| ಬಾಳದೇಗುಲದಲ್ಲಿ | ... | ವಿನಾಯಕ | ೩–೫೦ | — |
| ಮಹಾಯುದ್ಧ | ... | ಅಶ್ವತ್ಥ | ೧–೫೦ | — |
| ಜೀವಫಲ | ... | ಜಡಭರತ | ೧–೦೦ | — |
| ಮನುಕುಲದ ಹಾಡು | ... | ಗಂಗಾಧರ ಚಿತ್ತಾಲ | ೧–೭೫ | — |
| ಕಾವ್ಯಾರ್ಪಣ | ... | ಅರವಿಂದ ನಾಡಕರ್ಣಿ | ೧–೭೫ | — |

**ಇತರ :**

| | | | | |
|---|---|---|---|---|
| ದತ್ತವಾಣಿ | ... | ಮಿರ್ಜಿ ಅಣ್ಣಾರಾಯ | ೨–೦೦ | — |
| ಕವಿ-ಕಾವ್ಯ-ದೃಷ್ಟಿ | ... | ವಿ.ಸೀ. | ೨–೦೦ | — |
| ಯುಗಧರ್ಮ ಹಾಗೂ ಸಾಹಿತ್ಯದರ್ಶನ | | ಕೆ. ಡಿ. ಕುರ್ತಕೋಟಿ | ೬–೦೦ | — |
| ವಿನಾಯಕ | ... | ಬೇರೆಬೇರೆಯವರು | ೧–೫೦ | — |
| ನಡೆದು ಬಂದ ದಾರಿ (ಸಂ. ೩ ಮಾತ್ರ) | | ಸಂ: ಜೋಶಿ; ಕುರ್ತಕೋಟಿ | ೨೦–೦೦ | — |

**ಮನ್ವಂತರದ ಸಂಪುಟಗಳು:**

| | | | | |
|---|---|---|---|---|
| (೪) ಉತ್ತರ ಕರ್ನಾಟಕದ ಜಾನಪದರಂಗಭೂಮಿ | ... | ಚಂದ್ರಶೇಖರ ಕಂಬಾರ | ೬–೦೦ | — |
| (೫-೬) ನಾಟಕಾಂಕ | ... | ಕೀರ್ತಿ/ರಾಜೀವ/ಗಿರೀಶ/ಬೇಂದ್ರೆ | ೧೪-೦೦ | — |
| (೭) ವಿಚಾರ-ಸಂಕಿರಣ-ವಿಶೇಷಾಂಕ | | ಕೀರ್ತಿ/ಬೇಂದ್ರೆ/ಗಿರೀಶ/ಅನಂತಮೂರ್ತಿ/ ಗಿರಡ್ಡಿ/ರಾಜೀವ | ೧೦–೦೦ | — |

## ೨೮ನೆಯ ವರ್ಷದ ಗ್ರಂಥಗಳು:

| | | |
|---|---|---|
| ೧. ಪದ್ಮರಂಗು (ಕಾದಂಬರಿ) | ಶೇಷನಾರಾಯಣ | ೨–೦೦ |
| ೨. ಬೆಳ್ಳಿಮೂಡಿತು (ಕಾದಂಬರಿ) | 'ಭಾರತೀಸುತ' | ೪–೦೦ |
| ೩. ಪ್ರಶ್ನೆ (ಸಣ್ಣ ಕತೆಗಳು) | ಯು. ಆರ್. ಅನಂತಮೂರ್ತಿ | ೨–೫೦ |
| ೪. ತುಂಗಭದ್ರ (ಕಾದಂಬರಿ) | ಶ್ರೀಮತಿ ಎಂ. ಕೆ. ಇಂದಿರಾ | ತೀರಿವೆ |
| ೫. ಕದಡಿದ ನೀರು (ನಾಟಕ) | 'ಅನಾಮಧೇಯ' | ೨–೫೦ |

## ೨೯ನೆಯ ವರ್ಷದ ಗ್ರಂಥಗಳು:

| | | |
|---|---|---|
| ೧. ಮೂರು ದಾರಿಗಳು (ಕಾದಂಬರಿ) | ಯಶವಂತಚಿತ್ತಾಲ | ತೀರಿವೆ |
| ೨. ತುಘಲಕ (ನಾಟಕ) | ಗಿರೀಶ ಕಾರ್ನಾಡ | ,, |
| ೩. ಹೊಸಕ್ಷಿತಿಜ (ಸಣ್ಣಕತೆಗಳು) | ಬೇರೆಬೇರೆಯವರು | ೫–೦೦ |
| ೪. ಮಂಜು ಮುಸುಕಿದ ದಾರಿ (ಕಾದಂಬರಿ) | ವ್ಹಿ. ಎಂ. ಇನಾಂದಾರ | ತೀರಿವೆ |

## ೩೦ನೆಯ ವರ್ಷದ ಗ್ರಂಥಗಳು:

| | | |
|---|---|---|
| ೧. ಸದಾನಂದ (ಕಾದಂಬರಿ) | ಶ್ರೀಮತಿ ಎಂ. ಕೆ. ಇಂದಿರಾ | ತೀರಿವೆ |
| ೨. ಸಂಸ್ಕಾರ (ಕಾದಂಬರಿ) | ಯು. ಆರ್. ಅನಂತಮೂರ್ತಿ | ,, |
| ೩. ಪಳದಿಮೀನು (ಕಾದಂಬರಿ) | ಅನು: ಎ. ಕೆ. ರಾಮಾನುಜನ್ | ೪–೦೦ |
| ೪. ರಂಗಭಾರತ (ನಾಟಕ) | ಶ್ರೀರಂಗ | ೬–೦೦ |
| ೫. ಸಂಗ್ಯಾ-ಬಾಳ್ಯಾ (ಜಾನಪದ ಆಟ) | ಸಂ: ಕುರ್ತಕೋಟಿ: ಕಂಬಾರ | ೩–೦೦ |

## ೩೧ನೆಯ ವರ್ಷದ ಗ್ರಂಥಗಳು:

| | | | |
|---|---|---|---|
| ೧. | ಉಸಿರು (ಕಾದಂಬರಿ) | ವ್ಯಾಸರಾವ ನಿಂಜೂರ | ೬–೦೦ |
| ೨. | ದೀಪಹತ್ತಿತು (ಕಾದಂಬರಿ) ಭಾಗ ೨ | ಕೊಟ್ಟಲಗಿ ರಾಮಚಂದ್ರ | ೧೬–೦೦ |

## ೩೨ನೆಯ ವರ್ಷದ ಗ್ರಂಥಗಳು: [ಅಚ್ಚಿನಲ್ಲಿ]

೧. ನಾನೂ ಅಮೇರಿಕೆಗೆ ಹೋಗಿದ್ದೆ (ಪ್ರವಾಸಕಥನ) ... ಕೃಷ್ಣಾನಂದ ಕಾಮತ

೨. ಮೂರು ಹೊಸ ನಾಟಕಗಳು:
(ಋಷ್ಯಶೃಂಗ/ಹಿಟ್ಟಿನ ಹುಂಜ/ಗೋಡೆ ಬೇಕೇ ಗೋಡೆ) ... ಕಂಬಾರ/ಕಾರ್ನಾಡ/ರತ್ನ

೩. ಕಾಮರೂಪಿ-ಕತೆಗಳು ... 'ಕಾಮರೂಪಿ'

೪. ರೊಚ್ಚು ಅಥವಾ ಚೌತಿಪುರಾಣ (ನಾಟಕ) ... ಯು. ಆರ್. ಅನಂತಮೂರ್ತಿ

# ನಮ್ಮ ಆಜೀವಚಂದಾದಾರರು:

ನಮ್ಮ ಗ್ರಂಥಮಾಲೆಯ ಪ್ರಾರಂಭದಿಂದಲೂ ಈ ವರೆಗೆ ಕಾಲಕಾಲಕ್ಕೆ ಸಹೃದಯಿಗಳು, ಉದಾರಿಗಳು ಮಾಲೆಗೆ ಆಜೀವಚಂದಾದಾರರಾಗಿ ತಮ್ಮ ಸಹಾಯವನ್ನು ಸಲ್ಲಿಸುತ್ತ ಬಂದಿದ್ದಾರೆ. ಅವರೆಲ್ಲರಿಗೂ ನಮ್ಮ ಕೃತಜ್ಞತೆಯ ವಂದನೆಗಳು.

## ಮುಂಬೈಯಿಂದ :

ಸರ್ವಶ್ರೀ: ಪಿ. ಆರ್. ಗದಗಕರ; ಆರ್. ಎ. ಜಹಾಗಿರದಾರ (ಎಡ್ವೋಕೇಟ್); ವರದರಾಜ ಆದ್ಯ; ಡಾ। ಶ್ರೀಮತಿ ಲಲಿತಾ ರಾವ್; ಎನ್. ಜಿ. ಜೋಶಿ; ಡಿ. ಎಸ್. ಕುಲಕರ್ಣಿ: ಶ್ರೀಮತಿ ಬಿ. ಎನ್. ಶಾರದಾಬಾಯಿ; ಯು. ವಿ. ಉಪಾಧ್ಯೆ: ಶಾಮಸುಂದರ ಜಿ. ಮುದಗಲ್; ಆರ್. ಎನ್. ಪೈ; ದಿನಕರ ದೇಸಾಯಿ; ಟಿ. ಎನ್. ಶಾನಭಾಗ; ಶ್ರೀಮತಿ ಪರಪರಮೇಶ್ವರ ಆರ್. ಭಟ್; ನರಹರಿ ಬಿ. ಹಂದೂರ-ಕುಲಕರ್ಣಿ; ಪೇಜಾವರ ವಾಸುದೇವರಾವ್; ಶ್ರೀಮತಿ ಗೋದಾವರಿ ಎಸ್. ಹುಲಕೋಟಿ; ಶ್ರೀಮತಿ ಎಂ. ಎಸ್. ಶಾಸ್ತ್ರಿ; ಕೆ. ಸೀತಾರಾಮರಾವ್; ಯಶವಂತ ಚಿತ್ತಾಲ; ಶ್ರೀಮತಿ ಸರಸ್ವತಿ ಎಸ್. ರಾವ್: ಎಂ. ಅಣ್ಣಪ್ಪಯ್ಯ; ಪಿ. ಆರ್. ರಾಯಚೂರ; ಜಿ. ಎನ್. ವೈದ್ಯ; ಕೆ. ಎ. ಕುಲಕರ್ಣಿ; ಎಸ್. ಜಿ. ಭಟಕಳ: ಜಿ. ಎಂ. ಪೈ; ಆರ್. ಕೆ. ಕಾರಂತ; ಪ್ರಿ. ಜಿ. ಕುಲಕರ್ಣಿ; ಆರ್. ಎ. ಜಹಾಗಿರದಾರ; ಶ್ರೀಮತಿ ರಾಧಾಬಾಯಿ ಭಾಂಡಾರಿ: ಶ್ರೀಮತಿ ಮಣಿ ಎಸ್. ಶಾಸ್ತ್ರಿ; ಬಿ. ಎ. ಸ್ವಾಮಿರಾವ್; ಶ್ರೀಮತಿ ಪದ್ಮಾವತಿ ಬೆಳವಡಿ; ಎಂ. ಬಿ. ಅಮೀನ; ಎಚ್. ಕೆ. ಕುಲಕರ್ಣಿ: ಆರ್. ಪಿ. ಕಾಳೆ; ಜಿ. ಎಸ್. ಸಿ. ಸ್ವಾಮಿ; ಜಿ. ಜಿ. ಬೀಳಗೀಕರ; ಡಾ। ಸಿ. ಕೆ. ದೇಶಪಾಂಡೆ; ಆರ್. ಎಂ. ಕುಲಕರ್ಣಿ; ಶ್ರೀಮತಿ ಶಶಿಕಲಾ ಪಾಂಡುರಂಗಿ; ಎಚ್. ವಿ. ಧಾರವಾಡಕರ; ಸದಾಶಿವರಾವ್ ಜೆ. ಕವಿ; ಬಾಳಕೃಷ್ಣ; ಜೆ. ಎಸ್. ಅಯ್ಯರ್; ಆರ್. ಜೆ. ದೇಶ ಪಾಂಡೆ; ಎಸ್. ಎಫ್. ಮ್ಯಾಗೇರಿ; ಚಿದಂಬರ ಕುಲಕರ್ಣಿ; ಶ್ರೀಮತಿ ಕೃಷ್ಣಾ ಜೋಶಿ; ಗಂಗಾಧರ ವಿ. ಚಿತ್ತಾಲ.

ದಿಲ್ಲಿಯಿಂದ :

ಸರ್ವಶ್ರೀ: ಶ್ರೀಮತಿ ಸರೋಜ ಸ್ವಾಮಿ; ಡಾ। ಕೆ. ಎಸ್. ಕೃಷ್ಣಸ್ವಾಮಿ; ಆರ್. ಕೆ. ಎ. ಸುಬ್ರಹ್ಮಣ್ಯಂ; ಕೆ. ಎನ್. ರಾಮಸ್ವಾಮಿ; ಶ್ರೀಮತಿ ಚಂದ್ರಿಕಾ ಗುತ್ತಲ; ಎ. ಎನ್. ಸುಬ್ರಹ್ಮಣ್ಯಂ; ಎಸ್. ವ್ಹಿ. ಚಿತ್ತಾಲ.

ಬೆಂಗಳೂರಿಂದ :

ಸರ್ವಶ್ರೀ: ತಾಂಡವೇಶ್ವರ; ಶಾಂತೇಶ ಪಾಟೀಲ; ಎಸ್. ಎನ್. ಆನಂದರಾವ್; ವಿ. ಕೆ. ಗೋಕಾಕ; ರಂ. ಶ್ರೀ. ಮುಗಳಿ.

ಧಾರವಾಡದಿಂದ :

ಸರ್ವಶ್ರೀ: ಆರ್. ಎಚ್. ದೇಸಾಯಿ: ವಾಯು. ಎಸ್. ಪಾಟೀಲ; ದ. ರಾ. ಬೇಂದ್ರೆ; ಡಾ। ಉಮಾಬಾಯಿ ಕೊಪ್ಪೀಕರ; ಎಚ್. ಟಿ. ಮುದಿರೆಡ್ಡಿ; ನಾರಾಯಣ ಪಿ. ಶಾನಭಾಗ; ಶಾಂತಿನಾಥ ದೇಸಾಯಿ; ಎಂ. ಎ. ಕಾಮತ; ಶ್ರೀಮತಿ ಶಾಂತಿ ಕೆ. ಶಹಾ.

ಗದಗಿನಿಂದ :

ಸರ್ವಶ್ರೀ: ಕೆ. ಎಚ್. ಪಾಟೀಲ; ಡಿ. ಜಿ. ಕಟ್ಟೀಮನಿ; ರಂಗನಾಥ ವಿ. ಪಾಟೀಲ; ಜಿ. ಎಸ್. ಕುಲಕರ್ಣಿ; ಎ. ವ್ಹಿ. ಉಮಚಗಿ; ಜಿ. ವ್ಹಿ. ವಾರಕರ; ಬಿ. ಕೆ. ವಾರಕರ; ಡಿ. ಬಿ. ಪುಣೇಕರ; ಎಲ್. ಎ. ಪೊತ್ನೀಸ; ಕೆ. ನಾರಾಯಣ ರಾವ್; ಕೆ. ವ್ಹಿ. ಚಿಂತಾಮಣಿ; ಡಿ. ಎಸ್. ಕುರ್ತಕೋಟಿ.

ಬಿಜಾಪುರದಿಂದ :

ಸರ್ವಶ್ರೀ: ಕೆ. ಜಿ. ಪುರೋಹಿತ; ಎಲ್. ಎಚ್. ದೇಸಾಯಿ; ಬಿ. ಎನ್. ಮುತಾಲಿಕದೇಸಾಯಿ.

ಸೊಲ್ಲಾಪುರದಿಂದ :

ಸರ್ವಶ್ರೀ: ಪದ್ಮನಾಭ ಕೆ. ಉಡುಪಿ; ಬಿ. ಜಿ. ನೆಲವಿಗಿ: ಶ್ರೀಮತಿ ರುಕ್ಮಿಣಿ ಕೆ. ಪರ್ವತಿ.

ಬಾಗಿಲುಕೋಟೆಯಿಂದ :

ಸರ್ವಶ್ರೀ: ಪಿ. ಜಿ. ಕೌಕೂರ; ಬಿ. ಎ. ಸರನಾಡಗೌಡ; ಎಸ್. ಎಸ್. ಮಳ್ಳಿಗೇರಿ; ಟಿ. ಎ. ದೇಶಪಾಂಡೆ; ವಸಂತ ಎಸ್. ಕೋರಾ; ಪಿ. ಎಂ. ಮಂಗಳವೇಢೆ; ಎಸ್. ಹಣಮಂತರಾವ್.

ಬೆಳಗಾವಿಯಿಂದ :

ಸರ್ವಶ್ರೀ: ಎನ್. ಡಿ. ಕುಲಕರ್ಣಿ; ಸದಾನಂದ ನಾಯಕ.

ಮಣಿಪಾಲದಿಂದ :

ಡಾ। ಎಚ್. ಶಾಂತಾರಾಮ; ಟಿ. ಮೋಹನದಾಸ ಪೈ.

ಬೇರೆ ಬೇರೆ ಊರುಗಳಿಂದ :

ಸರ್ವಶ್ರೀ: ಬಿ. ಎ. ಪಾಟೀಲ (ಇಟಗಿ); ಪಿ. ವಿ. ದೇಸಾಯಿ (ಕಿನ್ನಾಳ); ಕೆ. ಆರ್. ದೇಸಾಯಿ (ಯರೇಹಂಚಿನಾಳ); ದೇವಜಿ ರಾಮಚಂದ್ರ ಪಾಟೀಲ (ಕೋಳಿವಾಡ); ಪಿ. ಪಿ. ಜಹಾಗಿರದಾರ (ಹುಯಿಲಗೋಳ); ಆರ್. ಸಿ. ಕುಲಕರ್ಣಿ (ಚಿಕ್ಕಹಂದಿಗೋಳ); ಕೆ. ವ್ಹಿ. ದೇಶಪಾಂಡೆ (ಹೊಂಬಳ); ಡಿ. ಬಿ. ಕುಲಕರ್ಣಿ (ಯರೇಹಂಚಿನಾಳ); ಎಸ್. ಎಚ್. ಲಕ್ಷ್ಮೇಶ್ವರ (ಪುಣೆ); ಬಿಂದುಮಾಧವ ಕುಲಕರ್ಣಿ (ಬದಾಮಿ); ವ್ಹಿ. ಡಿ. ಕುಲಕರ್ಣಿ (ಟಿಟಾಘುರ); ಕೆ. ಎಸ್. ಕಾಮತ (ಮಂಗಳೂರು); ಕೆ. ಆರ್. ಮಳಗೀಕರ (ಅಥಣಿ); ಮಂಜುನಾಥ ಪಿ. ಶಾನಭಾಗ (ಕುಮಟಾ); ಬಿ. ಎಚ್. ದೇಸಾಯಿ (ಹುನಗುಂದ); ಡಾ. ಎಂ. ಕೆ. ಸಿಂದಗೀಕರ (ಬದಾಮಿ); ವಿಶ್ವನಾಥ ರೆಡ್ಡಿ (ಯಾದಗಿರಿ); ಡಾ। ಜೆ. ಎಚ್. ಜಮ್ಮೀಹಾಳ (ಗುಲಬರ್ಗಾ); ಎಸ್. ರತ್ನ (ಮೈಸೂರು); ಎಸ್. ಜಿ. ಚಂದ್ರಘಟಗಿ (ಶಿವಮೊಗ್ಗ): ಕ್ಯಾ. ಪಿ. ಜಿ. ಕುಲಕರ್ಣಿ. ಕೆ. ಡಿ. ಕುರ್ತಕೋಟಿ (ವಲ್ಲಭವಿದ್ಯಾನಗರ); ಗಿರೀಶ ಕಾರ್ನಾಡ (ಮದ್ರಾಸ); ಎಸ್. ಅನಂತನಾರಾಯಣ (ಮೈಸೂರ); ಡಾ। ಎನ್. ಎಸ್. ದೇಶಪಾಂಡೆ (ಹಲ್ಯಾಳ): ಚಂದ್ರಶೇಖರ ಪೆಸರೂರ (ಸಂತಿಕೋಲೂರ); ಎಂ. ಎಲ್. ಮಹಾಬಲೇಶ್ವರಭಟ್ಟ (ಮೇಗರವಳ್ಳಿ); ಶ್ರೀಮತಿ ವನಮಾಲಾ ರಂಗನಾಥರಾವ್

(ಭುವನೇಶ್ವರ); ಎಂ. ಜಿ. ಕೃಷ್ಣಮೂರ್ತಿ (ಹೈದ್ರಾಬಾದ); ಯು. ಆರ್. ಅನಂತಮೂರ್ತಿ (ಮೈಸೂರು).

ಪರದೇಶದಲ್ಲಿ :

ಸರ್ವಶ್ರೀ: ಎ. ಕೆ. ರಾಮಾನುಜನ್ (ಚಿಕ್ಯಾಗೊ); ಶ್ರೀಮತಿ ಲೀಲಾ ರಾವ್ (ನೈರೋಬಿ); ಚಂದ್ರಶೇಖರ ಕಂಬಾರ (ಚಿಕ್ಯಾಗೊ).

– ಸಂಪಾದಕ

